ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೪

## ಕಾಶೀಖಂಡ

(ಉತ್ತರಾರ್ಧ—ಉತ್ತರ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದ

ಆಸ್ಥಾನ ವಿದ್ವಾನ್

ನೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೮

# ಶ್ರೀಸ್ಕಾಂದಮಹಾಪುರಾಣಂ

ಳ

**ಕಾಶೀಖಂಡ**

(ಉತ್ತರಾರ್ಧ–ಉತ್ತರ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ೪

## ಕಾಶೀಖಂಡ

(ಉತ್ತರಾರ್ಧ–ಉತ್ತರ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೮

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀ ಖಂಡದ ಉತ್ತರಾರ್ಧದಲ್ಲಿ ಉತ್ತರ ಭಾಗವು ಮುಗಿದಿರುತ್ತದೆ. ಮೂಲದಲ್ಲಿ 'ಪೂರ್ವ ಭಾಗ, ಉತ್ತರ ಭಾಗ' ಎಂದು ವಿಭಾಗವೇನೂ ಇಲ್ಲದಿದ್ದರೂ ಸಂಪುಟೀಕರಣದ ಸೌಲಭ್ಯಕ್ಕಾಗಿ ಇಲ್ಲಿ ಮಾತ್ರ ಹೀಗೆ ಭಾಗಮಾಡಲಾಗಿದೆ. ಈ ಸಂಪುಟದೊಡನೆ ಕಾಶೀಖಂಡವೂ ಸಮಾಪ್ತವಾಗಿರುತ್ತದೆ. ಕ್ಷೇತ್ರೋತ್ತಮವಾದ ಕಾಶಿಯ ವೈಭವವನ್ನು ವರ್ಣಿಸುವ ಈ ಕಾಶೀಖಂಡದ ಬಗ್ಗೆ ಸೂಚಿಸಬೇಕಾದ ಸಂಗತಿಗಳನ್ನು ಈ ಖಂಡದ ಮೊದಲ ಸಂಪುಟದ ಅರಿಕೆಯಲ್ಲಿ ಸಂಗ್ರಹವಾಗಿ ಕೊಡಲಾಗಿದೆ. ವಾಚಕರು ದಯವಿಟ್ಟು ಅದನ್ನೊಮ್ಮೆ ಮನಸ್ಕರಿಸಬೇಕೆಂದು ಬಿನ್ನಹ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಽಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

ಶ್ರೀಶಂಕರಃ ಶಂಕರಃ

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಕಾಶೀಖಂಡಸ್ಯೋತ್ತರಾರ್ಧೇ ಉತ್ತರಭಾಗಃ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ತ್ರಿಸಪ್ತತಿತಮೋಽಧ್ಯಾಯಃ

ಓಂಕಾರಮಹಿಮಾನುವರ್ಣನಂ

**ಅಗಸ್ತ್ಯ ಉವಾಚ :—**

**ತ್ರಿಲೋಚನಂ ಸಮಾಸಾದ್ಯ ದೇವದೇವಃ ಷಡಾನನ ।
ಜಗದಂಬಿಕಯಾ ಯುಕ್ತಃ ಕಿಂಚಕಾರಾಶು ತದ್ವದ ॥ ೧ ॥**

**ಸ್ಕಂದ ಉವಾಚ :—**

**ಮುನೇ ಕಲಶಜಾಖ್ಯಾಸ್ಯೇ ಯತ್ಪೃಷ್ಟಂ ತನ್ನಿಶಾಮಯ ।
ವಿರಜಃಸಂಜ್ಞಕಂ ಪೀಠಂ ಯತ್ಪ್ರೋಕ್ತಂ ಸರ್ವಸಿದ್ಧಿದಂ ॥ ೨ ॥**

---

### ಕನ್ನಡದ ಅನುವಾದ

ಓಂಕಾರಮಹಿಮಾನುವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಎಲೈ ಷಣ್ಮುಖಸ್ವಾಮಿಯೆ! ದೇವತಾ ಸಾರ್ವಭೌಮನು ಲೋಕಮಾತೆಯೊಡನೆ ತ್ರಿಲೋಚನಕ್ಷೇತ್ರವನ್ನು ಸೇರಿದವನಾಗಿ ಏನುಮಾಡಿದನೆಂಬುದನ್ನು ಶೀಘ್ರವಾಗಿ ನನಗೆ ಹೇಳು.

೨. ಸ್ಕಂದನು ಹೇಳುತ್ತಾನೆ:—ಕಲಶೋದ್ಭವನಾದ ಮುನಿಯೆ! ನೀನು ಕೇಳಿದ ವಿಷಯವನ್ನು ನಿರೂಪಿಸುವೆನು. ಅದನ್ನು ಕೇಳು. ವಿರಜವೆಂಬ ಹೆಸರಿನ ಉತ್ತಮ ಸ್ಥಾನವು ಹಿಂದೆಯೇ ನಿರೂಪಿಸಲ್ಪಟ್ಟಿದೆಯಲ್ಲವೆ. ಅದು ಸರ್ವಸಿದ್ಧಿಪ್ರದವಾದುದು.

ತತ್ಪ್ರದೇಶದರ್ಶನಾದೇವ ನಿರಜಾ ಜಾಯತೇ ನರಃ ।
ಯತ್ರಾಸ್ತಿ ತನ್ಮಹಾಲಿಂಗಂ ವಾರಾಣಸ್ಯಾಂ ತ್ರಿಲೋಚನಂ ॥ ೩ ॥
ತೀರ್ಥಂ ಪಿಲಿಪಿಲಾಖ್ಯಂ ತದ್ದ್ಯುನದ್ಯಂಭಸಿ ವಿಶ್ರುತಂ ।
ಸರ್ವತೀರ್ಥಮಯಂ ತೀರ್ಥಂ ತತ್ಕಾಶ್ಯಾಂ ಪರಿಗೀಯತೇ ॥ ೪ ॥
ವಿಷ್ಟಪತ್ರಿತಯಾಂತರ್ಯೇ ದೇವರ್ಷಿಮನುಜೋರಗಾಃ ।
ಸಸರಿತ್ಪರ್ವತಾರಣ್ಯಾಃ ಸಂತಿ ತೇ ತತ್ರ ಯನ್ಮುನೇ ॥ ೫ ॥
ತದಾರಭ್ಯ ಚ ತತ್ತೀರ್ಥಂ ತಚ್ಚ ಲಿಂಗಂ ತ್ರಿಲೋಚನಂ ।
ತ್ರಿವಿಷ್ಟಪಮಿತಿಖ್ಯಾತಮತೋ ಹೇತೋರ್ಮಹತ್ತರಂ ॥ ೬ ॥
ತ್ರಿವಿಷ್ಟಪಸ್ಯ ಲಿಂಗಸ್ಯ ಮಹಿಮೋಕ್ತಃ ಪಿನಾಕಿನಾ ।
ಜಗಜ್ಜನನ್ಯಾಃ ಪುರತೋ ಯಥಾ ವಚ್ಮಿ ತಥಾ ಮುನೇ ॥ ೭ ॥

ದೇವ್ಯುವಾಚ :—

ದೇವದೇವ ಜಗನ್ನಾಥ ಶರ್ವ ಸರ್ವದ ಸರ್ವಗ ।
ಸರ್ವದೃಕ್ಸರ್ವಜನಕ ಕಿಂಚಿತ್ಪೃಚ್ಛಾಮಿ ತದ್ವದ ॥ ೮ ॥

---

೩. ಆ ಪ್ರದೇಶದ ದರ್ಶನವನ್ನು ಮಾಡುವುದರಿಂದಲೇ ಮನುಷ್ಯನು ನಿಷ್ಪಾಪನಾಗುವನು. ಆ ಸ್ಥಳದಲ್ಲಿಯೇ ಕಾಶಿಯಲ್ಲಿ ಪ್ರಖ್ಯಾತವಾದ ತ್ರಿಲೋಚನೇಶ್ವರನೆಂಬ ಮಹಾ ಲಿಂಗವು ಪ್ರತಿಷ್ಠಿತವಾಗಿರುವುದು.

೪. ಗಂಗಾನದಿಯ ಪ್ರವಾಹದಲ್ಲಿಯೇ ಪಿಲಿಪಿಲಾನಾಮಕವಾದ ತೀರ್ಥವು ಪ್ರಖ್ಯಾತಿಯನ್ನು ಪಡೆದಿರುವುದು. ಅದು ಕಾಶಿಯಲ್ಲಿರುವ ಸಮಸ್ತ ತೀರ್ಥಗಳ ಅಂಶಗಳಿಂದಲೂ ಕೂಡಿದುದೆಂದು ಪ್ರಶಂಸಿಸಲ್ಪಟ್ಟಿರುವುದು.

೫. ಎಲೈ ಮುನಿವರ್ಯನೆ! ಮೂರು ಲೋಕಗಳಲ್ಲಿಯೂ ಇರುವ ದೇವತೆಗಳೂ, ಮಹರ್ಷಿಗಳೂ, ಮಾನವರೂ, ನಾಗರೂ, ನದ್ಯಭಿಮಾನಿದೇವತೆಯರೂ, ಪರ್ವತಾಭಿಮಾನಿದೇವತೆಗಳೂ, ವನದೇವತೆಗಳೂ ಎಲ್ಲರೂ ಅಲ್ಲಿ ನೆರೆದಿರುವರು.

೬. ಈ ಕಾರಣದಿಂದಲೇ ಅಂದು ಮೊದಲುಗೊಂಡು ಈ ತೀರ್ಥವೂ ಆ ತ್ರಿಲೋಚನೇಶ್ವರಲಿಂಗವೂ ತ್ರಿವಿಷ್ಟಪವೆಂದು ಹೆಸರುಗೊಂಡಿರುವುವಲ್ಲದೆ ಮಹಾ ಪ್ರಭಾವವುಳ್ಳದ್ದಾಗಿರುವುವು.

೭. ಪೂರ್ವದಲ್ಲಿ ಪಿನಾಕಪಾಣಿಯು ಜಗನ್ಮಾತೆಯ ಮುಂದಿನಲ್ಲಿ ಈ ತ್ರಿವಿಷ್ಟಪೇಶ್ವರಲಿಂಗದ ಮಹಿಮೆಯನ್ನು ವರ್ಣಿಸಿದನು. ಎಲೈ ಮುನಿಯೆ! ಅದನ್ನೇ ಯಥಾವತ್ತಾಗಿ ನಿನಗೆ ಈಗ ಹೇಳುವೆನು.

೮. ದೇವಿಯು ಕೇಳುತ್ತಾಳೆ:—ದೇವೇಶ್ವರನೆ! ಲೋಕನಾಥನೆ! ಶರ್ವನೆ! ಸರ್ವಾಭೀಷ್ಟದಾಯಕನೆ! ಸರ್ವಾಂತರ್ಯಾಮಿಯೆ! ಸರ್ವವನ್ನೂ ನೋಡುವವನೆ! ಸಮಸ್ತ ಬ್ರಹ್ಮಾಂಡಕ್ಕೂ ಕಾರಣನೆ! ಒಂದು ವಿಷಯವನ್ನು ಕೇಳುವೆನು, ಹೇಳಬೇಕು.

ಇದಂ ತವ ಪ್ರಿಯಂ ಕ್ಷೇತ್ರಂ ಕರ್ಮಬೀಜಮಹೌಷಧಂ ।
ನೈಃಶ್ರೇಯಸ್ಯಾಃ ಶ್ರಿಯೋ ಗೇಹಂ ಮಮಾಪಿ ಪ್ರೀತಿದಂ ಮಹತ್ ॥ ೯ ॥
ಯತ್ಕ್ಷೇತ್ರರಜಸೋಽಪ್ಯಗ್ರೇ ತ್ರಿಲೋಕ್ಯಪಿ ತೃಣಾಯತೇ ।
ತಸ್ಯಾಖಿಲಸ್ಯ ಮಹಿಮಾ ವಿಷ್ವಕ್ಕೇನಾವಗಮ್ಯತೇ ॥ ೧೦ ॥
ಯಾನೀಹ ಸಂತಿ ಲಿಂಗಾನಿ ತಾನಿ ಸರ್ವಾಣ್ಯಸಂಶಯಂ ।
ನಿರ್ವಾಣಕರಣಾನ್ಯೇವ ಸ್ವಯಂಭೂನ್ಯಪಿ ತಾನ್ಯಪಿ ॥ ೧೧ ॥
ಯದ್ಯಪ್ಯೇವಂ ತಥಾಪೀಶ ವಿಶೇಷಂ ವಕ್ತುಮರ್ಹಸಿ ।
ಕಾಶ್ಯಾಮನಾದಿಸಿದ್ಧಾನಿ ಕಾನಿ ಲಿಂಗಾನಿ ಶಂಕರ ॥ ೧೨ ॥
ಯತ್ರ ದೇವಃ ಸದಾ ತಿಷ್ಠೇತ್ಸಂವರ್ತೇಽಪಿ ಸ ವಲ್ಲಭಃ ।
ಯೈರಿಯಂ ಪ್ರಥಾಂ ಪ್ರಾಪ್ತಾ ಕಾಶೀ ಮುಕ್ತಿಪುರೀತಿ ಚ ॥ ೧೩ ॥
ಯೇಷಾಂ ಸ್ಮರಣತೋಽಪ್ಯತ್ರ ಭವೇತ್ಪಾಪಸ್ಯ ಸಂಕ್ಷಯಃ ।
ದರ್ಶನಸ್ಪರ್ಶನಾಭ್ಯಾಂ ಚ ಸ್ಯಾತಾಂ ಸ್ವರ್ಗಾಪವರ್ಗಕೌ ॥ ೧೪ ॥
ಯೇಷಾಂ ಸಮರ್ಚನಾದೇವ ಮರ್ತ್ಯೇಜನ್ಮ ಸಕೃದ್ವಿಭೋ ।
ಲಿಂಗಾನಿ ಪೂಜಿತಾನಿ ಸ್ಯುಃ ಕಾಶ್ಯಾಂ ಸರ್ವಾಣಿ ನಿಶ್ಚಿತಂ ॥ ೧೫ ॥

---

೯. ಇದು ನಿನಗೆ ಅತ್ಯಂತ ಪ್ರಿಯವಾದ ಕ್ಷೇತ್ರವು. ಇದು ಕರ್ಮಬೀಜಕ್ಕೆ ಮಹೌಷಧವಾಗಿರುವುದು. ಮೋಕ್ಷವೆಂಬ ಮಹಾಲಕ್ಷ್ಮಿಗೆ ನೆಲೆಮನೆಯಾಗಿದ್ದು ನನಗೂ ಮಹತ್ತರವಾದ ಸಂತೋಷವನ್ನುಂಟುಮಾಡುತ್ತಿರುವುದು.

೧೦. ಈ ಕ್ಷೇತ್ರದ ಧೂಳಿಯ ಕಣದ ಮುಂದೆ ಸಕಲಬ್ರಹ್ಮಾಂಡವೂ ಹುಲ್ಲುಕಡ್ಡಿಗೆ ಸಮನೆನಿಸುವುದು. ಇಂತಹ ಕ್ಷೇತ್ರದ ಸರ್ವಪ್ರದೇಶದ ಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಲು ಯಾರಿಗೆ ಸಾಧ್ಯವಾದೀತು ?

೧೧. ಇಲ್ಲಿ ಯಾವ ಯಾವ ಲಿಂಗಗಳಿರುವುವೊ, ಅವುಗಳೆಲ್ಲವೂ ಭಜಕರ ಮೋಕ್ಷಕ್ಕೆ ಕಾರಣಗಳೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ ಎಲ್ಲವುಗಳೂ ತಾವಾಗಿಯೇ ಉದ್ಭವಿಸಿದ ಲಿಂಗಗಳಾಗಿರುವುವು.

೧೨. ಸರ್ವೇಶ್ವರನಾದ ಶಂಕರನೆ! ವಸ್ತುಸ್ಥಿತಿಯು ಹೀಗಿದ್ದರೂ ಇವುಗಳಲ್ಲಿ ಒಂದು ವಿಶೇಷವನ್ನು ಹೇಳಲು ನೀನೇ ಅರ್ಹನಾಗಿರುವೆ. ಈ ಕಾಶೀಕ್ಷೇತ್ರದಲ್ಲಿ ಅನಾದಿಕಾಲದಿಂದ ನೆಲಸಿರುವ ಲಿಂಗಗಳು ಯಾವುವು ?

೧೩–೧೫. ಯಾವುಗಳನ್ನು ಸ್ಮರಿಸುವ ಮಾತ್ರದಿಂದಲೇ ಸಕಲ ಪಾತಕಗಳ ನಾಶವಾಗುವುದೊ, ದರ್ಶನಸ್ಪರ್ಶನಗಳಿಂದ ಸ್ವರ್ಗಮೋಕ್ಷಗಳೆರಡೂ ಕರತಲಾಮಲಕಗಳಾಗುವುವೊ, ಯಾವ ಲಿಂಗಗಳನ್ನು ಜನ್ಮದಲ್ಲೆಲ್ಲ ಒಂದೇ ಸಲವಾದರೂ ಪೂಜೆಮಾಡುವುದರಿಂದ ಕಾಶಿಯಲ್ಲಿಯಿರುವ ಸಮಸ್ತ ಲಿಂಗಗಳೂ ಪೂಜಿಸಲ್ಪಡುವುದು ನಿಶ್ಚಯವೊ, ಪ್ರಳಯಕಾಲದಲ್ಲಿಯೂ ಸಹ ಲೋಕೇಶ್ವರ

ವಿಧಾಯ ಮಯ್ಯನುಕ್ರೋಶಂ ಕಾರುಣ್ಯಾಮೃತಸಾಗರ ।
ಏತದಾಚಕ್ಷ್ವ ಮೇ ಶಂಭೋ ಪಾದಯೋಃ ಪ್ರಣತಾಸ್ಮ್ಯಹಂ ॥ ೧೬ ॥
ಇತ್ಯಾಕರ್ಣ್ಯ ಮಹೇಶಾನಸ್ತಸ್ಯಾ ದೇವ್ಯಾ ಸುಭಾಷಿತಂ ।
ಕಥಯಾಮಾಸ ವಿಂಧ್ಯಾರೇ ಮಹಾಲಿಂಗಾನಿ ಸತ್ತಮ ॥ ೧೭ ॥
ಯಸ್ಯಾ ನಾಮಾಕರ್ಣನಾದೇವ ಕ್ಷೀಯಂತೇ ಪಾಪರಾಶಯಃ ।
ಪ್ರಾಪ್ಯತೇ ಪುಣ್ಯಸಂಭಾರಃ ಕಾಶ್ಯಾಂ ನಿರ್ವಾಣಕಾರಣಂ ॥ ೧೮ ॥
ದೇವದೇವ ಉವಾಚ :—
ಶೃಣು ದೇವಿ ಪರಂ ಗೃಹ್ಯಂ ಕ್ಷೇತ್ರೇಽಸ್ಮಿನ್ಮುಕ್ತಿಕಾರಣಂ ।
ಇದಂ ವಿದಂತಿ ನೈವಾಪಿ ಬ್ರಹ್ಮನಾರಾಯಣಾದಯಃ ॥ ೧೯ ॥
ಅಸಂಖ್ಯಾತಾನಿ ಲಿಂಗಾನಿ ಪಾರ್ವತ್ಯಾನಂದಕಾನನೇ ।
ಸ್ಥೂಲಾನ್ಯಪಿ ಚ ಸೂಕ್ಷ್ಮಾಣಿ ನಾನಾರತ್ನಮಯಾನಿ ಚ ॥ ೨೦ ॥

---

ನಾದ ಮಹಾದೇವನು ಯಾವ ಲಿಂಗಗಳಲ್ಲಿ ಸನ್ನಿಹಿತನಾಗಿರುವನೊ, ಯಾವ ಲಿಂಗಗಳ ಸಾನ್ನಿಧ್ಯದಿಂದಲೇ ಈ ಕಾಶೀನಗರಿಯು ಮುಕ್ತಿಪುರಿಯೆಂಬ ಪ್ರಖ್ಯಾತಿಯನ್ನು ಪಡೆದಿರುವುದೊ, ಆ ಲಿಂಗಗಳನ್ನು ನನಗೆ ತಿಳಿಸುವವನಾಗು.

೧೬. ಕರುಣಾಮೃತಸಾಗರನಾದ ಪರಮೇಶ್ವರನೆ! ನಾನು ನಿನ್ನ ಪಾದಗಳನ್ನು ನಮಸ್ಕರಿಸುತ್ತಿರುವೆನು. ನನ್ನಲ್ಲಿ ಅನುಕಂಪವನ್ನು ತೋರಿ ಅವುಗಳನ್ನು ನಿಸ್ತರಿಸು.

೧೭. ವಿಂಧ್ಯಪರ್ವತದ ಸೊಕ್ಕನ್ನು ಮುರಿದ ಮುನಿಸತ್ತಮನೆ! ಇಂತೆಂದು ದೇವಿಯಾಡಿದ ಮೃದುಮಧುರಗಳಾದ ಆ ಮಾತುಗಳನ್ನು ಲಾಲಿಸಿ ಮಹೇಶ್ವರನು ಕ್ಷೇತ್ರದಲ್ಲಿ ಪ್ರತಿಷ್ಠಿತಗಳಾಗಿರುವ ಮಹಾಲಿಂಗಗಳನ್ನು ಕ್ರಮವಾಗಿ ಹೇಳತೊಡಗಿದನು.

೧೮. ಇವುಗಳ ಹೆಸರುಗಳನ್ನು ಕೇಳುವುದರಿಂದಲೇ ಪಾಪರಾಶಿಗಳೆಲ್ಲವೂ ಕ್ಷಯಿಸುವುವಲ್ಲದೆ ಕಾಶಿಯಲ್ಲಿ ದೇಹತ್ಯಾಗಾನಂತರದಲ್ಲಿ ಲಭಿಸುವ ಮೋಕ್ಷಕ್ಕೆ ಕಾರಣವಾದ ಪುಣ್ಯಸಂಚಯವೂ ಪ್ರಾಪ್ತವಾಗುವುದು.

೧೯. ದೇವದೇವನು ಹೇಳುತ್ತಾನೆ:—ಎಲೌ ದೇವಿಯೆ! ಈ ಕ್ಷೇತ್ರದಲ್ಲಿ ಮಾನವರ ಮೋಕ್ಷಕ್ಕೆ ಕಾರಣವಾದ ಮಹಾರಹಸ್ಯವೊಂದಿರುವುದು. ಅದನ್ನು ಕೇಳು. ಬ್ರಹ್ಮದೇವನೂ, ನಾರಾಯಣನೇ ಮೊದಲಾದ ಇತರ ದೇವತೆಗಳೂ ಈ ರಹಸ್ಯವನ್ನು ತಿಳಿದಿರುವುದಿಲ್ಲ.

೨೦. ಎಲೌ ಪಾರ್ವತಿಯೆ! ಆನಂದಕಾನನದಲ್ಲಿ ಲೆಕ್ಕವಿಲ್ಲದಷ್ಟು ಸ್ಥೂಲಗಳೂ, ಸೂಕ್ಷ್ಮಗಳೂ, ನವರತ್ನಮಯಗಳೂ ಆದ ಲಿಂಗಗಳು ನೆಲಸಿರುವುವು.

ನಾನಾಧಾತುಮಯಾನೀಶೇ ದಾರ್ಷದಾನ್ಯಪ್ಯನೇಕಶಃ ।
ಸ್ವಯಂಭೂನ್ಯಪ್ಯನೇಕಾನಿ ದೇವರ್ಷಿಸ್ಥಾಪಿತಾನ್ಯಹೋ ॥ ೨೧ ॥
ಸಿದ್ಧಚಾರಣಗಂಧರ್ವಯಕ್ಷರಕ್ಷೋಽರ್ಚಿತಾನ್ಯಪಿ ।
ಅಸುರೋರಗಮರ್ತ್ಯೈಶ್ಚ ದಾನವೈರಪ್ಸರೋಗಣೈಃ ॥ ೨೨ ॥
ದಿಗ್ಗಜೈರ್ಗಿರಿಭಿಸ್ತೀರ್ಥೈರ್ಋಕ್ಷವಾನರಕಿನ್ನರೈಃ ।
ಪತತ್ರಿಪ್ರಮುಖೈರ್ದೇವಿ ಸ್ವಸ್ವನಾಮಾಂಕಿತಾನಿ ವೈ ॥ ೨೩ ॥
ಪ್ರತಿಷ್ಠಿತಾನಿ ಯಾನೀಹ ಮುಕ್ತಿಹೇತೂನಿ ತಾನ್ಯಪಿ ।
ಅದೃಶ್ಯಾನ್ಯಪಿ ದೃಶ್ಯಾನಿ ದುರವಸ್ಥಾನ್ಯಪಿ ಪ್ರಿಯೇ ॥ ೨೪ ॥
ಭಗ್ನಾನ್ಯಪಿ ಚ ಕಾಲೇನ ತಾನಿ ಪೂಜ್ಯಾನಿ ಸುಂದರಿ ।
ಪರಾರ್ಧಶತಸಂಖ್ಯಾನಿ ಗಣಿತಾನ್ಯೇಕದಾ ಮಯಾ ॥ ೨೫ ॥
ಗಂಗಾಂಭಸ್ಯಪಿ ತಿಷ್ಠಂತಿ ಷಷ್ಟಿಕೋಟಿಮಿತಾನಿ ಹಿ ।
ಸಿದ್ಧಲಿಂಗಾನಿ ತಾನೀಶೇ ತಿಷ್ಯೇಽದೃಶ್ಯತ್ವಮಾಪ್ನುಯುಃ ॥ ೨೬ ॥

---

೨೧. ಎಲೌ ಈಶ್ವರಿಯೆ! ಇಲ್ಲಿ ಅನೇಕ ಲಿಂಗಗಳು ನಾನಾ ಧಾತುಗಳಿಂದ ಮಾಡಲ್ಪಟ್ಟವುಗಳೂ, ಕಲ್ಲಿನಿಂದಾದವುಗಳೂ, ಸ್ವತಃ ಉದ್ಭವಿಸಿದುವುಗಳೂ, ದೇವತೆಗಳು ಮಹರ್ಷಿಗಳೇ ಮುಂತಾದವರಿಂದ ಪ್ರತಿಷ್ಠಿತಗಳಾದವುಗಳೂ ಆಗಿರುವುವು.

೨೨. ಅಲ್ಲದೆ ಸಿದ್ಧರು, ಚಾರಣರು, ಗಂಧರ್ವರು, ಯಕ್ಷರು, ರಾಕ್ಷಸರು, ಅಸುರರು, ನಾಗರು, ಮನುಷ್ಯರು, ದಾನವರು, ಅಪ್ಸರರ ಸಮೂಹಗಳೇ ಮುಂತಾದವರಿಂದ ಪೂಜಿತಗಳಾದ ಅನೇಕ ಲಿಂಗಗಳೂ ಇರುವುವು.

೨೩. ದಿಗ್ಗಜಗಳು, ಕುಲಾಚಲಗಳು, ತೀರ್ಥದೇವತೆಗಳು, ಯಕ್ಷರು, ವಾನರರು, ಕಿನ್ನರರು, ಪಕ್ಷಿಶ್ರೇಷ್ಠರು ಮುಂತಾದ ಅನೇಕರಿಂದ ಸ್ಥಾಪಿತಗಳಾಗಿ ಪೂಜಿಸಲ್ಪಟ್ಟ ಲಿಂಗಗಳು ಅವರವರ ಹೆಸರಿನಿಂದಲೇ ಪ್ರಖ್ಯಾತಗಳಾಗಿರುವುವು.

೨೪–೨೫. ಪ್ರಿಯೆ! ಇಲ್ಲಿ ಪ್ರತಿಷ್ಠಿತಗಳಾಗಿರುವ ಯಾವಯಾವ ಲಿಂಗಗಳು ಮೋಕ್ಷಹೇತುಗಳಾಗಿರುವುವೊ, ಅವುಗಳು ಕಾಣದಿದ್ದರೂ, ಕಾಣುತ್ತಿದ್ದರೂ, ಮ್ಲೇಚ್ಛಾದಿ ಪಾಪಿಗಳಿಗೆ ದುಃಖದಾಯಕಗಳಾದರೂ, ಕಾಲವೈಪರೀತ್ಯದಿಂದ ಭಿನ್ನಗಳಾಗಿದ್ದರೂ, ನಿಸ್ಸಂಕೋಚವಾಗಿ ಎಲ್ಲರಿಗೂ ಪೂಜಾರ್ಹಗಳಾಗಿರುವುವು. ಎಲೌ ಸುಂದರಿಯೆ! ಒಮ್ಮೆ ನಾನು ಅವುಗಳೆಲ್ಲವನ್ನೂ ಗಣನೆ ಮಾಡಲು ಒಂದು ನೂರು ಪರಾರ್ಧಸಂಖ್ಯೆಯುಳ್ಳವುಗಳೆಂದು ನಿರ್ಣೀತವಾಯಿತು. (ಒಂದು ಪರಾರ್ಧವೆಂದರೆ ಸಾವಿರ ಕೋಟಿಕೋಟಿಗಳು.)

೨೬. ಗಂಗಾನದಿಯ ಪ್ರವಾಹದಲ್ಲಿಯೇ ಅರುವತ್ತು ಕೋಟಿ ಲಿಂಗಗಳು ನೆಲಸಿರುವುವು. ಅವುಗಳೆಲ್ಲವೂ ಸಿದ್ಧಲಿಂಗಗಳಾಗಿರುವುವು. ಎಲೌ ಗಿರಿಜೆಯೆ! ಆದರೆ ಕಲಿಕಾಲದ ಮಹಿಮೆಯಿಂದ ಅವುಗಳು ಅದೃಶ್ಯಗಳಾದುವು.

ಗಣನಾ ದಿವಸಾದರ್ವಾಜ್ಞ್ಮಮ ಭಕ್ತಜನ್ಯೈಃ ಪ್ರಿಯೇ ।
ಪ್ರತಿಷ್ಠಿತಾನಿ ಯಾನೀಹ ತೇಷಾಂ ಸಂಖ್ಯಾ ನ ವಿದ್ಯತೇ ॥ ೨೭ ॥
ತ್ವಯಾ ತು ಯಾನಿ ಪೃಷ್ಟಾನಿ ಯೈರಿದಂ ಕ್ಷೇತ್ರಮುತ್ತಮಂ ।
ತಾನಿ ಲಿಂಗಾನಿ ವಕ್ಷ್ಯಾಮಿ ಮುಕ್ತಿಹೇತೂನಿ ಸುಂದರಿ ॥ ೨೮ ॥
ಕಲಾವತೀವ ಗೋಪ್ಯಾನಿ ಭವಿಷ್ಯಂತಿ ಗಿರೀಂದ್ರಜೇ ।
ಪರಂ ತೇಷಾಂ ಪ್ರಭಾವೋ ಯಃ ಸ್ವಂ ಸ್ವಂ ಸ್ಥಾನಂ ನ ಹಾಸ್ಯತಿ ॥ ೨೯ ॥
ಕಲಿಕಲ್ಮಷಪುಷ್ಟಾ ಯೇ ಯೇ ದುಷ್ಟಾ ನಾಸ್ತಿಕಾಃ ಶಠಾಃ ।
ಏತೇಷಾಂ ಸಿದ್ಧಲಿಂಗಾನಾಂ ಜ್ಞಾಸ್ಯಂತ್ಯಾಖ್ಯಾನ್ಯಪೀಹ ನ ॥ ೩೦ ॥
ನಾಮಶ್ರವಣತೋಽಪೀಹ ಯಲ್ಲಿಂಗಾನಾಂ ಶುಭಾನನೇ ।
ವೃಜಿನಾನಿ ಕ್ಷಯಂ ಯಾಂತಿ ವರ್ಧಂತೇ ಪುಣ್ಯರಾಶಯಃ ॥ ೩೧ ॥
ಓಂಕಾರಃ ಪ್ರಥಮಂ ಲಿಂಗಂ ದ್ವಿತೀಯಂ ಚ ತ್ರಿಲೋಚನಂ ।
ತೃತೀಯಶ್ಚ ಮಹಾದೇವಃ ಕೃತ್ತಿವಾಸಶ್ಚತುರ್ಥಕಂ ॥ ೩೨ ॥

---

೨೭. ಎಲೌ ಪ್ರಿಯಳೆ! ನಾನು ಗಣನೆಮಾಡಿದ ದಿವಸದಿಂದ ಈಚೆಗೆ ನನ್ನ ಭಕ್ತೋತ್ತಮರು ಇಲ್ಲಿ ಪ್ರತಿಷ್ಠೆಮಾಡಿರುವ ಲಿಂಗಗಳ ಸಂಖ್ಯೆಯನ್ನು ಮಾಡುವುದಕ್ಕೇ ಸಾಧ್ಯವಿಲ್ಲವಾಗಿರುವುದು.

೨೮. ಸುಂದರಿಯೆ! ಆದರೆ ನೀನು ಯಾವ ಲಿಂಗಗಳ ಪ್ರಭಾವದಿಂದ ಈ ಕ್ಷೇತ್ರವು ಉತ್ತಮ ಕ್ಷೇತ್ರವಾಯಿತೆಂದು ಕೇಳಿದೆಯಲ್ಲವೆ. ಉಪಾಸಕರ ಮುಕ್ತಿಗೆ ಕಾರಣಗಳಾದ ಅವುಗಳನ್ನು ಈಗ ವರ್ಣಿಸುವೆನು.

೨೯. ಓ ಗಿರಿರಾಜಪುತ್ರಿಯೆ! ಕಲಿಯುಗದಲ್ಲಿ ಈ ಲಿಂಗಗಳು ಅತ್ಯಂತ ರಹಸ್ಯಗಳಾಗಿರುವುವು. ಆದರೂ ಇವುಗಳಿರುವ ಸ್ಥಳಗಳಲ್ಲಿ ಈ ಮಹಾಲಿಂಗಗಳ ಪ್ರಭಾವವು ಎಡೆಬಿಡದೆ ನಿತ್ಯವೂ ಕಾಣುತ್ತಿರುವುದು.

೩೦. ಕಲಿಯುಗದ ಕಲ್ಮಷಗಳಿಂದಲೇ ಪೋಷಿತರಾದವರೂ, ದುಷ್ಟರೂ, ನಾಸ್ತಿಕರೂ, ಮೂರ್ಖರೂ ಈ ಸಿದ್ಧಲಿಂಗಗಳ ಹೆಸರುಗಳನ್ನೂ ಸಹ ಸಮಗ್ರ ವಾಗಿ ತಿಳಿಯಲು ಅಶಕ್ತರಾಗಿರುವರು.

೩೧. ಮಂಗಳಾಂಗಿಯೇ! ಈ ಲಿಂಗಗಳ ನಾಮಸಂಕೀರ್ತನೆಯನ್ನು ಕೇಳುವ ಮಾತ್ರದಿಂದಲೇ ಸಕಲ ಪಾತಕಗಳೂ ನಾಶವನ್ನು ಹೊಂದುವುವಲ್ಲದೆ ಪುಣ್ಯರಾಶಿಗಳು ಅಭಿವೃದ್ಧಿಯನ್ನು ಪಡೆಯುತ್ತಿರುವುವು.

೩೨. ಇವುಗಳಲ್ಲಿ ಓಂಕಾರೇಶ್ವರವು ಮೊದಲನೆಯ ಲಿಂಗವು. ತ್ರಿಲೋಚನವು ಎರಡನೆಯದು. ಮೂರನೆಯದು ಮಹಾದೇವೇಶ್ವರವು. ನಾಲ್ಕನೆಯದು ಕೃತ್ತಿವಾಸೇಶ್ವರಲಿಂಗವು.

ರತ್ನೇಶಃ ಪಂಚಮಂ ಲಿಂಗಂ ಷಷ್ಠಂ ಚಂದ್ರೇಶ್ವರಾಭಿಧಂ ।
ಕೇದಾರಃ ಸಪ್ತಮಂ ಲಿಂಗಂ ಧರ್ಮೇಶಶ್ಚಾಷ್ಟಮಂ ಪ್ರಿಯೇ ॥ ೩೩ ॥
ವೀರೇಶ್ವರಂ ಚ ನವಮಂ ಕಾಮೇಶಂ ದಶಮಂ ವಿದುಃ ।
ವಿಶ್ವಕರ್ಮೇಶ್ವರಂ ಲಿಂಗಂ ಶುಭಮೇಕಾದಶಂ ಪರಂ ॥ ೩೪ ॥
ದ್ವಾದಶಂ ಮಣಿಕರ್ಣೀಶಮವಿಮುಕ್ತಂ ತ್ರಯೋದಶಂ ।
ಚತುರ್ದಶಂ ಮಹಾಲಿಂಗಂ ಮಮ ವಿಶ್ವೇಶ್ವರಾಭಿಧಂ ॥ ೩೫ ॥
ಪ್ರಿಯೇ ಚತುರ್ದಶೈತಾನಿ ಶ್ರಿಯೋಹೇತೂನಿ ಸುಂದರಿ ।
ಏತೇಷಾಂ ಸಮವಾಯೋಽಯಂ ಮುಕ್ತಿಕ್ಷೇತ್ರಮಿಹೇರಿತಂ ॥ ೩೬ ॥
ದೇವತಾಃ ಸಮಧಿಷ್ಠಾತ್ರ್ಯಃ ಕ್ಷೇತ್ರಸ್ಯಾಸ್ಯ ಪರಾ ಇಮಾಃ ।
ಆರಾಧಿತಾಃ ಪ್ರಯಚ್ಛಂತಿ ನೃಭ್ಯೋ ನೈಃಶ್ರೇಯಸೀಂ ಶ್ರಿಯಂ ॥ ೩೭ ॥
ಆನಂದಕಾನನೇ ಮುಕ್ತ್ಯೈ ಪ್ರೋಕ್ತಾನ್ಯೇತಾನಿ ಸುಂದರಿ ।
ಪ್ರಿಯೇ ಚತುರ್ದಶೇಜ್ಯಾನಿ ಮಹಾಲಿಂಗಾನಿ ದೇಹಿನಾಂ ॥ ೩೮ ॥

---

೩೩. ಐದನೆಯದು ರತ್ನೇಶ್ವರವು. ಚಂದ್ರೇಶ್ವರನೆಂಬ ಹೆಸರಿನ ಲಿಂಗವೇ ಆರನೆಯದು. ಕೇದಾರೇಶ್ವರವು ಏಳನೆಯ ಲಿಂಗವು. ಎಲೌ ಪ್ರಿಯೆಯೆ! ಧರ್ಮೇಶ್ವರಲಿಂಗವೇ ಎಂಟನೆಯದೆನಿಸಿರುವುದು.

೩೪. ಒಂಬತ್ತನೆಯದು ವೀರೇಶ್ವರಲಿಂಗವು. ಹತ್ತನೆಯದು ಕಾಮೇಶ್ವರವೆಂದು ಹೇಳುವರು. ಸರ್ವೋತ್ತಮವೂ ಮಂಗಳಪ್ರದವೂ ಆದ ವಿಶ್ವಕರ್ಮೇಶ್ವರ ಲಿಂಗವೇ ಹನ್ನೊಂದನೆಯ ಲಿಂಗವೆನಿಸಿರುವುದು.

೩೫. ಹನ್ನೆರಡನೆಯದು ಮಣಿಕರ್ಣಿಕೇಶ್ವರವು. ಹದಿಮೂರನೆಯ ಲಿಂಗವೇ ಅವಿಮುಕ್ತೇಶ್ವರವು. ಹದಿನಾಲ್ಕನೆಯ ಮಹಾ ಲಿಂಗವೇ ವಿಶ್ವೇಶ್ವರ ನಾಮಕವಾದುದು.

೩೬. ಪ್ರಿಯಳೆ, ಸುಂದರಿಯೆ! ಈ ಹದಿನಾಲ್ಕು ಮಹಾಲಿಂಗಗಳೂ ಪೂಜಿಸುವವರಿಗೆ ಮಹದೈಶ್ವರ್ಯವನ್ನು ಕೈಗೂಡಿಸುವುವು. ಇವುಗಳೆಲ್ಲವೂ ಇಲ್ಲಿ ಪ್ರತಿಷ್ಠಿತಗಳಾಗಿರುವುದರಿಂದ ಈ ಪ್ರದೇಶಕ್ಕೆ ಮುಕ್ತಿಕ್ಷೇತ್ರವೆಂದು ಹೆಸರು ಬಂದಿರುವುದು.

೩೭. ಇವುಗಳೇ ಈ ಕ್ಷೇತ್ರದಲ್ಲಿ ಅಧಿಷ್ಠಾನವನ್ನು ಹೊಂದಿರುವ ಸರ್ವೋತ್ತಮಗಳಾದ ದೇವತೆಗಳು. ಇವುಗಳನ್ನು ಆರಾಧಿಸಿದ ಮನುಷ್ಯರಿಗೆ ಕೈವಲ್ಯ ರೂಪವಾದ ಐಶ್ವರ್ಯವನ್ನು ಅನುಗ್ರಹಿಸುವುವು.

೩೮. ಓ ತ್ರಿಪುರಸುಂದರಿಯೆ! ದೇಹಧಾರಿಗಳ ಮೋಕ್ಷಕ್ಕಾಗಿ ಆನಂದ ಕಾನನದಲ್ಲಿ ಈ ಹದಿನಾಲ್ಕು ಲಿಂಗಗಳೂ ಆವಿರ್ಭವಿಸಿರುವುವೆಂದು ಹೇಳುವರು. ಆದುದರಿಂದ ಈ ಮಹಾ ಲಿಂಗಗಳಿಗೆ ಅವಶ್ಯಕವಾಗಿ ಪೂಜೆಗಳನ್ನು ಮಾಡಬೇಕು.

ಪ್ರತಿಮಾಸಂ ಸಮಾರಭ್ಯ ತಿಥಿಂ ಪ್ರತಿಪದಂ ಶುಭಾಂ ।
ಏತೇಷಾಂ ಲಿಂಗಮುಖ್ಯಾನಾಂ ಕಾರ್ಯಾ ಯಾತ್ರಾ ಪ್ರಯತ್ನತಃ ॥ ೩೯ ॥
ಅನಾರಾಧ್ಯ ಮಹಾದೇವಮೇಷು ಲಿಂಗೇಷು ಕುಂಭಜ ।
ಕಃ ಕಾಶ್ಯಾಂ ಮೋಕ್ಷಮಾಪ್ನೋತಿ ಸತ್ಯಂ ಸತ್ಯಂ ಪುನಃ ಪುನಃ ॥ ೪೦ ॥
ತಸ್ಮಾತ್ಸರ್ವಪ್ರಯತ್ನೇನ ಕಾಶೀಫಲಮಭೀಪ್ಸುಭಿಃ ।
ಪೂಜ್ಯಾನ್ಯೇತಾನಿ ಲಿಂಗಾನಿ ಭಕ್ತ್ಯಾ ಪರಮಯಾ ಮುನೇ ॥ ೪೧ ॥

ಅಗಸ್ತ್ಯ ಉವಾಚ :—

ಏತಾನ್ಯೇವ ಕಿಮನ್ಯಾನಿ ಮಹಾಲಿಂಗಾನಿ ಷಣ್ಮುಖ ।
ನಿರ್ವಾಣಕಾರಣಾನೀಹ ಯದಿ ಸಂತಿ ತದಾ ವದ ॥ ೪೨ ॥

ಸ್ಕಂದ ಉವಾಚ :—

ಅನ್ಯಾನ್ಯಪಿ ಚ ಸಂತೀಹ ಮಹಾಲಿಂಗಾನಿ ಸುವ್ರತ ।
ಕಲಿಪ್ರಭಾವಾದ್ಗುಪ್ತಾನಿ ಭವಿಷ್ಯಂತ್ಯೇವ ತಾನಿ ವೈ ॥ ೪೩ ॥
ಯಸ್ಯೇಶ್ವರೇ ಸದಾ ಭಕ್ತಿರ್ಯಃ ಕಾಶೀತತ್ತ್ವವಿತ್ತಮಃ ।
ಸ ಏವೈತಾನಿ ಲಿಂಗಾನಿ ವೇತ್ಸ್ಯತ್ಯನ್ಯೋ ನ ಕಶ್ಚನ ॥ ೪೪ ॥

---

೩೯. ಪ್ರತಿಮಾಸದಲ್ಲಿಯೂ ಪಾಡ್ಯಮಿ ಮೊದಲುಗೊಂಡು ಕ್ರಮವಾಗಿ ಈ ಲಿಂಗಗಳಿಗೆ ಒಂದೊಂದು ಪಕ್ಷದಲ್ಲಿಯೂ ಸಮಸ್ತ ವೈಭವಗಳಿಂದ ಮಹಾ ಯಾತ್ರೆಗಳನ್ನು ನಡೆಸುತ್ತಿರಬೇಕು.

೪೦. ಎಲೈ ಅಗಸ್ತ್ಯಮಹರ್ಷಿಯೆ! ಚತುರ್ದಶಲಿಂಗಗಳಲ್ಲಿ ಅಧಿಷ್ಠಿತ ನಾಗಿರುವ ಮಹಾದೇವನನ್ನು ಚೆನ್ನಾಗಿ ಪೂಜೆಮಾಡದಿರುವ ಯಾವನು ತಾನೆ, ಕಾಶಿಯಲ್ಲಿ ಮೋಕ್ಷವನ್ನು ಪಡೆಯಬಲ್ಲನು? ಈ ಮಾತು ಸತ್ಯವೆಂದು ನಾನು ಮತ್ತೆ ಮತ್ತೆ ಹೇಳುತ್ತಿರುವೆನು.

೪೧. ಮುನಿವರ್ಯ! ಆದುದರಿಂದ ಕಾಶೀಕ್ಷೇತ್ರಸೇವೆಯ ಸಂಪೂರ್ಣ ಫಲವನ್ನು ಅಪೇಕ್ಷಿಸುವ ಸಕಲ ಮಾನವರೂ ಆ ಲಿಂಗಗಳನ್ನು ಅತ್ಯಂತ ಭಕ್ತಿ ಯಿಂದ ಖಂಡಿತವಾಗಿಯೂ ಸರ್ವೋಪಚಾರಗಳಿಂದ ಪೂಜಿಸಬೇಕು.

೪೨. ಅಗಸ್ತ್ಯನು ಪ್ರಶ್ನೆಮಾಡುತ್ತಾನೆ :—ಅಯ್ಯಾ ಷಣ್ಮುಖನೆ! ಈ ಕ್ಷೇತ್ರ ದಲ್ಲಿ ಮೋಕ್ಷದಾಯಕಗಳಾದ ಲಿಂಗಗಳು ಇವು ಮಾತ್ರವೇಯೊ? ಅಥವಾ ಬೇರೆ ಯವುಗಳೂ ಇರುವುವೊ? ಅಂತಹವುಗಳಿದ್ದರೆ ಅವುಗಳನ್ನೂ ತಿಳಿಸುವವನಾಗು.

೪೩. ಸ್ಕಂದನು ಹೇಳುತ್ತಾನೆ :—ಎಲೈ ಮಹಾತಪಸ್ವಿಯೆ! ಇವುಗಳಲ್ಲದೆ ಇಲ್ಲಿ ಇತರ ಮಹಾಲಿಂಗಗಳೂ ಇರುವುವು. ಆದರೆ ಅವುಗಳೆಲ್ಲವೂ ಕಲಿಯುಗದ ಮಹಿಮೆಯಿಂದ ಗುಪ್ತಗಳಾಗಿಯೇ ಇರುವುವು.

೪೪. ಯಾವನಿಗೆ ಮಹೇಶ್ವರನಲ್ಲಿ ಸರ್ವಕಾಲದಲ್ಲಿಯೂ ಅವಿಚ್ಛಿನ್ನವಾದ

ಏಷಾಂ ನಾಮಾನುಗ್ರಹೇಣಾಪಿ ಕಲಿಕಲ್ಮಷಸಂಕ್ಷಯಃ ।
ಅಮೃತೇಶಸ್ತಾರಕೇಶೋ ಜ್ಞಾನೇಶಃ ಕರುಣೇಶ್ವರಃ ॥ ೪೫ ॥
ಮೋಕ್ಷದ್ವಾರೇಶ್ವರಶ್ಚೈವ ಸ್ವರ್ಗದ್ವಾರೇಶ್ವರಸ್ತಥಾ ।
ಬ್ರಹ್ಮೇಶೋ ಲಾಂಗಲಶ್ಚೈವ ವೃದ್ಧಕಾಲೇಶ್ವರಸ್ತಥಾ ॥ ೪೬ ॥
ವೃಷೇಶಶ್ಚೈವ ಚಂಡೀಶೋ ನಂದಿಕೇಶೋ ಮಹೇಶ್ವರಃ ।
ಜ್ಯೋತೀರೂಪೇಶ್ವರಂ ಲಿಂಗಂ ಖ್ಯಾತಮತ್ರ ಚತುರ್ದಶಂ ॥ ೪೭ ॥
ಕಾಶ್ಯಾಂ ಚತುರ್ದಶೈತಾನಿ ಮಹಾಲಿಂಗಾನಿ ಸುಂದರಿ ।
ಇಮಾನಿ ಮುಕ್ತಿಹೇತೂನಿ ಲಿಂಗಾನ್ಯಾನಂದಕಾನನೇ ॥ ೪೮ ॥
ಕಲಿಕಲ್ಮಷಬುದ್ಧೀನಾಂ ನಾಖ್ಯೇಯಾನಿ ಕದಾಚನ ।
ಏತಾನ್ಯಾರಾಧಯೇದ್ಯಸ್ತು ಲಿಂಗಾನೀಹ ಚತುರ್ದಶ ॥ ೪೯ ॥
ನ ತಸ್ಯ ಪುನರಾವೃತ್ತಿಃ ಸಂಸಾರಾಧ್ವನಿ ಕರ್ಹಿಚಿತ್ ।
ಕಾಶೀಕೋಶೋಽಯಮತುಲೋ ನ ಪ್ರಕಾಶ್ಯೋ ಯತಸ್ತತಃ ॥ ೫೦ ॥

---

ಭಕ್ತಿಯಿರುವುದೊ, ಯಾವನು ಕಾಶಿಯ ರಹಸ್ಯಗಳನ್ನೆಲ್ಲ ತಿಳಿದವರಲ್ಲಿ ಉತ್ತಮನೊ, ಅವನು ಮಾತ್ರ ಈ ಲಿಂಗಗಳನ್ನು ತಿಳಿಯಬಲ್ಲನೇ ಹೊರತು ಮತ್ತೊಬ್ಬನು ಎಂದಿಗೂ ತಿಳಿಯಲಾರನು.

೪೫–೪೭. ಅವುಗಳ ಹೆಸರುಗಳನ್ನು ಪಠನಮಾಡುವುದರಿಂದಲೂ ಸಮಸ್ತ ಕಲಿಕಲ್ಮಷರಾಶಿಗಳೂ ನಾಶವಾಗುವುವು. ಅವುಗಳನ್ನು ತಿಳಿಸುವೆನು. ಅಮೃತೇಶ್ವರ, ತಾರಕೇಶ್ವರ, ಜ್ಞಾನೇಶ್ವರ, ಕರುಣೇಶ್ವರ, ಮೋಕ್ಷದ್ವಾರೇಶ್ವರ, ಸ್ವರ್ಗದ್ವಾರೇಶ್ವರ, ಬ್ರಹ್ಮೇಶ್ವರ, ಲಾಂಗಲೀಶ್ವರ, ವೃದ್ಧಕಾಲೇಶ್ವರ, ವೃಷಭೇಶ್ವರ, ಚಂಡೀಶ್ವರ, ನಂದಿಕೇಶ್ವರ, ಮಹೇಶ್ವರ. ಹದಿನಾಲ್ಕನೆಯ ಮಹಾಲಿಂಗವೇ ಜ್ಯೋತೀರೂಪೇಶ್ವರಲಿಂಗವೆಂದು ಪ್ರಖ್ಯಾತವಾಗಿರುವುದು.

೪೮. ಎಲೌ ಪಾರ್ವತಿಯೇ! ಕಾಶೀಕ್ಷೇತ್ರದಲ್ಲಿರುವ ಈ ಹದಿನಾಲ್ಕು ಲಿಂಗಗಳೂ ಮಹಾಲಿಂಗಗಳೆನಿಸಿ ಮೋಕ್ಷಕ್ಕೆ ಕಾರಣಗಳಾಗಿರುವುವು. ಈ ಲಿಂಗಗಳೆಲ್ಲವೂ ಆನಂದಕಾನನದಲ್ಲಿಯೇ ನೆಲಸಿರುವುವು.

೪೯–೫೦. ಕಲಿಕಲ್ಮಷಗಳಿಂದ ದೂಷಿತವಾಗಿರುವ ಬುದ್ಧಿಯುಳ್ಳವರಿಗೆ ಇವುಗಳ ಹೆಸರುಗಳನ್ನೆಂದಿಗೂ ಪ್ರಕಾಶಗೊಳಿಸಬಾರದು. ಯಾವನು ಇಲ್ಲಿ ಈ ಹದಿನಾಲ್ಕು ಮಹಾಲಿಂಗಗಳನ್ನು ಆರಾಧಿಸುವನೊ ಅವನಿಗೆಂದಿಗೂ ಸಂಸಾರ ಮಾರ್ಗದಲ್ಲಿ ಪುನರಾವೃತ್ತಿಯಿರುವುದಿಲ್ಲ. ಇವುಗಳಿರುವ ಪ್ರದೇಶವೇ ಕಾಶೀಕ್ಷೇತ್ರದ ನಾಭಿಯಂತಿರುವುದು. ಅಪ್ರತಿಮವಾದ ಈ ಪ್ರದೇಶದ ಮಹಿಮೆಯನ್ನು ಸರ್ವಸ್ಥಳಗಳಲ್ಲಿಯೂ ಪ್ರಕಾಶಗೊಳಿಸಬಾರದು.

**ಏತಲ್ಲಿಂಗಾಭಿಧಾ ದೇವಿ ಮಹಾಪದ್ಯಪಿ ದುಃಖಹೃತ್ ।**
**ರಹಸ್ಯಂ ಪರಮಂ ಚೈತತ್ಕ್ಷೇತ್ರಸ್ಯಾಸ್ಯ ವರಾನನೇ ॥ ೫೧ ॥**
**ಚತುರ್ದಶಾಪಿ ಲಿಂಗಾನಿ ಮತ್ಸಾನ್ನಿಧ್ಯಕರಾಣಿ ಹಿ ।**
**ಅವಿಮುಕ್ತಸ್ಯ ಹೃದಯಮೇತದೇವ ಗಿರೀಂದ್ರಜೇ ॥ ೫೨ ॥**
**ಇಮಾನಿ ಯಾನಿ ಲಿಂಗಾನಿ ಸರ್ವೇಷಾಂ ಮುಕ್ತಿದಾನಿ ಹಿ ।**
**ಏಕೈಕಭುವನಸ್ಯೇಹ ಸಾರಮಾದಾಯ ಸರ್ವತಃ ।**
**ಮಯೈತಾನಿ ಕೃತಾನ್ಯೇವ ಮಹಾಭಕ್ತಕೃಪಾವಶಾತ್ ॥ ೫೩ ॥**
**ಅಸ್ಮಿನ್ಕ್ಷೇತ್ರೇ ಧ್ರುವಂ ಮುಕ್ತಿರಿತಿ ಯಾ ಪ್ರಥಿತಿಃ ಪ್ರಿಯೇ ।**
**ಕಾರಣಂ ತತ್ರ ಲಿಂಗಾನಿ ಮಯೈತಾನಿ ಚತುರ್ದಶ ॥ ೫೪ ॥**
**ತ ಏವ ವ್ರತಿನಃ ಕಾಂತೇ ತ ಏವ ಚ ತಪಸ್ವಿನಃ ।**
**ಧ್ಯಾತಾನ್ಯೇತಾನಿ ಯೈರ್ಭಕ್ತ್ಯಾ ಲಿಂಗಾನ್ಯಾನಂದಕಾನನೇ ॥ ೫೫ ॥**
**ತ ಏವಾಭ್ಯಸ್ತಸದ್ಯೋಗಾ ದತ್ತದಾನಾಸ್ತ ಏವ ಹಿ ।**
**ಕಾಶ್ಯಾಮಿಮಾನಿ ಲಿಂಗಾನಿ ಯೈರ್ದೃಷ್ಟಾನ್ಯಪಿ ದೂರತಃ ॥ ೫೬ ॥**

೫೧. ಎಲೌ ದೇವಿಯೆ ! ಈ ಚತುರ್ದಶಲಿಂಗಗಳ ನಾಮಾವಳಿಯು ಅಸಹ್ಯವಾದ ಗಂಡಾಂತರಗಳಲ್ಲಿಯೂ ಸಂಕಟವನ್ನು ಪರಿಹರಿಸುವುದು. ಓ ಸುಂದರಾನನೆ! ಇದೇ ಈ ಕ್ಷೇತ್ರದ ಪರಮರಹಸ್ಯವಾಗಿರುವುದು.

೫೨. ಈ ಹದಿನಾಲ್ಕು ಲಿಂಗಗಳೂ ಭಜಿಸಿದವರಿಗೆ ನನ್ನ ಸಾನ್ನಿಧ್ಯವನ್ನು ದೊರಕಿಸಿಕೊಡುವುವು. ಎಲೌ ಗಿರಿರಾಜಕುಮಾರಿಯೆ! ಇದೇ ಅವಿಮುಕ್ತಕ್ಷೇತ್ರದ ಹೃದಯದಂತಿರುವ ಪ್ರದೇಶವು.

೫೩. ಸಕಲ ಮಾನವರಿಗೂ ಮೋಕ್ಷಪ್ರದಗಳಾದ ಈ ಲಿಂಗಗಳನ್ನು ಹೇಳಿರುವೆನಲ್ಲವೆ. ನನ್ನಲ್ಲಿ ಭಕ್ತಿಯನ್ನು ಮಾಡುವವರಲ್ಲಿ ಅತ್ಯಂತವಾದ ಕೃಪೆಯುಳ್ಳವನಾಗಿ ನಾನು ಹದಿನಾಲ್ಕು ಲೋಕಗಳ ಸಾರಗಳನ್ನೆಲ್ಲ ಬೇರೆಬೇರೆಯಾಗಿ ಸಂಗ್ರಹಿಸಿ ಈ ಮಹಾಲಿಂಗಗಳನ್ನು ಮಾಡಿರುವೆನು.

೫೪. ಪ್ರಿಯೆ! ಈ ಕ್ಷೇತ್ರದಲ್ಲಿ ದೇಹತ್ಯಾಗವನ್ನು ಮಾಡಿದವರಿಗೆ ಮುಕ್ತಿಯು ಸಿದ್ಧವೆಂಬ ಲೋಕಪ್ರತೀತಿಯನ್ನು ಕೇಳಿರುವೆಯಲ್ಲವೆ. ಅದಕ್ಕೆ ಈ ನನ್ನ ಹದಿನಾಲ್ಕು ಮಹಾಲಿಂಗಗಳ ಸಾನ್ನಿಧ್ಯವೇ ಕಾರಣವಾಗಿರುವುದು.

೫೫. ಆನಂದಕಾನನದಲ್ಲಿರುವ ಈ ಲಿಂಗಗಳನ್ನು ಯಾರು ಪರಮಭಕ್ತಿಯಿಂದ ಧ್ಯಾನಮಾಡುವರೊ, ಅವರೇ ವ್ರತೋಪವಾಸಗಳನ್ನು ಮಾಡಿದವರು. ಕಾಂತೆ! ಅವರೇ ತಪಸ್ಸಂಪನ್ನರು.

೫೬. ಕಾಶಿಯಲ್ಲಿರುವ ಈ ಲಿಂಗಗಳನ್ನು ಯಾರು ದೂರದಿಂದಲಾದರೂ ನೋಡಿರುವರೊ, ಅವರೇ ಚೆನ್ನಾಗಿ ಯೋಗಾಭ್ಯಾಸವನ್ನು ಮಾಡಿದವರು. ಅವರೇ ಸತ್ಪಾತ್ರರಾದವರಿಗೆ ದಾನಗಳನ್ನು ಕೊಟ್ಟವರು.

ಇಷ್ಟಾಪೂರ್ತಾಶ್ಚ ಯೇ ಧರ್ಮಾಃ ಪ್ರಣೀತಾ ಮುನಿಸತ್ತಮೈಃ ।
ತೇ ಸರ್ವೇ ತೇನ ವಿಹಿತಾ ಯಾವಜ್ಜೀವಂ ನಿರೇನಸಾ ॥ ೫೭ ॥
ಯೇನಾವಿಮುಕ್ತಮಾಸಾದ್ಯ ಮಹಾಲಿಂಗಾನಿ ಪಾರ್ವತಿ ।
ಸಕೃದಪ್ಯರ್ಚಿತಾನೀಹ ಸ ಮುಕ್ತೋ ನಾತ್ರ ಸಂಶಯಃ ॥ ೫೮ ॥
ಸ್ಕಂದ ಉವಾಚ :—
ಅನ್ಯಾನ್ಯಪಿ ಚ ವಿಂಧ್ಯಾರೇ ದೇವ್ಯೈ ಪ್ರೋಕ್ತಾನಿ ಶಂಭುನಾ ।
ಸ್ವಭಕ್ತಾನಾಂ ಹಿತಾರ್ಥಾಯ ತಾನ್ಯಥಾಕರ್ಣಯಾಗ್ರಜ ॥ ೫೯ ॥
ಶೈಲೇಶಃ ಸಂಗಮೇಶಶ್ಚ ಸ್ವರ್ಲೀನೋ ಮಧ್ಯಮೇಶ್ವರಃ ।
ಹಿರಣ್ಯಗರ್ಭ ಈಶಾನೋ ಗೋಪ್ರೇಕ್ಷೋ ವೃಷಭಧ್ವಜಃ ॥ ೬೦ ॥
ಉಪಶಾಂತಶಿವೋ ಜ್ಯೇಷ್ಠೋ ನಿವಾಸೇಶ್ವರ ಏವ ಚ ।
ಶುಕ್ರೇಶೋ ವ್ಯಾಘ್ರಲಿಂಗಂ ಚ ಜಂಬುಕೇಶಂ ಚತುರ್ದಶಂ ॥ ೬೧ ॥
ಮುನೇ ಚತುರ್ದಶೈತಾನಿ ಮಹಾಂತ್ಯಾಯತನಾನಿ ವೈ ।
ವಿಶೇಷಾಮಪಿ ಸೇವಾತೋ ನರೋ ಮೋಕ್ಷಮವಾಪ್ನುಯಾತ್ ॥ ೬೨ ॥

---

೫೭–೫೮. ಎಲೌ ಪಾರ್ವತಿಯೆ! ಅವಿಮುಕ್ತಕ್ಷೇತ್ರವನ್ನು ಸೇರಿ ಈ ಹದಿನಾಲ್ಕು ಮಹಾಲಿಂಗಗಳನ್ನೂ ಯಾವನು ಒಮ್ಮೆಯಾದರೂ ಅರ್ಚಿಸುವನೊ, ಅವನು ಯಾವಜ್ಜೀವವೂ ನಿಷ್ಪಾಪನಾದವನೆಂದು ತಿಳಿಯಬೇಕು. ಮುನಿಶ್ರೇಷ್ಠರು ಇಷ್ಟಾಪೂರ್ತಗಳೆಂಬುದಾಗಿ ಯಾವ ಧರ್ಮಗಳನ್ನು ನಿರೂಪಿಸಿರುವರೊ, ಅವುಗಳೆಲ್ಲವೂ ಅವನಿಂದ ಮಾಡಲ್ಪಟ್ಟಂತೆಯೆ ತಿಳಿಯತಕ್ಕದ್ದು. ಅವನು ಮೋಕ್ಷವನ್ನು ಪಡೆಯುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೫೯. ಸ್ಕಂದನು ಹೇಳುತ್ತಾನೆ :—ವಿಂಧ್ಯಮದಮರ್ದನನಾದ ಅಗಸ್ತ್ಯ ಬ್ರಾಹ್ಮಣೋತ್ತಮನೆ! ಮಹೇಶ್ವರನು ದೇವಿಗೆ ಹೇಳಿದ ಅನೇಕ ಇತರ ಲಿಂಗಗಳೂ ಇರುವುವು. ಅವುಗಳನ್ನು ಪರಮೇಶ್ವರನು ತನ್ನ ಭಕ್ತರ ಹಿತಕ್ಕಾಗಿ ನಿರೂಪಿಸಿರುವನು. ಅವುಗಳ ಹೆಸರುಗಳನ್ನು ಕೇಳು.

೬೦–೬೧. ಶೈಲೇಶ್ವರ, ಸಂಗಮೇಶ್ವರ, ಸ್ವರ್ಲೀನೇಶ್ವರ, ಮಧ್ಯಮೇಶ್ವರ, ಹಿರಣ್ಯಗರ್ಭೇಶ್ವರ, ಈಶಾನೇಶ್ವರ, ವೃಷಭಧ್ವಜೇಶ್ವರ, ಉಪಶಾಂತಶಿವ, ಜ್ಯೇಷ್ಠೇಶ್ವರ, ನಿವಾಸೇಶ್ವರ, ಶುಕ್ರೇಶ್ವರ, ವ್ಯಾಘ್ರಲಿಂಗೇಶ್ವರ. ಹದಿನಾಲ್ಕನೆಯವನೇ ಜಂಬುಕೇಶ್ವರ.

೬೨. ಮುನಿವರ್ಯ! ಈ ಹದಿನಾಲ್ಕು ಲಿಂಗಗಳೂ ಪರಮೇಶ್ವರನ ಉತ್ತಮಸನ್ನಿಧಿಗಳಾಗಿರುವುವು. ಇವುಗಳನ್ನು ಸೇವಿಸುವುದರಿಂದಲೂ ಮನುಷ್ಯನು ಮೋಕ್ಷಕ್ಕೆ ಭಾಗಿಯಾಗುವನು.

ಚೈತ್ರಕೃಷ್ಣಪ್ರತಿಪದಂ ಸಮಾರಭ್ಯ ಪ್ರಯತ್ನತಃ ।
ಆಚತುರ್ದಶಿ ಪೂಜ್ಯಾನಿ ಲಿಂಗಾನ್ಯೇತಾನಿ ಸತ್ತಮೈಃ ॥ ೬೩ ॥
ಏತೇಷಾಂ ವಾರ್ಷಿಕೀ ಯಾತ್ರಾ ಸುಮಹೋತ್ಸವಪೂರ್ವಕಂ ।
ಕಾರ್ಯಾ ಮುಮುಕ್ಷುಭಿಃ ಸಂಯುಕ್ತೈಃ ಕ್ಷೇತ್ರಸಂಸಿದ್ಧಿದಾಯಿನೀ ॥ ೬೪ ॥
ಮುನೇ ಚತುರ್ದಶೈತಾನಿ ಮಹಾಲಿಂಗಾನಿ ಯತ್ನತಃ ।
ದೃಷ್ಟ್ವಾ ನ ಜಾಯತೇ ಜಂತುಃ ಸಂಸಾರೇ ದುಃಖಸಾಗರೇ ॥ ೬೫ ॥
ಕ್ಷೇತ್ರಸ್ಯ ಪರಮಂ ತತ್ತ್ವಮೇತದೇವ ಪ್ರಿಯೇ ಧ್ರುವಂ ।
ಸಂಸಾರರೋಗಗ್ರಸ್ತಾನಾಮಿದಮೇವ ಮಹೌಷಧಂ ॥ ೬೬ ॥
ಕ್ಷೇತ್ರಸ್ಯೋಪನಿಷಚ್ಚೈಷಾ ಮುಕ್ತಿಬೀಜಮಿದಂ ಪರಂ ।
ಕರ್ಮಕಾನನದಾವಾಗ್ನಿರೇಷಾ ಲಿಂಗಾವಲಿಃ ಪ್ರಿಯೇ ॥ ೬೭ ॥
ಏಕೈಕಸ್ಯಾಸ್ಯ ಲಿಂಗಸ್ಯ ಮಹಿಮಾದ್ಯಂತವರ್ಜಿತಃ ।
ಮಯೈವ ಜ್ಞಾಯತೇ ದೇವಿ ಸಂಯುಕ್ ನಾನ್ಯೇನ ಕೇನಚಿತ್ ॥ ೬೮ ॥

೬೩. ಸಾತ್ವಿಕರಾದ ಜನರು ಪ್ರತಿವರ್ಷದಲ್ಲಿಯೂ ಚೈತ್ರ ಕೃಷ್ಣಪಾಡ್ಯ ಮಿಯು ಮೊದಲುಗೊಂಡು ಚತುರ್ದಶಿಯವರೆಗೂ ಈ ಲಿಂಗಗಳನ್ನು ಕ್ರಮವಾಗಿ ಸಕಲೋಪಚಾರಗಳಿಂದಲೂ ಪೂಜಿಸಬೇಕು.

೬೪. ಮುಮುಕ್ಷುಗಳಾದವರು ಮಹೋತ್ಸವಪೂರ್ವಕವಾಗಿ ಕ್ಷೇತ್ರ ಸೇವೆಯ ಸಂಸಿದ್ಧಿಯನ್ನುಂಟುಮಾಡುವ ಮಹಿಮೆಯುಳ್ಳ ಈ ಹದಿನಾಲ್ಕು ಲಿಂಗಗಳ ವಾರ್ಷಿಕ ಮಹಾಯಾತ್ರೆಯನ್ನು ಶಾಸ್ತ್ರೋಕ್ತರೀತಿಯಿಂದ ಮಾಡಿಸಬೇಕು.

೬೫. ಮಹರ್ಷಿಯೆ! ಮಹಾಪ್ರಯಾಸದಿಂದಲಾದರೂ ಯಾವ ನರನು ಈ ಹದಿನಾಲ್ಕು ಮಹಾಲಿಂಗಗಳನ್ನು ಸಂದರ್ಶಿಸುವನೊ, ಅವನು ಪುನಃ ದುಃಖ ಸಮುದ್ರವೆನಿಸಿದ ಈ ಸಂಸಾರದಲ್ಲಿ ಜನಿಸುವುದಿಲ್ಲ.

೬೬. ಪ್ರಿಯೇ ಪಾರ್ವತಿ! ನಿಜವಾಗಿಯೂ ಅವಿಮುಕ್ತ ಕ್ಷೇತ್ರದ ಪರಮ ರಹಸ್ಯವೇ ಇದಾಗಿರುವುದು. ಇವುಗಳ ಸೇವೆಯೇ ಸಂಸಾರವೆಂಬ ರೋಗದಿಂದ ನರಳುತ್ತಿರುವವರಿಗೆ ಮಹೌಷಧವಾಗಿರುವುದು.

೬೭. ಪ್ರಿಯಳೆ! ಈ ಲಿಂಗಸಮೂಹವೇ ಈ ಕ್ಷೇತ್ರದ ಸಾರಭೂತವಾದ ರಹಸ್ಯವು. ಇದೇ ಉತ್ತಮವಾದ ಮೋಕ್ಷಕ್ಕೆ ಬೀಜವೆನಿಸಿರುವುದು. ಇದೇ ಕರ್ಮಗಳೆಂಬ ಅರಣ್ಯಕ್ಕೆ ಕಾಳ್ಕಿಚ್ಚಿನಂತಿರುವುದು.

೬೮. ಎಲೌದೇವಿಯೆ! ಇವುಗಳಲ್ಲಿ ಒಂದೊಂದು ಲಿಂಗದ ಮಹಿಮೆಗೂ ತುದಿಮೊದಲಿರುವುದಿಲ್ಲ. ಅದನ್ನೆಲ್ಲ ನಾನೊಬ್ಬನೇ ಸಮಗ್ರವಾಗಿ ತಿಳಿದಿರುವೆ ನಲ್ಲದೆ ಬೇರೆಯಾವನೂ ತಿಳಿಯಲಾರನು.

ಇತಿ ಶ್ರುತ್ವಾ ಮುನೇ ಪ್ರಾಹ ದೇವೀ ಹೃಷ್ಟತನೂರುಹಾ ।
ಪ್ರಣಮ್ಯ ದೇವಮೀಶಾನಂ ಸರ್ವಜ್ಞಂ ಸರ್ವದಂ ಶಿವಂ ॥ ೬೯ ॥
ದೇವ್ಯುವಾಚ :—
ರಹಸ್ಯಂ ಪರಮಂ ಕಾಶ್ಯಾಂ ಯದೇತತ್ಸಮುದೀರಿತಂ ।
ತಚ್ಛ್ರುತ್ವೋತ್ಸುಕತಾಂ ಪ್ರಾಪ್ತಂ ಮನೋ ಮೇಽತೀವ ವಲ್ಲಭ ॥ ೭೦ ॥
ಯದುಕ್ತಂ ಲಿಂಗಮೇಕೈಕಂ ಮಹಾಸಾರತರಂ ಪರಂ ।
ಕಾಶ್ಯಾಂ ಪರಮನಿರ್ವಾಣಕಾರಣಂ ಕಾರಣೇಶ್ವರ ॥ ೭೧ ॥
ಪ್ರತ್ಯೇಕಂ ಮಹಿಮಾನಂ ಮೇ ಬ್ರೂಹ್ಯೇಷಾಂ ಭುವನೇಶ್ವರ ।
ಚತುರ್ದಶಾನಾಂ ಲಿಂಗಾನಾಂ ಶ್ರವಣಾದಘಹಾರಿಣಾಂ ॥ ೭೨ ॥
ಓಂಕಾರೇಶಸ್ಯ ಲಿಂಗಸ್ಯ ಕಥಮತ್ರ ಸಮಾಗಮಃ ।
ಅತಿಪುಣ್ಯತಮಾತ್ತಸ್ಮಾತ್ಕ್ಷೇತ್ರಾದಮರಕಂಟಕಾತ್ ॥ ೭೩ ॥
ಕಿಮಾತ್ಮಕೋಽಯಮೋಂಕಾರೋ ಮಹಿಮಾಸ್ಯ ಚ ಕೋ ಹರ ।
ಕೇನಾರಾಧಿ ಪುರಾ ಚೈಷ ದದಾನಾರಾಧಿತಶ್ಚ ಕಿಂ ॥ ೭೪ ॥

೬೯. ಇಂತೆಂದ ಮಾತುಗಳನ್ನು ಕೇಳಿ ದೇವಿಯು ಹರ್ಷದಿಂದ ಪುಳಕಗಳು ಮೈಯಲ್ಲಿ ಕಾಣುತ್ತಿರಲು ದೇವೇಶ್ವರನಿಗೆ ನಮಸ್ಕರಿಸಿ ಸರ್ವಜ್ಞನೂ, ಸರ್ವಪ್ರದನೂ, ಮಂಗಳಸ್ವರೂಪನೂ ಆದ ಆತನನ್ನು ಕೇಳತೊಡಗಿದಳು.

೭೦. ದೇವಿಯು ಪ್ರಶ್ನೆಮಾಡುತ್ತಾಳೆ:—ಪ್ರಾಣಪ್ರಿಯನೆ! ನೀನು ಕಾಶೀಕ್ಷೇತ್ರದ ಪರಮರಹಸ್ಯವನ್ನು ನಿರೂಪಿಸಿರುವೆಯಲ್ಲವೆ. ಇದನ್ನು ಕೇಳಿ ನನ್ನ ಮನಸ್ಸು ಅತ್ಯಂತ ಕುತೂಹಲದಿಂದ ತುಂಬಿರುವುದು.

೭೧–೭೩. ಬ್ರಹ್ಮಾಂಡಗಳಿಗೆ ಕಾರಣಗಳಾದ ಮಹದಾದಿಗಳಿಗೂ ನಿಯಾಮಕನಾಗಿರುವ ಓ ಲೋಕೇಶ್ವರನೆ! ನೀನು ಹೇಳಿರುವ ಲಿಂಗಗಳಲ್ಲಿ ಒಂದೊಂದೂ ಮಹಾಸಾರಭೂತವೂ, ಸರ್ವೋತ್ಕೃಷ್ಟವೂ, ಪುನರಾವೃತ್ತಿವರ್ಜಿತವಾದ ಮೋಕ್ಷಪದವಿಗೆ ಕಾರಣವೂ ಆಗಿ ಕಾಶಿಯಲ್ಲಿ ನೆಲಸಿರುವುದಲ್ಲವೆ. ಇವುಗಳ ಮಹಿಮೆಗಳನ್ನು ಬೇರೆಬೇರೆಯಾಗಿ ನನಗೆ ವಿಸ್ತರಿಸಿಹೇಳು. ನಾಮಶ್ರವಣದಿಂದಲೇ ಸಕಲಪಾತಕಗಳನ್ನೂ ಪರಿಹರಿಸುವ ಈ ಹದಿನಾಲ್ಕು ಲಿಂಗಗಳಲ್ಲಿ ಒಂದಾದ ಓಂಕಾರೇಶ್ವರಲಿಂಗವು ಇಲ್ಲಿಗೆ ಮಹಾಪುಣ್ಯತೀರ್ಥವೆನಿಸಿದ ಅಮರಕಂಟಕಕ್ಷೇತ್ರವನ್ನು ಬಿಟ್ಟು ಬಂದು ನೆಲಸಲು ಕಾರಣವೇನು?

೭೪. ಹರನೆ! ಈ ಓಂಕಾರೇಶ್ವರನು ಯಾವ ಸ್ವರೂಪದವನು? ಇವನ ಮಹಿಮೆಯೆಂತಹುದು? ಇವನನ್ನು ಹಿಂದೆ ಯಾವನು ಆರಾಧಿಸಿದ್ದನು? ಪೂಜಿತನಾದ ಈತನು ಭಕ್ತನಿಗೆ ಏನನ್ನು ಅನುಗ್ರಹಿಸಿದನು?

**ಮೃಡಾನೀವಾಕ್ಸುಧಾಮೇತಾಂ ನಿಧಾಯ ಶ್ರುತಿಗೋಚರಾಂ ।**
**ಕಥಾಮಕಥಯದ್ದೇವ ಓಂಕಾರಸ್ಯ ಮಹಾದ್ಭುತಂ ॥ ೭೫ ॥**

**ದೇವದೇವ ಉವಾಚ :—**

**ಕಥಾಮಾಕರ್ಣಯಾಪರ್ಣೇ ವರ್ಣಯಾಮಿ ತವಾಗ್ರತಃ ।**
**ಯಥೋಂಕಾರಸ್ಯ ಲಿಂಗಸ್ಯ ಪ್ರಾದುರ್ಭಾವ ಇಹಾಭವತ್ ॥ ೭೬ ॥**
**ಪುರಾನಂದವನೇ ಚಾತ್ರ ಬ್ರಹ್ಮಣಾ ವಿಶ್ವಯೋನಿನಾ ।**
**ತಪಸ್ತಪ್ತಂ ಮಹಾದೇವಿ ಸಮಾಧಿಂ ದಧತಾ ಪರಂ ॥ ೭೭ ॥**
**ಪೂರ್ಣೇ ಯುಗಸಹಸ್ರೇಽಥ ಭಿತ್ತ್ವಾ ಪಾತಾಲಸಪ್ತಕಂ ।**
**ಉದತಿಷ್ಠತ್ಪುರೋ ಜ್ಯೋತಿರ್ವಿದ್ಯೋತಿತಹರಿನ್ಮುಖಂ ॥ ೭೮ ॥**
**ಯದಂತರಾವಿರಭವನ್ನಿರ್ವ್ಯಾಜೇನ ಸಮಾಧಿನಾ ।**
**ತದೇವ ಪರಮಂ ಧಾಮ ಬಹಿರಾವಿರಭೂದ್ವಿಧೇಃ ॥ ೭೯ ॥**
**ಯೋಽಭೂಚ್ಚಟಚಟಾಶಬ್ದಃ ಸ್ಫುಟತೋ ಭೂಮಿಭಾಗತಃ ।**
**ತಚ್ಛಬ್ದಾದ್ವ್ಯಸೃಜದ್ವೇಧಾಃ ಸಮಾಧಿಂ ಕ್ರಮತೋ ವಶೀ ॥ ೮೦ ॥**

---

೭೫. ಪಾರ್ವತಿಯ ಅಮೃತೋಪಮವಾದ ಈ ವಾಕ್ಯಸರಣಿಯನ್ನು ಕಿವಿಗೊಟ್ಟು ಲಾಲಿಸಿ ಆ ದೇವೇಶ್ವರನು ಮಹಾಶ್ಚರ್ಯಾನ್ವಿತವಾದ ಓಂಕಾರೇಶ್ವರನ ಚರಿತ್ರೆಯನ್ನು ನಿರೂಪಿಸತೊಡಗಿದನು.

೭೬. ದೇವದೇವನು ಹೇಳುತ್ತಾನೆ :—ಎಲೌ ಅಪರ್ಣೆಯೆ! ಓಂಕಾರೇಶ್ವರ ಲಿಂಗದ ಪ್ರಾದುರ್ಭಾವವು ಇಲ್ಲಿ ಹೇಗೆ ಉಂಟಾಯಿತೆಂಬ ವಿಷಯದಲ್ಲಿ ಹಿಂದೆ ನಡೆದ ಕಥೆಯನ್ನು ವರ್ಣಿಸುವೆನು, ಕಿವಿಗೊಟ್ಟು ಕೇಳು.

೭೭. ಓ ಮಹೇಶ್ವರೀ! ಪೂರ್ವದಲ್ಲಿ ಒಮ್ಮೆ ಬ್ರಹ್ಮಾಂಡಕ್ಕೆ ಕಾರಣನಾದ ಬ್ರಹ್ಮದೇವನು ಈ ಆನಂದವನದಲ್ಲಿ ಉತ್ಕೃಷ್ಟವಾದ ಸಮಾಧಿಯಿಂದೊಡಗೂಡಿದ ತಪಸ್ಸನ್ನು ಮಾಡುತ್ತಿದ್ದನು.

೭೮. ಈ ಮಹಾತಪಸ್ಸಿನಿಂದಲೇ ಒಂದು ಸಾವಿರ ಯುಗಗಳು ಕಳೆದು ಹೋಗಲು ಅವನ ಮುಂದೆ ಒಂದು ದಿವ್ಯಜ್ಯೋತಿಯು ಕಾಣಿಸಿಕೊಂಡಿತು. ಅದು ಏಳು ಪಾತಾಳಗಳನ್ನೂ ಭೇದಿಸಿಕೊಂಡು ಮೇಲಕ್ಕೆ ಬಂದು ಕಾಂತಿಯಿಂದ ಹತ್ತು ದಿಕ್ಕುಗಳನ್ನೂ ಬೆಳಗುತ್ತಲಿದ್ದಿತು.

೭೯. ನಿರ್ವ್ಯಾಜವಾದ ಸಮಾಧಿಸ್ಥಿತಿಯಲ್ಲಿ ಬ್ರಹ್ಮನಿಗೆ ಯಾವ ಪರಂಜ್ಯೋತಿಯು ಕಾಣಿಸಿಕೊಂಡಿತೊ, ಸರ್ವೋತ್ತಮವಾದ ಆ ಪರಮಾತ್ಮಸ್ವರೂಪವೇ ಅವನಿಗೆ ಹೊರಗೂ ಗೋಚರವಾಯಿತು.

೮೦. ಆ ಜ್ಯೋತಿಯು ಲೋಕಗಳನ್ನು ಭೇದಿಸಿಕೊಂಡು ಬರುವ ವೇಳೆಯಲ್ಲಿ ಯಾವ ಚಟಚಟಾಶಬ್ದವುಂಟಾಯಿತೋ, ಅದರಿಂದಲೇ ಸಂಯಮ ಸಹಿತನಾದ

ಸ್ರಷ್ಟಾ ವಿಸೃಷ್ಟತದ್ಧ್ಯಾನೋ ಯಾವದುನ್ಮೀಲ್ಯ ಲೋಚನೇ ।
ಪುರಃ ಪಶ್ಯೇದ್ದದರ್ಶಾಗ್ರೇ ತಾವದಕ್ಷರಮಾದಿಮಂ ॥ ೮೧ ॥
ಅಕಾರಂ ಸತ್ತ್ವಸಂಪನ್ನಮೃಕ್ಕ್ಷೇತ್ರಂ ಸೃಷ್ಟಿಪಾಲಕಂ ।
ನಾರಾಯಣಾತ್ಮಕಂ ಸಾಕ್ಷಾತ್ತಮಃಪಾರೇ ಪ್ರತಿಷ್ಠಿತಂ ॥ ೮೨ ॥
ಉಕಾರಮಥ ತಸ್ಯಾಗ್ರೇ ರಜೋರೂಪಂ ಯಜುರ್ಜನಿಂ ।
ವಿಧಾತಾರಂ ಸಮಸ್ತಸ್ಯ ಸ್ವಾಕಾರಮಿವ ಬಿಂಬಿತಂ ॥ ೮೩ ॥
ನೀರವಧ್ವಾಂತಸಂಕೇತಸದನಾಭಂ ತದಗ್ರತಃ ।
ಮಕಾರಂ ಸ ದದರ್ಶಾಥ ತಮೋರೂಪಂ ವಿಶೇಷತಃ ॥ ೮೪ ॥
ಸಾಮ್ನೋ ಯೋನಿಂ ಲಯೇ ಹೇತುಂ ಸಾಕ್ಷಾದ್ರುದ್ರಸ್ವರೂಪಿಣಂ ।
ಅಥ ತತ್ಪರತೋ ಧ್ಯಾತಾ ವ್ಯಧಾತ್ಸ್ವನಯನಾತಿಥಿಂ ॥ ೮೫ ॥
ವಿಶ್ವರೂಪಮಯಾಕಾರಂ ಸಗುಣಂ ವಾಪಿ ನಿರ್ಗುಣಂ ।
ಅನಾಖ್ಯನಾದಸದನಂ ಪರಮಾನಂದವಿಗ್ರಹಂ ॥ ೮೬ ॥

---

ಚತುರ್ಮುಖನೂ ಸಹ ಮೆಲ್ಲಮೆಲ್ಲಗೆ ತನ್ನ ಸಮಾಧಿಸ್ಥಿತಿಯನ್ನು ಬಿಟ್ಟು ಬಹಿರ್ಮುಖನಾದನು.

೮೧. ಆಗ ಬ್ರಹ್ಮದೇವನು ನಿರ್ಗುಣಪರತತ್ತ್ವದ ಧ್ಯಾನವನ್ನು ಬಿಟ್ಟು ಕಣ್ಣುಗಳನ್ನು ತೆರೆದು ಮುಂದೆ ಕುತೂಹಲದಿಂದ ನೋಡುತ್ತಿರಲು ಎದುರಿನಲ್ಲಿಯೇ ಆದ್ಯಕ್ಷರವಾದ ಪ್ರಣವವು ಕಂಡಿತು.

೮೨. ಅಕಾರವು ಸತ್ತ್ವಗುಣೋಪೇತವು. ಇದು ಋಗ್ವೇದಕ್ಕೆ ಅಧಿಷ್ಠಾನವು. ಸೃಷ್ಟಿಗೂ ಪಾಲನೆಗೂ ಕಾರಣವಾಗಿರುವುದು. ಮತ್ತು ನಾರಾಯಣಾತ್ಮಕವಾಗಿ ಅಜ್ಞಾನಸಮುದ್ರದ ಕೊನೆಯಲ್ಲಿ ಪ್ರತಿಷ್ಠಿತವಾಗಿರುವುದು.

೮೩. ಅದರ ಮೇಲಿನ ಉಕಾರವು ರಜೋಗುಣಸಹಿತವು. ಅದು ಯಜುರ್ವೇದಕ್ಕೆ ಕಾರಣಭೂತವು. ಸಕಲ ಬ್ರಹ್ಮಾಂಡದ ಸೃಷ್ಟಿಯನ್ನೂ ಮಾಡುವುದು. ಬ್ರಹ್ಮನ ಆಕಾರವೇ ಪ್ರತಿಬಿಂಬವನ್ನು ಹೊಂದಿದಂತೆ ಕಾಣುತ್ತಿರುವುದು.

೮೪. ಉಕಾರದಮೇಲೆ ನಿಶ್ಶಬ್ದವಾದ ಅಂಧತಮಸ್ಸಿನ ಸಂಕೇತಸ್ಥಾನಕ್ಕೆ ಸಮಾನವೂ ವಿಶೇಷವಾಗಿ ತಮೋಗುಣ ಸ್ವರೂಪಸಹಿತವೂ ಆದ ಮಕಾರವನ್ನು ಚತುರ್ಮುಖನು ಕಂಡನು.

೮೫–೮೬. ಆ ಮಕಾರವು ಸಾಮವೇದದ ಉತ್ಪತ್ತಿಸ್ಥಾನವು. ಬ್ರಹ್ಮಾಂಡದ ಲಯಕ್ಕೆ ಕಾರಣವು. ಮಹಾರುದ್ರನ ಸ್ವರೂಪವುಳ್ಳದ್ದು. ಅದರ ಮೇಲೆಯೂ ಧ್ಯಾನಾಸಕ್ತನಾಗಿದ್ದ ಬ್ರಹ್ಮನು ಪ್ರಪಂಚಸ್ವರೂಪದಂತೆ ಆಕಾರವುಳ್ಳುದೂ, ಸಗುಣನಿರ್ಗುಣರೂಪಗಳೆರಡನ್ನೂ ಹೊಂದಿದುದೂ, ಅನಿರ್ವಾಚ್ಯವೂ, ಪರಾ

ಶಬ್ದಬ್ರಹ್ಮೇತಿ ಯತ್ಖ್ಯಾತಂ ಸರ್ವವಾಙ್ಮಯಕಾರಣಂ ।
ಅಥೋಪರಿಷ್ಟಾನ್ನಾದಸ್ಯ ಬಿಂದುರೂಪಂ ಪರಾತ್ಪರಂ ॥ ೮೭ ॥
ಕಾರಣಂ ಕಾರಣಾನಾಂ ಚ ಜಗದ್ಯೋನಿಂ ಚ ತಂ ಪರಂ ।
ವಿಧಿರ್ವಿಲೋಕಯಾಂಚಕ್ರೇ ತಪಸಾ ಗೋಚರೀಕೃತಂ ॥ ೮೮ ॥
ಅವನಾದೋಮಿತಿ ಖ್ಯಾತಂ ಸರ್ವಸ್ಯಾಸ್ಯ ಪ್ರಭಾವತಃ ।
ಭಕ್ತಮುನ್ನಯತೇ ಯಸ್ಮಾತ್ತದೋಮಿತಿ ಯ ಈರಿತಃ ॥ ೮೯ ॥
ಅರೂಪೋಽಪಿ ಸರೂಪಾಢ್ಯಃ ಸ ಧಾತ್ರಾ ನೇತ್ರಗೀಕೃತಃ ।
ತಾರಯೇದ್ಯಃ ಭವಾಂಬೋಧೇಃ ಸ್ವಜಪಾಸಕ್ತಮಾನಸಂ ।
ತತಸ್ತಾರ ಇತಿ ಖ್ಯಾತೋ ಯಸ್ತಂ ಬ್ರಹ್ಮಾ ವ್ಯಲೋಕಯತ್ ॥ ೯೦ ॥

---

ವಾಗ್ರೂಪವೂ, ಪರಮಾನಂದಸ್ವರೂಪವೂ ಆದ ನಾದವನ್ನು ದೃಷ್ಟಿವಿಷಯವನ್ನಾಗಿ ಮಾಡಿಕೊಂಡನು.*

೮೭. ಸಮಸ್ತವೈಖರೀಭಾಷೆಗಳಿಗೂ ಕಾರಣವಾದ ಈ ನಾದವನ್ನೇ ಶಬ್ದಬ್ರಹ್ಮವೆಂದು ಕರೆಯುವರು. ಪರಾರೂಪವಾದ ನಾದಕ್ಕೂ ಮೇಲೆ ಪರತರವಾದ ಬಿಂದುರೂಪವು ನೆಲಸಿರುವುದು.

೮೮. ಪ್ರಧಾನಾದಿಗಳಿಗೂ ಕಾರಣವಾಗಿ, ಜಗದ್ಯೋನಿಯೂ, ಸರ್ವೋತ್ಕೃಷ್ಟವೂ ಆದ ಈ ಬಿಂದುವು ತಪಸ್ಸಿನಿಂದ ಸಾಕ್ಷಾತ್ಕರಿಸಿದುದನ್ನು ಬ್ರಹ್ಮದೇವನು ಕಾಣುವವನಾದನು.

೮೯. ಅಕಾರ, ಉಕಾರ, ಮಕಾರ, ನಾದ, ಬಿಂದುಗಳ ಈ ಸಮಷ್ಟಿಯನ್ನೇ ಪ್ರಣವವೆಂದು ಕರೆಯುವರು. ತನ್ನ ಪ್ರಭಾವದಿಂದಲೇ ಈ ಬ್ರಹ್ಮಾಂಡವನ್ನೆಲ್ಲ ಪಾಲಿಸುತ್ತಿರುವುದರಿಂದ ಓಂಕಾರವೆಂದು ಕರೆಯಲ್ಪಡುವುದು. ಇದನ್ನು ಉಪಾಸನೆಮಾಡುವ ಭಕ್ತನನ್ನು ಉದ್ಧಾರಮಾಡುವುದರಿಂದಲೂ ಇದು ಓಂಕಾರವೆಂದು ಕರೆಯಲ್ಪಡುತ್ತಿರುವುದು.

೯೦. ಈ ಪ್ರಣವವು ರೂಪರಹಿತವಾದರೂ ಬ್ರಹ್ಮನಿಂದ ರೂಪಸಹಿತವಾಗಿಯೇ ಪ್ರತ್ಯಕ್ಷೀಕರಿಸಲ್ಪಟ್ಟಿತು. ಯಾವುದನ್ನು ಬ್ರಹ್ಮನು ಸಾಕ್ಷಾತ್ತಾಗಿ ಕಂಡನೋ, ಅದೇ ತನ್ನ ಜಪದಲ್ಲಿ ನೆಟ್ಟ ಮನಸ್ಸುಳ್ಳ ಉಪಾಸಕನನ್ನು ಸಂಸಾರ

---

* ಶ್ಲೋ॥ ವೈಖರೀ ಶಬ್ದನಿಷ್ಪತ್ತಿರ್ಮಧ್ಯಮಾ ಶ್ರುತಿಗೋಚರಾ ।
ಉದ್ಯೋತಾರ್ಥಾಚ ಪಶ್ಯಂತೀ ಸೂಕ್ಷ್ಮಾ ವಾಗನಪಾಯಿನೀ ॥

ಅನಾಹತ ಶಬ್ದರೂಪವಾದುದಕ್ಕೆ ಸೂಕ್ಷ್ಮಾ ಅಥವ ಪರಾ ಎಂಬುದಾಗಿಯೂ, ಅಂಗಚೇಷ್ಟೆ ಮುಖಭಂಗ್ಯಾದಿಗಳಿಂದ ಭಾವವನ್ನು ತೋರಿಸುವುದಕ್ಕೆ ಪಶ್ಯಂತೀ ಭಾಷೆಯೆಂದೂ, ಕಿವಿಗಳಿಗೆ ಕೇಳಿಸುವ ಶಬ್ದಮಾತ್ರಗಳಿಂದ ಭಾವಪ್ರದರ್ಶನವನ್ನು ಮಾಡುವುದಕ್ಕೆ ಮಧ್ಯಮಾ ಎಂದೂ, ಶಬ್ದಜಾಲ, ವಾಕ್ಯಜಾಲಗಳಿಂದ ಸ್ಪಷ್ಟವಾಗಿ ಉಚ್ಚರಿಸುವುದಕ್ಕೆ ವೈಖರೀಭಾಷೆಯೆಂದೂ ಹೆಸರು.

ಪ್ರಣೂಯತೇ ಯತಃ ಸರ್ವೈಃ ಪರನಿರ್ವಾಣಕಾಮುಕೈಃ ।
ಸರ್ವೇಭ್ಯೋಽಭ್ಯಧಿಕಸ್ತಸ್ಮಾತ್ಪ್ರಣವೋ ಯಃ ಪ್ರಕೀರ್ತಿತಃ ॥ ೯೧ ॥
ಸ್ವಸೇವಿತಾರಂ ಪುರುಷಂ ಪ್ರಣಯೇದ್ಯಃ ಪರಂ ಪದಂ ।
ಅತಸ್ತಂ ಪ್ರಣವಂ ಶಾಂತಂ ಪ್ರತ್ಯಕ್ಷೀಕೃತವಾನ್ವಿಧಿಃ ॥ ೯೨ ॥
ತ್ರಯೀಮಯಸ್ತುರೀಯೋ ಯಸ್ತುರ್ಯಾತೀತೋಽಖಿಲಾತ್ಮಕಃ ।
ನಾದಬಿಂದುಸ್ವರೂಪೋ ಯಃ ಸ ಪ್ರೈಕ್ಷಿ ದ್ವಿಜಗಾಮಿನಾ ॥ ೯೩ ॥
ಪ್ರಾವರ್ತಂತ ಯತೋ ವೇದಾಃ ಸಾಂಗಾಃ ಸರ್ವಸ್ಯ ಯೋನಯಃ ।
ಸ ವೇದಾದಿಃ ಪದ್ಮಭುವಾ ಪುರಸ್ತಾದವಲೋಕಿತಃ ॥ ೯೪ ॥
ವೃಷಭೋ ಯಸ್ತ್ರಿಧಾ ಬದ್ಧೋ ರೋರವೀತಿ ಮಹೋಮಯಃ ।
ಸ ನೇತ್ರವಿಷಯೀಚಕ್ರೇ ಪರಮಃ ಪರಮೇಷ್ಠಿನಾ ॥ ೯೫ ॥

---

ಸಮುದ್ರದಿಂದ ಕಡೆಹಾಯಿಸುವುದು. ಆದುದರಿಂದಲೇ ಇದಕ್ಕೆ ತಾರವೆಂದೂ ಹೆಸರಾಗಿರುವುದು.

೯೧. ಇದನ್ನೇ ಉತ್ಕೃಷ್ಟವಾದ ನಿರ್ವಾಣದಲ್ಲಿ ಅಭಿಲಾಷೆಯುಳ್ಳವರು ಬಹುವಿಧವಾಗಿ ಸ್ತೋತ್ರಮಾಡುತ್ತಿರುವರು. ಆದುದರಿಂದ ಪ್ರಣವವು ಸಮಸ್ತ ಶಬ್ದಗಳಿಗಿಂತಲೂ ಅಧಿಕವಾದುದೆಂದು ಕೀರ್ತಿಸಲ್ಪಡುತ್ತಿರುವುದು.

೯೨. ತನ್ನನ್ನು ಸೇವಿಸಿದ ಪುರುಷನನ್ನೂ ಸಹ ಈ ಶಬ್ದವು ಪರಮಪದಕ್ಕೆ ಕರೆದೊಯ್ಯುವುದರಿಂದಲೂ ಇದಕ್ಕೆ ಪ್ರಣವವೆಂದು ಹೆಸರು. ಇಂತಹ ಪ್ರಪಂಚೋಪಶಮರೂಪವಾದ ಪ್ರಣವವನ್ನೇ ಚತುರ್ಮುಖನು ತಪಸ್ಸಿನಿಂದ ಪ್ರತ್ಯಕ್ಷವಾಗಿ ಕಂಡುಕೊಂಡನು.

೯೩. ವೇದತ್ರಯಮಯವೂ (ತ್ರಿಮೂರ್ತ್ಯಾತ್ಮಕವೂ), ತುರೀಯವೂ, ತುರೀಯಾತೀತವೂ, ಸರ್ವಾತ್ಮಕವೂ, ನಾದಬಿಂದುಸ್ವರೂಪವೂ, ಆದ ಪ್ರಣವವೇ ಹಂಸವಾಹನನಾದ ಬ್ರಹ್ಮನಿಂದ ಕಾಣಲ್ಪಟ್ಟಿತು.†

೯೪. ಸರ್ವಕ್ಕೂ ಕಾರಣಗಳೆನಿಸಿದ ವೇದಗಳೇ ಷಡಂಗಸಹಿತಗಳಾಗಿ ಯಾವುದರಿಂದ ಹೊರಬಿದ್ದುವೊ, ಆ ವೇದಮೂಲವನ್ನೇ ಪದ್ಮಸಂಭವನು ತನ್ನ ಮುಂಗಡೆ ಕಂಡನು.

೯೫. "ಚತ್ವಾರಿ ಶೃಂಗಾ" ಎಂಬ ಮಂತ್ರದಲ್ಲಿ ಹೇಳಿರುವ ಯಜ್ಞರೂಪಿ ಯಾವ ಮಹಾವಿಷ್ಣುವೇ ಮಂತ್ರ, ಬ್ರಾಹ್ಮಣ, ಕಲ್ಪಗಳಿಂದ ಸಂಬದ್ಧನಾಗಿ

---

† ಶ್ಲೋ॥ ಅಸಂಭಾವಾನನುಭಾವಾ ತ್ಯಕ್ತ್ವಾ ಸದಸತೀ ತಥಾ ।
ಯದಸಕ್ತಂ ಸಮಂ ಸ್ವಚ್ಛಂ ಸ್ಥಿತಂ ತತ್ತುರ್ಯಮುಚ್ಯತೇ ॥

ತುರೀಯವೆಂದರೆ ಪರಾತ್ಮವು. ಅಪರೂ ವಿಶ್ವ, ತೈಜಸ, ಪ್ರಾಜ್ಞವೆಂಬ ಮೂರು ಅವಸ್ಥೆಗಳ ಸಾಪೇಕ್ಷೆಯಿಂದಲೇ ತುರೀಯವೂ ಸಹ ಕಲ್ಪಿತವಾದುದೆಂಬ ಅಭಿಪ್ರಾಯದಿಂದ ಪರಮಾತ್ಮಸ್ವರೂಪವು ತುರೀಯಾತೀತವೆಂದು ನಿರೂಪಿತವಾಗಿರುವುದು. ಶುದ್ಧ ಸತ್ತ್ವಗುಣಪ್ರಧಾನವಾದ ಮಾಯೆಯನ್ನೂ, ಮಲಿನಸತ್ತ್ವಗುಣಪ್ರಧಾನವಾದ ಅವಿದ್ಯೆಯನ್ನೂ ಉಪಾಧಿಗಳಾಗಿ ಹೊಂದಿರುವುದರಿಂದ ಆ ಶುದ್ಧ ಚೈತನ್ಯವೇ ಜಗದ್ರೂಪವಾಗಿಯೂ ಕಾಣುತ್ತಿರುವುದು.

**ಶೃಂಗಾಶ್ಚತ್ವಾರಿ ಯಸ್ಯಾಸನ್ಹಸ್ತಾಸಃ ಸಪ್ತ ಏವ ಚ ।**
**ದ್ವೇ ಶೀರ್ಷೇ ಚ ತ್ರಯಃ ಪಾದಾಃ ಸ ದೇವೋ ವಿಧಿನೈಕ್ಷತ ॥ ೯೬ ॥**
**ಯದಂತರ್ಲೀನಮಖಿಲಂ ಭೂತಂ ಭಾವಿ ಭವತ್ಪುನಃ ।**
**ತದ್ಬೀಜಂ ಬೀಜರಹಿತಂ ದ್ರುಹಿಣೇನ ವಿಲೋಕಿತಂ ॥ ೯೭ ॥**
**ಲೀನಂ ಮೃಗ್ಯೇತ ಯತ್ರೈತದಾಬ್ರಹ್ಮಸ್ತಂಬಭಾಜನಂ ।**
**ಅತಃ ಸಭಾಜ್ಯತೇ ಸದ್ಭಿರ್ಯಲ್ಲಿಂಗಂ ತದ್ವಿಲೋಕಿತಂ ॥ ೯೮ ॥**
**ಪಂಚಾರ್ಥಾ ಯತ್ರ ಭಾಸಂತೇ ಪಂಚಬ್ರಹ್ಮಮಯಂ ಹಿ ಯತ್ ।**
**ಆದಿಪಂಚಸ್ವರೂಪಂ ಯನ್ನಿರೈಕ್ಷಿ ಬ್ರಹ್ಮಣಾ ಹಿ ತತ್ ॥ ೯೯ ॥**
**ತಮಾಲೋಕ್ಯ ತತೋ ವೇಧಾ ಲಿಂಗರೂಪಿಣಮೀಶ್ವರಂ ।**
**ಪಂಚಾಕ್ಷರಂ ಪ್ರಪಂಚಾಚ್ಚ ಭಿನ್ನಂ ತುಷ್ಟಾವ ಶಂಕರಂ ॥ ೧೦೦ ॥**

ಋಗ್ಯಜುಸ್ಸಾಮಗಳಿಂದ ಸ್ತುತಿಸಲ್ಪಟ್ಟ ತೇಜೋರೂಪನಾಗಿರುವನೊ, ಆ ಪರಾತ್ಪರನು ಬ್ರಹ್ಮದೇವನ ಸ್ಥೂಲನೇತ್ರಗಳಿಗೆ ವಿಷಯನಾಗಿ ಇದಿರಿನಲ್ಲಿ ನಿಂತಿದ್ದನು.

೯೬. ಋಗ್ಯಜುಸ್ಸಾಮಾಥರ್ವಣಗಳೆಂಬ ವೇದಗಳೇ ಯಾವನಿಗೆ ಶೃಂಗಗಳೊ, ಜಗತೀ, ತ್ರಿಷ್ಟುಭಾದಿ ಛಂದಸ್ಸುಗಳೇ ಏಳು ಹಸ್ತಗಳೊ, ಪ್ರಾಯಣೀಯ, ಉದಯನೀಯಗಳೇ ಎರಡು ಶಿರಸ್ಸುಗಳೊ, ಪ್ರಾತರ್ಮಾಧ್ಯಂದಿನಸಾಯಂಸವನಗಳೇ ಮೂರು ಪಾದಗಳೊ, ಆ ದೇವದೇವನು ಬ್ರಹ್ಮನಿಂದ ನೋಡಲ್ಪಟ್ಟನು.

೯೭. ಭೂತ ಭವ್ಯ ಭವಿಷ್ಯತ್ಕಾಲಾವಚ್ಛಿನ್ನವಾದ ಸಕಲ ಪ್ರಪಂಚವೂ ಯಾವುದರಲ್ಲಿ ಲಯವನ್ನು ಹೊಂದುವುದೊ, ಪುನಃ ಅದರ ವಿಸ್ತಾರಕ್ಕೆ ಯಾವುದು ಬೀಜಭೂತವಾಗಿರುವುದೊ, ಯಾವುದಕ್ಕೆ ಮತ್ತೊಂದು ಕಾರಣವಾಗಿಲ್ಲವೊ, ಆ ಪರತತ್ತ್ವವೇ ಬ್ರಹ್ಮನಿಗೆ ದೃಗ್ಗೋಚರವಾಯಿತು.

೯೮. ಬ್ರಹ್ಮಾದಿ ಸ್ತಂಬಪರ್ಯಂತವಾದ ಸಕಲವೂ ಯಾವುದರಲ್ಲಿ ಲಯವನ್ನು ಹೊಂದಿ ಹುಡುಕಲ್ಪಡುತ್ತಿರುವುದೊ, ಆ ಕಾರಣದಿಂದಲೇ ಯಾವುದಕ್ಕೆ ಲಿಂಗವೆಂಬ ನಾಮವು ಪ್ರಸಿದ್ಧವಾಗಿರುವುದೊ, ಅದನ್ನು ಬ್ರಹ್ಮನು ನೋಡಿದನು.

೯೯. ಯಾವುದರಲ್ಲಿ ಅರ್ಥಾಂಶಗಳೈದೂ ಭಾಸವಾಗುತ್ತಿರುವುವೊ, ಯಾವುದು ಪಂಚಬ್ರಹ್ಮಮಯವಾಗಿರುವುದೊ, ಯಾವುದು ಅಕಾರಸಹಿತವಾದ ಐದಕ್ಷರಗಳಿಂದ ನಿಷ್ಪನ್ನವಾದ ಸ್ವರೂಪವುಳ್ಳುದಾಗಿರುವುದೊ, ಆ ಪ್ರಣವವೇ ಬ್ರಹ್ಮದೇವನಿಂದ ಕಾಣಲ್ಪಟ್ಟಿತು. ‡

೧೦೦. ಇಂತು ಲಿಂಗರೂಪಿಯೂ, ಲೋಕೇಶ್ವರನೂ, ಪಂಚಾಕ್ಷರಮಯ

‡ ಅಸ್ತಿ, ಭಾತಿ, ಪ್ರಿಯ, ನಾಮ, ರೂಪಗಳೇ ಪ್ರತಿಯೊಂದು ಪದಾರ್ಥದ ಪಂಚಾರ್ಥಗಳೆನಿಸಿರುವುವು. "ಇತಿಹಾಸಪುರಾಣಾಃ ಪಂಚಮೋ ವೇದ ಉಚ್ಯತೇ" ಎಂಬ ವಚನದಿಂದ ಇತಿಹಾಸಸಹಿತಗಳಾದ ನಾಲ್ಕು ವೇದಗಳೇ ಪಂಚಬ್ರಹ್ಮಗಳು. ಅಕಾರ, ಉಕಾರ, ಮಕಾರ, ಅರ್ಧಾಕ್ಷರ, ನಾದ, ಬಿಂದುಗಳೇ ಪ್ರಣವದಲ್ಲಿರುವ ಐದಕ್ಷರಗಳು.

ಬ್ರಹ್ಮೋವಾಚ :—

ನಮ ಓಂಕಾರರೂಪಾಯ ನಮೋಽಕ್ಷರವಪುರ್ಧೃತೇ ।
ನಮೋಽಕಾರಾದಿವರ್ಣಾನಾಂ ಪ್ರಭವಾಯ ಸದಾಶಿವ ॥ ೧೦೧ ॥
ಅಕಾರಸ್ತ್ವಮುಕಾರಸ್ತ್ವಂ ಮಕಾರಸ್ತ್ವಮನಾಕೃತೇ ।
ಋಗ್ಯಜುಃಸಾಮರೂಪಾಯ ರೂಪಾತೀತಾಯ ತೇ ನಮಃ ॥ ೧೦೨ ॥
ನಮೋ ನಾದಾತ್ಮನೇ ತುಭ್ಯಂ ನಮೋ ಬಿಂದುಕಲಾತ್ಮನೇ ।
ಅಲಿಂಗ ಲಿಂಗರೂಪಾಯ ಸರ್ವರೂಪಸ್ವರೂಪಿಣೇ ॥ ೧೦೩ ॥
ನಮಸ್ತೇ ಧಾಮನಿಧಯೇ ಸಿಧನಾದಿವಿವರ್ಜಿತ ।
ನಮೋ ಭವಾಯ ರುದ್ರಾಯ ಶರ್ವಾಯ ಚ ನಮೋಽಸ್ತು ತೇ ॥ ೧೦೪ ॥
ನಮ ಉಗ್ರಾಯ ಭೀಮಾಯ ಪಶೂನಾಂ ಪತಯೇ ನಮಃ ।
ನಮಸ್ತಾರಸ್ವರೂಪಾಯ ಸಂಭವಾಯ ನಮೋಽಸ್ತು ತೇ ॥ ೧೦೫ ॥

---

ವಾದ ಪ್ರಣವವಾಚ್ಯನೂ, ನಾಮರೂಪಾತ್ಮಕವಾದ ಪ್ರಪಂಚಕ್ಕೆ ಭಿನ್ನನೂ ಆದ ಶಂಕರನನ್ನು ಕಂಡು ಬ್ರಹ್ಮದೇವನು ಸ್ತೋತ್ರಮಾಡತೊಡಗಿದನು.

೧೦೧. ಬ್ರಹ್ಮನು ಹೇಳುತ್ತಾನೆ:—ಓಂಕಾರರೂಪಿಯೂ, ಅಕ್ಷರಶರೀರ ಧಾರಿಯೂ, ಅಕಾರಾದಿ ಕ್ಷಕಾರಾಂತ ಸಕಲ ವರ್ಣಗಳಿಗೂ ಉತ್ಪತ್ತಿಸ್ಥಾನವೂ, ನಿತ್ಯಮಂಗಳಸಹಿತನೂ ಆದ ನಿನಗೆ ನಮಸ್ಕಾರವು.*

೧೦೨. ನೀನು ಆಕೃತಿಹೀನನಾದರೂ ಅಕಾರ, ಉಕಾರ, ಮಕಾರಗಳಾಗಿ ಬೆಳಗುತ್ತಿರುವೆ. ರೂಪಾತೀತನಾದರೂ ಋಗ್ಯಜುಸ್ಸಾಮವೇದಗಳ ರೂಪವನ್ನು ತಾಳಿರುವೆ; ಇದೋ ನಿನಗೆ ನಮಸ್ಕಾರವು.

೧೦೩. ಪರಾ, ಪಶ್ಯಂತೀ, ಮಧ್ಯಮಾ, ವೈಖರಿಗಳಿಗೆ ಮೂಲವಾದ ನಾದವೇ ಸ್ವರೂಪವಾಗಿರುವವನೂ, ಬಿಂದುಕಲಾತ್ಮಕನೂ, ದೃಶ್ಯಾದೃಶ್ಯಗಳೆರಡೂ ಆಗಿ ಕಾಣುವವನೂ, ಸರ್ವರೂಪಗಳನ್ನೂ ಸ್ವರೂಪಗಳಾಗಿ ಉಳ್ಳವನೂ ಆದ ನಿನಗೆ ನಮಸ್ಕಾರವು.

೧೦೪. ಸತ್ತ್ವಗುಣನಿಲಯನೂ, ನಾಶಾದಿ ಷಡ್ವಿಕಾರರಹಿತನೂ, ಭವ, ರುದ್ರ, ಶರ್ವ ಮುಂತಾದ ಅನೇಕ ಹೆಸರುಗಳಿಂದ ಕರೆಯಲ್ಪಡುವವನೂ ಆದ ನಿನಗೆ ನಮಸ್ಕಾರವನ್ನು ಮಾಡುವೆನು.

೧೦೫. ಉಗ್ರನೂ, ಭೀಮನೂ, ಜೀವರಿಗೆ ಅಧೀಶ್ವರನೂ ಆದ ನಿನಗೆ ಪ್ರಣಾಮವು. ಪ್ರಣವಸ್ವರೂಪನೂ, ಬ್ರಹ್ಮಾಂಡದ ಸೃಷ್ಟಿಗೆ ಮೂಲಕಾರಣನೂ ಆದ ನಿನಗೆ ನಮಸ್ಕಾರವಿರಲಿ.

---

* "ಓಂಕಾರಪ್ರಭವಾ ವೇದಾ ಓಂಕಾರಪ್ರಭವಾಃ ಸ್ವರಾಃ" ಎಂಬಂತೆ ಸಕಲ ವೈಖರಿ ಭಾಷೆಯೂ ಪ್ರಣವದಿಂದಲೇ ಹೊರಟಿರುವುದು.

ಅಕ್ಷರಶರೀರಧಾರಿಯೆಂಬಲ್ಲಿ "ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ" ಎಂಬ ವಾಕ್ಯ ಪ್ರಮಾಣದಿಂದ ಪರಮಾತ್ಮನು ಶಬ್ದದೇಹಪ್ರಕಾರನೆಂದು ತಿಳಿಯಬೇಕು.

ಅಮಾಯಾಯ ನಮಸ್ತುಭ್ಯಂ ನಮಃ ಶಿವತರಾಯ ತೇ ।
ಕಪರ್ದಿನೇ ನಮಸ್ತುಭ್ಯಂ ಶಿತಿಕಂಠ ನಮೋಽಸ್ತು ತೇ ॥ ೧೦೬ ॥
ಮೀಢುಷ್ಟಮಾಯ ಗಿರಿಶ ಶಿಪಿವಿಷ್ಟಾಯ ತೇ ನಮಃ ।
ನಮೋಽಹ್ರಸ್ವಾಯ ಖರ್ವಾಯ ಬೃಹತೇ ವೃದ್ಧರೂಪಿಣೇ ॥ ೧೦೭ ॥
ಕುಮಾರಗುರವೇ ತುಭ್ಯಂ ಕುಮಾರವಪುಷೇ ನಮಃ ।
ನಮಃ ಶ್ವೇತಾಯ ಕೃಷ್ಣಾಯ ಪೀತಾಯಾರುಣಮೂರ್ತಯೇ ॥ ೧೦೮ ॥
ಧೂಮ್ರವರ್ಣಾಯ ಪಿಂಗಾಯ ನಮಃ ಕರ್ಬುರವರ್ಚಸೇ ।
ನಮಃ ಪಾಟಲವರ್ಣಾಯ ನಮೋ ಹರಿತತೇಜಸೇ ॥ ೧೦೯ ॥
ನಾನಾವರ್ಣಸ್ವರೂಪಾಯ ವರ್ಣಾನಾಂ ಪತಯೇ ನಮಃ ।
ನಮಸ್ತೇ ಸ್ವರರೂಪಾಯ ನಮೋ ವ್ಯಂಜನರೂಪಿಣೇ ॥ ೧೧೦ ॥
ಉದಾತ್ತಾಯಾನುದಾತ್ತಾಯ ಸ್ವರಿತಾಯ ನಮೋ ನಮಃ ।
ಹ್ರಸ್ವದೀರ್ಘಪ್ಲುತೇಶಾಯ ಸವಿಸರ್ಗಾಯ ತೇ ನಮಃ ॥ ೧೧೧ ॥
ಅನುಸ್ವಾರಸ್ವರೂಪಾಯ ನಮಸ್ತೇ ಸಾನುನಾಸಿಕ ।
ನಮೋ ನಿರನುನಾಸಾಯ ದಂತ್ಯತಾಲವ್ಯರೂಪಿಣೇ ॥ ೧೧೨ ॥

---

೧೦೬. ಮಾಯಾದೋಷರಹಿತನೂ, ಪರಮಮಂಗಳಮೂರ್ತಿಯೂ ತಲೆಗೂದಲನ್ನು ಜಟಾಜೂಟವಾಗಿ ಕಟ್ಟಿಕೊಂಡು ನೀಲಕಂಠನಾಗಿರುವ ನಿನಗೆ ಮಣಿಯುವೆನು.

೧೦೭. ಯಜ್ಞಫಲದಾತೃಗಳಲ್ಲಿ ಸರ್ವಶ್ರೇಷ್ಠನೂ, ಯಜ್ಞಪಶುವಿನಲ್ಲಿ ಯಜ್ಞರೂಪಿಯಾಗಿ ಪ್ರವೇಶಿಸುವವನೂ, ದೀರ್ಘದೇಹವುಳ್ಳವನೂ, ಹ್ರಸ್ವನೂ, ಸ್ಥೂಲನೂ, ವೃದ್ಧಸ್ವರೂಪಿಯೂ ಆದ ನಿನಗೆ ನಮಸ್ಕಾರವು.

೧೦೮. ಷಣ್ಮುಖನಿಗೆ ಜನಕನೂ, ಅಜರಾಮರದೇಹವುಳ್ಳವನೂ, ಶ್ವೇತ, ಕೃಷ್ಣ, ಪೀತ, ಅರುಣ ಮುಂತಾದ ಅನೇಕ ವರ್ಣದ ದೇಹಗಳನ್ನು ಧರಿಸುವವನೂ ಆದ ನಿನಗೆ ನಮಸ್ಕಾರವು.

೧೦೯. ಧೂಮ್ರ, ಕಪಿಲ, ಕರ್ಬುರ, ಪಾಟಲ, ಹರಿತವರ್ಣಗಳ ಕಾಂತಿಯಿಂದೊಪ್ಪುತ್ತಿರುವ ನಿನಗೆ ನಮಸ್ಕಾರವು.

೧೧೦. ಅನೇಕ ವರ್ಣಗಳ ಪದಾರ್ಥಗಳ ಸ್ವರೂಪನೂ, ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯಗಳಿಗೆ ನಿಯಾಮಕನೂ, ಅಕ್ಷರಮಾಲೆಯ ಸ್ವರವ್ಯಂಜನಗಳ ರೂಪದಿಂದಿರುವವನೂ ಆದ ನಿನಗೆ ನಮಸ್ಕಾರವು.

೧೧೧. ವೈದಿಕಮಂತ್ರಗಳ ಉದಾತ್ತ, ಅನುದಾತ್ತ, ಸ್ವರಿತ ಸ್ವರೂಪನೂ, ಹ್ರಸ್ವ, ದೀರ್ಘ, ಪ್ಲುತ, ವಿಸರ್ಗಗಳಿಗೆ ನಿಯಾಮಕನೂ ಆದ ನಿನಗೆ ನಮಸ್ಕಾರವು.

೧೧೨. ಅನುಸ್ವಾರಸಂಜ್ಞಕವಾದ ಬಿಂದುವಿನ ಸ್ವರೂಪನೂ, ವರ್ಗಗಳ

ಓಷ್ಠ್ಯೋರಸ್ಯಸ್ವರೂಪಾಯ ನಮ ಊಷ್ಮಸ್ವರೂಪಿಣೇ ।
ಅಂತಸ್ಥಾಯ ನಮಸ್ತುಭ್ಯಂ ಪಂಚಮಾಯ ಪಿನಾಕಿನೇ ॥ ೧೧೩ ॥
ನಿಷಾದಾಯ ನಮಸ್ತುಭ್ಯಂ ನಿಷಾದಪತಯೇ ನಮಃ ।
ವೀಣಾವೇಣುಮೃದಂಗಾದಿವಾದ್ಯರೂಪಾಯ ತೇ ನಮಃ ॥ ೧೧೪ ॥
ನಮಸ್ತಾರಾಯ ಮಂದ್ರಾಯ ಘೋರಾಯಾಘೋರಮೂರ್ತಯೇ ।
ನಮಸ್ತಾನಸ್ವರೂಪಾಯ ಮೂರ್ಛನಾಪತಯೇ ನಮಃ ॥ ೧೧೫ ॥
ಸ್ಥಾಯಿಸಂಚಾರಿಭೇದೇನ ಸಹೋ ಭಾವಸ್ವರೂಪಿಣೇ ।
ತಾಲಪ್ರಿಯಾಯ ತಾಲಾಯ ಲಾಸ್ಯತಾಂಡವಜನ್ಮನೇ ॥ ೧೧೬ ॥
ತೌರ್ಯತ್ರಿಕಸ್ವರೂಪಾಯ ತೌರ್ಯತ್ರಿಕಮಹಾಪ್ರಿಯ ।
ತೌರ್ಯತ್ರಿಕಕೃತಾಂ ಭಕ್ತ್ಯಾ ನಿರ್ವಾಣಶ್ರೀಪ್ರದಾಯಕ ॥ ೧೧೭ ॥
ಸ್ಥೂಲಸೂಕ್ಷ್ಮಸ್ವರೂಪಾಯ ದೃಶ್ಯಾದೃಶ್ಯಸ್ವರೂಪಿಣೇ ।
ಅರ್ವಾಚೀನಾಯ ಚ ನಮಃ ಪರಾಚೀನಾಯ ತೇ ನಮಃ ॥ ೧೧೮ ॥

ಅಂತ್ಯಾಕ್ಷರಗಳಾದ ಅನುನಾಸಿಕಗಳ ರೂಪನೂ, ನಿರನುನಾಸನೂ, ದಂತ್ಯ, ತಾಲವ್ಯಾಕ್ಷರಗಳ ಸ್ವರೂಪವುಳ್ಳವನೂ ಆದ ನಿನಗೆ ನಮಸ್ಕಾರವು.

೧೧೩. ಓಷ್ಠ್ಯ, ಉರಸ್ಯ, ಊಷ್ಮ, ರಲವಕಾರಗಳು—ಇವುಗಳ ರೂಪಗಳನ್ನು ತಾಳಿ, ಪರ, ಪುರುಷ, ಬ್ರಹ್ಮ, ವಿಷ್ಣುಗಳಿಗೆ ಐದನೆಯವನಾಗಿ, ಪಿನಾಕವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವ ನಿನಗೆ ನಮಸ್ಕಾರವು.

೧೧೪. ಕಿರಾತರೂಪಿಯೂ, ಕಿರಾತನಾಯಕನೂ, ವೀಣಾ, ವೇಣು, ಮೃದಂಗಗಳೇ ಮೊದಲಾದ ವಾದ್ಯಗಳ ಸ್ವರೂಪವನ್ನು ಸ್ವೀಕರಿಸುವವನೂ ಆದ ನಿನಗೆ ನಮಸ್ಕಾರವನ್ನು ಮಾಡುತ್ತಿರುವೆನು.

೧೧೫. ತಾರಮಂದ್ರಸ್ಥಾಯೀಶಬ್ದಸ್ವರೂಪನೂ, ಭಕ್ತಿಹೀನರಿಗೆ ಭಯಂಕರನೂ, ಭಕ್ತರಿಗೆ ಸೌಮ್ಯಸ್ವರೂಪನೂ, ನಲವತ್ತೊಂಬತ್ತು ತಾನಗಳಿಗೂ ಇಪ್ಪತ್ತೊಂದು ಮೂರ್ಛನಗಳಿಗೂ ಅಧಿಪತಿಯೂ ಆದ ನಿನಗೆ ನಮಸ್ಕಾರವು.

೧೧೬. ಸ್ಥಾಯಿ ಮತ್ತು ಸಂಚಾರಗಳ ಭೇದಗಳಿಂದ ಪ್ರತೀತವಾಗುವ ಭಾವಸ್ವರೂಪನೂ, ತಾಲಪ್ರಿಯನೂ, ತಾಲಸ್ವರೂಪನೂ, ಲಾಸ್ಯತಾಂಡವಗಳೆಂಬ ನೃತ್ಯಗಳಿಗೆ ಆದಿಕಾರಣನೂ ಆದ ನಿನಗೆ ನಮಸ್ಕಾರವು.

೧೧೭. ನೃತ್ಯಗೀತವಾದ್ಯಸ್ವರೂಪನೂ, ಅವುಗಳಲ್ಲಿ ಮಹಾಭಿಲಾಷೆಯುಳ್ಳವನೂ, ಭಕ್ತಿಯಿಂದ ಆ ವಾದ್ಯಗಳ ಸೇವೆಯನ್ನು ನಡೆಸುವವನಿಗೆ ಮೋಕ್ಷಲಕ್ಷ್ಮಿಯನ್ನು ಅನುಗ್ರಹಿಸುವವನೂ ಆದ ನಿನ್ನನ್ನು ನಮಸ್ಕರಿಸುವೆನು.

೧೧೮. ಸ್ಥೂಲಸೂಕ್ಷ್ಮಗಳೆನಿಸಿದ ಕಾರ್ಯಕಾರಣಸ್ವರೂಪನೂ, ಭಾವಾಭಾವಗಳ ರೂಪವುಳ್ಳವನೂ, ನಿತ್ಯನೂತನನೂ, ಅನಾದಿಕಾಲದಿಂದಿರುವವನೂ ಆದ ನಿನಗೆ ನಮಸ್ಕಾರವು.

ವಾಕ್ಪ್ರಪಂಚಸ್ವರೂಪಾಯ ವಾಕ್ಪ್ರಪಂಚಪರಾಯ ಚ ।
ಏಕಾಯಾನೇಕಭೇದಾಯ ಸದಸತ್ಪತಯೇ ನಮಃ ॥ ೧೧೯ ॥
ಶಬ್ದಬ್ರಹ್ಮ ನಮಸ್ತುಭ್ಯಂ ಪರಬ್ರಹ್ಮ ನಮೋಽಸ್ತು ತೇ ।
ನಮೋ ವೇದಾಂತವೇದ್ಯಾಯ ವೇದಾನಾಂ ಪತಯೇ ನಮಃ ॥ ೧೨೦ ॥
ನಮೋ ವೇದಸ್ವರೂಪಾಯ ವೇದಗೋಚರಮೂರ್ತಯೇ ।
ಪಾರ್ವತೀಶ ನಮಸ್ತುಭ್ಯಂ ಜಗದೀಶ ನಮೋಽಸ್ತು ತೇ ॥ ೧೨೧ ॥
ನಮಸ್ತೇ ದೇವದೇವೇಶ ದೇವ ದಿವ್ಯಪದಪ್ರದ ।
ಶಂಕರಾಯ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರ ॥ ೧೨೨ ॥
ನಮಸ್ತೇ ಜಗದಾನಂದ ನಮಸ್ತೇ ಶಶಿಶೇಖರ ।
ಮೃತ್ಯುಂಜಯ ನಮಸ್ತುಭ್ಯಂ ನಮಸ್ತೇ ತ್ರ್ಯಂಬಕಾಯ ಚ ॥ ೧೨೩ ॥
ನಮಃ ಪಿನಾಕಹಸ್ತಾಯ ತ್ರಿಶೂಲಾಯುಧಧಾರಿಣೇ ।
ನಮಸ್ತ್ರಿಪುರಹಂತ್ರೇ ಚ ನಮೋಽಂಧಕನಿಷೂದನ ॥ ೧೨೪ ॥
ಕಂದರ್ಪದರ್ಪದಲನ ನಮೋ ಜಾಲಂಧರಾರಯೇ ।
ಕಾಲಾಯ ಕಾಲಕಾಲಾಯ ಕಾಲಕೂಟವಿಷಾದಿನೇ ॥ ೧೨೫ ॥

---

೧೧೯. ಶಬ್ದಜಾಲಸ್ವರೂಪನೂ, ಶಬ್ದಗಳಿಂದ ನಿರ್ದೇಶಿಸಲ್ಪಡದವನೂ, ಒಬ್ಬನೇ ಆದರೂ ಅನೇಕ ರೂಪಗಳನ್ನು ತಾಳಿ ನಿತ್ಯಾನಿತ್ಯಗಳಿಗೆ ಒಡೆಯನೂ ಆದ ನಿನಗೆ ನಮಸ್ಕಾರವು.

೧೨೦. ವೇದಸ್ವರೂಪನೂ, ಪರಬ್ರಹ್ಮನೂ, ವೇದಾಂತವಾಕ್ಯಗಳ ಲಕ್ಷ್ಯಾರ್ಥವೂ, ವೇದಗಳಿಗೆ ನಿಯಂತೃವೂ ಆದ ನಿನಗೆ ನಮಸ್ಕಾರವು.

೧೨೧. ವೇದಮಯದೇಹವನ್ನು ತಾಳಿರುವವನೂ, ಶುದ್ಧ ಜ್ಞಾನಕ್ಕೆ ಮಾತ್ರ ಗೋಚರವಾದ ರೂಪವುಳ್ಳವನೂ, ಪರ್ವತರಾಜಪುತ್ರಿಗೆ ಪ್ರಿಯನೂ, ಲೋಕನಿಯಾಮಕನೂ ಆದ ನಿನಗೆ ನಮಸ್ಕಾರವು.

೧೨೨. ದೇವಾಧಿದೇವತೆಗಳಿಗೂ ಈಶ್ವರನಾಗಿ, ದೇವತೆಗಳಿಗೂ ಸ್ವರ್ಗಾದಿ ಲೋಕಗಳನ್ನು ಕೊಡುವವನಾಗಿ ಭಕ್ತರಿಗೆ ಮಂಗಳವನ್ನುಂಟುಮಾಡುವವನಾದ ಮಹೇಶ್ವರನಿಗೆ ನಮಸ್ಕಾರವು.

೧೨೩. ಬ್ರಹ್ಮಾಂಡಕ್ಕೆ ಆನಂದದಾಯಕನೂ, ಚಂದ್ರನನ್ನು ತಲೆಯಲ್ಲಿ ಧರಿಸಿದವನೂ, ಮೃತ್ಯುವನ್ನು ಜಯಿಸಿದವನೂ, ತ್ರಿಲೋಚನನೂ ಆದ ನಿನಗೆ ನಮಸ್ಕಾರವು.

೧೨೪. ಪಿನಾಕವೆಂಬ ಧನುಸ್ಸನ್ನೂ, ತ್ರಿಶೂಲವೆಂಬ ಆಯುಧವನ್ನೂ ಕೈಯಲ್ಲಿ ಹಿಡಿದುಕೊಂಡು ತ್ರಿಪುರಾಸುರನನ್ನೂ, ಅಂಧಕದೈತ್ಯನನ್ನೂ ನಿಗ್ರಹಿಸಿದ ಮಹಾ ಪರಾಕ್ರಮಿಯಾದ ನಿನಗೆ ನಮಸ್ಕಾರವು.

೧೨೫. ಮನ್ಮಥನ ಮದವನ್ನು ಮುರಿದವನೂ, ಜಲಂಧರರಾಕ್ಷಸನ

**ವಿಷಾದಹಂತ್ರೇ ಭಕ್ತಾನಾಮಭಕ್ತೈಕವಿಷಾದದ ।**
**ಜ್ಞಾನಾಯ ಜ್ಞಾನರೂಪಾಯ ಸರ್ವಜ್ಞಾಯ ನಮೋಽಸ್ತು ತೇ ॥ ೧೨೬ ॥**
**ಯೋಗಸಿದ್ಧಿಪ್ರದೋಽಸಿ ತ್ವಂ ಯೋಗಿನಾಂ ಯೋಗಸತ್ತಮ ।**
**ತಪಸಾಂ ಫಲದೋಽಸಿ ತ್ವಂ ತಪಸ್ವಿಭ್ಯಸ್ತಪೋಧನ ॥ ೧೨೭ ॥**
**ತ್ವಮೇವ ಮಂತ್ರರೂಪೋಽಸಿ ಮಂತ್ರಾಣಾಂ ಫಲದೋ ಭವಾನ್ ।**
**ಮಹಾದಾನಫಲಂ ತ್ವಂ ವೈ ಮಹಾದಾನಪ್ರದೋ ಭವಾನ್ ॥ ೧೨೮ ॥**
**ಮಹಾಯಜ್ಞಸ್ತ್ವಮೇವೇಶ ಮಹಾಯಜ್ಞಫಲಪ್ರದ ।**
**ತ್ವಂ ಸರ್ವಃ ಸರ್ವಗಸ್ತ್ವಂ ವೈ ಸರ್ವದಃ ಸರ್ವದೃಗ್ಭವಾನ್ ॥ ೧೨೯ ॥**
**ಸರ್ವಭುಕ್ಸರ್ವಕರ್ತಾ ತ್ವಂ ಸರ್ವಸಂಹಾರಕಾರಕ ।**
**ಯೋಗಿನಾಂ ಹೃದಯಾಕಾಶಕೃತಾಲಯ ನಮೋಽಸ್ತು ತೇ ॥ ೧೩೦ ॥**
**ತ್ವಮೇವ ವಿಷ್ಣುರೂಪೇಣ ಶಂಖಚಕ್ರಗದಾಧರಃ ।**
**ತ್ರಿಲೋಕೀಂ ತ್ರಾಯಸೇ ತ್ರಾತಃ ಸತ್ತ್ವಮೂರ್ತೇ ನಮೋಽಸ್ತು ತೇ॥೧೩೧॥**

---

ವೈರಿಯೂ, ಕಾಲರೂಪದಿಂದ ಲೋಕಕ್ಷಯವನ್ನು ಮಾಡುವವನೂ, ಯಮನಿಗೂ ಯಮನಾಗಿರುವವನೂ, ಕಾಲಕೂಟವಿಷವನ್ನು ಪಾನಮಾಡಿದವನೂ ಆದ ನಿನಗೆ ನಮಸ್ಕಾರವು.

೧೨೬. ಭಕ್ತರ ಸಮಸ್ತ ದುಃಖಗಳನ್ನೂ ನಾಶಮಾಡುವವನೂ, ಭಕ್ತರಲ್ಲದವರಿಗೆ ವಿಘ್ನಗಳನ್ನೇ ಕೊಡುತ್ತಿರುವವನೂ, ಜ್ಞಾನಸಾಧನನೂ, ಜ್ಞಾನಸ್ವರೂಪನೂ, ಸರ್ವಜ್ಞನೂ ಆದ ನಿನಗೆ ನಮಸ್ಕಾರವು.

೧೨೭. ಯೋಗಿಗಳಲ್ಲಿ ಉತ್ತಮನೆ! ತಪೋಧನನೆ! ಯೋಗಿಗಳಿಗೆ ಯೋಗಾಭ್ಯಾಸದ ಫಲವನ್ನು ನೀನೇ ದೊರಕಿಸುವೆ. ತಪಸ್ವಿಗಳಿಗೂ ನೀನೇ ತಪಸ್ಸುಗಳ ಫಲಗಳನ್ನೂ ಅನುಗ್ರಹಿಸುತ್ತಿರುವೆ.

೧೨೮. ನೀನೇ ಮಂತ್ರಸ್ವರೂಪನೂ, ಮಂತ್ರಪುರಶ್ಚರಣೆಯ ಫಲವನ್ನು ಕೊಡುವವನೂ, ಮಹಾದಾನಗಳಿಗೆ ಫಲವೂ, ಮಹಾದಾನಗಳನ್ನು ಕೊಡುವವನೂ ಆಗಿರುವೆ.

೧೨೯. ಮಹೇಶ್ವರನೆ! ನೀನೇ ಮಹಾಯಜ್ಞಸ್ವರೂಪನು, ಮಹಾಯಜ್ಞಗಳಿಗೆ ಫಲಗಳನ್ನು ಕೊಡುವವನೂ ನೀನೇ ಆಗಿರುವೆ. ನೀನೇ ಸಕಲವೂ, ಸರ್ವಾಂತರ್ಯಾಮಿಯೂ, ಸರ್ವಪ್ರದನೂ, ಸರ್ವಸಾಕ್ಷಿಯೂ ಆಗಿ ಕಾಣುತ್ತಿರುವೆ.

೧೩೦. ಸರ್ವಭೋಕ್ತೃವೂ, ಸರ್ವಪ್ರಪಂಚಕ್ಕೆ ಕಾರಣನೂ, ಸಂಹಾರವನ್ನು ಮಾಡುವವನೂ, ಯೋಗಿವರ್ಯರ ಹೃದಯಾಕಾಶದಲ್ಲಿ ವಾಸವನ್ನು ಮಾಡಿಕೊಂಡಿರುವವನೂ ಆದ ನಿನಗೆ ನಮಸ್ಕರಿಸುವೆನು.

೧೩೧. ನೀನು ಸತ್ತ್ವಗುಣಮಯವಾದ ದೇಹವುಳ್ಳವನಾಗಿ ಮಹಾವಿಷ್ಣು

ತ್ವಮೇವ ವಿದಧಾಸ್ಯೇತದ್ವಿಧಿರ್ಭೂತ್ವಾ ವಿಧಾನವಿತ್ ।
ರಜೋರೂಪಂ ಸಮಾಲಂಬ್ಯ ನೀರಜಸ್ಕಪದಪ್ರದ ॥ ೧೩೨ ॥
ತ್ವಮೇವ ಹಿ ಮಹಾರುದ್ರಸ್ತ್ವಂ ಮಹೋಗ್ರೋ ಭುಜಂಗಭೃತ್ ।
ತ್ವಮೇವ ಹಿ ಮಹಾಭೀಮೋ ಮಹಾಪಿತೃವನೇಚರ ॥ ೧೩೩ ॥
ತಾಮಸೀಂ ತನುಮಾಶ್ರಿತ್ಯ ತ್ವಂ ಕೃತಾಂತಕೃತಾಂತಕ ।
ಕಾಲಾಗ್ನಿರುದ್ರೋ ಭೂತ್ವಾಂತೇ ತ್ವಂ ಸಂವರ್ತಪ್ರವರ್ತಕಃ ॥ ೧೩೪ ॥
ತ್ವಂ ಪುಂಪ್ರಕೃತಿರೂಪಾಭ್ಯಾಂ ಮಹದಾದ್ಯಖಿಲಂ ಜಗತ್ ।
ಅಕ್ಷಿಪಕ್ಷ್ಮಸಮುತ್ಕ್ಷೇಪಾತ್ಪುನರಾವಿಷ್ಕರೋಷ್ಯಜ ॥ ೧೩೫ ॥
ಉನ್ಮೇಷನಿಮೇಷೌ ತೇ ಸರ್ಗಾಸರ್ಗೈಕಕಾರಣಂ ।
ಕಪಾಲಮಾಲಾಖೇಲೋಽಯಂ ಭವತಃ ಸ್ವೈರಚಾರಿಣಃ ॥ ೧೩೬ ॥
ತ್ವತ್ಕಂಠೇ ನೃಕರೋಟೀಯಂ ಧೂರ್ಜಟೇ ಯಾ ವಿಭಾಸತೇ ।
ಸರ್ವೇಷಾಮಂತದಗ್ಧಾನಾಂ ಸಾ ಸ್ಫುಟಂ ಬೀಜಮಾಲಿಕಾ ॥ ೧೩೭ ॥

---

ವೆನಿಸಿಕೊಂಡು ಶಂಖ, ಚಕ್ರ, ಗದಾ, ಪದ್ಮಗಳನ್ನು ಕೈಗಳಲ್ಲಿ ಹಿಡಿದು ಮೂರು ಲೋಕಗಳನ್ನೂ ಕಾಪಾಡುತ್ತಿರುವೆ. ನಿನಗೆ ನಮಸ್ಕಾರವು.

೧೩೨. ನೀನೇ ಬ್ರಹ್ಮದೇವನಾಗಿ ಪೂರ್ವಕಲ್ಪಗಳ ಸೃಷ್ಟಿ ವಿಧಿಯನ್ನರಿತು ರಜೋಗುಣಪ್ರಧಾನವಾದ ರೂಪವನ್ನವಲಂಬಿಸಿ ಈ ಬ್ರಹ್ಮಾಂಡವನ್ನೆಲ್ಲ ಸೃಷ್ಟಿ ಮಾಡುತ್ತಿರುವೆ. ನಿರ್ದೋಷವಾದ ಮೋಕ್ಷಪದವಿಯನ್ನು ಕೊಡುವವನೂ ಆಗಿರುವೆ.

೧೩೩. ನೀನೇ ಮಹಾರುದ್ರನು, ಮಹೋಗ್ರನು. ಭುಜಗಭೂಷಣನೂ ನೀನೇ. ಮಹಾಭೀಮನೆನಿಸಿ ಭಯಂಕರಗಳಾದ ಶ್ಮಶಾನಗಳಲ್ಲಿ ಸಂಚರಿಸುವವನು.

೧೩೪. ಯಮನಿಗೂ ಯಮನಾಗಿರುವ ಓ ಸ್ವಾಮಿಯೆ! ಪ್ರಳಯಕಾಲವು ಪ್ರಾಪ್ತವಾಗಲು ನೀನು ತಮೋಗುಣಪ್ರಚುರವಾದ ದೇಹವನ್ನು ಸ್ವೀಕರಿಸಿ ಕಾಲಾಗ್ನಿರುದ್ರನೆಂದೆನಿಸಿ ಸಕಲಕ್ಕೂ ನಾಶವನ್ನುಂಟುಮಾಡುವೆ.

೧೩೫. ಎಲೈ ಜನನರಹಿತನೆ! ಪುನಃ ಸೃಷ್ಟಿಕಾಲದಲ್ಲಿ ನೀನೇ ಪುರುಷ ಪ್ರಕೃತಿಯರಾಗಿ ರೂಪಗಳನ್ನು ತಾಳಿ ಮಹದಹಂಕಾರಾದಿ ಸಮಸ್ತ ಬ್ರಹ್ಮಾಂಡ ವನ್ನೂ ಹುಬ್ಬುಗಳನ್ನು ಹಾರಿಸುವ ಮಾತ್ರದಿಂದಲೇ ವ್ಯಾಪಾರಗೊಳಿಸುತ್ತಿರುವೆ.

೧೩೬. ನೀನು ಕಣ್ಣುಗಳನ್ನು ತೆರೆಯುವುದು ಮತ್ತು ಮುಚ್ಚುವುದೇ ಪ್ರಪಂಚದ ಸೃಷ್ಟಿಲಯಗಳಿಗೆ ಏಕಾಂತಕಾರಣವಾಗಿರುವುದು. ಸ್ವೇಚ್ಛೆಯಾಗಿ ವಿಹರಿಸುತ್ತಿರುವ ನಿನಗೆ ಕಪಾಲಮಾಲೆಯೂ ಸಹ ಒಂದು ಕ್ರೀಡಾ ಪದಾರ್ಥವೇ ಆಗಿರುವುದಲ್ಲದೆ ಬೇರೆಯಲ್ಲ.

೧೩೭. ಧೂರ್ಜಟಿಯೆ! ನಿನ್ನ ಕೊರಳಿನಲ್ಲಿ ಯಾವ ರುಂಡಮಾಲೆಯು

ತ್ವತ್ತಃ ಸರ್ವಮಿದಂ ಶಂಭೋ ತ್ವಯಿ ಸರ್ವಂ ಚರಾಚರಂ ।
ಕಸ್ತ್ವಾಂ ಸ್ತೋತುಂ ವಿಜಾನಾತಿ ಪುರಾ ವಾಚಾಮಗೋಚರಂ ॥ ೧೪೮ ॥
ಸ್ತೋತಾ ತ್ವಂ ಹಿ ಸ್ತುತಿಸ್ತ್ವಂ ಹಿ ನಿತ್ಯಂ ಸ್ತುತ್ಯಸ್ತ್ವಮೇವ ಚ ।
ವೇದ್ಮ್ಯೋಂ ನಮಃ ಶಿವಾಯೇತಿ ನಾನ್ಯದ್ವೇದ್ಮ್ಯೇವ ಕಿಂಚನ ॥ ೧೪೯ ॥
ತ್ವಮೇವ ಹಿ ಶರಣ್ಯಂ ಮೇ ತ್ವಮೇವ ಹಿ ಗತಿಃ ಪರಾ ।
ತ್ವಾಮೇವ ಪ್ರಣಮಾಮೀಶ ನಮಸ್ತುಭ್ಯಂ ನಮೋ ನಮಃ ॥ ೧೫೦ ॥
ಇತ್ಯಾದೀಯರ್ಯಸಕೃದ್ವೇಧಾಃ ಪ್ರಣನಾಮ ಮಹೇಶ್ವರಂ ।
ಪ್ರಣವಾಖ್ಯಂ ಮಹಾಲಿಂಗರೂಪಿಣಂ ದಂಡವತ್ಕ್ಷಿತೌ ॥ ೧೫೧ ॥

ಈಶ್ವರ ಉವಾಚ :—

ತತೋ ಗಿರೀಂದ್ರತನಯೇ ಶ್ರುತ್ವಾ ಬ್ರಹ್ಮಸ್ತುತಿಂ ಪರಾಂ ।
ಪರಮೈಶ್ವರ್ಯಸಂಪತ್ತಿಹೇತುಂ ತುಷ್ಟೋಽಹಮದ್ಭುತಂ ॥ ೧೫೨ ॥

---

ಶೋಭಿಸುತ್ತಿರುವುದೊ, ಅದು ಪ್ರಳಯಕಾಲದಲ್ಲಿ ನಾಶಹೊಂದಿದ ಸಕಲ ಭೂತಗಳ ಬೀಜಮಾಲಿಕೆಯಾಗಿರುವೆಂಬುದು ವ್ಯಕ್ತವು.†

೧೪೮. ಎಲೈ ಮಹಾದೇವನೆ! ನಿನ್ನಿಂದಲೇ ಪ್ರಪಂಚವೆಲ್ಲವೂ ಹುಟ್ಟಿರುವುದು. ಚರಾಚರಾತ್ಮಕವಾದುದೆಲ್ಲವೂ ನಿನ್ನಲ್ಲಿಯೇ ನೆಲಸಿರುವುದು. ಅನಾದಿ ವಾಕ್ಯರೂಪಗಳಾದ ವೇದಗಳಿಗೂ ಅಗೋಚರನಾದ ನಿನ್ನನ್ನು ಸ್ತುತಿಸಲು ಯಾವನು ಬಲ್ಲನು ?

೧೪೯. ಸ್ತೋತ್ರಮಾಡುವವನೂ ನೀನೇ. ಸ್ತೋತ್ರವೂ ನೀನೇ. ಸ್ತೋತ್ರ ವಿಷಯನೂ ನೀನೇ. ನಾನಾದರೊ "ಓಂ ನಮಃ ಶಿವಾಯ" ಎಂಬ ಈ ಒಂದು ಮಂತ್ರವನ್ನು ಮಾತ್ರ ತಿಳಿದಿರುವೆನಲ್ಲದೆ ಮತ್ತೇನನ್ನೂ ಅರಿಯೆನು.

೧೫೦. ನೀನೇ ನನಗೆ ಶರಣ್ಯನು. ನೀನೇ ನನಗೆ ಸದ್ಗತಿಸ್ವರೂಪನು. ಸರ್ವೇಶ್ವರನೆ! ನಿನಗೇ ಪ್ರಣಾಮಗಳನ್ನು ಮಾಡುತ್ತಿರುವೆನು. ಪುನಃ ಪುನಃ ನಿನಗೇ ನಮಸ್ಕಾರಗಳನ್ನು ಹೇಳುತ್ತಿರುವೆನು.

೧೫೧. ಇಂತು ಬಹು ವಿಧವಾಗಿ ಸ್ತೋತ್ರವನ್ನು ಮಾಡಿ ಚತುರ್ಮುಖನು ಪ್ರಣವನಾಮಕವಾದ ಆ ಮಹಾಲಿಂಗದ ರೂಪದಿಂದ ಮುಂದೆ ಕಾಣುತ್ತಿರುವ ಮಹೇಶ್ವರನಿಗೆ ಭೂಮಿಯಲ್ಲಿ ಬಿದ್ದು ದೀರ್ಘದಂಡನಮಸ್ಕಾರವನ್ನು ಮಾಡಿದನು.

೧೫೨. ಈಶ್ವರನು ಹೇಳುತ್ತಾನೆ:—ಗಿರಿರಾಜಕುಮಾರಿಯೆ! ಇಂತು

---

† ವೃಕ್ಷವು ನಾಶವನ್ನು ಹೊಂದುವಾಗ ಫಲದಲ್ಲಿ ಬೀಜವನ್ನು ಬಿಟ್ಟುಹೋಗುವುದು. ವೃಕ್ಷ ನಾಶದನಂತರ ಬೀಜದಿಂದ ಸಜಾತೀಯವಾದ ಮತ್ತೊಂದು ವೃಕ್ಷವುಂಟಾಗುವದು. ಅಂತೆಯೇ ಪ್ರಳಯಕಾಲದಲ್ಲಿ ಸಮಸ್ತಭೂತಗಳೂ ಬೀಜರೂಪಗಳಾಗಿ ಪರಮೇಶ್ವರನ ರುಂಡಮಾಲೆಯಲ್ಲಿರುವುವೆಂದೂ, ಸೃಷ್ಟಿಕಾಲದಲ್ಲಿ ಪುನಃ "ಯಥಾಪೂರ್ವಮಕಲ್ಪಯತ್" ಎಂಬ ಶ್ರುತ್ಯುಕ್ತಿಯಂತೆ ಪೂರ್ವ ಸೃಷ್ಟಿಗೆ ಸಮಾನಾಕಾರವಾದ ಸೃಷ್ಟಿಯೇ ಉಂಟಾಗುವುದೆಂದೂ ಭಾವವು.

ಅಮೂರ್ತೋಽಹಂ ತತೋ ಲಿಂಗಾನ್ಮೂರ್ತಿಮಾಸ್ಥಾಯ ಶಾಂಕರೀಂ ।
ಪ್ರಸನ್ನೋಽಸ್ಮಿ ವರಂ ಬ್ರೂಹೀತ್ಯುವಾಚ ಚತುರಾನನಂ ॥ ೧೪೩ ॥
ಚತುರ್ವಕ್ತ್ರಃ ಸಮುತ್ಥಾಯ ಪ್ರತ್ಯಕ್ಷಂ ವೀಕ್ಷ್ಯ ಮಾಮಥ ।
ಪುನರ್ಜಯಜಯೇತ್ಯುಕ್ತ್ವಾ ಪ್ರಣನಾಮ ಕೃತಾಂಜಲಿಃ ॥ ೧೪೪ ॥
ಆನಂದಬಾಷ್ಪಸಲಿಲನೇತ್ರೋ ಹೃಷ್ಟತನೂರುಹಃ ।
ಗದ್ಗದೇನ ಸ್ವರೇಣಾಥ ಪ್ರೋವಾಚ ಜಲಜಾಸನಃ ॥ ೧೪೫ ॥

ಬ್ರಹ್ಮೋವಾಚ :—

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರೋ ಮಮ ।
ತದೇತಸ್ಮಿನ್ಮಹಾಲಿಂಗೇ ಸಾನ್ನಿಧ್ಯಂ ತೇಽಸ್ತು ಶಂಕರ ॥ ೧೪೬ ॥
ಅಯಮೇವ ವರೋ ದೇಯೋ ನಾನ್ಯಂ ವರಮಹಂ ವೃಣೇ ।
ಓಂಕಾರೇಶ್ವರನಾಮ್ನೈತದಸ್ತು ಭಕ್ತೈಕಮುಕ್ತಿದಂ ॥ ೧೪೭ ॥

---

ಉತ್ತಮೋತ್ತಮವೂ, ಪರಮೈಶ್ವರ್ಯಪ್ರಾಪ್ತಿಗೆ ಕಾರಣವೂ ಆದ ಈ ಅದ್ಭುತ ಸ್ತೋತ್ರವನ್ನು ಬ್ರಹ್ಮನ ಮುಖದಿಂದ ಕೇಳಿ ನಾನು ಸಂತೋಷಗೊಂಡೆನು.

೧೪೩. ವಸ್ತುತಃ ಮೂರ್ತಿರಹಿತನಾಗಿದ್ದರೂ ಭಕ್ತನಿಗಾಗಿ ಶಂಕರರೂಪವನ್ನು ಸ್ವೀಕರಿಸಿ ಲಿಂಗದಿಂದ ಹೊರಬಿದ್ದು ಬ್ರಹ್ಮನನ್ನು ಕುರಿತು, "ನಾನು ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳು" ಎಂದೆನು.

೧೪೪. ಆಗ ಚತುರ್ಮುಖನು ಮೇಲಕ್ಕೆದ್ದು ಎದುರಿಗೆ ಪ್ರತ್ಯಕ್ಷನಾಗಿದ್ದ ನನ್ನನ್ನು ಕಂಡು ಮತ್ತೆ ಮತ್ತೆ ಜಯಕಾರಗಳನ್ನು ಮಾಡುತ್ತ ಕೈಗಳನ್ನು ಮುಗಿದು ಪ್ರಣಾಮವನ್ನು ಮಾಡುತ್ತಿದ್ದನು.

೧೪೫. ಆನಂದಬಾಷ್ಪಗಳಿಂದ ತುಂಬಿದ ಕಣ್ಣುಗಳುಳ್ಳವನೂ, ಹರ್ಷದಿಂದ ರೋಮಾಂಚಿತವಾದ ಮೈಯುಳ್ಳವನೂ, ಆದ ಪದ್ಮಸಂಭವನು ಗದ್ಗದ ಧ್ವನಿಯಿಂದ ಇಂತೆಂದು ಬಿನ್ನವಿಸಿದನು.

೧೪೬. ಬ್ರಹ್ಮನು ಹೇಳುತ್ತಾನೆ:—ದೇವದೇವನೆ! ಶಂಕರನೆ! ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ, ನನಗೆ ವರವನ್ನು ಕೊಡುವುದೂ ನಿನ್ನ ಮನಸ್ಸಿಗೆ ಬಂದಿದ್ದರೆ ಈ ವರವನ್ನು ಮಾತ್ರ ಕೇಳುವೆನು. ಈ ಮಹಾಲಿಂಗದಲ್ಲಿ ನಿನ್ನ ಸಾನ್ನಿಧ್ಯವು ಯಾವಾಗಲೂ ಇರುವುದಾಗಲಿ.

೧೪೭. ಇದೊಂದೇ ನನಗೆ ಬೇಕಾದ ವರವು. ಬೇರೆ ಯಾವ ವರವನ್ನೂ ನಾನು ಕೇಳುವುದಿಲ್ಲ. ಈ ಲಿಂಗವು ಓಂಕಾರೇಶ್ವರವೆಂಬ ಹೆಸರನ್ನು ಪಡೆದು ಭಕ್ತರಿಗೆ ಏಕಾಂತವಾದ ಸಾಯುಜ್ಯರೂಪಮೋಕ್ಷವನ್ನು ಕೊಡುತ್ತಿರಲಿ.

ಸ್ಕಂದ ಉವಾಚ :—
ವಿಧ್ಯುಕ್ತಮಿತಿ ವಿಪ್ರರ್ಷೇ ಸಮಾಕರ್ಣ್ಯ ತದೇಶಿತಾ ।
ಉವಾಚ ವಚನಂ ಚೈತತ್ತಥಾಸ್ತು ಚತುರಾನನಂ ॥ ೧೪೮ ॥
ವರಾನನ್ಯಾನಪಿ ವಿಭುಃ ಪ್ರಸನ್ನಸ್ತತ್ಕ್ಷಣಾದ್ದದೌ ।
ವಿಧಯೇ ದೀರ್ಘತಪಸೇ ತಯಾ ಸ್ತುತ್ಯಾತಿತೋಷಿತಃ ॥ ೧೪೯ ॥
ಈಶ್ವರ ಉವಾಚ :—
ಸುರಶ್ರೇಷ್ಠ ತಪಃಶ್ರೇಷ್ಠ ಸರ್ವಾಮ್ನಾಯನಿಧಿರ್ಭವ ।
ಸೃಷ್ಟೇಃ ಕರಣಸಾಮರ್ಥ್ಯಂ ತವಾಸ್ತು ಮದನುಗ್ರಹಾತ್ ॥ ೧೫೦ ॥
ಪಿತಾಮಹಸ್ತ್ವಂ ಸರ್ವೇಷಾಂ ಸರ್ವೇಷಾಂ ಮಾನ್ಯಭೂರ್ಭವಾನ್ ।
ತ್ವತ್ತಪಃಫಲದಾನಾರ್ಥಂ ಯದೇತಲ್ಲಿಂಗಮುತ್ಥಿತಂ ॥ ೧೫೧ ॥
ಪರಮೋಂಕಾರರೂಪಂ ಚ ಶಬ್ದಬ್ರಹ್ಮಮಯಂ ವಿಧೇ ।
ಅಸ್ಯಾರಾಧನತಃ ಪುಂಸಾಂ ನ ದೂರಂ ಬ್ರಹ್ಮಣಃ ಪದಂ ॥ ೧೫೨ ॥
ಅಕಾರಾಖ್ಯಮಿದಂ ಲಿಂಗಮುಕಾರಾಖ್ಯಮಿದಂ ಪರಂ ।
ಮಕಾರಾಹ್ವಯಮೇತಚ್ಚ ನಾದಾಖ್ಯಂ ಬಿಂದುಸಂಜ್ಞಕಂ ॥ ೧೫೩ ॥

---

೧೪೮. ಸ್ಕಂದನು ಹೇಳುತ್ತಾನೆ:— ಎಲೈ ಅಗಸ್ತ್ಯಮಹರ್ಷಿಯೆ! ಮಹೇಶ್ವರನು ಚತುರಾನನನಾಡಿದ ಮಾತುಗಳನ್ನು ಕಿವಿಗೊಟ್ಟು ಲಾಲಿಸಿ ಹಾಗೆಯೇ ಆಗಲೆಂದು ಅನುಗ್ರಹಿಸಿ ಮಾತನಾಡಿದನು.

೧೪೯. ಆ ಮಹಾಸ್ತೋತ್ರದಿಂದ ಪ್ರಸನ್ನನಾಗಿ ಸರ್ವೇಶ್ವರನು ಸಂತೋಷದಿಂದ ಆ ಕ್ಷಣದಲ್ಲಿಯೇ ದೀರ್ಘಕಾಲದವರೆಗೂ ತಪಸ್ಸನ್ನು ಮಾಡಿದ ಬ್ರಹ್ಮದೇವನಿಗೆ ಇತರ ವರಗಳನ್ನೂ ಕೊಡುವವನಾದನು.

೧೫೦. ಈಶ್ವರನು ಹೇಳುತ್ತಾನೆ:—ದೇವಶ್ರೇಷ್ಠನೆ! ತಪಸ್ವಿಗಳಲ್ಲಿ ಅಗ್ರಗಣ್ಯನೆ! ನೀನು ಸಕಲ ವೇದಗಳಿಗೂ ನಿಲಯನಾಗಿರು. ನನ್ನ ಅನುಗ್ರಹದಿಂದ ನಿನಗೆ ಪ್ರಪಂಚದ ಸೃಷ್ಟಿಯನ್ನು ಮಾಡುವ ಸಾಮರ್ಥ್ಯವುಂಟಾಗಲಿ.

೧೫೧–೧೫೨. ಎಲೈ ಬ್ರಹ್ಮನೆ! ಸಮಸ್ತ ಜೀವರಿಗೂ ನೀನು ಪಿತಾಮಹನಾಗಿರು. ಸಕಲರ ಮರ್ಯಾದೆಗಳಿಗೂ ಯೋಗ್ಯಪಾತ್ರನಾಗಿರುವೆ. ನಿನ್ನ ತಪಸ್ಸಿಗೆ ಫಲವನ್ನು ಕೊಡುವುದಕ್ಕಾಗಿ ಯಾವ ಪ್ರಣವರೂಪಸಹಿತವೂ, ಶಬ್ದಬ್ರಹ್ಮಮಯವೂ ಆದ ಲಿಂಗವು ಉದ್ಭವಿಸಿರುವುದೊ, ಅಂತಹ ಇದನ್ನು ಪೂಜಿಸುವುದರಿಂದ ಯಾವ ಮಾನವರಿಗೆ ಬ್ರಹ್ಮಪದವಿಯೂ ದುರ್ಲಭವಾಗಿರುವುದಿಲ್ಲ.

೧೫೩. ಈ ಲಿಂಗವೇ ಅಕಾರದಿಂದಲೂ, ಉಕಾರದಿಂದಲೂ, ಮಕಾರದಿಂದಲೂ ನಾದಬಿಂದುಗಳಿಂದಲೂ ಕೂಡಿದ ಓಂಕಾರನಾಮದಿಂದ ಪ್ರಖ್ಯಾತವಾಗಿರುವುದು.

ಪಂಚಾಯತನಮೀಶಾನಮಿತ್ಥಮೇತದುದೀರಿತಂ ।
ಮೋಕ್ಷಾಯ ಸರ್ವಜಂತೂನಾಮಸ್ಮಿನ್ನಾನಂದಕಾನನೇ ॥ ೧೫೪ ॥
ಸ್ನಾತ್ವಾ ಮತ್ಸ್ಯೋದರೀತೀರ್ಥೇ ವಿಲೋಕ್ಯೋಂಕಾರಮೀಶ್ವರಂ ।
ನ ಜಾತು ಜಾಯತೇ ಜಂತುರ್ಜನನೀಜಠರೇ ಕ್ವಚಿತ್ ॥ ೧೫೫ ॥
ಏತನ್ನಾದೇಶ್ವರಂ ಲಿಂಗಮೇತಲ್ಲಿಂಗಂ ಸುದುರ್ಲಭಂ ।
ರಮ್ಯೇ ಮತ್ಸ್ಯೋದರೀತೀರೇ ದೃಷ್ಟಂ ಸ್ಪೃಷ್ಟಂ ವಿಮುಕ್ತಿದಂ ॥ ೧೫೬ ॥
ಯದೇತತ್ಕಾಪಿಲಂ ಜ್ಯೋತಿರೇತಲ್ಲಿಂಗೇ ವಿಲೋಕ್ಯತೇ ।
ಅತಸ್ತು ಕಪಿಲೇಶಾಖ್ಯಮೇತಲ್ಲಿಂಗಂ ಸುದುರ್ಲಭಂ ॥ ೧೫೭ ॥
ಮತ್ಸ್ಯೋದರೀ ಯದಾ ಗಂಗಾ ಕಪಿಲೇಶ್ವರಸನ್ನಿಧೌ ।
ತದಾ ತತ್ರ ನರಃ ಸ್ನಾತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೫೮ ॥
ವರಣೋತ್ಕ್ಷಿಪ್ತಪಾನೀಯೇ ದ್ಯುನದೀತೋಯಮಿಶ್ರಿತೇ ।
ಸ್ನಾತ್ವಾ ನಾದೇಶ್ವರಂ ದೃಷ್ಟ್ವಾ ನರಃ ಕಿಮನುಶೋಚತಿ ॥ ೧೫೯ ॥

೧೫೪. ಇಂತು ಈಶ್ವರನ ಈ ಲಿಂಗವು ಪಂಚಾಯತನಲಿಂಗವೆಂದು ಕರೆಯಲ್ಪಟ್ಟು, ಈ ಆನಂದಕಾನನದಲ್ಲಿ ನೆಲಸಿ ಸಕಲ ಪ್ರಾಣಿಮಾತ್ರಗಳಿಗೂ ಸೇವಿಸುವುದರಿಂದ ಮೋಕ್ಷವನ್ನು ಕೈಗೂಡಿಸುತ್ತಿರುವುದು. ‡

೧೫೫. ಮತ್ಸ್ಯೋದರೀ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿಯಾಗಿ ಓಂಕಾರೇಶ್ವರನ ದರ್ಶನವನ್ನು ಮಾಡಿದ ಯಾವ ಮನುಷ್ಯನೇ ಆಗಲಿ ಎಂದಿಗೂ ಮತ್ತೆ ತಾಯಿಯ ಜಠರದಲ್ಲಿ ಜನ್ಮವನ್ನು ತಾಳುವುದಿಲ್ಲ.

೧೫೬. ಇದೇ ನಾದೇಶ್ವರವೆಂಬ ಲಿಂಗವು. ಮನುಷ್ಯರಿಗೆ ಅತ್ಯಂತ ದುಷ್ಪ್ರಾಪ್ಯವಾದುದು. ಮನೋಹರವಾದ ಮತ್ಸ್ಯೋದರೀತೀರ್ಥದ ತೀರದಲ್ಲಿರುವ ಇದನ್ನು ನೋಡಿ, ಮುಟ್ಟಿ, ಸೇವಿಸಿದವರಿಗೆ ಮುಕ್ತಿಯನ್ನು ಕೊಡುವುದು.

೧೫೭. ಈ ಲಿಂಗದಲ್ಲಿ ಕಪಿಲಜ್ಯೋತಿಯು ಬೆಳಗುತ್ತಿರುವುದರಿಂದ ಈ ಮೊದಲಾಗಿ ಅತ್ಯಂತ ದುರ್ಲಭವಾದ ಈ ಲಿಂಗವು ಕಪಿಲೇಶ್ವರನೆಂಬ ಹೆಸರನ್ನು ಪಡೆಯಲಿ.

೧೫೮. ಈ ಮತ್ಸ್ಯೋದರಿಯು ಯಾವಾಗ ಗಂಗೆಯೊಡನೆ ಸೇರಿಹೋಗುವುದೊ, ಆಗ ಕಪಿಲೇಶ್ವರನ ಸನ್ನಿಧಿಯಲ್ಲಿ ತೀರ್ಥಸ್ನಾನವನ್ನು ಮಾಡಿದ ಮನುಷ್ಯನು ಬ್ರಹ್ಮಹತ್ಯೆಯನ್ನೂ ಸಹ ಕಳೆದುಕೊಳ್ಳುವನು.

೧೫೯. ದೇವನದಿಯ ಜಲದಿಂದ ಕೂಡಿದುದಾಗಿ ವರಣಾನದಿಯಲ್ಲಿ ಉಕ್ಕಿ

‡ ಮೇಲೆ ಹೇಳಿದಂತೆ ಈ ಲಿಂಗದ ನಾಮವು ಅಕಾರ, ಉಕಾರ, ಮಕಾರ, ನಾದ, ಬಿಂದುಗಳಿಂದ ಕೂಡಿರುವಂತೆ ಈ ಲಿಂಗವೂ ಸಹ ಅವುಗಳಿಂದ ವಾಚ್ಯರಾದ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರ ಸಾನ್ನಿಧ್ಯದಿಂದ ಕೂಡಿದ ಈಶಾನಲಿಂಗವೆಂದು ತಿಳಿಯಬೇಕು.

ಅಷ್ಟಮ್ಯಾಂ ಚ ಚತುರ್ದಶ್ಯಾಂ ತೀರ್ಥಾನಿ ಸಹಸಾಗರೈಃ ।
ಷಷ್ಟಿಕೋಟಿಸಹಸ್ರಾಣಿ ಮತ್ಸ್ಯೋದರ್ಯಾಂ ವಿಶಂತಿ ಹಿ ॥ ೧೬೦ ॥
ಪ್ರಣವೇಶಸಮೀಪೇ ತು ಯದಾ ಗಂಗಾ ಸಮೇಷ್ಯತಿ ।
ತದಾ ಪುಣ್ಯತಮಃ ಕಾಲೋ ದೇವರ್ಷಿಪಿತೃವಲ್ಲಭಃ ॥ ೧೬೧ ॥
ತತ್ರ ಸ್ನಾನಂ ಜಪೋ ದಾನಂ ಹವನಂ ದೇವತಾರ್ಚನಂ ।
ಮತ್ಸ್ಯೋದರ್ಯಾಮಕ್ಷಯಂ ಸ್ಯಾದೋಂಕಾರೇಶ್ವರಸನ್ನಿಧೌ ॥ ೧೬೨ ॥
ಓಂಕಾರದರ್ಶನಾದೇವ ವಾಜಿಮೇಧಫಲಂ ಲಭೇತ್ ।
ತಸ್ಮಾತ್ಕಾಶ್ಯಾಂ ಪ್ರಯತ್ನೇನ ದೃಶ್ಯ ಓಂಕಾರ ಈಶ್ವರಃ ॥ ೧೬೩ ॥
ದುರ್ಲಭಂ ಮಾನವಂ ಜನ್ಮ ಚತುರ್ವರ್ಗೈಕಸಾಧನಂ ।
ಜಲಬುದ್ಬುದವತ್ತತ್ಸ್ಯಾನ್ನಾದೇಶೋ ಯೇನ ನೇಕ್ಷಿತಃ ॥ ೧೬೪ ॥
ನಿರೀಕ್ಷ್ಯ ಕಪಿಲೇಶಾನಂ ಸ್ನಾತ್ವಾ ಮತ್ಸ್ಯೋದರೀಜಲೇ ।
ಕೃತ್ವಾ ಪಿಂಡಪ್ರದಾನಾನಿ ಪಿತೄಣಾಮನೃಣೋ ಭವೇತ್ ॥ ೧೬೫ ॥

---

ಬರುವ ತೀರ್ಥದಲ್ಲಿ ಮಿಂದು ನಾದೇಶ್ವರನನ್ನು ನೋಡಿದ ಮನುಷ್ಯನು ಯಾವುದನ್ನು ತಾನೆ ಕುರಿತು ಶೋಕಪಡಬೇಕು ?

೧೬೦. ಅಷ್ಟಮಿ ಮತ್ತು ಚತುರ್ದಶಿ ತಿಥಿಗಳಲ್ಲಿ ಸಪ್ತಸಮುದ್ರಗಳೊಡನೆ ಅರುವತ್ತು ಕೋಟಿ ತೀರ್ಥಗಳು ಬ್ರಹ್ಮಾಂಡದ ಎಲ್ಲೆಡೆಗಳಿಂದಲೂ ಬಂದು ಮತ್ಸ್ಯೋದರಿಯಲ್ಲಿ ಪ್ರವೇಶಿಸುವುವು.

೧೬೧. ಯಾವಾಗ ಗಂಗಾನದಿಯು ಪ್ರಣವೇಶ್ವರನ ಸಮೀಪಕ್ಕೆ ಹರಿದು ಬರುವುದೊ, ಆ ಕಾಲವೇ ಪರಮಪುಣ್ಯಕಾಲವೆನಿಸಿ ದೇವತೆಗಳಿಗೂ, ಮಹರ್ಷಿಗಳಿಗೂ, ಪಿತೃಗಳಿಗೂ ಪ್ರೀತಿಕರವಾಗಿರುವುದು.

೧೬೨. ಆ ಕಾಲದಲ್ಲಿ ಮತ್ಸ್ಯೋದರೀ ತೀರ್ಥದಲ್ಲಿಯೂ, ಓಂಕಾರೇಶ್ವರನ ಸನ್ನಿಧಿಯಲ್ಲಿಯೂ ಮಾಡಿದ ಸ್ನಾನಗಳೂ, ಜಪಗಳೂ, ಹೋಮಗಳೂ, ದೇವಾರ್ಚನೆಗಳೂ ಅನಂತ ಪುಣ್ಯಫಲದಾಯಕಗಳಾಗುವುವು.

೧೬೩. ಓಂಕಾರೇಶ್ವರನನ್ನು ನೋಡುವುದರಿಂದಲೇ ಅಶ್ವಮೇಧಯಜ್ಞವನ್ನು ಮಾಡಿದ ಫಲವು ಲಭಿಸುವುದು. ಆದುದರಿಂದ ಕಾಶೀಕ್ಷೇತ್ರವನ್ನು ಸೇರಿದವನು ಸರ್ವಪ್ರಕಾರದಿಂದಲೂ ಓಂಕಾರೇಶ್ವರನ ದರ್ಶನವನ್ನು ತೆಗೆದುಕೊಳ್ಳಬೇಕು.

೧೬೪. ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲು ಅನುಕೂಲವಾದ ಮನುಷ್ಯಜನ್ಮವೇ ಅತ್ಯಂತ ದುರ್ಲಭವು. ಆದರೆ ಯಾವನು ನಾದೇಶ್ವರನ ದರ್ಶನವನ್ನು ಮಾಡುವುದಿಲ್ಲವೊ, ಅಂತಹ ಮನುಷ್ಯನ ಜನ್ಮವು ನೀರಿನಮೇಲಿನ ಗುಳ್ಳೆಯಂತೆ ವ್ಯರ್ಥವೇ ಸರಿ.

೧೬೫. ಕಪಿಲೇಶ್ವರನನ್ನು ನೋಡಿಕೊಂಡು, ಮತ್ಸ್ಯೋದರೀತೀರ್ಥದಲ್ಲಿ

ಕೃತ್ವಾಪಿ ಮೋಹಾತ್ಪಾಪಾನಿ ಭೂರೀಣ್ಯೇವ ಮಹಾಂತ್ಯಪಿ ।
ಕಾಶ್ಯಾಮೋಂಕಾರಮಾಲೋಕ್ಯ ಕುತಸ್ತ್ರಸ್ಯತಿ ವೈ ಯಮಾತ್ ॥ ೧೬೬ ॥
ಓಂಕಾರಯಾತ್ರಾಭಿಮುಖಂ ನರಂ ವೀಕ್ಷ್ಯ ಪಿತಾಮಹಾಃ ।
ಪರಿನೃತ್ಯಂತಿ ಮುದಿತಾಃ ಸ್ವಸಂತಾನಸಮುದ್ಭವಂ ॥ ೧೬೭ ॥
ಯಸ್ಯ ಯಸ್ಯ ಚ ವೈ ನಾಮ ಸ್ಮೃತ್ವಾ ಸ್ಮೃತ್ವಾ ನಮಸ್ಯತಿ ।
ತಂ ತಮುನ್ನಯತೇ ಪ್ರಾಜ್ಞಃ ಪಿತರಂ ಬ್ರಹ್ಮಣಃ ಪದಂ ॥ ೧೬೮ ॥
ರುದ್ರಾಣಾಂ ನಿಯುತಂ ಜಪ್ತ್ವಾ ಯತ್ಫಲಂ ಸಂಯುಗಾಪ್ಯತೇ ।
ತತ್ಫಲಂ ಲಭತೇ ನೂನಂ ಭಕ್ತ್ಯೋಂಕಾರವಿಲೋಕನಾತ್ ॥ ೧೬೯ ॥
ಕೇವಲಂ ಭೂಮಿಭಾರಾಯ ಜನ್ಮಿನೋ ಜನ್ಮ ತಸ್ಯ ವೈ ।
ಯೇನಾನಂದವನೇ ದೃಷ್ಟೋ ನೋಂಕಾರಃ ಸರ್ವಕಾಮದಃ ॥ ೧೭೦ ॥
ಏಕಮೋಂಕಾರಮಾಲೋಕ್ಯ ಸಮಸ್ತೇ ಕ್ಷೋಣಿಮಂಡಲೇ ।
ಲಿಂಗಜಾತಾನಿ ಸರ್ವಾಣಿ ದೃಷ್ಟಾನಿ ಸ್ಯುರ್ನ ಸಂಶಯಃ ॥ ೧೭೧ ॥

---

ಸ್ನಾನವನ್ನು ಮಾಡಿ ವಿಧ್ಯುಕ್ತರೀತಿಯಿಂದ ಪಿಂಡಗಳನ್ನರ್ಪಿಸಲು ಮಾನವನು ಪಿತೃಋಣದಿಂದ ಮುಕ್ತನಾಗುವನು.

೧೬೬. ಅಜ್ಞಾನ ಅಥವಾ ಮೋಹದಿಂದ ಅನೇಕಗಳೂ, ಘೋರಗಳೂ ಆದ ಪಾತಕಗಳನ್ನು ಮಾಡಿದ ಮನುಷ್ಯನೂ ಕಾಶಿಯಲ್ಲಿರುವ ಓಂಕಾರೇಶ್ವರನನ್ನು ನೋಡಿದ ಮೇಲೆ ಯಮನಿಗೇಕೆ ಭಯಪಡಬೇಕು?

೧೬೭. ತಮ್ಮ ಸಂತಾನದಲ್ಲಿ ಯಾವನೊಬ್ಬನಾದರೂ ಕಾಶಿಯಲ್ಲಿರುವ ಓಂಕಾರೇಶ್ವರನನ್ನು ನೋಡಲು ಪ್ರಯಾಣಮಾಡುವುದನ್ನು ಕಂಡು ಪಿತೃಪಿತಾಮಹರೆಲ್ಲರೂ ಸಂತೋಷಗೊಂಡು ತಮ್ಮಲೋಕದಲ್ಲಿ ಕುಣಿದಾಡುತ್ತಿರುವರು.

೧೬೮. ಬುದ್ಧಿವಂತನಾದ ಭಕ್ತನು ತನ್ನ ಪಿತೃಪಿತಾಮಹಾದಿಗಳಲ್ಲಿ ಯಾವ ಯಾವನ ಹೆಸರನ್ನು ಜ್ಞಾಪಿಸಿಕೊಂಡು ಓಂಕಾರೇಶ್ವರನಿಗೆ ನಮಸ್ಕಾರವನ್ನು ಮಾಡುವನೊ, ಅವನನ್ನು ಪಿತೃಲೋಕದಿಂದುದ್ಧರಿಸಿ ಶಾಶ್ವತವಾದ ಬ್ರಹ್ಮಲೋಕಕ್ಕೆ ಕಳುಹಿಸುತ್ತಿರುವನು.

೧೬೯. ರುದ್ರಾಧ್ಯಾಯವನ್ನು ಒಂದು ಲಕ್ಷಸಲ ಜಪಮಾಡುವುದರಿಂದ ಯಾವ ಉತ್ಕೃಷ್ಟಫಲವು ಲಭಿಸುವುದೊ, ಭಕ್ತಿಯಿಂದ ಒಮ್ಮೆ ಓಂಕಾರೇಶ್ವರನನ್ನು ನೋಡುವುದರಿಂದಲೂ ಆ ಫಲವೇ ಖಂಡಿತವಾಗಿ ಲಭಿಸುವುದು.

೧೭೦. ಆನಂದವನದಲ್ಲಿ ನೆಲಸಿ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಓಂಕಾರೇಶ್ವರನನ್ನು ಯಾವನು ನೋಡುವುದಿಲ್ಲವೊ, ಆ ಮನುಷ್ಯನ ಜನ್ಮವು ಕೇವಲ ಭೂಮಿಗೆ ಭಾರಪ್ರಾಯವಾಗಿಯೇ ಇರುವುದು.

೧೭೧. ಈ ಒಂದು ಓಂಕಾರೇಶ್ವರಲಿಂಗವನ್ನು ನೋಡಿದ ಮಾತ್ರದಿಂದ

ಪ್ರಣವೇಶಂ ಪ್ರಣಮ್ಯಾಥ ಯದ್ಯನ್ಯತ್ರ ವಿಪದ್ಯತೇ ।
ಸ್ವರ್ಗಲೋಕಮವಾಪ್ಯಾಥ ಕಾಶ್ಯಾಂ ಮುಕ್ತಿಮವಾಪ್ನುಯಾತ್ ॥ ೧೭೨ ॥
ಅಸ್ಮಿನ್ಲಿಂಗೇ ಸದಾ ಬ್ರಹ್ಮನ್ಸಾನ್ನಿಧ್ಯಾಮಿ ನಿಶ್ಚಿತಂ ।
ದಾಸ್ಯಾಮಿ ಚ ಸದಾ ಮೋಕ್ಷಮೇತಲ್ಲಿಂಗಾರ್ಚಕಾಯ ವೈ ॥ ೧೭೩ ॥
ಓಂಕಾರಂ ಸಕೃದಪ್ಯತ್ರ ನರೋ ನತ್ವಾ ಪ್ರಯತ್ನತಃ ।
ಕೃತಕೃತ್ಯೋ ಭವೇನ್ನೂನಂ ಪರಮಾನ್ಮದನುಗ್ರಹಾತ್ ॥ ೧೭೪ ॥
ಓಂಕಾರಪಶ್ಚಿಮೇ ಭಾಗೇ ತಾರತೀರ್ಥಮನುತ್ತಮಂ ।
ಕೃತೋದಕಕ್ರಿಯಸ್ತತ್ರ ನರಸ್ತರತಿ ದುರ್ಗತಿಂ ॥ ೧೭೫ ॥
ಓಂಕಾರೇಶಸ್ಯ ಯೇ ಭಕ್ತಾ ಜ್ಞೇಯಾಸ್ತೇ ನೈವ ಮಾನವಾಃ ।
ಮನುಷ್ಯಚರ್ಮಣಾ ನದ್ಧಾಸ್ತೇ ರುದ್ರಾ ಮೋಕ್ಷಗಾಮಿನಃ ॥ ೧೭೬ ॥
ಅಸ್ಯ ಲಿಂಗಸ್ಯ ಮಹಿಮಾ ನಾನ್ಯೈರತ್ರಾವಗಮ್ಯತೇ ।
ತ್ವತ್ಪುಣ್ಯೋದಯತೋ ಯಸ್ಮಾದ್ವಿಧೇಽತ್ರಾವಿರಭೂದಿದಂ ॥ ೧೭೭ ॥

---

ಸಕಲ ಭೂಮಂಡಲದಲ್ಲಿಯೂ ನೆಲಸಿರುವ ಸಮಸ್ತ ಲಿಂಗಗಳನ್ನೂ ನೋಡಿದಂತಾಗುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲವು.

೧೭೨. ಪ್ರಣವೇಶ್ವರನಿಗೆ ನಮಸ್ಕಾರವನ್ನು ಮಾಡಿದವನು ಇತರ ಸ್ಥಳಗಳಲ್ಲಿ ದೇಹವನ್ನು ಬಿಟ್ಟರೆ ಸ್ವರ್ಗಲೋಕವನ್ನು ಸೇರುವನು. ಕಾಶಿಯಲ್ಲಿಯೇ ದೇಹತ್ಯಾಗವಾದರೆ ಶಾಶ್ವತಮೋಕ್ಷವನ್ನು ಪಡೆಯುವನು.

೧೭೩. ಎಲೈ ಚತುರ್ಮುಖನೆ! ನಾನು ಈ ಲಿಂಗದಲ್ಲಿ ಯಾವಾಗಲೂ ಸನ್ನಿಹಿತನಾಗಿರುವೆನು. ಇದು ನಿಶ್ಚಯವು. ಈ ಲಿಂಗವನ್ನು ಪೂಜಿಸುವವನಿಗೆ ಸದಾ ಮೋಕ್ಷವನ್ನೂ ಕೊಡುತ್ತಿರುವೆನು.

೧೭೪. ಬಹಳ ಪ್ರಯಾಸದಿಂದಲೇ ಆಗಲಿ ಓಂಕಾರೇಶ್ವರನಿಗೆ ಒಮ್ಮೆಯಾದರೂ ಯಾವನು ನಮಸ್ಕರಿಸುವನೊ, ಅವನು ನಿಜವಾಗಿಯೂ ಸರ್ವೋತ್ತಮವಾದ ನನ್ನ ಅನುಗ್ರಹದ ಫಲವಾಗಿ ಕೃತಾರ್ಥನೆನಿಸುವನು.

೧೭೫. ಓಂಕಾರೇಶ್ವರನಿಗೆ ಪಶ್ಚಿಮದಿಕ್ಕಿನಲ್ಲಿ ಅಪ್ರತಿಮವಾದ ಓಂಕಾರೇಶ್ವರ ತೀರ್ಥವಿರುವುದು. ಅದರಲ್ಲಿ ಸ್ನಾನಸಂಧ್ಯಾದಿಗಳನ್ನು ಮಾಡಿದ ಮನುಷ್ಯನು ಎಂದಿಗೂ ದುರ್ಗತಿಯನ್ನು ಹೊಂದಲಾರನು.

೧೭೬–೧೭೭. ಯಾರು ಓಂಕಾರೇಶ್ವರನ ಭಕ್ತರೊ, ಅವರನ್ನು ಎಂದಿಗೂ ಸಾಮಾನ್ಯಮನುಷ್ಯರೆಂದು ತಿಳಿಯಬಾರದು. ಅವರು ವಸ್ತುತಃ ಮನುಷ್ಯಚರ್ಮದಿಂದಾವೃತರಾಗಿ ಮೋಕ್ಷಮಾರ್ಗದಲ್ಲಿ ಪ್ರಯಾಣಮಾಡುವ ರುದ್ರಾಂಶರೇ ಆಗಿರುವರು. ಇಲ್ಲಿ ಈ ಲಿಂಗದ ಮಹಿಮೆಯು ಬೇರೆಯಾರಿಗೂ ತಿಳಿಯಲಾಗುವುದಿಲ್ಲ. ನಿನಗೆಮಾತ್ರ ಗೋಚರವಾಗುತ್ತಿರುವುದು. ಎಲೈ ಬ್ರಹ್ಮನೆ! ನಿನ್ನ ಭಾಗ್ಯೋದಯದಿಂದಲೇ ಈ ಲಿಂಗವು ಇಲ್ಲಿ ಆವಿರ್ಭವಿಸಿರುವುದಲ್ಲವೆ.

ಏತಲ್ಲಿಂಗಪ್ರಭಾವಾಚ್ಚ ಸರ್ವಂ ಜ್ಞಾಸ್ಯತಿ ತತ್ತ್ವತಃ ।
ವಿಧೇ ವಿಧೇಹಿ ತಸ್ಮಾತ್ತ್ವಂ ಸರ್ವಮೇತಚ್ಚರಾಚರಂ ॥ ೧೭೮ ॥
ಇತಿ ದತ್ವಾ ವರಂ ತಸ್ಮೈ ಬ್ರಹ್ಮಣೇ ಪದ್ಮಸಂಭವೇ ।
ತಸ್ಮಿನ್ನೇವ ಮಹಾಲಿಂಗೇ ಶಂಭುರ್ಲೀನೋ ಬಭೂವ ಹ ॥ ೧೭೯ ॥

ಸ್ಕಂದ ಉವಾಚ:—

ಬ್ರಹ್ಮಾಪಿ ಭಜತೇಽದ್ಯಾಪಿ ತಲ್ಲಿಂಗಂ ಕಲಶೋದ್ಭವ ।
ಸ್ತುವನ್ಬ್ರಹ್ಮಸ್ತವೇನೈವ ಸ್ವಾತ್ಮನಾ ವಿಹಿತೇನ ಹಿ ॥ ೧೮೦ ॥
ಬ್ರಹ್ಮಸ್ತವಂ ಜಪನ್ಮರ್ತ್ಯಃ ಸರ್ವೈಃ ಪಾಪೈಃ ಪ್ರಮುಚ್ಯತೇ ।
ಪೂರ್ಯತೇ ಚ ಮಹಾಪುಣ್ಯೈರ್ಜ್ಞಾನಂ ಪ್ರಾಪ್ನೋತಿ ಸತ್ತಮಂ ॥ ೧೮೧ ॥
ಬ್ರಹ್ಮಸ್ತವಮಿದಂ ಜಪ್ತ್ವಾ ತ್ರಿಕಾಲಂ ಪರಿವತ್ಸರಂ ।
ಅಂತಕಾಲೇ ಭವೇಜ್ಜ್ಞಾನಂ ಯೇನ ಬಂಧಾತ್ಪ್ರಮುಚ್ಯತೇ ॥ ೧೮೨ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಓಂಕಾರಮಹಿಮಾನುವರ್ಣನಂ" ನಾಮ ತ್ರಿಸಪ್ತತಿತಮೋಽಧ್ಯಾಯಃ**

---

೧೭೮. ಈ ಲಿಂಗದ ಮಹಿಮೆಯಿಂದ ಹಿಂದಿನ ಕಲ್ಪಗಳ ವೃತ್ತಾಂತಗಳೆಲ್ಲ ವನ್ನೂ ಆಮೂಲಾಗ್ರವಾಗಿ ತಿಳಿದುಕೊಳ್ಳುವೆ. ವಿಧಿಯೆ! ಆದುದರಿಂದ ನೀನು ಚರಾಚರಾತ್ಮಕವಾದ ಸಕಲ ಬ್ರಹ್ಮಾಂಡವನ್ನು ಸೃಷ್ಟಿಮಾಡುವವನಾಗು.

೧೭೯. ಸ್ಕಂದನು ಹೇಳುತ್ತಾನೆ:—ಇಂತೆಂದು ಪದ್ಮಸಂಭವನಾದ ಬ್ರಹ್ಮ ನಿಗೆ ವರಗಳನ್ನು ಕೊಟ್ಟು ಮಹೇಶ್ವರನು ಆ ಮಹಾಲಿಂಗದಲ್ಲಿಯೇ ಲೀನನಾದನು.

೧೮೦. ಕಲಶೋದ್ಭವನೆ! ಇಂದಿಗೂ ಸಹ ಬ್ರಹ್ಮದೇವನು ತಾನೇ ರಚಿಸಿದ ಬ್ರಹ್ಮಸ್ತವವನ್ನೇ ಪಠಿಸುತ್ತ ಓಂಕಾರೇಶ್ವರಲಿಂಗವನ್ನು ನಿತ್ಯವೂ ಸೇವಿಸುತ್ತಿರು ವನು.

೧೮೧. ಈ ಬ್ರಹ್ಮಸ್ತವವನ್ನು ಜಪಿಸಿದ ಮನುಷ್ಯನು ಸಕಲ ಪಾತಕ ಗಳಿಂದಲೂ ಬಿಡುಗಡೆಯನ್ನು ಹೊಂದುವನು. ಮಹತ್ತರವಾದ ಪುಣ್ಯವನ್ನೂ ಸಂಪಾದಿಸುವನು. ಮೋಕ್ಷಕ್ಕೆ ಸಾಧಕವಾದ ಜ್ಞಾನವನ್ನೂ ಪಡೆಯುವನು.

೧೮೨. ಒಂದು ವರ್ಷದವರೆಗೂ ಪ್ರತಿನಿತ್ಯವೂ ತ್ರಿಸಂಧ್ಯೆಗಳಲ್ಲಿ ಈ ಬ್ರಹ್ಮ ಸ್ತವವನ್ನು ಯಾವನು ಜಪಿಸುವನೊ, ಅವನಿಗೆ ಅಂತ್ಯಕಾಲದಲ್ಲಿ ಸಂಸಾರಬಂಧ ವನ್ನು ನೀಗಿಸುವಂತಹ ತತ್ತ್ವಜ್ಞಾನವು ಲಭಿಸುವುದು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಓಂಕಾರಮಹಿಮಾನುವರ್ಣನ"ವೆಂಬ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಚತುಃಸಪ್ತತಿತಮೋಽಧ್ಯಾಯಃ

## ಓಂಕಾರಮಾಹಾತ್ಮ್ಯವರ್ಣನಂ

ಸ್ಕಂದ ಉವಾಚ :—

ಶೃಣು ವಾತಾಪಿಸಂಹರ್ತಃ ಕಾಶ್ಯಾಂ ಪಾತಕನಾಶಿನೀ ।
ಪದ್ಮಕಲ್ಪೇ ತು ಯಾ ವೃತ್ತಾ ದಮನಸ್ಯ ದ್ವಿಜನ್ಮನಃ ॥ ೧ ॥
ಭಾರದ್ವಾಜಸ್ಯ ತನಯೋ ದಮನೋ ನಾಮ ನಾಮತಃ ।
ಕೃತಮೌಂಜೀವಿಧಿಃ ಸೋಽಥ ವಿದ್ಯಾಜಾತಂ ಪ್ರಗೃಹ್ಯ ಚ ॥ ೨ ॥
ಸಂಸಾರಂ ದುಃಖಬಹುಲಂ ಜೀವಿತಂ ಚಾಽಪಿ ಚಂಚಲಂ ।
ವಿಜ್ಞಾಯ ದಮನೋ ವಿದ್ವಾನ್ನಿರ್ಜಗಾಮ ಗೃಹಾನ್ನಿಜಾತ್ ॥ ೩ ॥
ಕಾಂಚಿದ್ದಿಶಂ ಸಮಾಲಂಬ್ಯ ನಿರ್ವೇದಂ ಪರಮಂ ಗತಃ ।
ಪ್ರತ್ಯಾಶ್ರಮಂ ಪ್ರತಿನಗಂ ಪ್ರತ್ಯಬ್ಧಿ ಪ್ರತಿಕಾನನಂ ॥ ೪ ॥

---

## ಕನ್ನಡದ ಅನುವಾದ

### ಓಂಕಾರಮಹಾತ್ಮ್ಯವರ್ಣನ

೧. ಸ್ಕಂದನು ಹೇಳುತ್ತಾನೆ:—ವಾತಾಪಿಯನ್ನು ನಿಗ್ರಹಿಸಿದ ಓ ಮಹರ್ಷಿಯೆ! ಹಿಂದಿನ ಪದ್ಮಕಲ್ಪದಲ್ಲಿ ಕಾಶಿಯಲ್ಲಿ ನಡೆದ ದಮನನೆಂಬ ಬ್ರಾಹ್ಮಣೋತ್ತಮನ ವೃತ್ತಾಂತವನ್ನು ಹೇಳುವೆನು, ಕೇಳು. ಈ ಚರಿತ್ರೆಯು ಸಮಸ್ತ ಪಾತಕಗಳನ್ನೂ ನಾಶಮಾಡುವಂಥದು.

೨. ಭಾರದ್ವಾಜನೆಂಬ ಬ್ರಾಹ್ಮಣನಿಗೆ ಮಗನಾಗಿ ಹುಟ್ಟಿ ಈ ದಮನನು ಪ್ರಖ್ಯಾತನಾಗಿದ್ದನು. ಯಥಾಕಾಲದಲ್ಲಿ ಉಪನಯನಸಂಸ್ಕಾರವನ್ನು ಪಡೆದವನಾಗಿ ಸಕಲ ವಿದ್ಯೆಗಳನ್ನೂ ಗುರುಮುಖದಿಂದ ಅಭ್ಯಾಸಮಾಡಿದನು.

೩. ಶಾಸ್ತ್ರಾರ್ಥಗಳನ್ನು ತಿಳಿದ ಈ ದಮನನು ಸಂಸಾರವು ದುಃಖಭೂಯಿಷ್ಠವಾದುದೆಂದೂ, ಜೀವಿತವು ಚಂಚಲವಾದುದೆಂದೂ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡವನಾಗಿ ಪರಿವ್ರಾಜ್ಯವನ್ನು ಸ್ವೀಕರಿಸಿ ಮನೆಯನ್ನು ಬಿಟ್ಟು ಹೊರಟನು.

೪. ತೀವ್ರವಾದ ವೈರಾಗ್ಯವನ್ನು ಪಡೆದವನಾಗಿ ಮನಸ್ಸಿಗೆ ಬಂದ ದಿಕ್ಕಿನಲ್ಲಿಯೇ ತಿರುಗುತ್ತ ಪ್ರತಿಯೊಂದು ಆಶ್ರಮವನ್ನೂ, ಪರ್ವತವನ್ನೂ, ಸಮುದ್ರವನ್ನೂ, ಅರಣ್ಯವನ್ನೂ, ತೀರ್ಥವನ್ನೂ, ನದಿಯನ್ನೂ ಸೇವಿಸುತ್ತ ಮಹಾತಪಸ್ಸಂಪನ್ನನಾಗಿರುತ್ತಿದ್ದನು.

ಪ್ರತಿತೀರ್ಥಂ ಪ್ರತಿನದಿ ಸ ಬಭ್ರಾಮ ತಪೋಯುತಃ ।
ಯಾವಂತ್ಯಾಯತನಾನೀಹ ತಿಷ್ಠಂತಿ ಪರಿತೋ ಭುವಂ ॥ ೫ ॥
ಅಧ್ಯುವಾಸ ಸ ತಾವಂತಿ ಸಂಯತೇಂದ್ರಿಯಮಾನಸಃ ।
ಪರಂ ನ ಮನಸಃ ಸ್ಥೈರ್ಯಂ ಕ್ವಾಪಿ ಪ್ರಾಪಿ ಚ ತೇನ ವೈ ॥ ೬ ॥
ಮನೋರಥೋಪದೇಷ್ಟಾ ಚ ಕುತ್ರಚಿತ್ಕ್ವಾಪಿ ನೇಕ್ಷಿತಃ ।
ಕದಾಚಿದ್ದೈವಯೋಗಾತ್ಸ ದಮನೋ ನಾಮ ತಾಪಸಃ ॥ ೭ ॥
ರೇವಾತಟೇ ನಿರೈಕ್ಷಿಷ್ಟ ತೀರ್ಥಂ ಚಾಮರಕಂಟಕಂ ।
ಮಹದಾಯತನಂ ಪುಣ್ಯಮೋಂಕಾರಸ್ಯಾಪಿ ತತ್ರ ವೈ ॥ ೮ ॥
ದೃಷ್ಟ್ವಾ ದೃಷ್ಟಮನಾ ಆಸೀಚ್ಚೇತಸ್ಥೈರ್ಯಮವಾಪ ಹ ।
ಅಥಪಾಶುಪತಾಂಸ್ತತ್ರ ಸ ನಿರೀಕ್ಷ್ಯ ತಪೋಧನಾನ್ ॥ ೯ ॥
ವಿಭೂತಿಭೂಷಿತತನೂನ್ಕೃತಲಿಂಗಸಮರ್ಚನಾನ್ ।
ವಿಹಿತಪ್ರಾಣಯಾತ್ರಾಂಶ್ಚ ಕೃತಾಗಮವಿಚಾರಣಾನ್ ॥ ೧೦ ॥
ಸ್ವಸ್ಥೋಪವಿಷ್ಟಾನ್ ಸಗುರೋರಗ್ರತೋಽಚಲಮಾನಸಾನ್ ।
ಪ್ರಣಮ್ಯೋಪಾವಿಶತ್ತತ್ರ ತದಾಚಾರ್ಯಸ್ಯ ಸನ್ನಿಧೌ ॥ ೧೧ ॥

---

೫. ಇಂದ್ರಿಯಗಳನ್ನೂ ಮನಸ್ಸನ್ನೂ ನಿಗ್ರಹಿಸಿ ಆ ಬ್ರಾಹ್ಮಣೋತ್ತಮನು ಭೂಮಂಡಲವನ್ನಾವರಿಸಿಕೊಂಡು ಎಷ್ಟು ಶಿವಾಲಯಗಳಿರುವುವೊ, ಅವುಗಳೆಲ್ಲವನ್ನೂ ಕ್ರಮವಾಗಿ ಸೇವಿಸಿ ಎಲ್ಲ ಕ್ಷೇತ್ರಗಳಲ್ಲಿಯೂ ವಾಸಮಾಡಿದನು.

೬. ಆದರೆ ಎಲ್ಲಿಯೂ ಆತನ ಮನಸ್ಸಿಗೆ ಸಮಾಧಾನಸ್ಥಿತಿಯು ಲಭಿಸಲಿಲ್ಲ. ತನ್ನ ಮನಸ್ಸಿನ ಸಂದೇಹಗಳನ್ನು ಕಳೆಯುವ ಉಪದೇಶವನ್ನು ಮಾಡುವ ಯಾವ ಗುರುವೂ ಎಲ್ಲಿಯೂ ಕಾಣಲಿಲ್ಲ.

೭. ಬಹುಕಾಲಾನಂತರದಲ್ಲಿ ದಮನನೆಂಬ ಆ ತಾಪಸನು ದೈವಯೋಗದಿಂದ ಒಮ್ಮೆ ರೇವಾನದಿಯ ತೀರಪ್ರದೇಶದಲ್ಲಿ ಸಂಚರಿಸುತ್ತಿದ್ದನು. ಅಲ್ಲಿ ಅಮರಕಂಟಕವೆಂಬ ಉತ್ತಮ ತೀರ್ಥವನ್ನು ನೋಡಿದನು.

೮. ಆ ಕ್ಷೇತ್ರವು ಪುಣ್ಯಪ್ರದವೂ ಓಂಕಾರೇಶ್ವರನಿಗೆ ಪ್ರಿಯವಾದ ಮಹಾತೀರ್ಥವೂ ಆಗಿದ್ದಿತು. ಅದನ್ನು ಕಂಡು ಆತನು ಸಂತುಷ್ಟಾಂತರಂಗನಾದನಲ್ಲದೆ ಮನಸ್ಸಿನ ಏಕಾಗ್ರತೆಯನ್ನೂ ಪಡೆದನು.

೯–೧೧. ಅಲ್ಲಿ ಆತನು ಪಶುಪತಿವ್ರತನಿರತರೂ, ತಪೋಧರರೂ, ದೇಹಗಳನ್ನು ವಿಭೂತಿಯಿಂದಲಂಕರಿಸಿದವರೂ, ಲಿಂಗಾರ್ಚನೆಯನ್ನು ಮಾಡುತ್ತಿರುವವರೂ, ಕೇವಲ ಪ್ರಾಣಧಾರಣಕ್ಕಾಗಿಯೇ ಭಿಕ್ಷಾನ್ನವನ್ನು ಬೇಡುವವರೂ, ನಿರಂತರವೂ ವೇದಾರ್ಥಗಳನ್ನು ವಿಚಾರಮಾಡುತ್ತಿರುವವರೂ, ತಮ್ಮ ಗುರುವಿನ ಮುಂದೆ ನಿಶ್ಚಂಚಲ ಮನಸ್ಸಿನಿಂದ ಸುಖಾಸೀನರಾಗಿರುವವರೂ ಆದ ಶಿವಭಕ್ತ

ಪ್ರಬದ್ಧಹಸ್ತಯುಗಲಃ ಪ್ರಣಮನ್ನತಕಂಧರಃ ।
ಅಥ ಪಾಶುಪತಾಚಾರ್ಯೋ ಗರ್ಗೋ ನಾಮ ಮಹಾಮುನಿಃ ।
ವಾರ್ಧಕೇನ ಸಮಾಕ್ರಾಂತಸ್ತಪಸಾ ಕೃಶವಿಗ್ರಹಃ ॥ ೧೨ ॥
ಶಂಭೋರಾರಾಧನೇ ನಿಷ್ಠಃ ಶ್ರೇಷ್ಠಃ ಸರ್ವತಪಸ್ವಿಷು ॥ ೧೩ ॥
ಪಪ್ರಚ್ಛ ದಮನಂ ಚೇತಿ ಕಸ್ತ್ವಂ ಕಸ್ಮಾದಿಹಾಗತಃ ।
ತರುಣೋಽಪಿ ವಿರಕ್ತೋಽಸಿ ಕೃತಸ್ತದ್ವದ ಸತ್ತಮ ॥ ೧೪ ॥
ಇತಿ ಪ್ರಣಯಪೂರ್ವಂ ಸ ನಿಶಮ್ಯ ದಮನೋಽಬ್ರವೀತ್ ।
ಭೋ ಭೋಃ ಪಾಶುಪತಾಚಾರ್ಯ ಸರ್ವಜ್ಞಾರಾಧನಪ್ರಿಯ ॥ ೧೫ ॥
ಕಥಯಾಮಿ ಯಥಾರ್ಥಂ ತೇ ನಿಜಚೇತೋವಿಚೇಷ್ಟಿತಂ ।
ಅಹಂ ಬ್ರಾಹ್ಮಣದಾಯಾದೋ ವೇದಶಾಸ್ತ್ರಕೃತಶ್ರಮಃ ॥ ೧೬ ॥
ಸಂಸಾರಾಸಾರತಾಂ ಜ್ಞಾತ್ವಾ ವಾನಪ್ರಸ್ಥಮಶಿಶ್ರಿಯಂ ।
ಅನೇನೈವ ಶರೀರೇಣ ಮಹಾಸಿದ್ಧಿಮಭೀಪ್ಸತಾ ॥ ೧೭ ॥

---

ರನ್ನು ಕಂಡು ನಮಸ್ಕಾರವನ್ನು ಮಾಡಿ ಎರಡು ಕೈಗಳನ್ನೂ ಜೋಡಿಸಿಕೊಂಡು ವಿನಯದಿಂದ ಕತ್ತನ್ನು ಬಗ್ಗಿಸಿಕೊಂಡು ಆ ಆಚಾರ್ಯನ ಸನ್ನಿಧಾನದಲ್ಲಿ ಕುಳಿತುಕೊಂಡನು.

೧೨. ಮಾಹೇಶ್ವರವ್ರತಿಗಳಲ್ಲಿ ಆಚಾರ್ಯನಾದ ಆ ಗರ್ಗಮಹಾಮುನಿಯಾದರೊ, ವಾರ್ಧಕ್ಯದಿಂದ ಆಕ್ರಮಿತನಾಗಿದ್ದನಲ್ಲದೆ ಘೋರತಪಸ್ಸಿನಿಂದಲೂ ಕೃಶವಾದ ದೇಹವುಳ್ಳವನಾಗಿದ್ದನು.

೧೩–೧೪. ಆತನು ಯಾವಾಗಲೂ ಮಹಾದೇವನ ಪೂಜೆಯಲ್ಲಿಯೇ ನಿರತನಾಗಿರುತ್ತಿದ್ದನು. ಸಕಲ ತಪಸ್ವಿಗಳಲ್ಲಿಯೂ ಅಗ್ರೇಸರನೆನಿಸಿದ್ದನು. ಆತನು ದಮನಬ್ರಾಹ್ಮಣನನ್ನು ಕುರಿತು ಹೀಗೆ ಪ್ರಶ್ನೆಮಾಡತೊಡಗಿದನು:—"ಬ್ರಾಹ್ಮಣೋತ್ತಮನೆ! ನೀನು ಯಾರು? ಇಲ್ಲಿಗೆ ಬರಲು ಕಾರಣವೇನು? ಪ್ರಾಪಂಚಿಕ ಭೋಗಗಳನ್ನನುಭವಿಸಲನುವಾದ ಯೌವನಾವಸ್ಥೆಯಲ್ಲಿದ್ದರೂ ನೀನು ವೈರಾಗ್ಯವನ್ನು ತಳೆದಂತೆ ಕಾಣುತ್ತಿರುವೆ."

೧೫. ಇಂತೆಂದ ಆತನ ವಿಶ್ವಾಸಪೂರ್ವಕವಾದ ಮಾತುಗಳನ್ನು ಕೇಳಿ ದಮನನು ಹೇಳತೊಡಗಿದನು. "ಪೂಜ್ಯನೆ! ಶೈವಸಂಪ್ರದಾಯಾಚಾರ್ಯನೆ! ನೀನು ಸರ್ವಜ್ಞನಾದ ಮಹೇಶ್ವರನ ಆರಾಧನೆಯಲ್ಲಿಯೇ ಪ್ರೀತಿಯುಳ್ಳವನು.

೧೬. ನನ್ನ ಮನಸ್ಸಿನಲ್ಲಿ ಕಳವಳವನ್ನುಂಟುಮಾಡುತ್ತಿರುವ ಸಮಸ್ತ ವೃತ್ತಾಂತವನ್ನೂ ನಿನ್ನಲ್ಲಿ ಯಥಾರ್ಥವಾಗಿ ತಿಳಿಸುತ್ತೇನೆ. ಭಗವನ್! ನಾನೊಬ್ಬ ಬ್ರಾಹ್ಮಣವರ್ಣದವನು. ವೇದಶಾಸ್ತ್ರಗಳಲ್ಲಿ ಪರಿಶ್ರಮವನ್ನು ಹೊಂದಿರುವವನು.

೧೭. ಸಂಸಾರದ ನಿಸ್ಸಾರತೆಯನ್ನು ಕಂಡು ನಾನು ಮಹತ್ಫಲವನ್ನು

ಸ್ನಾತಂ ಬಹುಷು ತೀರ್ಥೇಷು ಮಂತ್ರಾ ಜಪ್ತಾಸ್ತು ಕೋಟಿಶಃ ।
ದೇವತಾಃ ಸೇವಿತಾ ಬಹ್ವ್ಯೋ ಹವನಂ ಚ ಕೃತಂ ಬಹು ॥ ೧೮ ॥
ಶುಶ್ರೂಷಿತಾಶ್ಚ ಗುರವೋ ಬಹವೋ ಬಹ್ವನೇಹಸಂ ।
ಮಹಾಶ್ಮಶಾನೇಷು ನಿಶಾ ಭೂಯಸ್ಯೋಽತ್ಯತಿವಾಹಿತಾಃ ॥ ೧೯ ॥
ಶಿಖರಾಣಿ ಗಿರೀಂದ್ರಾಣಾಂ ಮಯಾ ಚಾಧ್ಯುಷಿತಾನ್ಯಹೋ ।
ದಿವ್ಯೌಷಧಿಸಹಸ್ರಾಣಿ ಮಯಾ ಸಂಸಾಧಿತಾನ್ಯಪಿ ॥ ೨೦ ॥
ರಸಾಯನಾದಿ ಬಹುಶಃ ಸೇವಿತಾನಿ ಮಯಾ ಪುನಃ ।
ಮಹಾಸಾಹಸಮಾಲಂಬ್ಯ ಸಿದ್ಧಾಧ್ಯುಷಿತಕಂದರಾಃ ॥ ೨೧ ॥
ಮಯಾ ಪ್ರವಿಷ್ಟಾ ಬಹುಶಃ ಕೃತಾಂತವದನೋಪಮಾಃ ।
ತಪಶ್ಚಾಪಿ ಮಹತ್ತಪ್ತಂ ಬಹುಭಿರ್ನಿಯಮೈರ್ಯಮೈಃ ॥ ೨೨ ॥
ಪರಂ ಕಿಂಚಿತ್ಕ್ವಚಿನ್ನೈಕ್ಷಿ ಸಿದ್ಧ್ಯಂಕುರಮಪಿ ಪ್ರಭೋ ।
ಇದಾನೀಂ ತ್ವಾಮನುಪ್ರಾಪ್ಯ ಮಹೀಂ ಪರ್ಯಟಿತಾ ಮಯಾ ॥ ೨೩ ॥

---

ಸಾಧಿಸಬೇಕೆಂಬ ಅಭಿಲಾಷೆಯಿಂದ ಇದೇ ಶರೀರದಿಂದಲೇ ವಾನಪ್ರಸ್ಥಾಶ್ರಮವನ್ನು ಆಶ್ರಯಿಸಿರುವೆನು.

೧೮–೧೯. ಅನೇಕ ತೀರ್ಥಗಳಲ್ಲಿ ಸ್ನಾನಗಳನ್ನು ಮಾಡಿರುವೆನು. ಕೋಟಿ ಸಂಖ್ಯೆಯಿಂದ ಅನೇಕ ಮಂತ್ರಗಳನ್ನೂ ಜಪಿಸಿರುವೆನು. ಅಸಂಖ್ಯಾಕರಾದ ದೇವತೆಗಳನ್ನೂ ಸೇವಿಸಿರುವೆನು. ಬಹುವಾಗಿ ಹೋಮಕಾರ್ಯವನ್ನೂ ನೆರವೇರಿಸಿರುವೆನು. ಬಹು ದಿವಸಗಳವರೆಗೂ ಅನೇಕ ಗುರುಗಳ ಶುಶ್ರೂಷೆಯನ್ನೂ ಮಾಡಿರುವೆನು. ಮಹಾಶ್ಮಶಾನಗಳಲ್ಲಿ ಸಾಧನೆಗಳನ್ನು ಮಾಡುತ್ತ ಅನೇಕ ರಾತ್ರಿಗಳನ್ನೂ ಕಳೆದಿರುವೆನು.

೨೦. ಸಮಸ್ತಮಹಾಪರ್ವತಗಳ ಶಿಖರಪ್ರದೇಶಗಳನ್ನೂ ಕ್ರಮವಾಗಿ ಆಶ್ರಯಿಸಿರುವೆನು. ಸಾವಿರಾರು ದಿವ್ಯೌಷಧಿಗಳನ್ನೂ ಅವುಗಳ ಪ್ರಯೋಗಗಳನ್ನೂ ಪ್ರಯತ್ನದಿಂದ ಸಾಧಿಸಿ ಸಿದ್ಧಿಯನ್ನು ಪಡೆದಿರುವೆನು.

೨೧–೨೨. ಅಲ್ಲದೆ ಅನೇಕ ವಿಧಗಳಾದ ರಸಾಯನಗಳೂ ನನ್ನಿಂದ ಸೇವಿಸಲ್ಪಟ್ಟಿರುವುವು. ಮಹಾ ಧೈರ್ಯವನ್ನವಲಂಬಿಸಿ ಸಿದ್ಧರ ವಾಸಸ್ಥಳಗಳೂ ತೆರೆದ ಯಮನಬಾಯಿಗೆ ಸಮಾನವಾದುವುಗಳೂ ಆದ ಪರ್ವತಗುಹೆಗಳನ್ನು ಅನೇಕವೇಳೆ ಪ್ರವೇಶಮಾಡಿರುವೆನು. ಬಾಹ್ಯೇಂದ್ರಿಯ, ಅಂತರಿಂದ್ರಿಯಗಳನ್ನೂ ನಿಗ್ರಹಿಸಿ ಮಹತ್ತರವೂ ವಿವಿಧವೂ ಆದ ತಪಸ್ಸನ್ನೂ ಮಾಡಿರುವೆನು. ಗುರುವೆ! ಆದರೆ ಎಲ್ಲಿಯೂ ತಪಸ್ಸಿದ್ಧಿಯೆಂಬುದರ ಅಂಕುರಪ್ರಾದುರ್ಭಾವವನ್ನೂ ಸಹ ನಾನು ಕಂಡವನಲ್ಲವು.

೨೩. ಇಂತು ಭೂಮಿಯನ್ನೆಲ್ಲ ತಿರುಗುತ್ತ ನಿಮ್ಮ ಆಶ್ರಮವನ್ನು ಸೇರಲು

ಮನಸಃ ಸ್ಥೈರ್ಯಮಾಪನ್ನಮಿವ ಸಂಪ್ರಾಪ್ತಸಿದ್ಧಿನಾ ।
ಅವಶ್ಯಂ ತ್ವನ್ಮುಖಾಂಭೋಜಾದ್ಯದ್ವಚೋ ನಿಃಸರಿಷ್ಯತಿ ॥ ೨೪ ॥
ತೇನೈವ ಮಹತೀ ಸಿದ್ಧಿರ್ಭವಿತ್ರೀ ಮಮ ನಾನ್ಯಥಾ ।
ತದ್ಬ್ರೂಹಿ ಸೂಪದೇಶಂ ಚ ಕಥಂ ಸಿದ್ಧಿರ್ಭವೇನ್ಮಮ ॥ ೨೫ ॥
ಅನೇನೈವ ಶರೀರೇಣ ಪಾರ್ಥಿವೇನ ಪೃಥೀಯಸೀ ।
ದಮನಸ್ಯ ನಿಶಮ್ಯೇತಿ ಗರ್ಗಾಚಾರ್ಯೋ ವಚಸ್ತದಾ ॥ ೨೬ ॥
ಪ್ರತ್ಯಕ್ಷದೃಷ್ಟಂ ಪ್ರೋವಾಚ ಮಹದಾಶ್ಚರ್ಯಮುತ್ತಮಂ ।
ಸರ್ವೇಷಾಂ ಶೃಣ್ವತಾಂ ತತ್ರ ಶಿಷ್ಯಾಣಾಂ ಸ್ಥಿರಚೇತಸಾಂ ।
ಮುಮುಕ್ಷೂಣಾಂ ಧೃತವತಾಂ ಮಹಾಪಾಶುಪತಂ ವ್ರತಂ ॥ ೨೭ ॥

ಗರ್ಗ ಉವಾಚ :—

ಅನೇನೈವೇಹ ದೇಹೇನ ಯದಿ ತ್ವಂ ಸಿದ್ಧಿಕಾಮುಕಃ ।
ಶೃಣುಷ್ವಾವಹಿತೋ ಭೂತ್ವಾ ತದಾ ತೇ ಕಥಯಾಮ್ಯಹಂ ॥ ೨೮ ॥
ಅವಿಮುಕ್ತೇ ಮಹಾಕ್ಷೇತ್ರೇ ಸರ್ವಸಿದ್ಧಿಪ್ರದೇ ಸತಾಂ ।
ಧರ್ಮಾರ್ಥಕಾಮಮೋಕ್ಷಾಖ್ಯರತ್ನಾನಾಂ ಪರಮಾಕರೇ ॥ ೨೯ ॥

---

ನನಗೆ ಸಿದ್ಧಿಯನ್ನು ಪಡೆದವರಿಗೆಂತೊ ಅಂತೆಯೇ ಮನಸ್ಸಿನ ಏಕಾಗ್ರತೆಯು ಸಂಪ್ರಾಪ್ತವಾಗಿರುವುದು.

೨೪–೨೫. ಖಂಡಿತವಾಗಿಯೂ ನಿನ್ನ ಮುಖಕಮಲದಿಂದ ಯಾವ ಮಾತುಗಳು ಹೊರಡುವುವೊ, ಅವುಗಳಿಂದಲೇ ನನಗೆ ಮಹಾಸಿದ್ಧಿಯು ಲಭಿಸುವುದಲ್ಲದೆ ಬೇರೆ ಉಪಾಯವಿರಲಾರದು. ಆದುದರಿಂದ ಈ ಪಾಂಚಭೌತಿಕ ಶರೀರದಿಂದಲೇ ಕೀರ್ತಿಕರವಾದ ಸಿದ್ಧಿಯು ಹೇಗೆ ಉಂಟಾಗುವುದೆಂಬ ವಿಷಯದಲ್ಲಿ ನನಗೆ ಉತ್ತಮೋಪದೇಶವನ್ನು ಮಾಡುವವನಾಗು.''

೨೬. ದಮನನಾಡಿದ ಈ ಪ್ರಶ್ನೆಯನ್ನು ಲಾಲಿಸಿ ಗರ್ಗಾಚಾರ್ಯನು ಆಗ ತನಗೆ ಪ್ರತ್ಯಕ್ಷಾನುಭವವಿಷಯವೂ, ಉತ್ತಮೋತ್ತಮವೂ ಆದ ಮಹಾಶ್ಚರ್ಯ ವಿಷಯವನ್ನು ನಿರೂಪಿಸತೊಡಗಿದನು.

೨೭. ಮಹಾಪಾಶುಪತವ್ರತವನ್ನು ಸ್ವೀಕರಿಸಿದ ಸಕಲ ಶಿಷ್ಯರೂ ಏಕಾಗ್ರ ಮನಸ್ಕರಾಗಿ ಮೋಕ್ಷಮಾರ್ಗಾಭಿಲಾಷೆಯುಳ್ಳವರಾಗಿ ಕೇಳುತ್ತಿರಲು ಗರ್ಗಾಚಾರ್ಯನು ಹೇಳಲುಪಕ್ರಮಿಸಿದನು.

೨೮. ಗರ್ಗನು ಹೇಳುತ್ತಾನೆ:—ಈ ಶರೀರದಿಂದಲೇ ನೀನು ಸಿದ್ಧಿಯನ್ನು ಪಡೆಯಬೇಕೆಂಬ ಅಭಿಲಾಷೆಯಿರುವವನಾದರೆ ನಿನಗೊಂದು ವೃತ್ತಾಂತವನ್ನು ಹೇಳುವೆನು. ಅದನ್ನು ಸಾವಧಾನಮನಸ್ಕನಾಗಿ ಕೇಳು.

೨೯. ಭೂಮಂಡಲದಲ್ಲಿ ಅವಿಮುಕ್ತವೆಂಬ ಮಹಾಕ್ಷೇತ್ರವೊಂದಿರುವುದು.

ಸಮಾಶ್ರಿತಾನಾಂ ಜಂತೂನಾಂ ಸರ್ವೇಷಾಂ ಸರ್ವಕರ್ಮಣಾಂ ।
ಶಲಭಾನಾಂ ಪ್ರದೀಪಾಭೇ ತಮಃಸ್ತೋಮಮಹಾದ್ವಿಷಿ ॥ ೩೦ ॥
ಕರ್ಮಭೂರುಹದಾವಾಗ್ನೌ ಸಂಸಾರಬ್ಧೌರ್ವಶೋಚಿಷಿ ।
ನಿರ್ವಾಣಲಕ್ಷ್ಮೀಕ್ಷೀರಾಬ್ಧೌ ಸುಖಸಂಕೇತಸದ್ಮನಿ ॥ ೩೧ ॥
ದೀರ್ಘನಿದ್ರಾಪ್ರಸುಪ್ತಾನಾಂ ಪರಮೋದ್ಬೋಧದಾಯಿನಿ ।
ಯಾತಾಯಾತಶ್ರಮಾಪನ್ನಪ್ರಾಣಿಮಾರ್ಗಮಹೀರುಹಿ ॥ ೩೨ ॥
ಅನೇಕಜನ್ಮಜನಿತಮಹಾಪಾಪಾದ್ರಿವಜ್ರಿಣಿ ।
ನಾಮೋಚ್ಚಾರಕೃತಾಂ ಪುಂಸಾಂ ಮಹಾಶ್ರೇಯೋವಿಧಾಯಿನಿ ॥ ೩೩ ॥
ವಿಶ್ವೇಶಿತುಃ ಪರೇ ಧಾಮ್ನಿ ಸೀಮ್ನಿ ಸ್ವರ್ಗಾಪವರ್ಗಯೋಃ ।
ಸ್ವರ್ಧುನೀಲೋಲಕಲ್ಲೋಲ ನಿತ್ಯಕ್ಷಾಲಿತಭೂತಲೇ ॥ ೩೪ ॥
ಏವಂವಿಧೇ ಮಹಾಕ್ಷೇತ್ರೇ ಸರ್ವದುಃಖೌಘಹಾರಿಣಿ ।
ಪ್ರತ್ಯಕ್ಷಂ ಮಮ ಯದ್ವೃತ್ತಂ ತದ್ಬ್ರವೀಮಿ ಮಹಾಮತೇ ॥ ೩೫ ॥

---

ಅದು ಸತ್ಪುರುಷರಿಗೆ ಸಕಲ ಸಿದ್ಧಿಗಳನ್ನು ಕೊಡುವುದೂ, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧ ರತ್ನಗಳ ಮಹಾನಿಧಿಯೂ ಆಗಿರುವುದು.

೩೦. ಆ ಕ್ಷೇತ್ರವು ತನ್ನನ್ನಾಶ್ರಯಿಸಿದ ಸಕಲ ಪ್ರಾಣಿಗಳ ಕರ್ಮವಾಸನೆಗಳೆಂಬ ಸಕಲ ಶಲಭಗಳನ್ನು ನಾಶಮಾಡುವ ಪ್ರದೀಪದಂತಿರುವುದು. ಅಜ್ಞಾನವೆಂಬ ತಮೋರಾಶಿಯನ್ನು ಕಳೆಯುವ ಮಹಾತೇಜಸ್ಸಾಗಿರುವುದು.

೩೧–೩೨. ಕರ್ಮವೆಂಬ ಮಹಾವೃಕ್ಷಕ್ಕೆ ಕಾಳ್ಗಿಚ್ಚಾಗಿರುವುದು. ಸಂಸಾರವೆಂಬ ಸಮುದ್ರವನ್ನು ಶೋಷಿಸುವ ಬಡಬಾಗ್ನಿಯಾಗಿರುವುದು. ಮೋಕ್ಷಲಕ್ಷ್ಮಿಗೆ ನಿವಾಸವಾದ ಕ್ಷೀರಸಮುದ್ರವೆನಿಸಿರುವುದು. ಸಕಲ ಸೌಖ್ಯಗಳಿಗೂ ಸಂಕೇತಗೃಹವಾಗಿರುವುದು. ಸ್ವರೂಪಾಜ್ಞಾನವೆಂಬ ಮಹಾನಿದ್ರೆಯಿಂದ ಅಭಿಭೂತರಾದವರನ್ನು ಉತ್ತಮಜ್ಞಾನದಿಂದ ಎಚ್ಚರಗೊಳಿಸುತ್ತಿರುವುದು. ಜನನಮರಣರೂಪ ಸಂಸಾರದಲ್ಲಿ ಬಳಲುತ್ತಿರುವ ಪ್ರಾಣಿಗಳಿಗೆ ಮಾರ್ಗಮಧ್ಯದಲ್ಲಿ ನೆರಳನ್ನು ಕೊಡುವ ವೃಕ್ಷವಾಗಿರುವುದು.

೩೩. ಅನೇಕಜನ್ಮಗಳಲ್ಲಿ ಸಂಪಾದಿಸಿದ ಪಾತಕಗಳ ರಾಶಿಯೆಂಬ ಪರ್ವತವನ್ನು ಭೇದಿಸುವ ವಜ್ರಾಯುಧವಾಗಿರುವುದು. ತನ್ನ ನಾಮಮಾತ್ರವನ್ನುಚ್ಚರಿಸುವ ಮನುಷ್ಯರಿಗೂ ಮಹಾಶ್ರೇಯಸ್ಸನ್ನುಂಟುಮಾಡುತ್ತಿರುವುದು.

೩೪. ವಿಶ್ವೇಶ್ವರನಿಗೆ ಪರಮಪ್ರಿಯವಾದ ನಿವಾಸವಾಗಿರುವುದು. ಸ್ವರ್ಗಮೋಕ್ಷಗಳೆರಡಕ್ಕೂ ಸೀಮಾಸ್ಥಾನವಾಗಿರುವುದು. ದೇವನದಿಯ ಮನೋಹರವಾದ ತರಂಗಗಳಿಂದ ತೊಳೆಯಲ್ಪಟ್ಟ ಪ್ರದೇಶವಾಗಿರುವುದು.

೩೫. ಎಲೈ ಮಹಾಪ್ರಾಜ್ಞನೆ! ಸಮಸ್ತ ದುಃಖಸಮೂಗಳಗನ್ನೂ ನಾಶ

ಯತ್ರ ಕಾಲಭಯಂ ನಾಸ್ತಿ ಯತ್ರ ನಾಸ್ತ್ಯೇನಸೋ ಭಯಂ ।
ತತ್ಕ್ಷೇತ್ರಮಹಿಮಾನಂ ಕಃ ಸಂಯಗ್ವರ್ಣಯಿತುಂ ಕ್ಷಮಃ ॥ ೩೬ ॥
ತೀರ್ಥಾನಿ ಯಾನಿ ಲೋಕೇಸ್ಮಿಞ್ಜಂತೂನಾಮಘಹಾನ್ಯಹೋ ।
ತಾನಿ ಸರ್ವಾಣಿ ಶುದ್ಧ್ಯರ್ಥಂ ಕಾಶೀಮಾಯಾಂತಿ ನಿತ್ಯಶಃ ॥ ೩೭ ॥
ಅಪಿ ಕಾಶ್ಯಾಂ ವಸೇದ್ಯಸ್ತು ಸರ್ವಾಶೀ ಸರ್ವವಿಕ್ರಯೀ ।
ಸ ಯಾಂ ಗತಿಂ ಲಭೇನ್ಮರ್ತ್ಯೋ ಯಜ್ಞೈರ್ದಾನೈರ್ನ ಸೋಽನ್ಯತಃ॥ ೩೮ ॥
ರಾಗಬೀಜಸಮುದ್ಭೂತಃ ಸಂಸಾರವಿಟಪೋ ಮಹಾನ್ ।
ದೀರ್ಘಸ್ವಾಪಕುಠಾರೇಣ ಛಿನ್ನಃ ಕಾಶ್ಯಾಂ ನ ವರ್ಧತೇ ॥ ೩೯ ॥
ಸರ್ವೇಷಾಮೂಷರಾಣಾಂ ತು ಕಾಶೀ ಪರಮ ಊಷರಃ ।
ವಪ್ತುರ್ಬೀಜಮಿದಂ ತಸ್ಮಿನ್ನುಪ್ತಂ ನೈವ ಪ್ರರೋಹತಿ ॥ ೪೦ ॥

---

ಗೊಳಿಸುವ ಇಂತಹ ಮಾಹಾತ್ಮ್ಯವುಳ್ಳ ಮಹಾಕ್ಷೇತ್ರದಲ್ಲಿ ನನಗೆ ಪ್ರತ್ಯಕ್ಷವಾಗಿ ನಡೆದ ವೃತ್ತಾಂತವೊಂದನ್ನು ನಿನಗೆ ತಿಳಿಸುವೆನು.

೩೬. ಎಲ್ಲಿ ಕಾಲಮೃತ್ಯುವಿನ ಭಯವೂ ಇಲ್ಲವೋ, ಎಲ್ಲಿ ಮಹಾಪಾತಕಗಳ ಭಯವೂ ಇರುವುದಿಲ್ಲವೋ, ಅಂತಹ ಕ್ಷೇತ್ರದ ಮಹಾಮಹಿಮೆಯನ್ನು ವರ್ಣಿಸಲು ಯಾವನು ತಾನೆ ಸಮರ್ಥನಾಗಿರುವನು?

೩೭. ಈ ಸಮಸ್ತಭೂಮಂಡಲದಲ್ಲಿಯೂ ಪ್ರಾಣಿಗಳ ಪಾಪಗಳನ್ನು ಕಳೆಯುವ ಎಷ್ಟು ತೀರ್ಥಗಳಿರುವುವೋ, ಅವುಗಳೆಲ್ಲವೂ ತಾವೇ ಪರಿಶುದ್ಧಗಳಾಗಲು ನಿತ್ಯವೂ ಕಾಶೀಕ್ಷೇತ್ರಕ್ಕೆ ಬರುತ್ತಿರುವುವು.

೩೮. ಕಾಶಿಯಲ್ಲಿ ವಾಸಮಾಡುವ ಮನುಷ್ಯನು ವಿಧಿನಿಷೇಧರಹಿತನಾಗಿ ಸರ್ವಭಕ್ಷಕನೂ ಸರ್ವವಿಕ್ರಯಿಯೂ ಆದರೂ ಯಾವ ಸದ್ಗತಿಯನ್ನು ಪಡೆಯುವನೊ, ಅದನ್ನು ಇತರ ಕ್ಷೇತ್ರಗಳಲ್ಲಿ ವಿಧ್ಯುಕ್ತರೀತಿಯಿಂದ ಮಾಡಿದ ಅನೇಕ ಯಜ್ಞಗಳಿಂದಲೂ ದಾನಗಳಿಂದಲೂ ಸಹ ಪಡೆಯುವುದಿಲ್ಲ.

೩೯. ಅನುರಾಗವೆಂಬ ಬೀಜದಿಂದಲೇ ಸಂಸಾರವೆಂಬ ಮಹಾವೃಕ್ಷವು ಉದ್ಭವಿಸಿರುವುದು. ಕಾಶೀಕ್ಷೇತ್ರದಲ್ಲಿ ದೀರ್ಘನಿದ್ರೆಯೆಂಬ (ಮರಣವೆಂಬ ಅಥವ ಅಸಂಪ್ರಜ್ಞಾತಸಮಾಧಿಯೆಂಬ) ಕೊಡಲಿಯಿಂದ ಆ ವೃಕ್ಷವನ್ನು ಕಡಿದುಹಾಕಲು ಅದು ಪುನಃ ಮೊಳೆಯುವುದಿಲ್ಲ.

೪೦. ಭೂಮಂಡಲದ ಸಮಸ್ತ ಊಷರ ಕ್ಷೇತ್ರಗಳಲ್ಲಿಯೂ ಕಾಶಿಯು ಅನುಪಮವಾದ ಊಷರಪ್ರದೇಶವಾಗಿರುವುದು. ಇಲ್ಲಿ ನೆಡಲ್ಪಟ್ಟ ಬೀಜವು ಎಂದಿಗೂ ವೃಕ್ಷವಾಗಿ ಬೆಳೆಯುವುದಿಲ್ಲ. *

---

* ಇತರ ಸ್ಥಳಗಳಲ್ಲಿ ಮಾಡಿದ ಬೀಜರೂಪವಾದ ಕರ್ಮವು ಸುಖದುಃಖರೂಪವಾದ ಸಂಸಾರವೆಂಬ ವೃಕ್ಷಕ್ಕೆ ಕಾರಣವಾಗುವುದೆಂದೂ, ಕಾಶಿಯಲ್ಲಿ ಮಾಡಿದ ಕರ್ಮವು ಮಾತ್ರ ಊಷರ ಕ್ಷೇತ್ರದಲ್ಲಿ ನೆಟ್ಟ ಬೀಜದಂತೆ ತಾನೇ ನಾಶವಾಗುವುದೆಂದೂ ಭಾವವು.

ಸ್ಮರಿಷ್ಯಂತೀಹ ಯೇ ಕಾಶೀಮವಶ್ಯಂ ತೇಽಪಿ ಸಾಧವಃ ।
ತೇಽಪ್ಯಘೌಘವಿನಿರ್ಮುಕ್ತಾ ಯಾಸ್ಯಂತಿ ಗತಿಮುತ್ತಮಂ ॥ ೪೧ ॥
ವಿಭೂತಿಃ ಸರ್ವಲೋಕಾನಾಂ ಸತ್ಯಾದೀನಾಂ ಸುಭಂಗುರಾ ।
ಅಭಂಗುರಾವಿಮುಕ್ತಸ್ಯ ಸಾತು ಲಭ್ಯಾ ಶಿವಾಜ್ಞಯಾ ॥ ೪೨ ॥
ಕೃಮಿಕೀಟಪತಂಗಾನಾಮವಿಮುಕ್ತೇ ತನುತ್ಯಜಾಂ ।
ವಿಭೂತಿರ್ದೃಶ್ಯತೇ ಯಾ ಸಾ ಕ್ವಾಸ್ತಿ ಬ್ರಹ್ಮಾಂಡಮಂಡಲೇ ॥ ೪೩ ॥
ವಾರಾಣಸೀ ಯದಾ ಪ್ರಾಪ್ತಾ ಕದಾಚಿತ್ಕಾಲಪರ್ಯಯಾತ್ ।
ಸ ಉಪಾಯೋ ವಿಧಾತವ್ಯೋ ಯೇನ ನೋ ನಿಷ್ಕ್ರಮೋ ಬಹಿಃ ॥ ೪೪ ॥
ಪೂರ್ವತೋ ಮಣಿಕರ್ಣೀಶೋ ಬ್ರಹ್ಮೇಶೋ ದಕ್ಷಿಣೇ ಸ್ಥಿತಃ ।
ಪಶ್ಚಿಮೇ ಚೈವ ಗೋಕರ್ಣೋ ಭಾರಭೂತಸ್ತಥೋತ್ತರೇ ॥ ೪೫ ॥
ಇತ್ಯೇತದುತ್ತಮಂ ಕ್ಷೇತ್ರಮವಿಮುಕ್ತೇ ಮಹಾಫಲಂ ।
ಮಣಿಕರ್ಣೀಹ್ರದೇ ಸ್ನಾತ್ವಾ ದೃಷ್ಟ್ವಾ ವಿಶ್ವೇಶ್ವರಂ ವಿಭುಂ ॥ ೪೬ ॥

---

೪೧. ಈ ಲೋಕದಲ್ಲಿ ಯಾರು ಕಾಶೀಕ್ಷೇತ್ರವನ್ನು ಸ್ಮರಿಸಿಕೊಳ್ಳುವರೊ, ಅವರೂ ಸಾಧುಪುರುಷರೆಂದೇ ತಿಳಿಯಬೇಕು. ಅವರೂ ಕಾಶೀಕ್ಷೇತ್ರವಾಸಿಗಳಂತೆಯೇ ಪಾಪರಾಶಿಗಳಿಂದ ಬಿಡುಗಡೆಯನ್ನುಹೊಂದಿ ಉತ್ತಮಗತಿಯನ್ನು ಪಡೆಯುವರು.

೪೨. ಸತ್ಯಲೋಕವೇ ಮೊದಲಾದ ಸಮಸ್ತಲೋಕಗಳ ಐಶ್ವರ್ಯವೂ ಕ್ಷಣಭಂಗುರುವಾಗಿರುವುದು. ಆದರೆ ಅವಿಮುಕ್ತಕ್ಷೇತ್ರದ ಸೇವೆಯಿಂದ ಲಭಿಸುವ ಐಶ್ವರ್ಯವು ಶಾಶ್ವತವಾದುದು. ಅದು ಮನುಷ್ಯರಿಗೆ ಮಹೇಶ್ವರನ ಅನುಜ್ಞೆಯಿಂದಲ್ಲದೆ ಲಭಿಸಲಾರದು.

೪೩. ಅವಿಮುಕ್ತಕ್ಷೇತ್ರದಲ್ಲಿ ದೇಹವನ್ನು ತ್ಯಜಿಸುವ ಕ್ರಿಮಿಗಳು, ಕೀಟಗಳು, ಪತಂಗಗಳು ಮುಂತಾದುವುಗಳಿಗೂ ಯಾವ ಪರಮೈಶ್ವರ್ಯವು ಲಭಿಸುವುದೊ, ಅದು ಸಮಸ್ತ ಬ್ರಹ್ಮಾಂಡದಲ್ಲಿಯೂ ಬೇರೆಲ್ಲಿ ಲಭಿಸುವುದು ?

೪೪. ಕಾಲಕರ್ಮಗಳ ಸಂಯೋಗದ ಫಲವಾಗಿ ಯಾವನಾದರೂ ಒಮ್ಮೆ ವಾರಾಣಸೀಕ್ಷೇತ್ರವನ್ನು ಸೇರಿದರೆ ಪುನಃ ಅಲ್ಲಿಂದ ಬಿಟ್ಟುಹೋಗದಿರುವಂತೆ ಯಾವ ಉಪಾಯದಿಂದಲಾದರೂ ಸಾಧನೆಯನ್ನು ಮಾಡಿಕೊಳ್ಳಬೇಕು.

೪೫. ಅವಿಮುಕ್ತಕ್ಷೇತ್ರಕ್ಕೆ ಪೂರ್ವದಲ್ಲಿ ಮಣಿಕರ್ಣಿಕೇಶ್ವರನೂ, ದಕ್ಷಿಣದಲ್ಲಿ ಬ್ರಹ್ಮೇಶ್ವರನೂ, ಪಶ್ಚಿಮದಲ್ಲಿ ಗೋಕರ್ಣೇಶ್ವರನೂ, ಉತ್ತರದಲ್ಲಿ ಭಾರಭೂತೇಶ್ವರನೂ ನೆಲಸಿರುವರು.

೪೬–೪೭. ಅವಿಮುಕ್ತಕ್ಷೇತ್ರದಲ್ಲಿ ಈ ನಾಲ್ಕು ದೇವತೆಗಳ ಮಧ್ಯದಲ್ಲಿರುವ ಪ್ರದೇಶವು ಸರ್ವೋತ್ತಮವೂ ಮಹಾಫಲದಾಯಕವೂ ಆಗಿರುವುದು. ಮಣಿಕರ್ಣಿಕಾಘಟ್ಟದಲ್ಲಿ ಸ್ನಾನವನ್ನು ಮಾಡಿ, ವಿಶ್ವೇಶ್ವರನ ದರ್ಶನವನ್ನು ತೆಗೆದು

ಕ್ಷೇತ್ರಂ ಪ್ರದಕ್ಷಿಣೀಕೃತ್ಯ ರಾಜಸೂಯಫಲಂ ಲಭೇತ್ ।
ತತ್ರ ಶ್ರಾದ್ಧಪ್ರದಾತುಶ್ಚ ಮುಚ್ಯಂತೇ ಪ್ರಪಿತಾಮಹಾಃ ॥ ೪೭ ॥
ಅವಿಮುಕ್ತಸಮಂ ಕ್ಷೇತ್ರಮಪಿ ಬ್ರಹ್ಮಾಂಡಗೋಲಕೇ ।
ನ ವಿದ್ಯತೇ ಕ್ವಚಿತ್ಸತ್ಯಂ ಸತ್ಯಂ ಸಾಧಕಸಿದ್ಧಿದಂ ॥ ೪೮ ॥
ರಕ್ಷಂತಿ ಸತತಂ ಕ್ಷೇತ್ರಂ ಯತ್ರ ಪಾಶಾಸಿಪಾಣಯಃ ।
ಮಹಾಪಾರಿಷದಾ ಉಗ್ರಾಃ ಕ್ರೂರೇಭ್ಯೋಽಕ್ರೂರಬುದ್ಧಯಃ ॥ ೪೯ ॥
ಪ್ರಾಗ್ದ್ವಾರಮಟ್ಟಹಾಸಶ್ಚ ಗಣಕೋಟಿಪರೀವೃತಃ ।
ರಕ್ಷೇದಹರ್ನಿಶಂ ಕ್ಷೇತ್ರಂ ದುರ್ವೃತ್ತೇಭ್ಯೋ ವಿಭೀಷಣಃ ॥ ೫೦ ॥
ತಥೈವ ಭೂತಧಾತ್ರೀಶಃ ಕ್ಷೇತ್ರದಕ್ಷಿಣರಕ್ಷಕಃ ।
ಗೋಕರ್ಣಃ ಪಶ್ಚಿಮದ್ವಾರಂ ಪಾಶಿಕೋಟಿಗಣಾವೃತಃ ॥ ೫೧ ॥
ಉದಗ್ದ್ವಾರಂ ತಥಾ ರಕ್ಷೇದ್ಘಂಟಾಕರ್ಣೋ ಮಹಾಗಣಃ ।
ಐಶಂ ಕೋಣಂ ಛಾಗವಕ್ತ್ರೋ ಭೀಷಣೋ ವಹ್ನಿದಿಗ್ದಲಂ ॥ ೫೨ ॥

---

ಕೊಂಡು. ಕ್ಷೇತ್ರಪ್ರದಕ್ಷಿಣೆಯನ್ನು ನೆರವೇರಿಸಿದ ಮನುಷ್ಯನು ರಾಜಸೂಯ ಯಜ್ಞವನ್ನು ಮಾಡಿದ ಫಲವನ್ನು ಪಡೆಯುವನು. ಅಲ್ಲಿ ಶ್ರಾದ್ಧಕರ್ಮವನ್ನು ಮಾಡಿದವನ ಪ್ರಪಿತಾಮಹರೆಲ್ಲರೂ ಮೋಕ್ಷಭಾಗಿಗಳಾಗುವರು.

೪೮. ಸಕಲಬ್ರಹ್ಮಾಂಡದಲ್ಲಿಯೂ ಸಾಧಕರಿಗೆ ಸಿದ್ಧಿಯನ್ನು ಸುಲಭವಾಗಿ ಕೈಗೂಡಿಸುವುದರಲ್ಲಿ ಅವಿಮುಕ್ತಕ್ಷೇತ್ರಕ್ಕೆ ಸಮಾನವಾದುದು ಮತ್ತೊಂದು ಎಲ್ಲಿಯೂ ಇರುವುದಿಲ್ಲ. ಇದು ಸತ್ಯವೆಂದು ಪ್ರಮಾಣವಾಗಿ ಹೇಳುವೆನು.

೪೯. ಶಿವನ ಪರಿವಾರದ ಮಹಾಗಣಗಳೆಲ್ಲರೂ ಸೌಮ್ಯಬುದ್ಧಿಯುಳ್ಳವರಾಗಿದ್ದರೂ ಕ್ರೂರಕರ್ಮಿಗಳಿಗೆ ಮಾತ್ರ ಭಯಂಕರರಾಗಿ ಕಾಣುತ್ತ ಪಾಶ, ಖಡ್ಗ, ಮುಂತಾದ ಆಯುಧಗಳನ್ನು ಕೈಗಳಲ್ಲಿ ಹಿಡಿದು ಈ ಕ್ಷೇತ್ರವನ್ನು ರಕ್ಷಿಸುತ್ತಿರುವರು.

೫೦. ಒಂದುಕೋಟಿ ಗಣಗಳಿಂದ ಪರಿವಾರಿತನಾಗಿ ದುಷ್ಟರಿಗೆ ಭಯಕರನಾದ ಅಟ್ಟಹಾಸನೆಂಬುವನು ಪೂರ್ವದ್ವಾರದಲ್ಲಿ ನಿಂತು ಅಹೋರಾತ್ರಗಳಲ್ಲಿಯೂ ಬಹಳ ಎಚ್ಚರಿಕೆಯಿಂದ ಕ್ಷೇತ್ರವನ್ನು ರಕ್ಷಿಸುತ್ತಿರುವನು.

೫೧. ಹಾಗೆಯೇ ಭೂತಧಾತ್ರೀಶ್ವರನು ಕ್ಷೇತ್ರದ ದಕ್ಷಿಣಭಾಗವನ್ನು ರಕ್ಷಿಸುತ್ತಿರುವನು. ಗೋಕರ್ಣೇಶ್ವರನು ಕೋಟಿಗಣಾವೃತನಾಗಿ ಪಶ್ಚಿಮದ್ವಾರವನ್ನು ಕಾಪಾಡುತ್ತಿರುವನು.

೫೨. ಉತ್ತರದಿಕ್ಕಿನ ಮಹಾದ್ವಾರವನ್ನು ಘಂಟಾಕರ್ಣನೆಂಬ ಮಹಾಗಣನಾಯಕನು ರಕ್ಷಿಸುತ್ತಿರುವನು. ಈಶಾನ್ಯಮೂಲೆಯನ್ನು ಛಾಗವಕ್ತ್ರನೂ ಆಗ್ನೇಯ ಮೂಲೆಯ ಗಣಗಳನ್ನು ಭೀಷಣನೂ ಪಾಲಿಸುತ್ತಿರುವರು.

ರಕ್ಷಃಕಾಷ್ಠಂ ಶಂಕುಕರ್ಣೋ ದ್ರುಮಿಚಂಡೋ ಮರುದ್ದಿಶಂ ।
ಇತ್ಥಂ ಕ್ಷೇತ್ರಂ ತದಾ ಪಾಂತಿ ಗಣಾ ಏತೇಽತಿಭಾಸ್ವರಾಃ ॥ ೫೩ ॥
ಕಾಲಾಕ್ಷೋ ರಣಭದ್ರಸ್ತು ಕೌಲೇಯಃ ಕಾಲಕಂಪನಃ ।
ಏತೇ ಪೂರ್ವೇಣ ರಕ್ಷಂತಿ ಗಂಗಾಪಾರೇ ಸ್ಥಿತಾ ಗಣಾಃ ॥ ೫೪ ॥
ವೀರಭದ್ರೋ ನಭಶ್ಚೈವ ಕರ್ಮಮಾಲಿಪ್ತವಿಗ್ರಹಃ ।
ಸ್ಥೂಲಕರ್ಣೋ ಮಹಾಬಾಹುರಸಿಪಾರೇ ವ್ಯವಸ್ಥಿತಾಃ ॥ ೫೫ ॥
ವಿಶಾಲಾಕ್ಷೋ ಮಹಾಭೀಮಃ ಕುಂಡೋದರಮಹೋದರೌ ।
ರಕ್ಷಂತಿ ಪಶ್ಚಿಮದ್ವಾರಂ ದೇಹಲೀದೇಶಸಂಸ್ಥಿತಾಃ ॥ ೫೬ ॥
ನಂದಿಸೇನಶ್ಚ ಪಂಚಾಲಃ ಖರಪಾದಃ ಕರಂಟಕಃ ।
ಆನಂದೋ ಗೋಪಕೋ ಬಭ್ರೂ ರಕ್ಷಂತಿ ವರಣಾತಟೇ ॥ ೫೭ ॥
ತಸ್ಮಿನ್ಕ್ಷೇತ್ರೇ ಮಹಾಪುಣ್ಯೇ ಲಿಂಗಮೋಂಕಾರಸಂಜ್ಞಕಂ ।
ತತ್ರ ಸಿದ್ಧಿಂ ಪರಾಂ ಪ್ರಾಪ್ತಾ ದೇಹೇನಾನೇನ ಸಾಧಕಾಃ ॥ ೫೮ ॥
ಕಪಿಲಶ್ಚೈವ ಸಾವರ್ಣಿಃ ಶ್ರೀಕಂಠಃ ಪಿಂಗಲೋಽಂಶುಮಾನ್ ।
ಏತೇ ಪಾಶುಪತಾಃ ಸಿದ್ಧಾಸ್ತಲ್ಲಿಂಗಾರಾಧನೇನ ಹಿ ॥ ೫೯ ॥

---

೫೩. ನೈರ್ಋತ್ಯಮೂಲೆಯನ್ನು ಶಂಕುಕರ್ಣನೂ, ವಾಯುವ್ಯದಿಕ್ಕನ್ನು ದ್ರುಮಿಚಂಡನೂ ಪಾಲಿಸುತ್ತಿರುವರು. ಇಂತು ತೇಜಸ್ಸಂಪನ್ನರಾದ ಈ ಗಣನಾಯಕರು ಈ ಕ್ಷೇತ್ರವನ್ನು ಅಹರ್ನಿಶವೂ ಪಾಲಿಸುತ್ತಿರುವರು.

೫೪. ಕಾಲಾಕ್ಷ, ರಣಭದ್ರ, ಕಾಲೇಯ, ಕಾಲಕಂಪನ—ಈ ನಾಲ್ಕು ಗಣಪತಿಗಳೂ ಗಂಗಾನದಿಯ ದಡದಲ್ಲಿ ನೆಲಸಿ ಪೂರ್ವದಿಂದ ರಕ್ಷಿಸುತ್ತಿರುವರು.

೫೫. ವೀರಭದ್ರನೂ, ಕೆಸರನ್ನು ಮೈಗೆ ಬಳಿದುಕೊಂಡಿರುವ ನಭನೂ, ಸ್ಥೂಲಕರ್ಣನೂ, ಮಹಾಬಾಹುವೂ—ಈ ನಾಲ್ವರೂ ಅಸೀನದಿಯ ತೀರದಲ್ಲಿ ನೆಲಸಿರುವರು.

೫೬. ವಿಶಾಲಾಕ್ಷ, ಮಹಾಭೀಮ, ಕುಂಡೋದರ ಮತ್ತು ಮಹೋದರ ರೆಂಬುವರು ದ್ವಾರಪ್ರದೇಶವನ್ನಾಕ್ರಮಿಸಿಕೊಂಡು ಪಶ್ಚಿಮದಿಕ್ಕನ್ನು ಕಾಪಾಡುತ್ತಿರುವರು.

೫೭. ನಂದಿಸೇನ, ಪಂಚಾಲ, ಖರಪಾದ, ಕರಂಟಕ, ಆನಂದ, ಗೋಪಕ ಮತ್ತು ಬಭ್ರು—ಇವರು ವರಣಾನದಿಯ ದಡದಲ್ಲಿ ನೆಲಸಿ ರಕ್ಷಿಸುತ್ತಿರುವರು.

೫೮. ಮಹಾಪುಣ್ಯತಮವಾದ ಈ ಕ್ಷೇತ್ರದಲ್ಲಿಯೇ ಓಂಕಾರೇಶ್ವರವೆಂಬ ಹೆಸರಿನ ಲಿಂಗವಿರುವುದು. ಅಲ್ಲಿ ಅನೇಕ ಸಾಧಕರು ಸ್ಥೂಲಶರೀರಗಳಿಂದಲೇ ಸರ್ವೋತ್ತಮವಾದ ಸಿದ್ಧಿಯನ್ನು ಪಡೆದಿರುವರು.

೫೯. ಕಪಿಲ, ಸಾವರ್ಣಿ, ಶ್ರೀಕಂಠ, ಪಿಂಗಲಿ, ಅಂಶುಮಂತ— ಎಂಬ

ಏಕದಾ ತಸ್ಯ ಲಿಂಗಸ್ಯ ಕೃತ್ವಾ ಪಂಚಾಪಿ ಪೂಜನಂ ।
ನೃತ್ಯಂತಃ ಸಹುಡುತ್ಕಾರಂ ತಸ್ಮಿಲ್ಲಿಂಗೇ ಲಯಂ ಯಯುಃ ॥ ೬೦ ॥
ಅನ್ಯಚ್ಚ ತೇ ಪ್ರವಕ್ಷ್ಯಾಮಿ ತತ್ರ ಯದ್ವೃತ್ತಮದ್ಭುತಂ ।
ನಿಶಾಮಯ ಮಹಾಬುದ್ಧೇ ದಮನ ದ್ವಿಜಸತ್ತಮ ॥ ೬೧ ॥
ಏಕಾ ಭೇಕೀ ಮುನೇ ತತ್ರ ಚರಂತೀ ಲಿಂಗಸನ್ನಿಧೌ ।
ಪ್ರದಕ್ಷಿಣಂ ಸದಾ ಕುರ್ಯಾನ್ನಿರ್ಮಾಲ್ಯಾಕ್ಷತಭಕ್ಷಿಣೀ ॥ ೬೨ ॥
ಸಾತತ್ರ ಮೃತ್ಯುಂ ನ ಪ್ರಾಪ ಶಿವನಿರ್ಮಾಲ್ಯಭಕ್ಷಣಾತ್ ।
ಕ್ಷೇತ್ರಾದನ್ಯತ್ರ ಮರಣಂ ಜಾತಂ ತಸ್ಯಾಸ್ತದೇನಸಃ ॥ ೬೩ ॥
ವರಂ ವಿಷಮಪಿ ಪ್ರಾಶ್ಯಂ ಶಿವಸ್ವಂ ನೈವ ಭಕ್ಷಯೇತ್ ।
ವಿಷಮೇಕಾಕಿನಂ ಹಂತಿ ಶಿವಸ್ವಂ ಪುತ್ರಪೌತ್ರಕಂ ॥ ೬೪ ॥
ಅವಸ್ವಪರಿಪುಷ್ಟಾಂಗಾಃ ಸ್ಪರ್ಶನೀಯಾ ನ ಸಾಧುಭಿಃ ।
ತೇನ ಕರ್ಮವಿಪಾಕೇನ ತತಸ್ತೇ ರೌರವೌಕಸಃ ॥ ೬೫ ॥

---

ಈ ಶಿವಭಕ್ತರೆಲ್ಲರೂ ಆ ಲಿಂಗದ ಆರಾಧನೆಯನ್ನು ಮಾಡಿದುದರಿಂದಲೇ ಸಿದ್ಧಿಗಳನ್ನು ಪಡೆದಿರುವರು.

೬೦. ಒಂದೊಮ್ಮೆ ಈ ಐದು ಜನರೂ ಓಂಕಾರೇಶ್ವರಲಿಂಗವನ್ನರ್ಚಿಸುತ್ತ ಹುಡುತ್ಕಾರಗಳನ್ನು ಮಾಡಿಕೊಂಡು ನರ್ತನಸೇವೆಯನ್ನೆಸಗುತ್ತಿರುವಂತೆಯೇ ಆ ಲಿಂಗದಲ್ಲಿ ಐಕ್ಯವನ್ನು ಪಡೆದರು.

೬೧. ಮಹಾಬುದ್ಧಿಯೂ, ಬ್ರಾಹ್ಮಣಶ್ರೇಷ್ಠನೂ ಆದ ದಮನನೆ! ಅಲ್ಲಿ ನಡೆದ ಮತ್ತೊಂದು ಆಶ್ಚರ್ಯಕರವಾದ ಪ್ರಸಂಗವನ್ನು ನಿನಗೆ ವಿವರಿಸುವೆನು. ಏಕಾಗ್ರಚಿತ್ತದಿಂದ ಕೇಳುವವನಾಗು.

೬೨. ಹಿಂದಿನಕಾಲದಲ್ಲಿ ಒಂದು ಹೆಣ್ಣು ಕಪ್ಪೆಯು ಆ ಲಿಂಗದ ಸನ್ನಿಧಿಯಲ್ಲಿಯೇ ಸಂಚರಿಸುತ್ತ ನಿತ್ಯವೂ ಪೂಜಿಸಲ್ಪಟ್ಟ ನಿರ್ಮಾಲ್ಯರೂಪವಾದ ಅಕ್ಷತೆಯ ಕಾಳುಗಳನ್ನು ತಿನ್ನುತ್ತ ಪ್ರದಕ್ಷಿಣೆಯನ್ನು ಮಾಡುತ್ತಿದ್ದಿತು.

೬೩–೬೪. ಓಂಕಾರೇಶ್ವರಲಿಂಗದ ನಿರ್ಮಾಲ್ಯವನ್ನು ಸೇವಿಸಿದ ಪುಣ್ಯದಿಂದ ಕಪ್ಪೆಯು ಆ ಕ್ಷೇತ್ರದಲ್ಲಿ ಮರಣವನ್ನು ಹೊಂದಲಿಲ್ಲ. ಆದರೆ ಶಿವಮಾಹಾತ್ಮ್ಯ ಜ್ಞಾನವಿಲ್ಲದೆ ಭಕ್ಷಣಮಾಡಿದ ಪಾಪದ ಫಲವಾಗಿ ಅದಕ್ಕೆ ಬೇರೆ ಸ್ಥಳದಲ್ಲಿ ಮರಣವಾಯಿತು. ವಿಷವನ್ನು ಪ್ರಾಶನಮಾಡುವುದಾದರೂ ಉತ್ತಮವು. ಶಿವನಿರ್ಮಾಲ್ಯವನ್ನು ಮಾತ್ರ ಎಂದಿಗೂ ಸೇವಿಸಬಾರದು. ವಿಷವು ಒಬ್ಬನನ್ನು ಮಾತ್ರ ಕೊಲ್ಲುವುದು. ಶಿವಸ್ವವಾದರೋ ಪುತ್ರಪೌತ್ರಸಹಿತವಾಗಿ ಕುಲವನ್ನೇ ನಾಶಗೊಳಿಸುವುದು.

೬೫. ಶಿವಸ್ವವನ್ನು ತಿಂದು ಶರೀರಪೋಷಣೆಮಾಡಿದವನನ್ನು ಸಾಧುಗಳು

ಕಶ್ಚಿತ್ಕಾಕಃ ಸಮಾಲೋಕ್ಯ ಮುಂಡಿಕೀಂ ತಾಮಿತಸ್ತತಃ ।
ಪ್ರೋಪ್ಲೂಯಮಾನಾಮಾದಾಯ ಚಂಚ್ವಾ ಕ್ಷೇತ್ರಾದ್ಬಹಿರ್ಗತಃ ॥ ೬೬ ॥
ವರ್ಷಾಭಿಃ ತೇನ ಸಾ ಕ್ಷಿಪ್ತಾ ಕಾಕೇನ ಕ್ಷೇತ್ರಬಾಹ್ಯತಃ ।
ಅಥ ಸಾ ಕಾಲತೋ ಭೇಕೀ ತತ್ರೈವ ಕ್ಷೇತ್ರಸತ್ತಮೇ ॥ ೬೭ ॥
ಪ್ರದಕ್ಷಿಣೀಕರಣತೋ ಲಿಂಗಸ್ಯ ಸ್ಪರ್ಶನಾದಪಿ ।
ಪುಣ್ಯಾ ಪುಣ್ಯವತೀ ಜಾತಾ ಕನ್ಯಾ ಪುಷ್ಪಬಟೋರ್ಗೃಹೇ ॥ ೬೮ ॥
ಶುಭಾವಯಮಸಂಸ್ಥಾನಾ ಶುಭಲಕ್ಷಣಲಕ್ಷಿತಾ ।
ಪರಂ ಗೃಧ್ರಮುಖೀ ಜಾತಾ ನಿರ್ಮಾಲ್ಯಾಕ್ಷತಭಕ್ಷಣಾತ್ ॥ ೬೯ ॥
ಸಂಯಗ್ಗೀತರಹಸ್ಯಜ್ಞಾ ನಿತರಾಂ ಮಧುರಸ್ವರಾ ।
ಸಪ್ತಸ್ವರಾಸ್ತ್ರಯೋಗ್ರಾಮಾ ಮೂರ್ಛನಾಸ್ತ್ವೇಕವಿಂಶತಿ ॥ ೭೦ ॥
ತಾನಾ ಏಕೋನಪಂಚಾಶತ್ತಾಲಾ ಏಕೋತ್ತರಂ ಶತಂ ।
ರಾಗಾಃ ಷಡೇವ ತೇಷಾಂ ತು ಪಂಚ ಪಂಚಾಪಿ ಚಾಂಗನಾಃ ॥ ೭೧ ॥

---

ಮುಟ್ಟಲೂ ಬಾರದು. ಆ ಕರ್ಮದ ಫಲವಾಗಿ ದೇಹಪಾತಾನಂತರದಲ್ಲಿ ಅವರು ರೌರವನರಕವಾಸವನ್ನು ಅನುಭವಿಸುವರು.

೬೬. ಆ ಕಪ್ಪೆಯು ಇಲ್ಲಿಂದಲ್ಲಿಗೆ ಹಾರಾಡುತ್ತಿದ್ದುದನ್ನು ಒಂದಾನೊಂದು ಕಾಗೆಯು ನಿರೀಕ್ಷಿಸಿ ಅದನ್ನು ಬಾಯಲ್ಲಿ ಕಚ್ಚಿಕೊಂಡು ಕ್ಷೇತ್ರದಿಂದ ಹೊರಕ್ಕೆ ಹಾರಿಬಂದಿತು.

೬೭–೬೮. ಇಂತು ಆ ಹೆಣ್ಣುಕಪ್ಪೆಯು ಕ್ಷೇತ್ರದ ಹೊರಗೆ ಕಾಗೆಯ ಕಾರಣ ದಿಂದ ಬೀಳಿಸಲ್ಪಟ್ಟಿತು. ಬಳಿಕ ಯಥಾಕಾಲದಲ್ಲಿ ಮರಣವನ್ನು ಹೊಂದಿ ಆ ಹೆಣ್ಣು ಕಪ್ಪೆಯು ಓಂಕಾರೇಶ್ವರಲಿಂಗದ ಪ್ರದಕ್ಷಿಣೆ ಮತ್ತು ಸ್ಪರ್ಶಗಳ ಪುಣ್ಯ ಪ್ರಭಾವದಿಂದ ಸರ್ವಾಂಗ ಸುಂದರಿಯಾಗಿ ಅದೇ ಕ್ಷೇತ್ರೋತ್ತಮದಲ್ಲಿ ಪುಷ್ಪವಟು ವೆಂಬಾತನ ಮನೆಯಲ್ಲಿ ಆತನಿಗೆ ಮಗಳಾಗಿ ಜನಿಸಿತು.

೬೯–೭೨. ಆ ಕನ್ಯಕೆಯು ಸುಂದರಾವಯವಗಳಿಗೆ ನೆಲೆವನೆಯೂ, ಸಮಸ್ತ ಶುಭಲಕ್ಷಣಗಳಿಂದೊಡಗೂಡಿದವಳೂ ಆಗಿದ್ದಳು. ಆದರೆ ಶಿವನಿರ್ಮಾಲ್ಯ ಭಕ್ಷಣದ ಫಲವಾಗಿ ಗೃಧ್ರ (ಹದ್ದಿನ) ಮುಖವನ್ನು ಪಡೆದಿದ್ದಳು. ಅವಳು ಸಂಗೀತಶಾಸ್ತ್ರದ ರಹಸ್ಯಗಳನ್ನೆಲ್ಲ ಅರಿತವಳಾಗಿಯೂ ಅತ್ಯಂತ ಮಧುರವಾದ ಕಂಠವುಳ್ಳವಳಾಗಿಯೂ ಇದ್ದಳು. ಏಳು ಸ್ವರಗಳು, ಮೂರು ಗ್ರಾಮಗಳು, ಇಪ್ಪತ್ತೊಂದು ಮೂರ್ಛನಾಸ್ಥಾನಗಳು, ನಲವತ್ತೊಂಬತ್ತು ತಾನಗಳು, ಒಂದು ನೂರ ಒಂದು ತಾಳಗಳು, ಶಾಸ್ತ್ರೋಕ್ತಗಳಾಗಿರುವುವು. ರಾಗಗಳಿರು ವುದು ಆರು. ಅವುಗಳಲ್ಲಿ ಒಂದೊಂದಕ್ಕೂ ಐದು ರಾಗಿಣಿಯರಿರುವರು. ಈ ಆರುರಾಗಗಳೂ ಮೂವತ್ತು ರಾಗಿಣಿಗಳೂ ರಸಿಕರಿಗೆ ಸಂತೋಷವನ್ನುಂಟು

ಷಡ್ತ್ರಿಂಶದ್ರಾಗರಾಗಿಣ್ಯಃ ಇತಿ ರಾಗಿಮುದಾವಹಾಃ ।
ದೇಶಕಾಲವಿಭೇದೇನ ಪಂಚಷಷ್ಟಿಸ್ತಥಾಪರಾಃ ॥ ೭೨ ॥
ಯಾವಂತ ಏವ ತಾಲಾಃಸ್ಯೂ ರಾಗಾಸ್ತಾವಂತ ಏವ ಹಿ ।
ಇತಿ ಗೀತೋಪನಿಷದಾ ಪ್ರತ್ಯಹಂ ಸಾ ಶುಭವ್ರತಾ ॥ ೭೩ ॥

---

ಮಾಡುತ್ತಿರುವುವು. ಮತ್ತೆ ಕೆಲವರು ದೇಶಕಾಲಗಳ ಭೇದವನ್ನನುಸರಿಸಿ ಅರುವತ್ತೈದು ಬೇರೆ ರಾಗಗಳಿರುವುವೆಂದು ಹೇಳುವರು. ಆದುದರಿಂದ ತಾಳ ಭೇದಗಳೆಷ್ಟಿರುವುವೊ, ರಾಗಗಳೂ ಅಷ್ಟೇ ಇರುವುವೆಂದು ತಿಳಿಯಬೇಕು. ‡

೭೩. ಇಂತೆಂಬ ಸಂಗೀತಶಾಸ್ತ್ರದ ತತ್ತ್ವವನ್ನು ತಿಳಿದುಕೊಂಡು ಮಾಧವಿ

‡ "ಶ್ರುತಿಭ್ಯಃ ಸ್ಯುಃ ಸ್ವರಾಃ ಷಡ್ಜರ್ಷಭಗಾಂಧಾರಮಧ್ಯಮಾಃ ।
ಪಂಚಮೋ ಧೈವತಶ್ಚಾಥ ನಿಷಾದ ಇತಿ ಸಪ್ತ ತೇ ।
ತೇಷಾಂ ಸಂಜ್ಞಾ ಸರಿಗಮಪಧನೀತ್ಯಪರಾ ಮತಾ ।"

ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ ಮತ್ತು ಧೈವತಗಳೇ ಏಳು ಸ್ವರಗಳು. ಅವುಗಳಿಗೆ ಸ,ರಿ,ಗ,ಮ,ಪ,ಧ,ನಿ ಎಂಬಿವು ಸಂಜ್ಞಾಕ್ಷರಗಳು.

ಷಡ್ಜಗ್ರಾಮ, ಮಧ್ಯಮಗ್ರಾಮ ಮತ್ತು ಗಾಂಧಾರಗ್ರಾಮಗಳೇ ಮೂರು ಗ್ರಾಮಗಳು.

"ಷಡ್ಜೇ ತೂತ್ತರಮಂದ್ರಾ ಸ್ಯಾದ್ರಜನೀ ಚೋತ್ತರಾಯತಾ ।
ಶುದ್ಧಷಡ್ಜಾ ಮತ್ಸರಿತಾ ಅಶ್ವಕ್ರಾಂತಾಭಿರುದ್ಗತಾ ।"

ಷಡ್ಜಗ್ರಾಮದಲ್ಲಿ ಉತ್ತರಮಂದ್ರಾ, ರಜನೀ, ಉತ್ತರಾಯತಾ, ಶುದ್ಧಷಡ್ಜಾ, ಮತ್ಸರಿತಾ, ಅಶ್ವಕ್ರಾಂತಾ, ಉತ್ತರಾಯತಾ ಎಂಬುದಾಗಿ ಏಳು ಮೂರ್ಛನಗಳು.

"ಮಧ್ಯಮೇ ಸ್ಯಾತ್ತು ಸೌವೀರೀ ಹಾರಿಣಾಶ್ವಾ ತತಃಪರಂ ।
ಸ್ಯಾತ್ಕಾಲೋಪನತಾ ಶುದ್ಧಮಧ್ಯಮಾ ಗೀಶ್ಚ ಪೌರವೀ"

ಮಧ್ಯಮಗ್ರಾಮದಲ್ಲಿ ಸೌವೀರೀ, ಹಾರಿಣಾ, ಅಶ್ವಾ, ಕಾಲೋಪನತಾ, ಶುದ್ಧಮಧ್ಯಮಾ, ಗೀತ, ಪೌರವೀ ಎಂಬುದಾಗಿ ಮೂರ್ಛನಗಳು.

"ನಂದಾ ವಿಶಾಲಾ ಸುಮುಖೀ ಚಿತ್ರಾ ಚಿತ್ರಾವತೀ ಸುಖಾ ।
ಆಲಾಪಾ ಚೇತಿ ಗಾಂಧಾರಗ್ರಾಮೇ ಸ್ಯುಃ ಸಪ್ತಮೂರ್ಛನಾಃ" ।

ಗಾಂಧಾರಗ್ರಾಮದಲ್ಲಿ ನಂದಾ, ವಿಶಾಲಾ, ಸುಮುಖೀ, ಚಿತ್ರಾ, ಚಿತ್ರಾವತೀ, ಸುಖಾ, ಆಲಾಪಾ ಎಂಬುದಾಗಿ ಏಳು ಮೂರ್ಛನಗಳು. ಒಟ್ಟಿನಲ್ಲಿ ಇಪ್ಪತ್ತೊಂದು ಮೂರ್ಛನಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುವು

ತಾನಗಳು :— ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ವಾಜಪೇಯ, ಷೋಡಶೀ, ಪುಂಡರೀಕ, ಅಶ್ವಮೇಧ, ರಾಜಸೂಯಗಳು ಷಡ್ಜರಹಿತಗಳಾದ ಏಳುತಾನಗಳು.

ಇದರಂತೆಯೇ ಒಂದೊಂದು ಸ್ವರದಿಂದ ಹೀನಗಳಾದ ಏಳೇಳು ತಾನಗಳಿರುವುದರಿಂದ ಒಟ್ಟು ನಲವತ್ತೊಂಬತ್ತು ತಾನಗಳಿರುವುವು.

ತಾಳಗಳೂ ಧ್ರುವ, ಶ್ಯಾಮ, ಸನ್ನಿಪಾತಗಳೇ ಮೊದಲಾಗಿ ನೂರೊಂದು ಬಗೆಯಾಗಿರುವುವು

"ಶ್ರೀರಾಗೋಽಥ ವಸಂತಶ್ಚ ಪಂಚಮೋ ಭೈರವಸ್ತಥಾ
ಮೇಘರಾಗಶ್ಚ ವಿಜ್ಞೇಯಃ ಷಷ್ಠೋ ಜಟುಲರಾಯಣಃ ॥"

ಶ್ರೀರಾಗ, ವಸಂತ, ಪಂಚಮ, ಭೈರವ, ಮೇಘರಾಗ, ಜಟುಲರಾಯಣ ಎಂದು ರಾಗಗಳು ಆರು : ಇವುಗಳಲ್ಲಿ ಒಂದೊಂದಕ್ಕೂ ಐದು ರಾಗಿಣಿಯರಿರುವರು.

ಇವುಗಳಲ್ಲದೆ ದೇಶಕಾಲ ಭೇದಗಳಿಗನುಗುಣವಾಗಿ ಬೇರೆ ಬೇರೆ ಹೆಸರುಗಳಿಂದ ಮಾಳವ, ತೋಡಿ, ವಸಂತ, ಧನ್ಯಾಸಿ, ದೇಶೀ, ಬಂಗಾಲ ಮುಂತಾದ ಅರುವತ್ತೈದು ರಾಗಗಳೂ ಇರುವುವು.

ಮಾಧವೀ ಮಧುರಾಲಾಪಾ ಸದೋಂಕಾರಂ ಸಮರ್ಚಯೇತ್ ।
ಪ್ರಾಪ್ಯಾಪ್ಯನರ್ಘ್ಯತಾರುಣ್ಯಂ ಸಾತು ಪುಷ್ಪಬಟೋಃ ಸುತಾ ॥ ೭೪ ॥
ಪ್ರಾಗ್ಜನ್ಮವಸನಾಯೋಗಾದೋಂಕಾರಂ ಬ್ರಹ್ಮಮಂಸ್ತ ವೈ ।
ಸ್ವಭಾವಚಂಚಲಂ ಚೇತಸ್ತಸ್ಯಾಸ್ತಲ್ಲಿಂಗಸೇವನಾತ್ ॥ ೭೫ ॥
ದಮನ ಸ್ಥೈರ್ಯಮಗಮದ್ಯೋಗೇನೇವ ಮಹಾತ್ಮನಃ ।
ನ ದಿನಾ ಬಾಧಯಾಂಚಕ್ರೇ ಕ್ಷುತ್ತೃಣ್ನಿದ್ರಾ ಕ್ಷಪಾಸು ತಾಂ ॥ ೭೬ ॥
ಅತಂದ್ರಿತಮನಾ ಆಸೀತ್ಸಾ ತಲ್ಲಿಂಗನಿರೀಕ್ಷಣೇ ।
ಅಕ್ಷ್ಣೋರ್ನಿಮೇಷಾ ಯಾವಂತಸ್ತಸ್ಯಾ ಆಸೀದ್ದಿವಾನಿಶಂ ॥ ೭೭ ॥
ತಾವತ್ಕಾಲಸ್ತಯಾ ಸಾಧ್ವ್ಯಾ ಮಹಾನ್ವಿಘ್ನೋಽನುಮೀಯತೇ ।
ನಿಮೇಷಾಂತರಿತಃ ಕಾಲೋ ಯೋ ಯೋ ವ್ಯರ್ಥೋ ಗತೋ ಮಮ ।
ಲಿಂಗಾನವೇಕ್ಷಣಾತ್ತತ್ರ ಪ್ರಾಯಶ್ಚಿತ್ತಂ ಕಥಂ ಭವೇತ್ ॥ ೭೮ ॥
ಇತಿ ಸಂಚಿಂತಯಂತ್ಯೇವ ಸೇವಾಂ ತತ್ಯಾಜ ನೋಂಕೃತೇಃ ।
ಜಲಾಭಿಲಾಷಿಣೀ ಸಾ ತು ಲಿಂಗನಾಮಾಮೃತಂ ಪಿಬೇತ್ ॥ ೭೯ ॥

---

ಯೆಂಬ ಹೆಸರಿನ ಆ ಕನ್ಯೆಯು ಉತ್ತಮವ್ರತವನ್ನು ಕೈಕೊಂಡು ಮನೋಹರ ಗೀತಗಳಿಂದ ಪ್ರತಿನಿತ್ಯವೂ ಓಂಕಾರೇಶ್ವರನ ಪೂಜೆಯನ್ನು ಮಾಡುತ್ತಿದ್ದಳು.

೭೪. ಪುಷ್ಪವಟುವಿನ ಮಗಳಾದ ಆಕೆಯು ಅನ್ಯಾದೃಶವಾದ ಯೌವನವನ್ನು ಹೊಂದಿದವಳಾದರೂ ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯದ ವಾಸನಾವಿಶೇಷದಿಂದ ಓಕಾಂರೇಶ್ವರನನ್ನೇ ಹೆಚ್ಚಿನ ದೈವವೆಂಬುದಾಗಿ ನಿಶ್ಚಯಿಸಿದ್ದಳು.

೭೫. ಅಯ್ಯಾ ದಮನಬ್ರಾಹ್ಮಣನೆ! ಸ್ತ್ರೀಯರ ಸ್ವಭಾವವನ್ನನುಸರಿಸಿ ಆಕೆಯ ಮನಸ್ಸು ಚಂಚಲವಾಗಿದ್ದರೂ ಆ ಲಿಂಗದ ಸಂಸೇವನೆಯಿಂದ ಯೋಗಾಭ್ಯಾಸದ ಸಿದ್ಧಿಯನ್ನು ಪಡೆದ ಮಹಾತ್ಮನ ಮನಸ್ಸಿನಂತೆ ಸ್ಥೈರ್ಯವನ್ನು ಪಡೆಯಿತು.

೭೬. ಹಗಲಿನಲ್ಲಿ ಹಸಿವು ಬಾಯಾರಿಕೆಗಳು ಆಕೆಯನ್ನು ಬಾಧಿಸುತ್ತಿರಲಿಲ್ಲ. ರಾತ್ರಿಗಳಲ್ಲಿ ನಿದ್ರೆಯು ಆವರಿಸುತ್ತಿರಲಿಲ್ಲ. ಆಕೆಯು ನಿರಂತರವೂ ಆ ಲಿಂಗದ ದರ್ಶನದಲ್ಲಿಯೇ ಜಾಗರೂಕವಾದ ಮನಸ್ಸುಳ್ಳವಳಾಗಿದ್ದಳು.

೭೭. ರಾತ್ರಿಹಗಲುಗಳಲ್ಲಿ ಎಷ್ಟುಕಾಲವು ಕಣ್ಣಿನ ರೆಪ್ಪೆಗಳ ಹೊಡೆತದಿಂದ ಲಿಂಗವು ಕಾಣದಂತಾಗುವುದೊ, ಆ ಕಾಲವನ್ನೂ ಸಹ ಆ ಮಹಾಸಾಧ್ವಿಯು ಮಹಾವಿಘ್ನವೆಂದೇ ತಿಳಿಯುತ್ತಿದ್ದಳು.

೭೮. ಕಣ್ಣುಗಳನ್ನು ಬಡಿಯುವ ಅವಸರದಲ್ಲಿ ಯಾವ ಯಾವ ಕಾಲವು ಓಂಕಾರೇಶ್ವರನ ದರ್ಶನವಿಲ್ಲದೆ ವ್ಯರ್ಥವಾಗಿ ಕಳೆದುಹೋಯಿತೊ, ಅದಕ್ಕೆ ತಕ್ಕ ಪ್ರಾಯಶ್ಚಿತ್ತವು ಹೇಗೆ ಮಾಡಿಕೊಳ್ಳಲಾದೀತು ?

೭೯. ಇಂತೆಂದು ಚಿಂತಿಸುತ್ತಲೇ ಇದ್ದಳಾದರೂ ಆಕೆಯು ಓಂಕಾರಲಿಂಗದ

ನಾನ್ಯದ್ದಿದೃಕ್ಷಿಣೀ ತಸ್ಯಾ ಅಕ್ಷಿಣೀ ಶೃತಿಗೇ ಅಪಿ ।
ವಿಹಾಯ ಲಿಂಗಮೋಂಕಾರಂ ಹೃದಾಕಾಶಸ್ಥಿತಂ ಸತಾಂ ॥ ೮೦ ॥
ತಸ್ಯಾಃ ಶಬ್ದಗ್ರಹೌ ನಾನ್ಯಶಬ್ದಗ್ರಹಣತತ್ಪರೌ ।
ಅತೀವ ನಿಪುಣೌ ಜಾತೌ ತತ್ಸನ್ಮಾಲ್ಯಕೃತೌ ಕರೌ ॥ ೮೧ ॥
ನಾನ್ಯತ್ರ ಚರಣೌ ತಸ್ಯಾಶ್ಚರತಃ ಸುಖವಾಂಛಯಾ ।
ತ್ಯಕ್ತ್ವೋಂಕಾರಾಜಿರಕ್ಷೋಣೀಂ ಕ್ಷ್ಮಾಣಾಂ ನಿರ್ವಾಣಪದ್ಮಯಾ ॥ ೮೨ ॥
ಓಂಕಾರಂ ಪರಮಂ ಸಾರಂ ಪರಂ ಬ್ರಹ್ಮಪ್ರಕಾಶಕಂ ।
ಶಬ್ದಬ್ರಹ್ಮ ತ್ರಯೀರೂಪಂ ನಾದಬಿಂದುಕಲಾಲಯಂ ॥ ೮೩ ॥
ಸದಕ್ಷರಂ ಚಾದಿರೂಪಂ ವಿಶ್ವರೂಪಂ ಪರಾವರಂ ।
ವರಂ ವರೇಣ್ಯಂ ವರದಂ ಶಾಶ್ವತಂ ಶಾಂತಮೀಶ್ವರಂ ॥ ೮೪ ॥

---

ಸೇವೆಯನ್ನು ಮಾತ್ರ ತ್ಯಜಿಸಲಿಲ್ಲ. ಬಾಯಾರಿಕೆಯಾದ ಸಮಯಗಳಲ್ಲಿ ಲಿಂಗದ ದಿವ್ಯನಾಮದಿಂದ ಅಭಿಮಂತ್ರಿಸಿದ ನೀರನ್ನು ಮಾತ್ರ ಕುಡಿಯುತ್ತಿದ್ದಳು.

೮೦. ಸತ್ಪುರುಷರ ಹೃದಯಾಕಾಶಗಳಲ್ಲಿ ಬೆಳಗುತ್ತಿರುವ ಆ ಓಂಕಾರೇಶ್ವರ ಲಿಂಗವನ್ನುಳಿದು ಆಕೆಯ ಆಕರ್ಣಾಂತಗಳಾದ ಸುಂದರನೇತ್ರಗಳು ಮತ್ತೊಂದನ್ನು ನೋಡಲೆಳಸುತ್ತಿರಲಿಲ್ಲ.

೮೧. ಆಕೆಯ ಕಿವಿಗಳೂ ಇತರ ಶಬ್ದಗಳನ್ನು ಕೇಳುವ ಸಾಮರ್ಥ್ಯವನ್ನೇ ಕಳೆದುಕೊಂಡಂತೆ ಆ ಓಂಕಾರೇಶ್ವರನ ಸತ್ಕಥಾಲಾಪಗಳನ್ನು ಕೇಳುವುದರಲ್ಲಿಯೇ ತತ್ಪರಗಳಾಗಿದ್ದುವು. ಆ ಲಿಂಗದ ಅಲಂಕಾರಕ್ಕಾಗಿ ಉತ್ತಮ ಮಾಲೆಗಳನ್ನು ಮಾಡುವುದರಲ್ಲಿಯೇ ಆಕೆಯ ಕೈಗಳು ಅತ್ಯಂತ ನೈಪುಣ್ಯವನ್ನು ಪಡೆದಿದ್ದುವು.

೮೨. ಸುಖಾಭಿಲಾಷೆಯಿಂದ ಆಕೆಯ ಪಾದಗಳು ದೇವಾಲಯವನ್ನು ಬಿಟ್ಟು ಹೊರಗೆ ಓಡಾಡುತ್ತಿರಲಿಲ್ಲ. ಮೋಕ್ಷಲಕ್ಷ್ಮಿಗೆ ಅಧಿಷ್ಠಾನಭೂಮಿಯಾದ ಓಂಕಾರೇಶ್ವರ ದೇವಸ್ಥಾನದ ಪ್ರಾಂಗಣವನ್ನೆಂದಿಗೂ ಬಿಡುತ್ತಿರಲಿಲ್ಲ.

೮೩. ಓಂಕಾರೇಶ್ವರಲಿಂಗವಾದರೋ, ಸಕಲರಿಂದಲೂ ಸ್ತುತಿಸಲ್ಪಟ್ಟುದಾಗಿ, ಬ್ರಹ್ಮಾಂಡದ ಸಾರವೆನಿಸಿ, ಸರ್ವೋತ್ತಮವೂ, ಪರಮಾತ್ಮಪ್ರಕಾಶಕವೂ, ವೇದರಾಶಿ ಸ್ವರೂಪವಾದ ಶಬ್ದಬ್ರಹ್ಮವೂ, ನಾದಬಿಂದುಕಲಾಶ್ರಯವೂ ಆಗಿರುವುದು.

೮೪. ಸದೈಕರೂಪವೂ, ಕೂಟಸ್ಥಚೈತನ್ಯವೂ, ಸೃಷ್ಟಿಯ ಆದಿಕಾರಣವೂ, ಬ್ರಹ್ಮಾಂಡರೂಪವೂ, ಕಾರ್ಯಕಾರಣಭಾವಾಪನ್ನವೂ, ಸರ್ವಶ್ರೇಷ್ಠವೂ, ಸಕಲಾಭೀಪ್ಸಿತವೂ, ವರಪ್ರದವೂ, ನಾಶರಹಿತವೂ, ಲೋಕನಿಯಂತೃವೂ ಆಗಿರುವುದು.

ಸರ್ವಲೋಕೈಕಜನಕಂ ಸರ್ವಲೋಕೈಕರಕ್ಷಕಂ ।
ಸರ್ವಲೋಕೈಕಸಂಹರ್ತೃ ಸರ್ವಲೋಕೈಕವಂದಿತಂ ॥ ೮೫ ॥
ಆದ್ಯಂತರಹಿತಂ ನಿತ್ಯಂ ಶಿವಂ ಶಂಕರಮವ್ಯಯಂ ।
ಏಕಂ ಗುಣತ್ರಯಾತೀತಂ ಭಕ್ತಸ್ವಾಂತಕೃತಾಸದಂ ॥ ೮೬ ॥
ನಿರುಪಾಧಿಂ ನಿರಾಕಾರಂ ನಿರ್ವಿಕಾರಂ ನಿರಂಜನಂ ।
ನಿರ್ಮಲಂ ನಿರಹಂಕಾರಂ ನಿಷ್ಪ್ರಪಂಚಂ ನಿಜೋದಯಂ ॥ ೮೭ ॥
ಸ್ವಾತ್ಮಾರಾಮಮನಂತಂ ಚ ಸರ್ವಗಂ ಸರ್ವದರ್ಶಿನಂ ।
ಸರ್ವದಂ ಸರ್ವಭೋಕ್ತಾರಂ ಸರ್ವಂ ಸರ್ವಸುಖಾಸ್ಪದಂ ॥ ೮೮ ॥
ವಾಗಿಂದ್ರಿಯಂ ತದೀಯಂ ಚ ಪ್ರೋಚ್ಚರತ್ತದಹರ್ನಿಶಂ ।
ನಾಮಾಂತರಂ ನ ಗೃಹ್ಣಾತಿ ಕ್ವಚಿದನ್ಯಸ್ಯ ಕಸ್ಯಚಿತ್ ॥ ೮೯ ॥
ಏತನ್ನಾಮಾಕ್ಷರರಸಂ ರಸಯಂತೀ ದಿನಾನಿಶಂ ।
ರಸನಾ ನೈವ ಜಾನಾತಿ ತಸ್ಯಾ ಅನ್ಯದ್ರಸಾಂತರಂ ॥ ೯೦ ॥

---

೮೫. ಆ ಓಂಕಾರೇಶ್ವರ ಲಿಂಗನಾಮರೂ ಹದಿನಾಲ್ಕುಲೋಕಗಳಿಗೂ ಅನನ್ಯ ಕಾರಣವಾಗಿ, ಅವುಗಳನ್ನೇ ಸಂರಕ್ಷಿಸುತ್ತ, ಯಥಾಕಾಲದಲ್ಲಿ ಪುನಃ ಅವುಗಳನ್ನೇ ತನ್ನಲ್ಲಿ ಲಯಗೊಳಿಸುತ್ತ ಸಮಸ್ತ ಪ್ರಾಣಗಳಿಂದಲೂ ನಮಸ್ಕರಿಸಲ್ಪಡುವ ಏಕಮಾತ್ರ ದೈವವಾಗಿರುವುದು.

೮೬–೮೭. ಆದ್ಯಂತರಹಿತವೂ, ಏಕ್ಷದೇಕರೂಪವೂ, ಮಂಗಳಪ್ರದವೂ, ಸುಖಕಾರಕವೂ, ವೃದ್ಧಿಹ್ರಾಸಗಳಿಲ್ಲದುದೂ, ಏಕರೂಪವೂ, ತ್ರಿಗುಣಗಳನ್ನು ಮೀರಿದುದೂ, ಭಕ್ತರ ಹೃದಯಗಳಲ್ಲಿ ಆವಾಸವನ್ನು ಮಾಡಿಕೊಂಡಿರುವುದೂ ಆಗಿರುವುದು. ದೇಶಕಾಲೋಪಾಧಿಗಳಿಗೆ ಸಿಕ್ಕದುದೂ, ಆಕಾರಶೂನ್ಯವೂ, ಆದುದರಿಂದಲೇ ನಿರ್ವಿಕಾರವೂ, ಜಗತ್ಕಾರಣವಾದ ಮಾಯೋಪಾಧಿಯಿಲ್ಲದುದೂ, ನಿತ್ಯಶುದ್ಧವೂ, ನಿರಹಂಕಾರವೂ, ಅವ್ಯಾಕೃತನಾಮರೂಪವೂ,! ಅಸಾಧಾರಣ ಕಾರಣವೂ ಎನಿಸಿರುವುದು.

೮೮. ಸ್ವರೂಪಾನಂದದಲ್ಲಿ ನೆಲಸಿರುವುದೂ, ಅನಂತವೂ, ಸರ್ವವ್ಯಾಪಿಯೂ, ಸರ್ವಕ್ಕೂ ಸಾಕ್ಷಿಭೂತವೂ, ಸರ್ವಾಭೀಷ್ಟದಾಯಕವೂ, ಸಮಸ್ತವನ್ನೂ ಲಯಗೊಳಿಸುವುದೂ, ಮಹೇಶ್ವರನ ಚಿಹ್ನೆಯೂ, ಸಕಲ ಸುಖಗಳಿಗೆ ತವರುಮನೆಯೂ ಆಗಿರುವುದು.

೮೯. ಆ ಮಾಧವೀದೇವಿಯ ವಾಗಿಂದ್ರಿಯವು ಅಹೋರಾತ್ರಿಗಳಲ್ಲಿಯೂ ಓಂಕಾರೇಶ್ವರನ ಅನಂತನಾಮಗಳನ್ನೇ ಹೊಗಳುತ್ತ ಬೇರೆ ಯಾವ ದೇವತೆಯ ಹೆಸರುಗಳನ್ನೆಂದಿಗೂ ಉಚ್ಚರಿಸುತ್ತಿರಲಿಲ್ಲ.

೯೦. ಓಂಕಾರೇಶ್ವರನ ನಾಮಾಕ್ಷರಗಳ ಅಮೃತರಸವನ್ನು ನಿರಂತರವೂ

ಸಂಮಾರ್ಜನಂ ರಂಗಮಾಲಾಃ ಪ್ರಾಸಾದಂ ಪರಿತಃ ಸದಾ ।
ವಿದಧ್ಯಾನ್ಮಾಧವೀ ತತ್ರ ತಥಾರ್ಚಾಪಾತ್ರಶೋಧನಂ ॥ ೯೧ ॥
ತತ್ರ ಪಾಶುಪತಾ ಯೇ ವೈ ಪ್ರಣವೇಶಾರ್ಚನೇ ರತಾಃ ।
ತಾಂಶ್ಚ ಶುಶ್ರೂಷಯೇನ್ನಿತ್ಯಂ ಪಿತೃಬುದ್ಧ್ಯಾತಿಭಕ್ತಿತಃ ॥ ೯೨ ॥
ವೈಶಾಖಸ್ಯ ಚತುರ್ದಶ್ಯಾಮೇಕದಾ ಸಾ ತು ಮಾಧವೀ ।
ರಾತ್ರೌ ಜಾಗರಣಂ ಕೃತ್ವಾ ದಿವೋಪವಸನಾನ್ವಿತಾ ॥ ೯೩ ॥
ಯಾತ್ರಾಮಿಲಿತಭಕ್ತೇಷು ಪ್ರಾತರ್ಯಾತೇಷು ಸರ್ವತಃ ।
ಸಂಮಾರ್ಜನಾದಿಕಂ ಕೃತ್ವಾ ಲಿಂಗಮಭ್ಯರ್ಚ್ಯ ಹರ್ಷತಃ ॥ ೯೪ ॥
ಗಾಯಂತೀ ಮಧುರಂ ಗೀತಂ ನೃತ್ಯಂತೀ ನಿಜಲೀಲಯಾ ।
ಧ್ಯಾಯಂತೀ ಲಿಂಗಮೋಂಕಾರಂ ತತ್ರ ಲಿಂಗೇ ಲಯಂ ಯಯೌ ॥ ೯೫ ॥
ಅನೇನೈವ ಶರೀರೇಣ ಪಾರ್ಥಿವೇನ ಮಹಾಮತಿಃ ।
ಅಸ್ಮದಾಚಾರ್ಯಮುಖ್ಯಾನಾಂ ಪಶ್ಯತಾಂ ಚ ತಪಸ್ವಿನಾಂ ॥ ೯೬ ॥

---

ಪಾನಮಾಡುತ್ತಿರುವ ಆಕೆಯು ನಾಲಿಗೆಯು ಬೇರೆ ಯಾವ ಆಹಾರಾದಿಗಳ ಷಡ್ರಸಗಳನ್ನು ಎಂದಿಗೂ ಸವಿಯುವುದನ್ನು ತಿಳಿದಿರಲಿಲ್ಲ.

೯೧. ಆ ಮಾಧವಿಯು ಸರ್ವಕಾಲಗಳಲ್ಲಿಯೂ ದೇವಾಲಯವನ್ನು ಗುಡಿಸಿ ಸಾರಿಸುವುದು, ಅದರ ಸುತ್ತಲೂ ಮನೋಹರಗಳಾದ ರಂಗವಲ್ಲಿಗಳನ್ನು ಬರೆಯುವುದು, ಪೂಜೋಪಕರಣಪಾತ್ರೆಗಳನ್ನು ಶುಭ್ರವಾಗಿ ತೊಳೆದಿಡುವುದು ಮುಂತಾದ ಕಾರ್ಯಗಳಲ್ಲಿಯೇ ನಿರತಳಾಗಿರುತ್ತಿದ್ದಳು.

೯೨. ಮತ್ತು ಅಲ್ಲಿ ನಿತ್ಯವೂ ಮಹೇಶ್ವರನ ಯಾವ ಭಕ್ತರು ಓಂಕಾರೇಶ್ವರನ ಸೇವೆಗಳಲ್ಲಿ ನಿರತರಾಗಿರುತ್ತಿದ್ದರೊ, ಅವರನ್ನೆಲ್ಲ ತಂದೆಗೆ ಸಮಾನರೆಂದು ತಿಳಿದು ಬಹಳ ಭಕ್ತಿಯಿಂದ ಅವರ ಶುಶ್ರೂಷೆಯನ್ನು ಮಾಡುತ್ತಿದ್ದಳು.

೯೩. ಒಮ್ಮೆ ಆ ಮಾಧವಿಯು ವೈಶಾಖಮಾಸದ ಶುಕ್ಲಚತುರ್ದಶಿಯ ತಿಥಿಯು ಪ್ರಾಪ್ತವಾಗಲು ಹಗಲಿನಲ್ಲಿ ಉಪವಾಸವನ್ನಾಚರಿಸಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದಳು.

೯೪. ಮಹಾಯಾತ್ರೆಗಾಗಿ ನೆರೆದಿದ್ದ ಭಕ್ತರೆಲ್ಲರೂ ಮಾರನೆಯ ದಿನದ ಪ್ರಾತಃಕಾಲದಲ್ಲಿ ಹೊರಟುಹೋದರು. ಆಕೆಯೂ ಎಲ್ಲೆಡೆಗಳಲ್ಲಿ ಸಂಮಾರ್ಜನಾದಿಗಳನ್ನು ಮಾಡಿ ಸಂತೋದಿಂದ ಆ ಲಿಂಗವನ್ನು ಪೂಜಿಸಿದಳು.

೯೫. ಮಧುರಕಂಠದಿಂದ ಸಂಗೀತವನ್ನು ಹಾಡುತ್ತ, ಸ್ವಭಾವಜನ್ಯವಾದ ಲೀಲೆಯಿಂದ ನೃತ್ಯವನ್ನು ಮಾಡುತ್ತ, ಓಂಕಾರೇಶ್ವರಲಿಂಗವನ್ನೇ ಧ್ಯಾನಿಸುತ್ತ ಆ ಲಿಂಗದಲ್ಲಿಯೇ ಐಕ್ಯವನ್ನು ಪಡೆದಳು.

೯೬. ನಮ್ಮ ಗುರುಗಳೇ ಮೊದಲಾಗಿ ಸಕಲ ತಪಸ್ವಿಗಳೂ ನೋಡುತ್ತಿರು

ಪ್ರಾದುರ್ಬಭೂವ ಯಲ್ಲಿಂಗಾಜ್ಜ್ಯೋತಿರ್ಜಟಿಲಿತಾಂಬರಂ ।
ತತ್ರ ಜ್ಯೋತಿಷಿ ಸಾ ಬಾಲಾ ಜ್ಯೋತಿರ್ಮಯ್ಯಪಿ ಸಾಪ್ಯಭೂತ್ ॥ ೯೭ ॥
ರಾಧಶುಕ್ಲಚತುರ್ದಶ್ಯಾಮದ್ಯಾಪಿ ಕ್ಷೇತ್ರವಾಸಿನಃ ।
ತತ್ರ ಯಾತ್ರಾಂ ಪ್ರಕುರ್ವಂತಿ ಮಹೋತ್ಸವಪುರಃಸರಾಃ ॥ ೯೮ ॥
ತತ್ರ ಜಾಗರಣಂ ಕೃತ್ವಾ ಚತುರ್ದಶ್ಯಾಮುಪೋಷಿತಾಃ ।
ಪ್ರಾಪ್ನುವಂತಿ ಪರಂ ಜ್ಞಾನಂ ಯತ್ರ ಕುತ್ರಾಪಿ ವೈ ಮೃತಾಃ ॥ ೯೯ ॥
ಬ್ರಹ್ಮಾಂಡೋದರಮಧ್ಯೇ ತು ಯಾನಿ ತೀರ್ಥಾನಿ ಸರ್ವತಃ ।
ತಾನಿ ವೈಶಾಖಭೂತಾಯಾಮಾಯಾಂತ್ಯೋಂಕೃತಿದರ್ಶನೇ ॥ ೧೦೦ ॥
ಲಿಂಗಾಗ್ರೇ ಶ್ರೀಮುಖೀ ನಾಮ್ನಾ ಗೃಹಾಸ್ತಿ ಪರಮೋತ್ತಮಾಃ ।
ಪಾತಾಲಸ್ಯ ಚ ತದ್ದ್ವಾರಂ ತತ್ರ ಸಿದ್ಧಾ ವಸಂತಿ ಹಿ ॥ ೧೦೧ ॥
ತಿಷ್ಠೇಯುಃ ಪಂಚರಾತ್ರಂ ಯೇ ಗುಹಾಯಾಂ ತತ್ರ ಸುವ್ರತಾಃ ।
ತೇ ನಾಗಕನ್ಯಾಃ ಪಶ್ಯಂತಿ ಬ್ರೂಯುಸ್ತಾಶ್ಚ ಶುಭಾಶುಭಂ ॥ ೧೦೨ ॥

ವಂತೆಯೇ ಮಹಾಬುದ್ಧಿಶಾಲಿನಿಯಾದ ಆಕೆಯು ಪಾಂಚಭೌತಿಕವಾದ ತನ್ನ ಶರೀರದೊಡನೆಯೇ ಲಿಂಗದಲ್ಲಿ ಲೀನಳಾದಳು.

೯೭. ಆ ಲಿಂಗದಿಂದ ಒಂದು ಮಹಾಜ್ಯೋತಿಯು ಹೊರಟು ಆಕಾಶವೆಲ್ಲವನ್ನೂ ವ್ಯಾಪಿಸಿಕೊಂಡಿತು. ಮತ್ತು ಆ ಬಾಲಿಕೆಯೂ ಜ್ಯೋತಿರ್ಮಯವಾದ ದೇಹದಿಂದಲೇ ಆ ಮಹಾಜ್ಯೋತಿಯಲ್ಲಿ ಬೆರೆತುಹೋದಳು.

೯೮. ಇಂದಿಗೂ ಸಹ ಆ ಕ್ಷೇತ್ರದಲ್ಲಿ ವಾಸಮಾಡುವ ಜನರು ವೈಶಾಖಶುಕ್ಲಚತುರ್ದಶಿಯ ದಿನದಲ್ಲಿ ಬಹಳ ಸಂಭ್ರಮದಿಂದ ಓಂಕಾರೇಶ್ವರನಿಗೆ ಮಹಾಯಾತ್ರೆಯನ್ನು ಮಾಡಿಸುತ್ತಿರುವರು.

೯೯. ಆ ಚತುರ್ದಶಿಯ ಹಗಲಿನಲ್ಲಿ ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದವರು ಸ್ಥಳಾಂತರಗಳಲ್ಲಿ ಮರಣವನ್ನು ಹೊಂದಿದರೂ ಸಂಸಾರಮೋಚಕವಾದ ಜ್ಞಾನವನ್ನೇ ಪಡೆಯುವರು.

೧೦೦. ಬ್ರಹ್ಮಾಂಡದಲ್ಲಿರುವ ಹದಿನಾಲ್ಕುಲೋಕಗಳ ಯಾವ ಯಾವ ತೀರ್ಥಗಳಿರುವುವೋ, ಅವುಗಳೆಲ್ಲವೂ ವೈಶಾಖಶುಕ್ಲ ಚತುರ್ದಶಿಯ ದಿನದಲ್ಲಿ ಓಂಕಾರೇಶ್ವರನ ದರ್ಶನಕ್ಕಾಗಿ ಇಲ್ಲಿಗೆ ಬರುವುವು.

೧೦೧. ಆ ಲಿಂಗದ ಮುಂಭಾಗದಲ್ಲಿ ಶ್ರೀಮುಖಿಯೆಂಬ ಹೆಸರುಳ್ಳ ಸರ್ವೋತ್ತಮವಾದ ಒಂದು ಗುಹೆಯಿರುವುದು. ಅದೇ ಪಾತಾಳಲೋಕಕ್ಕೆ ದ್ವಾರವಾಗಿರುವುದು. ಅಲ್ಲಿಯೇ ಸಿದ್ಧರು ವಾಸಮಾಡುತ್ತಿರುವರು.

೧೦೨. ಯಾವ ಮನುಷ್ಯರು ಉತ್ತಮವ್ರತವನ್ನು ಕೈಕೊಂಡು ಐದು ರಾತ್ರಿಗಳು ಆ ಗುಹೆಯಲ್ಲಿ ವಾಸಮಾಡುವರೊ, ಅವರು ನಾಗಕನ್ಯೆಯರನ್ನು

ಕಂದರೋತ್ತರದಿಗ್ಭಾಗೇ ತತ್ರ ಕೂಪೋ ರಸೋದಕಃ ।
ಆಷಣ್ಮಾಸಂ ಚ ತತ್ಪೀತ್ವಾ ಪಿಬೇದ್ಬ್ರಹ್ಮರಸಾಯನಂ ॥ ೧೦೩ ॥
ತತ್ರ ನಾದೇಶ್ವರಂ ಲಿಂಗಂ ದೃಷ್ಟ್ವಾ ನಾದನಿದಾನಭೂಃ ।
ಸರ್ವನಾದಾತ್ಮಕಂ ವಿಶ್ವಂ ತತ್ಪ್ರವೋಗೋಚರೀ ಭವೇತ್ ॥ ೧೦೪ ॥
ತತ್ರ ಮತ್ಸ್ಯೋದರೀಂ ಸ್ನಾತ್ವಾ ಸ್ವರ್ಧುನೀಂ ವರಣಾಪ್ಲುತಾಂ ।
ಕೃತಕೃತ್ಯೋ ಭವೇಜ್ಜಂತುರ್ನೈವ ಶೋಚತಿ ಕುತ್ರಚಿತ್ ॥ ೧೦೫ ॥
ಅಸಂಖ್ಯಾತಾ ಗತಾಃ ಸಿದ್ಧಿಮೋಂಕಾರೇಶ್ವರಸೇವಕಾಃ ।
ಪಾರ್ಥಿವೇನೈವ ದೇಹೇನ ದಿವ್ಯಭೂತೇನ ತತ್ಕ್ಷಣಾತ್ ॥ ೧೦೬ ॥
ಅವಿಮುಕ್ತಂ ಪರಂ ಕ್ಷೇತ್ರಂ ಬ್ರಹ್ಮಾಂಡಾದಪಿ ಸರ್ವತಃ ।
ತತೋಽಪಿ ಪರ ಓಂಕಾರ ಉಕ್ತೋ ಮತ್ಸ್ಯೋದರೀತಟೇ ॥ ೧೦೭ ॥
ಪ್ರಣವೇಶೋऽಂಗ ಯೈಃ ಕಾಶ್ಯಾಂ ನ ನತೋ ನಾಪಿ ಚಾರ್ಚಿತಃ ।
ಕಿಮರ್ಥಂ ತೇ ಸಮುತ್ಪನ್ನಾ ಮಾತೃತಾರುಣ್ಯಹಾರಿಣಃ ॥ ೧೦೮ ॥

---

ನೋಡುವರು. ಆ ಕನ್ಯೆಯರು ಅವರಿಗೆ ಮುಂದೆ ಬರಲಿರುವ ಶುಭಾಶುಭಗಳನ್ನು ತಿಳಿಸುವರು.

೧೦೩. ಆ ಗುಹೆಗೆ ಉತ್ತರದಿಕ್ಕಿನಲ್ಲಿ ರಸೋದಕವೆಂಬ ಮಹಾಕೂಪವೊಂದಿರುವುದು. ಆರುತಿಂಗಳವರೆಗೂ ಅದರ ನೀರನ್ನು ಕುಡಿಯುವ ಮನುಷ್ಯನು ಬ್ರಹ್ಮರಸಾಯನವನ್ನು ಪಾನಮಾಡಿದವನೆಂದು ತಿಳಿಯಬೇಕು.

೧೦೪. ಅಲ್ಲಿ ನೆಲಸಿರುವ ನಾದನಿದಾನ ಭೂಮಿಯೆನಿಸಿದ ನಾದೇಶ್ವರ ಲಿಂಗವನ್ನು ಸಂದರ್ಶಿಸಲು ಸಮಸ್ತ ಬ್ರಹ್ಮಾಂಡವೂ ನಾದಾತ್ಮಕವಾಗಿಯೇ ಪ್ರೇಕ್ಷಕನ ಕಿವಿಗಳಿಗೆ ಗೋಚರವಾದಂತಿರುವುದು.

೧೦೫. ಅಲ್ಲಿಯೇ ಇರುವ ಮತ್ಸ್ಯೋದರೀತೀರ್ಥದಲ್ಲಿಯೂ ವರಣಾನದಿಯೊಡನೆ ಸೇರುವ ಗಂಗಾನದಿಯಲ್ಲಿಯೂ ಯಾವನು ಸ್ನಾನಮಾಡುವನೊ, ಅವನು ಕೃತಕೃತ್ಯನಾಗುವನು. ಅವನಿಗೆಲ್ಲಿಯೂ ಎಂದಿಗೂ ಶೋಕವೆಂಬುದಿಲ್ಲ.

೧೦೬. ಓಂಕಾರೇಶ್ವರನನ್ನು ಸೇವಿಸಿದ ಅಸಂಖ್ಯಾತಜನರು ಕ್ಷಣಮಾತ್ರದಲ್ಲಿಯೇ ಜ್ಯೋತಿರ್ಮಯಗಳಾದ ಪಾಂಚಭೌತಿಕದೇಹಗಳಿಂದಲೇ ಸಿದ್ಧಿಯನ್ನು ಪಡೆದಿರುವರು.

೧೦೭. ಅವಿಮುಕ್ತಕ್ಷೇತ್ರವು ಸಮಸ್ತ ಬ್ರಹ್ಮಾಂಡದಲ್ಲಿಯೇ ಸರ್ವೋತ್ತಮವೆನಿಸಿರುವುದು. ಆ ಕ್ಷೇತ್ರದಲ್ಲಿಯೂ ಸಹ ಮತ್ಸ್ಯೋದರೀತೀರ್ಥದ ದಡದಲ್ಲಿರುವ ಓಂಕಾರೇಶ್ವರ ದೇವಾಲಯಪ್ರದೇಶವು ಪರಾತ್ಪರವೆನಿಸಿರುವುದು.

೧೦೮. ಪ್ರಿಯನಾದ ಅಗಸ್ತ್ಯನೆ! ಕಾಶೀಕ್ಷೇತ್ರವನ್ನು ಸೇರಿದರೂ ಯಾರು ಓಂಕಾರೇಶ್ವರನನ್ನು ನಮಸ್ಕರಿಸಿ ಪೂಜಿಸುವುದಿಲ್ಲವೊ, ಅವರು ಭೂಮಿಯಮೇಲೆ

ಯದಾ ಪ್ರಭೃತಿ ವಿಶ್ವೇಶೋ ಮಂದರಾದಾಗತೋಽಭವತ್ ।
ತಸ್ಮಿನ್ನಾನಂದಗಹನೇ ತದಾಪ್ರಭೃತಿ ಸತ್ತಮ ॥ ೧೦೯ ॥
ಸರ್ವಾಣ್ಯಾಯತನಾನ್ಯಾಶು ಸಾಬ್ಧೀನಿ ನಗರಾಣ್ಯಪಿ ।
ಸನದೀನಿ ಸತೀರ್ಥಾನಿ ಸದ್ವೀಪಾನಿ ಯಯುಸ್ತತಃ ॥ ೧೧೦ ॥
ಇದಾನೀಂ ಮಮ ಭಾಗ್ಯೇನ ಸ್ಮಾರಿತೋಽಹಂ ತ್ವಯಾ ಮುನೇ ।
ಅಹಮಪ್ಯಾಗಮಿಷ್ಯಾಮಿ ಯಾಮಃ ಕಾಶೀಂ ಶನೈಃ ಶನೈಃ ॥ ೧೧೧ ॥
ಏತೇಽಪಿ ಮಮ ಶಿಷ್ಯಾ ಯೇ ಮಹಾಪಾಶುಪತವ್ರತಾಃ ।
ಕಾಶೀಂ ಯಿಯಾಸವಸ್ತೇಽಪಿ ಯತಃ ಸರ್ವೇ ಮುಮುಕ್ಷವಃ ॥ ೧೧೨ ॥
ಅಪಿ ವಾರ್ಧಕಮಾಸಾದ್ಯ ಯೈಃ ಕಾಶೀ ನೈವ ಶೀಲಿತಾ ।
ಮಾನುಷೇ ದುರ್ಲಭೇ ನಷ್ಟೇ ಕುತಸ್ತೇಷಾಂ ಮಹಾಸುಖಂ ॥ ೧೧೩ ॥
ಯಾವನ್ನೇಂದ್ರಿಯವೈಕಲ್ಯಂ ಯಾವನ್ನೈವಾಯುಷಃ ಕ್ಷಯಃ ।
ತಾವತ್ಸೇವ್ಯಂ ಪ್ರಯತ್ನೇನ ಶಂಭೋರಾನಂದಕಾನನಂ ॥ ೧೧೪ ॥

---

ಏತಕ್ಕಾಗಿ ಜನಿಸಿರುವರು ? ನಿಜವಾಗಿಯೂ ಅವರು ತಾಯಿಯರ ಯೌವನವನ್ನು ಕಳೆಯಲು ಮಾತ್ರ ಹುಟ್ಟಿದವರೆಂದು ಹೇಳಬೇಕು.

೧೦೯–೧೧೦. ಬ್ರಾಹ್ಮಣೋತ್ತಮನೆ! ವಿಶ್ವೇಶ್ವರನು ಯಾವ ದಿನದಲ್ಲಿ ಮಂದರಾಚಲವನ್ನು ಬಿಟ್ಟು ಈ ಕಾಶೀಕ್ಷೇತ್ರಕ್ಕೆ ಆಗಮಿಸಿದನೊ, ಅಂದು ಮೊದಲಾಗಿ ಆನಂದಕಾನನದಲ್ಲಿ ಸಕಲ ದೇವಾಲಯಗಳೂ, ಸಮುದ್ರಗಳೂ, ಪರ್ವತಗಳೂ, ನದಿಗಳೂ, ತೀರ್ಥಗಳೂ, ದ್ವೀಪಗಳೂ ತಮ್ಮ ತಮ್ಮ ಅಂಶಗಳಿಂದ ಇಲ್ಲಿ ಸನ್ನಿಹಿತಗಳಾಗಿರುವುವು.

೧೧೧. ದಮನಮುನಿಯೆ! ನನ್ನ ಭಾಗ್ಯೋದಯದಿಂದಲೇ ನೀನು ಈ ವಿಷಯವನ್ನು ನನಗೆ ಜ್ಞಾಪಿಸಿರುವೆ. ನಾನೂ ಸಹ ನಿನ್ನೊಡನೆ ಬರುವೆನು. ಮೆಲ್ಲಮೆಲ್ಲಗೆ ಕಾಶೀಕ್ಷೇತ್ರವನ್ನು ಹೋಗಿ ಸೇರೋಣ.

೧೧೨. ಇಲ್ಲಿ ನೆರೆದಿರುವ ನನ್ನ ಶಿಷ್ಯರೆಲ್ಲರೂ ಮಹಾಪಾಶುಪತ ವ್ರತಗಳನ್ನು ನಡೆಸುತ್ತಿರುವರು. ಮೋಕ್ಷಾಭಿಲಾಷಿಗಳಾಗಿರುವುದರಿಂದ ಅವರೆಲ್ಲರೂ ಕಾಶಿಗೆ ಹೋಗಬೇಕೆಂಬ ಅಭಿಲಾಷೆಯುಳ್ಳವರೇ ಆಗಿರುವರು.

೧೧೩. ವಾರ್ಧಕ್ಯವನ್ನು ಹೊಂದಿದರೂ ಯಾವ ಮಾನವರು ಕಾಶೀಕ್ಷೇತ್ರವನ್ನು ಆಶ್ರಯಿಸುವುದಿಲ್ಲವೊ, ಅವರು ದುರ್ಲಭವಾದ ಮನುಷ್ಯಜನ್ಮವನ್ನು ವ್ಯರ್ಥವಾಗಿ ಕಳೆದುಕೊಂಡಂತೆಯೇ ಸರಿ. ಅವರಿಗೆ ಮಹಾಸುಖವೆಲ್ಲಿಯದು ?

೧೧೪. ಎಲ್ಲಿಯವರೆಗೆ ಇಂದ್ರಿಯಗಳು ಶಿಥಿಲಗಳಾಗುವುದಿಲ್ಲವೊ, ಆಯುಸ್ಸು ಕ್ಷಯವನ್ನು ಹೊಂದಿರುವುದಿಲ್ಲವೊ ಅಷ್ಟರಲ್ಲಿಯೇ ಮಹಾದೇವನ ಸ್ಥಾನವಾದ ಆನಂದಕಾನನದ ಸೇವೆಯನ್ನು ಪ್ರಯತ್ನದಿಂದ ಮಾಡಬೇಕು.

ಯ ಆನಂದಂ ವನಂ ಶಂಭೋಃ ಶಿಶ್ರಿಯುಃ ಶ್ರೀನಿಕೇತನಂ ।
ಅಚಲಾ ಶ್ರೀರ್ನ ಮುಂಚೇತ್ತಾನ್ಮಹಾಸೌಖ್ಯೈಕಶೇವಧಿಂ ॥ ೧೧೫ ॥
ಇತ್ಯಾಖ್ಯಾಯ ಕಥಾಂ ರಮ್ಯಾಂ ಗರ್ಗಃ ಪಾಶುಪತೋತ್ತಮಃ ।
ಭಾರದ್ವಾಜೇನ ಸಹಿತಃ ಪ್ರಾಪ ವಾರಾಣಸೀಂ ಪುರೀಂ ॥ ೧೧೬ ॥
ದಮನೋಽಪಿ ಹಿ ಧರ್ಮಾತ್ಮಾ ಗರ್ಗಾಚಾರ್ಯೇಣ ಸಂಯುತಃ ।
ಆರಾಧ್ಯ ಶ್ರೀಮದೋಂಕಾರಂ ತಸ್ಮಿಂಲ್ಲಿಂಗೇ ಲಯಂ ಗತಃ ॥ ೧೧೭ ॥

ಸ್ಕಂದ ಉವಾಚ :—

ಇಲ್ವಲಾರೇ ಪರಂ ಸ್ಥಾನಮೋಂಕಾರಮವಿಮುಕ್ತಕೇ ।
ತತ್ರ ಸಿದ್ಧಿಂ ಪರಾಂ ಜಗ್ಮುಃ ಸಾಧಕಾ ಬಹುಶೋ ಮುನೇ ॥ ೧೧೮ ॥
ಕಲೌ ಕಲುಷಚಿತ್ತಾನಾಂ ಪುರೋ ನಾಖ್ಯೇಯಮೇವ ಹಿ ।
ಪ್ರಣವೇಶ್ವರಮಾಹಾತ್ಮ್ಯಂ ನಾಸ್ತಿಕಾನಾಂ ವಿಶೇಷತಃ ॥ ೧೧೯ ॥
ಯೇ ನಿಂದಂತಿ ಮಹಾದೇವಂ ಕ್ಷೇತ್ರಂ ನಿಂದಂತಿ ಯೇಽಧಿಯಃ ।
ಪುರಾಣಂ ಯೇ ಚ ನಿಂದಂತಿ ತೇ ಸಂಭಾಷ್ಯಾ ನ ಕುತ್ರಚಿತ್ ॥ ೧೨೦ ॥

---

೧೧೫. ಯಾರು ವಿಶ್ವೇಶ್ವರನ ಐಶ್ವರ್ಯೈಕನಿಲಯವಾದ ಆನಂದಕಾನನವನ್ನು ಆಶ್ರಯಿಸಿರುವರೊ, ಅವರು ಮಹಾಸೌಖ್ಯಗಳ ನೆಲೆಮನೆಗಳಾಗಿರುವರು. ಅವರಲ್ಲಿ ಐಶ್ವರ್ಯವು ಅಚಲವಾಗಿ ನಿಂತು ಎಂದಿಗೂ ಅವರನ್ನು ಬಿಟ್ಟುಹೋಗುವುದಿಲ್ಲ.

೧೧೬. ಇಂತು ಮನೋಹರವಾದ ಈ ಆಖ್ಯಾನವನ್ನು ನಿರೂಪಿಸಿ ಶಿವಭಕ್ತರಲ್ಲಿ ಅಗ್ರಗಣ್ಯನಾದ ಗರ್ಗಾಚಾರ್ಯನು ಭಾರದ್ವಾಜನಿಂದೊಡಗೂಡಿ ವಾರಾಣಸಿಯನ್ನು ಕುರಿತು ಪ್ರಯಾಣಮಾಡಿದನು.

೧೧೭. ಧರ್ಮೈಕನಿಷ್ಠನಾದ ದಮನನೂ ಸಹ ಗರ್ಗಾಚಾರ್ಯನನ್ನೇ ಹಿಂಬಾಲಿಸಿ ಸರ್ವೈಶ್ವರ್ಯಭರಿತನಾದ ಓಂಕಾರೇಶ್ವರನನ್ನು ಭಕ್ತಿಯಿಂದಾರಾಧಿಸಿ ಆ ಲಿಂಗದಲ್ಲಿಯೇ ಲಯವನ್ನು ಹೊಂದಿದನು.

೧೧೮. ಸ್ಕಂದನು ಹೇಳುತ್ತಾನೆ :—ಇಲ್ವಲನನ್ನು ನಿಗ್ರಹಿಸಿದ ಎಲೈ ಅಗಸ್ತ್ಯ ಮಹಾಮುನಿಯೆ! ಅವಿಮುಕ್ತಕ್ಷೇತ್ರದಲ್ಲೆಲ್ಲ ಓಂಕಾರೇಶ್ವರನ ಸ್ಥಾನವು ಸರ್ವೋತ್ಕೃಷ್ಟವು. ಅಲ್ಲಿ ಸಾಧನೆಗಳನ್ನು ಮಾಡಿದ ಅನೇಕ ಜನರು ಅದ್ವಿತೀಯವಾದ ಕೈಲಾಸಪದವಿಯನ್ನು ಪಡೆದಿರುವರು.

೧೧೯. ಈ ಓಂಕಾರೇಶ್ವರನ ಮಾಹಾತ್ಮ್ಯವನ್ನೊಳಕೊಂಡ ಚರಿತ್ರೆಯನ್ನು ಕಲಿಯುಗದಲ್ಲಿ ಕಲ್ಮಷಚಿತ್ತರಿರುವಲ್ಲಿಯಾಗಲಿ, ಅದರಲ್ಲಿಯೂ ವಿಶೇಷವಾಗಿ ನಾಸ್ತಿಕರ ಸಮ್ಮುಖದಲ್ಲಿಯಾಗಲಿ ಎಂದಿಗೂ ನಿರೂಪಿಸಬಾರದು.

೧೨೦. ಯಾರು ಮಹೇಶ್ವರನನ್ನು ನಿಂದಿಸುವರೊ, ಯಾವ ದುರಾತ್ಮರು

ಓಂಕಾರಸದೃಶಂ ಲಿಂಗಂ ನಕ್ವಚಿಜ್ಜಗತೀತಲೇ ।
ಇತಿ ಗೌರ್ಯೈ ಸಮಾಖ್ಯಾತಂ ದೇವದೇವೇನ ನಿಶ್ಚಿತಂ ॥ ೧೨೧ ॥
ಇಮಮಧ್ಯಾಯಮಾಕರ್ಣ್ಯ ನರಸ್ತದ್ಗತಮಾನಸಃ ।
ವಿಮುಕ್ತಃ ಸರ್ವಪಾಪೇಭ್ಯಃ ಶಿವಲೋಕಮವಾಪ್ನುಯಾತ್ ॥ ೧೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಓಂಕಾರಮಾಹಾತ್ಮ್ಯವರ್ಣನಂ" ನಾಮ ಚತುಃಸಪ್ತತಿತಮೋಽಧ್ಯಾಯಃ

---

ಕಾಶೀಕ್ಷೇತ್ರವನ್ನು ಹಳಿಯುವರೊ, ಯಾವ ಜನರು ಪುರಾಣವನ್ನು ನಿಂದಿಸುವರೊ, ಅವರೊಡನೆ ಎಂದಿಗೂ ಸಂಭಾಷಣೆಯನ್ನು ಮಾಡಬಾರದು.

೧೨೧. ಸಮಸ್ತಭೂಲೋಕದಲ್ಲಿಯೂ ಓಂಕಾರೇಶ್ವರನಿಗೆ ಸದೃಶವಾದ ಲಿಂಗವೆಲ್ಲಿಯೂ ಇರುವುದಿಲ್ಲ. ಇಂತೆಂದು ಪಾರ್ವತಿಗೆ ಮಹಾದೇವನು ನಿರೂಪಿಸಿರುವನು. ಆದುದರಿಂದ ಈ ವಿಷಯದಲ್ಲಿ ಸಂಶಯವಿಲ್ಲ.

೧೨೨. ಏಕಾಗ್ರಚಿತ್ತದಿಂದ ಈ ಅಧ್ಯಾಯವನ್ನು ಶ್ರವಣಮಾಡಿದ ಮನುಷ್ಯನು ಸಕಲ ಪಾಪಗಳಿಂದಲೂ ವಿಮೋಚನೆಯನ್ನು ಹೊಂದಿ ಅಂತ್ಯದಲ್ಲಿ ಶಿವಲೋಕದಲ್ಲಿ ಶಾಶ್ವತವಾಸವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಓಂಕಾರಮಾಹಾತ್ಮ್ಯವರ್ಣನ"ವೆಂಬ ಎಪ್ಪತ್ತನಾಲ್ಕಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಸಪ್ತತಿತಮೋಽಧ್ಯಾಯಃ

### ತ್ರಿಲೋಚನೇಶ್ವರಾವಿರ್ಭಾವವರ್ಣನಂ

**ಅಗಸ್ತ್ಯ ಉವಾಚ :—**

**ಶ್ರುತ್ವೋಂಕಾರಕಥಾಮೇತಾಂ ಮಹಾಪಾತಕನಾಶಿನೀಂ ।**
**ನ ತೃಪ್ತೋಽಸ್ಮಿ ವಿಶಾಖಾಥ ಬ್ರೂಹಿ ತ್ರೈವಿಷ್ಟಪೀಂ ಕಥಾಂ ॥ ೧ ॥**
**ಕಥಂ ಚ ಕಥಿತಾ ದೇವ್ಯೈ ದೇವದೇವೇನ ಷಣ್ಮುಖ ।**
**ಆವಿರ್ಭೂತಿರ್ಮಹಾಬುದ್ಧೇ ಪುಣ್ಯಾ ತ್ರೈಲೋಚನೀ ಪರಾ ॥ ೨ ॥**

**ಸ್ಕಂದ ಉವಾಚ :—**

**ಆಕರ್ಣಯ ಮುನೇ ವಚ್ಮಿ ಕಥಾಂ ಶ್ರಮನಿವಾರಿಣೀಂ ।**
**ಯಥಾ ದೇವೇನ ಕಥಿತಾಂ ತ್ರಿವಿಷ್ಟಪಸಮುದ್ಭವಾಂ ॥ ೩ ॥**
**ವಿರಜಾಖ್ಯಂ ಹಿ ತತ್ಪೀಠಂ ತತ್ರ ಲಿಂಗಂ ತ್ರಿವಿಷ್ಟಪಂ ।**
**ತತ್ಪೀಠದರ್ಶನಾದೇವ ವಿರಜಾ ಜಾಯತೇ ನರಃ ॥ ೪ ॥**

---

## ಕನ್ನಡದ ಅನುವಾದ

### ತ್ರಿಲೋಚನೇಶ್ವರಾವಿರ್ಭಾವವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಷಡಾನನಸ್ವಾಮಿಯೆ! ಮಹಾಪಾತಕಗಳನ್ನೂ ನಾಶಗೊಳಿಸುವಂತಹ ಓಂಕಾರೇಶ್ವರನ ಚರಿತ್ರೆಯನ್ನು ನಿನ್ನ ಮುಖದಿಂದ ಕೇಳಿದರೂ ನಾನು ತೃಪ್ತನಾಗಿರುವುದಿಲ್ಲ. ಆದುದರಿಂದ ತ್ರಿಲೋಚನೇಶ್ವರನ ಚರಿತ್ರೆಯನ್ನೂ ನನಗೆ ಹೇಳುವವನಾಗು.

೨. ಮಹಾಪ್ರಾಜ್ಞನಾದ ಷಣ್ಮುಖನೆ! ತ್ರಿಲೋಚನೇಶ್ವರನು ಆವಿರ್ಭವಿಸಿದ ಪರಮಪುಣ್ಯಪ್ರದವೂ ಸರ್ವೋತ್ಕೃಷ್ಟವೂ ಆದ ಚರಿತ್ರೆಯನ್ನು ದೇವದೇವನು ಪಾರ್ವತೀದೇವಿಗೆ ಹೇಗೆ ನಿರೂಪಿಸಿದನು?

೩. ಸ್ಕಂದನು ಹೇಳುತ್ತಾನೆ:—ಎಲೈ ಮುನಿಶ್ರೇಷ್ಠನೆ! ಕೇಳು. ಮಹೇಶ್ವರನು ನಿರೂಪಿಸಿದ ತ್ರಿಲೋಚನೇಶ್ವರನ ಉದ್ಭವದ ಚರಿತ್ರೆಯನ್ನು ನಿನಗೆ ಹೇಳುವೆನು. ಈ ಕಥೆಯು ಕೇಳಿದವರ ಸಂಸಾರದ ಆಯಾಸವನ್ನು ನೀಗಿಸುವನು.

೪. ಈ ಪೀಠಕ್ಕೆ ವಿರಜಾಪೀಠವೆಂದು ಹೆಸರಿರುವುದು. ಇದರಲ್ಲಿರುವ ಲಿಂಗಕ್ಕೆ ತ್ರಿವಿಷ್ಟಪಲಿಂಗವೆಂದು ಹೆಸರು. ಈ ಪೀಠವನ್ನು ದರ್ಶನಮಾಡುವುದರಿಂದಲೇ ಮಾನವನು ನಿಷ್ಕಲ್ಮಷನಾಗುವನು.

ತಿಸ್ರಸ್ತು ಸಂಗತಾಸ್ತತ್ರ ಸ್ರೋತಸ್ವಿನ್ಯೋ ಘಟೋದ್ಭವ ।
ತಿಸ್ರಃ ಕಲ್ಮಷಹಾರಿಣ್ಯೋ ದಕ್ಷಿಣೇ ಹಿ ತ್ರಿಲೋಚನಾತ್ ॥ ೫ ॥
ಸ್ರೋತೋ ಮೂರ್ತಿಧರಾಃ ಸಾಕ್ಷಾಲ್ಲಿಂಗಸ್ನಪನಹೇತವೇ ।
ಸರಸ್ವತ್ಯಥ ಕಾಲಿಂದೀ ನರ್ಮದಾ ಚಾಥ ಶರ್ಮದಾ ॥ ೬ ॥
ತಿಸ್ರೋಽಪಿ ಹಿ ತ್ರಿಸಂಧ್ಯಂತಾಃ ಸರಿತಃ ಕುಂಭಪಾಣಯಃ ।
ಸ್ನಪಯಂತಿ ಮಹಾಧಾಮ ಲಿಂಗಂ ತ್ರೈವಿಷ್ಟಪಂ ಮಹತ್ ॥ ೭ ॥
ಲಿಂಗಾನಿ ಪರಿತಸ್ತಾಭಿಃ ಸ್ವನಾಮ್ನಾ ಸ್ಥಾಪಿತಾನ್ಯಪಿ ।
ತೇಷಾಂ ಸಂದರ್ಶನಾತ್ಪುಂಸಾಂ ತಾಸಾಂ ಸ್ನಾನಫಲಂ ಲಭೇತ್ ॥ ೮ ॥
ಸರಸ್ವತೀಶ್ವರಂ ಲಿಂಗಂ ದಕ್ಷಿಣೇನ ತ್ರಿವಿಷ್ಟಪಾತ್ ।
ಸಾರಸ್ವತಂ ಪದಂ ದದ್ಯಾದ್ದೃಷ್ಟಂ ಸ್ಪೃಷ್ಟಂ ಚ ಜಾಡ್ಯಹೃತ್ ॥ ೯ ॥
ಯಮುನೇಶಂ ಪ್ರತೀಚ್ಯಾಂ ಚ ನರೈರ್ಭಕ್ತ್ಯಾ ಸಮರ್ಚಿತಂ ।
ಅಪಿ ಕಿಲ್ಬಿಷವದ್ಭಿಶ್ಚ ಯಮಲೋಕನಿವಾರಣಂ ॥ ೧೦ ॥

---

೫. ಘಟೋದ್ಭವನೆ! ಅಲ್ಲಿ ಮೂರು ನದಿಗಳು ಒಟ್ಟುಗೂಡುವುವು. ತ್ರಿಲೋಚನೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ಕೂಡಿ ಹರಿಯುವ ಆ ಮೂರು ನದಿಗಳೂ ಸ್ನಾನಮಾಡಿದವರ ಪಾತಕಗಳನ್ನು ಕಳೆಯುವುವು.

೬. ಸರಸ್ವತಿ, ಕಾಳಿಂದಿ ಮತ್ತು ಅತಿಸೌಖ್ಯಪ್ರದೆಯಾದ ಶರ್ಮದೆ–ಇವೇ ಆ ಮೂರು ನದಿಗಳು. ಆ ಲಿಂಗಕ್ಕೆ ಅಭಿಷೇಕೋದಕವನ್ನೊದಗಿಸುವುದಕ್ಕಾಗಿ ಆ ದೇವತೆಯರೇ ನದಿಗಳ ರೂಪಗಳನ್ನು ಧರಿಸಿಕೊಂಡಿರುವರು.

೭. ಮೂವರು ನದ್ಯಭಿಮಾನಿದೇವತೆಯರೂ ಪ್ರತಿದಿವಸದ ತ್ರಿಸಂಧ್ಯೆಗಳಲ್ಲಿಯೂ ಕೈಗಳಲ್ಲಿ ತೀರ್ಥೋದಕಗಳ ಕಳಶಗಳನ್ನು ಹಿಡಿದು ಮಹೈಶ್ವರ್ಯಕ್ಕೆ ನೆಲೆಮನೆಯೂ ಮಹಾಮಹಿಮೋಪೇತವೂ ಆದ ತ್ರಿಲೋಚನೇಶ್ವರಲಿಂಗಕ್ಕೆ ಅಭಿಷೇಕವನ್ನು ಮಾಡುವರು.

೮. ಮತ್ತು ಅದರ ಸುತ್ತಲೂ ತಮ್ಮ ಹೆಸರುಗಳಿಂದ ಕೂಡಿದ ಲಿಂಗಗಳನ್ನು ಪ್ರತಿಷ್ಠಿಸಿರುವರು. ಆ ಲಿಂಗಗಳನ್ನು ನೋಡುವುದರಿಂದಲೇ ಮನುಷ್ಯರಿಗೆ ಆ ನದಿಗಳಲ್ಲಿ ಸ್ನಾನಗಳನ್ನು ಮಾಡಿದ ಫಲವು ಲಭಿಸುವುದು.

೯. ತ್ರಿಲೋಚನನಿಗೆ ದಕ್ಷಿಣದಿಕ್ಕಿನಲ್ಲಿರುವ ಸರಸ್ವತೀಶ್ವರ ಲಿಂಗವನ್ನು ನೋಡಲು ಬ್ರಹ್ಮಲೋಕದ ಪದವಿಯನ್ನನುಗ್ರಹಿಸುವುದು. ಮುಟ್ಟಿದವರ ಸಮಸ್ತ ದೇಹಗತಜಾಡ್ಯಗಳನ್ನೂ ನಾಶಮಾಡುವುದು.

೧೦. ಪಶ್ಚಿಮದಿಕ್ಕಿನಲ್ಲಿರುವ ಯಮುನೇಶ್ವರ ಲಿಂಗವನ್ನು ಮಹಾಪಾತಕಿಗಳಾದ ಜನರೂ ಭಕ್ತಿಯುಕ್ತರಾಗಿ ಪೂಜಿಸಲು ಯಮಲೋಕದ ಕ್ರೂರಶಿಕ್ಷೆಗಳಿಂದ ಬಿಡುಗಡೆಯನ್ನು ಹೊಂದುವರು.

ದೃಷ್ಟಂ ತ್ರಿಲೋಚನಾತ್ಪ್ರಾಚ್ಯಾಂ ನರ್ಮದೇಶಂ ಸುಶರ್ಮದಂ ।
ತಲ್ಲಿಂಗಾರ್ಚನತೋ ನೄಣಾಂ ಗರ್ಭವಾಸೋ ನಿಷಿಧ್ಯತೇ ॥ ೧೧ ॥
ಸ್ನಾತ್ವಾ ಪಿಲಿಪಿಲಾತೀರ್ಥೇ ತ್ರಿವಿಷ್ಟಪಸಮೀಪತಃ ।
ದೃಷ್ಟ್ವಾ ತ್ರಿಲೋಚನಂ ಲಿಂಗಂ ಕಿಂ ಭೂಯಃ ಪರಿಶೋಚತಿ ॥ ೧೨ ॥
ತ್ರಿವಿಷ್ಟಪಸ್ಯ ಲಿಂಗಸ್ಯ ಸ್ಮರಣಾದಪಿ ಮಾನವಃ ।
ತ್ರಿವಿಷ್ಟಪಪತಿರ್ಭೂಯಾನ್ನಾತ್ರ ಕಾರ್ಯಾ ವಿಚಾರಣಾ ॥ ೧೩ ॥
ತ್ರಿವಿಷ್ಟಪಸ್ಯ ದ್ರಷ್ಟಾರಃ ಸ್ರಷ್ಟಾರಃ ಸ್ಯುರ್ನ ಸಂಶಯಃ ।
ಕೃತಕೃತ್ಯಾಸ್ತ ಏವಾತ್ರ ತ ಏವಾತ್ರ ಮಹಾಧಿಯಃ ॥ ೧೪ ॥
ಆನಂದಕಾನನೇ ಲಿಂಗಂ ಪ್ರಣತಂ ಯೈಸ್ತ್ರಿವಿಷ್ಟಪಂ ।
ತ್ರಿಲೋಚನಸ್ಯ ನಾಮಾಪಿ ಯೈಃ ಶ್ರುತಂ ಶುದ್ಧಬುದ್ಧಿಭಿಃ ।
ಸಪ್ತಜನ್ಮಾರ್ಜಿತಾತ್ಪಾಪಾತ್ತೇ ಪೂತಾ ನಾತ್ರ ಸಂಶಯಃ ॥ ೧೫ ॥
ಪೃಥಿವ್ಯಾಂ ಯಾನಿ ಲಿಂಗಾನಿ ತೇಷು ದೃಷ್ಟೇಷು ಯತ್ಫಲಂ ।
ತಸ್ಮಾತ್ತ್ರಿವಿಷ್ಟಪೇ ದೃಷ್ಟೇ ಕಾಶ್ಯಾಂ ಮನ್ಯೇ ತತೋಽಧಿಕಂ ॥ ೧೬ ॥

---

೧೧. ತ್ರಿಲೋಚನೇಶ್ವರನಿಗೆ ಪೂರ್ವದಲ್ಲಿ ನರ್ಮದೇಶ್ವರಲಿಂಗವಿರುವುದು. ಇಹಪರಸೌಖ್ಯಗಳನ್ನು ಕೊಡುವ ಅದನ್ನು ಅವಶ್ಯಕವಾಗಿ ನೋಡಬೇಕು. ಅದನ್ನು ಅರ್ಚಿಸಿದವರಿಗೆ ಪುನಃ ತಾಯಿಯ ಗರ್ಭದಲ್ಲಿ ವಾಸವುಂಟಾಗುವುದಿಲ್ಲ.

೧೨. ತ್ರಿವಿಷ್ಟಪದ ಸಮೀಪದಲ್ಲಿರುವ ಪಿಲಿಪಿಲಾತೀರ್ಥದಲ್ಲಿ ಸ್ನಾನವನ್ನು ಮಾಡಿ ತ್ರಿಲೋಚನೇಶ್ವರಲಿಂಗವನ್ನು ನೋಡಿದಮೇಲೆ ಮನುಷ್ಯನು ಏತಕ್ಕಾಗಿ ದುಃಖಪಡಬೇಕು?

೧೩. ಈ ತ್ರಿವಿಷ್ಟಪಲಿಂಗದ ಸ್ಮರಣೆಯಮಾತ್ರದಿಂದಲೇ ಮನುಷ್ಯನು ಸ್ವರ್ಗಲೋಕಕ್ಕೂ ಅಧಿಪತಿಯಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೧೪. ತ್ರಿಲೋಚನೇಶ್ವರನನ್ನು ನೋಡಿದವರು ಚತುರ್ಮುಖಬ್ರಹ್ಮರೇ ಆಗುವರು. ಇದರಲ್ಲಿ ಸಂದೇಹವಿಲ್ಲ. ಭೂಲೋಕದಲ್ಲಿ ಅವರೇ ಕೃತಕೃತ್ಯರು. ಅವರೇ ಮಹಾಬುದ್ಧಿಶಾಲಿಗಳು.

೧೫. ಆನಂದಕಾನನದಲ್ಲಿರುವ ಈ ತ್ರಿವಿಷ್ಟಪಲಿಂಗಕ್ಕೆ ಯಾರು ಪ್ರಣಾಮಗಳನ್ನು ಮಾಡುತ್ತಿರುವರೊ, ಯಾರು ಪರಿಶುದ್ಧಮನಸ್ಸಿನಿಂದ ತ್ರಿಲೋಚನೇಶ್ವರನ ನಾಮಮಾತ್ರವನ್ನಾದರೂ ಕೇಳುವರೊ, ಅವರು ಏಳು ಜನ್ಮಗಳಲ್ಲಿ ಮಾಡಿದ ಪಾತಕಗಳಿಂದ ಪವಿತ್ರರಾಗುವುದರಲ್ಲಿ ಸಂಶಯವೇ ಇಲ್ಲವು.

೧೬. ಭೂಲೋಕದಲ್ಲಿ ಎಷ್ಟು ಲಿಂಗಗಳಿರುವುವೊ, ಅವುಗಳೆಲ್ಲವನ್ನೂ ನೋಡಲು ಯಾವ ಫಲವು ಲಭಿಸುವುದೊ, ಕಾಶಿಯಲ್ಲಿರುವ ತ್ರಿವಿಷ್ಟಪಲಿಂಗದ

ಕಾಶ್ಯಾಂ ತ್ರಿವಿಷ್ಟಪೇ ದೃಷ್ಟೇ ದೃಷ್ಟಂ ಸರ್ವಂ ತ್ರಿವಿಷ್ಟಪಂ ।
ಕ್ಷಣಾನ್ನಿರ್ಧೂತಪಾಪೋಽಸೌ ನ ಪುನರ್ಗರ್ಭಭಾಗ್ಭವೇತ್ ॥ ೧೭ ॥
ಸ ಸ್ನಾತಃ ಸರ್ವತೀರ್ಥೇಷು ಸರ್ವಾವಭೃತವಾನ್ಸ ವಾ ।
ಯೋ ವೈ ಪಿಲಿಪಿಲಾತೀರ್ಥೇ ಸ್ನಾತ್ವೋತ್ತರವಹಾಂಭಸಿ ॥ ೧೮ ॥
ಸರಿತ್ತ್ರಯಂ ಮಹಾಪುಣ್ಯಂ ಯತ್ರ ಸಾಕ್ಷಾದ್ವಸೇತ್ಸದಾ ।
ತತ್ರ ಶ್ರಾದ್ಧಾದಿಕಂ ಕೃತ್ವಾ ಗಯಾಯಾಂ ಕಿಂ ಕರಿಷ್ಯತಿ ॥ ೧೯ ॥
ಸ್ನಾತ್ವಾ ಪಿಲಿಪಿಲಾತೀರ್ಥೇ ಕೃತ್ವಾ ವೈ ಪಿಂಡಪಾತನಂ ।
ದೃಷ್ಟ್ವಾ ತ್ರಿವಿಷ್ಟಪಂ ಲಿಂಗಂ ಕೋಟಿತೀರ್ಥಫಲಂ ಲಭೇತ್ ॥ ೨೦ ॥
ಯದನ್ಯತ್ರಾರ್ಜಿತಂ ಪಾಪಂ ತತ್ಕಾಶೀದರ್ಶನಾದ್ವ್ರಜೇತ್ ।
ಕಾಶ್ಯಾಂ ತು ಯತ್ಕೃತಂ ಪಾಪಂ ತತ್ಪೈಶಾಚಪದಪ್ರದಂ ॥ ೨೧ ॥
ಪ್ರಮಾದಾತ್ಪಾತಕಂ ಕೃತ್ವಾ ಶಂಭೋರಾನಂದಕಾನನೇ ।
ದೃಷ್ಟ್ವಾ ತ್ರಿವಿಷ್ಟಪಂ ಲಿಂಗಂ ತತ್ಪಾಪಮಪಿ ಹಾಸ್ಯತಿ ॥ ೨೨ ॥

---

ದರ್ಶನದಿಂದಲೂ ಅದೇ ಫಲವೇ ಲಭಿಸುವುದು. ನಾನು ಅದಕ್ಕೂ ಹೆಚ್ಚಿನ ಫಲವೇ ದೊರಕುವುದೆಂದು ತಿಳಿದಿರುವೆನು.

೧೭. ಕಾಶಿಯ ತ್ರಿವಿಷ್ಟಪಲಿಂಗವನ್ನು ನೋಡಲು ಸ್ವರ್ಗಲೋಕವೆಲ್ಲವನ್ನೂ ನೋಡಿದಂತಾಗುವುದು. ಆ ಮನುಷ್ಯನು ಒಂದು ಕ್ಷಣದಲ್ಲಿಯೇ ತನ್ನ ಪಾಪಗಳನ್ನು ಕಳೆದುಕೊಂಡು ಪುನಃ ಗರ್ಭವಾಸಕ್ಕೆ ಭಾಗಿಯಾಗುವುದಿಲ್ಲ.

೧೮. ಯಾವನು ಉತ್ತರವಾಹಿನಿಯಾದ ಪ್ರವಾಹವಿರುವ ಪಿಲಿಪಿಲಾ ತೀರ್ಥದಲ್ಲಿ ಸ್ನಾನಮಾಡುವನೊ, ಅವನೇ ಸಮಸ್ತತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದವನು ಮತ್ತು ಸಕಲ ಯಜ್ಞಗಳನ್ನೂ ಮಾಡಿ ಅವಭೃಥಸ್ನಾನಗಳನ್ನು ನೆರವೇರಿಸಿದವನೆಂದು ತಿಳಿಯಬೇಕು.

೧೯. ಈ ತೀರ್ಥವು ಮಹಾಪುಣ್ಯಪ್ರದವು. ಇಲ್ಲಿ ಮೂವರು ನದ್ಯಭಿಮಾನಿ ದೇವಿಯರೂ ಯಾವಾಗಲೂ ಸಾಕ್ಷಾತ್ತಾಗಿ ವಾಸಮಾಡುತ್ತಿರುವರು. ಇಲ್ಲಿ ಶ್ರಾದ್ಧಾದಿ ಪಿತೃಕಾರ್ಯಗಳನ್ನು ಮಾಡಿದವನು ಗಯೆಯಲ್ಲಿ ಹೆಚ್ಚಾಗಿ ಮಾಡುವುದೇನು ?

೨೦. ಪಿಲಿಪಿಲಾತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಪಿತೃದೇವತೆಗಳಿಗೆ ಪಿಂಡಗಳನ್ನರ್ಪಿಸಿ ಬಳಿಕ ತ್ರಿಲೋಚನೇಶ್ವರಲಿಂಗದ ದರ್ಶನವನ್ನು ತೆಗೆದುಕೊಂಡ ಮನುಜನು ಕೋಟಿತೀರ್ಥಗಳನ್ನು ಸೇವಿಸಿದ ಫಲವನ್ನು ಹೊಂದುವನು.

೨೧. ಇತರ ಸ್ಥಳಗಳಲ್ಲಿ ಮಾಡಿದ ಪಾಪರಾಶಿಯೆಲ್ಲವೂ ಕಾಶೀಕ್ಷೇತ್ರದ ದರ್ಶನದಿಂದಲೇ ನಾಶವಾಗುವುದು. ಕಾಶಿಯಲ್ಲಿ ಮಾಡಿದ ಕಿಂಚಿತ್ಪಾಪವಾದರೂ ಮನುಷ್ಯನಿಗೆ ಪಿಶಾಚಜನ್ಮವನ್ನು ಕೊಡುವುದು.

೨೨. ಪರಮೇಶ್ವರನ ಪ್ರಿಯಾವಾಸವಾದ ಆನಂದಕಾನನದಲ್ಲಿ ಪ್ರಮಾದ

ಸರ್ವಸ್ಮಿನ್ನಪಿ ಭೂಪೃಷ್ಠೇ ಶ್ರೇಷ್ಠಮಾನಂದಕಾನನಂ ।
ತತ್ರಾಪಿ ಸರ್ವತೀರ್ಥಾನಿ ತತೋऽಪ್ಯೋಂಕಾರಭೂಮಿಕಾ ॥ ೨೩ ॥
ಓಂಕಾರಾದಪಿ ಸಲ್ಲಿಂಗಾನ್ಮೋಕ್ಷವರ್ತ್ಮಪ್ರಕಾಶಕಂ ॥ ೨೪ ॥
ಅತಿಶ್ರೇಷ್ಠತರಂ ಲಿಂಗಂ ಶ್ರೇಯೋರೂಪಂ ತ್ರಿಲೋಚನಂ ॥ ೨೫ ॥
ತೇಜಸ್ವಿಷು ಯಥಾ ಭಾನುರ್ದೃಶ್ಯೇಷು ಚ ಯಥಾ ಶಶೀ ।
ತಥಾ ಲಿಂಗೇಷು ಸರ್ವೇಷು ಪರಂ ಲಿಂಗಂ ತ್ರಿಲೋಚನಂ ॥ ೨೬ ॥
ತ್ರಿಲೋಚನಾರ್ಚಕಾನಾಂ ಸಾ ಪದವೀ ನ ದವೀಯಸೀ ।
ಪರಂ ನಿರ್ವಾಣಪದ್ಮಾಯಾ ಮಹಾಸೌಖ್ಯೈಕಶೇವಧೇಃ ॥ ೨೭ ॥
ಸಕೃತ್ತ್ರಿಲೋಚನಾರ್ಚಾತೋ ಯಚ್ಛ್ರೇಯಃ ಸಮುಪಾರ್ಜ್ಯತೇ ।
ನ ತದಾ ಜನ್ಮಸಂಪೂಜ್ಯ ಲಿಂಗಾನ್ಯನ್ಯಾನಿ ಲಭ್ಯತೇ ॥ ೨೮ ॥
ಕಾಶ್ಯಾಂ ತ್ರಿಲೋಚನಂ ಲಿಂಗಂ ಯೇऽರ್ಚಯಂತಿ ಮಹಾಧಿಯಃ ।
ತೇऽರ್ಚ್ಯಾಸ್ತ್ರಿಭುವನೌಕೋಭಿರ್ಮಮ ಪ್ರೀತಿಮಭೀಪ್ಸುಭಿಃ ॥ ೨೯ ॥

ವಶದಿಂದ ಪಾತಕವನ್ನು ಮಾಡಿದರೂ, ಆ ಪಾತಕವು ತ್ರಿಲೋಚನೇಶ್ವರಲಿಂಗದ ದರ್ಶನದಿಂದ ಕಳೆದುಹೋಗುವುದು.

೨೩. ಸಕಲ ಭೂಮಂಡಲದಲ್ಲಿಯೂ ಆನಂದಕಾನನವೇ ಸರ್ವಶ್ರೇಷ್ಠವಾದ ಕ್ಷೇತ್ರವು. ಅದರಲ್ಲಿ ಸಮಸ್ತ ತೀರ್ಥಗಳೂ ನೆಲಸಿರುವುವು. ಅವುಗಳಲ್ಲಿ ಓಂಕಾರೇಶ್ವರಕ್ಷೇತ್ರಪ್ರದೇಶವೇ ಉತ್ತಮವೆನಿಸಿರುವುದು.

೨೪–೨೫. ಭಕ್ತರಿಗೆ ಮೋಕ್ಷಮಾರ್ಗವನ್ನು ತೋರಿಸಿಕೊಡುವ ಉತ್ತಮವಾದ ಓಂಕಾರೇಶ್ವರಲಿಂಗಕ್ಕಿಂತಲೂ ಸರ್ವಶ್ರೇಯಸ್ಸುಗಳ ನಿಧಿಯೆನಿಸಿದ ತ್ರಿಲೋಚನೇಶ್ವರಲಿಂಗವು ಅತ್ಯಂತ ಶ್ರೇಷ್ಠತರವಾಗಿರುವುದು.

೨೬. ಪ್ರಕಾಶಮಯರಾದವರಲ್ಲಿ ಸೂರ್ಯನು ಹೇಗೆಯೊ, ನೋಡುವುದಕ್ಕೆ ಆನಂದದಾಯಕರಲ್ಲಿ ಚಂದ್ರನು ಹೇಗೆ ಸರ್ವೋತ್ತಮನೊ, ಹಾಗೆಯೇ ಈ ತ್ರಿಲೋಚನಲಿಂಗವು ಸಮಸ್ತಲಿಂಗಗಳಲ್ಲಿಯೂ ಅತ್ಯುತ್ತಮವಾಗಿರುವುದು.

೨೭. ತ್ರಿಲೋಚನೇಶ್ವರನ ಪೂಜಕರಿಗೆ ಪರಮಾನಂದೈಕನಿಧಿಯಾದ ಮೋಕ್ಷಲಕ್ಷ್ಮಿಯ ಪದವಿಯೂ ಸಹ ಬಹಳ ದುಸ್ಸಾಧ್ಯವಾದುದಲ್ಲವು.

೨೮. ಒಂದೇಸಲವಾದರೂ ಸರಿಯೆ ತ್ರಿಲೋಚನಲಿಂಗವನ್ನು ಪೂಜಿಸುವುದರಿಂದ ಯಾವ ಶ್ರೇಯಸ್ಸುಂಟಾಗುವುದೊ, ಇತರ ಲಿಂಗಗಳನ್ನು ಆಜನ್ಮಪರ್ಯಂತರವೂ ಪೂಜಿಸುವುದರಿಂದ ಅದು ಲಭ್ಯವಾಗುವುದಿಲ್ಲ.

೨೯. ಯಾವ ಮಹಾಬುದ್ಧಿಶಾಲಿಗಳು ಕಾಶಿಯಲ್ಲಿ ತ್ರಿಲೋಚನೇಶ್ವರಲಿಂಗವನ್ನು ಅರ್ಚನೆಮಾಡುವರೊ ಅವರನ್ನು, ನನ್ನ ಅನುಗ್ರಹವನ್ನು ಪಡೆಯಲೆಳಸುವ ಮೂರು ಲೋಕಗಳ ನಿವಾಸಿಗಳೂ ಪೂಜಿಸಬೇಕು.

ಕೃತ್ವಾಪಿ ಸರ್ವಸಂನ್ಯಾಸಂ ಕೃತ್ವಾ ಪಾಶುಪತವ್ರತಂ ।
ನಿಯಮೇಭ್ಯಃ ಸ್ಖಲಿತ್ವಾಪಿ ಕುತೋ ಬಿಭ್ಯತಿ ಮಾನವಾಃ ॥ ೩೦ ॥
ವಿದ್ಯಮಾನೇ ಮಹಾಲಿಂಗೇ ಮಹಾಪಾಪೌಘಹಾರಿಣಿ ।
ತ್ರಿವಿಷ್ಟಪೇ ಪುಣ್ಯರಾಶೌ ಮೋಕ್ಷನಿಕ್ಷೇಪಸದ್ಮನಿ ॥ ೩೧ ॥
ಸಮಭ್ಯರ್ಚ್ಯ ಮಹಾಲಿಂಗಂ ಸಕೃದೇವ ತ್ರಿಲೋಚನಂ ।
ಮುಚ್ಯತೇ ಕಲುಷೈಃ ಸರ್ವೈರಪಿ ಜನ್ಮಶತಾರ್ಜಿತೈಃ ॥ ೩೨ ॥
ಬ್ರಹ್ಮಹಾಪಿ ಸುರಾಪೋ ವಾ ಸ್ತೇಯೀ ವಾ ಗುರುತಲ್ಪಗಃ ।
ತತ್ಸಂಯೋಗ್ಯಪಿ ವಾ ವರ್ಷಂ ಮಹಾಪಾಪೀ ಪ್ರಕೀರ್ತಿತಃ ॥ ೩೩ ॥
ಪರದಾರರತಶ್ಚಾಪಿ ಪರಹಿಂಸಾರತೋಽಪಿ ವಾ ।
ಪರಾಪವಾದಶೀಲೋಽಪಿ ತಥಾ ವಿಸ್ರಂಭಘಾತಕಃ ॥ ೩೪ ॥
ಕೃತಘ್ನೋಽಪಿ ಭ್ರೂಣಹಾಪಿ ವೃಷಲೀಪತಿರೇವ ವಾ ।
ಮಾತಾಪಿತೃಗುರುತ್ಯಾಗೀ ವಹ್ನಿದೋ ಗರದೋಽಪಿ ವಾ ॥ ೩೫ ॥

೩೦. ಸರ್ವಸಂಗಪರಿತ್ಯಾಗವನ್ನು ಮಾಡಿದರೂ. ಪಾಶುಪತವ್ರತಗಳನ್ನು ನಡೆಸಿದರೂ. ಆ ನಿಯಮಗಳಲ್ಲಿ ನಡೆಯುವ ಲೋಪದೋಷಗಳಿಂದ ಮನುಷ್ಯರು ಏಕೆ ಭಯಗೊಳ್ಳಬೇಕು?

೩೧. ಸಮಸ್ತ ಪಾತಕಗಳನ್ನು ನಾಶಮಾಡುವುದೂ. ಪುಣ್ಯರಾಶಿಯೂ, ಮೋಕ್ಷೈಶ್ವರ್ಯಕ್ಕೆ ನೆಲೆಮನೆಯೂ ಎನಿಸಿರುವ ತ್ರಿಲೋಚನೇಶ್ವರನೆಂಬ ಮಹಾಲಿಂಗವು ಲೋಕ ಪ್ರಖ್ಯಾತವಾಗಿರುವುದಲ್ಲವೆ?

೩೨. ಈ ತ್ರಿಲೋಚನಮಹಾಲಿಂಗವನ್ನು ಒಮ್ಮೆಯಾದರೂ ಸರ್ವೋಪಚಾರಗಳಿಂದ ಪೂಜಿಸಿದ ಮನುಷ್ಯನು ಹಿಂದಿನ ನೂರಾರು ಜನ್ಮಗಳಲ್ಲಿ ಶೇಖರಿಸಿದ ಸಮಸ್ತ ಕಲ್ಮಷಗಳಿಂದಲೂ ಬಿಡುಗಡೆಯನ್ನು ಹೊಂದುವನು.

೩೩. ಬ್ರಾಹ್ಮಣನನ್ನು ಕೊಂದವನು. ಸುರಾಪಾನವನ್ನು ಮಾಡಿದವನು, ಕಳ್ಳನು, ಗುರುದಾರಗಾಮಿಯು. ಇವರೊಡನೆ ಸಹವಾಸವನ್ನು ಬೆಳಸುವವನು ಈ ಐವರೂ ಒಂದು ವರ್ಷದವರೆಗೂ ಮಹಾಪಾತಕಿಗಳೆಂದು ಕರೆಯಲ್ಪಡುವರು.

೩೪–೩೮. ಪರಸ್ತ್ರೀಯರಲ್ಲಿ ಆಸಕ್ತನಾಗಿರುವವನು, ಪರರನ್ನು ಹಿಂಸೆಗೊಳಿಸುತ್ತಿರುವವನು. ಪರರ ನಿಂದೆಯನ್ನೇ ಮಾಡುತ್ತಿರುವವನು, ನಂಬಿದವರನ್ನು ಮೋಸಗೊಳಿಸುವವನು. ಉಪಕಾರವನ್ನು ಮರೆತವನು, ಶಿಶುಹತ್ಯೆಯನ್ನು ಮಾಡುವವನು. ವೃಷಲೀಪತಿಯು (ಪ್ರೌಢೆಯಾದ ಕನ್ಯೆಯನ್ನು ಮದುವೆಯಾದವನು), ತಾಯಿ, ತಂದೆ, ಗುರುಗಳನ್ನು ಕೈಬಿಡುವವನು, ಪರರ ಮನೆಗಳಿಗೆ ಬೆಂಕಿಯನ್ನಿಡುವವನು, ಇತರರಿಗೆ ವಿಷವನ್ನುಣಿಸುವವನು, ಪಶುಘಾತಕನು, ಸ್ತ್ರೀಘಾತಕನು, ಶೂದ್ರರನ್ನು ಕೊಲ್ಲುವವನು, ಕನ್ಯೆಯರನ್ನು ಕೆಡಿಸು

ಗೋಘ್ನಃ ಸ್ತ್ರೀಘ್ನೋಽಪಿ ಶೂದ್ರಘ್ನಃ ಕನ್ಯಾದೂಷಯಿತಾಪಿ ವಾ ।
ಕ್ರೂರೋ ವಾ ಪಿಶುನೋ ವಾಪಿ ನಿಜಧರ್ಮಪರಾಙ್ಮುಖಃ ॥ ೩೬ ॥
ನಿಂದಕೋ ನಾಸ್ತಿಕೋ ವಾಪಿ ಕೂಟಸಾಕ್ಷ್ಯಪ್ರವಾದಕಃ ।
ಅಭಕ್ಷ್ಯಭಕ್ಷಕೋ ವಾಪಿ ತಥಾಽವಿಕ್ರೇಯವಿಕ್ರಯೀ ॥ ೩೭ ॥
ಇತ್ಯಾದಿ ಪಾಪಶೀಲೋಽಪಿ ಮುಕ್ತ್ವೈಕಂ ಶಿವನಿಂದಕಂ ।
ಪಾಪಾನ್ನಿಷ್ಕೃತಿಮಾಪ್ನೋತಿ ನತ್ವಾ ಲಿಂಗಂ ತ್ರಿಲೋಚನಂ ॥ ೩೮ ॥
ಶಿವನಿಂದಾರತೋ ಮೂಢಃ ಶಿವಶಾಸ್ತ್ರವಿನಿಂದಕಃ ।
ತಸ್ಯ ನೋ ನಿಷ್ಕೃತಿರ್ದೃಷ್ಟಾ ಕ್ವಾಪಿ ಶಾಸ್ತ್ರೇಽಪಿ ಕೇನಚಿತ್ ॥ ೩೯ ॥
ಆತ್ಮಘಾತೀ ಸ ವಿಜ್ಞೇಯಃ ಸದಾ ತ್ರೈಲೋಕ್ಯಘಾತಕಃ ।
ಶಿವನಿಂದಾಂ ವಿಧತ್ತೇ ಯಃ ಸ ನಾಭಾಷ್ಯೋಽಧಮಾಧಮಃ ॥ ೪೦ ॥
ಶಿವನಿಂದಾರತಾ ಯೇ ಚ ವಿಶ್ವಭಕ್ತಜನೇಷ್ವಪಿ ।
ತೇ ಯಾಂತಿ ನರಕೇ ಘೋರೇ ಯಾವಚ್ಚಂದ್ರದಿವಾಕರೌ ॥ ೪೧ ॥

---

ವವನು, ಸ್ವಭಾವದಿಂದ ಕ್ರೂರನು, ಅತ್ಯಂತಲೋಭಿಯು, ವರ್ಣಾಶ್ರಮೋಚಿತಗಳಾದ ಧರ್ಮಗಳನ್ನು ಕೈಬಿಟ್ಟವನು, ಪರರ ದುರ್ಗುಣಗಳನ್ನೇ ಕೀರ್ತಿಸುವವನು, ದೇವರು ಪರಲೋಕಾದಿಗಳಿಲ್ಲವೆಂದು ವಾದಿಸುವವನು, ದುಡ್ಡಿಗಾಗಿ ಸುಳ್ಳು ಸಾಕ್ಷ್ಯವನ್ನು ಹೇಳುವವನು, ನಿಷಿದ್ಧ ಪದಾರ್ಥಗಳನ್ನು ಭೋಜನಮಾಡುವವನು, ಮಾರಬಾರದ ಪದಾರ್ಥಗಳನ್ನು ಮಾರುವವನು — ಇವರು ಮೊದಲಾಗಿ ಯಾವ ಪಾತಕವನ್ನೇ ಮಾಡಿದವರಾದರೂ, ಶಿವನಿಂದೆ ಮಾಡುವನೊಬ್ಬನನ್ನುಳಿದು ಎಲ್ಲರೂ ತ್ರಿಲೋಚನೇಶ್ವರಲಿಂಗಕ್ಕೆ ನಮಸ್ಕಾರವನ್ನು ಮಾಡುವುದರಿಂದ ಸಮಸ್ತ ಪಾಪಗಳಿಂದಲೂ ಮೋಕ್ಷವನ್ನು ಪಡೆಯುವರು.

೩೯. ಯಾವ ಮೂಢನು ಪರಮಶಿವನ ನಿಂದೆಯನ್ನು ಮಾಡುವನೊ, ಶಿವನನ್ನು ಕೊಂಡಾಡುವ ಶಾಸ್ತ್ರಗಳನ್ನು ದೂಷಿಸುವನೊ, ಅವನಿಗೆ ಆ ಪಾಪದಿಂದ ಬಿಡುಗಡೆಯಾಗುವ ದೇಶಕಾಲಗಳನ್ನು ಯಾರೂ ಯಾವ ಶಾಸ್ತ್ರದಲ್ಲಿಯೂ ಕಂಡುದಿಲ್ಲ, ಕೇಳಿದುದಿಲ್ಲ.

೪೦. ಅವನನ್ನೇ ಆತ್ಮಘಾತಕನೆಂದೂ, ಮೂರುಲೋಕಗಳ ಜೀವರ ಘಾತಕನೆಂದೂ ತಿಳಿಯಬೇಕು. ಯಾವನು ಶಿವನಿಂದೆಯನ್ನು ಮಾಡುವನೊ, ಅವನು ಅತ್ಯಂತ ನೀಚನು. ಅವನೊಡನೆ ಯಾರೂ ಮಾತನಾಡಬಾರದು.

೪೧. ಶಿವನಿಂದೆಯಲ್ಲಿಯೇ ಆಗಲಿ, ಶಿವಭಕ್ತರ ನಿಂದೆಯಲ್ಲಿಯೇ ಆಗಲಿ ಯಾರು ಸದಾನಿರತರಾಗಿರುವರೊ, ಅವರು ಸೂರ್ಯಚಂದ್ರರಿರುವವರೆಗೂ ಘೋರವಾದ ನರಕದ ವಾಸವನ್ನನುಭವಿಸುವರು.

ಶೈವಾಃ ಪೂಜ್ಯಾಃ ಪ್ರಯತ್ನೇನ ಕಾಶ್ಯಾಂ ಮೋಕ್ಷಮಭೀಪ್ಸುಭಿಃ ।
ತೇಷ್ವರ್ಚಿತೇಷ್ವಪಿ ಶಿವಃ ಪ್ರೀತೋ ಭವತ್ಯಸಂಶಯಃ ॥ ೪೨ ॥
ಸರ್ವೇಷಾಮಿಹ ಪಾಪಾನಾಂ ಪ್ರಾಯಶ್ಚಿತ್ತಚಿಕೀರ್ಷಯಾ ।
ನಿಃಶಂಕೈರೇವ ವಕ್ತವ್ಯಂ ಪ್ರಮಾಣಜ್ಞೈರಿದಂ ವಚಃ ॥ ೪೩ ॥
ಪುರಶ್ಚರಣಕಾಮಶ್ಚೇದ್ಭೀತೋಽಪಿ ಯದಿ ಪಾಪತಃ ।
ಮನ್ಯಸೇ ಯದಿ ನಃ ಸತ್ಯಂ ವಾಕ್ಯಂ ಶಾಸ್ತ್ರಪ್ರಮಾಣತಃ ॥ ೪೪ ॥
ತತಃ ಸರ್ವಂ ಪರಿತ್ಯಜ್ಯ ಕೃತ್ವಾ ಮನಸಿ ನಿಶ್ಚಯಂ ।
ಆನಂದಕಾನನಂ ಯಾಹಿ ಯತ್ರ ವಿಶ್ವೇಶ್ವರಃ ಸ್ವಯಂ ॥ ೪೫ ॥
ಯತ್ರ ಕ್ಷೇತ್ರಪ್ರವಿಷ್ಟಾನಾಂ ನರಾಣಾಂ ನಿಶ್ಚಿತಾತ್ಮನಾಂ ।
ನ ಬಾಧತೇಽಘನಿಚಯಃ ಪ್ರಾಪ್ಯೇತ ಚ ಪರೋ ವೃಷಃ ॥ ೪೬ ॥
ತತ್ರಾದ್ಯಾಪಿ ಮಹಾತೀರ್ಥೇ ತ್ರಿಸ್ರೋತಸ್ಯಾತಿನಿರ್ಮಲೇ ।
ಪುಣ್ಯೇ ಪಿಲಿಪಿಲಾನಾಮ್ನಿ ತ್ರಿಸರಿತ್ಪರಿಸೇವಿತೇ ॥ ೪೭ ॥

---

೪೨. ಮೋಕ್ಷವನ್ನಪೇಕ್ಷಿಸುವವರಿಗೆ ಕಾಶೀಕ್ಷೇತ್ರದಲ್ಲಿ ಶಿವಭಕ್ತರು ಸರ್ವಥಾ ಸಂಪೂಜ್ಯರಾಗಿರುವರು. ಅವರನ್ನು ಪೂಜೆಮಾಡಲು ಪರಮೇಶ್ವರನೂ ತೃಪ್ತಿಗೊಳ್ಳುವನೆಂಬುದರಲ್ಲಿ ಸಂದೇಹವೇ ಇಲ್ಲವು.

೪೩. ಸಮಸ್ತ ಪಾತಕಗಳ ಪ್ರಾಯಶ್ಚಿತ್ತಗಳನ್ನೂ ಮಾಡಿಕೊಳ್ಳುವ ಅಭಿಲಾಷೆಯುಳ್ಳವರು ಬಂದರೆ ಶಾಸ್ತ್ರಜ್ಞರಾದವರು ನಿಸ್ಸಂದೇಹವಾಗಿ ಅವರಿಗೆ ಈ ಮಾತುಗಳನ್ನು ಹೇಳಬೇಕಾಗಿರುವುದು.

೪೪–೪೫. ಭಗವನ್ನಾಮಪುರಶ್ಚರಣೆಯನ್ನು ಮಾಡಲು ಅಭಿಲಾಷೆಯಿದ್ದರೆ, ನಿನ್ನ ಪಾತಕಗಳ ವೆಸೆಯಿಂದ ನಿಜವಾಗಿಯೂ ಭಯಗೊಂಡಿರುವೆಯಾದರೆ, ಶಾಸ್ತ್ರ ಪ್ರಮಾಣಗಳಿಂದ ಹೇಳುತ್ತಿರುವ ನಮ್ಮ ಮಾತುಗಳನ್ನು ಯಥಾರ್ಥವೆಂದು ನೀನು ನಂಬುವೆಯಾದರೆ, ಇತರ ಕರ್ಮಗಳೆಲ್ಲವನ್ನೂ ಪರಿತ್ಯಜಿಸಿ ಮನಸ್ಸಿನಲ್ಲಿ ಒಂದೇ ದೃಢನಿಶ್ಚಯವನ್ನು ಮಾಡಿಕೊಂಡು ವಿಶ್ವೇಶ್ವರನು ನೆಲೆಮನೆಯಾಗಿ ಮಾಡಿಕೊಂಡಿರುವ ಆನಂದಕಾನನವನ್ನು ಹೋಗಿ ಸೇರು.

೪೬. ದೃಢನಿಶ್ಚಯಸಹಿತವಾದ ಮನಸ್ಸಿನಿಂದ ಆ ಕ್ಷೇತ್ರವನ್ನು ಪ್ರವೇಶಿಸಿದ ಮನುಷ್ಯರನ್ನು ಎಂತಹ ಪಾತಕಸಮೂಹವೂ ಬಾಧಿಸುವುದಿಲ್ಲ. ಅವರಿಗೆ ಸರ್ವೋತ್ತಮವಾದ ಧರ್ಮವೇ ಲಭಿಸುವುದು.

೪೭. ಅಲ್ಲಿ ಇಂದಿಗೂ ಮೂರು ಪ್ರವಾಹಗಳುಳ್ಳದುದಾಗಿ, ಸರಸ್ವತಿ, ನರ್ಮದೆ, ಯಮುನೆಯರು ಸಂಗಮಿಸುವ ಅತಿಸ್ವಚ್ಛವೂ, ಪುಣ್ಯಪ್ರದವೂ ಆದ ಪಿಲಿಪಿಲಾನಾಮಕವಾದ ಮಹಾತೀರ್ಥವೊಂದಿರುವುದು.

ತ್ರಿಲೋಚನಾಕ್ಷಿವಿಕ್ಷೇಪಪರಿಕ್ಷಿಪ್ತಮಹೈನಸಿ ।
ಸ್ನಾತ್ವಾ ಗೃಹ್ಯೋಕ್ತವಿಧಿನಾ ತರ್ಪಣೇಯಾನ್ಪ್ರತರ್ಪ್ಯ ಚ ॥ ೪೮ ॥
ದತ್ವಾ ದೇಯಂ ಯಥಾಶಕ್ತಿ ವಿತ್ತಶಾಠ್ಯವಿವರ್ಜಿತಃ ।
ದೃಷ್ಟ್ವಾ ತ್ರಿವಿಷ್ಟಪಂ ಲಿಂಗಂ ಸಮಭ್ಯರ್ಚ್ಯಾತಿಭಕ್ತಿತಃ ॥ ೪೯ ॥
ಗಂಧಾದ್ಯೈರ್ವಿವಿಧೈರ್ಮಾಲ್ಯೈಃ ಪಂಚಾಮೃತಪುರಃಸರೈಃ ।
ಧೂಪೈರ್ದೀಪೈಃ ಸ ನೈವೇದ್ಯೈರ್ವಾಸೋಭಿರ್ಬಹುಭೂಷಣೈಃ ॥ ೫೦ ॥
ಪೂಜೋಪಕರಣೈರ್ದ್ರವ್ಯೈರ್ಘಂಟಾದರ್ಪಣಚಾಮರೈಃ ।
ಚಿತ್ರಧ್ವಜಪತಾಕಾಭಿರ್ನೃತ್ಯವಾದ್ಯಸುಗಾಯನೈಃ ॥ ೫೧ ॥
ಜಪೈಃ ಪ್ರದಕ್ಷಿಣಾಭಿಶ್ಚ ನಮಸ್ಕಾರೈರ್ಮುದಾಯುತೈಃ ।
ಪರಿಚಾರಕಸಂತೋಷೈಃ ಕೃತ್ವೇತಿ ಪರಿಪೂಜನಂ ॥ ೫೨ ॥
ಬ್ರಾಹ್ಮಣಾನ್ವಾಚಯೇತ್ಪಶ್ಚಾನ್ನಿಷ್ಪಾಪೋಽಹಮಿತಿ ಬ್ರುವನ್ ।
ಏವಂ ಕುರ್ವನ್ನರಃ ಪ್ರಾಜ್ಞೋ ನಿರೇನಾ ಜಾಯತೇ ಕ್ಷಣಾತ್ ॥ ೫೩ ॥

---

೪೮. ತ್ರಿಲೋಚನೇಶ್ವರನ ಕೃಪಾಕಟಾಕ್ಷಕ್ಕೆ ವಿಷಯನಾಗಿ ಅವು ಸಕಲ ಪಾಪಗಳನ್ನೂ ನಾಶಮಾಡುತ್ತಿರುವುದು. ಗೃಹ್ಯಶಾಸ್ತ್ರಗಳಲ್ಲಿ ಹೇಳಿರುವ ವಿಧಿಯಿಂದ ಅದರಲ್ಲಿ ಸ್ನಾನವನ್ನುಮಾಡಿ ಪಿತೃಪಿತಾಮಹಾದಿಗಳಿಗೆಲ್ಲ ತರ್ಪಣಗಳನ್ನು ಕೊಡಬೇಕು.

೪೯. ಧನಲೋಭವನ್ನು ದೂರಮಾಡಿ ಯಥಾಶಕ್ತಿಯಾಗಿ ದಾನಗಳನ್ನು ಮಾಡಬೇಕು. ಬಳಿಕ ತ್ರಿಲೋಚನೇಶ್ವರಲಿಂಗವನ್ನು ನೋಡಿ ಅತ್ಯಂತ ಭಕ್ತಿಯಿಂದ ಸರ್ವೋಪಚಾರಪೂಜೆಯನ್ನು ಮಾಡಬೇಕು.

೫೦–೫೨. ಗಂಧಾದಿ ಲೇಪನದ್ರವ್ಯಗಳಿಂದಲೂ, ವಿಧವಿಧಗಳಾದ ಪುಷ್ಪಮಾಲೆಗಳಿಂದಲೂ, ಪಂಚಾಮೃತಸ್ನಾನಗಳಿಂದಲೂ, ಬಗೆಬಗೆಯ ಧೂಪಗಳಿಂದಲೂ, ನೈವೇದ್ಯಪದಾರ್ಥಗಳಿಂದಲೂ, ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಪೂಜೆಗೆ ಯೋಗ್ಯಗಳಾದ ಇತರೋಪಕರಣದ್ರವ್ಯಗಳಿಂದಲೂ, ಘಂಟಾನಾದದಿಂದಲೂ, ದರ್ಪಣಾವಲೋಕನಸೇವೆಯಿಂದಲೂ, ಚಾಮರಗಳಿಂದಲೂ, ವಿಚಿತ್ರಗಳಾದ ಧ್ವಜಪತಾಕೆಗಳಿಂದಲೂ, ನರ್ತನ, ವಾದ್ಯ, ಗಾಯನಸೇವೆಗಳಿಂದಲೂ, ನಾಮಜಪಗಳಿಂದಲೂ, ಪ್ರದಕ್ಷಿಣೆಗಳಿಂದಲೂ, ಸಂತೋಷದಿಂದೊಡಗೂಡಿದ ಅನಂತ ನಮಸ್ಕಾರಗಳಿಂದಲೂ, ಪರಿಚಾರಕರಿಗೆಲ್ಲರಿಗೂ ಸಂತೋಷವಾಗುವಂತೆ ಆ ಲಿಂಗಕ್ಕೆ ಪೂಜೆಯನ್ನು ನೆರವೇರಿಸಬೇಕು.

೫೩. ಬಳಿಕ ''ನಾನು ಪಾಪರಹಿತನಾಗಿರುವೆ''ನೆಂದು ಹೇಳುತ್ತ ಬ್ರಾಹ್ಮಣರ ಆಶೀರ್ವಾದಗಳನ್ನು ಹೇಳಿಸಬೇಕು. ಇಂತು ಮಾಡಿದ ಪ್ರಾಜ್ಞನಾದ ಮಾನವನು ಕ್ಷಣಮಾತ್ರದಲ್ಲಿಯೇ ನಿಷ್ಕಲ್ಮಷನಾಗುವನು.

ತತಃ ಪಂಚನದೇ ಸ್ನಾತ್ವಾ ಮಣಿಕರ್ಣೀಹ್ರದೇ ತತಃ ।
ತತೋ ವಿಶ್ವೇಶಮಭ್ಯರ್ಚ್ಯ ಪ್ರಾಪ್ನೋತಿ ಸುಕೃತಂ ಮಹತ್ ॥ ೫೪ ॥
ಪ್ರಾಯಶ್ಚಿತ್ತಮಿದಂ ಪ್ರೋಕ್ತಂ ಮಹಾಪಾಪವಿಶೋಧನಂ ।
ನಾಸ್ತಿಕೇ ನ ಪ್ರವಕ್ತವ್ಯಂ ಕಾಶೀಮಾಹಾತ್ಮ್ಯನಿಂದಕೇ ॥ ೫೫ ॥
ದದಚ್ಚ ದ್ರವ್ಯಲೋಭೇನ ಪ್ರಾಯಶ್ಚಿತ್ತಮಿದಂ ಶುಭಂ ।
ದಾತಾ ನರಕಮಾಪ್ನೋತಿ ಸತ್ಯಂ ಸತ್ಯಂ ಘಟೋದ್ಭವ ॥ ೫೬ ॥
ಕ್ಷಮಾಂ ಪ್ರದಕ್ಷಿಣೀಕೃತ್ಯ ಯತ್ಫಲಂ ಸಮ್ಯಗಾಪ್ಯತೇ ।
ಪ್ರದೋಷೇ ತತ್ಫಲಂ ಕಾಶ್ಯಾಂ ಸಪ್ತಕೃತ್ವಸ್ತ್ರಿಲೋಚನೇ ॥ ೫೭ ॥
ಭುಜಂಗಮೇಖಿಲಂ ಲಿಂಗಂ ಕಾಶ್ಯಾಂ ದೃಷ್ಟ್ವಾ ತ್ರಿವಿಷ್ಟಪಂ ।
ಜನ್ಮಾಂತರೇಽಪಿ ಮುಕ್ತಃ ಸ್ಯಾದನ್ಯತ್ರ ಮರಣೇ ಸತಿ ॥ ೫೮ ॥
ಅನ್ಯತ್ರ ಸರ್ವಲಿಂಗೇಷು ಪುಣ್ಯಕಾಲೋ ವಿಶಿಷ್ಯತೇ ।
ತ್ರಿವಿಷ್ಟಪೇ ಪುಣ್ಯಕಾಲಃ ಸದಾ ರಾತ್ರಿಂದಿವಂ ನೃಣಾಂ ॥ ೫೯ ॥

---

೫೪. ಬಳಿಕ ಪಂಚನದದಲ್ಲಿಯೂ, ಆಮೇಲೆ ಮಣಿಕರ್ಣಿಕಾತೀರ್ಥದಲ್ಲಿಯೂ ಸ್ನಾನಗಳನ್ನು ಮಾಡಿಕೊಂಡು ವಿಶ್ವೇಶ್ವರನ ಪೂಜೆಯನ್ನು ನೆರವೇರಿಸಲು ಮನುಷ್ಯನು ಮಹತ್ತರವಾದ ಪುಣ್ಯವನ್ನು ಪಡೆಯುವನು.

೫೫. ಈ ಪ್ರಾಯಶ್ಚಿತ್ತವು ಮಹಾಪಾತಕಗಳಿಂದಲೂ ಶುದ್ಧಿಗೊಳಿಸುವುದಾಗಿ ಹೇಳಲ್ಪಟ್ಟಿರುವುದು. ಇದನ್ನು ನಾಸ್ತಿಕನ ಸಮ್ಮುಖದಲ್ಲಾಗಲಿ, ಕಾಶೀಕ್ಷೇತ್ರದ ಮಾಹಾತ್ಮ್ಯವನ್ನು ನಿಂದಿಸುವ ನೀಚನೆದುರಿಗಾಗಲಿ ಹೇಳಬಾರದು.

೫೬. ಎಲೈ ಕುಂಭೋದ್ಭವನೆ! ಸರ್ವೋತ್ತಮವಾದ ಈ ಪ್ರಾಯಶ್ಚಿತ್ತಕರ್ಮವನ್ನು ಯಾವನು ದ್ರವ್ಯಲೋಭಸಹಿತನಾಗಿ ಮಾಡುವನೋ, ಆ ದಾತೃವು ನರಕವಾಸವನ್ನನುಭವಿಸುವನೆಂಬುದು ಸತ್ಯವೆಂದು ಶಪಥಪೂರ್ವಕವಾಗಿ ಹೇಳುವೆನು.

೫೭. ಸಮಸ್ತ ಭೂಮಂಡಲವನ್ನೂ ಪ್ರದಕ್ಷಿಣೆಮಾಡುವುದರಿಂದ ಯಾವ ಉತ್ತಮಫಲವು ಲಭಿಸುವುದೊ, ಅದನ್ನೇ ಕಾಶಿಯಲ್ಲಿರುವ ತ್ರಿಲೋಚನೇಶ್ವರನಿಗೆ ಏಳು ಪ್ರದೋಷ ಪೂಜೆಗಳನ್ನು ಮಾಡುವುದರಿಂದಲೂ ಪಡೆಯಬಹುದು.

೫೮. ಅನಂತಸರ್ಪದಿಂದ ಸುತ್ತುವರೆಯಲ್ಪಟ್ಟ ತ್ರಿವಿಷ್ಟಪಲಿಂಗವನ್ನು ಕಾಶಿಯಲ್ಲಿ ದರ್ಶನಮಾಡಿದವನು ಸ್ಥಳಾಂತರದಲ್ಲಿ ಮರಣವನ್ನು ಹೊಂದಿದರೂ ಜನ್ಮಾಂತರದಲ್ಲಿಯಾದರೂ ಮೋಕ್ಷವನ್ನು ಪಡೆಯುವನು.

೫೯. ಇತರ ಎಲ್ಲ ಲಿಂಗಗಳಿಗೂ ಒಂದೊಂದು ಪುಣ್ಯಕಾಲವಿರುವುದು. ಅವುಗಳಲ್ಲಿ ಮಾಡಿದ ಸೇವೆಯು ವಿಶೇಷ ಫಲದಾಯಕವಾಗಿರುವುದು. ಆದರೆ

ಲಿಂಗಾನ್ಯೋಂಕಾರಮುಖ್ಯಾನಿ ಸರ್ವಪಾಪಪ್ರಕೃಂತ್ಯಲಂ ।
ಪರಂ ತ್ರೈಲೋಚನೀ ಶಕ್ತಿಃ ಕಾಚಿದನ್ಯೈವ ಪಾರ್ವತಿ ॥ ೬೦ ॥
ಯತಃ ಸರ್ವೇಷು ಲಿಂಗೇಷು ಲಿಂಗಮೇತದನುತ್ತಮಂ ।
ತತ್ಕಾರಣಂ ಶೃಣ್ವಪರ್ಣೇ ಕರ್ಣೇ ಕುರು ವದಾಮ್ಯಹಂ ॥ ೬೧ ॥
ಪುರಾ ಮೇ ಯೋಗಯುಕ್ತಸ್ಯ ಲಿಂಗಮೇತದ್ಭುವಸ್ತಲಾತ್ ।
ಉದ್ಭಿದ್ಯ ಸಪ್ತಪಾತಾಲಂ ನಿರಗಾತ್ಪುರತೋ ಮಹತ್ ॥ ೬೨ ॥
ಅಸ್ಮಿನ್ಲಿಂಗೇ ಪುರಾ ಗೌರಿ ಸುಗುಪ್ತಂ ತಿಷ್ಠತಾ ಮಯಾ ।
ತುಭ್ಯಂ ನೇತ್ರತ್ರಯಂ ದತ್ತಂ ನಿರೀಕ್ಷಿಷ್ಠಾಸ್ತಥೋತ್ತಮಂ ॥ ೬೩ ॥
ತದಾಪ್ರಭೃತಿ ದೇವೇಶಿ ಲಿಂಗಮೇತತ್ತ್ರಿಲೋಚನಂ ।
ವಿಷ್ಟಪಸ್ತ್ರಿತಯಾಂತಸ್ಥೈರ್ಗೀಯತೇ ಜ್ಞಾನದೃಷ್ಟಿದಂ ॥ ೬೪ ॥
ತ್ರಿಲೋಚನಸ್ಯ ಯೇ ಭಕ್ತಾಸ್ತೇಽಪಿ ಸರ್ವೇ ತ್ರಿಲೋಚನಾಃ ।
ಮಮ ಪಾರಿಷದಾಸ್ತೇ ತು ಜೀವನ್ಮುಕ್ತಾಸ್ತ ಏವ ಹಿ ॥ ೬೫ ॥

---

ತ್ರಿವಿಷ್ಟಪಕ್ಷೇತ್ರದಲ್ಲಿ ಅಹೋರಾತ್ರಗಳೆಲ್ಲವೂ ಮನುಷ್ಯರಿಗೆ ಪುಣ್ಯಕಾಲವೆಂದು ತಿಳಿಯಬೇಕು.

೬೦. ಓಂಕಾರವೇ ಮೊದಲಾದ ಇತರ ಲಿಂಗಗಳೆಲ್ಲವೂ ಸಕಲ ಪಾಪಗಳನ್ನೂ ನಾಶಗೊಳಿಸಲು ಸಮರ್ಥಗಳಾಗಿರುವುವು. ಎಲೌ ಪಾರ್ವತಿಯೆ! ಆದರೆ ತ್ರಿಲೋಚನೇಶ್ವರನ ಶಕ್ತಿಯಾದರೊ, ಸರ್ವಥಾ ಅನ್ಯಪ್ರಕಾರದ್ದಾಗಿರುವುದು.

೬೧. ಏಕೆಂದರೆ ಸಮಸ್ತ ಲಿಂಗಗಳಲ್ಲಿಯೂ ಈ ಲಿಂಗವು ಸರ್ವೋತ್ತಮ ವಾಗಿರುವುದು. ಅದಕ್ಕೆ ಕಾರಣವನ್ನು ನಾನು ತಿಳಿಸುವೆನು. ಎಲೌ ಅಪರ್ಣೆಯೆ! ಕಿವಿಗೊಟ್ಟು ಅದನ್ನು ಕೇಳುವವಳಾಗು.

೬೨. ಪೂರ್ವದಲ್ಲಿ ನಾನು ಯೋಗಾಭ್ಯಾಸದಲ್ಲಿ ನಿರತನಾಗಿರಲು ಮಹತ್ತರ ವಾದ ಈ ಲಿಂಗವು ಏಳು ಪಾತಾಲಲೋಕಗಳನ್ನೂ ಭೇದಿಸಿಕೊಂಡು ಭೂಮಿ ಯೊಳಗಿನಿಂದ ನನ್ನ ಮುಂದೆ ಕಾಣಿಸಿಕೊಂಡಿತು.

೬೩. ಎಲೌ ಗೌರಿಯೆ! ಮುನ್ನ ನಾನು ಈ ಲಿಂಗದಲ್ಲಿಯೇ ಸ್ವರೂಪವನ್ನು ಮರೆಸಿಕೊಂಡಿದ್ದೆನು. ಅಲ್ಲದೆ ನಾನೇ ನಿನಗೆ ಮೂರು ಕಣ್ಣುಗಳನ್ನು ಕೊಡುವ ವನಾದೆನು. ಆದುದರಿಂದ ಸರ್ವೋತ್ತಮನಾದ ನನ್ನನ್ನು ನೋಡುವವಳಾದೆ.

೬೪. ಎಲೌ ಮಹಾದೇವಿಯೆ! ಅಂದು ಮೊದಲಾಗಿ ಈ ಲಿಂಗವು ತ್ರಿಲೋಚ ನೇಶ್ವರವೆಂಬ ಹೆಸರನ್ನು ಪಡೆದು ಮೂರು ಲೋಕಗಳ ನಿವಾಸಿಗಳಿಗೂ ಜ್ಞಾನ ನೇತ್ರವನ್ನು ಕೊಡುವಂಥದೆಂದು ಹೊಗಳಲ್ಪಡುತ್ತಿರುವುದು.

೬೫. ತ್ರಿಲೋಚನೇಶ್ವರನಿಗೆ ಯಾರು ಭಕ್ತರಾಗಿರುವರೊ, ಅವರೆಲ್ಲರೂ ತ್ರಿನೇತ್ರರೇ ಆಗಿರುವರು. ಎಲ್ಲರೂ ನನ್ನ ಪರಿವಾರಕ್ಕೆ ಸೇರಿದವರೇ ಆಗುವರು, ಅವರೇ ಜೀವನ್ಮುಕ್ತರಾಗಿ ಲೋಕದಲ್ಲಿ ಬಾಳುತ್ತಿರುವರು.

ತ್ರಿಲೋಚನಸ್ಯ ಲಿಂಗಸ್ಯ ಮಹಿಮಾನಂ ನ ಕಶ್ಚನ ।
ಸಮ್ಯಗ್ವೇತ್ತಿ ಮಹೇಶಾನಿ ಮಯ್ಯೈವ ಪರಿಗೋಪಿತಂ ॥ ೬೬ ॥
ಶುಕ್ಲರಾಧಾ ತೃತೀಯಾಯಾಂ ಸ್ನಾತ್ವಾ ಪೈಲಿಪಿಲೇ ಹ್ರದೇ ।
ಉಪೋಷಣಪರಾ ಭಕ್ತ್ಯಾ ರಾತ್ರೌ ಜಾಗರಣಾನ್ವಿತಾಃ ॥ ೬೭ ॥
ತ್ರಿಲೋಚನಂ ಪೂಜಯಿತ್ವಾ ಪ್ರಾತಃ ಸ್ನಾತ್ವಾಪಿ ತತ್ರ ವೈ ।
ಪುನರ್ಲಿಂಗಂ ಸಮಭ್ಯರ್ಚ್ಯ ದತ್ವಾ ಧರ್ಮಘಟಾನಪಿ ॥ ೬೮ ॥
ಸ್ನಾನಾನ್ನದಕ್ಷಿಣಾನ್ದೇವಿ ಪಿತೄನುದ್ದಿಶ್ಯ ಹರ್ಷಿತಾಃ ।
ವಿಧಾಯ ಪಾರಣಂ ಪಶ್ಚಾಚ್ಛಿವಭಕ್ತಜನೈಃ ಸಹ ॥ ೬೯ ॥
ವಿಸೃಜ್ಯ ಪಾರ್ಥಿವಂ ದೇಹಂ ತೇನ ಪುಣ್ಯೇನ ನೋದಿತಾಃ ।
ಭವಂತಿ ದೇವಿ ನಿಯತಂ ಗಣಾ ಮಮ ಪುರೋಗಮಾಃ ॥ ೭೦ ॥
ತಾವದ್ಭ್ರಮಂತಿ ಸಂಸಾರೇ ದೇವಾ ಮರ್ತ್ಯಾ ಮಹೋರಗಾಃ ।
ಗೌರಿ ಯಾವನ್ನ ಪಶ್ಯಂತಿ ಕಾಶ್ಯಾಂ ಲಿಂಗಂ ತ್ರಿಲೋಚನಂ ॥ ೭೧ ॥
ಸಕೃತ್ತ್ರಿವಿಷ್ಟಪಂ ದೃಷ್ಟ್ವಾ ಸ್ನಾತ್ವಾ ಪೈಲಿಪಿಲೇ ಹ್ರದೇ ।
ನ ಜಾತು ಮಾತುಸ್ತನಪೋ ಜಾಯತೇ ಜಂತುರತ್ರ ಹಿ ॥ ೭೨ ॥

---

೬೬. ಎಲೌ ಮಹೇಶ್ವರಿಯೆ! ತ್ರಿಲೋಚನನೆಂಬ ಈ ಮಹಾಲಿಂಗದ ಮಹಿಮೆಯನ್ನು ಯಾವ ಮನುಷ್ಯನೂ ಆಮೂಲಾಗ್ರವಾಗಿ ತಿಳಿದಿರುವುದಿಲ್ಲ. ನನ್ನಿಂದಲೇ ಪರಮರಹಸ್ಯವಾಗಿ ರಕ್ಷಿಸಲ್ಪಟ್ಟಿರುವುದು.

೬೭–೭೦. ಓ ದೇವೇಶ್ವರಿಯೆ! ವೈಶಾಖಮಾಸದ ಶುಕ್ಲ ತೃತೀಯಾ ದಿನದಲ್ಲಿ ಪಿಲಿಪಿಲಾತೀರ್ಥದಲ್ಲಿ ಸ್ನಾನವನ್ನುಮಾಡಿ, ಭಕ್ತಿಯಿಂದ ಹಗಲಿನಲ್ಲಿ ಉಪವಾಸ ಪರರಾಗಿ, ರಾತ್ರಿಯಲ್ಲಿ ಜಾಗರಣೆಯನ್ನು ನೆರವೇರಿಸಿ, ತ್ರಿಲೋಚನೇಶ್ವರನಿಗೆ ಪೂಜೆಯನ್ನು ಮಾಡಿ, ಪುನಃ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿಕೊಂಡು, ಮತ್ತೆ ಲಿಂಗವನ್ನು ಚೆನ್ನಾಗಿ ಅರ್ಚಿಸಿ, ಧರ್ಮವೃದ್ಧಿಗಾಗಿ ಉದಕುಂಭಗಳನ್ನು ದಾನಮಾಡಿ, ಹರ್ಷಭರಿತರಾಗಿ ಪಿತೃದೇವತೆಗಳನ್ನುದ್ದೇಶಿಸಿ ಅನ್ನವನ್ನೂ (ಪಿಂಡಗಳನ್ನೂ), ದಕ್ಷಿಣೆಯನ್ನೂ ಕೊಟ್ಟು, ಬಳಿಕ ಶಿವಭಕ್ತರಾದ ಜನರೊಡನೆ ಕುಳಿತು ಪಾರಣೆಯನ್ನು ಮಾಡಿಕೊಂಡು, ಈ ಪಾಂಚಭೌತಿಕ ದೇಹಗಳನ್ನು ತ್ಯಜಿಸುವ ಭಕ್ತೋತ್ತಮರು ಆ ಪುಣ್ಯದ ಪ್ರಭಾವದಿಂದ ಉತ್ತಮೋತ್ತಮಗಳಾದ ಲೋಕಗಳನ್ನು ಸೇರುತ್ತ ಕಡೆಯಲ್ಲಿ ನನ್ನ ಗಣಗಳಲ್ಲಿ ಸೇರಿ ನನ್ನ ಮುಂದೆ ಓಡಾಡುವರೆಂಬುದು ನಿಶ್ಚಯವು.

೭೧. ಗೌರಿಯೆ! ದೇವತೆಗಳಾಗಲಿ, ಮನುಷ್ಯರಾಗಲಿ, ಮಹಾನಾಗರೇ ಆಗಲಿ, ಕಾಶಿಯಲ್ಲಿರುವ ತ್ರಿಲೋಚನೇಶ್ವರಲಿಂಗವನ್ನು ಎಲ್ಲಿಯವರೆಗೆ ನೋಡುವುದಿಲ್ಲವೊ, ಅಲ್ಲಿಯವರೆಗೆ ಮಾತ್ರ ಸಂಸಾರದಲ್ಲಿ ಬಿದ್ದು ಭ್ರಮಿಸುತ್ತಿರುವರು.

೭೨. ಯಾವ ಪ್ರಾಣಿಯೇ ಆಗಲಿ, ಒಮ್ಮೆಯಾದರೂ ಪಿಲಿಪಿಲಾತೀರ್ಥದಲ್ಲಿ

ಪ್ರತಿಮಾಸಂ ಸದಾಷ್ಟಮ್ಯಾಂ ಚತುರ್ದಶ್ಯಾಂ ಚ ಭಾಮಿನಿ ।
ಆಯಾಂತಿ ಸರ್ವತೀರ್ಥಾನಿ ದ್ರಷ್ಟುಂ ದೇವಂ ತ್ರಿವಿಷ್ಟಪಂ ॥ ೭೩ ॥
ತ್ರಿವಿಷ್ಟಪಾದ್ದಕ್ಷಿಣತಃ ಸ್ನಾತಃ ಪೈಲಿಪಿಲೇಽಂಭಸಿ ।
ತತ್ರ ಸಂಧ್ಯಾಮುಪಾಸ್ಯೈಕಾಂ ರಾಜಸೂಯಫಲಂ ಲಭೇತ್ ॥ ೭೪ ॥
ಪಾದೋದಕಾಖ್ಯಸ್ತತ್ರೈವ ಕೂಪಃ ಪಾಪವಿನಾಶಕಃ ।
ಪ್ರಾಶ್ಯ ತಸ್ಯೋದಕಂ ಮರ್ತ್ಯೋ ನ ಮರ್ತ್ಯೋ ಜಾಯತೇ ಪುನಃ ॥೭೫॥
ತಸ್ಯ ಲಿಂಗಸ್ಯ ಪಾರ್ಶ್ವೇ ತು ಸಂತಿ ಲಿಂಗಾನ್ಯನೇಕಶಃ ।
ಕೈವಲ್ಯದಾನಿ ತಾನ್ಯತ್ರ ದರ್ಶನಾತ್ಸ್ಪರ್ಶನಾದಪಿ ॥ ೭೬ ॥
ತತ್ರ ಶಾಂತನವಂ ಲಿಂಗಂ ಗಂಗಾತೀರೇ ಪ್ರತಿಷ್ಠಿತಂ ।
ತದ್ದೃಷ್ಟ್ವಾ ಶಾಂತಿಮಾಪ್ನೋತಿ ನರಃ ಸಂಸಾರತಾಪಿತಃ ॥ ೭೭ ॥
ತದ್ದಕ್ಷಿಣೇ ಮಹಾಲಿಂಗಂ ಮುನೇ ಭೀಷ್ಮೇಶಸಂಜ್ಞಿತಂ ।
ಕಲಿಃ ಕಾಲಶ್ಚ ಕಾಮಶ್ಚ ಬಾಧತೇ ನ ತದೀಕ್ಷಣಾತ್ ॥ ೭೮ ॥

---

ಮಿಂದು ತ್ರಿವಿಷ್ಟಪೇಶ್ವರನ ದರ್ಶನವನ್ನು ಮಾಡಿ ಬರಲು, ಭೂಲೋಕದಲ್ಲಿ ಮತ್ತೆ ಜನಿಸಿ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ.

೭೩. ಸುಂದರಿಯೆ! ಪ್ರತಿಮಾಸದ ಅಷ್ಟಮಿ ಮತ್ತು ಚತುರ್ದಶಿಯ ತಿಥಿಗಳಲ್ಲಿ ಸಮಸ್ತ ತೀರ್ಥಾಭಿಮಾನಿದೇವತೆಗಳೂ ದೇವೋತ್ತಮನಾದ ತ್ರಿಲೋಚನೇಶ್ವರನನ್ನು ನೋಡಲು ಚಿತ್ತೈಸುವರು.

೭೪. ಆ ತಿಥಿಗಳಲ್ಲಿ ತ್ರಿಲೋಚನನಿಗೆ ದಕ್ಷಿಣದಿಕ್ಕಿನಲ್ಲಿರುವ ಪಿಲಿಪಿಲಾ ಸರಸ್ಸಿನ ನಿರ್ಮಲೋದಕದಲ್ಲಿ ಸ್ನಾನವನ್ನು ಮಾಡಿ ಅಲ್ಲಿ ಒಂದೇ ಒಂದು ಸಂಧ್ಯೋಪಾಸನೆಯನ್ನು ಮಾಡಲು ನರನು ರಾಜಸೂಯ ಯಜ್ಞವನ್ನು ಮಾಡಿದ ಫಲವನ್ನು ಪಡೆಯುವನು.

೭೫. ಅಲ್ಲಿಯೇ ಪಾದೋದಕವೆಂಬ ಹೆಸರಿನ ಒಂದು ಕೂಪವಿರುವುದು. ಅದು ಪಾಪನಾಶಕವಾದುದು. ಅದರ ನೀರನ್ನು ಪ್ರಾಶನ ಮಾಡಿದ ಮನುಜನು ಪುನಃ ಮನುಷ್ಯಜನ್ಮವನ್ನು ಪಡೆಯುವುದಿಲ್ಲ.

೭೬. ಆ ಲಿಂಗದ ಪಾರ್ಶ್ವಗಳಲ್ಲಿಯೇ ಅಸಂಖ್ಯಾಕಗಳಾದ ಅನೇಕ ಲಿಂಗಗಳಿರುವುವು. ಅವುಗಳನ್ನು ನೋಡುವುದರಿಂದಲೂ, ಮುಟ್ಟಿ ಸೇವಿಸುವುದರಿಂದಲೂ, ಮನುಷ್ಯನಿಗೆ ಕೈವಲ್ಯಪದವೇ ಲಭಿಸುವುದು.

೭೭. ಸಮೀಪದಲ್ಲಿ ಗಂಗಾನದಿಯ ತೀರದಲ್ಲಿಯೇ ಶಂತನುಮಹಾರಾಜನು ಪ್ರತಿಷ್ಠೆಮಾಡಿದ ಮಹಾಲಿಂಗವೊಂದಿರುವುದು. ಸಂಸಾರತಾಪಗಳಿಂದ ಬೇಸರಗೊಂಡ ಮನುಷ್ಯನು ಆ ಲಿಂಗವನ್ನು ನೋಡುವುದರಿಂದಲೇ ಮನಸ್ಸಮಾಧಾನವನ್ನು ಪಡೆಯುವನು.

೭೮. ಮುನಿವರ್ಯನೆ! ಅದಕ್ಕೆ ದಕ್ಷಿಣದಲ್ಲಿಯೇ ಭೀಷ್ಮೇಶ್ವರನೆಂಬ

**ತತ್ಪ್ರತೀಚ್ಯಾಂ ಮಹಾಲಿಂಗಂ ದ್ರೋಣೇಶ ಇತಿ ಕೀರ್ತಿತಂ ।**
**ಯಲ್ಲಿಂಗಪೂಜನಾದ್ದ್ರೋಣೋ ಜ್ಯೋತೀರೂಪಂ ಪುನರ್ದಧೌ ॥ ೭೯ ॥**
**ಅಶ್ವತ್ಥಾಮೇಶ್ವರಂ ಲಿಂಗಂ ತದಗ್ರೇ ಚಾತಿಪುಣ್ಯದಂ ।**
**ಯದರ್ಚನಾವಶಾದ್ದ್ರೌಣಿರ್ನ ಬಿಭೇತ್ಯಪಿ ಕಾಲತಃ ॥ ೮೦ ॥**
**ದ್ರೋಣೇಶಾದ್ವಾಯುದಿಗ್ಭಾಗೇ ವಾಲಖಿಲ್ಯೇಶ್ವರಂ ಪರಂ ।**
**ತಲ್ಲಿಂಗಂ ಶ್ರದ್ಧಯಾ ದೃಷ್ಟ್ವಾ ಸರ್ವಕ್ರತುಫಲಂ ಲಭೇತ್ ॥ ೮೧ ॥**
**ತದ್ವಾಮೇ ಲಿಂಗಮಾಲೋಕ್ಯ ವಾಲ್ಮೀಕೇಶ್ವರಸಂಜ್ಞಿತಂ ।**
**ತಸ್ಯ ಸಂದರ್ಶನಾದೇವ ವಿಶೋಕೋ ಜಾಯತೇ ನರಃ ॥ ೮೨ ॥**
**ಅನ್ಯಚ್ಚಾತ್ರೈವ ಯದ್ವೃತ್ತಂ ತದ್ಬ್ರವೀಮಿ ಘಟೋದ್ಭವ ।**
**ತ್ರಿವಿಷ್ಟಪಸ್ಯ ಮಾಹಾತ್ಮ್ಯಂ ದೇವ್ಯೈ ದೇವೇನ ಭಾಷಿತಂ ॥ ೮೩ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ತ್ರಿಲೋಚನೇಶ್ವರಾವಿರ್ಭಾವವರ್ಣನಂ" ನಾಮ ಪಂಚಸಪ್ತತಿತಮೋಽಧ್ಯಾಯಃ

ಹೆಸರಿನ ಮಹಾಲಿಂಗವಿರುವುದು. ಅದನ್ನು ನೋಡಿದವನು ಕಲಿಪುರುಷನಿಂದಾಗಲಿ, ಕಾಲಯಮನಿಂದಾಗಲಿ, ಮನ್ಮಥನಿಂದಾಗಲಿ ಬಾಧೆಗೊಳಗಾಗುವುದಿಲ್ಲ.

೭೯. ಅದಕ್ಕೆ ಪಶ್ಚಿಮದಿಕ್ಕಿನಲ್ಲಿಯೇ ದ್ರೋಣೇಶ್ವರವೆಂದು ಪ್ರಖ್ಯಾತವಾದ ಲಿಂಗವೊಂದಿರುವುದು. ಆ ಲಿಂಗವನ್ನು ಪೂಜಿಸಿಯೇ ಹಿಂದೆ ದ್ರೋಣಾಚಾರ್ಯನು ತೇಜೋಮಯವಾದ ತನ್ನ ರೂಪವನ್ನು ಪುನಃ ಪಡೆದುಕೊಂಡನು.

೮೦. ಅದರ ಸಮ್ಮುಖದಲ್ಲಿಯೇ ಪರಮಪುಣ್ಯಪ್ರದವಾದ ಅಶ್ವತ್ಥಾಮೇಶ್ವರ ಲಿಂಗವು ನೆಲೆಗೊಂಡಿರುವುದು. ಅದರ ಪೂಜೆಯ ಮಾಹಾತ್ಮ್ಯದಿಂದಲೇ ಅಶ್ವತ್ಥಾಮನು ಇಂದಿಗೂ ಯಮನಿಗೆ ಭಯಗೊಳ್ಳದೆ ಚಿರಂಜೀವಿಯಾಗಿರುವನು.

೮೧. ದ್ರೋಣೇಶ್ವರನಿಗೆ ವಾಯುವ್ಯಮೂಲೆಯಲ್ಲಿ ಉತ್ತಮವಾದ ವಾಲಖಿಲ್ಯೇಶ್ವರಲಿಂಗವಿರುವುದು. ಶ್ರದ್ಧಾಭಕ್ತಿಗಳಿಂದ ಆ ಲಿಂಗವನ್ನು ನೋಡಲು ಸಕಲಯಜ್ಞಗಳನ್ನೂ ಮಾಡಿದ ಫಲವು ಲಭಿಸುವುದು.

೮೨. ಅದಕ್ಕೆ ಎಡಗಡೆಯಲ್ಲಿರುವ ವಾಲ್ಮೀಕೇಶ್ವರನೆಂಬ ಹೆಸರಿನ ಲಿಂಗವನ್ನು ಎಲ್ಲರೂ ನೋಡಬೇಕು. ಅದರ ಸಂದರ್ಶನ ಮಾತ್ರದಿಂದಲೇ ಮನುಷ್ಯನು ಶೋಕರಹಿತನಾಗುವನು.

೮೩. ಎಲೈ ಕುಂಭಸಂಭವನೆ! ಈ ತ್ರಿವಿಷ್ಟಪೇಶ್ವರನ ಮಾಹಾತ್ಮ್ಯದ ವಿಷಯದಲ್ಲಿ ಮಹಾದೇವನು ಪಾರ್ವತೀದೇವಿಗೆ ನಿರೂಪಿಸಿದುದೂ, ಇಲ್ಲಿಯೇ ನಡೆದುದೂ ಆದ ಮತ್ತೊಂದು ವೃತ್ತಾಂತವನ್ನು ನಿನಗೆ ಹೇಳುವೆನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ತ್ರಿಲೋಚನೇಶ್ವರಾವಿರ್ಭಾವವರ್ಣನ"ವೆಂಬ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಷಟ್ಸಪ್ತತಿತಮೋಽಧ್ಯಾಯಃ

### ತ್ರಿಲೋಚನಪ್ರಭಾವೋಪವರ್ಣನಂ

ಸ್ಕಂದ ಉವಾಚ :—

ಶೃಣುಷ್ವ ಮೈತ್ರಾವರುಣೇ ಪುರಾ ಕಲ್ಪೇ ರಥಂತರೇ ।
ಇತಿಹಾಸ ಇಹಾಸೀದ್ಯಃ ಪೀಠೇ ವಿರಜಸಂಜ್ಞಿಕೇ ॥ ೧ ॥
ತ್ರಿಲೋಚನಸ್ಯ ಪ್ರಾಸಾದೇ ಮಣಿಮಾಣಿಕ್ಯನಿರ್ಮಿತೇ ।
ನಾನಾಭಂಗಿಗವಾಕ್ಷಾಢ್ಯೇ ರತ್ನಸಾನಾವಿವಾಯತೇ ॥ ೨ ॥
ಕದಾಚಿದಪಿ ಕಲ್ಪಾಂತೇ ದ್ಯುಲೋಕೇ ಭ್ರಂಶತಿ ಕ್ಷಯೇ ।
ಪ್ರೋತ್ತಂಭನಂ ಸ್ತಂಭ ಇವ ದತ್ತೋ ವಿಶ್ವಕೃತಾ ಸ್ವಯಂ ॥ ೩ ॥
ಮರುತ್ತರಂಗಿತಾಗ್ರಾಭಿಃ ಪತಾಕಾಭಿರಿತಸ್ತತಃ ।
ಸನ್ನಿವಾರಯತೀವೇತ್ಥಮಘೌಘಾನ್ವಿಶತೋ ಮುನೇ ॥ ೪ ॥
ದೇದೀಪ್ಯಮಾನಸೌವರ್ಣಕಲಶೇನ ವಿರಾಜಿತೇ ।
ಪಾರ್ವಣೇನ ಶಶಾಂಕೇನ ಖೇದಾದಿವ ಸಮಾಶ್ರಿತೇ ॥ ೫ ॥

## ಕನ್ನಡದ ಅನುವಾದ

### ತ್ರಿಲೋಚನಪ್ರಭಾವೋಪವರ್ಣನ

೧. ಸ್ಕಂದನು ಹೇಳುತ್ತಾನೆ:—ಮಿತ್ರಾವರುಣನಂದನನಾದ ಅಗಸ್ತ್ಯನೆ! ಹಿಂದೆ ರಥಂತರಕಲ್ಪದಲ್ಲಿ ವಿರಜಾನಾಮಕನಾದ ಈ ಮಹಾಪೀಠದಲ್ಲಿ ನಡೆದ ಇತಿಹಾಸವೊಂದನ್ನು ಹೇಳುವೆನು: ಶ್ರದ್ಧೆಯಿಂದ ಕೇಳುವವನಾಗು.

೨. ತ್ರಿಲೋಚನೇಶ್ವರನ ದೇವಾಲಯವು ನವರತ್ನ ಮಾಣಿಕ್ಯಗಳಿಂದ ನಿರ್ಮಿತವಾಗಿರುವುದು. ಬಹುವಿಧಗಳಾದ ಗವಾಕ್ಷಗಳಿಂದ ಕೂಡಿ ಮೇರು ಪರ್ವತದಂತೆ ಉನ್ನತವೂ ವಿಶಾಲವೂ ಆಗಿ ಶೋಭಿಸುತ್ತಿರುವುದು.

೩-೪. ಕಾಲಾನಂತರದಲ್ಲಿ ಪ್ರಳಯ ಸಮಯವು ಪ್ರಾಪ್ತವಾಗಿ ಸ್ವರ್ಗಲೋಕವು ಪುಣ್ಯಕ್ಷಯದಿಂದ ಕೆಳಕ್ಕೆ ಬೀಳಲು. ಅದನ್ನು ಎತ್ತಿ ಹಿಡಿಯುವುದಕ್ಕಾಗಿ ವಿಶ್ವೇಶ್ವರನು ತಾನೇ ಎತ್ತಿ ಹಿಡಿದ ಸ್ತಂಭದಂತೆ ಆ ದೇವಾಲಯವು ತೋರುತ್ತಿರುವುದು. ಮುನಿಯೆ! ಈ ಕ್ಷೇತ್ರವನ್ನು ಪ್ರವೇಶಿಸುವವರ ಪಾಪಸಮೂಹಗಳನ್ನೆಲ್ಲ ಹೀಗೆಯೆ ಈಡಾಡುವೆನೆಂಬುದನ್ನು ದೃಷ್ಟಾಂತದಿಂದ ತೋರಿಸುತ್ತಿರುವುದೆಂಬಂತೆ ಆ ದೇವಾಯತನವು ಎಲ್ಲೆಲ್ಲಿಯೂ ಗಾಳಿಗೆ ಬಡಿದಾಡುತ್ತಿರುವ ಕೊನೆಗಳುಳ್ಳ ಪತಾಕೆಗಳಿಂದಲಂಕೃತವಾಗಿರುವುದು.

೫. ಪ್ರೋಜ್ಜ್ವಲಿಸುತ್ತಿರುವ ಚಿನ್ನದ ಕಳಶಗಳಿಂದವಿರಾಜಿಸುತ್ತ ಪೌರ್ಣಮೆಯ

ತತ್ರ ಪಾರಾವತದ್ವಂದ್ವಂ ವಸೇತ್ಸ್ವೈರಂ ಕೃತಾಲಯಂ ।
ಪ್ರಾತಃ ಸಾಯಂ ಚ ಮಧ್ಯಾಹ್ನೇ ಕುರ್ವನ್ನಿತ್ಯಂ ಪ್ರದಕ್ಷಿಣಂ ॥ ೬ ॥
ಉಡ್ಡೀಯಮಾನಂ ಪರಿತಃ ಪಕ್ಷವಾತೈರಿತಸ್ತತಃ ।
ರಜಃಪ್ರಾಸಾದಸಂಲಗ್ನಂ ದೂರೀಕುರ್ವದ್ದಿನೇ ದಿನೇ ॥ ೭ ॥
ತ್ರಿಲೋಚನೇತಿ ಸತತಂ ನಾಮ ಭಕ್ತೈರುದಾಹೃತಂ ।
ತ್ರಿವಿಷ್ಟಪೇತಿ ಚ ತಥಾ ತಯೋಃ ಕರ್ಣಾತಿಥೀಭವೇತ್ ॥ ೮ ॥
ಚತುರ್ವಿಧಾನಿ ವಾದ್ಯಾನಿ ಶಂಭುಪ್ರೀತಿಕರಾಣ್ಯಲಂ ।
ತಯೋಃ ಕರ್ಣಗುಹಾಂ ಪ್ರಾಪ್ಯ ಪ್ರತಿಶಬ್ದಂ ಪ್ರತನ್ವತೇ ॥ ೯ ॥
ಮಂಗಲಾರಾರ್ತಿಕಜ್ಯೋತಿಸ್ತ್ರಿಸಂಧ್ಯಂ ಪಕ್ಷಿಣೋಸ್ತಯೋಃ ।
ನೇತ್ರಾಂತರ್ನಿರ್ವಿಶನ್ನಿತ್ಯಂ ಭಕ್ತಚೇಷ್ಟಾಂ ಪ್ರದರ್ಶಯೇತ್ ॥ ೧೦ ॥
ಪ್ರಾಣಯಾತ್ರಾಂ ವಿಹಾಯಾಪಿ ಕದಾಚಿತ್ಸ್ಥಿತಮಾನಸೌ ।
ನೋಡ್ಡೀಯ ವಾಂಛಿತಂ ಯಾತಃ ಪಶ್ಯಂತೌ ಕೌತುಕಂ ಖಗೌ ॥ ೧೧ ॥

---

ಚಂದ್ರನು ಆಕಾಶದಲ್ಲಿ ಅಲೆದಲೆದು ಬೇಸತ್ತು ಆಯಾಸಪರಿಹಾರಕ್ಕಾಗಿ ದೇವಾಲಯದ ಗೋಪುರದ ಮೇಲೆ ಬಂದು ಕುಳಿತಿರುವಂತೆ ತೋರುತ್ತಿರುವುದು.

೬. ಆ ಗೋಪುರದಲ್ಲಿ ಮನೆಯನ್ನು ಮಾಡಿಕೊಂಡು ಪಾರಿವಾಳದಂಪತಿಗಳು ಸ್ವೇಚ್ಛೆಯಾಗಿ ವಿಹರಿಸುತ್ತ ನಿತ್ಯವೂ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ತ್ರಿಲೋಚನೇಶ್ವರನಿಗೆ ಪ್ರದಕ್ಷಿಣೆಗಳನ್ನು ಮಾಡುತ್ತಿದ್ದುವು.

೭. ದಿನದಿನದಲ್ಲಿಯೂ ಮೇಲಕ್ಕೆ ಹಾರಿ ಸುತ್ತಾಡುತ್ತಿರಲು ಅವುಗಳ ರೆಕ್ಕೆಗಳ ಗಾಳಿಯಿಂದ ಆ ಗೋಪುರದ ಮೇಲೆ ಸೇರಿದ ಧೂಳಿಯೆಲ್ಲವೂ ಕಳೆದು ಹೋಗುವಂತೆ ಅವುಗಳು ಗೋಪುರಕ್ಕೂ ಪ್ರದಕ್ಷಿಣೆಯನ್ನು ಮಾಡುತ್ತಿದ್ದುವು.

೮. ಅಲ್ಲಿ ನೆರೆದ ನನ್ನ ಭಕ್ತಶ್ರೇಷ್ಠರು ನಿತ್ಯವೂ ಗಟ್ಟಿಯಾಗಿ ಉಚ್ಚರಿಸುತ್ತಿರುವ ತ್ರಿಲೋಚನೇಶ್ವರ, ತ್ರಿವಿಷ್ಟಪಾದಿ ನಾಮಗಳೂ ಸಹ ಸಂತತವಾಗಿ ಅವುಗಳ ಕಿವಿಗಳಿಗೆ ಕೇಳಿಬರುತ್ತಿದ್ದುವು.

೯. ಪರಮೇಶ್ವರನಿಗೆ ಸಂತೋಷಕರಗಳಾದ ಕಾಂಸ್ಯತಾಳಾದಿ ನಾಲ್ಕುವಿಧ ವಾದ್ಯಗಳೂ ಸಹ ಅವುಗಳ ಕಿವಿಗಳ ರಂಧ್ರಗಳನ್ನು ಪ್ರವೇಶಿಸಿ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದುವು.

೧೦. ತ್ರಿಸಂಧ್ಯೆಗಳಲ್ಲಿಯೂ ಆ ಮಹಾಲಿಂಗಕ್ಕೆ ಮಾಡುವ ಮಂಗಳಾರತಿಯ ಜ್ಯೋತಿಯು ಆ ಎರಡು ಪಕ್ಷಿಗಳ ಕಣ್ಣುಗಳಲ್ಲಿಯೂ ಪ್ರತಿಬಿಂಬಿಸಿ ಅವುಗಳಲ್ಲಿಯೂ ಸಹ ಸೇವೆಯನ್ನು ನೋಡಬಂದ ಭಕ್ತರ ಭಾವವನ್ನು ಪ್ರಕಟಗೊಳಿಸುತ್ತಿದ್ದಿತು.

೧೧. ಅವುಗಳು ಒಮ್ಮೊಮ್ಮೆ ಆಹಾರಾದಿಗಳನ್ನು ತ್ಯಜಿಸಿಯೂ ಮೇಲಕ್ಕೆ ಹಾರಿ ಇಷ್ಟಬಂದ ಕಡೆಗೆ ಹೋಗದೆ ಏಕಾಗ್ರಮನಸ್ಸಿನಿಂದ ಪರಮಾತ್ಮನ ಸೇವೆಯ ಕೌತುಕವನ್ನೇ ನೋಡುತ್ತ ಕುಳಿತಿರುತ್ತಿದ್ದುವು.

ತತ್ರ ಭಕ್ತಜನಾಕೀರ್ಣಂ ಪ್ರಾಸಾದಂ ಪರಿತೋ ಮುನೇ ।
ತಂಡುಲಾದಿ ಚರನ್ತೌ ತೌ ಕುರ್ವಾತೇ ಚ ಪ್ರದಕ್ಷಿಣಂ ॥ ೧೨ ॥
ದೇವದಕ್ಷಿಣದಿಗ್ಭಾಗೇ ಚತುಃಸ್ರೋತಸ್ವಿನೀಜಲಂ ।
ತೃಷಾರ್ತೌ ಧಯತೋ ವಿಪ್ರ ಸ್ನಾತೌ ಜಾತುಚಿದಂಡಜೌ ॥ ೧೩ ॥
ತಯೋರಿತ್ಥಂ ವಿಚರತೋಸ್ತ್ರಿಲೋಚನಸಮೀಪತಃ ।
ಅಗಾದ್ಬಹುತಿಥಃ ಕಾಲೋ ದ್ವಿಜಯೋಃ ಸಾಧುಚೇಷ್ಟಯೋಃ ॥ ೧೪ ॥
ಅಥ ದೇವಾಲಯಸ್ಕಂಧೇ ಗವಾಕ್ಷಾಂತರ್ಗತೌ ಚ ತೌ ।
ಶ್ಯೇನೇನ ಕೇನಚಿದ್ದೃಷ್ಟೌ ಕ್ರೂರದೃಷ್ಟ್ಯಾ ಸುಖಸ್ಥಿತೌ ॥ ೧೫ ॥
ತಚ್ಚ ಪಾರಾವತದ್ವಂದ್ವಂ ಶ್ಯೇನಃ ಪರಿಜಿಘೃಕ್ಷಕಃ ।
ಅವತೀರ್ಯಾಂಬರಾದಾಶು ಪ್ರವಿಷ್ಟೋಽನ್ಯಶಿವಾಲಯಂ ॥ ೧೬ ॥
ತತೋ ವಿಲೋಕಯಾಮಾಸ ತದಾಗಮನಿರ್ಗಮೌ ।
ಕೇನ ಮಾರ್ಗೇಣ ವಿಶತೋ ದುರ್ಗಮೇತೌ ಪತತ್ರಿಣೌ ॥ ೧೭ ॥

೧೨. ಮಹಾಮುನಿಯೆ! ಆ ದೇವಾಲಯದ ಸುತ್ತಲೂ ಭಕ್ತಜನರು ಚೆಲ್ಲಿದ ಅಕ್ಷತೆಕಾಳುಗಳನ್ನೇ ತಿನ್ನುತ್ತ ಆ ವ್ಯಾಜದಿಂದ ಪಕ್ಷಿಗಳೆರಡೂ ಅದಕ್ಕೆ ಪ್ರದಕ್ಷಿಣೆಯನ್ನು ಮಾಡುತ್ತಿದ್ದುವು.

೧೩. ಬ್ರಾಹ್ಮಣೋತ್ತಮನೆ! ಬಾಯಾರಿದಾಗ ಮಹಾದೇವನಿಗೆ ದಕ್ಷಿಣ ಭಾಗದಲ್ಲಿ ನಾಲ್ಕು ನದಿಗಳು ಸೇರುವ ತ್ರಿಲೋಚನತೀರ್ಥಕ್ಕೆ ಹೋಗಿ ನೀರನ್ನು ಕುಡಿಯುತ್ತ ಆ ಪಕ್ಷಿಗಳು ಒಮ್ಮೆ ಆಕಸ್ಮಿಕವಾಗಿ ಅದರಲ್ಲಿ ಸ್ನಾನವನ್ನೂ ಮಾಡಿದುವು.

೧೪. ಇಂತು ತ್ರಿಲೋಚನೇಶ್ವರನ ಸಮೀಪದಲ್ಲಿಯೇ ಸಂಚರಿಸುತ್ತಿರಲು ಸದಾಚಾರನಿರತಗಳಾಗಿದ್ದ ಆ ಎರಡು ಪಕ್ಷಿಗಳಿಗೆ ಬಹುಕಾಲವು ಕಳೆದು ಹೋಯಿತು.

೧೫. ಒಮ್ಮೆ ಅವುಗಳು ದೇವಾಲಯದ ಗೋಪುರದ ಗವಾಕ್ಷವೊಂದರಲ್ಲಿ ಸುಖವಾಗಿ ಕುಳಿತುಕೊಂಡಿದ್ದುದನ್ನು ಒಂದಾನೊಂದು ಹದ್ದು ಕ್ರೂರದೃಷ್ಟಿಯಿಂದ ನೋಡಿತು.

೧೬. ಆ ಶ್ಯೇನವು ಹೇಗಾದರೂ ಆ ಎರಡು ಪಾರಿವಾಳಪಕ್ಷಿಗಳನ್ನೂ ಭಕ್ಷಿಸಬೇಕೆಂದು ಸಂಕಲ್ಪವನ್ನುಮಾಡಿ ಶೀಘ್ರವಾಗಿ ಆಕಾಶದಿಂದ ಕೆಳಗಿಳಿದು ಹತ್ತಿರದಲ್ಲಿದ್ದ ಮತ್ತೊಂದು ಶಿವಾಲಯವನ್ನು ಪ್ರವೇಶಿಸಿತು.

೧೭. ಅಲ್ಲಿ ಪ್ರಚ್ಛನ್ನವಾಗಿ ಕುಳಿತುಕೊಂಡು ಅವುಗಳು ಬಂದು ಹೋಗುವ ಸಮಯಗಳನ್ನೂ ಯಾವ ಮಾರ್ಗದಮೂಲಕ ಅವು ಭದ್ರವಾದ ತಮ್ಮ ಸ್ಥಳವನ್ನು ಪ್ರವೇಶಿಸುವುವೆಂಬುದನ್ನೂ ನೋಡಿ ತಿಳಿಯಿತು.

ಕೇನಾಧ್ವನಾ ಚ ನಿರ್ಯಾತಃ ಕ್ವ ಕಾಲೇ ಕುರುತಶ್ಚ ಕಿಂ ।
ಕಥಂ ಯುಗಪದೇತೌ ಮೇ ಗ್ರಾಹ್ಯೌ ಸ್ವೈರಂ ಭವಿಷ್ಯತಃ ॥ ೧೮ ॥
ಮಧ್ಯೇ ದುರ್ಗಂ ಪ್ರವಿಷ್ಟೌ ಚ ಮಮ ವಶ್ಯಾವಿಮೌ ನ ಯತ್ ।
ಏಕದೃಷ್ಟಿಃ ಕ್ಷಣಂ ತಸ್ಥೌ ಶ್ಯೇನ ಇತ್ಥಂ ವಿಚಿಂತಯನ್ ॥ ೧೯ ॥
ಅಹೋ ದುರ್ಗಬಲಂ ಪ್ರಾಜ್ಞಾಃ ಶಂಸಂತ್ಯೇವೇತಿ ಹೇತುತಃ ।
ದುರ್ಬಲೋಽಪ್ಯಾಕಲಯಿತುಂ ಸಹಸಾರಿರ್ನ ಶಕ್ಯತೇ ॥ ೨೦ ॥
ಕರಿಣಾಂ ತು ಸಹಸ್ರೇಣ ವರಾಶ್ವಾನಾಂ ಸ ಲಕ್ಷತಃ ।
ತತ್ಕರ್ಮ ಸಿದ್ಧ್ಯೇನ್ನೃಪತೇರ್ದುರ್ಗೇಣೈಕೇನ ಯದ್ಭವೇತ್ ॥ ೨೧ ॥
ದುರ್ಗಸ್ಥೋ ನಾಭಿಭೂಯೇತ ವಿಪಕ್ಷಃ ಕೇನಚಿತ್ಕ್ವಚಿತ್ ।
ಸ್ವತಂತ್ರಂ ಯದಿ ದುರ್ಗಂ ಸ್ಯಾದಮರ್ಮಜ್ಞಪ್ರಕಾಶಿತಂ ॥ ೨೨ ॥
ಇತಿ ದುರ್ಗಬಲಂ ಶಂಸನ್ ಶ್ಯೇನೋ ರೋಷಾರುಣೇಕ್ಷಣಃ ।
ಅಸಾಧ್ವಸೌ ಕಲರವೌ ವೀಕ್ಷ್ಯ ಯಾತೋ ನಭೋಽಂಗಣಂ ॥ ೨೩ ॥

---

೧೮. ಆ ಪಕ್ಷಿಗಳು ಯಾವ ಮಾರ್ಗವಾಗಿ ಹೊರಕ್ಕೆ ಬರುವುವು? ಯಾವ ಕಾಲದಲ್ಲಿ ಏನು ಮಾಡುತ್ತಿರುವುವು? ಈ ಎರಡೂ ಒಮ್ಮೆಯೇ ಅನಾಯಾಸವಾಗಿ ನನ್ನ ಆಹಾರಕ್ಕಾಗಿ ಸಿಕ್ಕುವ ಮಾರ್ಗವು ಯಾವುದು?

೧೯. ದುರ್ಗಮವಾದ ಈ ಗೋಪುರದ ಮಧ್ಯವನ್ನು ಪ್ರವೇಶಿಸಿರುವುದರಿಂದ ಇವು ನನಗೆ ವಶವಾಗಲಾರವು. ಈ ವಿಧವಾಗಿ ಯೋಚನೆಯನ್ನು ಮಾಡುತ್ತ ಆ ಹದ್ದು ನೆಟ್ಟದೃಷ್ಟಿಯುಳ್ಳದ್ದಾಗಿ ಒಂದುಕ್ಷಣಮಾತ್ರದವರೆಗೂ ಸುಮ್ಮನಿದ್ದಿತು.

೨೦. "ಆಶ್ಚರ್ಯ! ಈ ಕಾರಣದಿಂದಲೇ ನೀತಿನಿಪುಣರಾದವರು ದುರ್ಗದ ಬಲವನ್ನು ಬಹುವಿಧವಾಗಿ ಕೊಂಡಾಡಿರುವರು. ದುರ್ಗಬಲವಿರುವ ಶತ್ರುವು ಸ್ವತಃ ದುರ್ಬಲನಾದರೂ ಅವನನ್ನು ಸುಲಭವಾಗಿ ನಿಗ್ರಹಿಸಲಾಗುವುದಿಲ್ಲ.

೨೧. ರಾಜನಾದವನಿಗೆ ಒಂದು ದುರ್ಗದಿಂದ ಎಷ್ಟು ಕಾರ್ಯವು ಸಿದ್ಧಿಸುವುದೊ, ಅದನ್ನು ಒಂದು ಸಾವಿರ ಆನೆಗಳಿಂದಲೂ ಒಂದು ಲಕ್ಷ ಉತ್ತಮ ಕುದುರೆಗಳಿಂದಲೂ ಸಾಧಿಸಲು ಸಾಧ್ಯವಾಗಲಾರದು.

೨೨. ಯಾವ ಶತ್ರುವಿನ ದುರ್ಗದ ಮರ್ಮಗಳು ತಾವಾಗಿಯೇ ಪ್ರಕಾಶಕ್ಕೆ ಬರುವುದಿಲ್ಲವೊ, ಅವನು ಬಲವಾದ ಆ ದುರ್ಗದಲ್ಲಿರಲು ಯಾರಿಂದಲೂ ಎಂದಿಗೂ ಪರಾಜಯವನ್ನು ಹೊಂದುವುದಿಲ್ಲವೆಂಬುದು ಸಿದ್ಧವು."

೨೩. ಇಂತೆಂದು ದುರ್ಗದ ಬಲವನ್ನು ಪ್ರಶಂಸೆಮಾಡುತ್ತ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳದಾಗಿ, ಎರಡು ಪಕ್ಷಿಗಳೂ ಯಥಾಸುಖವಾಗಿ ಮಾಡುತ್ತಿದ್ದ ಕೂಜಿತಧ್ವನಿಯನ್ನು ಕೇಳುತ್ತ ಆಕಾಶಕ್ಕೆ ಹಾರಿತು.

ಅಥ ಪಾರಾವತೀ ದಕ್ಷಾ ವಿಪಕ್ಷಂ ಪ್ರೇಕ್ಷ್ಯ ಪಕ್ಷಿಣಂ ।
ಮಹಾಬಲಂ ದುರ್ಗಬಲಾ ಪ್ರಾಹ ಪಾರಾವತಂ ಪತಿಂ ॥ ೨೪ ॥

ಕಲರವ್ಯುವಾಚ:—

ಪ್ರಿಯ ಪಾರಾವತ ಪ್ರಾಜ್ಞ ಸರ್ವಕಾಮಿಸುಖಾರವ ।
ತವ ದೃಗ್ವಿಷಯಂ ಪ್ರಾಪ್ತಃ ಶ್ಯೇನೋಽಯಂ ಪ್ರಬಲೋ ರಿಪುಃ ॥ ೨೫ ॥
ಸಾವಜ್ಞಂ ವಾಕ್ಯಮಾಕರ್ಣ್ಯ ಪಾರಾವತ್ಯಾಃ ಸ ತತ್ಪತಿಃ ।
ಪಾರಾವತೀಮುವಾಚೇದಂ ಕಾ ಚಿಂತೇಯಂ ತವ ಪ್ರಿಯೇ ॥ ೨೬ ॥

ಪಾರಾವತ ಉವಾಚ:—

ಕತಿ ನಾಮ ನ ಸಂತೀಹ ಸುಭಗೇ ವ್ಯೋಮಚಾರಿಣಃ ।
ಕತಿ ದೇವಾಲಯೇಷ್ವೇಷು ಖಗಾ ನೋಪವಿಶಂತಿ ಹಿ ॥ ೨೭ ॥
ಕತಿ ಚೈವ ನ ಪಶ್ಯಂತಿ ನೌ ಸುಖಸ್ಥಾವಿಹ ಪ್ರಿಯೇ ।
ತೇಭ್ಯೋ ಯದೀಹ ಭೇತವ್ಯಂ ಕುತೋ ನೌ ತತ್ಸುಖಂ ಪ್ರಿಯೇ ॥ ೨೮ ॥
ರಮಸ್ವ ತ್ವಂ ಮಯಾ ಸಾರ್ಧಂ ತ್ಯಜ ಚಿಂತಾಮಿಮಾಂ ಶುಭೇ ।
ಅಸ್ಯ ಶ್ಯೇನವರಾಕಸ್ಯ ಗಣನಾಪಿ ನ ಮೇ ಹೃದಿ ॥ ೨೯ ॥

---

೨೪. ಆಗ ಬುದ್ಧಿಶಾಲಿನಿಯೂ, ದುರ್ಗಬಲವನ್ನಾಶ್ರಯಿಸಿದುದೂ ಆದ ಹೆಣ್ಣುಕಪೋತವು ಪರಾಕ್ರಮಿಯೂ ಶತ್ರುವೂ ಆದ ಆ ಗೃಧ್ರವನ್ನು ಕಂಡು ಗಂಡನಾದ ಪಾರಿವಾಳಕ್ಕೆ ಹೇಳತೊಡಗಿತು.

೨೫. ಕಲರವೆಯು ಹೇಳುತ್ತದೆ:—ಪ್ರಿಯನೆ! ನೀನು ಎಲ್ಲವನ್ನೂ ಚೆನ್ನಾಗಿ ಬಲ್ಲವನು. ಸಕಲ ಕಾಮಿಗಳಿಗೂ ಇಂಪಾದ ಕಲಧ್ವನಿಯುಳ್ಳವನು. ಪ್ರಬಲ ಶತ್ರುವಾದ ಈ ಶ್ಯೇನವು ನಿನ್ನ ಕಣ್ಣುಗಳಿಗೂ ಗೋಚರವಾಗಿರುವುದಲ್ಲವೆ.

೨೬. ಹೆಣ್ಣುಪಾರಿವಾಳದ ಈ ಮಾತುಗಳನ್ನು ಕೇಳಿ ಪತಿಯಾದ ಪಾರಾವತವು ತಾತ್ಸಾರದಿಂದ ಹೆಂಡತಿಯನ್ನು ಕುರಿತು, "ಪ್ರಿಯೆ! ನಿನಗೆ ಅದನ್ನು ಕುರಿತು ಚಿಂತೆಯೇಕೆ?" ಎಂದು ಹೇಳಿತು.

೨೭. ಗಂಡುಪಕ್ಷಿಯು ಹೇಳುತ್ತದೆ:—ಮಂಗಳೆಯೆ! ಈ ಲೋಕದಲ್ಲಿ ಸಂಚರಿಸುವ ಪಕ್ಷಿಗಳು ಎಷ್ಟು ವಿಘಗಳಾಗಿಲ್ಲ? ಎಷ್ಟು ಪಕ್ಷಿಗಳು ಈ ದೇವಾಲಯಗಳ ಗೋಪುರಗಳಲ್ಲಿಯೇ ವಾಸಮಾಡಿಕೊಂಡಿರುವುದಿಲ್ಲ?

೨೮. ಪ್ರಿಯಳೆ! ನಾವಿಬ್ಬರೂ ಇಲ್ಲಿ ಸುಖದಿಂದ ವಾಸಿಸುತ್ತಿರುವುದನ್ನು ಎಷ್ಟು ಪಕ್ಷಿಗಳು ನೋಡಿರುವುದಿಲ್ಲ? ಅವುಗಳೆಲ್ಲವುಗಳಿಗೂ ನಾವು ಭಯಪಡಬೇಕಾದ ಪ್ರಸಂಗವೊದಗಿದರೆ ನಮಗೆ ಮುಂದೆ ಸುಖವೆಲ್ಲಿಯದು?

೨೯. ಎಲೌ ಶುಭಗಾತ್ರಿಯೆ! ನೀನು ನನ್ನೊಡನೆ ಸುಖವಾಗಿ ವಿಹರಿಸುತ್ತಿರು. ಈ ಚಿಂತೆಯನ್ನು ಬಿಟ್ಟುಬಿಡು. ನೀಚವಾದ ಈ ಹದ್ದಿನ ವಿಷಯವಾಗಿ ನನ್ನ ಹೃದಯದಲ್ಲಿ ಸ್ವಲ್ಪವಾದರೂ ಗಣನೆಯೆಂಬುದಿಲ್ಲ.

ಇತ್ಥಂ ಪಾರಾವತವಚಃ ಶೃತ್ವಾ ಪಾರಾವತೀ ತತಃ ।
ಮೌನಮಾಲಂಬ್ಯ ಸಂತಸ್ಥೇ ಪತ್ಯುಃ ಪಾದಾರ್ಪಿತೇಕ್ಷಣಾಃ ॥ ೩೦ ॥
ಹಿತಪತ್ಯೋಽಪದಿಶ್ಯಾಪಿ ಪ್ರಿಯಪ್ರಿಯಚಿಕೀರ್ಷಯಾ ।
ಸಾಧ್ವ್ಯಾ ಜೋಷಂ ಸಮಾಸ್ಥೇಯಂ ಕಾರ್ಯಂ ಪತ್ಯುರ್ವಚಃ ಸದಾ॥೩೧॥
ಅನ್ಯೇದ್ಯುರಪ್ಯಥಾಯಾತಃ ಶ್ಯೇನೋ ಪಶ್ಯತ್ಸ ದಂಪತೀ ।
ಅಪರಿಚ್ಛಿನ್ನಯಾ ದೃಷ್ಟ್ಯಾ ಯಥಾ ಮೃತ್ಯುರ್ಗತಾಯುಷಂ ॥ ೩೨ ॥
ಅಥ ಮಂಡಲಗತ್ಯಾ ಸ ಪ್ರಾಸಾದಂ ಪರಿತೋ ಭ್ರಮನ್ ।
ನಿರೀಕ್ಷ್ಯ ತದ್ಗತಾಯಾತೌ ಯಾತೋ ಗಗನಮಾರ್ಗತಃ ॥ ೩೩ ॥
ಗತೇಽಥ ನಭಸಿ ಶ್ಯೇನೇ ಪುನಃ ಪಾರಾವತಾಂಗನಾ ।
ಪ್ರೋವಾಚ ಪ್ರೇಯಸೀ ನಾಥ ದೃಷ್ಟೋ ದುಷ್ಟಸ್ತ್ವಯಾಽಹಿತಃ ॥ ೩೪ ॥
ತಸ್ಯಾ ವಾಕ್ಯಂ ಸಮಾಕರ್ಣ್ಯ ಪುನಃ ಕಲರವೋಽಬ್ರವೀತ್
ಕಿಂಕರಿಷ್ಯತ್ಯಸೌ ಮುಗ್ಧೇ ಮನು ವ್ಯೋಮವಿಹಾರಿಣಃ ॥ ೩೫ ॥

---

೩೦. ಈ ವಿಧವಾದ ಗಂಡುಹಕ್ಕಿಯ ಮಾತುಗಳನ್ನು ಕೇಳಿ ಹೆಣ್ಣುಹಕ್ಕಿಯು ಮೌನವನ್ನವಲಂಬಿಸಿಕೊಂಡು ಪತಿಯ ಪಾದಗಳಲ್ಲಿಯೇ ನ್ಯಸ್ತದೃಷ್ಟಿಯುಳ್ಳವಳಾಗಿ ಸುಮ್ಮನಿರುತ್ತಿದ್ದಳು.

೩೧. ಗಂಡನಿಗೆ ಹಿತವನ್ನು ಮಾಡಲೆಳಸಿದ ಪತ್ನಿಯು ಸರಿಯಾದ ಮಾರ್ಗವನ್ನು ತೋರಿಸಿಕೊಡಲು ಅರ್ಹಳಾದರೂ ಪಾತಿವ್ರತ್ಯದಿಂದ ನಿತ್ಯವೂ ಗಂಡನಿಗೆ ಸಂತೋಷವುಂಟಾಗುವಂತೆ ಅವನ ಮಾತಿನಂತೆಯೇ ನಡೆದುಕೊಳ್ಳಬೇಕು.

೩೨–೩೩. ಮತ್ತೊಂದು ದಿನವೂ ಆ ಶ್ಯೇನವು ಅಲ್ಲಿಗೆ ಬಂದಿತು. ಮತ್ತು ಆಯುಃಕ್ಷಯವಾದವನನ್ನು ಮೃತ್ಯುದೇವತೆಯು ನೋಡುವಂತೆ ಎಡೆಬಿಡದ ನೋಟದಿಂದಲೇ ಆ ಕಪೋತದಂಪತಿಗಳನ್ನು ನೋಡುತ್ತಿದ್ದಿತು. ಬಳಿಕ ಪ್ರಾಸಾದದ ಸುತ್ತಲೂ ಪ್ರದಕ್ಷಿಣೆಯಾಗಿ ಸುತ್ತುತ್ತ ಆ ಗಿಡಗವು ಪಾರಿವಾಳಗಳು ತಮ್ಮ ಗೂಡಿಗೆ ಪ್ರವೇಶಿಸುವ ಮತ್ತು ಹೊರಗೆ ಬರುವ ಮಾರ್ಗಗಳನ್ನು ಕಂಡುಕೊಂಡು ಆಕಾಶಮಾರ್ಗದಲ್ಲಿಯೇ ಹೊರಟುಹೋಯಿತು.

೩೪. ಆ ಶ್ಯೇನವು ಆಕಾಶದಲ್ಲಿ ಹಾರಿಹೋಗಲು ಗಂಡನಿಗೆ ಪ್ರಿಯಳಾದ ಆ ಹೆಣ್ಣುಕಪೋತವು "ರಮಣನೆ! ನಮ್ಮ ಶತ್ರುವಾದ ಆ ಪಕ್ಷಿಯು ಬಂದಿದ್ದುದನ್ನು ನೀನು ಕಂಡೆಯಾ?" ಎಂದು ಪ್ರಶ್ನೆಮಾಡಿದಳು.

೩೫. ಅದರ ಮಾತನ್ನು ಕೇಳಿ ಮತ್ತೆ ಗಂಡುಹಕ್ಕಿಯು ಹೇಳತೊಡಗಿತು. "ಎಲೌ ಹುಚ್ಚಿಯೆ! ಹುಟ್ಟಿದಂದಿನಿಂದಲೂ ಆಕಾಶದಲ್ಲಿಯೇ ವಿಹರಿಸುತ್ತಿರುವ ನನಗೆ ಈ ಗಿಡಗವು ಏನು ತಾನೆ ಮಾಡಬಲ್ಲುದು?

ದುರ್ಗಂ ಚ ಸ್ವರ್ಗತುಲ್ಯಂ ಮೇ ಯತ್ರ ನಾಸ್ತ್ಯರಿತೋ ಭಯಂ ।
ಅಯಂ ನ ತಾಂ ಗತಿರ್ವೇತ್ತಿ ಯಾ ವೇದಾಹಂ ನಭೋಽಂಗಣೇ ॥ ೩೬ ॥
ಪ್ರಡೀನೋಡ್ಡೀನಸಂಡೀನಕಾಂಡವ್ಯಾಡಕಪಾಟಕಾಃ ।
ಸ್ರಂಸನೀ ಮಂಡಲವತೀ ಗತಯೋಽಷ್ಟಾವುದಾಹೃತಾಃ ॥ ೩೭ ॥
ಯತ್ಥೈತಾಸ್ವಿಹ ಕೌಶಲ್ಯಂ ಮಯಿ ಪಾರಾವತೀ ಪ್ರಿಯೇ ।
ಗತಿಷು ಕ್ವಾಪಿ ಕಸ್ಯಾಪಿ ಪಕ್ಷಿಣೋ ನ ತಥಾಂಬರೇ ॥ ೩೮ ॥
ಸುಖೇನ ತಿಷ್ಠ ಕಾ ಚಿಂತಾ ಮಯಿ ಜೀವತಿ ತೇ ಪ್ರಿಯೇ ।
ಇತಿ ತದ್ವಚಸಂ ಶ್ರುತ್ವಾ ಸಾ ಸ್ಥಿತಾ ಮೂಕವತ್ಸತೀ ॥ ೩೯ ॥
ಅಪರೇದ್ಯುಃ ಪರಿಶ್ಯೇನಸ್ತತ್ರ ಭಾರಶಿಲಾತಲೇ ।
ಕಿಯದಂತರಮಾಸಾದ್ಯೋಽಪವಿಷ್ಟೋಽತಿ ಪ್ರಹೃಷ್ಟವತ್ ॥ ೪೦ ॥
ಆಯಾಮಂ ತತ್ರ ಸಂಸ್ಥಿತ್ವಾ ತತ್ಕುಲಾಯಂ ವಿಲೋಕ್ಯ ಚ ।
ಪುನರ್ವಿನಿರ್ಗತಃ ಶ್ಯೇನಃ ಸಾಪಿ ಭೀತಾಬ್ರವೀತ್ಪುನಃ ॥ ೪೧ ॥

---

೩೬. ಈ ನನ್ನ ದುರ್ಗವೂ ಸ್ವರ್ಗಕ್ಕೆ ಸಮಾನವಾಗಿರುವುದು. ಇಲ್ಲಿ ಯಾವ ಶತ್ರುಗಳ ಭಯವೂ ಇಲ್ಲವು. ಆಕಾಶಮಾರ್ಗದಲ್ಲಿ ಹಾರಾಡುವ ವಿಷಯದಲ್ಲಿ ನಾನು ಎಷ್ಟು ಗತಿಭೇದವನ್ನು ತಿಳಿದಿರುವೆನೊ, ಅಷ್ಟನ್ನು ಆ ಪಕ್ಷಿಯು ತಿಳಿದಿರಲಾರದು.

೩೭. ಮೇಲಿನಿಂದ ಕೆಳಕ್ಕಿಳಿಯುವುದು, ಮೇಲಕ್ಕೇರುವುದು, ಒಂದೇಮಟ್ಟದಲ್ಲಿ ಹಾರುವುದು, ಕಾಂಡಗಮನ, ವ್ಯಾಡಕ, ಪಾಟಕ, ಜಾರುವುದು ಮತ್ತು ಮಂಡಲಾಕಾರವಾಗಿ ತಿರುಗುವುದು—ಎಂಬುದಾಗಿ ಪಕ್ಷಿಗಳ ಹಾರಾಟವು ಎಂಟು ವಿಧವಾಗಿರುವುದೆಂದು ಹೇಳಲ್ಪಟ್ಟಿರುವುದು.

೩೮. ಪ್ರಿಯೆ ಕಪೋತಿ! ಆಕಾಶಮಾರ್ಗದಲ್ಲಿ ನನಗೆ ಇವುಗಳೆಲ್ಲವುಗಳಲ್ಲಿಯೂ ಇರುವ ಕೌಶಲ್ಯವು ಎಂದಿಗೂ ಯಾವ ಪಕ್ಷಿಗೂ ಇರುವುದಿಲ್ಲ.

೩೯. ಕಾಂತೆ! ನೀನು ಸುಖದಿಂದಿರು. ನಾನು ಜೀವಿಸಿರುವವರೆಗೂ ನಿನಗೆ ಚಿಂತೆಯೇತಕ್ಕೆ?'' ಇಂತೆಂದ ಗಂಡನ ಮಾತುಗಳನ್ನು ಕೇಳಿ ಆ ಪತಿವ್ರತೆಯಾದ ಹೆಣ್ಣು ಕಪೋತವು ಮೂಕವಾಗಿ ನಿಂತಿದ್ದಿತು.

೪೦. ಮತ್ತೊಂದು ದಿವಸವೂ ಆ ಶ್ಯೇನವು ಗೋಪುರಕ್ಕೆ ಸ್ವಲ್ಪ ದೂರದಲ್ಲಿಯೇ ಭಾರವಾದ ಒಂದು ಕಲ್ಲಿನಮೇಲೆ ಕುಳಿತುಕೊಂಡು ಬಹಳ ಸಂತೋಷಗೊಂಡಂತೆ ಕಾಣುತ್ತಿದ್ದಿತು.

೪೧. ಒಂದು ಪ್ರಹರದವರೆಗೂ ಅಲ್ಲಿ ಕುಳಿತುಕೊಂಡು ಆ ಪಾರಿವಾಳಗಳ ಗೂಡನ್ನೇ ಗುರಿಯಿಟ್ಟು ನೋಡುತ್ತ ಶ್ಯೇನವು ಪುನಃ ಹೊರಟುಹೋಯಿತು. ಅದನ್ನು ಕಂಡು ಹೆಣ್ಣುಪಕ್ಷಿಯು ಗಂಡನಿಗೆ ಮತ್ತೆ ಹೇಳಿತು.

ಪ್ರಿಯ ಸ್ಥಾನಮಿದಂ ತ್ಯಾಜ್ಯಂ ದುಷ್ಟದೃಷ್ಟಿವಿದೂಷಿತಂ ।
ಅಸೌ ಕ್ರೂರೋಽತಿನಿಕಟಮುಪವಿಷ್ಟೋಽತಿಹೃಷ್ಟವತ್ ॥ ೪೨ ॥
ಸಾವಜ್ಞಂ ಸ ಪುನಃ ಪ್ರಾಹ ಕಿಂ ಕರಿಷ್ಯತ್ಯಸೌ ಪ್ರಿಯೇ ।
ಮೃಗಾಕ್ಷೀಣಾಂ ಸ್ವಭಾವೋಽಯಂ ಪ್ರಾಯಶೋ ಭೀರುವೃತ್ತಯಃ ॥ ೪೩ ॥
ಇತರೇದ್ಯುರಪಿ ಪ್ರಾಪ್ತಃ ಸ ಚ ಶ್ಯೇನೋ ಮಹಾಬಲಃ ।
ತಯೋರಭಿಮುಖಂ ತತ್ರ ಸ್ಥಿತೋ ಯಾಮದ್ವಯಾವಧಿ ॥ ೪೪ ॥
ಪುನರ್ವಿಲೋಕ್ಯ ತದ್ವರ್ತ್ಮ ಶೀಘ್ರಂ ಯಾತೋ ಯಥಾಗತಂ ।
ಗತೇಽಥ ಶಕುನೌ ತಸ್ಮಿನ್ನಾಹ ಬಭಾಷೇ ವಿಹಂಗಮಾ ॥ ೪೫ ॥
ನಾಥ ಸ್ಥಾನಾಂತರಂ ಯಾವೋ ಮೃತ್ಯುರ್ನೌ ನಿಕಟೋಽತ್ರ ಯತ್ ।
ಪುನರ್ದೃಷ್ಟೇ ಪ್ರಣಷ್ಟೇಽಸ್ಮಿನ್ನಾವಾಂ ಸ್ಯಾವಃ ಸುಖಂ ಪ್ರಿಯ ॥ ೪೬ ॥
ಪ್ರಿಯ ಯಸ್ಯ ಸಪಕ್ಷಸ್ಯ ಗತಿಃ ಸರ್ವತ್ರ ಸಿದ್ಧಿದಾ ।
ಸ ಕಿಂ ಸ್ವದೇಶರಾಗೇಣ ನಾಶಂ ಪ್ರಾಪ್ನೋತಿ ಬುದ್ಧಿಮಾನ್ ॥ ೪೭ ॥

---

೪೨. ಪ್ರಿಯನೆ! ಈ ಸ್ಥಾನವು ಆ ದುಷ್ಟಪಕ್ಷಿಯ ದೃಷ್ಟಿಗೆ ಬಿದ್ದು ಕಲುಷಿತವಾಗಿರುವುದು. ಇದನ್ನು ನಾವು ಖಂಡಿತವಾಗಿಯೂ ಬಿಡತಕ್ಕದ್ದು. ಇಂದು ಆ ಕ್ರೂರಪಕ್ಷಿಯು ಬಹಳ ಸಮೀಪದಲ್ಲಿಯೇ ಕುಳಿತುಕೊಂಡು ಅತ್ಯಂತ ಹರ್ಷಗೊಂಡಂತೆ ಕಾಣುತ್ತಿದ್ದಿತು.

೪೩. ಗಂಡುಹಕ್ಕಿಯಾದರೊ ಪೂರ್ವದಂತೆಯೇ ಉದಾಸೀನಭಾವದಿಂದ ಪುನಃ ಹೇಳತೊಡಗಿತು. "ಪ್ರಿಯೆ! ಅದು ನಮಗೆ ಏನನ್ನು ತಾನೆ ಮಾಡಬಲ್ಲದು? ಈ ತಳಮಳವು ಸ್ತ್ರೀಯರಿಗೆ ಸ್ವಭಾವವಾಗಿಯೇ ಇರುವುದು. ಅವರು ಸಾಧಾರಣವಾಗಿ ಭಯಗೊಳ್ಳುವವರೇ ಅಲ್ಲವೆ?

೪೪. ಮಾರನೆಯದಿನವೂ ಆ ಶ್ಯೇನವು ಬಂದು ಅವರಿಬ್ಬರಿಗೂ ಎದುರಾಗಿಯೇ ಕುಳಿತುಕೊಂಡು ಎರಡು ಯಾಮಗಳವರೆಗೂ ಕದಲಲೇ ಇಲ್ಲ.

೪೫. ಪುನಃ ಅವುಗಳು ಬಂದು ಹೋಗುವ ಬಿಲಮಾರ್ಗವನ್ನೇ ಪರೀಕ್ಷಿಸುತ್ತ ಬೇಗನೆಯೆ ಹಿಂದಿರುಗಿತು. ಆ ಪಕ್ಷಿಯು ಹೊರಟುಹೋಗಲು ಹೆಣ್ಣುಕಪೋತವು ಗಂಡಸಿಗೆ ಹೇಳಿತು.

೪೬. "ನಾಥ! ನಾವು ಬೇರೆ ಸ್ಥಳಕ್ಕೆ ಹೋಗೋಣ. ಇಲ್ಲಿ ನಮಗೆ ಮೃತ್ಯುವೇ ಸನ್ನಿಹಿತವಾಗಿರುವುದು. ಪ್ರಿಯನೆ! ಈ ದುಷ್ಟಪಕ್ಷಿಯು ನಾಶವನ್ನು ಹೊಂದಿದಮೇಲೆ ನಾವು ಪುನಃ ಇಲ್ಲಿಗೆ ಬಂದು ಸುಖವಾಗಿರೋಣ.

೪೭. ಕಾಂತ! ಯಾವ ಪಕ್ಷಿಗೆ ಎಲ್ಲೆಲ್ಲಿಯೂ ಹಿಡಾಡುವ ಶಕ್ತಿಯುದ್ದು ಸುಲಭವಾಗಿ ಜೀವನವು ಸಾಗುತ್ತಿರುವುದೊ, ಅದು ಬುದ್ಧಿಯುಳ್ಳದುದಾದರೆ ತನ್ನ ದೇಶವೆಂಬ ಅನುರಾಗದಲ್ಲಿ ಸಿಕ್ಕಿ ನಾಶವನ್ನು ಹೊಂದಬಹುದೆ?

ಸೋಪಸರ್ಗಂ ನಿಜಂ ದೇಶಂ ತ್ಯಕ್ತ್ವಾ ಯೋಽನ್ಯತ್ರ ನ ವ್ರಜೇತ್ ।
ಸ ಪಂಗುರ್ನಾಶಮಾಪ್ನೋತಿ ಕೂಲಸ್ಥಿತ ಇವ ದ್ರುಮಃ ॥ ೪೮ ॥
ಪ್ರಿಯೋದಿತಂ ನಿಶಮ್ಯೇತಿ ಸ ಭವಿತ್ರೀ ದಶಾರ್ದಿತಃ ।
ಸರೀಢಂ ಪುನರಪ್ಯಾಹ ಪ್ರಿಯೇ ಮಾಭೈಃ ಖಗಾತ್ತತಃ ॥ ೪೯ ॥
ಅಥಾಪರಸ್ಮಿನ್ನಹನಿ ಸ ಶ್ಯೇನಃ ಪ್ರಾತರೇವ ಹಿ ।
ತದ್ದ್ವಾರದೇಶಮಾಸಾದ್ಯ ಸಾಯಂ ಯಾವತ್ಸ್ಥಿತೋಽಬಲಃ ॥ ೫೦ ॥
ಅಸ್ತಾಚಲಸ್ಯ ಶಿಖರಂ ಯಾತೇ ಭಾನೌ ಗತೇ ಖಗೇ ।
ಕುಲಾಯಾದ್ಬಾಹ್ಯಮಾಗತ್ಯೋವಾಚ ಪಾರಾವತೀ ಪತಿಂ ॥ ೫೧ ॥
ನಾಥ ನಿರ್ಗಮನಸ್ಯಾಯಂ ಕಾಲಃ ಕಾಲೋಽತಿದೂರತಃ ।
ಯಾವತ್ತಾವದ್ವಿನಿರ್ಯಾಹಿ ತ್ಯಕ್ತ್ವಾ ಮಾಮಪಿ ಸನ್ಮತೇ ॥ ೫೨ ॥
ತ್ವಯಿ ಜೀವತಿ ದುಷ್ಪ್ರಾಪ್ಯಂ ನ ಕಿಂಚಿಜ್ಜಗತೀತಲೇ ।
ಪುನರ್ದಾರಾಃ ಪುನರ್ಮಿತ್ರಂ ಪುನರ್ವಸು ಪುನರ್ಗೃಹಂ ॥ ೫೩ ॥

---

೪೮. ಯಾವನು ಅಪಾಯದಿಂದ ಕೂಡಿದ ತನ್ನ ದೇಶವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗುವುದಿಲ್ಲವೊ, ಅವನೇ ಕುಂಟನು. ಅವನು ಎಂದಾದರೂ ನದೀ ಪ್ರವಾಹದಿಂದ ದಡದಲ್ಲಿರುವ ವೃಕ್ಷವೆಂತೋ ಅಂತು ನಾಶವನ್ನೇ ಹೊಂದುವನು.''

೪೯. ಪತ್ನಿಯು ಹೇಳಿದ ಈ ಮಾತುಗಳನ್ನು ಕೇಳಿಯೂ ಗಂಡು ಪಾರಿವಾಳವು ಮುಂದಾಗಬೇಕಾದ ಅನರ್ಥದಿಂದ ಚೋದಿತನಾಗಿ ಪುನಃ ಅಸಡ್ಡೆಯಿಂದಲೇ ''ಪ್ರಿಯೆ! ನೀನೆಂದಿಗೂ ಆ ಪಕ್ಷಿಗೆ ಭಯಗೊಳ್ಳಬೇಡ'' ಎಂದಿತು.

೫೦. ಮತ್ತೊಂದು ದಿನ ಆ ಗಿಡಗವು ಪ್ರಾತಃಕಾಲದಲ್ಲಿಯೇ ಬಂದು ಆ ಪಕ್ಷಿಗಳ ಗೂಡಿನ ಬಾಗಿಲಬಳಿಯಲ್ಲಿಯೇ ಕುಳಿತು ಸಾಯಂಕಾಲದವರೆಗೂ ನೋಡಿ ಹೊರಟುಹೋಯಿತು.

೫೧. ಸೂರ್ಯನು ಅಸ್ತಾಚಲವನ್ನು ಸೇರಿದನು. ಶ್ಯೇನವೂ ಹೊರಟು ಹೋಯಿತು. ಆಗ ಹೆಣ್ಣುಪಾರಿವಾಳವು ತಮ್ಮ ಗೂಡಿನಿಂದ ಹೊರಕ್ಕೆ ಬಂದು ಗಂಡನನ್ನು ಕುರಿತು ಪುನಃ ಹೇಳತೊಡಗಿತು.

೫೨. '' ನಾಥ! ಈ ಸ್ಥಾನವನ್ನು ಬಿಟ್ಟುಹೊರಡಲು ಇದೇ ಸಕಾಲವಾಗಿರುವುದು. ಸದ್ಬುದ್ಧಿಯೆ! ನನ್ನನ್ನು ತ್ಯಜಿಸಿದರೂ ಚಿಂತೆಯಿಲ್ಲ. ಶ್ಯೇನರೂಪವಾದ ಮೃತ್ಯುವು ದೂರದಲ್ಲಿರುವಾಗಲೇ ನೀನು ಇಲ್ಲಿಂದ ಹೊರಟುಹೋಗು.

೫೩. ನೀನೊಬ್ಬನು ಜೀವದಿಂದಿರುವೆಯಾದರೆ ಈ ಭೂಮಂಡಲದಲ್ಲಿ ಅಪ್ರಾಪ್ಯವಾದುದು ಯಾವುದೂ ಇಲ್ಲವು. ಪುನಃ ಹೆಂಡತಿಯನ್ನೂ, ಸ್ನೇಹಿತರನ್ನೂ, ಧನವನ್ನೂ, ಮತ್ತೊಂದು ಮನೆಯನ್ನೂ ಸಂಪಾದಿಸಬಹುದು.

ಯದ್ಯಾತ್ಮಾ ರಕ್ಷಿತಃ ಪುಂಸಾ ದಾರೈರಪಿ ಧನೈರಪಿ ।
ತದಾ ಸರ್ವಂ ಹರಿಶ್ಚಂದ್ರಭೂಪೇನೇವೇಹ ಲಭ್ಯತೇ ॥ ೫೪ ॥
ಅಯಮಾತ್ಮಾ ಪ್ರಿಯೋ ಬಂಧುರಯಮಾತ್ಮಾ ಮಹದ್ಧನಂ ।
ಧರ್ಮಾರ್ಥಕಾಮಮೋಕ್ಷಾಣಾಮಯಮಾತ್ಮಾರ್ಜಕಃ ಪರಃ ॥ ೫೫ ॥
ಯಾವದಾತ್ಮನಿ ವೈ ಕ್ಷೇಮಂ ತಾವತ್ಕ್ಷೇಮಂ ಜಗತ್ರಯೇ ।
ಸೋಽಪಿ ಕ್ಷೇಮಃ ಸುಮತಿನಾ ಯಶಸಾ ಸಹ ವಾಂಛ್ಯತೇ ॥ ೫೬ ॥
ಯಶೋಹೀನಂ ತು ಯತ್ಕ್ಷೇಮಂ ತತ್ಕ್ಷೇಮಾನ್ನಿಧನಂ ವರಂ ।
ತದ್ಯಶಃ ಪ್ರಾಪ್ಯತೇ ಪುಂಭಿರ್ನೀತಿಮಾರ್ಗಪ್ರವರ್ತನೇ ॥ ೫೭ ॥
ಅತೋ ನೀತಿಪಥಂ ಶ್ರುತ್ವಾ ನಾಥ ಸ್ಥಾನಾದಿತೋ ವ್ರಜ ।
ನ ಗಮಿಷ್ಯತಿ ಚೇತ್ಪ್ರಾತಸ್ತತೋ ಮೇ ಸಂಸ್ಮರಿಷ್ಯಸಿ ॥ ೫೮ ॥
ಇತ್ಯುಕ್ತೋಽಪಿ ಸ ವೈ ಪತ್ನ್ಯಾ ಪಾರಾವತ್ಯಾ ಸುಮೇಧಯಾ ।
ನ ನಿರ್ಯಯೌ ಪ್ರತಿಸ್ಥಾನಾದ್ಭವಿತ್ರ್ಯಾ ಪ್ರತಿವಾರಿತಃ ॥ ೫೯ ॥

---

೫೪. ಪುರುಷನಾದವನು ಹೆಂಡತಿಗಿಂತಲೂ ಧನಕ್ಕಿಂತಲೂ ಹೆಚ್ಚಾಗಿ ತನ್ನನ್ನು ರಕ್ಷಿಸಿಕೊಳ್ಳುವವನಾದರೆ ಹರಿಶ್ಚಂದ್ರಮಹಾರಾಜನಂತೆ ಸಕಲವನ್ನೂ ಪುನಃ ಸಂಪಾದಿಸಲು ಶಕ್ತನಾಗುವನು.

೫೫. ಪ್ರತಿಯೊಬ್ಬನಿಗೂ ತನ್ನ ಆತ್ಮವೇ ಪ್ರಿಯವಾದ ಬಂಧುವು. ಅದೇ ಮಹೈಶ್ವರ್ಯವು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಸರ್ವೋತ್ತಮನಾದ ಈ ಆತ್ಮನೇ ಸಂಪಾದಿಸುವನು.

೫೬. ಆತ್ಮವು ಎಲ್ಲಿಯವರೆಗೆ ಕ್ಷೇಮವಾಗಿರುವುದೊ, ಅಲ್ಲಿಯವರೆಗೂ ಮೂರು ಲೋಕಗಳಲ್ಲಿಯೂ ಕ್ಷೇಮವೇ. ಬುದ್ಧಿವಂತನಾದವನು ಆ ಕ್ಷೇಮವನ್ನೂ ಯಶಸ್ಸನ್ನೂ ಏಕಕಾಲದಲ್ಲಿಯೇ ಇಚ್ಛಿಸುತ್ತಿರುವನು.

೫೭. ಯಶಸ್ಸಿಲ್ಲದವನ ಆರೋಗ್ಯವು ಯಾವುದಿರುವುದೊ ಅದಕ್ಕಿಂತಲೂ ಮರಣವೇ ಶ್ರೇಯಸ್ಕರವು. ಆ ಕೀರ್ತಿಯನ್ನು ಮನುಷ್ಯರು ನೀತಿಮಾರ್ಗವನ್ನನುಸರಿಸುವುದರಿಂದಲೇ ಸಂಪಾದಿಸುವರು.

೫೮. ನಾಥ! ಆದುದರಿಂದ ನನ್ನ ಈ ನೀತಿಯ ಮಾತುಗಳನ್ನು ಕೇಳಿ ನೀನು ಈ ಸ್ಥಳವನ್ನು ಬಿಟ್ಟುಹೋಗು. ಬೆಳಗಾಗುವುದರಲ್ಲಿ ಹೋಗದಿದ್ದರೆ ಕಾಲವು ಮಿಂಚಿದ ಮೇಲೆ ನನ್ನ ಮಾತುಗಳನ್ನು ಸ್ಮರಿಸಿಕೊಳ್ಳುವೆ.''

೫೯. ಇಂತೆಂದು ತೀಕ್ಷ್ಣಬುದ್ಧಿಯುಳ್ಳ ಆ ಹೆಣ್ಣುಪಾರಿವಾಳವು ಬಹುವಿಧವಾಗಿ ಹೇಳಿದರೂ ಗಂಡುಹಕ್ಕಿಯು ಮುಂದಾಗಬೇಕಾದ ಅನರ್ಥದ ಬಲದಿಂದ ತಡೆಯಲ್ಪಟ್ಟು ತನ್ನ ಸ್ಥಾನವನ್ನು ಬಿಟ್ಟು ಕದಲಲೇ ಇಲ್ಲ.

ಅಥೋಷಸಿ ಸಮಾಗತ್ಯ ಶ್ಯೇನೇನ ಬಲಿನಾ ತದಾ ।
ತನ್ನಿರ್ಗಮಾಧ್ವಾ ಸಂರುದ್ಧಃ ಕಿಂಚಿದ್ಭಕ್ಷ್ಯವತಾ ಮುನೇ ॥ ೬೦ ॥
ದಿನಾನಿ ಕತಿಚಿತ್ತತ್ರ ಸ್ಥಿತ್ವಾ ಶ್ಯೇನೋ ಮಹಾಮತಿಃ ।
ಪಾರಾವತಮುವಾಚೇದಂ ಧಿಕ್ತ್ವಾಂ ಪೌರುಷವರ್ಜಿತಂ ॥ ೬೧ ॥
ಕಿಂ ವಾ ಯುದ್ಧ್ಯಸ್ವ ದುರ್ಬುದ್ಧೇ ಕಿಂ ವಾ ನಿರ್ಯಾಹಿ ಮೇ ಗಿರಾ ।
ಕ್ಷುಧಾ ಕ್ಷೀಣೋ ಮೃತಃ ಪಶ್ಚಾನ್ನಿರಯಂ ಯಾಸ್ಯಸಿ ಧ್ರುವಂ ॥ ೬೨ ॥
ದ್ವೌ ಭವಂತಾವಹಂ ಚೈಕಶ್ಚರೌ ಜಯಪರಾಜಯೌ ।
ಸ್ಥಾನಾರ್ಥಂ ಯುಧ್ಯತಃ ಸತ್ತ್ವಾತ್ಸ್ವರ್ಗೋ ವಾ ದುರ್ಗಮೇವ ವಾ॥೬೩॥
ಪುರುಷಾರ್ಥಂ ಸಮಾಲಂಬ್ಯ ಯೇ ಯತಂತೇ ಮಹಾಧಿಯಃ ।
ವಿಧಿರೇವ ಹಿ ಸಾಹಾಯ್ಯಂ ಕುರ್ಯಾತ್ತತ್ಸತ್ವಚೋದಿತಃ ॥ ೬೪ ॥
ಇತ್ಥಂ ಸ ಶ್ಯೇನಸಂಪ್ರೋಕ್ತಃ ಪತ್ನ್ಯಾತ್ಯುತ್ಸಾಹಿತಃ ಖಗಃ ।
ಅಯುದ್ಧ್ಯತ್ತೇನ ಶ್ಯೇನೇನ ಸ್ವದುರ್ಗದ್ವಾರಮಾಶ್ರಿತಃ ॥ ೬೫ ॥

---

೬೦. ಅಗಸ್ತ್ಯಮುನಿಯೆ! ಬಳಿಕ ಪ್ರಾತಃಕಾಲವಾಗಲು ಬಲಶಾಲಿಯಾದ ಆ ಶ್ಯೇನವು ಪುನಃ ಸ್ವಲ್ಪ ಆಹಾರವನ್ನು ತೆಗೆದುಕೊಂಡು ಬಂದು ಆ ಗೂಡಿನ ಹೊರಬಾಗಿಲನ್ನು ತಡೆದು ಕುಳಿತುಬಿಟ್ಟಿತು.

೬೧. ಸೂಕ್ಷ್ಮಬುದ್ಧಿಯುಳ್ಳ ಆ ಗಿಡುಗವು ಕೆಲವು ದಿವಸಗಳವರೆಗೂ ಹಾಗೆಯೆ ಕುಳಿತಿದ್ದು ಒಮ್ಮೆ ಗಂಡುಪಾರಿವಾಳವನ್ನು ಕುರಿತು ಇಂತೆಂದಿತು. "ಪರಾಕ್ರಮಹೀನನಾದ ನಿನಗೆ ಧಿಕ್ಕಾರವಿರಲಿ!

೬೨. ಎಲೈ ಮೂಢನೆ! ಏನುಮಾಡುತ್ತಿರುವೆ? ನನ್ನೊಡನೆ ಯುದ್ಧವನ್ನು ಮಾಡು. ನನ್ನ ಮಾತುಗಳನ್ನು ಕೇಳಿ ಹೊರಕ್ಕೆ ಬಾ. ಇಲ್ಲದಿದ್ದರೆ ಹಸಿವಿನಿಂದಲೇ ದೇಹವು ಕೃಶವಾಗುತ್ತಿರಲು ಬಳಿಕ ಮರಣವನ್ನು ಹೊಂದಲು ಖಂಡಿತವಾಗಿಯೂ ನರಕವನ್ನೇ ಹೊಂದುವೆ.

೬೩. ನೀವು ಇಬ್ಬರಿರುವಿರಿ. ನಾನಾದರೊ ಏಕಾಕಿಯು. ಜಯ ಪರಾಜಯುಗಳ ಅನಿಶ್ಚಿತಗಳಾಗಿರುವುವು. ಸ್ಥಾನಕ್ಕಾಗಿ ಹೊಡೆದಾಡುವ ಪ್ರಾಣಿಗೆ ಸತ್ತರೆ ಸ್ವರ್ಗವು ಲಭಿಸುವುದು. ಗೆದ್ದರೆ ದುರ್ಗಲಾಭವು.

೬೪. ಯಾರು ಪುರುಷಪ್ರಯತ್ನವನ್ನು ಅವಲಂಬಿಸಿಯೇ ಬುದ್ಧಿಪೂರ್ವಕವಾಗಿ ಕಾರ್ಯಗಳಿಗೆ ಕೈಹಾಕುವರೊ, ಅವರ ಪೌರುಷದಿಂದ ಚೋದಿತವಾಗಿ ದೈವವೂ ಅವರಿಗೇ ಸಹಾಯವನ್ನು ಮಾಡುತ್ತಿರುವುದು."

೬೫. ಇಂತೆಂದು ಶ್ಯೇನವು ಹೇಳುತ್ತಿರಲು, ಹೆಂಡತಿಯಿಂದಲೂ ಪ್ರೋತ್ಸಾಹಗೊಳಿಸಲ್ಪಟ್ಟು ಆ ಪಾರಿವಾಳವು ತನ್ನ ಬಿಲದ ಮಾರ್ಗದಲ್ಲಿಯೇ ಕುಳಿತುಕೊಂಡು ಆ ಗಿಡಗನೊಡನೆ ಯುದ್ಧವನ್ನು ಮಾಡತೊಡಗಿತು.

ಕ್ಷುದಿತಸ್ತೃಷಿತಃ ಸೋಽಥ ಶ್ಯೇನೇನ ಬಲಿನಾ ಧೃತಃ ।
ಚರಣೇನ ದೃಢೇನಾಶು ಚಂಚ್ವಾ ಸಾಪಿ ಧೃತಾ ಖಗೀ ॥ ೬೬ ॥
ತಾವಾದಾಯೋಡ್ಡಯಾಂಚಕ್ರೇ ಶ್ಯೇನೋ ವ್ಯೋಮನಿ ಸತ್ವರಂ ।
ಚಿಂತಯದ್ಭಕ್ಷಣಸ್ಥಾನಮನ್ಯಪಕ್ಷಿವಿವರ್ಜಿತಂ ॥ ೬೭ ॥
ಅಥ ಪತ್ನ್ಯಾ ಕಲರವಃ ಪ್ರೋಕ್ತಸ್ತತ್ರ ಸುಮೇಧಯಾ ।
ವಚೋಽವಮಾನಿತಂ ನಾಥ ತ್ವಯಾ ಮೇ ಸ್ತ್ರೀತಿ ಬುದ್ಧಿತಃ ॥ ೬೮ ॥
ಅತೋಽವಸ್ಥಾಮಿಮಾಂ ಪ್ರಾಪ್ತಃ ಕಿಂಕುರ್ಯಾಮಬಲಾ ಯತಃ ।
ಅಧುನಾಪಿ ವಚಶ್ಚೈಕಂ ಕರೋಷಿ ಯದಿ ಮೇ ಪ್ರಿಯ ॥ ೬೯ ॥
ತದಾ ಹಿತಂ ತೇ ವಕ್ಷ್ಯಾಮಿ ಕುರು ಚೈವಾವಿಚಾರಿತಂ ।
ಮಮೈಕವಾಕ್ಯಕರಣಾತ್ಸ್ತ್ರೀಜಿತೋ ನ ಭವಿಷ್ಯಸಿ ॥ ೭೦ ॥
ಯಾವದಾಸ್ಯಗತಾಸ್ಮ್ಯಸ್ಯ ಯಾವತ್ತ್ವಸ್ಥೋನ ಭೂಮಿಗಃ ।
ತಾವದಾತ್ಮವಿಮುಕ್ತ್ಯೈ ತ್ವಮರೇಃ ಪಾದಂ ದೃಢಂ ದಶ ॥ ೭೧ ॥

---

೬೬. ಹಸಿವು ಬಾಯಾರಿಕೆಗಳಿಂದ ಕೃಶವಾದ ಆ ಗಂಡುಹಕ್ಕಿಯು ಬಲಿಷ್ಠವಾದ ಶ್ಯೇನಪಕ್ಷಿಯಿಂದ ನಿಮಿಷಮಾತ್ರದಲ್ಲಿಯೇ ಹಿಡಿಯಲ್ಪಟ್ಟಿತು. ಅದನ್ನು ಕಾಲುಗಳಲ್ಲಿ ಬಲವಾಗಿ ಹಿಡಿದುಕೊಂಡು ಶ್ಯೇನವು ಕೊಕ್ಕಿನಿಂದ ಹೆಣ್ಣುಪಕ್ಷಿಯನ್ನೂ ಕಚ್ಚಿಕೊಂಡಿತು.

೬೭. ಇಂತು ಎರಡನ್ನೂ ತೆಗೆದುಕೊಂಡು ಆ ಶ್ಯೇನವು ಶೀಘ್ರವಾಗಿ ಮೇಲಕ್ಕೆ ಹಾರತೊಡಗಿತು. ಇತರ ಪಕ್ಷಿಗಳ ಗೊಡವೆಯಿಲ್ಲದೆ ಯಥೇಚ್ಛವಾಗಿ ಭಕ್ಷಿಸುವುದಕ್ಕೆ ಅನುಕೂಲವಾಗಿರುವ ಸ್ಥಳವು ಯಾವುದೆಂದು ಚಿಂತಿಸಿತು.

೬೮. ಆಗ ಹೆಣ್ಣುಪಾರಿವಾಳವು ಗಂಡನನ್ನು ಕುರಿತು ಬುದ್ಧಿಯುಕ್ತಗಳಾದ ಮಾತುಗಳನ್ನು ಪುನಃ ಹೇಳಿತು. "ನಾಥ! ನಾನು ಎಷ್ಟುವಿಧವಾಗಿ ಹೇಳಿದರೂ ನೀನು ಹೆಂಗಸಿನ ಮಾತೆಂದು ಅಸಡ್ಡೆಯಿಂದ ನನ್ನ ಮಾತುಗಳನ್ನು ನಿರಾಕರಿಸಿದೆ.

೬೯. ಆದುದರಿಂದಲೇ ನಿನಗೆ ಈ ದುರವಸ್ಥೆಯು ಪ್ರಾಪ್ತವಾಯಿತು. ಅಬಲೆಯಾದ ನಾನು ಮತ್ತೇನನ್ನು ಮಾಡಲಿ? ಪ್ರಿಯನೆ! ಈಗಲಾದರೂ ನಾನು ಹೇಳುವ ಒಂದು ಮಾತನ್ನು ಲಾಲಿಸಿ ಅದರಂತೆ ನಡೆದುಕೊ.

೭೦. ನಾನು ನಿನಗೆ ಹಿತವಾದುದನ್ನೇ ಹೇಳುವೆನು. ಹಿಂದುಮುಂದುಗಳನ್ನು ವಿಚಾರಿಸದೆ ಹಾಗೆ ಮಾಡು. ನನ್ನ ಈ ಒಂದು ಮಾತಿನಂತೆ ನಡೆದುಕೊಳ್ಳುವುದರಿಂದ ನೀನು ಸ್ತ್ರೀಜಿತನಾಗುವುದಿಲ್ಲ.

೭೧. ನಾನು ಈ ಪಕ್ಷಿಯ ಬಾಯಿಯಲ್ಲಿದ್ದಂತೆಯೇ ಇದು ಭೂಮಿಯಲ್ಲಿ ಕುಳಿತುಕೊಳ್ಳುವುದಕ್ಕೆ ಮೊದಲೇ ನೀನು ಆತ್ಮವಿಮೋಚನವನ್ನು ಮಾಡಿಕೊಳ್ಳಬಹುದು. ಶತ್ರುವಾದ ಇದರ ಕಾಲುಗಳನ್ನು ಬಲವಾಗಿ ಕಚ್ಚಿಬಿಡು."

ಇತಿ ಪತ್ನೀವಚಃ ಶ್ರುತ್ವಾ ತಥಾ ಸ ಕೃತವಾನ್ಖಗಃ ।
ಸ ಪೀಡಿತೋ ದೃಢಂ ಪಾದೇ ಶ್ಯೇನಶ್ಚೀತ್ಕೃತವಾನ್ಬಹು ॥ ೭೨ ॥
ತೇನ ಚೀತ್ಕರಣೇನಾಥ ಮುಕ್ತಾ ಸಾ ಮುಖಸಂಪುಟಾತ್ ।
ಪಾದಾಂಗುಲೀಶ್ಲಥತ್ವೇನ ಸೋಽಪಿ ಪಾರಾವತೋಽಪತತ್ ॥ ೭೩ ॥
ವಿಪದ್ಯಪಿ ಚ ನ ಪ್ರಾಜ್ಞೈಃ ಸಂತ್ಯಾಜ್ಯಃ ಕ್ವಚಿದುದ್ಯಮಃ ।
ಕ್ವಚ ಚಂಚೂಪುಟಸ್ತಸ್ಯ ಕ್ವ ಚ ತತ್ಪಾದಪೀಡನಂ ॥ ೭೪ ॥
ಕ್ವಚ ದ್ವಯೋಸ್ತಥಾಭೂತಾದರೇರ್ಮೋಕ್ಷಣಮುದ್ಭುತಂ ।
ದುರ್ಬಲೇಽಪ್ಯುದ್ಯಮವತಿ ಫಲಂ ಭಾಗ್ಯಂ ಯತೋಽರ್ಪಯೇತ್ ॥ ೭೫ ॥
ತಸ್ಮಾದ್ಭಾಗ್ಯಾನುಸಾರೇಣ ಫಲತ್ಯೇವ ಸದೋದ್ಯಮಃ ।
ಪ್ರಶಂಸಂತ್ಯುದ್ಯಮಂ ಚಾತೋ ವಿಪದ್ಯಪಿ ಮನೀಷಿಣಃ ॥ ೭೬ ॥
ಅಥ ತೌ ಕಾಲಯೋಗೇನ ವಿಪನ್ನೌ ಸರಯೂತಟೇ ।
ಮುಕ್ತಿಪುರ್ಯಾಮಯೋಧ್ಯಾಯಾಮೇಕೋ ವಿದ್ಯಾಧರೋಽಭವತ್ ॥ ೭೭ ॥

---

೭೨. ಹೆಂಡತಿಯ ಈ ಮಾತನ್ನು ಕೇಳಿ ಆ ಪಾರಿವಾಳವು ಅಂತೆಯೇ ಗಿಡಗನ ಪಾದವನ್ನು ಬಲವಾಗಿ ಕಚ್ಚಿತು. ಕಾಲಿನ ವೇದನೆಯನ್ನು ತಾಳಲಾರದೆ ಅದು ಬಹಳವಾಗಿ ಚೀತ್ಕಾರವನ್ನು ಮಾಡತೊಡಗಿತು.

೭೩. ಆ ಚೀತ್ಕಾರದ ಫಲವಾಗಿ ಬಾಯಿಯಲ್ಲಿದ್ದ ಹೆಣ್ಣುಪಾರಿವಾಳವು ಬಿಡುಗಡೆಯನ್ನು ಹೊಂದಿತು. ಕಾಲುಗಳ ಬೆರಳುಗಳು ಸಡಿಲವಾಗಲು ಆ ಗಂಡುಹಕ್ಕಿಯೂ ಕೆಳಗೆ ಬಿದ್ದಿತು.

೭೪. ವಿಪತ್ಕಾಲಗಳಲ್ಲಿಯೂ ಧೀರರಾದವರು ಪುರುಷಾಕಾರವನ್ನು ಎಂದಿಗೂ ತ್ಯಜಿಸಬಾರದು. ಬಲಶಾಲಿಯಾದ ಆ ಗಿಡಗನ ಚಂಚೂಪುಟದ ಹಿಡಿತವೆಲ್ಲಿ? ಅದರ ಪಾದಪೀಡನದ ಬಲವೆಲ್ಲಿ?

೭೫. ಇಂತಹ ಶತ್ರುಭೂತವಾದ ಪಕ್ಷಿಯ ಹಿಡಿತದಿಂದ ಆ ಎರಡು ದುರ್ಬಲಪಕ್ಷಿಗಳ ಬಿಡುಗಡೆಯೆಂಬುದೆಲ್ಲಿ? ದುರ್ಬಲನಾದರೂ ಪ್ರಯತ್ನಶಾಲಿಯಾದವನಿಗೆ ದೈವವು ಸತ್ಫಲವನ್ನೇ ಕೈಗೂಡಿಸುವುದು.

೭೬. ಆದುದರಿಂದ ಅವರವರ ಅದೃಷ್ಟಾನುಸಾರವಾಗಿ ಯಾವಾಗಲೂ ಪ್ರಯತ್ನವು ಫಲವನ್ನು ಕೊಟ್ಟೇಕೊಡುವುದು. ಆ ಕಾರಣದಿಂದಲೇ ಬುದ್ಧಿವಂತರು ವಿಪತ್ಕಾಲಗಳಲ್ಲಿಯೂ ಸಹ ಪುರುಷಪ್ರಯತ್ನವನ್ನೇ ಹೊಗಳುತ್ತಿರುವರು.

೭೭. ಬಳಿಕ ಕಾಲಕ್ರಮದಲ್ಲಿ ಆ ಎರಡು ಪಕ್ಷಿಗಳೂ ಸರಯೂನದಿಯ ತೀರದಲ್ಲಿ ಮರಣವನ್ನು ಹೊಂದಿದವು. ಗಂಡುಪಕ್ಷಿಯು ಮುಕ್ತಿಪುರಿಯೆನಿಸಿದ ಅಯೋಧ್ಯೆಯಲ್ಲಿ ಒಬ್ಬ ವಿದ್ಯಾಧರನಾಗಿ ಜನಿಸಿತು.

ಮೃತಾನಾಂ ಯತ್ರ ಜಂತೂನಾಂ ಕಾಶೀಪ್ರಾಪ್ತಿರ್ಭವೇದ್ಧ್ರುವಂ ।
ಮಂದಾರದಾಮತನಯೋ ನಾಮ್ನಾ ಪರಿಮಳಾಲಯಃ ॥ ೭೮ ॥
ಅನೇಕವಿದ್ಯಾನಿಲಯಃ ಕಲಾಕೌಶಲಭಾಜನಂ ।
ಕೌಮಾರಂ ವಯ ಆಸಾದ್ಯ ಶಿವಭಕ್ತಿಪರೋಽಭವತ್ ॥ ೭೯ ॥
ನಿಯಮಂ ಚಾಪಿ ಜಗ್ರಾಹ ವಿಜಿತೇಂದ್ರಿಯಮಾನಸಃ ।
ಏಕಪತ್ನೀವ್ರತಂ ನಿತ್ಯಂ ಚರಿಷ್ಯಾಮೀತಿ ನಿಶ್ಚಿತಂ ॥ ೮೦ ॥
ಪರಯೋಷಿತ್ಸಮಾಸಕ್ತಿರಾಯುಃ ಕೀರ್ತಿಂ ಬಲಂ ಸುಖಂ ।
ಹರೇತ್ಸ್ವರ್ಗಗತಿಂ ಚಾಪಿ ತಸ್ಮಾತ್ತಾಂ ವರ್ಜಯೇತ್ಸುಧೀಃ ॥ ೮೧ ॥
ಅಪರಂ ಚಾಪಿ ನಿಯಮಂ ಸ ಶುಚಿಷ್ಮಾನ್ಸಮಾದದೇ ।
ಗತಜನ್ಮಾಂತರಾಭ್ಯಾಸಾತ್ತ್ರಿಲೋಚನಸಮಾಶ್ರಯಾತ್ ॥ ೮೨ ॥
ಸಮಸ್ತಪುಣ್ಯನಿಲಯಂ ಸಮಸ್ತಾರ್ಥಪ್ರಕಾಶಕಂ ।
ಸಮಸ್ತಕಾಮಜನಕಂ ಪರಾನಂದೈಕ ಕಾರಣಂ ॥ ೮೩ ॥

---

೭೮. ಸರಯೂತೀರದಲ್ಲಿ ಮರಣವನ್ನು ಹೊಂದಿದ ಸಕಲ ಜಂತುಗಳಿಗೂ ಕಾಶೀವಾಸಪ್ರಾಪ್ತಿಯು ಲಭಿಸುವುದರಲ್ಲಿ ಸಂದೇಹವಿಲ್ಲ. ಆ ವಿದ್ಯಾಧರನು ಮಂದಾರದಾಮನ ಮಗನಾಗಿ ಹುಟ್ಟಿ ಪರಿಮಳಾಲಯನೆಂದು ಹೆಸರನ್ನು ಪಡೆದನು.

೭೯. ಅನೇಕ ವಿದ್ಯೆಗಳಿಗೆ ನಿಲಯನೂ, ಕಲಾಕೌಶಲ್ಯಗಳ ನಿಧಿಯೂ, ಆಗಿದ್ದ ಆತನು ಕೌಮಾರವನ್ನು ಹೊಂದುತ್ತಲೇ ಶಿವಭಕ್ತಿಯಲ್ಲಿ ನಿಷ್ಠೆಯುಳ್ಳವನಾಗಿ ಶಿವಭಕ್ತಿತತ್ಪರನಾಗಿರುತ್ತಿದ್ದನು.

೮೦. ಜ್ಞಾನೇಂದ್ರಿಯಗಳನ್ನೂ, ಕರ್ಮೇಂದ್ರಿಯಗಳನ್ನೂ, ಮನಸ್ಸನ್ನೂ ನಿಗ್ರಹಿಸಿಕೊಂಡು, "ನಿಶ್ಚಯವಾಗಿಯೂ ನಾನ ಈ ಜನ್ಮದಲ್ಲಿ ನಿತ್ಯವೂ ಏಕಪತ್ನೀವ್ರತವನ್ನೇ ಆಚರಿಸುವೆನು" ಎಂಬುದಾಗಿ ನಿಯಮವನ್ನು ಸ್ವೀಕರಿಸಿದನು.

೮೧. ಪರಸ್ತ್ರೀಸಮಾಗಮವು ಆಯುಷ್ಯವನ್ನೂ, ಯಶಸ್ಸನ್ನೂ, ಬಲವನ್ನೂ, ಸೌಖ್ಯವನ್ನೂ, ಪರದಲ್ಲಿ ಸ್ವರ್ಗಪ್ರಾಪ್ತಿಯನ್ನೂ ಅಪಹರಿಸುವುದು. ಆದುದರಿಂದ ಪ್ರಾಜ್ಞನಾದವನು ಅದನ್ನು ದೂರದಲ್ಲಿಯೇ ತ್ಯಜಿಸಬೇಕು.

೮೨. ಅಲ್ಲದೆ ಪರಿಶುದ್ಧನಾದ ಆತನು ಹಿಂದಿನ ಜನ್ಮದ ಅಭ್ಯಾಸಬಲದಿಂದ ತ್ರಿಲೋಚನೇಶ್ವರನನ್ನೇ ಆಶ್ರಯಿಸುವ ಮತ್ತೊಂದು ಮಹಾನಿಯಮವನ್ನೂ ಕೈಗೊಂಡನು.

೮೩. ಆ ತ್ರಿಲೋಚನೇಶ್ವರಲಿಂಗವು ಸಕಲ ಪುಣ್ಯಗಳ ಆಶ್ರಯವೂ, ಸಕಲ ಪುರುಷಾರ್ಥಗಳನ್ನು ಕೊಡುವುದೂ, ಸಕಲಾಭೀಷ್ಟಗಳನ್ನು ನೆರವೇರಿಸುವುದೂ, ಶಾಶ್ವತಾನಂದಕ್ಕೆ ಏಕಾಂತಸಾಧನವೂ ಆಗಿರುವುದು.

ಯಾವಚ್ಛರೀರಮರುಜಂ ಯಾವನ್ನೇಂದ್ರಿಯವಿಪ್ಲವಃ ।
ತಾವತ್ತ್ರಿಲೋಚನಂ ಕಾಶ್ಯಾಮನಭ್ಯರ್ಚ್ಯಾಶ್ನಾಮಿ ನಾಣ್ವಪಿ ॥ ೮೪ ॥
ಇತ್ಥಂ ಮಂದಾರದಾಮಃ ಸ ನಿತ್ಯಂ ಪರಿಮಳಾಲಯಃ ।
ಕಾಶ್ಯಾಂ ತ್ರಿವಿಷ್ಟಪಂ ದ್ರಷ್ಟುಂ ಸಮಾಗಚ್ಛೇತ್ಪ್ರಯತ್ನವಾನ್ ॥ ೮೫ ॥
ಪಾರಾವತ್ಯಪಿ ಸಾ ಜಾತಾ ರತ್ನದೀಪಸ್ಯ ಮಂದಿರೇ ।
ನಾಗರಾಜಸ್ಯ ಪಾತಾಲೇ ನಾಮ್ನಾ ರತ್ನಾವಳೀತಿ ಚ ॥ ೮೬ ॥
ಸಮಸ್ತನಾಗಕನ್ಯಾನಾಂ ರೂಪಶೀಲಕಲಾಗುಣೈಃ ।
ಏಕೈವ ರತ್ನಭೂತಾಸೀದ್ರತ್ನದೀಪೋರಗಾತ್ಮಜಾ ॥ ೮೭ ॥
ತಸ್ಯಾಃ ಸಖೀದ್ವಯಂ ಚಾಸೀದೇಕಾ ನಾಮ್ನಾ ಪ್ರಭಾವತೀ ।
ಕಲಾವತೀ ತಥಾನ್ಯಾ ಚ ನಿತ್ಯಂ ತದನುಗೇ ಉಭೇ ॥ ೮೮ ॥
ಸ್ವದೇಹಾದನಪಾಯಿನ್ಯೌ ಛಾಯಾಕಾಂತೀ ಯಥಾ ತಥಾ ।
ತೇ ದ್ವೇ ಸಖ್ಯಾವಭೂತಾಂ ಹಿ ರತ್ನಾವಲ್ಯಾ ಘಟೋದ್ಭವ ॥ ೮೯ ॥

---

೮೪. "ಎಲ್ಲಿಯವರೆಗೆ ಶರೀರವು ರೋಗಾಭಿಭೂತವಾಗುವುದಿಲ್ಲವೋ, ಇಂದ್ರಿಯಗಳು ಶಿಥಿಲಗಳಾಗುವುದಿಲ್ಲವೋ, ಅಲ್ಲಿಯವರೆಗೂ ಕಾಶಿಯಲ್ಲಿರುವ ತ್ರಿಲೋಚನೇಶ್ವರನಿಗೆ ಪೂಜೆಯನ್ನು ಮಾಡದೆ ಅಣುಮಾತ್ರವನ್ನೂ ಭೋಜನ ಮಾಡುವುದಿಲ್ಲ."

೮೫. ಈ ಪ್ರತಿಜ್ಞೆಗನುಸಾರವಾಗಿ ಮಂದಾರದಾಮನ ಮಗನಾದ ಪರಿಮಳಾಲಯನು ನಿತ್ಯವೂ ಪ್ರಯತ್ನಪೂರ್ವಕವಾಗಿ ಕಾಶೀಕ್ಷೇತ್ರದಲ್ಲಿರುವ ತ್ರಿಲೋಚನೇಶ್ವರನ ದರ್ಶನಕ್ಕಾಗಿ ಬರುತ್ತಿದ್ದನು.

೮೬. ಆ ಹೆಣ್ಣು ಪಾರಿವಾಳವೂ ಪಾತಾಳಲೋಕದಲ್ಲಿ ನಾಗರ ಅಧೀಶ್ವರನಾದ ರತ್ನದೀಪನೆಂಬುವನ ಮನೆಯಲ್ಲಿ ರತ್ನಾವಳಿಯೆಂಬ ಹೆಸರನ್ನು ಪಡೆದು ಆತನಿಗೆ ಮಗಳಾಗಿ ಹುಟ್ಟಿದಳು.

೮೭. ರತ್ನದೀಪನಾಗೇಂದ್ರನ ಮಗಳು ಸಕಲ ನಾಗಕನ್ಯೆಯರಲ್ಲಿಯೂ ಸೌಂದರ್ಯ, ಸೌಶೀಲ್ಯ, ಕಲಾಪ್ರೌಢಿಮೆಗಳೆಂಬ ಸದ್ಗುಣಗಳಿಂದ ಅಸದೃಶಳಾಗಿ ರತ್ನಪ್ರಾಯಳೆನಿಸಿ ಪ್ರಖ್ಯಾತಳಾಗಿದ್ದಳು.

೮೮. ಆಕೆಗೆ ಇಬ್ಬರು ಸಖಿಯರಿದ್ದರು. ಒಬ್ಬಳ ಹೆಸರು ಪ್ರಭಾವತಿ. ಮತ್ತೊಬ್ಬಳು ಕಲಾವತಿಯೆಂದು ಕರೆಯಲ್ಪಡುತ್ತಿದ್ದಳು. ಇಬ್ಬರೂ ಆಕೆಯನ್ನು ನಿತ್ಯವೂ ಎಡಬಿಡದಿರುತ್ತಿದ್ದರು.

೮೯. ಅಗಸ್ತ್ಯಮುನಿಯೆ! ನೆರಳು, ಕಾಂತಿಗಳೆರಡು ಹೇಗೆ ಯಾರ ದೇಹವನ್ನೂ ಬಿಟ್ಟಿರುವುದಿಲ್ಲವೋ, ಹಾಗೆಯೇ ಆ ಇಬ್ಬರು ಸಖಿಯರೂ ರತ್ನಾವಳಿಯನ್ನು ಕ್ಷಣಮಾತ್ರವೂ ಅಗಲುತ್ತಿರಲಿಲ್ಲ.

ಸಾ ತು ಬಾಲ್ಯೇ ವ್ಯತಿಕ್ರಾಂತೇ ಕಿಂಚಿದುದ್ಭಿನ್ನಯೌವನಾ ।
ಶಿವಭಕ್ತಂ ಸ್ವಪಿತರಂ ದೃಷ್ಟ್ವಾ ನಿಯಮಮಬ್ರವೀತ್ ॥ ೯೦ ॥
ಪಿತಸ್ತ್ರಿಲೋಚನಂ ಕಾಶ್ಯಾಮರ್ಚಯಿತ್ವಾ ದಿನೇ ದಿನೇ ।
ಆಭ್ಯಾಂ ಸಖೀಭ್ಯಾಂ ಸಹಿತಾ ಮೌನಂ ತ್ಯಕ್ಷ್ಯಾಮಿ ನಾನ್ಯಥಾ ॥ ೯೧ ॥
ಏವಂ ನಾಗಕುಮಾರೀ ಸಾ ಸಖೀದ್ವಯಸಮನ್ವಿತಾ ।
ತ್ರಿಲೋಚನಂ ಸಮಭ್ಯರ್ಚ್ಯ ಗೃಹಾನಹರಹೋ ವ್ರಜೇತ್ ॥ ೯೨ ॥
ದಿನೇ ದಿನೇ ಸಾ ಪ್ರತ್ಯಗ್ರೈಃ ಕುಸುಮೈರಿಷ್ಟಗಂಧಿಭಿಃ ।
ಸುವಿಚಿತ್ರಾಣಿ ಮಾಲ್ಯಾನಿ ಪರಿಗುಂಫ್ಯಾರ್ಚಯೇದ್ವಿಭುಂ ॥ ೯೩ ॥
ತಿಸ್ರೋಽಪಿ ಗೀತಂ ಗಾಯಂತಿ ಲಸದ್ಗಾಂಧಾರಸುಂದರಂ ।
ರಾಸಮಂಡಲಭೇದೇನ ಲಾಸ್ಯಂ ತಿಸ್ರೋಽಪಿ ಕುರ್ವತೇ ॥ ೯೪ ॥
ವೀಣಾವೇಣುಮೃದಂಗಾಂಶ್ಚ ಲಯತಾಲವಿಚಕ್ಷಣಾಃ ।
ವಾದಯಂತಿ ಮುದಾ ಯುಕ್ತಾಸ್ತಿಸ್ರೋಽಪೀಶ್ವರಸನ್ನಿಧೌ ॥ ೯೫ ॥

---

೯೦. ಅವಳೂ ಬಾಲ್ಯಾವಸ್ಥೆಯು ಕಳೆದು ಯೌವನವು ಸ್ವಲ್ಪ ಸ್ವಲ್ಪವಾಗಿ ತಲೆದೋರುತ್ತಿರಲು ಶಿವಭಕ್ತಿತತ್ಪರನಾದ ತನ್ನ ತಂದೆಯನ್ನು ನೋಡಿ ತಾನೂ ನಿಯಮವನ್ನು ಸ್ವೀಕರಿಸಿದಳು.

೯೧. "ತಂದೆಯೆ! ಪ್ರತಿದಿನದಲ್ಲಿಯೂ ಮೌನದಿಂದಿದ್ದು ಈ ನನ್ನ ಸಖಿಯರೀರ್ವರೊಡನೆ ಕಾಶಿಗೆಹೋಗಿ ತ್ರಿಲೋಚನೇಶ್ವರನ ಪೂಜೆಯನ್ನುಮಾಡಿ ಮೌನವನ್ನು ಬಿಡುವೆನು. ಇದಕ್ಕೆ ತಪ್ಪಿ ನಡೆಯುವುದಿಲ್ಲ."

೯೨. ಇಂತೆಂದು ಪ್ರತಿ ಪ್ರಾತಃಕಾಲದಲ್ಲಿಯೂ ಆ ನಾಗಕನ್ಯಕೆಯು ತನ್ನ ಸಖಿಯರೊಡನೆ ಕಾಶಿಯಲ್ಲಿ ತ್ರಿಲೋಚನೇಶ್ವರನ ಪೂಜೆಯನ್ನುಮಾಡಿ ಮನೆಗೆ ಹಿಂದಿರುಗುತ್ತಿದ್ದಳು.

೯೩. ದಿನದಿನದಲ್ಲಿಯೂ ಆಕೆಯು ಸುವಾಸನಾವಿಶಿಷ್ಟಗಳಾದ ಅರಳಿದ ಪುಷ್ಪಗಳಿಂದ ವಿಚಿತ್ರಾಕಾರಗಳುಳ್ಳ ಹಾರಗಳನ್ನು ಕಟ್ಟಿ ಅವುಗಳನ್ನು ತ್ರಿಲೋಚನೇಶ್ವರನಿಗೆ ಅರ್ಪಿಸಿ ಪೂಜಿಸುತ್ತಿದ್ದಳು.

೯೪. ಮೂವರು ಸಖಿಯರೂ ಉತ್ತಮವಾದ ಗಾಂಧಾರರಾಗದಿಂದ ಮನೋಹರಗೀತವನ್ನು ಗಾನಮಾಡುತ್ತಿದ್ದರು. ಮೂವರೂ ರಾಸಕ್ರೀಡೆಯೆಂಬ ಭೇದವನ್ನನುಸರಿಸಿ ಮಂಡಲಾಕಾರವಾಗಿ ನೃತ್ಯವನ್ನು ಮಾಡುತ್ತಿದ್ದರು.

೯೫. ಅಲ್ಲದೆ ಮೂವರೂ ಲಯ ಮತ್ತು ತಾಳಗಳಲ್ಲಿ ಪಾರಂಗತರಾಗಿದ್ದು ಆನಂದಪರವಶರಾಗಿ ಮಹೇಶ್ವರನ ಸನ್ನಿಧಿಯಲ್ಲಿ ವೀಣೆ, ಕೊಳಲು, ಮೃದಂಗಗಳೇ ಮೊದಲಾದ ವಾದ್ಯಗಳನ್ನೂ ಬಾಜಿಸುತ್ತಿದ್ದರು.

ಇತ್ಥಮಾರಾಧಯಂತೀಶಂ ತಿಸ್ರೋ ನಾಗಕುಮಾರಿಕಾಃ ।
ವಿಚಿತ್ರಗಂಧಮಾಲ್ಯಾಭಿಃ ಸಂಮಾರ್ಜನವಿಲೇಪನೈಃ ॥ ೯೬ ॥
ಏಕದಾ ಮಾಧವೇ ಮಾಸಿ ತೃತೀಯಾಯಾಮುಪೋಷಿತಾಃ ।
ರಾತ್ರೌ ಜಾಗರಣಂ ಕೃತ್ವಾ ನೃತ್ಯಗೀತಕಥಾದಿಭಿಃ ॥ ೯೭ ॥
ಪ್ರಾತಶ್ಚತುರ್ಥೀಂ ಸ್ನಾತ್ವಾಥ ತೀರ್ಥೇ ಪೈಲಿಪಿಲೇ ಶುಭೇ ।
ತ್ರಿಲೋಚನಂ ಸಮರ್ಚ್ಯಾಥ ಪ್ರಸುಪ್ತಾ ರಂಗಮಂಡಪೇ ॥ ೯೮ ॥
ಸುಪ್ತಾಸು ತಾಸು ಬಾಲಾಸು ತ್ರಿನೇತ್ರಃ ಶಶಿಭೂಷಣಃ ।
ಶುದ್ಧಕರ್ಪೂರಗೌರಾಂಗೋ ಜಟಾಮುಕುಟಮಂಡಲಃ ॥ ೯೯ ॥
ತಮಾಲನೀಲಸುಗ್ರೀವಃ ಸ್ಫುರತ್ಫಣಿವಿಭೂಷಣಃ ।
ವಾಮಾರ್ಧವಿಲಸಚ್ಛಕ್ತಿರ್ನಾಗಯಜ್ಞೋಪವೀತವಾನ್ ॥ ೧೦೦ ॥
ತಸ್ಮಾದೇವ ವಿನಿಷ್ಕ್ರಮ್ಯ ಲಿಂಗಾತ್ಪನ್ನಗಮೇಖಲಾತ್ ।
ಉವಾಚ ಚ ತತೋ ಬಾಲಾ ವಿಭುರುತ್ತಿಷ್ಠತೇತಿ ಸಃ ॥ ೧೦೧ ॥

---

೯೬. ಈ ವಿಧವಾಗಿ ಆ ಮೂವರು ನಾಗಕುಮಾರಿಯರೂ ವಿಚಿತ್ರಗಳಾದ ಸುಗಂಧ ವಿಶಿಷ್ಟಗಳಾದ ಪುಷ್ಪಮಾಲೆಗಳಿಂದಲೂ, ಸಾರಣೆಕಾರಣೆಗಳಿಂದಲೂ, ಗಂಧಾದಿ ಲೇಪನೆಗಳಿಂದಲೂ ತ್ರಿಲೋಚನೇಶ್ವರನನ್ನು ಪೂಜಿಸುತ್ತಿದ್ದರು.

೯೭. ಒಮ್ಮೆ ವೈಶಾಖಮಾಸವು ಬರಲು ಶುಕ್ಲತೃತೀಯೆಯ ದಿನದಲ್ಲಿ ಅವರೆಲ್ಲರೂ ಹಗಲು ಉಪವಾಸವನ್ನುಮಾಡಿ ರಾತ್ರಿಯಲ್ಲಿ ನೃತ್ಯದಿಂದಲೂ, ಸಂಗೀತದಿಂದಲೂ, ಕಥಾಶ್ರವಣದಿಂದಲೂ ಜಾಗರಣೆಯನ್ನುಮಾಡಿದರು.

೯೮. ಮಾರನೆಯ ಚತುರ್ಥಿಯ ದಿನದ ಪ್ರಾತಃಕಾಲದಲ್ಲಿ ಪವಿತ್ರವಾದ ಪಿಲಿಪಿಲಾತೀರ್ಥದಲ್ಲಿ ಸ್ನಾನಗಳನ್ನುಮಾಡಿ ತ್ರಿಲೋಚನೇಶ್ವರನನ್ನು ಪೂಜಿಸಿ ಆಯಾಸದಿಂದ ಆ ರಂಗಮಂಟಪದಲ್ಲಿಯೇ ನಿದ್ರಿಸುತ್ತಿದ್ದರು.

೯೯–೧೦೧. ಆ ಬಾಲಿಕೆಯರು ನಿದ್ರಿಸುತ್ತಿದ್ದಂತೆಯೇ ತ್ರಿಲೋಚನೇಶ್ವರನು ಚಂದ್ರಾರ್ಧಶೇಖರನಾಗಿಯೂ, ಶುದ್ಧವಾದ ಕರ್ಪೂರದಂತೆ ಶ್ವೇತವರ್ಣದ ದೇಹವುಳ್ಳವನಾಗಿಯೂ, ತಲೆಯ ಮೇಲೆ ಜಡೆಗಳ ಕಿರೀಟವನ್ನು ಧರಿಸಿದವನಾಗಿಯೂ, ತಮಾಲವೃಕ್ಷಗಳ ನೆರಳಿನಂತೆ ನೀಲವಾದ ಕಂಠದಿಂದೊಪ್ಪುವವನಾಗಿಯೂ, ಫಣಾರತ್ನಗಳಿಂದ ಹೊಳೆಯುತ್ತಿರುವ ಸರ್ಪಗಳನ್ನೇ ಭೂಷಣಗಳಾಗಿ ತಳೆದಿರುವವನಾಗಿಯೂ, ಎಡಗಡೆಯ ಅರ್ಧದೇಹದಲ್ಲಿ ಶಕ್ತಿರೂಪಿಣಿಯಾದ ಪಾರ್ವತಿಯನ್ನುಕೂಡಿಸಿಕೊಂಡಿರುವವನಾಗಿಯೂ, ನಾಗಯಜ್ಞೋಪವೀತವನ್ನು ಧರಿಸಿರುವವನಾಗಿಯೂ ಆಗಿ ಹಾವಿನ ಒಡ್ಯಾಣವುಳ್ಳ ಆ ಲಿಂಗದಿಂದಲೇ ಹೊರ ಬಂದು ಅವರನ್ನು ಕುರಿತು, “ಎಲೌ ಬಾಲಿಕೆಯರಿರಾ! ಎಚ್ಚತ್ತುಕೊಳ್ಳಿರಿ” ಎಂಬುದಾಗಿ ಹೇಳಿದನು.

ಉತ್ಥಾಯ ತಾ ವಿನಿರ್ಮಾರ್ಜ್ಯ ಲೋಚನೇ ಶ್ರುತಿಸಂಗತೇ ।
ಅಂಗಮೋಟನವತ್ಯಶ್ಚ ಜೃಂಭಾಭಿಃ ಕ್ವಣಿತಾನನಾಃ ॥ ೧೦೨ ॥
ಯಾವತ್ಪಶ್ಯಂತಿ ಪುರತಃ ಸಂಭ್ರಮಾಪನ್ನಮಾನಸಾಃ ।
ಅತರ್ಕಿತಾಗಮಸ್ತಾವತ್ತಾಭಿರ್ದೃಷ್ಟಸ್ತ್ರಿಲೋಚನಃ ॥ ೧೦೩ ॥
ವವಂದುರಥ ತಾ ಬಾಲಾ ಜ್ಞಾತ್ವಾ ಲಕ್ಷ್ಮಭಿರೀಶ್ವರಂ ।
ತುಷ್ಟುವುಶ್ಚ ಪ್ರಹೃಷ್ಟಾಸ್ಯಾಃ ಸನ್ನಕಂಠ್ಯೋಽತಿಗದ್ಗದಂ ॥ ೧೦೪ ॥
ಜಯ ಶಂಭೋ ಜಯೇಶಾನ ಜಯ ಸರ್ವಗ ಸರ್ವದ ।
ಜಯ ತ್ರಿಪುರಸಂಹರ್ತರ್ಜಯಾಂಧಕನಿಷೂದನ ॥ ೧೦೫ ॥
ಜಯ ಜಾಲಂಧರಹರ ಜಯ ಕಂದರ್ಪದರ್ಪಹೃತ್ ।
ಜಯ ತ್ರೈಲೋಕ್ಯಜನಕ ಜಯ ತ್ರೈಲೋಕ್ಯವರ್ಧನ ॥ ೧೦೬ ॥
ಜಯ ತ್ರೈಲೋಕ್ಯನಿಲಯ ಜಯ ತ್ರೈಲೋಕ್ಯವಂದಿತ ।
ಜಯ ಭಕ್ತಜನಾಧೀನ ಜಯ ಪ್ರಮಥನಾಯಕ ॥ ೧೦೭ ॥

---

೧೦೨. ಅವರೂ ಆ ಮಾತುಗಳಿಂದೆಚ್ಚತ್ತು ಆಕರ್ಣಾಂತಗಳಾದ ಕಣ್ಣುಗಳನ್ನುಜ್ಜಿಕೊಳ್ಳುತ್ತ, ಮೈಮುರಿಯುತ್ತ ಮುಖಗಳಿಂದ ಆಕಳಿಕೆಯ ಶಬ್ದಗಳನ್ನುಮಾಡುತ್ತ ಎದ್ದು ಕುಳಿತುಕೊಂಡರು.

೧೦೩. ತಮ್ಮನ್ನು ಎಬ್ಬಿಸಿದವರು ಯಾರೆಂದು ಸಂಭ್ರಮಾಸ್ವಿತವಾದ ಮನಸ್ಸಿನಿಂದ ಕೂಡಿದವರಾಗಿ ಮುಂದೆ ನೋಡುತ್ತಿರುವಂತೆಯೇ ಅನಿರೀಕ್ಷಿತವಾಗಿ ಪ್ರಸನ್ನನಾಗಿದ್ದ ತ್ರಿಲೋಚನೇಶ್ವರನು ಅವರಿಗೆ ಕಾಣಿಸಿದನು.

೧೦೪. ಚಿಹ್ನಗಳಿಂದ ಆತನೇ ಮಹೇಶ್ವರನೆಂಬುದನ್ನು ತಿಳಿದು ಆ ಬಾಲೆಯರು ನಮಸ್ಕಾರಗಳನ್ನುಮಾಡಿದರು. ಮುಖಗಳಲ್ಲಿ ಹರ್ಷವನ್ನು ವ್ಯಕ್ತಗೊಳಿಸುತ್ತಿದ್ದರೂ ಗದ್ಗದಿತವಾದ ಕ್ಷೀಣಸ್ವರದಿಂದಲೇ ಆತನನ್ನು ಸ್ತೋತ್ರಮಾಡಿದರು.

೧೦೫. "ಶಂಭುವೆ! ಮಹೇಶ್ವರನೆ! ಸರ್ವವ್ಯಾಪಿಯೆ! ಸರ್ವಪ್ರದನೆ! ತ್ರಿಪುರಸಂಹಾರಕನೆ! ಅಂಧಕಾಸುರನನ್ನು ನಿಗ್ರಹಿಸಿದವನೆ! ನಿನಗೆ ಜಯವಾಗಲಿ.

೧೦೬. ಜಾಲಂಧರನನ್ನು ನಾಶಮಾಡಿದವನೂ, ಕಂದರ್ಪನ ದರ್ಪವನ್ನಪಹರಿಸಿದವನೂ, ಮೂರು ಲೋಕಗಳಿಗೆ ಕಾರಣನೂ, ಮೂರುಲೋಕಗಳಿಗೂ ಅಭಿವೃದ್ಧಿಯನ್ನುಂಟುಮಾಡುವವನೂ ಆದ ನಿನಗೆ ಜಯವಾಗಲಿ.

೧೦೭. ಮೂರು ಲೋಕಗಳಲ್ಲಿಯೂ ವಾಸಮಾಡುವವನಾಗಿ, ತ್ರಿಲೋಕನಿವಾಸಿಗಳಿಂದ ವಂದಿತನಾಗಿ, ಭಕ್ತಜನರಿಗೆ ಅಧೀನನೆನಿಸಿ ಪ್ರಮಥಗಣಗಳಿಗೆಲ್ಲ ಸ್ವಾಮಿಯಾಗಿರುವ ನಿನಗೆ ಜಯವಾಗಲಿ.

ಜಯ ತ್ರಿಪಥಗಾನಾಥಃ ಪ್ರಕ್ಷಾಲಿತಜಟಾತಟ ।
ಜಯ ಚಂದ್ರಕಲಾಜ್ಯೋತಿರ್ವಿದ್ಯೋತಿತಜಗತ್ತ್ರಯ ॥ ೧೦೮ ॥
ಜಯ ಸರ್ಪಫಣಾರತ್ನಪ್ರಭಾಭಾಸಿತವಿಗ್ರಹ ।
ಜಯಾದ್ರಿರಾಜತನಯಾತಪಃಕ್ರೀತಾರ್ಧದೇಹಕ ॥ ೧೦೯ ॥
ಜಯ ಶ್ಮಶಾನನಿಲಯ ಜಯ ವಾರಾಣಸೀಪ್ರಿಯ ।
ಜಯಾನಂದವನಾಧ್ಯಾಸಿಪ್ರಾಣಿನಿರ್ವಾಣದಾಯಕ ॥ ೧೧೦ ॥
ಜಯ ವಿಶ್ವಪತೇ ಶರ್ವ ಶರ್ವರೀಪರಿವರ್ಜಿತ ।
ಜಯ ನೃತ್ಯಪ್ರಿಯೇಶೋಗ್ರ ಜಯ ಗೀತವಿಶಾರದ ॥ ೧೧೧ ॥
ಜಯ ಪ್ರಣವ ಸದ್ವಾಸ ಜಯ ಧಾಮ ಮಹಾನಿಧೇ ।
ಜಯ ಶೂಲಿನ್ತ್ರಿರೂಪಾಕ್ಷ ಜಯ ಪ್ರಣತಸರ್ವದ ॥ ೧೧೨ ॥
ವಿಧಿಃ ಸರ್ವವಿಧಿಜ್ಞೋಽಪಿ ನತ್ವಾಂ ಸ್ತೋತುಂ ವಿಚಕ್ಷಣಃ ।
ವಾಚೋ ವಾಚಸ್ಪತೇರ್ನಾಥ ತ್ವತ್ಸ್ತುತೌ ಪರಿಕುಂಠಿತಾಃ ॥ ೧೧೩ ॥

೧೦೮. ಅಂಗಾಂಗಗಳಲ್ಲಿ ಆಭರಣಗಳಾಗಿ ಶೋಭಿಸುತ್ತಿರುವ ಸರ್ಪಗಳ ಹೆಡೆಗಳಲ್ಲಿರುವ ರತ್ನಗಳ ಕಾಂತಿಯಿಂದ ಬೆಳಗುತ್ತಿರುವ ದೇಹವುಳ್ಳವನೂ, ಪರ್ವತೇಶ್ವರನ ಮಗಳಾದ ಪಾರ್ವತಿಯ ತಪಸ್ಸಿನಿಂದ ಕೊಳ್ಳಲ್ಪಟ್ಟ ಅರ್ಧದೇಹವುಳ್ಳವನೂ ಆದ ನಿನಗೆ ಜಯವು.

೧೦೯. ಗಂಗಾನದಿಯ ಜಲಕಣಗಳಿಂದ ಶುದ್ಧಿಗೊಳಿಸಲ್ಪಟ್ಟ ಜಟಾಜೂಟವುಳ್ಳವನೂ, ಮೌಳಿಯಲ್ಲಿರುವ ಅಷ್ಟಮೀಚಂದ್ರನ ಬೆಳದಿಂಗಳಿನಿಂದ ಮೂರು ಲೋಕಗಳನ್ನು ಬೆಳಗಿಸುತ್ತಿರುವವನೂ ಆದ ನಿನಗೆ ಮಂಗಳವಾಗಲಿ.

೧೧೦. ಶ್ಮಶಾನಗಳಲ್ಲಿಯೇ ವಾಸಮಾಡುವವನೂ, ವಾರಾಣಸೀಕ್ಷೇತ್ರದಲ್ಲಿ ಅಭಿಮಾನವುಳ್ಳವನೂ, ಆನಂದವನವನ್ನು ಸೇವಿಸುವ ಸಕಲ ಪ್ರಾಣಿಗಳಿಗೂ ಮೋಕ್ಷವನ್ನು ಅನುಗ್ರಹಿಸುವವನೂ ಆದ ನಿನಗೆ ಜಯವಾಗಲಿ.

೧೧೧. ಲೋಕೇಶ್ವರನೂ, ಶರ್ವನೂ, ಅಜ್ಞಾನರೂಪವಾದ ತಮಸ್ಸಿಗೆ ಮಾರಕನಾದವನೂ, ನರ್ತನಪ್ರಿಯನೂ, ಮಹೇಶ್ವರನೂ, ಉಗ್ರನೂ, ಸಂಗೀತಶಾಸ್ತ್ರವಿಶಾರದನೂ ಆದ ನಿನಗೆ ಜಯವಿರಲಿ.

೧೧೨. ಓಂಕಾರಸ್ವರೂಪನೂ, ಸತ್ಪುರುಷರ ಪಿಕಾಶ್ರಯನೂ, ಸಕಲತೇಜಸ್ಸುಗಳಿಗೂ ನಿಧಿಯಂತಿರುವವನೂ, ಶೂಲಾಯುಧವನ್ನು ಹಿಡಿದಿರುವವನೂ, ತ್ರಿನೇತ್ರನೂ, ಭಕ್ತರ ಸರ್ವಾಭೀಷ್ಟಗಳನ್ನು ನೆರವೇರಿಸುವವನೂ ಆದ ನಿನಗೆ ಜಯವಾಗಲಿ.

೧೧೩. ಬ್ರಹ್ಮದೇವನು ಸಕಲ ಶಾಸ್ತ್ರಗಳನ್ನು ತಿಳಿದವನಾದರೂ ನಿನ್ನನ್ನು ಸ್ತೋತ್ರಮಾಡಲು ಶಕ್ತನಾಗಿರುವುದಿಲ್ಲ. ಸ್ವಾಮಿಯೆ! ನಿನ್ನ ಸ್ತೋತ್ರದ ವಿಷಯದಲ್ಲಿ ಬೃಹಸ್ಪತಿಯೂ ಮಾತುಗಳೂ ಕುಂಠಿತಗಳಾಗುವುವು.

ವಿದಂತಿ ವೇದಾಃ ಸರ್ವಜ್ಞ ನ ತ್ವಾಂ ನಾಥ ಯಥಾರ್ಥತಃ ।
ಮನತೀಹ ಮನೋ ಸ ತ್ವಾಮನಂತಂ ಚಾದಿವರ್ಜಿತಂ ॥ ೧೧೪ ॥
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋ ನಮಃ ।
ತ್ರಿಲೋಚನ ನಮಸ್ತುಭ್ಯಂ ತ್ರಿವಿಷ್ಟಪ ನಮೋಸ್ತುತೇ ॥ ೧೧೫ ॥
ಇತ್ಯುಕ್ತ್ವಾ ದಂಡವದ್ಭೂಮೌ ಪ್ರಣಿಪೇತುಃ ಕುಮಾರಿಕಾಃ ।
ಅಥೋತ್ಥಾಪ್ಯ ಕುಮಾರೀಸ್ತಾಃ ಪ್ರೋವಾಚ ಶಶಿಭೂಷಣಃ ॥ ೧೧೬ ॥
ಸುತೋ ಮಂದಾರದಾಮ್ನಶ್ಚ ನಾಮ್ನಾ ಪರಿಮಳಾಲಯಃ ।
ಪತಿರ್ವಿದ್ಯಾಧರವರೋ ಭವತೀನಾಂ ಭವಿಷ್ಯತಿ ॥ ೧೧೭ ॥
ಚಿರಂ ವಿದ್ಯಾಧರೇ ಲೋಕೇ ಭೋಗಾನ್ಭುಕ್ತ್ವಾ ಸಮಂತತಃ ।
ತತೋ ನಿರ್ವೇದಮಾಪನ್ನಾಃ ಕಾಶೀಸಿದ್ಧಿಮವಾಪ್ಸ್ಯಥ ॥ ೧೧೮ ॥
ಯೂಯಂ ತಿಸ್ರೋಽಪಿ ಮೇ ಭಕ್ತಾಃ ಸ ಚ ವಿದ್ಯಾಧರೋ ಯುವಾ ।
ಚತ್ವಾರೋಽಪ್ಯೇತ ಏವಾತ್ರ ಪ್ರಾಂತೇ ಮೋಕ್ಷಮವಾಪ್ಸ್ಯಥ ॥ ೧೧೯ ॥

---

೧೧೪. ಸರ್ವಜ್ಞನಾದ ನಾಥನೆ! ನಿನ್ನನ್ನು ವೇದಗಳೂ ಸಹ ಯಥಾರ್ಥವಾಗಿ ತಿಳಿಯಲಾರವು. ಅಂತ್ಯವರ್ಜಿತನೂ ಆದಿರಹಿತನೂ ಆದ ನಿನ್ನನ್ನು ನಮ್ಮ ಮನಸ್ಸೂ ವಿಷಯೀಕರಿಸಿಕೊಳ್ಳಲಾರದು.

೧೧೫. ನಿನಗೆ ನಮಸ್ಕಾರವು. ನಿನಗೆ ಪ್ರಣಾಮವನ್ನು ಮಾಡುವೆವು. ನಿನಗೆ ನಮೋನಮಃ!! ತ್ರಿಲೋಚನೇಶ್ವರನೆ, ನಿನ್ನನ್ನು ನಮಸ್ಕರಿಸುವೆವು. ತ್ರಿವಿಷ್ಟಪನಾದ ನಿನಗೆ ನಮಸ್ಕಾರವು.''

೧೧೬. ಇಂತೆಂದು ಸ್ತುತಿಸುತ್ತ ಆ ಮೂವರು ನಾಗಕನ್ಯೆಯರೂ ಭೂಮಿಯಲ್ಲಿ ಬಿದ್ದು ಪ್ರಣಾಮಗಳನ್ನು ಮಾಡಿದರು. ಆಗ ಚಂದ್ರಶೇಖರನಾದ ಆ ತ್ರಿಲೋಚನೇಶ್ವರನು ಅವರನ್ನು ಮೇಲಕ್ಕೆತ್ತಿ ಹೇಳತೊಡಗಿದನು.

೧೧೭. ಎಲೌ ಕುಮಾರಿಯರಿರಾ! ಮಂದಾರದಾಮನ ಪುತ್ರನೂ, ಪರಿಮಳಾಲಯನೆಂಬ ಹೆಸರಿನವನೂ ಆದ ಉತ್ತಮ ವಿದ್ಯಾಧರನೊಬ್ಬನಿರುವನು. ಆತನೇ ನಿಮ್ಮೆಲ್ಲರಿಗೂ ಗಂಡನಾಗುವನು.

೧೧೮. ನೀವೆಲ್ಲರೂ ಆತನೊಡನೆ ಬಹುಕಾಲದವರೆಗೂ ಸಕಲವಿಧಗಳಾದ ಭೋಗಗಳನ್ನನುಭವಿಸುತ್ತ ಯಥಾಕಾಲದಲ್ಲಿ ವೈರಾಗ್ಯವನ್ನು ಪಡೆದು ಕಾಶೀಕ್ಷೇತ್ರವಾಸದ ಫಲವಾದ ಮೋಕ್ಷವನ್ನು ಹೊಂದುವಿರಿ.

೧೧೯. ನೀವು ಮೂವರೂ ನನ್ನ ಪರಮ ಭಕ್ತರಾಗಿರುವಿರಿ. ಆ ವಿದ್ಯಾಧರನೂ ಸಹ ಯೌವನವಂತನಾಗಿರುವನು. ನೀವು ನಾಲ್ವರೂ ಜೀವಿತಾವಸಾನದಲ್ಲಿ ಇಲ್ಲಿಯೇ ಒಟ್ಟಿಗೆ ಮೋಕ್ಷವನ್ನು ಪಡೆಯುವಿರಿ.

ಜನ್ಮಾಂತರೇಽಪಿ ಮೇ ಸೇವಾ ಭವತೀಭಿಶ್ಚ ತೇನ ಚ ।
ವಿಹಿತಾ ತೇನ ವೋ ಜನ್ಮ ನಿರ್ಮಲಂ ಭಕ್ತಿಭಾವಿತಂ ॥ ೧೨೦ ॥
ಏತಚ್ಚ ಭವತೀಸ್ತೋತ್ರಂ ಯಃ ಪಠಿಷ್ಯತಿ ಮೇ ಪುರಃ ।
ತಸ್ಯ ಕಾಮಂ ಪ್ರದಾಸ್ಯಾಮಿ ಭವತೀನಾಮಿವ ಸ್ಫುಟಂ ॥ ೧೨೧ ॥
ತ್ಯಜೇತ್ಕ್ಷಪಾಕೃತಂ ಪಾಪಂ ಶುಚಿಃ ಪ್ರಾತಃ ಪಠನ್ನರಃ ।
ದಿವಾಕೃತಮಲಂ ಹಂತಿ ಸಾಯಂ ಪಠನತಃ ಸ್ಫುಟಂ ॥ ೧೨೨ ॥
ಇತ್ಯುಕ್ತವತಿ ದೇವೇಶೇ ತಾಃ ಕನ್ಯಾಃ ಹೃಷ್ಟಮಾನಸಾಃ ।
ಪ್ರಣಮ್ಯ ಪ್ರೋಚುರೀಶಾನಂ ಪ್ರಬದ್ಧಕರಸಂಪುಟಾಃ ॥ ೧೨೩ ॥
ನಾಗಕನ್ಯಾ ಊಚುಃ :—
ಪೃಚ್ಛಾಮೋ ಬ್ರೂಹಿ ನೋ ನಾಥ ಕರುಣಾಕರ ಶಂಕರ ।
ಜನ್ಮಾಂತರೇ ಕಥಂ ಸೇವಾ ಚತುರ್ಭಿರ್ಭವತಃ ಕೃತಾ ॥ ೧೨೪ ॥
ಭವ ಪ್ರಾಗ್ಭವವೃತ್ತಾಂತಂ ತಸ್ಯಾಪಿ ಸುಕೃತಾತ್ಮನಃ ।
ಅಸ್ಮಾಕಮಪಿ ಚಾಖ್ಯಾಹಿ ಕೃಪಾಂ ಕುರು ಕೃಪಾನಿಧೇ ॥ ೧೨೫ ॥

---

೧೨೦. ನಿಮ್ಮಿಂದಲೂ, ಆತನಿಂದಲೂ ಹಿಂದಿನ ಜನ್ಮದಲ್ಲಿ ನನ್ನ ಸೇವೆಯು ಮಾಡಲ್ಪಟ್ಟಿರುವುದು. ಅದರ ಫಲವಾಗಿಯೇ ನಿಮ್ಮ ಈ ಜನ್ಮವು ಪರಿಶುದ್ಧವೂ ಮಹೇಶ್ವರನಾದ ನನ್ನಲ್ಲಿ ಭಕ್ತಿಯಿಂದ ಕೂಡಿದುದೂ ಆಗಿರುವುದು.

೧೨೧. ನೀವು ಮಾಡಿರುವ ಈ ಮಹಾಸ್ತೋತ್ರವನ್ನು ಯಾವನು ನನ್ನ ಮುಂದೆ ಪಠನಮಾಡುವನೊ, ಅವನಿಗೂ ನಿಮಗೆ ಎಂತೋ ಅಂತೆಯೇ ಸಕಲ ಇಷ್ಟಾರ್ಥಗಳನ್ನೂ ಕೈಗೂಡಿಸುವೆನು. ಇದು ನಿಶ್ಚಯವು.

೧೨೨. ಶುಚಿರ್ಭೂತನಾಗಿ ಪ್ರಾತಃಕಾಲದಲ್ಲಿ ಇದರ ಪಠನವನ್ನು ಮಾಡಲು ಮನುಷ್ಯನು ರಾತ್ರಿಯಲ್ಲಿ ಮಾಡಿದ ಪಾಪಗಳನ್ನು ಕಳೆದುಕೊಳ್ಳುವನು. ಸಾಯಂಕಾಲದ ಪಾಠದಿಂದ ಈ ಸ್ತೋತ್ರವು ಹಗಲಿನಲ್ಲಿ ಮಾಡಿದ ಪಾತಕಗಳೆಲ್ಲವನ್ನೂ ನಾಶಗೊಳಿಸುವುದು.''

೧೨೩. ಇಂತೆಂದು ಮಹಾದೇವನು ಹೇಳುತ್ತಿರಲು ಆ ಕನ್ಯೆಯರೆಲ್ಲರೂ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ಪುನಃ ಪ್ರಣಾಮವನ್ನು ಮಾಡಿ ಕೈಗಳನ್ನು ಮುಗಿದುಕೊಂಡು ಹೇಳತೊಡಗಿದರು.

೧೨೪. ನಾಗಕನ್ಯೆಯರು ಹೇಳುತ್ತಾರೆ :—ಸ್ವಾಮಿಯೆ ! ಕರುಣಾಸಾಗರನೆ ! ಶಂಕರನೆ ! ನಾವು ಕೇಳುವುದನ್ನು ಲಾಲಿಸಿ ಉತ್ತರವನ್ನು ಅನುಗ್ರಹಿಸು. ನಾವು ನಾಲ್ವರೂ ಹಿಂದಿನ ಜನ್ಮಗಳಲ್ಲಿ ನಿನ್ನ ಸೇವೆಯನ್ನು ಯಾವ ಪ್ರಕಾರದಿಂದ ಮಾಡಿರುವೆವು ?

೧೨೫. ಕೃಪಾನಿಧಿಯಾದ ಭವನೆ ! ಪುಣ್ಯಾತ್ಮನಾದ ಆತನ ಮತ್ತು ನಮ್ಮ

ಇತಿ ಶ್ರುತ್ವಾ ಪ್ರಣಯತೋ ಬಾಲೋದೀರಿತಮೀಶಿತಾ ।
ಪ್ರೋವಾಚ ತಾಸಾಂ ತಸ್ಯಾಪಿ ಭವಾಂತರವಿಚೇಷ್ಟಿತಂ ॥ ೧೨೬ ॥
ಈಶ್ವರ ಉವಾಚ :—
ಶೃಣುಧ್ವಂ ನಾಗತನಯಾಸ್ತಿಸ್ರೋಽಪಿ ಹಿ ಸಮಾಹಿತಾಃ ।
ಪ್ರಾಗ್ಭವಂ ಭವತೀನಾಂ ಚ ತಸ್ಯಾಪಿ ಕಥಯಾಮ್ಯಹಂ ॥ ೧೨೭ ॥
ಏಷಾ ರತ್ನಾವಳೀ ಪೂರ್ವಮಾಸೀತ್ಪಾರಾವತೀ ಖಗೀ ।
ಸ ಚ ವಿದ್ಯಾಧರವರಃ ಪತಿರಸ್ಯಾ ಖಗೋಽಭವತ್ ॥ ೧೨೮ ॥
ಪ್ರಾಸಾದೇಽತ್ರ ಮಮೈತಾಭ್ಯಾಮುಷಿತಂ ಸುಚಿರಂ ಸುಖಂ ।
ರಜಃ ಪ್ರಾಸಾದಸಂಲಗ್ನಂ ನುನ್ನಂ ಪಕ್ಷಾನಿಲೈಃ ಪುನಃ ॥ ೧೨೯ ॥
ಉಪರಿಷ್ಟಾದಧಸ್ತಾಚ್ಚ ಕೃತಾ ಬಹ್ವ್ಯಃ ಪ್ರದಕ್ಷಿಣಾಃ ।
ವ್ಯೋಮ್ನಾ ಸಂಚರಮಾಣಾಭ್ಯಾಂ ಸಂಚರದ್ಭ್ಯಾಂ ಮಮಾಜಿರೇ ॥ ೧೩೦ ॥
ಸ್ನಾತಂ ಚತುರ್ನದೇ ತೀರ್ಥೇ ಪೀತಂ ತತ್ರಾಂಬು ಚಾಸಕೃತ್ ।
ಆಭ್ಯಾಂ ಕಲರವಾಭ್ಯಾಂ ಚ ಕೃತಃ ಕಲರವೋ ಮುದೇ ॥ ೧೩೧ ॥

ಗಳ ಹಿಂದಿನ ಜನ್ಮದ ವೃತ್ತಾಂತವನ್ನೆಲ್ಲ ವಿಸ್ತಾರದಿಂದ ಹೇಳುವವನಾಗು. ನಮ್ಮಲ್ಲಿ ಕೃಪೆಯನ್ನು ತೋರು.''

೧೨೬. ಈ ಮಾತುಗಳನ್ನು ಕೇಳಿ ಮಹೇಶ್ವರನು ಅವರಲ್ಲಿ ಅನುರಾಗವುಳ್ಳವನಾಗಿ ಆ ಕನ್ಯೆಯರೂ ಮತ್ತು ಪರಿಮಳಾಲಯನೂ ಹಿಂದಿನ ಜನ್ಮದಲ್ಲಿ ಮಾಡಿದ್ದ ಸೇವೆಯನ್ನೆಲ್ಲ ವಿಸ್ತರಿಸಿದನು.

೧೨೭. ಈಶ್ವರನು ಹೇಳುತ್ತಾನೆ:—ಎಲೌ ನಾಗಕನ್ಯೆಯರಿರಾ! ನೀವು ಮೂವರೂ ಸಮಾಧಾನವುಳ್ಳ ಮನಸ್ಸಿನಿಂದ ಕೇಳಿರಿ. ನಿಮ್ಮೆಲ್ಲರ ಮತ್ತು ಆತನ ಪೂರ್ವಜನ್ಮಕಥೆಗಳನ್ನು ನಾನು ಕಥನಮಾಡುವೆನು.

೧೨೮. ಪೂರ್ವದಲ್ಲಿ ಈ ರತ್ನಾವಳಿಯು ಒಂದು ಹೆಣ್ಣುಪಾರಿವಾಳವಾಗಿದ್ದಳು. ಆ ವಿದ್ಯಾಧರೋತ್ತಮನೂ ಈಕೆಗೆ ಗಂಡನಾದ ಪಕ್ಷಿಯಾಗಿದ್ದನು.

೧೨೯. ಈ ನನ್ನ ದೇವಾಲಯದಲ್ಲಿಯೇ ಇವರಿಬ್ಬರೂ ಸುಖವಾಗಿ ಬಹುಕಾಲದವರೆಗೂ ವಾಸಮಾಡುತ್ತಿದ್ದರು. ಗೋಪುರದ ಮೇಲೆ ಕುಳಿತು ತಮ್ಮ ರೆಕ್ಕೆಗಳ ಗಾಳಿಯಿಂದ ಅವರು ಧೂಳಿಯೆಲ್ಲವನ್ನೂ ತೊಡೆದುಹಾಕುತ್ತಿದ್ದರು.

೧೩೦. ಆಕಾಶದಲ್ಲಿ ಸಂಚರಿಸುತ್ತಿರಲು ಗೋಪುರಕ್ಕೂ ಅಕ್ಷತೆಯ ತಂಡುಲಗಳನ್ನಾರಿಸುವಾಗ ನನ್ನ ಪೀಠಕ್ಕೂ ಇವರು ಆಕಾಶದಲ್ಲಿಯೂ ಮತ್ತು ಭೂಮಿಯಲ್ಲಿಯೂ ಅನೇಕ ಪ್ರದಕ್ಷಿಣೆಗಳನ್ನು ಮಾಡಿರುವರು.

೧೩೧. ನಾಲ್ಕು ನದಿಗಳು ಸೇರುವ ಪಿಲಿಪಿಲಾತೀರ್ಥದಲ್ಲಿ ಈ ಎರಡು ಪಕ್ಷಿಗಳೂ ಸ್ನಾನವನ್ನು ಮಾಡುತ್ತಿದ್ದುವು. ಅನೇಕ ವೇಳೆ ಆ ತೀರ್ಥೋದಕವನ್ನು

ಏತಾಭ್ಯಾಂ ಸ್ಥಿರಚೇತಾಭ್ಯಾಂ ಮುದಿತಾಭ್ಯಾಮತೀವ ಹಿ ।
ದೃಷ್ಟಾನಿ ಕೌತುಕಾನ್ಯತ್ರ ಮಮ ಭಕ್ತೈಃ ಕೃತಾನಿ ವೈ ॥ ೧೩೨ ॥
ಅಮೂಭ್ಯಾಂ ಬಹುಶೋ ದೃಷ್ಟಾ ಮಮ ಮಂಗಲದೀಪಿಕಾಃ ।
ಪೀತಂ ಶ್ರುತಿಪುಟಾಭ್ಯಾಂ ಚ ಮಮ ನಾಮಾಕ್ಷರಾಮೃತಂ ॥ ೧೩೩ ॥
ತಿರ್ಯಗ್ಯೋನಿಪ್ರಭಾವೇನ ನ ಮೃತೌ ಮಮ ಸನ್ನಿಧೌ ।
ಮೃತಂ ಪುರ್ಯಾಮಯೋಧ್ಯಾಯಾಂ ಕಾಶೀಪ್ರಾಪ್ತಿಕೃತಿರ್ಧ್ರುವಂ ॥
ಅಯೋಧ್ಯಾನಿಧನಾದೇಷಾ ರತ್ನದೀಪಸುತಾಭವತ್ ।
ಪತಿಃ ಪಾರಾವತೋಽಸ್ಯಾಃ ಸ ಜಾತೋ ವಿದ್ಯಾಧರಾಂಗಜಃ ॥ ೧೩೫ ॥
ಏಷಾ ಪ್ರಭಾವತೀ ನಾಗೀ ನಾಗರಾಜಸ್ಯ ಪದ್ಮಿನಃ ।
ಇಹ ಜನ್ಮನಿ ಕನ್ಯಾಸೀತ್ಪೂರ್ವಂ ಜನ್ಮ ಬ್ರವೀಮಿ ವಃ ॥ ೧೩೬ ॥
ತ್ರಿಶಿಖಸ್ಯೋರಗೇಂದ್ರಸ್ಯ ಸುತಾ ಚೇಯಂ ಕಲಾವತೀ ।
ಏತಸ್ಯಾ ಅಪಿ ವೃತ್ತಾಂತಂ ನಿಶಾಮಯತ ವಚ್ಮ್ಯಹಂ ॥ ೧೩೭ ॥

---

ಪಾನಮಾಡುತ್ತಲೂ ಇದ್ದುವು. ಈ ಎರಡು ಪಾರಿವಾಳಗಳೂ ನನಗೆ ಸಂತೋಷವನ್ನುಂಟುಮಾಡುವಂತೆ ಕೂಜಿತಧ್ವನಿಗಳನ್ನು ನಿತ್ಯವೂ ಮಾಡುತ್ತಿದ್ದುವು.

೧೩೨. ಇಂತು ದೃಢವಾದ ಮನಸ್ಸಿನಿಂದಲೂ ಅತ್ಯಂತವಾದ ಸಂತೋಷದಿಂದಲೂ ಇಲ್ಲಿ ನೆಲಸಿದ್ದ ಇವು ನನ್ನ ಭಕ್ತರು ನನಗೆ ಮಾಡುತ್ತಿದ್ದ ಅನೇಕ ಮಹೋತ್ಸವಗಳ ಕೌತುಕಗಳನ್ನು ಕಣ್ಣಾರ ನೋಡಿ ದಣಿಯುತ್ತಿದ್ದುವು.

೧೩೩. ಈ ಎರಡು ಪಕ್ಷಿಗಳೂ ನನ್ನ ಮಂಗಳಾರತಿಗಳನ್ನು ಲೆಕ್ಕವಿಲ್ಲದಷ್ಟು ಸಲ ನೋಡಿರುವುವು. ನನ್ನ ನಾಮಾಕ್ಷರಗಳೆಂಬ ಅಮೃತವನ್ನು ಅನೇಕ ವೇಳೆ ತಮ್ಮ ಕರ್ಣಪುಟಗಳಿಂದ ಪಾನಮಾಡಿರುವುವು.

೧೩೪. ಆದರೆ ತಿರ್ಯಗ್ಜಂತುಗಳಾಗಿ ಹುಟ್ಟಿದ್ದುದರಿಂದ ನನ್ನ ಸನ್ನಿಧಾನದಲ್ಲಿ ಇವುಗಳಿಗೆ ಮರಣವು ಸಂಭವಿಸಲಿಲ್ಲ. ಆದರೆ ಈ ಪಾರಾವತದ್ವಂದ್ವವು ಕಾಶೀಕ್ಷೇತ್ರವಾಸದ ಪುಣ್ಯಕ್ಕೆ ಸಾಧನವೆನಿಸಿದ ಅಯೋಧ್ಯಾನಗರಿಯಲ್ಲಿ ಮೃತಿಯನ್ನು ಹೊಂದಿತು.

೧೩೫. ಅಯೋಧ್ಯೆಯಲ್ಲಿ ಸತ್ತುದರಿಂದ ಈಕೆಯು ರತ್ನದೀಪನ ಮಗಳಾಗಿ ಹುಟ್ಟಿರುವಳು. ಇವಳ ಪತಿಯಾಗಿದ್ದ ಪಾರಿವಾಳವೂ ಸಹ ಆ ಪುಣ್ಯಪ್ರಭಾವದಿಂದಲೇ ವಿದ್ಯಾಧರವಂಶದಲ್ಲಿ ಜನ್ಮವನ್ನು ತಾಳಿರುವನು.

೧೩೬. ನಾಗಕನ್ಯೆಯಾದ ಈ ಪ್ರಭಾವತಿಯು ಈ ಜನ್ಮದಲ್ಲಿ ನಾಗಗಿಗೆ ಅಧಿಪತಿಯಾದ ಪದ್ಮಿಯೆಂಬುವನಿಗೆ ಮಗಳಾಗಿ ಹುಟ್ಟಿರುವಳು. ಇವಳ ಪೂರ್ವಜನ್ಮದ ವೃತ್ತಾಂತವನ್ನು ನಿಮಗೆ ಹೇಳುವೆನು, ಕೇಳಿರಿ.

೧೩೭. ಈ ಕಳಾವತಿಯೂ ತ್ರಿಶಿಖನೆಂಬ ಉರಗೇಂದ್ರನಿಗೆ ಸುತೆಯಾಗಿ

**ಭವಾಂತರೇ ತೃತೀಯೇಽತಃ ಕನ್ಯೇ ಚಾರಾಯಣಸ್ಯ ಹ ।**
**ಆಸ್ತಾಂ ಮಹರ್ಷೇಃ ಶೀಲಾಢ್ಯೇ ಪ್ರೇಮವತ್ಯೌ ಪರಸ್ಪರಂ ॥ ೧೩೮ ॥**
**ಪಿತ್ರಾ ಚಾರಾಯಣೇನಾಪಿ ತಾಭ್ಯಾಂ ಸಂಪ್ರೇರಿತೇನ ತೇ ।**
**ಆಮುಷ್ಯಾಯಣಪುತ್ರಾಯ ದತ್ತೇ ನಾರಾಯಣಾಯ ಹಿ ॥ ೧೩೯ ॥**
**ಅಪ್ರಾಪ್ತಯೌವನಃ ಸೋಽಥ ಸಮಿದಾಹರಣಾಯ ವೈ ।**
**ಗತೋ ವಿಧಿವಶಾದ್ದಷ್ಟೋ ದಂದಶೂಕೇನ ಕಾನನೇ ॥ ೧೪೦ ॥**
**ಭವಾನೀಗೌತಮೀನಾಮ್ನ್ಯೌ ತೇ ತು ಚಾರಾಯಣಾಂಗಜೇ ।**
**ವೈಧವ್ಯದುಃಖಮಾಪನ್ನೇ ದೈನ್ಯಗ್ರಸ್ತೇ ಬಭೂವತುಃ ॥ ೧೪೧ ॥**
**ಅತ ಏವ ಪ್ರಯತ್ನೇನ ಪರಿಣೇತಾ ವಿವರ್ಜಯೇತ್ ।**
**ದೇವತಾಸರಿದಾಹ್ವಾನಾಂ ಕನ್ಯಾಂ ಪಾಣಿಗ್ರಹೇ ಸುಧೀಃ ॥ ೧೪೨ ॥**
**ಅಥರ್ಷೇಃ ಕಸ್ಯಚಿದ್ದಿವ್ಯಾದಾಶ್ರಮೇ ಪರಮಾದ್ಭುತೇ ।**
**ರಂಭಾಫಲಾನ್ಯದತ್ತಾನಿ ಮೋಹಾಜ್ಜಗೃಹತುಸ್ತದಾ ॥ ೧೪೩ ॥**

ಜನ್ಮವನ್ನು ತಾಳಿರುವಳು. ಇವಳ ವೃತ್ತಾಂತವನ್ನೂ ಕೇಳಿರಿ. ನಾನು ಯಥಾರ್ಥವಾಗಿ ಹೇಳುತ್ತಿರುವೆನು.

೧೩೮. ಇಲ್ಲಿಗೆ ಮೂರನೆಯ ಜನ್ಮದಲ್ಲಿ ಇವರಿಬ್ಬರೂ ಚಾರಾಯಣನೆಂಬ ಮಹರ್ಷಿಗೆ ಕನ್ಯೆಯರಾಗಿದ್ದರು. ಇಬ್ಬರೂ ಸೌಶೀಲ್ಯಾದಿ ಸದ್ಗುಣಗಳಿಂದ ಭರಿತರಾಗಿ ಪರಸ್ಪರ ಪ್ರೇಮಯುಕ್ತರಾಗಿದ್ದರು.

೧೩೯. ಅವರಿಬ್ಬರಿಂದ ಚೋದಿತನಾಗಿ ಅವರ ಇಷ್ಟಾನುಸಾರವಾಗಿಯೇ ಚಾರಾಯಣನು ಇಬ್ಬರನ್ನೂ ಆಮುಷ್ಯಾಯಣನೆಂಬುವನ ಪುತ್ರನಾದ ನಾರಾಯಣನೆಂಬ ವರನಿಗೆ ದಾನಮಾಡಿದನು.

೧೪೦. ಆ ನಾರಾಯಣನು ಪೂರ್ಣಯೌವನವನ್ನು ಪಡೆಯುವುದಕ್ಕೆ ಮುಂಚೆಯೇ ಒಮ್ಮೆ ಸಮಿತ್ತುಗಳನ್ನು ಶೇಖರಿಸಲು ಕಾಡಿನಲ್ಲಿ ಸಂಚರಿಸುತ್ತ ದುರ್ದೈವದ ಫಲವಾಗಿ ಸರ್ಪದಿಂದ ಕಚ್ಚಲ್ಪಟ್ಟು ಮರಣವನ್ನು ಹೊಂದಿದನು.

೧೪೧. ಇಂತು ಚಾರಾಯಣನ ಪುತ್ರಿಯರಾದ ಭವಾನಿ ಮತ್ತು ಗೌತಮಿಯರಿಬ್ಬರೂ ವೈಧವ್ಯದ ದುಃಖವನ್ನು ಹೊಂದಿ ಅತ್ಯಂತ ಖಿನ್ನರಾದ ಮನಸ್ಸುಳ್ಳವರಾದರು.

೧೪೨. ಆದುದರಿಂದಲೇ ಧೀಮಂತನಾದ ವರನು ವಿವಾಹ ಸಮಯದಲ್ಲಿ ದೇವತೆಯ ಅಥವಾ ನದಿಯ ಹೆಸರುಳ್ಳ ಕನ್ಯೆಯ ಪಾಣಿಗ್ರಹಣವನ್ನು ಸರ್ವ ಪ್ರಕಾರದಿಂದಲೂ ತ್ಯಜಿಸಬೇಕೆಂದು ಹೇಳಲ್ಪಟ್ಟಿರುವುದು.

೧೪೩. ಒಮ್ಮೆ ಅವರು ಸರ್ವಾಶ್ಚರ್ಯಮಯವೆನಿಸಿದ ಒಬ್ಬಾನೊಬ್ಬ ಮಹರ್ಷಿಯ ಆಶ್ರಮಕ್ಕೆ ಹೋಗಿದ್ದ ವೇಳೆಯಲ್ಲಿ, ಆತನು ಕೊಡದಿದ್ದರೂ ಅಲ್ಲಿ ಬೆಳೆದಿದ್ದ ಕೆಲವು ಬಾಳೆಯ ಹಣ್ಣುಗಳನ್ನು ಆಶೆಯಿಂದ ತೆಗೆದುಕೊಂಡರು.

ಕೃತ್ವಾ ಮಾಸೋಪವಾಸಾದಿ ವ್ರತಾನಿ ಬ್ರಾಹ್ಮಣಾಂಗಜೇ ।
ಅವಾಪ್ಯ ನಿಧನಂ ಕಾಲಾಚ್ಛಾಖಾಮೃಗ್ಯೌ ಬಭೂವತುಃ ॥ ೧೪೪ ॥
ಫಲಚೌರ್ಯವಿಪಾಕೇನ ವಾನರೀತ್ವಂ ತಯೋರಭೂತ್ ।
ಶೀಲರಕ್ಷಣಧರ್ಮೇಣ ಕಾಶ್ಯಾಂ ಜನಿಮವಾಪತುಃ ॥ ೧೪೫ ॥
ಸ ಚ ನಾರಾಯಣೋ ವಿಪ್ರಃ ಪಿತೃಶುಶ್ರೂಷಣವ್ರತಃ ।
ದಷ್ಟೋಽಪಿ ದಂದಶೂಕೇನ ಕಾಶ್ಯಾಂ ಪಾರಾವತೋಽಭವತ್ ॥ ೧೪೬ ॥
ಏವಂ ಭವಾಂತರೇ ಚಾಸೀದೇತಯೋಃ ಪತಿರೇಷಕಃ ।
ತಿಸೃಣಾಂ ಭವತೀನಾಂ ಚ ಭಾವೀ ಭರ್ತಾಧುನಾಪಿ ಹಿ ॥ ೧೪೭ ॥
ಪ್ರಾಸಾದಸ್ಯಾಸ್ಯ ಪಾರ್ಶ್ವೇ ತು ನ್ಯಗ್ರೋಧಸ್ತು ಮಹಾನಭೂತ್ ।
ತಸ್ಮಿನ್ಬಹುನಿ ಶಾಖಾಢ್ಯೇ ಶಾಖಾಮೃಗ್ಯೌ ಬಭೂವತುಃ ॥ ೧೪೮ ॥
ಚತುಸ್ರೋತಸ್ವಿನೀ ತೀರ್ಥೇ ಕ್ರೀಡಯಾ ಚ ಮಮಜ್ಜತುಃ ।
ಪಪತುಶ್ಚಾಪಿ ಪಾನೀಯಂ ತಸ್ಮಿಂಸ್ತೀರ್ಥೇ ತೃಷಾತುರೇ ॥ ೧೪೯ ॥

೧೪೪. ಆ ಇಬ್ಬರು ಬ್ರಾಹ್ಮಣಸ್ತ್ರೀಯರೂ ಮಾಸೋಪವಾಸವೇ ಮೊದಲಾದ ಅನೇಕ ವ್ರತಗಳನ್ನು ಮಾಡಿ ಕಾಲಕ್ರಮದಲ್ಲಿ ಮರಣವನ್ನು ಹೊಂದಿ ಹೆಣ್ಣು ಕೋತಿಗಳಾಗಿ ಜನಿಸಿದರು.

೧೪೫. ಬಾಳೆಯಹಣ್ಣುಗಳನ್ನು ಕದ್ದ ಪಾಪದ ಫಲವಾಗಿ ಅವರಿಗೆ ಹೆಣ್ಣು ಕಪಿಯ ಜನ್ಮವು ಲಭಿಸಿತು. ಆದರೆ ವ್ರತೋಪವಾಸಾದಿಗಳಿಂದ ಉತ್ತಮಾಚಾರ ವತಿಯರಾಗಿದ್ದ ಕಾರಣ ಅವರು ಕಾಶಿಯಲ್ಲಿ ಜನ್ಮವನ್ನು ತಾಳಿದರು.

೧೪೬. ನಾರಾಯಣನೆಂಬ ಆ ಬ್ರಾಹ್ಮಣೋತ್ತಮನೂ ಪಿತೃಶುಶ್ರೂಷೆ ಯಲ್ಲಿಯೇ ನಿರತನಾಗಿದ್ದು ಸರ್ಪದಷ್ಟನಾಗಿ ಮಡಿದರೂ ಕಾಶೀಕ್ಷೇತ್ರದಲ್ಲಿಯೇ ಪಾರಿವಾಳಪಕ್ಷಿಯಾಗಿ ಹುಟ್ಟಿದನು.

೧೪೭. ಆ ಪಾರಿವಾಳವೇ ರತ್ನಾವಳಿಯ ಹಿಂದಿನ ಜನ್ಮದ ಗಂಡನು. ಆ ಹೆಣ್ಣುಕಪಿಗಳೇ ಈ ಪ್ರಭಾವತಿ ಕಳಾವತಿಯರು. ಆದುದರಿಂದ ನಿಮ್ಮ ಮೂವರಿಗೂ ಈತನೊಬ್ಬನೇ ಜನ್ಮಾಂತರಗಳಲ್ಲಿ ಪತಿಯಾಗಿದ್ದನು. ಈ ಜನ್ಮ ದಲ್ಲಿಯೂ ಈತನೇ ನಿಮ್ಮೆಲ್ಲರಿಗೂ ಗಂಡನಾಗಿರುವನು.

೧೪೮. ಈ ದೇವಾಲಯದ ಪಾರ್ಶ್ವದಲ್ಲಿ ಹಿಂದೆ ವಿಶಾಲವಾದ ಆಲದಮರ ವೊಂದಿದ್ದಿತು. ಅನೇಕ ಶಾಖೆಪಿಶಾಖೆಗಳಿಂದ ಕೂಡಿದ ಆ ವೃಕ್ಷದಲ್ಲಿ ಈ ಎರಡು ಹೆಣ್ಣುಕೋತಿಗಳೂ ವಾಸಮಾಡುತ್ತಿದ್ದುವು.

೧೪೯. ನಾಲ್ಕುನದಿಗಳ ಸಂಗಮವಾದ ಪಿಲಿಪಿಲಾತೀರ್ಥದಲ್ಲಿ ಅವು ಕ್ರೀಡಾ ವ್ಯಾಜದಿಂದ ಸ್ನಾನಗಳನ್ನೂ ಮಾಡುತ್ತಿದ್ದುವು. ಬಾಯಾರಿಕೆಯಾದ ಸಮಯ ಗಳಲ್ಲೆಲ್ಲ ಆ ತೀರ್ಥದಲ್ಲಿಯೇ ನೀರನ್ನು ಕುಡಿಯುತ್ತಿದ್ದುವು.

ಜಾತಿಸ್ವಭಾವಚಾಪಲ್ಯಾತ್ಕ್ರೀಡಂತ್ಯೌ ಚ ಪ್ರದಕ್ಷಿಣಂ ।
ಚಕ್ರತುರ್ಬಹುಕೃತ್ವಶ್ಚ ಲಿಂಗಂ ದದೃಶತುರ್ಬಹು ॥ ೧೫೦ ॥
ವಿಚರಂತ್ಯಾವಿತಿಸ್ವೈರಂ ತತ್ರ ನ್ಯಗ್ರೋಧಸನ್ನಿಧೌ ।
ಕೇನಚಿದ್ಯೋಗಿವೇಷೇಣ ಪಾಶೇನ ಚ ನಿಯಂತ್ರಿತೇ ॥ ೧೫೧ ॥
ಭಿಕ್ಷಾರ್ಥಂ ಶಿಕ್ಷಿತೇ ತೇನ ತದುತ್ಪ್ಲುತ್ಯಾದಿನರ್ತನಂ ।
ಅಥ ತೇ ಕ್ವಾಪಿ ಮರ್ಕಟ್ಯೌ ಕಾಲಧರ್ಮವಶಂ ಗತೇ ॥ ೧೫೨ ॥
ಕಾಶೀವಾಸಜಪುಣ್ಯೇನ ತ್ರೈಲೋಚನ್ಯಾನುಸೇವಯಾ ।
ಪ್ರಾದಕ್ಷಿಣ್ಯಾದಿರೂಪಿಣ್ಯಾ ಜಾತೇ ನಾಗಸುತೇ ಇತಿ ॥ ೧೫೩ ॥
ಅಧುನಾ ತಂ ಪತಿಂ ಪ್ರಾಪ್ಯ ವಿದ್ಯಾಧರಕುಮಾರಕಂ ।
ನಿರ್ವಿಶ್ಯ ಸ್ವರ್ಗಭೋಗಾಂಶ್ಚ ಕಾಶ್ಯಾಂ ನಿರ್ವೃತಿಮೇಷ್ಯಥ ॥ ೧೫೪ ॥
ಯದಲ್ಪಮಪಿ ವೈ ಕಾಶ್ಯಾಂ ಕೃತಂ ಕರ್ಮ ಶುಭಾವಹಂ ।
ತಸ್ಯ ಮೋಕ್ಷಪರೀಪಾಕೋ ನಿಶ್ಚಿತಂ ಮದನುಗ್ರಹಾತ್ ॥ ೧೫೫ ॥

---

೧೫೦. ಜಾತಿಗೆ ಸ್ವಭಾವವಾದ ಚಾಪಲ್ಯದಿಂದ ಕ್ರೀಡಿಸುತ್ತಲೇ ಅನೇಕ ಸಲ ದೇವಾಲಯಕ್ಕೆ ಪ್ರದಕ್ಷಿಣೆಗಳನ್ನು ಮಾಡಿದುವು. ತ್ರಿಲೋಚನೇಶ್ವರಲಿಂಗದ ದರ್ಶನವನ್ನೂ ಬಹು ವೇಳೆ ಮಾಡಿದುವು.

೧೫೧. ಈ ವಿಧವಾಗಿ ಯಥೇಚ್ಛವಾಗಿ ಆಲದಮರದ ಸಮೀಪದಲ್ಲಿಯೇ ಓಡಾಡುತ್ತಿರಲು ಒಬ್ಬಾನೊಬ್ಬ ಯೋಗಿವೇಷಧಾರಿಯಾದ ಮನುಷ್ಯನು ಪಾಶವನ್ನು ಹಾಕಿ ಎರಡು ಕಪಿಗಳನ್ನೂ ಹಿಡಿದುಕೊಂಡನು.

೧೫೨. ತನ್ನ ಭಿಕ್ಷಾಚರ್ಯೆಗೆ ಅನುಕೂಲವಾಗಿರುವಂತೆ ಅವುಗಳಿಗೆ ಹಾರುವುದು, ಕುಪ್ಪಳಿಸುವುದು ಮುಂತಾದ ಅನೇಕ ಚೇಷ್ಟೆಗಳನ್ನು ಕಲಿಸಿಕೊಟ್ಟನು. ಬಳಿಕ ಕಾಲಾನಂತರದಲ್ಲಿ ಆ ಎರಡು ಕಪಿಗಳೂ ಎಲ್ಲಿಯೋ ಮರಣವನ್ನು ಹೊಂದಿದುವು.

೧೫೩. ಕಾಶಿಯಲ್ಲಿ ವಾಸಮಾಡಿದ್ದ ಪುಣ್ಯದಿಂದಲೂ ತ್ರಿಲೋಚನೇಶ್ವರನಿಗೆ ಮಾಡಿದ್ದ ಪ್ರದಕ್ಷಿಣೆಯೇ ಮೊದಲಾದ ಸೇವೆಗಳ ಫಲವಾಗಿಯೂ ಇಬ್ಬರೂ ಈ ಜನ್ಮದಲ್ಲಿ ನಾಗಕನ್ಯಕೆಯರಾಗಿ ಜನಿಸಿರುವರು.

೧೫೪. ಈಗ ವಿದ್ಯಾಧರಕುಮಾರನಾದ ಪರಿಮಳಾಲಯನನ್ನೇ ಪತಿಯಾಗಿ ಪಡೆದು ನೀವು ಮೂವರೂ ಸ್ವರ್ಗಭೋಗಗಳೆಲ್ಲವನ್ನೂ ಅನುಭವಿಸಿ ಕೊನೆಯಲ್ಲಿ ಈ ಕಾಶೀಕ್ಷೇತ್ರದಲ್ಲಿಯೇ ಮೋಕ್ಷವನ್ನು ಪಡೆಯುವಿರಿ.

೧೫೫. ಮಂಗಳಕಾರಕವಾದ ಎಷ್ಟೇ ಅಲ್ಪವಾದ ಕಾರ್ಯವನ್ನು ಕಾಶಿಯಲ್ಲಿ ಮಾಡಿದರೂ, ಅದಕ್ಕೆಲ್ಲ ನನ್ನ ಅನುಗ್ರಹದಿಂದ ಮೋಕ್ಷವೇ ಏಕಾಂತಫಲವೆಂದು ನಿಶ್ಚಯಿಸಲ್ಪಟ್ಟಿರುವುದು.

ತ್ರಿಲೋಕ್ಯಾ ಅಪಿ ಸರ್ವಸ್ಯಾಃ ಶ್ರೇಷ್ಠಾ ವಾರಾಣಸೀ ಪುರೀ ।
ತತೋಽಪಿ ಲಿಂಗಮೋಂಕಾರಂ ತತೋಽಪ್ಯತ್ರ ತ್ರಿಲೋಚನಂ ॥ ೧೫೬ ॥
ತಿಷ್ಠಮಾನೋಽತ್ರ ಲಿಂಗೇಽಹಂ ಭಕ್ತಮುಕ್ತಿಂ ದಿಶಾಮ್ಯಹಂ ।
ತತಃ ಸರ್ವಪ್ರಯತ್ನೇನ ಕಾಶ್ಯಾಂ ಪೂಜ್ಯಸ್ತ್ರಿಲೋಚನಃ ॥ ೧೫೭ ॥
ಇತ್ಯುಕ್ತ್ವಾ ದೇವದೇವೇಶಸ್ತತ್ಪ್ರಾಸಾದಾಂತರಂ ವಿಶತ್ ।
ಅವಾಚ್ಯರೂಪಮಾಸಾದ್ಯ ಸ್ಥೂಲಂ ತ್ರಿಭುವನಾದಪಿ ॥ ೧೫೮ ॥
ತಾಶ್ಚ ಸ್ವಂ ಸ್ವಂ ಪದಂ ಪ್ರಾಪ್ಯ ತದ್ವೃತ್ತಾಂತಮಶೇಷತಃ ।
ಸ್ವಮಾತೃಪುರತಶ್ಚೋಕ್ತ್ವಾ ಕೃತಕೃತ್ಯಾ ಇವಾಭವನ್ ॥ ೧೫೯ ॥
ಏಕದಾ ಮಾಧವೇ ಮಾಸಿ ಮಹಾಯಾತ್ರಾ ಸಮಾಗತಾ ।
ವಿದ್ಯಾಧರಾಸ್ತಥಾ ನಾಗಾ ಮಿಲಿತಾಃ ಸಪರಿಚ್ಛದಾಃ ॥ ೧೬೦ ॥
ವಿರಜಸ್ಕೇ ಮಹಾಕ್ಷೇತ್ರೇ ತ್ರಿಲೋಚನಸಮೀಪತಃ ।
ವೇದ ಚ ವರದಾನಾಚ್ಚ ಪೃಷ್ಟ್ವಾನ್ಯೋನ್ಯಂ ಕುಲಾವಲೀಂ ॥ ೧೬೧ ॥

---

೧೫೬. ಮೂರು ಲೋಕಗಳ ಎಲ್ಲ ಕ್ಷೇತ್ರಗಳಲ್ಲಿಯೂ ಈ ವಾರಾಣಸೀ ಪುರಿಯೇ ಶ್ರೇಷ್ಠಕ್ಷೇತ್ರವೆನಿಸಿರುವುದು. ಅದರಲ್ಲಿಯೂ ಓಂಕಾರೇಶ್ವರಲಿಂಗವು ಉತ್ತಮವು. ಅದಕ್ಕಿಂತಲೂ ತ್ರಿಲೋಚನೇಶ್ವರಲಿಂಗವು ಶ್ರೇಷ್ಠತಮವು.

೧೫೭. ನಾನು ಈ ಲಿಂಗದಲ್ಲಿಯೇ ಯಾವಾಗಲೂ ಸನ್ನಿಹಿತನಾಗಿರುವೆನು. ಭಕ್ತರಿಗೆ ಮುಕ್ತಿಮಾರ್ಗವನ್ನು ತೋರಿಸುತ್ತಿರುವೆನು. ಆದುದರಿಂದ ಸರ್ವ ಪ್ರಕಾರದಿಂದಲೂ ಕಾಶೀಕ್ಷೇತ್ರದಲ್ಲಿ ತ್ರಿಲೋಚನೇಶ್ವರನನ್ನು ಪೂಜಿಸಬೇಕು.''

೧೫೮. ಇಂತೆಂದು ಹೇಳಿ ದೇವೇಶ್ವರನು ವಾಗತೀತವೂ ತ್ರಿಭುವನವ್ಯಾಪಕವೂ ಆದ ದಿವ್ಯರೂಪವನ್ನು ಧರಿಸಿಕೊಂಡು ಆ ದೇವಾಲಯವನ್ನು ಪ್ರವೇಶಿಸಿದನು.

೧೫೯. ಆ ಕನ್ಯಕೆಯರೂ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಆ ವೃತ್ತಾಂತವೆಲ್ಲವನ್ನೂ ತಮ್ಮ ತಾಯಂದಿರಿಗೆ ವಿಸ್ತರಿಸಿ ಕೃತಕೃತ್ಯರಾದೆವೆಂದು ತಿಳಿದು ಸಂತೋಷವಾಗಿ ಕಾಲವನ್ನು ಕಳೆಯುತ್ತಿದ್ದರು.

೧೬೦. ಮತ್ತೊಮ್ಮೆ ವೈಶಾಖಮಾಸವು ಪ್ರಾಪ್ತವಾಗಿ ತ್ರಿಲೋಚನೇಶ್ವರನಿಗೆ ಮಹಾಯಾತ್ರೆಯು ನಡೆಯಿತು. ಆ ಸಂಭ್ರಮದಲ್ಲಿ ವಿಧ್ಯಾಧರಕುಮಾರನೂ, ನಾಗಕನ್ಯೆಯರೂ ತಮ್ಮ ಪರಿವಾರದೊಡನೆ ಅಲ್ಲಿ ಒಟ್ಟುಗೂಡಿದರು.

೧೬೧. ವಿರಜವೆಂಬ ಮಹಾಕ್ಷೇತ್ರದಲ್ಲಿ ತ್ರಿಲೋಚನೇಶ್ವರನ ಸನ್ನಿಧಿಯಲ್ಲಿಯೇ ಆತನ ವರದಾನದ ಪ್ರಭಾವದಿಂದ ಅವರು ಪರಸ್ಪರ ವಂಶಾವಳಿಗಳನ್ನು ಕೇಳಿ ತಿಳಿದುಕೊಂಡರು.

**ವಿದ್ಯಾಧರಾಯ ತಾ ನಾಗೌ ಕನ್ಯಾಸ್ತಿಸ್ರೋಽಪಿ ಕಲ್ಪಿತಾಃ ।**
**ಮಂದಾರದಾಮಾ ಸಂತುಷ್ಟಃ ಪ್ರಾಪ್ಯ ತಚ್ಚ ಸ್ನುಷಾತ್ರಯಂ ॥ ೧೬೨ ॥**
**ರತ್ನದೀಪಶ್ಚ ನಾಗೇಂದ್ರಃ ಪದ್ಮೀ ಚ ಭುಜಗೇಶ್ವರಃ ।**
**ತ್ರಿಶಿಖೋಽಪಿ ಫಣೀಂದ್ರಶ್ಚ ದೃಷ್ಟ್ವಾ ಏತೇ ತ್ರಯೋಽಪಿ ಚ ॥ ೧೬೩ ॥**
**ಜಾಮಾತರಂ ಸಮಾಸಾದ್ಯ ಶುಭಂ ಪರಿಮಳಾಲಯಂ ।**
**ಅನ್ಯೋನ್ಯಂ ಸ್ವಜನಾಸ್ತೇತು ಮುದಾ ವಿಕಸಿತೇಕ್ಷಣಾಃ ॥ ೧೬೪ ॥**
**ವಿವಾಹೋತ್ಸವಮಾಕಲ್ಪ್ಯ ಸ್ವಂ ಸ್ವಂ ಭುವನಮಾವಿಶನ್ ।**
**ತ್ರಿಲೋಚನಸ್ಯ ಲಿಂಗಸ್ಯ ವರ್ಣಯಂತೋಽತಿಗೌರವಂ ॥ ೧೬೫ ॥**
**ಸ ಚ ವಿದ್ಯಾಧರಃ ಶ್ರೀಮಾನ್ನಾಗೀಭಿರ್ವಿಪುಲಂ ಸುಖಂ ।**
**ಭುಕ್ತ್ವಾ ವಾರಾಣಸೀಂ ಪ್ರಾಪ್ಯ ಸಂಸೇವ್ಯಾಥ ತ್ರಿಲೋಚನಂ ॥ ೧೬೬ ॥**
**ಗಾಯನ್ಗೀತಂ ಸುಮಧುರಂ ನಾಗೀಭಿಃ ಸಹಿತಃ ಕೃತೀ ।**
**ಆತ್ಮಾನಂ ಚಾತಿಸಂಸ್ಮೃತ್ಯ ಮಧ್ಯೇಲಿಂಗಂ ಲಯಂ ಗತಃ ॥ ೧೬೭ ॥**

---

೧೬೨. ಅಲ್ಲಿ ನೆರೆದಿದ್ದ ನಾಗರೆಲ್ಲರೂ ಆ ಮೂವರು ಕನ್ಯೆಯರನ್ನು ಆ ವಿದ್ಯಾಧರನಿಗೇ ವಾಗ್ದಾನಮಾಡಿಕೊಟ್ಟರು. ಇಂತು ಒಮ್ಮೆಯೇ ಮೂವರು ಸೊಸೆಯರನ್ನು ಪಡೆದು ಮಂದಾರದಾಮನೂ ಸಂತುಷ್ಟನಾದನು.

೧೬೩. ರತ್ನಾವಳಿಯ ತಂದೆಯಾದ ರತ್ನದೀಪನೆಂಬ ನಾಗರಾಜನೂ, ಪ್ರಭಾವತಿಯ ತಂದೆಯಾದ ಪದ್ಮಿಯೂ, ಕಳಾವತಿಯ ತಂದೆಯಾದ ತ್ರಿಶಿಖನೂ ಉತ್ತಮನಾದ ಅಳಿಯನನ್ನು ಪಡೆದು ಹರ್ಷದಿಂದಿದ್ದರು.

೧೬೪–೧೬೫. ಸರ್ವಲಕ್ಷಣಸಂಪನ್ನನಾದ ಪರಿಮಳಾಲಯನು ಅಳಿಯನಾದುದನ್ನು ಕಂಡು ವಧೂವರರ ಬಂಧುಗಳೆಲ್ಲರೂ ಸಂತೋಷದಿಂದ ಅರಳಿದ ಕಣ್ಣುಗಳುಳ್ಳವರಾದರು. ವಿವಾಹ ಮಹೋತ್ಸವವನ್ನು ನಡೆಸಿ ತ್ರಿಲೋಚನೇಶ್ವರ ಮಹಾಲಿಂಗದ ಅನಂತವಾದ ಮಾಹಾತ್ಮ್ಯವನ್ನು ಬಹುವಿಧವಾಗಿ ತಮ್ಮಲ್ಲಿಯೇ ಬಣ್ಣಿಸುತ್ತ ತಮ್ಮ ಲೋಕಗಳಿಗೆ ಹೊರಟುಹೋದರು.

೧೬೬–೧೬೭. ಸರ್ವೈಶ್ವರ್ಯವಂತನಾದ ಪರಿಮಳಾಲಯನೆಂಬ ವಿದ್ಯಾಧರನು ಆ ನಾಗಸ್ತ್ರೀಯರೊಡನೆ ಅಪರಿಮಿತವಾದ ಸೌಖ್ಯವನ್ನು ಹೊಂದಿ ದಿನಗಳನ್ನು ಕಳೆಯುತ್ತ ನಿತ್ಯವೂ ವಾರಾಣಸೀಕ್ಷೇತ್ರವನ್ನು ಸೇರಿ ತ್ರಿಲೋಚನನನ್ನು ಸೇವಿಸಿ ತನ್ನ ಪತ್ನಿಯರೊಡನೆ ಅತ್ಯಂತ ಮಧುರಗಳಾದ ಸಂಗೀತಗಳನ್ನು ಹಾಡುತ್ತ ಕೃತಕೃತ್ಯತೆಯನ್ನು ಪಡೆದನು. ಉಚಿತಕಾಲದಲ್ಲಿ ತನ್ನ ಆತ್ಮಸ್ವರೂಪವನ್ನೇ ಸ್ಮರಿಸಿಕೊಳ್ಳುತ್ತ ಸಪತ್ನೀಕನಾಗಿಯೇ ಆ ತ್ರಿಲೋಚನೇಶ್ವರ ಲಿಂಗದಲ್ಲಿ ಲಯವನ್ನು ಹೊಂದಿದನು.

ಸ್ಕಂದ ಉವಾಚ :—

ತ್ರಿಲೋಚನಸ್ಯ ಮಹಿಮಾ ಕಲೌ ದೇವೇನ ಗೋಪಿತಃ ।
ಅತೋಽಲ್ಪಸತ್ತ್ವಾ ಮನುಜಾ ನ ತಲ್ಲಿಂಗಮುಪಾಸತೇ ॥ ೧೬೮ ॥
ತ್ರಿಲೋಚನಕಥಾಮೇತಾಂ ಶೃತ್ವಾ ಪಾಪಾನ್ವಿತೋಽಪ್ಯಹೋ ।
ವಿಪಾಪ್ಮಾ ಜಾಯತೇ ಮರ್ತ್ಯೋ ಲಭತೇ ಚ ಪರಾಂ ಗತಿಂ ॥ ೧೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ತ್ರಿಲೋಚನಪ್ರಭಾವೋಪವರ್ಣನಂ" ನಾಮ ಷಟ್ಸಪ್ತತಿತಮೋಽಧ್ಯಾಯಃ

---

೧೬೮. ಸ್ಕಂದನು ಹೇಳುತ್ತಾನೆ:—ಆ ಮಹೇಶ್ವರನೇ ತ್ರಿಲೋಚನೇಶ್ವರನ ಮಾಹಾತ್ಮ್ಯೆಯನ್ನು ಕಲಿಯುಗದಲ್ಲಿ ಮರೆಮಾಡಿರುವನು. ಆದುದರಿಂದಲೇ ಕ್ಷೀಣಸತ್ತ್ವರಾದ ಮನುಜರು ಆ ಲಿಂಗವನ್ನು ಕಾಶಿಯಲ್ಲಿ ಉಪಾಸನೆಮಾಡುವುದಿಲ್ಲ.

೧೬೯. ಮಹಾಮುನಿಯೆ! ಎಂತಹ ಪಾಪಾತ್ಮನಾದರೂ ತ್ರಿಲೋಚನೇಶ್ವರನ ಈ ಚರಿತ್ರೆಯನ್ನು ಕೇಳಲು ಆಕ್ಷಣದಲ್ಲಿಯೇ ಪಾಪರಹಿತನಾಗುವನಲ್ಲದೆ ಉತ್ತಮವಾದ ಗತಿಯನ್ನೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ತ್ರಿಲೋಚನಪ್ರಭಾವೋಪವರ್ಣನ"ವೆಂಬ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಸಪ್ತತಿತಮೋಽಧ್ಯಾಯಃ

## ಕೇದಾರೇಶ್ವರಾವಿರ್ಭಾವವರ್ಣನಂ

ಪಾರ್ವತ್ಯುವಾಚ :—

**ನಮಸ್ತೇ ದೇವದೇವೇಶ ಪ್ರಣಮತ್ಕರುಣಾನಿಧೇ ।**
**ವದ ಕೇದಾರಮಾಹಾತ್ಮ್ಯಂ ಭಕ್ತಾನಾಮನುಕಂಪಯಾ ॥ ೧ ॥**
**ತಸ್ಮಿನ್ಲಿಂಗೇ ಮಹಾಪ್ರೀತಿಸ್ತವ ಕಾಶ್ಯಾಮನುತ್ತಮಾ ।**
**ತದ್ಭಕ್ತಾಶ್ಚ ಜನಾ ನಿತ್ಯಂ ದೇವದೇವ ಮಹಾಧಿಯಃ ॥ ೨ ॥**

ದೇವದೇವ ಉವಾಚ :—

**ಶೃಣ್ವಪರ್ಣೇಽಭಿಧಾಸ್ಯಾಮಿ ಕೇದಾರೇಶ್ವರಸಂಕಥಾಂ ।**
**ಸಮಾಕರ್ಣ್ಯಾಪಿ ಯಾಂ ಪಾಪೋಽಪ್ಯಪಾಪೋ ಜಾಯತೇ ಕ್ಷಣಾತ್ ॥ ೩ ॥**
**ಕೇದಾರಂ ಯಾತುಕಾಮಸ್ಯ ಪುಂಸೋ ನಿಶ್ಚಿತಚೇತಸಃ ।**
**ಆಜನ್ಮಸಂಚಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೪ ॥**

## ಕನ್ನಡದ ಅನುವಾದ

### ಕೇದಾರೇಶ್ವರಾವಿರ್ಭಾವವರ್ಣನ

೧. ಪಾರ್ವತಿಯು ಹೇಳುತ್ತಾಳೆ :—ಓ ದೇವದೇವೇಶ್ವರಾ! ನಮಸ್ಕರಿಸುವವರಿಗೆ ಕರುಣಾಸಮುದ್ರಪ್ರಾಯನೆ! ನಿನಗೆ ನಮಸ್ಕಾರವು. ಭಕ್ತರಲ್ಲಿ ನಿನಗೆ ಅನುಕಂಪವು ಅಪಾರವಾಗಿರುವುದು. ಆದುದರಿಂದ ಕೇದಾರೇಶ್ವರನ ಮಾಹಾತ್ಮ್ಯೆಯನ್ನು ಈಗ ನಿರೂಪಿಸು.

೨. ಕಾಶಿಯಲ್ಲಿರುವ ಆ ಲಿಂಗದಲ್ಲಿ ನಿನಗೆ ಮಹತ್ತರವೂ, ಅಸಾಧಾರಣವೂ ಆದ ಅಭಿಮಾನವಿರುವುದು. ಮಹಾದೇವ! ಆ ಲಿಂಗವನ್ನು ನಿತ್ಯವೂ ಭಜಿಸುವವರು ಮಹಾಬುದ್ಧಿಶಾಲಿಗಳಾಗಿರುವರು.

೩. ದೇವದೇವನು ಹೇಳುತ್ತಾನೆ :—ಪಾರ್ವತಿಯೆ! ಕೇದಾರೇಶ್ವರನಿಗೆ ಸಂಬಂಧಿಸಿದ ಚರಿತ್ರೆಯನ್ನು ಹೇಳುವೆನು, ಕೇಳು. ಇದನ್ನು ಶ್ರದ್ಧೆಯಿಟ್ಟು ಕೇಳಿದ ಮಾತ್ರದಿಂದಲೇ ಪಾಪಿಯಾದ ಮನುಷ್ಯನೂ ಸಹ ತನ್ನ ಪಾತಕಗಳಿಂದ ಕ್ಷಣಮಾತ್ರದಲ್ಲಿಯೇ ಬಿಡುಗಡೆಯನ್ನು ಹೊಂದುವನು.

೪. ಕೇದಾರೇಶ್ವನಿರುವಲ್ಲಿಗೆ ಹೋಗಲಪೇಕ್ಷಿಸಿ ದೃಢಸಂಕಲ್ಪವನ್ನು ಮಾಡಿದ ಮಾತ್ರದಿಂದಲೇ ಮಾನವನಿಗೆ ಜನನದ ದಿನ ಮೊದಲಾಗಿ ಸಂಚಿತಗಳಾದ ಪಾಪಗಳೆಲ್ಲವೂ ನಿಮಿಷದಲ್ಲಿಯೇ ನಾಶವಾಗುವುವು.

ಗೃಹಾದ್ವಿನಿರ್ಗತೇ ಪುಂಸಿ ಕೇದಾರಮಭಿನಿಶ್ಚಿತಂ ।
ಜನ್ಮದ್ವಯಾರ್ಜಿತಂ ಪಾಪಂ ಶರೀರಾದಪಿ ನಿರ್ವ್ರಜೇತ್ ॥ ೫ ॥
ಮಧ್ಯೇಮಾರ್ಗಂ ಪ್ರಪನ್ನಸ್ಯ ತ್ರಿಜನ್ಮಜನಿತಂ ತ್ವಘಂ ।
ದೇಹಗೇಹಾದ್ವಿನಿಃಸೃತ್ಯ ನಿರಾಶಂ ಯಾತಿ ನಿಃಶ್ವಸತ್ ॥ ೬ ॥
ಸಾಯಂ ಕೇದಾರ ಕೇದಾರ ಕೇದಾರೇತಿ ತ್ರಿರುಚ್ಚರನ್ ।
ಗೃಹೇಽಪಿ ನಿವಸನ್ನೂನಂ ಯಾತ್ರಾಫಲಮವಾಪ್ನುಯಾತ್ ॥ ೭ ॥
ದೃಷ್ಟ್ವಾ ಕೇದಾರಶಿಖರಂ ಪೀತ್ವಾ ತತ್ರತ್ಯಮಂಬು ಚ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೮ ॥
ಹರಪಾಪಹ್ರದೇ ಸ್ನಾತ್ವಾ ಕೇದಾರೇಶಂ ಪ್ರಪೂಜ್ಯ ಚ ।
ಕೋಟಿಜನ್ಮಾರ್ಜಿತೈನೋಭಿರ್ಮುಚ್ಯತೇ ನಾತ್ರ ಸಂಶಯಃ ॥ ೯ ॥
ಸಕೃತ್ಪ್ರಣಮ್ಯ ಕೇದಾರಂ ಹರಪಾಪಕೃತೋದಕಃ ।
ಸ್ಥಾಪ್ಯ ಲಿಂಗಂ ಹೃದಂಭೋಜೇ ಪ್ರಾಂತೇ ಮೋಕ್ಷಂ ಗಮಿಷ್ಯತಿ ॥ ೧೦ ॥

---

೫. ಕೇದಾರೇಶ್ವರನನ್ನು ನೋಡಬೇಕೆಂಬ ನಿಶ್ಚಯದಿಂದ ಯಾವ ಮನುಷ್ಯನು ಮನೆಯನ್ನು ಬಿಟ್ಟು ಹೊರಡುವನೋ, ಅವನ ಎರಡು ಜನ್ಮಗಳ ಪಾತಕಗಳು ಶರೀರದಿಂದಲೂ ಸಹ ಬಿಟ್ಟು ತೊಲಗುವುವು.

೬. ಅರ್ಧಮಾರ್ಗವನ್ನು ದಾಟಿ ಬರುತ್ತಿರಲು ಮೂರು ಜನ್ಮಗಳಲ್ಲಿ ಸಂಪಾದಿಸಿದ ಪಾಪರಾಶಿಯೆಲ್ಲವೂ ಶರೀರವೆಂಬ ಮನೆಯಿಂದ ಹೊರಬಿದ್ದು ನಿರಾಶೆಯನ್ನು ಹೊಂದಿ ನಿಟ್ಟುಸಿರನ್ನು ಬಿಡುತ್ತ ಹೊರಟುಹೋಗುವುವು.

೭. ಪ್ರತಿದಿವಸದ ಸಾಯಂಕಾಲದಲ್ಲಿಯೂ ಕೇದಾರೇಶ್ವರನ ನಾಮವನ್ನು ಮೂರುಸಲ ಉಚ್ಚರಿಸುವುದರಿಂದ ತನ್ನ ಮನೆಯಲ್ಲಿಯೇ ಕುಳಿತಿರುವ ಭಕ್ತನೂ ಖಂಡಿತವಾಗಿ ಯಾತ್ರೆಯನ್ನು ಮಾಡಿದ ಫಲವನ್ನು ಪಡೆಯುವನು.

೮. ಕೇದಾರೇಶ್ವರದೇವಾಲಯದ ಗೋಪುರಾಗ್ರವನ್ನು ನೋಡುವುದರಿಂದಲೂ, ಸಮೀಪದಲ್ಲಿರುವ ತೀರ್ಥೋದಕವನ್ನು ಪಾನಮಾಡುವುದರಿಂದಲೂ ಏಳು ಜನ್ಮಗಳಲ್ಲಿ ಮಾಡಿದ ಪಾತಕಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲ.

೯. ಹರಪಾಪವೆಂಬ ಸರೋವರದಲ್ಲಿ ಸ್ನಾನವನ್ನು ಮಾಡಿ ಕೇದಾರೇಶ್ವರನನ್ನು ಪೂಜಿಸಿದ ಮನುಷ್ಯನು ಕೋಟಿ ಜನ್ಮಗಳಲ್ಲಿ ಶೇಖರಿಸಿದ ಸಕಲ ಪಾತಕಗಳಿಂದಲೂ ಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ.

೧೦. ಹರಪಾಪವೆಂಬ ತೀರ್ಥದಲ್ಲಿ ಸ್ನಾನಸಂಧ್ಯಾದಿ ಕೃತ್ಯಗಳನ್ನು ತೀರಿಸಿಕೊಂಡು ಒಮ್ಮೆಯಾದರೂ ಕೇದಾರೇಶ್ವರನಿಗೆ ಪ್ರಣಾಮವನ್ನು ಮಾಡಿ ಆ ಲಿಂಗದ ರೂಪವನ್ನು ಹೃದಯಕಮಲದಲ್ಲಿ ಭದ್ರವಾಗಿ ನೆಲೆಗೊಳಿಸಿಕೊಂಡಿರಲು ಯಾವ

ಹರಪಾಪಹ್ರದೇ ಶ್ರಾದ್ಧಂ ಶ್ರದ್ಧಯಾ ಯಃ ಕರಿಷ್ಯತಿ ।
ಉದ್ಧೃತ್ಯ ಸಪ್ತಪುರುಷಾನ್ಸ ಮೇ ಲೋಕಂ ಗಮಿಷ್ಯತಿ ॥ ೧೧ ॥
ಪುರಾ ರಾಥಂತರೇ ಕಲ್ಪೇ ಯದಭೂದತ್ರ ತಚ್ಛೃಣು ।
ಅಪರ್ಣೇ ದತ್ತಕರ್ಣಾ ತ್ವಂ ವರ್ಣಯಾಮಿ ತವಾಗ್ರತಃ ॥ ೧೨ ॥
ಏಕೋ ಬ್ರಾಹ್ಮಣದಾಯಾದ ಉಜ್ಜಯಿನ್ಯಾ ಇಹಾಗತಃ ।
ಕೃತೋಪನಯನಃ ಪಿತ್ರಾ ಬ್ರಹ್ಮಚರ್ಯವ್ರತೇ ಸ್ಥಿತಃ ॥ ೧೩ ॥
ಸ್ಥಲೀಂ ಪಾಶುಪತೀಂ ಕಾಶೀಂ ಸ ವಿಲೋಕ್ಯ ಸಮಂತತಃ ।
ದ್ವಿಜೈಃ ಪಾಶುಪತೈಃ ಕೀರ್ಣಾಂ ಜಟಾಮುಕುಟಭೂಷಿತೈಃ ॥ ೧೪ ॥
ಕೃತಲಿಂಗಸಮರ್ಚೈಶ್ಚ ಭೂತಿಭೂಷಿತವರ್ಷ್ಮಭಿಃ ।
ಭಿಕ್ಷಾಹೃತಾನ್ನಸಂತುಷ್ಟೈಃ ಪುಷ್ಟೈರ್ಗಂಗಾಮೃತೋದಕೈಃ ॥ ೧೫ ॥
ಬಭೂವಾನಂದಿತಮನಾ ವ್ರತಂ ಜಗ್ರಾಹ ಚೋತ್ತಮಂ ।
ಹಿರಣ್ಯಗರ್ಭಾದಾಚಾರ್ಯಾನ್ಮಹತ್ಪಾಶುಪತಾಭಿಧಂ ॥ ೧೬ ॥

---

ಮಾನವನಾದರೂ ದೇಹವನ್ನು ತ್ಯಾಗಮಾಡಿದ ಬಳಿಕ ಮೋಕ್ಷಪದವಿಯನ್ನೇ ಹೊಂದುವನು.

೧೧. ಹರಪಾಪತೀರ್ಥದಲ್ಲಿ ಯಾವನು ಶ್ರದ್ಧಾಭಕ್ತಿಯುಕ್ತನಾಗಿ ಪಿತೃಶ್ರಾದ್ಧಗಳನ್ನು ಮಾಡುವನೊ, ಅವನು ಸಪ್ತಪಿತೃಗಳನ್ನೂ ಉದ್ಧರಿಸುವನಲ್ಲದೆ ತಾನೂ ನನ್ನ ಲೋಕವಾದ ಕೈಲಾಸವನ್ನು ಸೇರುವನು.

೧೨. ದೇವಿಯೇ! ಹಿಂದೆ ರಥಂತರಕಲ್ಪದಲ್ಲಿ ನಡೆದ ಒಂದು ವಿಶೇಷವನ್ನು ನಿನ್ನ ಸಮ್ಮುಖದಲ್ಲಿ ನಿರೂಪಿಸುವೆನು. ನೀನು ಕಿವಿಗೊಟ್ಟು ಅದನ್ನು ಆಲಿಸುವವಳಾಗು.

೧೩. ಒಬ್ಬಾನೊಬ್ಬ ಬ್ರಾಹ್ಮಣಕುಮಾರಕನು ಉಜ್ಜಯಿನೀನಗರದಿಂದ ಇಲ್ಲಿಗೆ ಬಂದನು. ಆತನು ತಂದೆಯಿಂದ ಉಪನಯನ ಸಂಸ್ಕಾರವನ್ನು ಪಡೆದು ಬ್ರಹ್ಮಚರ್ಯಾಶ್ರಮದ ನಿಯಮಗಳನ್ನು ಪಾಲಿಸುತ್ತಿದ್ದನು.

೧೪–೧೫. ಪಶುಪತಿಗೆ ಪ್ರಿಯನಿವಾಸವಾದ ಕಾಶೀಕ್ಷೇತ್ರವನ್ನು ಅವನು ಆಮೂಲಾಗ್ರವಾಗಿ ನೋಡಿಕೊಂಡು ಬಂದನು. ಆ ಕ್ಷೇತ್ರವು ಜಟಾಮುಕುಟಗಳಿಂದಲಂಕೃತರಾಗಿ ಮಹೇಶ್ವರನ ಭಕ್ತರಾದ ಬ್ರಾಹ್ಮಣೋತ್ತಮರಿಂದ ಕಿಕ್ಕಿರಿದಿದ್ದಿತು. ಅವರೆಲ್ಲರೂ ಲಿಂಗಾರ್ಚನೆಗಳನ್ನು ಮಾಡುತ್ತಿದ್ದರು. ವಿಭೂತಿಯಿಂದ ತಮ್ಮ ದೇಹಗಳನ್ನಲಂಕರಿಸಿಕೊಂಡಿದ್ದರು. ಭಿಕ್ಷೆಯಿಂದ ಲಭಿಸಿದ ಅನ್ನದಿಂದಲೇ ಸಂತುಷ್ಟರಾಗಿ ಗಂಗಾನದಿಯ ಉದಕದಿಂದಲೇ ದೇಹಪೋಷಣೆಯನ್ನುಂಟುಮಾಡಿಕೊಳ್ಳುತ್ತಿದ್ದರು.

೧೬. ಅವರನ್ನು ಕಂಡು ಆ ಬ್ರಾಹ್ಮಣಕುವರನು ಆನಂದಭರಿತಾಂತರಂಗ

ಸ ಚ ಶಿಷ್ಯೋ ವಶಿಷ್ಠೋಽಭೂತ್ಸರ್ವಪಾಶುಪತೋತ್ತಮಃ ।
ಸ್ನಾತ್ವಾ ಹ್ರದೇ ಹರಪಾಪೇ ನಿತ್ಯಂ ಪ್ರಾತಃ ಸಮುತ್ಥಿತಃ ॥ ೧೭ ॥
ವಿಭೂತ್ಯಾಹರಹಃ ಸ್ನಾತಿ ತ್ರಿಕಾಲಂ ಲಿಂಗಮರ್ಚಯನ್ ।
ನಾಂತರಂ ಸ ವಿಜಾನಾತಿ ಶಿವಲಿಂಗೇ ಗುರೌ ತಥಾ ॥ ೧೮ ॥
ಸ ದ್ವಾದಶಾಬ್ದದೇಶೀಯೋ ವಶಿಷ್ಠೋ ಗುರುಣಾ ಸಹ ।
ಯಯೌ ಕೇದಾರಯಾತ್ರಾರ್ಥಂ ಗಿರಿಂ ಗೌರೀಗುರೋರ್ಗುರುಂ ॥ ೧೯ ॥
ಯತ್ರ ಗತ್ವಾ ನ ಶೋಚಂತಿ ಕಿಂಚಿತ್ಸಂಸಾರಿಣಃ ಕ್ವಚಿತ್ ।
ಪ್ರಾಶ್ಯೋದಕಂ ಲಿಂಗರೂಪಂ ಲಿಂಗರೂಪತ್ವಮಾಗತಾಃ ॥ ೨೦ ॥
ಅಸಿಧಾರಂ ಗಿರಿಂ ಪ್ರಾಪ್ಯ ವಶಿಷ್ಠಸ್ಯ ತಪಸ್ವಿನಃ ।
ಗುರುರ್ಹಿರಣ್ಯಗರ್ಭಾಖ್ಯಃ ಪಂಚತ್ವಮಗಮತ್ತದಾ ॥ ೨೧ ॥
ಪಶ್ಯತಾಂ ತಾಪಸಾನಾಂ ಚ ವಿಮಾನೇ ಸಾರ್ವಕಾಮಿಕೇ ।
ಆರೋಪ್ಯ ತಂ ಪಾರಿಷದಾಃ ಕೈಲಾಸಮನಯನ್ಮುದಾ ॥ ೨೨ ॥

---

ನಾಗಿ ಹಿರಣ್ಯಗರ್ಭನೆಂಬ ಆಚಾರ್ಯನಿಂದ ಮಹಾಪಾಶುಪತವೆಂಬ ಹೆಸರಿನ ಉತ್ತಮವಾದ ವ್ರತವನ್ನು ಸ್ವೀಕರಿಸಿದನು.

೧೭. ಆ ಶಿಷ್ಯನು ಇಂದ್ರಿಯನಿಗ್ರಹಪರನಾಗಿ ಸಕಲ ಮಾಹೇಶ್ವರರಲ್ಲಿಯೂ ಉತ್ತಮನೆನಿಸಿಕೊಂಡಿದ್ದನು. ನಿತ್ಯವೂ ಉಷಃಕಾಲದಲ್ಲೆದ್ದು ಹರಪಾಪವೆಂಬ ತೀರ್ಥದಲ್ಲಿ ಸ್ನಾನವನ್ನು ಮಾಡುತ್ತಿದ್ದನು.

೧೮. ಅಲ್ಲದೆ ಪ್ರತಿದಿನದಲ್ಲಿಯೂ ವಿಭೂತಿಯಿಂದಲೂ ಸ್ನಾನವನ್ನು ಮಾಡುತ್ತ ಲಿಂಗವನ್ನು ಪೂಜಿಸುತ್ತಿದ್ದನು. ಅವನು ಶಿವಲಿಂಗಕ್ಕೂ ಗುರುವಿಗೂ ಸ್ವಲ್ಪವೂ ಭೇದವನ್ನು ಮನಸ್ಸಿನಲ್ಲಿ ನೆನಸಿರಲಿಲ್ಲ.

೧೯. ವಶಿಷ್ಠನಾಮಕನಾದ ಆ ಬ್ರಾಹ್ಮಣಪುತ್ರನು ಹನ್ನೆರಡುವರ್ಷದ ಬಾಲಕನಾಗಿದ್ದರೂ ಸಹ ಒಮ್ಮೆ ತನ್ನ ಗುರುವಿನೊಡನೆ ಗೌರೀನಾಥನಿಗೆ ನಿವಾಸವೆನಿಸಿದ ಮಹಾಗಿರಿಯಾದ ಕೇದಾರಕ್ಷೇತ್ರಕ್ಕೆ ಯಾತ್ರೆಯನ್ನು ಮಾಡಬೇಕೆಸಿ ಹೊರಟನು.

೨೦. ಅಲ್ಲಿ ಹೋದ ಸಂಸಾರಿಗಳು ಯಾರೂ ಯಾವ ವಿಷಯದಲ್ಲಿಯೂ ಎಂದಿಗೂ ದುಃಖವನ್ನು ಹೊಂದುವುದಿಲ್ಲ. ಲಿಂಗರೂಪವಾದ ಅಲ್ಲಿರುವ ತೀರ್ಥೋದಕವನ್ನು ಪಾನಮಾಡಲು ಲಿಂಗದ ರೂಪವನ್ನೇ ಹೊಂದುವರು.

೨೧. ಇಂತು ಅವರು ಅಸಿಧಾರಪರ್ವತವನ್ನು ಸೇರುವವರೆಗೂ ಪ್ರಯಾಣ ಮಾಡಿದರು. ಅಲ್ಲಿ ತಪಸ್ಸಂಪನ್ನನಾದ ವಶಿಷ್ಠನ ಗುರುವಾದ ಹಿರಣ್ಯಗರ್ಭನೆಂಬ ಆಚಾರ್ಯನು ಕಾಲವೊದಗಿದುದರಿಂದ ಅಲ್ಲಿಯೇ ದೇಹವನ್ನು ತ್ಯಜಿಸಿದನು.

೨೨. ಸಂಗಡಲೇ ಬಂದಿದ್ದ ತಾಪಸರೆಲ್ಲರೂ ನೋಡುತ್ತಿರುವಂತೆಯೇ

ಯಸ್ತು ಕೇದಾರಮುದ್ದಿಶ್ಯ ಗೇಹಾದರ್ಧೇ ಪಥೇಽಪ್ಯಹೋ ।
ಅಕಾತರಸ್ತ್ಯಜೇತ್ಪ್ರಾಣಾನ್ಕೈಲಾಸೇ ಸ ಚಿರಂ ವಸೇತ್ ॥ ೨೩ ॥
ತದಾಶ್ಚರ್ಯಂ ಸಮಾಲೋಕ್ಯ ಸ ವಶಿಷ್ಠಸ್ತಪೋಧನಃ ।
ಕೇದಾರಮೇವ ಲಿಂಗೇಷು ಬಹ್ವಮಂಸ್ತ ಸುನಿಶ್ಚಿತಂ ॥ ೨೪ ॥
ಅಥ ಕೃತ್ವಾ ಸ ಕೈದಾರೀಂ ಯಾತ್ರಾಂ ವಾರಾಣಸೀಮಗಾತ್ ।
ಅಗ್ರಹೀನ್ನಿಯಮಂ ಚಾಪಿ ಯಥಾರ್ಥಂ ಚಾಕರೋತ್ತಪಃ ॥ ೨೫ ॥
ಪ್ರತಿಚೈತ್ರಂ ಸದಾ ಚೈತ್ರ್ಯಾಂ ಯಾವಜ್ಜೀವಮಹಂ ಧ್ರುವಂ ।
ವಿಲೋಕಯಿಷ್ಯೇ ಕೇದಾರಂ ವಸನ್ವಾರಾಣಸೀಂ ಪುರೀಂ ॥ ೨೬ ॥
ತೇನ ಯಾತ್ರಾಃ ಕೃತಾಃ ಸಮ್ಯಕ್ಷಷ್ಠಿರೇಕಾಧಿಕಾ ಮುದಾ ।
ಆನಂದಕಾನನೇ ನಿತ್ಯಂ ವಸತಾ ಬ್ರಹ್ಮಚಾರಿಣಾ ॥ ೨೭ ॥
ಪುನರ್ಯಾತ್ರಾಂ ಸ ವೈ ಚಕ್ರೇ ಮಧೌ ನಿಕಟವರ್ತಿನಿ ।
ಪರಮೋತ್ಸಾಹಸಂತುಷ್ಟಃ ಪಲಿತಾಕಲಿತೋಽಪ್ಯಹೋ ॥ ೨೮ ॥

---

ಮಹೇಶ್ವರನ ಗಣನಾಯಕರು ಸಮಸ್ತ ಭೋಗಗಳಿಂದೊಡಗೂಡಿದ ವಿಮಾನ ವೊಂದರಲ್ಲಿ ಆತನನ್ನು ಆದರದಿಂದ ಕುಳ್ಳಿರಿಸಿ ಸಂತೋಷದಿಂದ ಕೈಲಾಸಕ್ಕೆ ಕರೆದುಕೊಂಡು ಹೋದರು.

೨೩. ಯಾವನು ಕೇದಾರಕ್ಷೇತ್ರವನ್ನುದ್ದೇಶಿಸಿ ಮನೆಯಿಂದ ಹೊರಟು ಅರ್ಧಮಾರ್ಗದಲ್ಲಿಯೇ ಸಮಾಹಿತಮನಸ್ಸಿನಿಂದ ಪ್ರಾಣಗಳನ್ನು ಬಿಡುವನೊ, ಅವನೂ ಸಹ ಕೈಲಾಸದಲ್ಲಿ ಬಹುಕಾಲದವರೆಗೂ ವಾಸಮಾಡುವನು.

೨೪. ಈ ಆಶ್ಚರ್ಯವನ್ನು ಕಣ್ಣಾರೆಕಂಡ ವಶಿಷ್ಠನೆಂಬ ತಪೋಧನ ನಾದರೋ ಸಕಲಲಿಂಗಗಳಲ್ಲಿಯೂ, ಕೇದಾರೇಶ್ವರ ಲಿಂಗವನ್ನೇ ಸರ್ವೋತ್ತಮ ವೆಂಬುದನ್ನಾಗಿ ತಿಳಿದನು.

೨೫. ಬಳಿಕ ಅವನು ಯಥಾವಿಧಿಯಾಗಿ ಕೇದಾರೇಶ್ವರನ ಯಾತ್ರೆಯನ್ನು ಮುಗಿಸಿಕೊಂಡು ಹಿಂದಿರುಗಿದನು. ಮುನ್ನಿನಂತೆಯೇ ನಿಯಮವನ್ನು ಸ್ವೀಕರಿಸಿ ಯಥಾಕಾಲಗಳಲ್ಲಿ ಶಿವಪೂಜಾದಿಗಳನ್ನು ಮಾಡುತ್ತಿದ್ದನು.

೨೬. "ಪ್ರತಿವರ್ಷದಲ್ಲಿಯೂ ಚೈತ್ರಮಾಸದ ಪೌರ್ಣಮಿಯ ದಿನದಲ್ಲಿ ನಾನು ಜೀವವಿರುವವರೆಗೂ ಕಾಶಿಯಲ್ಲಿಯೇ ನೆಲಸಿ ಕೇದಾರಕ್ಷೇತ್ರದ ಯಾತ್ರೆ ಯನ್ನು ಮಾಡಿ ಕೇದಾರೇಶ್ವರನನ್ನು ದರ್ಶನಮಾಡಿಕೊಂಡು ಬರುವೆನು" ಎಂದು ನಿಯಮವನ್ನು ಮಾಡಿಕೊಂಡನು.

೨೭. ಈ ನಿಯಮಕ್ಕೆ ತಕ್ಕಂತೆ ಅವನು ಸಂತೋಷದಿಂದ ಸಾಂಗವಾಗಿ ಅರುವತ್ತೊಂದು ಯಾತ್ರೆಗಳನ್ನು ನೆರವೇರಿಸಿದನು. ಆದರೂ ಬ್ರಹ್ಮಚಾರಿ ಯಾಗಿಯೇ ಇದ್ದು ಯಾವಾಗಲೂ ಆನಂದಕಾನನದಲ್ಲಿ ವಾಸಮಾಡುತ್ತಿದ್ದನು.

೨೮. ಇಂತು ವಯಸ್ಸಿನ ಆಧಿಕ್ಯದಿಂದ ತಲೆಗೂದಲುಗಳು ಕಳೆದಿದ್ದರೂ

ತಪೋಧನೈಸ್ತನ್ನಿಧನಂ ಶಂಕಮಾನೈರ್ನಿವಾರಿತಃ ।
ಕಾರುಣ್ಯಪೂರ್ಣಹೃದಯೈರನ್ಯೈರಪಿ ಚ ಸಂಗಿಭಿಃ ॥ ೨೯ ॥
ತತೋಽಪಿ ನ ತದುತ್ಸಾಹಭಂಗೋಽಭೂದ್ದೃಢಚೇತಸಃ ।
ಮಧ್ಯೇಮಾರ್ಗಂ ಮೃತಸ್ಯಾಪಿ ಗುರೋರಿವ ಗತಿರ್ಮಮ ॥ ೩೦ ॥
ಇತಿ ನಿಶ್ಚಿತಚೇತಸ್ಕೇ ವಶಿಷ್ಠೇ ತಾಪಸೇ ಶುಚೌ ।
ಅಶೂದ್ರಾನ್ನಪರೀಪುಷ್ಟೇ ತುಷ್ಟೋಽಹಂ ಚಂಡಿಕೇಽಭವಂ ॥ ೩೧ ॥
ಸ್ವಪ್ನೇ ಮಯಾ ಸ ಸಂಪ್ರೋಕ್ತೋ ವಶಿಷ್ಠಸ್ತಾಪಸೋತ್ತಮಃ ।
ದೃಢವ್ರತ ಪ್ರಸನ್ನೋಽಸ್ಮಿ ಕೇದಾರಂ ವಿದ್ಧಿ ಮಾಮಿಹ ॥ ೩೨ ॥
ಅಭೀಷ್ಟಂ ಚ ವರಂ ಮತ್ತಃ ಪ್ರಾರ್ಥಯಸ್ವಾವಿಚಾರಿತಂ ।
ಇತ್ಯುಕ್ತವತ್ಯಪಿ ಮಯಿ ಸ್ವಪ್ನೇ ಮಿಥ್ಯೇತಿ ಸೋಽಬ್ರವೀತ್ ॥ ೩೩ ॥
ತತೋಽಪಿ ಸ ಮಯಾ ಪ್ರೋಕ್ತಃ ಸ್ವಪ್ನೇ ಮಿಥ್ಯಾಽಶುಚಿಷ್ಮತಾಂ ।
ಭವಾದೃಶಾನುಮಿಥ್ಯೈವ ಸ್ವಾಖ್ಯಾಸದೃಶವರ್ತಿನಾಂ ॥ ೩೪ ॥

ಸಂತೋಷದಿಂದಲೂ ಮಹೋತ್ಸಾಹದಿಂದಲೂ ಕೂಡಿದವನಾಗಿ ಮತ್ತೊಮ್ಮೆ ಚೈತ್ರಮಾಸವು ಸಮಿಾಪಿಸಲು ಯಾತ್ರೆಯನ್ನು ಮಾಡಲು ಹೊರಟನು.

೨೯. ಯಾತ್ರೆಯ ಆಯಾಸದಿಂದ ಈ ಸಲ ಈತನು ದೇಹವನ್ನು ತ್ಯಜಿಸುವ ನೆಂಬ ಶಂಕೆಯಿಂದ ಕರುಣಾಪೂರ್ಣಹೃದಯರಾದ ತಪೋಧನರೂ ಇತರ ಯಾತ್ರಿಕರೂ ಬಹುವಿಧವಾಗಿ ಅವನನ್ನು ತಡೆಯಲು ಪ್ರಯತ್ನಿಸಿದರು.

೩೦. ಆದರೂ ದೃಢಚಿತ್ತನಾದ ಆತನಿಗೆ ಉತ್ಸಾಹಭಂಗವಾಗಲಿಲ್ಲ. ಅವರನ್ನು ಕುರಿತು 'ಮಧ್ಯಮಾರ್ಗದಲ್ಲಿಯೇ ನನಗೆ ಮರಣವುಂಟಾದರೆ ನನಗೂ ನನ್ನ ಗುರುಗಳಿಗೆ ಸಿಕ್ಕಿದ ಸದ್ಗತಿಯೇ ಲಭಿಸುವುದಲ್ಲವೆ'' ಎಂದು ಹೇಳಿದನು.

೩೧. ಎಲೌ ಪಾರ್ವತಿಯೆ! ಇಂತೆಂದು ನಿಶ್ಚಿತವಾದ ಮನಸ್ಸುಳ್ಳವನೂ, ತಪಸ್ಸಂಪನ್ನನೂ, ಪರಿಶುದ್ಧನೂ, ಶೂದ್ರಾನ್ನವನ್ನು ತ್ಯಜಿಸಿಯೇ ದೇಹಧಾರಣೆಯನ್ನು ಮಾಡಿಕೊಂಡವನೂ ಆದ ಆ ವಶಿಷ್ಠಬ್ರಾಹ್ಮಣನ ವಿಷಯದಲ್ಲಿ ನಾನು ಅತ್ಯಂತಸಂತೋಷಗೊಳ್ಳುವವನಾದೆನು.

೩೨. ಅಲ್ಲದೆ ನಾನು ಸ್ವಪ್ನದಲ್ಲಿ ಆತನಿಗೆ ಪ್ರಸನ್ನನಾಗಿ ಇಂತೆಂದು ಹೇಳಿದೆನು. ''ತಾಪಸೋತ್ತಮನೆ! ದೃಢವ್ರತನೆ! ನಾನು ನಿನ್ನಲ್ಲಿ ಪ್ರಸನ್ನನಾಗಿರುವೆನು. ಕೇದಾರೇಶ್ವರನೇ ಇಲ್ಲಿ ಬಂದಿರುವೆನೆಂಬುದನ್ನು ತಿಳಿದುಕೊ.

೩೩. ಆದುದರಿಂದ ನೀನು ಚೆನ್ನಾಗಿ ವಿಚಾರಮಾಡಿ ನನ್ನ ಕಡೆಯಿಂದ ನಿನಗೆ ಬೇಕಾದ ವರವನ್ನು ಪ್ರಾರ್ಥನೆಮಾಡು.'' ಇಂತೆಂದು ನಾನು ಪ್ರತ್ಯಕ್ಷನಾಗಿ ಹೇಳಿದರೂ ಆತನು ಸ್ವಪ್ನವೆಲ್ಲವೂ ಮಿಥ್ಯಾಪ್ರಪಂಚವೆಂದು ಹೇಳಿದನು.

೩೪. ಆತನಿಗೆ ನಾನು ಪುನಃ ಕಾಣಿಸಿಕೊಂಡು ಹೇಳಿದೆನು. ''ಎಲೈ

ವರಂ ಬ್ರೂಹಿ ಪ್ರಸನ್ನೋಽಸ್ಮಿ ಸ್ವಪ್ನಶಂಕಾಂ ತ್ಯಜ ದ್ವಿಜ ।
ತವ ಸತ್ವವತಃ ಕಿಂಚಿನ್ಮಯಾಽದೇಯಂ ನ ಕಿಂಚನ ॥ ೩೫ ॥
ಇತ್ಯುಕ್ತಂ ಮೇ ಸಮಾಕರ್ಣ್ಯ ವರಯಾಮಾಸ ಮಾಮಿತಿ ।
ಶಿಷ್ಯೋ ಹಿರಣ್ಯಗರ್ಭಸ್ಯ ತಪಸ್ವಿಜನಸತ್ತಮಃ ॥ ೩೬ ॥
ಯದಿ ಪ್ರಸನ್ನೋ ದೇವೇಶ ತದಾ ಮೇ ಸಾನುಗಾ ಇಮೇ ।
ಸರ್ವೇ ಶೂಲಿನ್ನನುಗ್ರಾಹ್ಯಾ ಏಷ ಏವ ವರೋ ಮಮ ॥ ೩೭ ॥
ದೇವಿ ತಸ್ಯೇದಮಾಕರ್ಣ್ಯ ಪರೋಪಕೃತಿಶಾಲಿನಃ ।
ವಚನಂ ನಿತರಾಂ ಪ್ರೀತಸ್ತಥೇತಿ ತಮುವಾಚ ಹ ॥ ೩೮ ॥
ಪುನಃ ಪರೋಪಕರಣಾತ್ತತ್ತಪೋ ದ್ವಿಗುಣೀಕೃತಂ ।
ತೇನ ಪುಣ್ಯೇನ ಸ ಮಯಾ ಪುನಃ ಪ್ರೋಕ್ತೋ ವರಂ ವೃಣು ॥ ೩೯ ॥

---

ಬ್ರಾಹ್ಮಣೋತ್ತಮನೆ! ಶೌಚಾಚಾರವರ್ಜಿತರಾದವರಿಗೆ ಸ್ವಪ್ನದ ದೃಶ್ಯಗಳು ಮಿಥ್ಯಾಭೂತಗಳೆಂಬುದು ನಿಜ. ಆದರೆ ಬ್ರಾಹ್ಮಣರೆಂಬ ಹೆಸರಿಗೆ ತಕ್ಕಂತೆ ನಡೆದುಕೊಳ್ಳುತ್ತಿರುವ ನಿನ್ನಂತಹ ಸತ್ಪುರುಷರಿಗೆ ಸ್ವಪ್ನಗಳೂ ಮಿಥ್ಯಾ ವಿಷಯ ದ್ಯೋತಕಗಳಲ್ಲವೆಂಬುದನ್ನು ತಿಳಿ.

೩೫. ಓ ಬ್ರಾಹ್ಮಣೋತ್ತಮ! ನಿನಗೆ ಬೇಕಾದ ವರವನ್ನು ಕೇಳಿಕೊ. ನಾನು ಪ್ರಸನ್ನನಾಗಿರುವೆನು. ಇದು ಸ್ವಪ್ನವೆಂಬ ಸಂದೇಹವನ್ನು ದೂರ ಮಾಡು. ಸಾತ್ವಿಕೋತ್ತಮನಾದ ನಿನಗೆ ನಾನು ಕೊಡಬಾರದ ವಸ್ತುವು ಯಾವುದೂ ಇಲ್ಲ.''

೩೬. ಇಂತೆಂದು ನಾನು ಹೇಳಿದ ಮಾತುಗಳನ್ನು ಕೇಳಿ ಹಿರಣ್ಯಗರ್ಭನ ಶಿಷ್ಯನೂ ತಪೋನಿಷ್ಠರಲ್ಲಿ ಅಗ್ರೇಸರನೂ ಆದ ಆ ವಶಿಷ್ಠಬ್ರಾಹ್ಮಣನು ನನ್ನನ್ನು ಕುರಿತು ವರವನ್ನು ಬೇಡುವವನಾದನು.

೩೭. ''ದೇವೇಶ್ವರನೆ! ತ್ರಿಶೂಲಧಾರಿಯೆ! ನೀನು ನನ್ನಲ್ಲಿ ಪ್ರಸನ್ನನಾಗಿರುವುದೇ ನಿಜವಾದರೆ ನನ್ನ ಸಂಗಡವಿರುವ ಎಲ್ಲರಿಗೂ ಅನುಗ್ರಹವನ್ನು ಮಾಡು. ಇದೊಂದೇ ನನಗೆ ಅಭೀಪ್ಸಿತವಾದ ವರವಾಗಿರುವುದು.

೩೮. ಎಲೌ ದೇವಿಯೆ! ಕೇವಲ ಪರೋಪಕಾರಬುದ್ಧಿಯಿಂದಲೇ ಆಡಿದ ಆತನ ಮಾತನ್ನು ಕೇಳಿ ನಾನು ಆತನ ಸೌಜನ್ಯಕ್ಕೆ ಅತ್ಯಂತ ಸಂತೋಷವನ್ನು ಹೊಂದಿ ''ನೀನು ಬೇಡಿದಂತೆಯೇ ಆಗಲಿ'' ಎಂಬುದಾಗಿ ಅನುಗ್ರಹಿಸಿದೆನು.

೩೯. ಮತ್ತೂ ಅಧಿಕವಾದ ಪರೋಪಕಾರವನ್ನು ಮಾಡಲೆಳಸಿ ಆತನು ಹಿಂದಿನದಕ್ಕಿಂತ ಎರಡರಷ್ಟು ಕಠೋರವಾದ ತಪಸ್ಸನ್ನು ಮಾಡಿದನು. ಆದರ ಫಲವಾಗಿ ಪುನಃ ನಾನು ಪ್ರತ್ಯಕ್ಷವಾಗಿ ''ವರವನ್ನು ಕೇಳಿಕೊ'' ಎಂದು ಹೇಳಿದೆನು.

ಸ ವಶಿಷ್ಠೋ ಮಹಾಪ್ರಾಜ್ಞೋ ದೃಢಪಾಶುಪತವ್ರತಃ ।
ದೇವಿ ಮೇ ಪ್ರಾರ್ಥಯಾಮಾಸ ಹಿಮಶೈಲಾದಿಹ ಸ್ಥಿತಿಂ ॥ ೪೦ ॥
ತತಸ್ತತ್ತಪಸಾಕೃಷ್ಟಃ ಕಲಾಮಾತ್ರೇಣ ತತ್ರ ಹಿ ।
ಹಿಮಶೈಲೇ ತತಶ್ಚಾತ್ರ ಸರ್ವಭಾವೇನ ಸಂಸ್ಥಿತಃ ॥ ೪೧ ॥
ತತಃ ಪ್ರಭಾತೇ ಸಂಜಾತೇ ಸರ್ವೇಷಾಂ ಪಶ್ಯತಾಮಹಂ ।
ಹಿಮಾದ್ರೇಃ ಪ್ರಸ್ಥಿತಃ ಪ್ರಾಪ್ತಃ ಸ್ತೂಯಮಾನಃ ಸುರರ್ಷಿಭಿಃ ॥ ೪೨ ॥
ವಶಿಷ್ಠಂ ಪುರತಃ ಕೃತ್ವಾ ಸರ್ವಸಾರ್ಥಸಮಾಯುತಂ ।
ಹರಪಾಪಹ್ರದೇ ತೀರ್ಥೇ ಸ್ಥಿತೋಽಹಂ ತದನುಗ್ರಹಾತ್ ॥ ೪೩ ॥
ಮತ್ಪರಿಗ್ರಹತಃ ಸರ್ವೇ ಹರಪಾಪೇ ಕೃತೋದಕಾಃ ।
ಆರಾಧ್ಯ ಮಾಮನೇನೈವ ವಪುಷಾ ಸಿದ್ಧಿಮಾಗತಾಃ ॥ ೪೪ ॥
ತದಾಪ್ರಭೃತಿ ಲಿಂಗೇಽಸ್ಮಿನ್ಸ್ಥಿತಃ ಸಾಧಕಸಿದ್ಧಯೇ ।
ಅವಿಮುಕ್ತೇ ಪರೇ ಕ್ಷೇತ್ರೇ ಕಲಿಕಾಲೇ ವಿಶೇಷತಃ ॥ ೪೫ ॥

---

೪೦. ಪಾರ್ವತಿಯೆ ! ಮಹಾಪ್ರಾಜ್ಞನೂ ದೃಢವಾದ ಪಾಶುಪತವ್ರತದಲ್ಲಿ ನಿರತನೂ ಆದ ಆ ವಶಿಷ್ಠನು ನಾನು ಹಿಮಾಚಲಪ್ರದೇಶವನ್ನು ತ್ಯಜಿಸಿ ಕಾಶೀ ಕ್ಷೇತ್ರದಲ್ಲಿಯೇ ನೆಲಸಿರಬೇಕೆಂದು ಪ್ರಾರ್ಥನೆ ಮಾಡಿದನು.

೪೧. ಆಗ ಆತನ ತಪಸ್ಸಿನಿಂದ ಸೆಳೆಯಲ್ಪಟ್ಟ ನಾನು ಹಿಮಾಚಲದ ಕೇದಾರಕ್ಷೇತ್ರದಲ್ಲಿ ನನ್ನ ಕಲಾಮಾತ್ರವನ್ನು ಬಿಟ್ಟು ಸರ್ವಭಾವದಿಂದ ಆನಂದ ಕಾನನಕ್ಷೇತ್ರದಲ್ಲಿಯೇ ಆವಿರ್ಭವಿಸಿರುವನಾದೆನು.

೪೨. ಬಳಿಕ ಪ್ರಾತಃಕಾಲವಾಗಲು ನಾನು ದೇವತೆಗಳಿಂದಲೂ ಮಹರ್ಷಿಗಳಿಂದಲೂ ಸ್ತೋತ್ರಗಳನ್ನು ಕೇಳುತ್ತ ಹಿಮಾಚಲವನ್ನು ಬಿಟ್ಟು ಹೊರಟು ಸಕಲ ಜನರೂ ನೋಡುತ್ತಿರುವಂತೆಯೇ ಕಾಶಿಯನ್ನು ಸೇರಿದೆನು.

೪೩. ಸಮಸ್ತ ಪರಿವಾರದೊಡನೆ ಕೂಡಿದ ವಶಿಷ್ಠಬ್ರಾಹ್ಮಣನನ್ನೇ ಮುಂದಿಟ್ಟುಕೊಂಡು ಬಂದು ಹರಪಾಪಸರೋವರವೆಂಬ ಈ ಉತ್ತಮ ತೀರ್ಥದ ಬಳಿಯಲ್ಲಿಯೇ ಆತನನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದ ನೆಲಸಿರುವೆನು.

೪೪. ನನ್ನ ಅನುಗ್ರಹದಿಂದ ವಶಿಷ್ಠನ ಸಂಗಡವಿದ್ದ ಬ್ರಾಹ್ಮಣರೆಲ್ಲರೂ ಹರಪಾಪತೀರ್ಥದಲ್ಲಿ ಸ್ನಾನಾಹ್ನಿಕಗಳನ್ನು ಮಾಡಿಕೊಂಡು ನನ್ನನ್ನು ಪೂಜಿಸಿ ತಮ್ಮ ಪಾರ್ಥಿವ ದೇಹಗಳಿಂದಲೇ ಪರಮಪದವಿಯನ್ನು ಪಡೆಯುವವರಾದರು.

೪೫. ಮೊದಲಾಗಿ ನಾನು ಸಾಧಕರಿಗೆ ಸಿದ್ಧಿಗಳನ್ನು ಕೊಡುತ್ತ ಅವಿಮುಕ್ತವೆಂಬ ಈ ಮಹಾಕ್ಷೇತ್ರದಲ್ಲಿರುವೆನು. ವಿಶೇಷವಾಗಿ ಕಲಿಕಾಲದಲ್ಲಿ ಈ ಕೇದಾರೇಶ್ವರಲಿಂಗದಲ್ಲಿಯೇ ಸನ್ನಿಹಿತನಾಗಿರುವೆನು.

ತುಷಾರಾದ್ರಿಂ ಸಮಾರುಹ್ಯ ಕೇದಾರಂ ವೀಕ್ಷ್ಯ ಯತ್ಫಲಂ ।
ತತ್ಫಲಂ ಸಪ್ತಗುಣಿತಂ ಕಾಶ್ಯಾಂ ಕೇದಾರದರ್ಶನೇ ॥ ೪೬ ॥
ಗೌರೀಕುಂಡಂ ಯಥಾ ತತ್ರ ಹಂಸತೀರ್ಥಂ ಚ ನಿರ್ಮಲಂ ।
ಯಥಾ ಮಧುಸ್ರವಾ ಗಂಗಾ ಕಾಶ್ಯಾಂ ತದಖಿಲಂ ತಥಾ ॥ ೪೭ ॥
ಇದಂ ತೀರ್ಥಂ ಹರೇತ್ಪಾಪಂ ಸಪ್ತಜನ್ಮಾಘನಾಶನಂ ।
ಗಂಗಾಯಾಂ ಮಿಲಿತಂ ಪಶ್ಚಾಜ್ಜನ್ಮಕೋಟಿಕೃತಾಘಹಂ ॥ ೪೮ ॥
ಅತ್ರ ಪೂರ್ವಂ ತು ಕಾಕೌದ್ವೌ ಯುಧ್ಯಂತೌ ಖಾನ್ನಿಪೇತತುಃ ।
ಪಶ್ಯತಾಂ ತತ್ರ ಸಂಸ್ಥಾನಾಂ ಹಂಸೌ ಭೂತ್ವಾ ವಿನಿರ್ಗತೌ ॥ ೪೯ ॥
ಗೌರಿ ತ್ವಯಾ ಕೃತಂ ಪೂರ್ವಂ ಸ್ನಾನಮತ್ರ ಮಹಾಹ್ರದೇ ।
ಗೌರೀತೀರ್ಥಂ ತತಃ ಖ್ಯಾತಂ ಸರ್ವತೀರ್ಥೋತ್ತಮೋತ್ತಮಂ ॥ ೫೦ ॥
ಅತ್ರಾಮೃತಸ್ರವಾ ಗಂಗಾ ಮಹಾಮೋಹಾಂಧಕಾರಹೃತ್ ।
ಅನೇಕಜನ್ಮಜನಿತಜಾಡ್ಯಧ್ವಂಸವಿಧಾಯಿನೀ ॥ ೫೧ ॥

---

೪೬. ಹಿಮಾಚಲವನ್ನೇರಿ ಕೇದಾರೇಶ್ವರಲಿಂಗವನ್ನು ನೋಡಿದುದರಿಂದ ಯಾವ ಫಲವು ಲಭಿಸುವುದೊ, ಅದಕ್ಕೆ ಏಳುಮಡಿಯಾದ ಪುಣ್ಯವು ಕಾಶಿಯಲ್ಲಿರುವ ಕೇದಾರಲಿಂಗದ ದರ್ಶನದಿಂದ ಪ್ರಾಪ್ತವಾಗುವುದು.

೪೭. ಹಿಮಾಲಯದ ಕೇದಾರದಲ್ಲಿ ಗೌರಿಕುಂಡವೂ, ನಿರ್ಮಲವಾದ ಹಂಸತೀರ್ಥವೂ, ಮಧುಸ್ರವಾನಾಮಕವಾದ ಗಂಗಾಪ್ರವಾಹವೂ ಹೇಗೆ ನೆಲಸಿರುವುವೊ, ಹಾಗೆಯೇ ಕಾಶಿಯಲ್ಲಿಯೂ ಸಕಲವೂ ಇರುವುದು.

೪೮. ಹರಪಾಪವೆಂಬ ಈ ತೀರ್ಥವೊಂದೇ ಏಳು ಜನ್ಮಗಳ ಪಾತಕಗಳನ್ನು ನಾಶಗೊಳಿಸುವುದು. ಬಳಿಕ ಗಂಗೆಯೊಡನೆ ಸೇರಿದ ಸ್ಥಳದಲ್ಲಿಯಾದರೊ ಈ ತೀರ್ಥವು ಕೋಟಿ ಜನ್ಮಗಳಲ್ಲಿ ಮಾಡಿದ ಪಾತಕಗಳನ್ನೂ ಪರಿಹರಿಸುವುದು.

೪೯. ಹಿಂದಿನ ಕಾಲದಲ್ಲಿ ಒಮ್ಮೆ ಎರಡು ಕಾಗೆಗಳು ಆಕಾಶದಲ್ಲಿ ಜಗಳವಾಡುತ್ತ ಅಲ್ಲಿಂದ ಈ ತೀರ್ಥದೊಳಕ್ಕೆ ಬಿದ್ದುವು. ಅಲ್ಲಿದ್ದ ಜನರೆಲ್ಲರೂ ನೋಡುತ್ತಿದ್ದಂತೆಯೇ ಅವು ಹಂಸಪಕ್ಷಿಗಳಾಗಿ ಮೇಲಕ್ಕೆದ್ದು ಬಂದುವು.

೫೦. ಎಲೌ ಗೌರಿಯೆ ! ಈ ಮಹಾ ಸರೋವರದಲ್ಲಿಯೇ ನೀನು ಪೂರ್ವದಲ್ಲಿ ಸ್ನಾನವನ್ನು ಮಾಡಿದೆ. ಆದುದರಿಂದಲೇ ಇದು ಗೌರೀತೀರ್ಥವೆಂದು ಪ್ರಖ್ಯಾತಿಯನ್ನು ಪಡೆದು ಸಕಲ ತೀರ್ಥಗಳಲ್ಲಿಯೂ ಉತ್ತಮೋತ್ತಮವೆನಿಸಿರುವುದು.

೫೧. ಇಲ್ಲಿರುವ ಗಂಗಾಪ್ರವಾಹವು ಅಮೃತಸ್ಯಂದಿನಿಯೆನಿಸಿ ಸಂಸಾರದ ಮಹಾಮೋಹವೆಂಬ ಅಂಧಕಾರವನ್ನು ಕಳೆಯುವುದಲ್ಲದೆ ಅನೇಕ ಜನ್ಮಗಳಿಂದ ಕೂಡಿ ಬಂದಿರುವ ಜಾಡ್ಯವನ್ನು ಧ್ವಂಸಮಾಡುವುದು.

೫೨. ಮಾನಸಸರೋವರದ ಅಭಿಮಾನಿದೇವತೆಯು ಪೂರ್ವದಲಿ ಇಲಿ

ಸರಸಾ ಮಾನಸೇನಾತ್ರ ಪೂರ್ವಂ ತಪ್ತಂ ಮಹಾತಪಃ ।
ಅತಸ್ತು ಮಾನಸಂ ತೀರ್ಥಂ ಜನೇ ಖ್ಯಾತಿಮಿದಂ ಗತಂ ॥ ೫೨ ॥
ಅತ್ರ ಪೂರ್ವಂ ಜನಃ ಸ್ನಾನಮಾತ್ರೇಣೈವ ಪ್ರಮುಚ್ಯತೇ ।
ಪಶ್ಚಾತ್ಪ್ರಸಾದಿತಶ್ಚಾಹಂ ತ್ರಿದಶೈರ್ಮುಕ್ತಿದುರ್ದೃಶೈಃ ॥ ೫೩ ॥
ಸರ್ವೇ ಮುಕ್ತಿಂ ಗಮಿಷ್ಯಂತಿ ಯದಿ ದೇವೇಹ ಮಾನವಾಃ ।
ಕೇದಾರಕುಂಡೇ ಸುಸ್ನಾತಾಸ್ತದೋಚ್ಛಿತ್ತಿರ್ಭವಿಷ್ಯತಿ ॥ ೫೪ ॥
ಸರ್ವೇಷಾಮೇವ ವರ್ಣಾನಾಮಾಶ್ರಮಾಣಾಂ ಚ ಧರ್ಮಿಣಾಂ ।
ತಸ್ಮಾತ್ತನುವಿಸರ್ಗೇಽತ್ರ ಮೋಕ್ಷಂ ದಾಸ್ಯತಿ ನಾನ್ಯಥಾ ॥ ೫೫ ॥
ತತಸ್ತದುಪರೋಧೇನ ತಥೇತಿ ಚ ಮಯೋದಿತಂ ।
ತದಾರಭ್ಯ ಮಹಾದೇವಿ ಸ್ನಾನಾತ್ಕೇದಾರಕುಂಡತಃ ॥ ೫೬ ॥
ಸಮರ್ಚನಾಚ್ಚ ಭಕ್ತ್ಯಾ ವೈ ಮಮ ನಾಮಜಪಾದಪಿ ।
ನೈಃಶ್ರೇಯಸೀಂ ಶ್ರಿಯಂ ದದ್ಯಾಮನ್ಯತ್ರಾಪಿ ತನುತ್ಯಜಾಂ ॥ ೫೭ ॥

---

ಮಹಾ ತಪಸ್ಸನ್ನು ಮಾಡಿರುವಳು. ಆದುದರಿಂದಲೇ ಈ ತೀರ್ಥವು ಜನರಲ್ಲಿ ಮಾನಸತೀರ್ಥವೆಂಬುದಾಗಿ ಖ್ಯಾತಿಯನ್ನು ಪಡೆದಿರುವುದು.

೫೩. ಪೂರ್ವಕಾಲದಲ್ಲಿ ಈ ತೀರ್ಥದ ಸ್ನಾನಮಾತ್ರದಿಂದಲೇ ಜನರು ಮೋಕ್ಷವನ್ನು ಹೊಂದುತ್ತಿದ್ದರು. ಒಮ್ಮೆ ದೇವತೆಗಳೆಲ್ಲರೂ ತಮಗೂ ಅಲಭ್ಯವಾದ ಮೋಕ್ಷವು ಮನುಷ್ಯರಿಗೆ ಸುಲಭವಾಗಿ ದೊರಕುತ್ತಿರುವುದನ್ನು ಕಂಡು ತಪಸ್ಸಿನಿಂದ ನನ್ನನ್ನು ಪ್ರಸನ್ನೀಕರಿಸಿಕೊಂಡು ಇಂತೆಂದು ಬಿನ್ನವಿಸಿಕೊಂಡರು.

೫೪. "ಮಹಾದೇವನೆ! ಈ ಕೇದಾರಕುಂಡದಲ್ಲಿ ಸ್ನಾನವನ್ನು ಮಾಡಿದ ಸಕಲರೂ ಮೋಕ್ಷಪದವಿಯನ್ನು ಹೊಂದುತ್ತಿದ್ದರೆ ಸ್ವಲ್ಪಕಾಲದಲ್ಲಿಯೇ ಪ್ರಪಂಚದ ಸ್ಥಿತಿಯೆಲ್ಲವೂ ಅಲ್ಲಕಲ್ಲೋಲವಾಗುವುದು.

೫೫. ವೈದಿಕ, ಲೌಕಿಕ, ವರ್ಣ ಮತ್ತು ಆಶ್ರಮಾದಿಗಳ ಸಕಲ ಧರ್ಮಶಾಸ್ತ್ರಗಳೆಲ್ಲವೂ ನಿಷ್ಫಲಗಳಾಗುವ ಪ್ರಸಂಗವೊದಗುವುದು. ಆದುದರಿಂದ ನೀನು ಇಲ್ಲಿ ದೇಹತ್ಯಾಗವನ್ನು ಮಾಡಿದವರಿಗೆ ಮಾತ್ರವೇ ಮೋಕ್ಷವನ್ನು ಕೊಡಬೇಕಲ್ಲದೆ ಇತರರಿಗೆ ಕೊಡಬೇಡ."

೫೬–೫೭. ಮಹೇಶ್ವರಿಯೆ! ಆಗ ಅವರ ಪ್ರಾರ್ಥನೆಯ ಬಂಧನಕ್ಕೆ ಸಿಕ್ಕಿ ನಾನು ಹಾಗೆಯೇ ಆಗಲೆಂದು ಅಂಗೀಕರಿಸಿದೆನು. ಅದು ಮೊದಲುಗೊಂಡು ಕೇದಾರ ಕುಂಡದಲ್ಲಿ ಸ್ನಾನವನ್ನು ಮಾಡಿಕೊಂಡು, ಭಕ್ತಿಯಿಂದ ಕೇದಾರೇಶ್ವರ ಲಿಂಗವನ್ನು ಪೂಜಿಸಿ ನನ್ನ ನಾಮಾವಳಿಯನ್ನು ಜಪಮಾಡುವ ಮಾನವರು ಅನ್ಯಸ್ಥಳಗಳಲ್ಲಿ ದೇಹಗಳನ್ನು ತ್ಯಜಿಸಿದರೂ ಅವರಿಗೆ ನಾನು ಮೋಕ್ಷವೆಂಬ ಐಶ್ವರ್ಯವನ್ನು ಕೈಗೂಡಿಸುವೆನು.

ಕೇದಾರತೀರ್ಥೇ ಯಃ ಸ್ನಾತ್ವಾ ಪಿಂಡಾನ್ದಾಸ್ಯತಿ ಚಾತ್ವರಃ ।
ಏಕೋತ್ತರಶತಂ ವಂಶ್ಯಾಸ್ತಸ್ಯ ತೀರ್ಣಾ ಭವಾಂಬುಧಿಂ ॥ ೫೮ ॥
ಭೌಮವಾರೇ ಯದಾ ದರ್ಶಸ್ತದಾ ಯಃ ಶ್ರಾದ್ಧದೋ ನರಃ ।
ಕೇದಾರಕುಂಡಮಾಸಾದ್ಯ ಗಯಾಶ್ರಾದ್ಧೇನ ಕಿಂ ತತಃ ॥ ೫೯ ॥
ಕೇದಾರಂ ಗಂತುಕಾಮಸ್ಯ ಬುದ್ಧಿರ್ದೇಯಾ ಸರ್ವೈರಿಯಂ ।
ಕಾಶ್ಯಾಂ ಸ್ಪೃಶಂಸ್ತ್ವಂ ಕೇದಾರಂ ಕೃತಕೃತ್ಯೋ ಭವಿಷ್ಯಸಿ ॥ ೬೦ ॥
ಚೈತ್ರಕೃಷ್ಣಚತುರ್ದಶ್ಯಾಮುಪವಾಸಂ ವಿಧಾಯ ಚ ।
ತ್ರಿಗಂಡೂಷಾನ್ಪಿಬನ್ಪ್ರಾತರ್ಹೃಲ್ಲಿಂಗಮಧಿತಿಷ್ಠತಿ ॥ ೬೧ ॥
ಕೇದಾರೋದಕಪಾನೇನ ಯಥಾ ತತ್ರ ಫಲಂ ಲಭೇತ್ ।
ತಥಾತ್ರ ಜಾಯತೇ ಪುಂಸಾಂ ಸ್ತ್ರೀಣಾಂ ಚಾಪಿ ನ ಸಂಶಯಃ ॥ ೬೨ ॥

---

೫೮. ಯಾವನು ಕೇದಾರಕುಂಡದಲ್ಲಿ ಸ್ನಾನವನ್ನು ಮಾಡಿಕೊಂಡು ಸಮಾಧಾನವುಳ್ಳ ಮನಸ್ಸಿನಿಂದ ಪಿತೃಗಳಿಗೆ ಪಿಂಡಗಳನ್ನರ್ಪಿಸುವನೊ, ಅವನ ಆ ಸತ್ಕಾರ್ಯದಿಂದ ವಂಶದ ಪೂರ್ವಜರಾದ ನೂರೊಂದು ಕುಲದವರು ಸಂಸಾರ ಸಮುದ್ರವನ್ನು ಕಡೆಹಾಯುವರು.

೫೯. ಮಂಗಳವಾರದ ದಿನದಲ್ಲಿ ಅಮಾವಾಸ್ಯೆಯು ತಿಥಿಯೊದಗಲು ಆ ದಿವಸದಲ್ಲಿ ಕೇದಾರಕುಂಡವನ್ನು ಸೇರಿ ಯಾವನು ಪಿತೃಶ್ರಾದ್ಧವನ್ನು ನೆರವೇರಿಸುವನೊ, ಅವನು ಗಯೆಯಲ್ಲಿ ಶ್ರಾದ್ಧವನ್ನು ಮಾಡಿದುದರಿಂದ ಅದಕ್ಕಿಂತಲೂ ಯಾವ ಹೆಚ್ಚಿನ ಫಲವನ್ನು ತಾನೆ ಪಡೆದಾನು?

೬೦. ಹಿಮಾಲಯದಲ್ಲಿರುವ ಕೇದಾರಕ್ಕೆ ಯಾತ್ರೆಯನ್ನು ಮಾಡಲೆಳಸುವವನಿಗೆ ಜನರು ಈ ವಿಧವಾಗಿ ಬುದ್ಧಿಯನ್ನು ಹೇಳಬೇಕು. ಕಾಶಿಯಲ್ಲಿರುವ ಕೇದಾರೇಶ್ವರ ಲಿಂಗವನ್ನು ಮುಟ್ಟಿ ಸೇವಿಸುವುದರಿಂದಲೇ ನೀನು ಕೃತಕೃತ್ಯನಾಗುವೆ.

೬೧. ಚೈತ್ರಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಉಪವಾಸವನ್ನು ಮಾಡಿ ಮಾರನೆಯ ಪ್ರಾತಃಕಾಲದಲ್ಲಿ ಈ ತೀರ್ಥೋದಕವನ್ನು ಬಾಯಿತುಂಬ ಮೂರುಸಲ ಪಾನಮಾಡಲು ಕೇದಾರೇಶ್ವರನು ಆ ಭಕ್ತನ ಹೃದಯಲಿಂಗದಲ್ಲಿ ವಾಸಮಾಡುವನು.

೬೨. ಕೇದಾರಕ್ಷೇತ್ರಕ್ಕೆ ಹೋಗಿ ತೀರ್ಥೋದಕ ಪಾನವನ್ನು ಮಾಡುವುದರಿಂದ ಯಾವ ಫಲವುಂಟಾಗುವುದೊ, ಆ ಫಲವೇ ಇಲ್ಲಿಯೂ ಸಹ ಪುರುಷರಿಗೂ ವಿಶೇಷವಾಗಿ ಸ್ತ್ರೀಯರಿಗೂ ಲಭಿಸುವುದರಲ್ಲಿ ಸಂದೇಹವಿಲ್ಲ.

ಕೇದಾರಭಕ್ತಂ ಸಂಪೂಜ್ಯ ವಾಸೋಽನ್ನದ್ರವಿಣಾದಿಭಿಃ ।
ಆಜನ್ಮಜನಿತಂ ಪಾಪಂ ತ್ಯಕ್ತ್ವಾ ಯಾತಿ ಮಮಾಲಯಂ ॥ ೬೩ ॥
ಆಷಣ್ಮಾಸಾನ್ ತ್ರಿಕಾಲಂ ಯಃ ಕೇದಾರೇಶಂ ನಮಸ್ಯತಿ ।
ತಂ ನಮಸ್ಯಂತಿ ಸತತಂ ಲೋಕಪಾಲಾ ಯಮಾದಯಃ ॥ ೬೪ ॥
ಕಲೌ ಕೇದಾರಮಾಹಾತ್ಮ್ಯಂ ಯೋಽಪಿ ಕೋಽಪಿ ನ ವೇತ್ಸ್ಯತಿ ।
ಯೋ ವೇತ್ಸ್ಯತಿ ಸ ಪುಣ್ಯಾತ್ಮಾ ಸರ್ವಂ ವೇತ್ಸ್ಯತಿ ಸ ಧ್ರುವಂ ॥ ೬೫ ॥
ಕೇದಾರೇಶಂ ಸಕೃದ್ದೃಷ್ಟ್ವಾ ದೇವಿ ಮೇಽನುಚರೋ ಭವೇತ್ ।
ತಸ್ಮಾತ್ಕಾಶ್ಯಾಂ ಪ್ರಯತ್ನೇನ ಕೇದಾರೇಶಂ ವಿಲೋಕಯೇತ್ ॥ ೬೬ ॥
ಚಿತ್ರಾಂಗದೇಶ್ವರಂ ಲಿಂಗಂ ಕೇದಾರಾದುತ್ತರೇ ಶುಭಂ ।
ತಸ್ಯಾರ್ಚನಾನ್ನರೋ ನಿತ್ಯಂ ಸ್ವರ್ಗಭೋಗಾನುಪಾಶ್ನುತೇ ॥ ೬೭ ॥
ಕೇದಾರಾದ್ದಕ್ಷಿಣೇ ಭಾಗೇ ನೀಲಕಂಠವಿಲೋಕನಾತ್ ।
ಸಂಸಾರೋರಗದಷ್ಟಸ್ಯ ತಸ್ಯ ನಾಸ್ತಿ ವಿಷಾದ್ಭಯಂ ॥ ೬೮ ॥

೬೩. ಕೇದಾರೇಶ್ವರನ ಭಕ್ತನಿಗೆ ವಸ್ತ್ರ, ಅನ್ನ, ದ್ರವ್ಯ ಮುಂತಾದುವುಗಳ ನ್ನರ್ಪಿಸಿ ಚೆನ್ನಾಗಿ ಪೂಜೆಯನ್ನು ಮಾಡಲು ಮನುಷ್ಯನು ಹುಟ್ಟಿದ ದಿನದ ಮೊದಲುಗೊಂಡು ಮಾಡಿರುವ ಪಾಪಗಳನ್ನೆಲ್ಲ ಕಳೆದುಕೊಂಡು ನನ್ನ ನಿವಾಸ ವಾದ ಕೈಲಾಸವನ್ನು ಸೇರುವನು.

೬೪. ಯಾವನು ಆರು ತಿಂಗಳುಗಳವರೆಗೂ ನಿತ್ಯವೂ ತ್ರಿಸಂಧ್ಯೆಗಳಲ್ಲಿ ಕೇದಾರೇಶ್ವರನಿಗೆ ನಮಸ್ಕಾರಗಳನ್ನು ಮಾಡುವನೊ ಅವನನ್ನು ಯಮನೇ ಮೊದಲಾದ ಅಷ್ಟದಿಕ್ಪಾಲರೂ ಕೂಡ ನಮಸ್ಕರಿಸುತ್ತಿರುವರು.

೬೫. ಈ ಕಲಿಯುಗದಲ್ಲಿ ಕೇದಾರೇಶ್ವರನ ಮಾಹಾತ್ಮ್ಯೆಯನ್ನು ಸಾಧಾರಣ ವಾಗಿ ಯಾವ ಮಾನವನು ತಿಳಿಯಲಾರನು. ಯಾವನು ಅದನ್ನು ಚೆನ್ನಾಗಿ ತಿಳಿಯುವನೊ, ಅವನೇ ಪುಣ್ಯಾತ್ಮನು. ಅವನು ನಿಜವಾಗಿಯೂ ಸರ್ವಜ್ಞನೇ ಎಂದು ಹೇಳಬೇಕು.

೬೬. ದೇವಿಯೆ! ಕೇದಾರೇಶ್ವರನನ್ನು ಒಂದುಸಲ ನೋಡಿದವನೂ ಕೂಡ ನನ್ನ ಅನುಚರನಾಗುವನು. ಆದುದರಿಂದ ಕಾಶಿಯಲ್ಲಿರುವ ಆ ಲಿಂಗವನ್ನು ಪ್ರತಿಯೊಬ್ಬನೂ ಪ್ರಯತ್ನಪೂರ್ವಕವಾಗಿ ನೋಡಬೇಕು.

೬೭. ಆ ಕೇದಾರೇಶ್ವರನಿಗೆ ಉತ್ತರದಿಕ್ಕಿನಲ್ಲಿಯೇ ಚಿತ್ರಾಂಗದೇಶ್ವರವೆಂಬ ಪರಮಪಾವನವಾದ ಲಿಂಗವೊಂದಿರುವುದು. ಅದನ್ನು ನಿತ್ಯವೂ ಅರ್ಚನೆಮಾಡು ವುದರಿಂದ ಮನುಷ್ಯನು ಸ್ವರ್ಗಲೋಕದ ಭೋಗಗಳನ್ನೆಲ್ಲ ಪಡೆಯುವನು.

೬೮. ಕೇದಾರಲಿಂಗಕ್ಕೆ ದಕ್ಷಿಣದಲ್ಲಿರುವ ನೀಲಕಂಠೇಶ್ವರಲಿಂಗವನ್ನು

ತದ್ವಾಯೋಽಂಬರೀಷೇಶೋ ನರಸ್ತದವಲೋಕನಾತ್ ।
ಗರ್ಭವಾಸಂ ನ ಚಾಪ್ನೋತಿ ಸಂಸಾರೇ ದುಃಖಸಂಕುಲೇ ॥ ೬೯ ॥
ಇಂದ್ರದ್ಯುಮ್ನೇಶ್ವರಂ ಲಿಂಗಂ ತತ್ಸಮೀಪೇ ಸಮರ್ಚ್ಯ ಚ ।
ತೇಜೋಮಯೇನ ಯಾನೇನ ಸ ಸ್ವರ್ಗಭುವಿ ಮೋದತೇ ॥ ೭೦ ॥
ತದ್ದಕ್ಷಿಣೇ ನರೋ ದೃಷ್ಟ್ವಾ ಲಿಂಗಂ ಕಾಲಂಜರೇಶ್ವರಂ ।
ಜರಾಂ ಕಾಲಂ ವಿನಿರ್ಜಿತ್ಯ ಮಮ ಲೋಕೇ ವಸೇಚ್ಚಿರಂ ॥ ೭೧ ॥
ದೃಷ್ಟ್ವಾ ಕ್ಷೇಮೇಶ್ವರಂ ಲಿಂಗಮುದಕ್ಚಿತ್ರಾಂಗದೇಶ್ವರಾತ್ ।
ಸರ್ವತ್ರ ಕ್ಷೇಮಮಾಪ್ನೋತಿ ಲೋಕೇಽತ್ರ ಚ ಪರತ್ರ ಚ ॥ ೭೨ ॥
ಸ್ಕಂದ ಉವಾಚ :—
ದೇವದೇವೇನ ವಿಂಧ್ಯಾರೇ ಕೇದಾರಮಹಿಮಾ ಮಹಾನ್
ಇತ್ಯಾಖ್ಯಾಯಿ ಪುರಾಂಬಾಯೈ ಮಯಾ ತೇಽಪಿ ನಿರೂಪಿತಃ ॥ ೭೩ ॥

ದರ್ಶನಮಾಡಲು ಸಂಸಾರವೆಂಬ ಕಾಳಸರ್ಪದಿಂದ ಕಚ್ಚಲ್ಪಟ್ಟ ಮನುಷ್ಯನಿಗೆ ಅಹಂಕಾರಮಮಕಾರರೂಪವಾದ ವಿಷದಿಂದ ಭಯವುಂಟಾಗುವುದಿಲ್ಲ.

೬೯. ಅದರ ವಾಯವ್ಯಮೂಲೆಯಲ್ಲಿ ಅಂಬರೀಷೇಶ್ವರನಿರುವನು. ಆ ಲಿಂಗವನ್ನು ಅವಲೋಕಿಸಿದ ಮನುಷ್ಯನು ಕೇವಲ ದುಃಖಭೂಯಿಷ್ಠವಾದ ಈ ಸಂಸಾರದ ಕೋಟಲೆಗೆ ಸಿಕ್ಕಿ ಪುನಃ ಗರ್ಭವಾಸವನ್ನನುಭವಿಸುವುದಿಲ್ಲ.

೭೦. ಅದರ ಸಮೀಪದಲ್ಲಿಯೇ ಇರುವ ಇಂದ್ರದ್ಯುಮ್ನೇಶ್ವರವೆಂಬ ಮಹಾಲಿಂಗವಿರುವುದು. ಅದನ್ನು ಪೂಜಿಸಲು ಮನುಷ್ಯನು ತೇಜೋಮಯವಾದ ದಿವ್ಯವಿಮಾನದಲ್ಲಿ ಕುಳಿತು ಸ್ವರ್ಗಲೋಕವನ್ನು ಸೇರಿ ಅಲ್ಲಿ ಸಂತೋಷದಿಂದಿರುವನು.

೭೧. ಆ ಲಿಂಗಕ್ಕೆ ದಕ್ಷಿಣದಲ್ಲಿರುವ ಕಾಲಂಜರೇಶ್ವರನೆಂಬ ಲಿಂಗದ ದರ್ಶನವನ್ನು ತೆಗೆದುಕೊಳ್ಳಲು ಮಾನವನು ಮುಪ್ಪನ್ನೂ ಸಾವನ್ನೂ ಗೆದ್ದವನಾಗಿ ಬಹುಕಾಲದವರೆಗೂ ನನ್ನ ಲೋಕದಲ್ಲಿ ವಾಸಮಾಡುತ್ತಿರುವನು.

೭೨. ಭಕ್ತನು ಚಿತ್ರಾಂಗದೇಶ್ವರನಿಗೆ ಉತ್ತರದಿಕ್ಕಿನಲ್ಲಿರುವ ಕ್ಷೇಮೇಶ್ವರಲಿಂಗವನ್ನು ನೋಡಲು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಕಲ ವಿಧಗಳಾದ ಕ್ಷೇಮಗಳನ್ನೂ ಪಡೆಯುವನು.

೭೩. ಸ್ಕಂದನು ಹೇಳುತ್ತಾನೆ:—ವಿಂಧ್ಯಶತ್ರುವಾದ ಎಲೈ ಅಗಸ್ತ್ಯನೆ! ಮಹತ್ತರವಾದ ಈ ಕೇದಾರೇಶ್ವರನ ಮಾಹಾತ್ಮ್ಯೆಯನ್ನು ದೇವದೇವನು ಹಿಂದೆ ಪಾರ್ವತಿಗೆ ನಿರೂಪಿಸಿದನು. ಅನಂತರ ನಾನು ನಿನಗೆ ತಿಳಿಸಿರುವೆನು.

**ಕೇದಾರೇಶ್ವರಲಿಂಗಸ್ಯ ಶ್ರುತ್ವೋತ್ಪತ್ತಿಂ ಕೃತೀ ನರಃ ।**
**ಶಿವಲೋಕಮವಾಪ್ನೋತಿ ನಿಷ್ಪಾಪೋ ಜಾಯತೇ ಕ್ಷಣಾತ್ ॥ ೭೪ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಕೇದಾರೇಶ್ವರಾವಿರ್ಭಾವವರ್ಣನಂ" ನಾಮ ಸಪ್ತಸಪ್ತತಿತಮೋಽಧ್ಯಾಯಃ**

---

೭೪. ಈ ಕೇದಾರೇಶ್ವರನು ಕಾಶಿಯಲ್ಲಿ ಉದ್ಭವಿಸಿದ ಪ್ರಕಾರವನ್ನು ಕೇಳಿದ ಮನುಷ್ಯನೇ ಪುಣ್ಯಾತ್ಮನು. ಅವನು ಕ್ಷಣಮಾತ್ರದಲ್ಲಿಯೇ ಪಾತಕರಹಿತನಾಗುವುದಲ್ಲದೆ ದೇಹಾವಸಾನವಾದ ಮೇಲೆ ಶಿವಲೋಕವಾದ ಕೈಲಾಸವನ್ನು ಸೇರುವನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಕೇದಾರೇಶ್ವರಾವಿರ್ಭಾವವರ್ಣನ" ವೆಂಬ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಅಷ್ಟಸಪ್ತತಿತಮೋಽಧ್ಯಾಯಃ

## ಧರ್ಮೇಶಮಹಿಮಾಖ್ಯಾನವರ್ಣನಂ

**ಪಾರ್ವತ್ಯುವಾಚ :—**

**ಆನಂದಕಾನನೇ ಶಂಭೋ ಯಲ್ಲಿಂಗಂ ಪುಣ್ಯವರ್ಧನಂ ।**
**ಯನ್ನಾಮಸ್ಮರಣಾದೇವ ಮಹಾಪಾತಕಸಂಕ್ಷಯಃ ॥ ೧ ॥**
**ಯತ್ಸೇವ್ಯಂ ಸಾಧಕೈರ್ನಿತ್ಯಂ ಯತ್ರ ಪ್ರೀತಿರನುತ್ತಮಾ ।**
**ಯತ್ರ ದತ್ತಂ ಹುತಂ ಜಪ್ತಂ ಧ್ಯಾತಂ ಭವತಿ ಚಾಕ್ಷಯಂ ॥ ೨ ॥**
**ಯಸ್ಯ ಸಂಸ್ಮರಣಾದೇವ ಯಲ್ಲಿಂಗಸ್ಯ ವಿಲೋಕನಾತ್ ।**
**ಯಲ್ಲಿಂಗಪ್ರಣತೇಶ್ಚಾಪಿ ಯಸ್ಯ ಸಂಸ್ಪರ್ಶನಾದಪಿ ॥ ೩ ॥**
**ಪಂಚಾಮೃತಾದಿಸ್ನಪನಪೂರ್ವಾದಸ್ಯಾರ್ಚನಾದಪಿ ।**
**ತಲ್ಲಿಂಗಂ ಕಥಯೇಶಾನ ಭವೇಚ್ಛ್ರೇಯಃಪರಂಪರಾ ॥ ೪ ॥**

**ಸ್ಕಂದ ಉವಾಚ :—**

**ಇತಿ ದೇವೀಸಮುದಿತಂ ಸಮಾಕರ್ಣ್ಯ ಘಟೋದ್ಭವ ।**
**ಸರ್ವಜ್ಞೇನ ಯದಾಖ್ಯಾತಂ ತದಾಖ್ಯಾಸ್ಯಾಮಿ ತೇ ಶೃಣು ॥ ೫ ॥**

---

## ಕನ್ನಡದ ಅನುವಾದ

### ಧರ್ಮೇಶ್ವರಮಹಿಮಾಖ್ಯಾನವರ್ಣನ

೧—೪. ಪಾರ್ವತಿಯು ಹೇಳುತ್ತಾಳೆ:—ಶಂಭುವೆ! ಸಮಗ್ರವಾದ ಆನಂದ ಕಾನನದಲ್ಲಿಯೂ ಯಾವ ಲಿಂಗವು ಪುಣ್ಯವರ್ಧಕವಾಗಿರುವುದೊ, ಯಾವುದರ ನಾಮವನ್ನು ಸ್ಮರಿಸುವ ಮಾತ್ರದಿಂದಲೇ ಮಹಾ ಪಾತಕಗಳೂ ನಾಶವಾಗುವುವೊ, ಸಾಧಕರಿಗೆ ನಿತ್ಯವೂ ಯಾವುದು ಸೇವ್ಯವಾಗಿರುವುದೊ, ಯಾವುದರಲ್ಲಿ ಅವರಿಗೆ ಅಸದೃಶವಾದ ಪ್ರೀತಿಯಿರುವುದೊ, ಯಾವುದರ ಸನ್ನಿಧಿಯಲ್ಲಿ ದಾನ ಮಾಡಿದುದೂ, ಹೋಮಮಾಡಿದುದೂ, ಜಪಿಸಿದುದೂ, ಧ್ಯಾನಮಾಡಿದುದೂ ಅಕ್ಷಯಫಲವನ್ನು ಕೊಡುವುವೊ, ಯಾವ ಲಿಂಗವನ್ನು ಸ್ಮರಿಸುವುದರಿಂದಲೂ, ನೋಡುವುದರಿಂದಲೂ, ನಮಸ್ಕಾರಗಳನ್ನು ಮಾಡುವುದರಿಂದಲೂ, ಮುಟ್ಟಿ ಪೂಜಿಸುವುದರಿಂದಲೂ, ಪಂಚಾಮೃತಸ್ನಾನಪೂರ್ವಕವಾಗಿ ಷೋಡಶೋಪಚಾರದ ಅರ್ಚನೆಯಿಂದಲೂ, ಶ್ರೇಯಸ್ಸುಗಳ ಪರಂಪರೆಗಳು ಭಕ್ತರಿಗೆ ಲಭಿಸುವುವೊ, ಅಂತಹ ಮಾಹಾತ್ಮ್ಯಯುಳ್ಳ ಲಿಂಗವು ಯಾವುದೆಂಬುದನ್ನು ತಿಳಿಸು.

೫. ಸ್ಕಂದನು ಹೇಳುತ್ತಾನೆ:—ಎಲೈ ಘಟೋದ್ಭವನೆ! ಇಂತೆಂದು ದೇವಿಯು ಪ್ರಶ್ನೆಮಾಡಿದುದನ್ನು ಕೇಳಿ ಸರ್ವಜ್ಞನಾದ ಪರಮೇಶ್ವರನು ಹೇಳಿದ ವಿಷಯವನ್ನು ನಿನಗೆ ತಿಳಿಸುವೆನು. ಕೇಳುವವನಾಗು.

ದೇವದೇವ ಉವಾಚ:—

ಉಮೇ ಭವತ್ಯಾ ಯತ್ಪೃಷ್ಟಂ ಭವಬಂಧವಿಮೋಕ್ಷಕೃತ್ ।
ತತೋಽಹಂ ಕಥಯಿಷ್ಯಾಮಿ ಲಿಂಗಂ ಸ್ಥಿರಮನಾ ಭವ ॥ ೬ ॥
ಆನಂದಕಾನನೇ ಚಾತ್ರ ರಹಸ್ಯಂ ಪರಮಂ ಮಮ ।
ನ ಮಯಾ ಕಸ್ಯಚಿತ್ಖ್ಯಾತಂ ನ ಪ್ರಷ್ಟುಂ ವೇತ್ತಿ ಕಶ್ಚನ ॥ ೭ ॥
ಸಂತಿ ಲಿಂಗಾನ್ಯನೇಕಾನಿ ಮಮಾನಂದವನೇ ಪ್ರಿಯೇ ।
ಪರಂ ತ್ವಯಾ ಯಥಾ ಪೃಷ್ಟಂ ಯಥಾವತ್ತದ್ಬ್ರವೀಮಿ ತೇ ॥ ೮ ॥
ಯತ್ರ ಮುಕ್ತಿಸ್ವರೂಪಾಸಿ ತ್ವಂ ಸ್ವಯಂ ತಿಷ್ಠತಿ ವಿಶ್ವಗೇ ।
ಯತ್ರ ತೇ ನಂದನಶ್ಚಾಸ್ತಿ ಕ್ಷೇತ್ರವಿಘ್ನವಿಘಾತಕೃತ್ ॥ ೯ ॥
ಮಮಾಪಿ ಯೇನ ತ್ರಿಪುರಸಮರೇ ಜಯಕಾಂಕ್ಷಿಣಃ ।
ಜಯಾಶಾ ಪೂರಿತಾ ಸ್ತುತ್ಯಾ ಬಹುಮೋದಕದಾನತಃ ॥ ೧೦ ॥
ಯತ್ರಾಸ್ತಿ ತೀರ್ಥಮಘಹೃತ್ಪಿತೃಪ್ರೀತಿವಿವರ್ಧನಂ ।
ಯತ್ಸ್ನಾನಾದ್ವೃತ್ರಹಾ ವೃತ್ರವಧಪಾಪಾದ್ವಿಮುಕ್ತವಾನ್ ॥ ೧೧ ॥

---

೬. ದೇವದೇವನು ಹೇಳುತ್ತಾನೆ:—ಗಿರಿಜೆಯೆ! ಸಂಸಾರಬಂಧನದಿಂದ ಬಿಡುಗಡೆಯನ್ನುಂಟುಮಾಡುವ ಲಿಂಗವು ಯಾವುದೆಂದು ಪ್ರಶ್ನಿಸಿದೆಯಲ್ಲವೆ. ಅಂತಹ ಲಿಂಗದ ವಿಷಯವನ್ನೇ ತಿಳಿಸುತ್ತೇನೆ. ಏಕಾಗ್ರಚಿತ್ತಳಾಗಿ ಕೇಳು.

೭. ಇದು ಆನಂದಕಾನನದಲ್ಲಿರುವ ನನಗೆ ಸಂಬಂಧಪಟ್ಟ ಪರಮರಹಸ್ಯವಾಗಿರುವುದು. ಇದನ್ನು ನಾನು ಯಾರಿಗೂ ಹೇಳಿರುವುದಿಲ್ಲ. ಇದನ್ನು ಕುರಿತು ಪ್ರಶ್ನೆಯನ್ನು ಮಾಡುವುದಕ್ಕೂ ಯಾವನೂ ತಿಳಿದಿರುವುದಿಲ್ಲ.

೮. ಪ್ರಿಯಳೆ! ಆನಂದವನದಲ್ಲಿ ನನ್ನ ಚಿಹ್ನೆಗಳಾದ ಅಸಂಖ್ಯಾತ ಲಿಂಗಗಳಿರುವುವು. ಅವುಗಳಲ್ಲೆಲ್ಲ ಸರ್ವೋತ್ತಮವಾದುದು ಯಾವುದೆಂದು ನೀನು ಮಾಡಿದ ಪ್ರಶ್ನೆಗೆ ಯಥಾರ್ಥವಾದ ಉತ್ತರವನ್ನು ಹೇಳುವೆನು.

೯. ಆ ಕ್ಷೇತ್ರದಲ್ಲಿಯೇ ವಿಶ್ವೇಶ್ವರಿಯಾದ ನೀನು ಮುಕ್ತಿಸ್ವರೂಪಳಾಗಿ ನೆಲಸಿರುವೆ. ಮತ್ತು ಕ್ಷೇತ್ರದ ಸಕಲ ವಿಘ್ನಗಳನ್ನೂ ನಾಶಗೊಳಿಸುತ್ತ ನಿನ್ನ ಮಗನಾದ ಗಣಪತಿಯೂ ನೆಲಸಿರುವನು.

೧೦. ತ್ರಿಪುರಾಸುರನೊಡನೆ ಯುದ್ಧವನ್ನು ಮಾಡಿದ ಕಾಲದಲ್ಲಿ ಜಯವನ್ನು ಪಡೆಯಲಿಚ್ಛಿಸಿದ ನಾನೂ ಸಹ ಗಣಪತಿಯನ್ನೇ ಸ್ತೋತ್ರಮಾಡಿದುದರಿಂದಲೂ ಅನೇಕ ಮೋದಕಗಳನ್ನು ನೈವೇದ್ಯಮಾಡಿದುದರಿಂದಲೂ ನನ್ನ ಜಯಾಭಿಲಾಷೆಯು ಸಫಲವಾಯಿತು.

೧೧. ಅಲ್ಲಿಯೇ ಸಮಸ್ತಪಾಪಪರಿಹಾರಕವೂ ಪಿತೃದೇವತೆಗಳಿಗೆ ಪ್ರೀತಿಯನ್ನುಂಟುಮಾಡುವುದೂ ಆದ ತೀರ್ಥವೊಂದಿರುವುದು. ಆ ತೀರ್ಥದಲ್ಲಿ

ಧರ್ಮಾಧಿಕರಣಂ ಯತ್ರ ಧರ್ಮರಾಜೋಽಪ್ಯವಾಪ್ತವಾನ್ ।
ಸುದುಷ್ಕರಂ ತಪಸ್ತಪ್ತ್ವಾ ಪರಮೇಣ ಸಮಾಧಿನಾ ॥ ೧೨ ॥
ಪಕ್ಷಿಣೋಽಪಿ ಹಿ ಯತ್ರಾಪುರ್ಜ್ಞಾನಂ ಸಂಸಾರಮೋಚನಂ ।
ರಮ್ಯೋ ಹಿರಣ್ಮಯೋ ಯತ್ರ ಬಭೂವ ಬಹುಪಾದ್ದ್ರುಮಃ ॥ ೧೩ ॥
ಯಲ್ಲಿಂಗದರ್ಶನಾದೇವ ದುರ್ದಮೋ ನಾಮ ಪಾರ್ಥಿವಃ ।
ಉದ್ವೇಜಕೋಽಪಿ ಲೋಕಾನಾಂ ಕ್ಷಣಾದ್ಧರ್ಮಮತಿಸ್ತ್ವಭೂತ್ ॥ ೧೪ ॥
ತಸ್ಯ ಲಿಂಗಸ್ಯ ಮಾಹಾತ್ಮ್ಯಮಾವಿರ್ಭಾವಂ ಚ ಸುಂದರಿ ।
ನಿಶಾಮಯಾಭಿದಾಸ್ಯಾಮಿ ಮಹಾಪಾತಕನಾಶನಂ ॥ ೧೫ ॥
ಧರ್ಮಪೀಠಂ ತದುದ್ದಿಷ್ಟಮತ್ರಾನಂದವನೇ ಮಮ ।
ತತ್ಪೀಠದರ್ಶನಾದೇವ ನರಃ ಪಾಪೈಃ ಪ್ರಮುಚ್ಯತೇ ॥ ೧೬ ॥
ಪುರಾ ವಿವಸ್ವತಃ ಪುತ್ರೋ ಯಮಃ ಪರಮಸಂಯಮೀ ।
ತಪಸ್ತತಾಪ ವಿಪುಲಂ ವಿಶಾಲಾಕ್ಷಿ ತವಾಗ್ರತಃ ॥ ೧೭ ॥

---

ಮಾಡಿದ ಸ್ನಾನದಿಂದಲೇ ಮಹೇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ಪಾಪದಿಂದ ಬಿಡುಗಡೆಯನ್ನು ಹೊಂದಿದನು.

೧೨. ಧರ್ಮರಾಜನೂ ಅತ್ಯಂತ ದುಷ್ಕರವಾದ ತಪಸ್ಸನ್ನಾಚರಿಸಿ ಸರ್ವೋತ್ತಮವಾದ ಸಮಾಧಿಸ್ಥಿತಿಯನ್ನು ಹೊಂದಿ ಧರ್ಮನಿರೂಪಣೆಯಲ್ಲಿ ಅಗ್ರೇಸರನೆನಿಸಿ ಉತ್ತಮಸ್ಥಾನವನ್ನು ಪಡೆದನು.

೧೩. ಆ ಪ್ರದೇಶದಲ್ಲಿಯೇ ಪಕ್ಷಿಗಳೂ ಸಹ ಸಂಸಾರಮೋಚಕವಾದ ಉತ್ತಮಜ್ಞಾನವನ್ನು ಪಡೆದುವು. ಮನೋಹರವೂ ಸ್ವರ್ಣಮಯವೂ ಆದ ಅನೇಕ ಬೇರುಗಳುಳ್ಳ ಆಲದ ಮರವೂ ಅಲ್ಲಿಯೇ ಬೆಳೆದಿದ್ದಿತು.

೧೪. ಅಲ್ಲಿರುವ ಲಿಂಗದ ದರ್ಶನಮಾತ್ರದಿಂದಲೇ ಹದಿನಾಲ್ಕು ಲೋಕಗಳನ್ನೂ ಪೀಡಿಸುತ್ತಿದ್ದ ದುರ್ದಮನೆಂಬ ಹೆಸರಿನ ರಾಜನೊಬ್ಬನು ಕ್ಷಣಮಾತ್ರದಲ್ಲಿ ಧರ್ಮೈಕತತ್ಪರವಾದ ಬುದ್ಧಿಯುಳ್ಳವನಾದನು.

೧೫. ಸುಂದರಿಯೆ ! ಆ ಲಿಂಗದ ಉದ್ಭವದ ಚರಿತ್ರೆಯೂ, ಮಾಹಾತ್ಮ್ಯವೂ ಮಹಾಪಾತಕಗಳನ್ನೂ ನಾಶಗೊಳಿಸುವುದು. ಅವುಗಳನ್ನು ನಿರೂಪಿಸುವೆನು. ಏಕಾಗ್ರಚಿತ್ತಳಾಗಿ ಕೇಳು.

೧೬. ಆನಂದವನದಲ್ಲಿರುವ ಆ ನನ್ನ ಪ್ರದೇಶಕ್ಕೆ ಧರ್ಮಪೀಠವೆಂದು ಹೆಸರಾಗಿರುವುದು. ಆ ಪೀಠವನ್ನು ದರ್ಶನಮಾಡುವುದರಿಂದಲೇ ಯಾವ ಮನುಷ್ಯನಾದರೂ ಪಾಪಗಳಿಂದ ಮುಕ್ತನಾಗುವನು.

೧೭. ಓ ವಿಶಾಲಾಕ್ಷಿಯೆ ! ಮುನ್ನು ಸೂರ್ಯಪುತ್ರನಾದ ಯಮಧರ್ಮರಾಜನು ಉತ್ತಮರೀತಿಯಿಂದ ಇಂದ್ರಿಯಗಳನ್ನು ನಿಗ್ರಹಮಾಡಿಕೊಂಡು ನಿನ್ನ ಸಮ್ಮುಖದಲ್ಲಿಯೇ ವಿಪುಲವಾದ ತಪಸ್ಸನ್ನು ಆಚರಿಸಿದನು.

ಶಿಶಿರೇ ಜಲಮಧ್ಯಸ್ಥೋ ವರ್ಷಾಸ್ವಭ್ರಾವಕಾಶಕಃ ।
ತಪರ್ತೌ ಪಂಚವಹ್ನಿಸ್ಥಃ ಕದಾಚಿದಿತಿ ತಪ್ತವಾನ್ ॥ ೧೮ ॥
ಪಾದಾಗ್ರಾಂಗುಷ್ಠಭೂಸ್ಪರ್ಶೀ ಬಹುಕಾಲಂ ಸ ತಸ್ಥಿವಾನ್ ।
ಏಕಪಾದಸ್ಥಿತಃ ಸೋಽಪಿ ಕದಾಚಿದ್ಬಹ್ವನೇಹಸಂ ॥ ೧೯ ॥
ಸಮೀರಾಭ್ಯವಹರ್ತಾಸೀದ್ಬಹುದಿಷ್ಟಂ ಸ ದಿಷ್ಟವಾನ್ ।
ಪಪೌ ಸ ತು ಪಿಪಾಸುಃ ಸನ್ಕುಶಾಗ್ರಜಲವಿಪ್ರುಷಃ ॥ ೨೦ ॥
ದಿವ್ಯಾಂ ಚತುರ್ಯುಗೀಮಿತ್ಥಂ ಸ ನಿನಾಯ ತಪಶ್ಚರನ್ ।
ಚತುರ್ಗುಣಂ ದಿದೃಕ್ಷುರ್ಮಾಂ ಪರಮೇಣ ಸಮಾಧಿನಾ ॥ ೨೧ ॥
ತತೋಽಹಂ ತಸ್ಯ ತಪಸಾ ಸಂತುಷ್ಟಃ ಸ್ಥಿರಚೇತಸಃ ।
ಯಯೌ ತಸ್ಮೈ ವರಾನ್ದಾತುಂ ಶಮನಾಯ ಮಹಾತ್ಮನೇ ॥ ೨೨ ॥
ವಟಃ ಕಾಂಚನಶಾಖಾಖ್ಯೋ ಯಸ್ತಪಸ್ತಾಪಸಂತತಿಂ ।
ದೂರೀಚಕಾರ ಸುಚ್ಛಾಯೋ ಬಹುದ್ವಿಜಸಮಾಶ್ರಯಃ ॥ ೨೩ ॥

೧೮. ಶಿಶಿರ ಋತುವಿನಲ್ಲಿ ಕಂಠಪ್ರಮಾಣದ ಜಲದಲ್ಲಿ ನಿಂತುಕೊಂಡು, ವರ್ಷರ್ತುವಿನಲ್ಲಿ ಆಕಾಶಕ್ಕೆ ವ್ಯೆಯನ್ನೊಡ್ಡಿ, ಗ್ರೀಷ್ಮಕಾಲದಲ್ಲಿ ಪಂಚಾಗ್ನಿ ಮಧ್ಯಸ್ಥನಾಗಿ ನಿಂತು ಬಹುಕಾಲದವರೆಗೂ ಅತ್ಯುಗ್ರವಾದ ತಪಸ್ಸನ್ನು ಮಾಡಿದನು.

೧೯. ಬಹಳಕಾಲದವರೆಗೂ ಒಂದೇಕಾಲಿನ ಹೆಬ್ಬೆರಳಿನ ಕೊನೆಯಮೇಲೆ ನಿಂತುಕೊಂಡು ತಪಸ್ಸನ್ನುಮಾಡಿದನು. ಬಳಿಕ ಅನೇಕ ವರ್ಷಗಳು ಒಂದು ಕಾಲಿನಲ್ಲಿಯೇ ನಿಂತುಕೊಂಡು ಭಗವದ್ಧ್ಯಾನವನ್ನು ಮಾಡುತ್ತಿದ್ದನು.

೨೦. ಆ ಭಾಗ್ಯಶಾಲಿಯು ಬಹುವರ್ಷಗಳು ವಾಯುವನ್ನೇ ಆಹಾರವಾಗಿ ತೆಗೆದುಕೊಳ್ಳುತ್ತಿದ್ದನು. ಆ ಸಮಯದಲ್ಲಿ ಬಾಯಾರಿಕೆಯಾದಾಗಲೆಲ್ಲ ಆತನು ಕುಶದ ಅಗ್ರದಿಂದ ನೀರಿನ ಬಿಂದುಗಳನ್ನೆತ್ತಿ ಪಾನಮಾಡುತ್ತಿದ್ದನು.

೨೧. ಇಂತು ದೇವಮಾನದಿಂದ ನಾಲ್ಕು ಚತುರ್ಯುಗಗಳ ಕಾಲವನ್ನು ತಪಶ್ಚರಣದಿಂದಲೇ ಕಳೆದನಲ್ಲದೆ ಪರಮ ಸಮಾಧಿಸ್ಥಿತಿಯನ್ನು ಪಡೆದು ನನ್ನನ್ನು ನೋಡಬೇಕೆಂಬ ಬಯಕೆಯುಳ್ಳವನಾಗಿದ್ದನು.

೨೨. ಆಗ ನಾನು ದೃಢಮನಸ್ಕನಾದ ಆತನ ತಪಸ್ಸನ್ನು ಕಂಡು ಸಂತೋಷ ಗೊಂಡು ಮಹಾತ್ಮನಾದ ಆತನಿಗೆ ವರಗಳನ್ನುಕೊಡಲು ಹೊರಟೆನು.

೨೩. ಆತನು ತಪಸ್ಸುಮಾಡುತ್ತಿದ್ದ ಪ್ರದೇಶದಲ್ಲಿ ಕಾಂಚನಶಾಖವೆಂಬ ಹೆಸರಿನ ಒಂದು ಆಲದಮರವಿರುವುದು. ಆ ಮರವು ಆ ತಪಸ್ವಿಯ ಬಿಸಿಲು ಚಳಿಗಳ ತಾಪಗಳನ್ನು ಸ್ವಲ್ಪಮಟ್ಟಿಗೆ ದೂರಮಾಡಿತು. ಅವಿಚ್ಛಿದ್ರವಾದ ನೆರಳುಳ್ಳ ಆ ಮರವು ಅಸಂಖ್ಯಾತ ಪಕ್ಷಿಗಳಿಗೆ ಆಶ್ರಯವಾಗಿದ್ದಿತು.

ಮಂದಮಂದಮರುಲ್ಲೋಲಪಲ್ಲವೈಃ ಕರಪಲ್ಲವೈಃ ।
ಯೋಽಧ್ವಗಾನಧ್ವಸಂತಪ್ತಾನಾಹ್ವಯೇದಿವ ತಾಪಹೃತ್ ॥ ೨೪ ॥
ಸ್ವಾನುರಾಗೈಃ ಸುರಭಿಭಿಃ ಸ್ವಾದುಭಿಶ್ಚ ಪಚೇಲಿಮೈಃ ।
ಪ್ರೀಣಯೇದರ್ಥಿಸಾರ್ಥಂ ಯೋ ವೃತ್ತ್ಯೈರ್ನಿಜಫಲೈರಲಂ ॥ ೨೫ ॥
ತದಧಸ್ತಾತ್ಪರಂ ವೀಕ್ಷ್ಯ ತಮುಹಂ ತಾಪನಾಂಗಜಂ ।
ಸ್ಥಾಣುನಿಶ್ಚಲವರ್ಷ್ಮಾಣಂ ನಾಸಾಗ್ರನ್ಯಸ್ತಲೋಚನಂ ॥ ೨೬ ॥
ತಪಸ್ತೇಜೋಭಿರುದ್ಯದ್ಭಿಃ ಪರಿತಃ ಪರಿಧೀಕೃತಂ ।
ಭಾಸುಮಂತಮಿವಾಕಾಶೇ ಸುನೀಲೇ ಸ್ವೇನ ತೇಜಸಾ ॥ ೨೭ ॥
ಸ್ವಾಖ್ಯಾಂಕಿತಂ ಮಹಾಲಿಂಗಂ ಪ್ರತಿಷ್ಠಾಪ್ಯಾತಿಭಕ್ತಿತಃ ।
ಸ್ವಚ್ಛಸೂರ್ಯೋಪಲಮಯಂ ತೇಜಃಪುಂಜೈರಿವಾರ್ಚಿತಂ ॥ ೨೮ ॥
ಸಾಕ್ಷೀಕೃತ್ಯೈವ ತಲ್ಲಿಂಗಂ ತಪ್ಯಮಾನಂ ಮಹತ್ತಪಃ ।
ಪ್ರತ್ಯವೋಚಂ ಧರ್ಮರಾಜಂ ವರಂ ಬ್ರೂಹೀತಿ ಭಾಸ್ಕರೇ ॥ ೨೯ ॥

೨೪. ಮೆಲ್ಲಮೆಲ್ಲಗೆ ಬೀಸುವ ತಂಗಾಳಿಯಿಂದ ಅಲ್ಲಾಡುವ ಎಲೆಗಳೆಂಬ ಕೈಗಳಿಂದ ಆ ವೃಕ್ಷವು ದಾರಿಯನ್ನು ನಡೆದು ಆಯಾಸಗೊಂಡ ಪಾಂಥರನ್ನೆಲ್ಲ "ನಿಮ್ಮ ತಾಪವನ್ನು ಪರಿಹರಿಸುವೆನು: ನನ್ನಲ್ಲಿಗೆ ಬನ್ನಿರಿ" ಎಂದು ಕರೆಯುವಂತಿದ್ದಿತು.

೨೫. ಸುಗಂಧಯುಕ್ತಗಳೂ, ರುಚಿಕರಗಳೂ, ಪರಿಪಕ್ವಗಳೂ, ದುಂಡಗಿರುವುಗಳೂ ಆದ ಫಲಗಳನ್ನು ಸ್ನೇಹಪೂರ್ವಕವಾಗಿ ಅಪೇಕ್ಷಿಸುವವರ ಸಮೂಹಗಳಿಗಿತ್ತು ಅವರನ್ನು ಅತ್ಯಂತವಾಗಿ ಸಂತೋಷಗೊಳಿಸುತ್ತಿದ್ದಿತು.

೨೬. ಆ ಮಹಾವೃಕ್ಷದ ಕೆಳಗೆ ಮೋಟುಮರದಂತೆ ನಿಶ್ಚಲವಾದ ದೇಹವುಳ್ಳವನಾಗಿ ಮೂಗಿನ ಕೊನೆಯಲ್ಲಿಯೇ ನೆಟ್ಟ ದೃಷ್ಟಿಯುಳ್ಳ ಸೂರ್ಯಸುತನಾದ ಆ ಯಮನನ್ನು ನಾನು ಕುತೂಹಲದಿಂದ ನೋಡಿದೆನು.

೨೭. ನೀಲವಾದ ಆ ಮರದ ನೆರಳಿನಲ್ಲಿ ಕುಳಿತು ಆತನು ಪ್ರಕಾಶಿಸುತ್ತಿರುವ ತಪೋಜ್ವಾಲೆಗಳಿಂದಾವೃತನಾಗಿ ನೀಲಾಕಾಶದಲ್ಲಿ ತನ್ನ ತೇಜಸ್ಸಿನಿಂದ ಪ್ರಜ್ವಲಿಸುವ ಸೂರ್ಯನಂತೆಯೇ ತೋರುತ್ತಿದ್ದನು.

೨೮. ತನ್ನ ಹೆಸರಿನಿಂದಲೇ ಕೂಡಿದ ಒಂದು ಲಿಂಗವನ್ನು ಅಲ್ಲಿ ಅತ್ಯಂತ ಭಕ್ತಿಯಿಂದ ಪ್ರತಿಷ್ಠಿಸಿದ್ದನು. ಆ ಲಿಂಗವು ನಿರ್ಮಲವಾದ ಸೂರ್ಯಕಾಂತಶಿಲೆಯಿಂದ ನಿರ್ಮಿತವಾಗಿ ತಪೋಜ್ವಾಲೆಗಳಿಂದಲೇ ಪೂಜಿಸಲ್ಪಟ್ಟಂತೆ ಕಾಣುತ್ತಿದ್ದಿತು.

೨೯. ಆ ಲಿಂಗವನ್ನೇ ಸಾಕ್ಷಿಯಾಗಿಟ್ಟುಕೊಂಡು ಮಹಾತಪಸ್ಸನ್ನು ಮಾಡುತ್ತಿರುವ ಆತನನ್ನು ಕುರಿತು ನಾನು "ಸೂರ್ಯಪುತ್ರನೆ! ನಿನಗೆ ಬೇಕಾದ ವರವನ್ನು ಬೇಡಿಕೊ" ಎಂಬುದಾಗಿ ಹೇಳಿದೆನು.

ಅಲಂ ತಪಸ್ತ್ವಾ ಮಹಾಭಾಗ ಪ್ರಸನ್ನೋಽಸ್ಮಿ ಶುಭವ್ರತ ।
ನಿಶಮ್ಯ ಶಮನಶ್ಚೇತಿ ದೃಷ್ಟ್ವಾ ಮಾಂ ಪ್ರಣನಾಮ ಹ ॥ ೩೦ ॥
ಚಕಾರ ಸ್ತವನಂ ಚಾಪಿ ಪರಿಹೃಷ್ಟೇಂದ್ರಿಯೇಶ್ವರಃ ।
ನಿರ್ವ್ಯಾಜಂ ಚ ಸಮಾಧಿಂ ಚ ವಿಸೃಜ್ಯ ಬ್ರಧ್ನನಂದನಃ ॥ ೩೧ ॥

ನಮೋ ನಮಃ ಕಾರಣಕಾರಣಾಯ
ನಮೋ ನಮಃ ಕಾರಣವರ್ಜಿತಾಯ ।
ನಮೋ ನಮಃ ಕಾರ್ಯಮಯಾಯ ತುಭ್ಯಂ
ನಮೋ ನಮಃ ಕಾರ್ಯವಿಭಿನ್ನರೂಪ ॥ ೩೨ ॥
ಅರೂಪರೂಪಾಯ ಸಮಸ್ತರೂಪಿಣೇ
ಪರಾಣುರೂಪಾಯ ಪರಾಪರಾಯ ।
ಅಪಾರರೂಪಾಯ ಪರಾಬ್ಧಿಪಾರ
ಪ್ರದಾಯ ತುಭ್ಯಂ ಶಶಿಮೌಲಯೇ ನಮಃ ॥ ೩೩ ॥

---

೩೦. "ಮಹಾಪುರುಷನೆ! ಇನ್ನು ತಪಸ್ಸನ್ನು ಸಾಕುಮಾಡು. ಉತ್ತಮ ವ್ರತನಿರತನಾದ ನಿನಗೆ ಪ್ರಸನ್ನನಾಗಿರುವೆನು." ಇಂತೆಂದ ನನ್ನ ಮಾತುಗಳನ್ನು ಕೇಳಿ ಯಮಧರ್ಮರಾಜನು ಕಣ್ಣುಗಳನ್ನು ತೆರೆದು ಎದುರಿನಲ್ಲಿಯೇ ಇದ್ದ ನನ್ನನ್ನು ಕಂಡು ನಮಸ್ಕರಿಸಿದನು.

೩೧. ಆತನು ನಿರ್ವ್ಯಾಜವಾಗಿ ಮಾಡುತ್ತಿದ್ದ ತಪಸ್ಸಿನ ಸಮಾಧಿಸ್ಥಿತಿಯಿಂದ ಬಹಿರ್ಮುಖನಾಗಿ ಸಂತೋಷಗೊಂಡ ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಕೂಡಿ ನನ್ನನ್ನು ಸ್ತೋತ್ರಮಾಡತೊಡಗಿದನು.

೩೨. ಧರ್ಮರಾಜನು ಹೇಳುತ್ತಾನೆ:—ಜಗತ್ಕಾರಣಗಳೆನಿಸಿದ ಪ್ರಕೃತ್ಯಾದಿಗಳಿಗೂ ಆದಿಕಾರಣನೂ, ಸ್ವತಃ ಯಾವ ಕಾರಣದಿಂದಲೂ ಜನ್ಮವನ್ನು ತಾಳದವನೂ, ಕಾರ್ಯರೂಪವಾದ ಪ್ರಪಂಚಕ್ಕೆ ವಿವರ್ತೋಪಾದಾನಕಾರಣನೂ, ನಾಮರೂಪಗಳಿಂದ ವ್ಯಾಕೃತವಾದ ಜಗತ್ತಿಗೆ ವಿಲಕ್ಷಣವಾದ ಅವ್ಯಾಕೃತರೂಪನೂ ಆದ ನಿನಗೆ ನಮಸ್ಕರಿಸುವೆನು.

೩೩. ನಿಜವಾಗಿಯೂ ಇಂದ್ರಿಯಗಳಿಗೆ ಗ್ರಾಹ್ಯವಲ್ಲದ ರೂಪವುಳ್ಳವನಾದರೂ ಮಾಯೆಯಿಂದ ಸಕಲ ಪ್ರಪಂಚದ ರೂಪನಾಗಿರುವವನೂ, ಪರಮಾಣುವಿನಂತೆ ಸೂಕ್ಷ್ಮನೂ, ಕಾರಣಕಾರ್ಯಸ್ವರೂಪನೂ, ತಿಳಿಯಲಾರದ ವೈಭವವುಳ್ಳ ಪರಿಪೂರ್ಣರೂಪನೂ, ಶತ್ರುಮಂಡಲವೆಂಬ ಸಮುದ್ರದ ಕೊನೆಯನ್ನು ಮುಟ್ಟಿಸುವವನೂ, ಚಂದ್ರಖಂಡವನ್ನು ಜಟಾಜೂಟದಲ್ಲಿ ಧರಿಸಿದವನೂ ಆದ ನಿನಗೆ ಅನಂತ ನಮಸ್ಕಾರಗಳು.

ಅನೀಶ್ವರಸ್ತ್ವಂ ಜಗದೀಶ್ವರಸ್ತ್ವಂ
ಗುಣಾತ್ಮಕಸ್ತ್ವಂ ಗುಣವರ್ಜಿತಸ್ತ್ವಂ ।
ಕಾಲಾತ್ಪರಸ್ತ್ವಂ ಪ್ರಕೃತೇಃ ಪರಸ್ತ್ವಂ
ಕಾಲಾಯ ಕಾಲಾತ್ಪ್ರಕೃತೇ ನಮಸ್ತೇ ॥ ೩೪ ॥
ತ್ವಮೇವ ನಿರ್ವಾಣಪದಪ್ರದೋಽಸಿ
ತ್ವಮೇವ ನಿರ್ವಾಣಮನಂತಶಕ್ತೇ ।
ತ್ವಮಾತ್ಮರೂಪಃ ಪರಮಾತ್ಮರೂಪ
ಸ್ತ್ವಮಂತರಾತ್ಮಾಸಿ ಚರಾಚರಸ್ಯ ॥ ೩೫ ॥
ತ್ವತ್ತೋ ಜಗತ್ತ್ವಂ ಜಗದೇವ ಸಾಕ್ಷಾ
ಜ್ಜಗತ್ತ್ವದೀಯಂ ಜಗದೇಕಬಂಧೋ ।
ಹರ್ತಾವಿತಾತ್ವಂ ಪ್ರಥಮೋ ವಿಧಾತಾ
ವಿಧಾತೃವಿಷ್ಣ್ವೀಶ ನಮೋ ನಮಸ್ತೇ ॥ ೩೬ ॥
ಮೃಡಸ್ತ್ವಮೇವ ಶ್ರುತಿವರ್ತ್ಮಗೇಷು
ತ್ವಮೇವ ಭೀಮೋಽಶ್ರುತಿವರ್ತ್ಮಗೇಷು ।
ತ್ವಂ ಶಂಕರಃ ಸೋಮ ಸುಭಕ್ತಿಭಾಜಾ
ಮುಗ್ರೋಽಸಿ ರುದ್ರ ತ್ವಮಭಕ್ತಿಭಾಜಾಂ ॥ ೩೭ ॥

---

೩೪. ನೀನು ಸರ್ವಸ್ವತಂತ್ರನಾಗಿರುವೆ. ಬ್ರಹ್ಮಾಂಡವೆಲ್ಲಕ್ಕೂ ನಿಯಾಮಕ ವಾಗಿರುವೆ. ತ್ರಿಗುಣಾತ್ಮಕನೂ, ತ್ರಿಗುಣರಹಿತನೂ ಆಗಿರುವೆ. ಕಾಲಕ್ಕೂ ಮೀರಿದವನು ನೀನೇ. ನೀನೇ ಪ್ರಕೃತಿಗೂ ಪರನಾಗಿರುವೆ. ಕಾಲಸ್ವರೂಪಿಯೂ ನೀನೇ ಆಗಿರುವೆ. ಕಾಲದ ಮೂಲಕ ಪ್ರಕೃತಿಯ ರೂಪವನ್ನೂ ನೀನೇ ತಾಳಿರುವೆ. ಇಂತಹ ನಿನಗೆ ನಮಸ್ಕಾರವು.

೩೫–೩೬. ನೀನೊಬ್ಬನೇ ಭಕ್ತರಿಗೆ ಮೋಕ್ಷವನ್ನು ಕೊಡುವವನಾಗಿರುವೆ. ಅಪ್ರಮೇಯಶಕ್ತಿಸಮನ್ವಿತನಾದ ನೀನೇ ಮೋಕ್ಷಸ್ವರೂಪನೂ ಆಗಿರುವೆ. ನೀನೇ ಪ್ರಾಣಿಗಳಲ್ಲಿ ಜೀವಾತ್ಮರೂಪದಿಂದಿರುವೆ. ಬಾಹ್ಯದಲ್ಲಿ ಪರಮಾತ್ಮರೂಪನಾಗಿ ರುವೆ. ಸಕಲ ಚರಾಚರಾತ್ಮಕವಾದ ಈ ಜಗತ್ತಿಗೂ ನೀನೇ ಅಂತರ್ಯಾಮಿ ಯಾಗಿರುವೆ. ನಿನ್ನಿಂದಲೇ ಪ್ರಪಂಚವು ಉದ್ಭವಿಸಿರುವುದು. ನೀನೂ ಸಾಕ್ಷಾತ್ತಾಗಿ ಪ್ರಪಂಚವೇ ಆಗಿರುವೆ. ಜಗತ್ತೆಲ್ಲವೂ ನಿನ್ನದೇ ಆಗಿರುವುದು. ನೀನೊಬ್ಬನೇ ಜಗತ್ತಿಗೆ ಅವ್ಯಾಜಬಂಧುವು. ಅದನ್ನು ಸಂಹರಿಸುವವನೂ, ಪಾಲಿಸುವವನೂ, ಮೊದಲಲ್ಲಿ ಸೃಷ್ಟಿಮಾಡುವವನೂ ನೀನೇ. ಈ ಕಾರ್ಯಗಳನ್ನು ಮಾಡಲು ಬ್ರಹ್ಮ, ವಿಷ್ಣು, ರುದ್ರರ ರೂಪಗಳನ್ನು ಧರಿಸುವ ನಿನಗೆ ನಮಸ್ಕಾರವು.

೩೭. ವೈದಿಕಮಾರ್ಗದಲ್ಲಿ ನಿರತರಾದ ಮನುಷ್ಯರಿಗೆ ನೀನೇ ಸುಖಸ್ವರೂಪ

ತ್ವಮೇವ ಶೂಲೀ ದ್ವಿಷಿತಾಂ ತ್ವಮೇವ
ವಿನಮ್ರಚೇತೋವಚಸಾಂ ಶಿವೋಽಸಿ ।
ಶ್ರೀಕಂಠ ಏಕಃ ಸ್ವಪದಶ್ರಿತಾನಾಂ
ದುರಾತ್ಮನಾಂ ಹಾಲಹಲೋಗ್ರಕಂಠಃ ॥ ೩೮ ॥
ನಮೋಽಸ್ತು ತೇ ಶಂಕರ ಶಾಂತ ಶಂಭೋ
ನಮೋಽಸ್ತು ತೇ ಚಂದ್ರಕಲಾವತಂಸ ।
ನಮೋಽಸ್ತು ತುಭ್ಯಂ ಫಣಿಭೂಷಣಾಯ
ಪಿನಾಕಪಾಣೇಽಂಧಕವೈರಿಣೇ ನಮಃ ॥ ೩೯ ॥
ಸ ಏವ ಧನ್ಯಸ್ತವಭಕ್ತಿಭಾಗ್ಯ
ಸ್ತವಾರ್ಚಕೋ ಯಃ ಸುಕೃತೀ ಸ ಏವ ।
ತವ ಸ್ತುತಿಂ ಯಃ ಕುರುತೇ ಸದೈವ
ಸ ಸ್ತೂಯತೇ ದುಶ್ಚ್ಯವನಾದಿದೇವೈಃ ॥ ೪೦ ॥

---

ನಾಗಿರುವೆ. ವೈದಿಕ ಸ್ಮಾರ್ತ ಕರ್ಮಗಳನ್ನು ತ್ಯಜಿಸಿದ ಉಚ್ಛೃಂಖಲರಿಗೆ ನೀನೇ ಭಯಂಕರನಾಗಿರುವೆ. ಗಿರಿಜಾಧವನೆ! ನೀನೇ ಅತ್ಯಂತ ಭಕ್ತಿಯುಕ್ತರಾದವರಿಗೆ ಸೌಖ್ಯದಾಯಕನು. ಮಹಾರುದ್ರನೆ! ನಿನ್ನಲ್ಲಿ ಭಕ್ತಿಯನ್ನು ಮಾಡದವರಿಗೆ ಉಗ್ರನಾಗಿಯೂ ಇರುವೆ.

೩೮. ನಿನ್ನನ್ನು ದ್ವೇಷಿಸುವವರನ್ನು ತ್ರಿಶೂಲದಿಂದ ಶಿಕ್ಷಿಸುತ್ತಿರುವೆ. ಭಕ್ತಿಯಿಂದ ಮನಸ್ಸನ್ನೂ ಮಾತುಗಳನ್ನೂ ನಿನ್ನಲ್ಲಿ ಅರ್ಪಿಸಿದವರಿಗೆ ನೀನೇ ಕಲ್ಯಾಣರೂಪನು. ನಿನ್ನ ಪಾದಗಳನ್ನಾಶ್ರಯಿಸಿದವರಿಗೆ ಶ್ರೀಕಂಠನಾಗಿದ್ದರೂ (ಮೃದುಭಾಷಿಯಾಗಿದ್ದರೂ) ದುರಾತ್ಮರಿಗೆ ಮಾತ್ರ ವಿಷದಿಂದ ಉಗ್ರಕಂಠವುಳ್ಳವನಾಗಿರುವೆ (ಕ್ರೂರಭಾಷಿಯಾಗಿರುವೆ).

೩೯. ಸುಖಕರನೂ, ಪ್ರಶಾಂತನೂ, ಸುಖಸ್ವರೂಪನೂ, ಚಂದ್ರಕಳೆಯನ್ನು ತಲೆಯಲ್ಲಿ ಅಲಂಕಾರವಾಗಿ ಧರಿಸಿದವನೂ, ಸರ್ಪಗಳ ಆಭರಣಗಳುಳ್ಳವನೂ, ಪಿನಾಕವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವವನೂ, ಅಂಧಕಾಸುರ ಧ್ವಂಸಿಯೂ ಆದ ನಿನ್ನನ್ನು ನಮಸ್ಕರಿಸುವೆನು.

೪೦. ಯಾವನು ನಿನ್ನ ಭಕ್ತಿಗೆ ಭಾಗಿಯಾಗಿರುವನೊ, ಅವನೇ ಧನ್ಯನು. ಯಾವನು ನಿನ್ನ ಅರ್ಚನೆಯನ್ನು ಮಾಡುವನೊ, ಅವನೇ ಕೃತಕೃತ್ಯನು. ಯಾವನು ಅಹೋರಾತ್ರಗಳಲ್ಲಿಯೂ ನಿನ್ನ ಸ್ತೋತ್ರಗಳನ್ನೇ ಪಠನಮಾಡುತ್ತಿರುವನೊ, ಅವನು ಮಹೇಂದ್ರನೇ ಮೊದಲಾದ ದೇವತೆಗಳಿಗೂ ಸ್ತೋತ್ರಾರ್ಹನಾಗಿರುವನು.

ಕಸ್ತ್ವಾಮಿಹ ಸ್ತೋತುಮನಂತಶಕ್ತೇ
ಶಕ್ನೋತಿ ಮಾದೃಗ್ಲಘುಬುದ್ಧಿವೈಭವಃ ।
ಪ್ರಾಚಾಂ ನ ವಾಚಾಮಿಹ ಗೋಚರೋ ಯಃ
ಸ್ತುತಿಸ್ತ್ವಯೀಯಂ ನತಿರೇವ ಯಾವತ್ ॥ ೪೧ ॥

ಸ್ಕಂದ ಉವಾಚ :—

ಉದೀರ್ಯ ಸೂರ್ಯಸ್ಯ ಸುತೋಽತಿ ಭಕ್ತ್ಯಾ
ನಮಃ ಶಿವಾಯೇತಿ ಸಮುಚ್ಚರನ್ಸಃ ।
ಇಲಾಮಿಲನ್ಮೌಲಿರತೀವ ಹೃಷ್ಟಃ
ಸಹಸ್ರಕೃತ್ವಃ ಪ್ರಣನಾಮ ಶಂಭುಂ ॥ ೪೨ ॥
ತತಃ ಶಿವಸ್ತಂ ತಪಸಾತಿಖಿನ್ನಂ
ನಿವಾರ್ಯ ತಾಭ್ಯಃ ಪ್ರಣತಿಭ್ಯ ಈಶ್ವರಃ ।
ವರಾನ್ದದೌ ಸಪ್ತತುರಂಗಸೂನವೇ
ತ್ವಂ ಧರ್ಮರಾಜೋ ಭವ ನಾಮತೋಽಪಿ ॥ ೪೩ ॥
ತ್ವಮೇವ ಧರ್ಮಾಧಿಕೃತೌ ಸಮಸ್ತ
ಶರೀರಿಣಾಂ ಸ್ಥಾವರಜಂಗಮಾನಾಂ ।
ಮಯಾ ನಿಯುಕ್ತೋಽದ್ಯದಿನಾಧಿಕೃತ್ಯಃ
ಪ್ರಶಾಧಿ ಸರ್ವಾನ್ಮಮ ಶಾಸನೇನ ॥ ೪೪ ॥

೪೧. ಅಪ್ರಮೇಯಶಕ್ತಿಸಮನ್ವಿತನಾದ ನಿನ್ನನ್ನು ನನ್ನಂತಹ ಅಲ್ಪವಾದ ಬುದ್ಧಿಶಕ್ತಿಯುಳ್ಳ ಯಾವ ಮನುಷ್ಯನು ತಾನೆ ಸ್ತೋತ್ರಮಾಡಲು ಶಕ್ತನಾಗುವನು? ಆದುದರಿಂದ ಅನಾದಿವಾಕ್ಯಗಳಾದ ವೇದಗಳಿಗೂ ಸಹ ಗೋಚರನಾಗದ ನಿನ್ನ ವಿಷಯದಲ್ಲಿ ಈ ನನ್ನ ಸ್ತೋತ್ರವು ಸಾಷ್ಟಾಂಗ ನಮಸ್ಕಾರವೇ ಆಗಿರುವುದು.

೪೨. ಸ್ಕಂದನು ಹೇಳುತ್ತಾನೆ:—ಸೂರ್ಯನ ಸುತನಾದ ಯಮನು ಇಂತು ಸ್ತೋತ್ರವನ್ನು ಮಾಡಿ ಅತ್ಯಂತ ಭಕ್ತಿಯಿಂದ "ನಮಃಶಿವಾಯ" ಎಂಬ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸುತ್ತ ಭೂಮಿಯಲ್ಲಿ ತಲೆಯನ್ನಿಡಾಡುತ್ತ ಅತ್ಯಂತ ಸಂತೋಷದಿಂದ ಮಹೇಶ್ವರನಿಗೆ ಸಾವಿರಾರು ನಮಸ್ಕಾರಗಳನ್ನು ಮಾಡಿದನು.

೪೩. ಆಗ ಮಂಗಳರೂಪಿಯಾದ ಮಹೇಶ್ವರನು ತಪಸ್ಸಿನಿಂದ ಅತ್ಯಂತ ಕೃಶನಾಗಿದ್ದ ಆ ಸೂರ್ಯಪುತ್ರನನ್ನು ನಮಸ್ಕಾರಗಳಿಂದ ತಡೆದು ನಿಲ್ಲಿಸಿ ಆತನಿಗೆ ಅನೇಕ ವರಗಳನ್ನು ಅನುಗ್ರಹಿಸಿದನು. "ಅಯ್ಯಾ ಯಮನೆ! ನೀನು ಇನ್ನು ಮೇಲೆ ಹೆಸರಿನಿಂದಲೂ ಧರ್ಮರಾಜನೆಂದೇ ಪ್ರಖ್ಯಾತನಾಗಿರು.

೪೪. ಸ್ಥಾವರ ಮತ್ತು ಜಂಗಮ ದೇಹಗಳಲ್ಲಿ ಅಭಿಮಾನಿಗಳಾದ ಸಕಲ

ತ್ವಂ ದಕ್ಷಿಣಾಯಾಶ್ಚ ದಿಶೋಽಧಿನಾಥ
ಸ್ತ್ವಂ ಕರ್ಮಸಾಕ್ಷೀ ಭವ ಸರ್ವಜಂತೋಃ ।
ತ್ವದ್ದರ್ಶಿತಾಧ್ವಾನ ಇತೋ ವ್ರಜಂತು
ಸ್ವಕರ್ಮಯೋಗ್ಯಾಂ ಗತಿಮುತ್ತಮಾಧಮಾಂ ॥ ೪೫ ॥
ತ್ವಯಾ ಯದೇತನ್ಮಮ ಭಕ್ತಿಭಾಜಾ
ಲಿಂಗಂ ಸಮಾರಾಧಿತಮತ್ರ ಧರ್ಮ ।
ತದ್ದರ್ಶನಾತ್ಸ್ಪರ್ಶನತೋಽರ್ಚನಾಚ್ಚ
ಸಿದ್ಧಿರ್ಭವಿಷ್ಯತ್ಯಚಿರೇಣ ಪುಂಸಾಂ ॥ ೪೬ ॥
ಧರ್ಮೇಶ್ವರಂ ಯಃ ಸಕೃದೇವ ಮರ್ತ್ಯೋ
ವಿಲೋಕಯಿಷ್ಯತ್ಯವದಾತಬುದ್ಧಿಃ ।
ಸ್ನಾತ್ವಾ ಪುರಸ್ತೇಽತ್ರ ಚ ಧರ್ಮತೀರ್ಥೇ
ನ ತಸ್ಯ ದೂರೇ ಪುರುಷಾರ್ಥಸಿದ್ಧಿಃ ॥ ೪೭ ॥
ಕೃತ್ವಾಪ್ಯಘಾನಾಮಿಹ ಯಃ ಸಹಸ್ರಂ
ಧರ್ಮೇಶ್ವರಂ ಪಶ್ಯತಿ ದೈವಯೋಗಾತ್ ।

---

ಜೀವರ ಧರ್ಮಾಧರ್ಮಕಾರ್ಯಗಳನ್ನು ಪರೀಕ್ಷಿಸುವ ಅಧಿಕಾರದಲ್ಲಿ ನಾನು ನಿನ್ನನ್ನು ನಿಯಮಿಸಿರುವೆನು. ಈ ನನ್ನ ಶಾಸನಕ್ಕನುಸಾರವಾಗಿ ಇಂದಿನ ದಿನವೇ ನಿನ್ನ ಅಧಿಕಾರವನ್ನು ವಹಿಸಿಕೊಂಡು ಸಕಲ ಜೀವರನ್ನೂ ಶಾಸನ ಮಾಡುತ್ತಿರು.

೪೫. ಅಲ್ಲದೆ ನೀನು ದಕ್ಷಿಣ ದಿಕ್ಕಿಗೆ ಪಾಲಕನಾಗಿರು. ಸಕಲ ಪ್ರಾಣಿಗಳ ಸುಕೃತ ದುಷ್ಕೃತಗಳಿಗೂ ಸಾಕ್ಷಿಯಾಗಿರು. ಉತ್ತಮರಾಗಲಿ ನೀಚರಾಗಲಿ ಭೂಲೋಕದಿಂದ ಹೋಗುವ ಜೀವರೆಲ್ಲರೂ ನೀನು ತೋರಿಸಿದ ಮಾರ್ಗಗಳಿಂದಲೇ ತಮ್ಮ ತಮ್ಮ ಕರ್ಮಗಳಿಗನುಸಾರವಾದ ಲೋಕಗಳಿಗೆ ಹೋಗಲಿ.

೪೬. ಧರ್ಮರಾಜನೆ! ಅತ್ಯಂತ ಭಕ್ತಿಯುಕ್ತನಾಗಿ ನೀನು ಯಾವ ನನ್ನ ಲಿಂಗವನ್ನು ಆರಾಧಿಸಿರುವೆಯೊ, ಇಲ್ಲಿ ನೆಲಸಿರುವ ಅದನ್ನು ನೋಡುವುದರಿಂದಲೂ, ಸ್ಪರ್ಶಿಸುವುದರಿಂದಲೂ, ಪೂಜಿಸುವುದರಿಂದಲೂ, ಮಾನವರು ಅತ್ಯಲ್ಪಕಾಲದಲ್ಲಿಯೇ ತಮ್ಮ ಅಭೀಷ್ಟಗಳ ಸಿದ್ಧಿಯನ್ನು ಪಡೆಯುವರು.

೪೭. ಪರಿಶುದ್ಧವಾದ ಅಂತಃಕರಣದಿಂದ ಯಾವ ಮನುಷ್ಯನು ನಿನ್ನ ಎದುರಿನಲ್ಲಿರುವ ಧರ್ಮತೀರ್ಥದಲ್ಲಿ ಸ್ನಾನವನ್ನು ಮಾಡಿ ಧರ್ಮೇಶ್ವರನನ್ನು ಒಮ್ಮೆಯಾದರೂ ನೋಡುವನೊ, ಅವನಿಗೆ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳ ಸಿದ್ಧಿಯು ಎಂದಿಗೂ ದೂರವಾಗಿರುವುದಿಲ್ಲ.

೪೮. ಸಾವಿರಾರು ಪಾತಕಗಳನ್ನು ಮಾಡಿರುವವನಾದರೂ ಯಾವನು

**ಸಹೇತ ನೋ ಜಾತು ಸ ನಾರಕೀಂ ವ್ಯಥಾಂ**
**ಕಥಾಂ ತದೀಯಾಂ ದಿವಿ ಕುರ್ವತೇಽಮರಾಃ ॥ ೪೮ ॥**
**ಯೋ ಧರ್ಮಪೀಠಂ ಪ್ರತಿಲಭ್ಯ ಕಾಶ್ಯಾಂ**
**ಸ್ವಶ್ರೇಯಸೇ ನೋ ಯತತೇಽತ್ರ ಮರ್ತ್ಯಃ ।**
**ಕಥಂ ಸ ಧರ್ಮ ತ್ವಮಿವಾತಿತೇಜಾಃ**
**ಕರಿಷ್ಯತಿ ಸ್ವಂ ಕೃತಕೃತ್ಯಮೇವ ॥ ೪೯ ॥**
**ತ್ವಯಾ ಯಥಾಪ್ತಾ ಇಹ ಧರ್ಮರಾಜ**
**ಮನೋರಥಾಸ್ತೇ ಗುರುಭಿಸ್ತಪೋಭಿಃ ।**
**ತಥೈವ ಧರ್ಮೇಶ್ವರಭಕ್ತಿಭಾಜಾಂ**
**ಕಾಮಾಃ ಫಲಿಷ್ಯಂತಿ ನ ಸಂಶಯೋಽತ್ರ ॥ ೫೦ ॥**
**ಕೃತ್ವಾಪ್ಯಘಾನ್ಯೇವ ಮಹಾಂತ್ಯಪೀಹ**
**ಧರ್ಮೇಶ್ವರಾರ್ಚಾಂ ಸಕೃದೇವ ಕುರ್ವನ್ ।**
**ಕುತೋ ಬಿಭೇತಿ ಪ್ರಿಯಬಂಧುರೇವ**
**ತವ ತ್ವದೀಯಾರ್ಚಿತಲಿಂಗಭಕ್ತಃ ॥ ೫೧ ॥**

ಅದೃಷ್ಟದ ಫಲವಾಗಿ ಧರ್ಮೇಶ್ವರನ ದರ್ಶನವನ್ನು ಮಾಡುವನೋ, ಅವನು ಎಂದಿಗೂ ನರಕವಾಸದ ದುಃಖವನ್ನು ಅನುಭವಿಸುವುದಿಲ್ಲ. ಆ ಪುಣ್ಯಾತ್ಮನ ಚರಿತ್ರೆಯನ್ನು ದೇವತೆಗಳೂ ಸಹ ಸ್ವರ್ಗಲೋಕದಲ್ಲಿ ಕಥನ ಮಾಡುತ್ತಿರುವರು.

೪೯. ಯಮಧರ್ಮನೆ! ಯಾವ ಮನುಷ್ಯನು ಕಾಶಿಗೆ ಬಂದು ಧರ್ಮೇಶ್ವರನ ಸನ್ನಿಧಿಯನ್ನು ಸೇರಿದರೂ ಆತ್ಮಶ್ರೇಯಸ್ಸಿಗಾಗಿ ಪ್ರಯತ್ನವನ್ನು ಮಾಡುವುದಿಲ್ಲವೋ, ಅವನು ಹೇಗೆತಾನೆ ನಿನ್ನಂತೆ ಮಹಾತೇಜಸ್ವಿಯಾಗಿ ತನ್ನನ್ನು ಕೃತಕೃತ್ಯನನ್ನಾಗಿ ಮಾಡಿಕೊಳ್ಳಲು ಶಕ್ತನಾಗುವನು?

೫೦. ಧರ್ಮರಾಜನೆ! ನೀನು ಹೇಗೆ ಅತ್ಯುಗ್ರವಾದ ತಪಸ್ಸಿನಿಂದ ಸಕಲ ಮನೋರಥಗಳನ್ನೂ ಪಡೆದೆಯೋ, ಹಾಗೆಯೇ ಧರ್ಮೇಶ್ವರನಲ್ಲಿ ಭಕ್ತಿಯನ್ನು ಮಾಡುವವರಿಗೂ ಮುಂದೆ ಅವರವರ ಅಭಿಲಾಷೆಗಳೆಲ್ಲವೂ ಫಲಿಸುತ್ತಿರುವುವು. ಈ ವಿಷಯದಲ್ಲಿ ಎಳ್ಳಿನಷ್ಟೂ ಸಂದೇಹವಿಲ್ಲ.

೫೧. ಈ ಲೋಕದಲ್ಲಿ ಮಹತ್ತರಗಳಾದ ಪಾತಕಗಳನ್ನು ಮಾಡಿದ್ದರೂ ಧರ್ಮೇಶ್ವರನ ಪೂಜೆಯನ್ನು ಒಮ್ಮೆಯಾದರೂ ಮಾಡಿದ ಮೇಲೆ ಮನುಷ್ಯನು ಏಕೆ ಭಯಗೊಳ್ಳಬೇಕು? ನೀನು ಪೂಜಿಸಿರುವ ಈ ಲಿಂಗಕ್ಕೆ ಭಕ್ತರಾಗಿರುವರೆಲ್ಲರೂ ನಿನ್ನ ಪ್ರಿಯಬಂಧುಗಳೇ ಅಲ್ಲವೆ?

ಪತ್ರೇಣ ಪುಷ್ಪೇಣ ಜಲೇನ ದೂರ್ವಯಾ
ಯೋ ಧರ್ಮ ಧರ್ಮೇಶ್ವರಮರ್ಚಯಿಷ್ಯತಿ ।
ಸಮರ್ಚಯಿಷ್ಯಂತ್ಯಮೃತಾಂಧಸಸ್ತಂ
ಮಂದಾರಮಾಲಾಭಿರತಿಪ್ರಹೃಷ್ಟಾಃ ॥ ೫೨ ॥
ತ್ವತ್ತೋ ವಿಭೇಷ್ಯಂತಿ ಕೃತೈನಸೋ ಯೇ
ಭಯಂ ನ ತೇಷಾಂ ಭವಿತಾ ಕದಾಚಿತ್ ।
ಧರ್ಮೇಶ್ವರಾರ್ಚಾರಚನಾಂ ಕರಿಷ್ಯತಾಂ
ಹರಿಷ್ಯತಾಂ ಬಂಧುರತಾಂ ಮನಸ್ತೇ ॥ ೫೩ ॥
ಯದತ್ರ ದಾಸ್ಯಂತಿ ಹಿ ಧರ್ಮಪೀಠೇ
ನರಾ ದ್ಯುನದ್ಯಾಂ ಕೃತಮಜ್ಜನಾಶ್ಚ ।
ಯದಕ್ಷಯಂ ಭಾವಿ ಯುಗಾಂತರೇಽಪಿ
ಕೃತಪ್ರಣಾಮಾಸ್ತವ ಧರ್ಮ ಲಿಂಗೇ ॥ ೫೪ ॥
ಯೇ ಕಾರ್ತಿಕೇ ಮಾಸಿ ಸಿತಾಷ್ಟಮೀತಿಥೌ
ಯಾತ್ರಾಂ ಕರಿಷ್ಯಂತಿ ನರಾ ಉಪೋಷಿತಾಃ ।
ರಾತ್ರೌ ಚ ವೈ ಜಾಗರಣಂ ಮಹೋತ್ಸವೈ
ರ್ಧರ್ಮೇಶ್ವರೇ ತೇ ನ ಪುನರ್ಭವಾ ಭುವಿ ॥ ೫೫ ॥

೫೨. ಧರ್ಮನೆ! ಯಾವನು ಪತ್ರಗಳಿಂದಾಗಲಿ, ಪುಷ್ಪಗಳಿಂದಾಗಲಿ, ಜಲದಿಂದಾಗಲಿ, ದೂರ್ವಾದಳಗಳಿಂದಾಗಲಿ ಧರ್ಮೇಶ್ವರನನ್ನು ಪೂಜಿಸುವನೊ, ಅವನಿಗೆ ಅಮೃತ ಸೇವಿಗಳಾದ ದೇವತೆಗಳೂ ಸಹ ಅತ್ಯಂತ ಸಂತೋಷಗೊಂಡು ಪಾರಿಜಾತವೇ ಮೊದಲಾದ ದಿವ್ಯ ವೃಕ್ಷಗಳ ಕುಸುಮಗಳಿಂದ ಪೂಜೆಯನ್ನು ಮಾಡುವರು.

೫೩. ಯಾರು ಅನೇಕ ಪಾಪಗಳನ್ನು ಮಾಡಿ ನಿನ್ನ ದೆಸೆಯಿಂದ ಭಯ ಪಡುವರೊ, ಅವರು ಧರ್ಮೇಶ್ವರನ ಅರ್ಚನೆಯನ್ನು ಮಾಡಿ ನಿನ್ನೊಡನೆ ಬಾಂಧವ್ಯವನ್ನು ಬೆಳಸಿ ನಿನ್ನ ಮನಸ್ಸನ್ನು ಸೂರಗೊಂಡಮೇಲೆ ಅವರಿಗೆಂದಿಗೂ ಎಲ್ಲಿಯೂ ಯಾವ ಭಯವೂ ಉಂಟಾಗಲಾರದು.

೫೪. ದೇವನದಿಯಾದ ಗಂಗೆಯಲ್ಲಿ ಮಜ್ಜನವನ್ನು ಮಾಡಿಕೊಂಡು ಧರ್ಮೇಶ್ವರ ಲಿಂಗಕ್ಕೆ ಪ್ರಣಾಮಗಳನ್ನು ಮಾಡಿ ಮನುಷ್ಯರು ಈ ಧರ್ಮಪೀಠದಲ್ಲಿ ಯಾವ ದಾನಕ್ರಿಯೆಯನ್ನು ಮಾಡುವರೊ, ಅದು ಈಗಲೂ ಮುಂದೆ ಬರುವ ಯುಗಾಂತರಗಳಲ್ಲಿಯೂ ಅಕ್ಷಯವಾದ ಫಲವನ್ನು ಕೊಡುತ್ತಿರುವುದು.

೫೫. ಯಾವ ನರರು ಕಾರ್ತಿಕಮಾಸದ ಶುಕ್ಲಾಷ್ಟಮಿಯ ದಿನದಲ್ಲಿ ಉಪವಾಸವನ್ನು ಮಾಡಿ ಧರ್ಮೇಶ್ವರನಿಗೆ ಯಾತ್ರೆಯನ್ನು ನಡೆಸಿ ರಾತ್ರಿಯಲ್ಲಿ

ಸ್ತುತಿಂ ಚ ಯೇ ತ್ವದುದೀರಿತಾಮಿಮಾಂ
ನರಾಃ ಪಠಿಷ್ಯಂತಿ ತವಾಗ್ರತಃ ಕ್ವಚಿತ್ ।
ನಿರೇನಸಸ್ತೇ ಮಮ ಲೋಕಗಾಮಿನಃ
ಪ್ರಾಪ್ಸ್ಯಂತಿ ತೇ ವೈ ಭವತಃ ಸಖಿತ್ವಂ ॥ ೫೬ ॥
ಪುನರ್ವರಂ ಬ್ರೂಹಿ ಯಥೇಽಪ್ಸಿತಂ ದಧೇ
ತೇಜೋನಿಧೇರ್ನಂದನ ಧರ್ಮರಾಜ ।
ಅದೇಯಮತ್ರಾಸ್ತಿ ನ ಕಿಂಚಿದೇವ ತೇ
ವಿಧೇಹಿ ವಾಗುದ್ಯಮಮಾತ್ರಮೇವ ॥ ೫೭ ॥
ಪ್ರಸನ್ನಮೂರ್ತಿಂ ಸ ವಿಲೋಕ್ಯ ಶಂಕರಂ
ಕಾರುಣ್ಯಪೂರ್ಣಂ ಸ್ವಮನೋರಥಾಭಿಧಂ ।
ಆನಂದಸಂದೋಹಸರೋನಿಮಗ್ನೋ
ವಕ್ತುಂ ಕ್ಷಣಂ ನೈವ ಶಶಾಕ ಕಿಂಚಿತ್ ॥ ೫೮ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಧರ್ಮೇಶಮಹಿಮಾಖ್ಯಾನವರ್ಣನಂ" ನಾಮಾಷ್ಟಸಪ್ತತಿತಮೋಽಧ್ಯಾಯಃ**

ಯಾವಯಾವುಕ್ಕೂ ಮಹೋತ್ಸವವನ್ನು ಮಾಡುತ್ತ ಜಾಗರಣೆಯನ್ನು ಮಾಡುವರೊ, ಆ ಜನರು ಪುನಃ ಭೂಲೋಕದಲ್ಲಿ ಜನ್ಮವನ್ನು ತಾಳುವುದಿಲ್ಲ.

೫೬. ನಿನ್ನ ಮುಖದಿಂದ ಹೊರಟಿರುವ ಈ ಸ್ತೋತ್ರವನ್ನು ಯಾವ ನರರು ಒಮ್ಮೆಯಾದರೂ ಈ ಧರ್ಮೇಶ್ವರಲಿಂಗದ ಮುಂದೆ ಪಠನ ಮಾಡುವರೊ, ಅವರು ಪಾಪರಹಿತರಾಗುವುದು ಮಾತ್ರವಲ್ಲದೆ ನನ್ನ ಲೋಕವನ್ನೇ ಸೇರುವರು ಮತ್ತು ನಿನ್ನ ಸೌಹಾರ್ದವನ್ನೂ ಪಡೆದು ಸುಖಿಗಳಾಗುವರು.

೫೭. ತೇಜೋರಾಶಿಯಾದ ಎಲೈ ಸೂರ್ಯನ ಪುತ್ರನೆ! ಧರ್ಮರಾಜನೆ! ಮತ್ತೆ ಯಾವ ವರವು ಬೇಕಾಗಿದ್ದರೂ ಕೇಳಿಕೊ, ಕೊಡುವೆನು. ನಿನಗೆ ಕೊಡಲಾರದಂತಹ ವಸ್ತುವು ಮೂರು ಲೋಕಗಳಲ್ಲಿ ಯಾವುದೂ ಇಲ್ಲವಷ್ಟೆ. ಈ ವಿಷಯದಲ್ಲಿ ನೀನು ಮಾತನಾಡುವ ಪ್ರಯತ್ನವನ್ನು ಮಾತ್ರ ಮಾಡು.

೫೮. ಆ ಧರ್ಮರಾಜನಾದರೊ, ಪ್ರಸನ್ನಮುಖವುಳ್ಳವನೂ, ಸೌಖ್ಯದಾಯಕನೂ, ಕರುಣಾಸಮುದ್ರನೂ, ತನ್ನ ಮನೋರಥಗಳನ್ನು ಶೀಘ್ರದಲ್ಲಿಯೇ ಕೈಗೂಡಿಸುವವನೂ ಆದ ಮಹೇಶ್ವರನನ್ನು ಕಂಡು ಆನಂದಾತಿಶಯವೆಂಬ ಸರೋವರದಲ್ಲಿ ಮುಳುಗಿ ಒಂದು ಕ್ಷಣದವರೆಗೂ ಯಾವ ಮಾತನ್ನಾಡಲೂ ಸಮರ್ಥನಾಗಲಿಲ್ಲ.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಧರ್ಮೇಶ್ವರಮಹಿಮಾಖ್ಯಾನವರ್ಣನ"ವೆಂಬ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು**

ಶ್ರೀಃ ॥

# ಅಥೈಕೋನಾಶೀತಿತಮೋಽಧ್ಯಾಯಃ

## ಧರ್ಮೇಶಾಖ್ಯಾನವರ್ಣನಂ

ಸ್ಕಂದ ಉವಾಚ :—

ಆನಂದಬಾಷ್ಪಸಲಿಲರುದ್ಧಕಂಠಂ ವಿಲೋಕ್ಯ ತಂ ।
ಮೃಡಃ ಪಸ್ಪರ್ಶ ಪಾಣಿಭ್ಯಾಂ ಸೌಧಾಭ್ಯಾಂ ತು ಸುಧಾಂಬುಧಿಃ ॥ ೧ ॥
ಅಥ ತತ್ಸ್ಪರ್ಶಸೌಖ್ಯೇನ ಧರ್ಮರಾಜೋ ಮಹಾತಪಾಃ ।
ಪುನರಂಕುರಯಾಮಾಸ ತಪೋಽಗ್ನಿಜ್ವಲಿತಾಂ ತನುಂ ॥ ೨ ॥
ತತಃ ಪ್ರೋವಾಚ ಸ ಬ್ರಾಧ್ನಿರ್ದೇವದೇವಮುಮಾಪತಿಂ ।
ಪ್ರಸನ್ನವದನಂ ಶಾಂತಂ ಶಾಂತಪಾರಿಷದಾವೃತಂ ॥ ೩ ॥
ಪ್ರಸನ್ನೋಽಸಿ ಯದೀಶಾನ ಸರ್ವಜ್ಞ ಕರುಣಾನಿಧೇ ।
ಕಿಮನ್ಯೇನ ವರೇಣಾತ್ರ ಯತ್ತ್ವಂ ಸಾಕ್ಷಾತ್ಕೃತೋ ಮಯಾ ॥ ೪ ॥
ಯಂ ನ ವೇದಾ ವಿದುಃ ಸಂಯಕ್ ನ ಚ ತೌ ವೇದಪೂರುಷೌ ।
ತತೋಽಪಿ ವರಯೋಗ್ಯೋಽಸ್ಮಿ ತನ್ನಾಥ ಪ್ರಾರ್ಥಯಾಮ್ಯಹಂ ॥ ೫ ॥

---

## ಕನ್ನಡದ ಅನುವಾದ

### ಧರ್ಮೇಶಾಖ್ಯಾನವರ್ಣನ

೧. ಸ್ಕಂದನು ಹೇಳುತ್ತಾನೆ :—ಇಂತು ಯಮಧರ್ಮರಾಜನು ಆನಂದ ಬಾಷ್ಪಗಳನ್ನು ಸುರಿಸುತ್ತ ಗದ್ಗದಿತವಾದ ಕಂಠದಿಂದ ಏನನ್ನೂ ಹೇಳಲಾರದೆ ನಿಂತಿರಲು ಆತನನ್ನು ಕಂಡು ಅಮೃತಸಮುದ್ರಪ್ರಾಯನಾದ ಮಹೇಶ್ವರನು ಅಮೃತಮಯಗಳಾದ ತನ್ನ ಎರಡು ಕೈಗಳಿಂದಲೂ ಅವನ ಮೈದಡವಿದನು.

೨. ಮಹಾತಪಸ್ವಿಯಾದ ಧರ್ಮರಾಜನು ಆ ಸ್ಪರ್ಶದ ಸೌಖ್ಯವನ್ನನು ಭವಿಸಿ ತಪೋಗ್ನಿಯಿಂದ ಶುಷ್ಕವಾಗಿದ್ದ ತನ್ನ ಶರೀರವನ್ನು ಪುನಃ ಹೃಷ್ಟಪುಷ್ಟ ವಾಗಿ ಮಾಡಿಕೊಂಡು ಸ್ವಸ್ಥನಾಗಿ ನಿಂತನು.

೩. ದೇವದೇವನೂ, ಪ್ರಸನ್ನಮುಖಕಮಲವುಳ್ಳವನೂ, ಶಾಂತನೂ, ಪ್ರಶಾಂತರಾದ ಪ್ರಮಥಗಣಗಳಿಂದ ಪರಿವಾರಿತನೂ ಆದ ಪಾರ್ವತೀರಮಣನನ್ನು ಕುರಿತು ಆ ಸೂರ್ಯನಂದನನು ಇಂತು ಬಿನ್ನವಿಸತೊಡಗಿದನು.

೪. "ಮಹೇಶ್ವರನೆ! ಸರ್ವಜ್ಞನೆ! ಕರುಣಾಸಮುದ್ರನೆ! ನೀನೇ ನನ್ನಲ್ಲಿ ಪ್ರಸನ್ನನಾಗಿರುವೆಯಲ್ಲವೆ. ನಿನ್ನನ್ನೇ ಸಾಕ್ಷಾತ್ತಾಗಿ ನೋಡಿರುವೆನಾದುದರಿಂದ ಬೇರೆ ವರಗಳಿಂದ ನನಗೇನಾಗಬೇಕಾಗಿರುವುದು ?

೫. ಯಾವನನ್ನು ನಾಲ್ಕು ವೇದಗಳೂ, ವೇದಪುರುಷರಾದ ಬ್ರಹ್ಮ

ಶ್ರೀಕಂಠಾಂಡಜಡಿಂಭಾನಾಮಮೀಷಾಂ ಮಧುರಬ್ರುವಾಂ ।
ಮತ್ತಪಶ್ಚಿರಸಾಕ್ಷೀಣಾಂ ಮತ್ಪುರಃ ಪ್ರಾಪ್ತಜನ್ಮನಾಂ ॥ ೬ ॥
ಪಿತೃಭ್ಯಾಂ ಪರಿಹೀನಾನಾಮಿತಿಹಾಸಕಥಾವಿದಾಂ ।
ತ್ಯಕ್ತಾಹಾರವಿಹಾರಾಣಾಂ ಕೀರಾಣಾಂ ವರದೋ ಭವ ॥ ೭ ॥
ಏತತ್ಪ್ರಸೂತಿಸಮಯೇ ಆಮಯೇನ ಪ್ರಪೀಡಿತಾ ।
ಶುಕೀ ಪಂಚತ್ವಮಾಪನ್ನಾ ಶುಕಃ ಶ್ಯೇನೇನ ಭಕ್ಷಿತಃ ॥ ೮ ॥
ರಕ್ಷಿತಾನಾಮನಾಥಾನಾಂ ಸದಾ ಮನ್ಮುಖದರ್ಶಿನಾಂ ।
ಅನಾಥನಾಥ ಭವತಾ ಹ್ಯಾಯುಃಶೇಷಃಸ್ವರೂಪಿಣಾ ॥ ೯ ॥
ಇತಿ ಧರ್ಮವಚಃ ಶ್ರುತ್ವಾ ಪರೋಪಕೃತಿನಿರ್ಮಲಂ ।
ತಾನಾಹೂಯ ಮುನೇ ಶಂಭುರ್ವಿನಯಾವನತಾನನಾನ್ ॥ ೧೦ ॥
ಉವಾಚ ಧರ್ಮೋಽತಿಪ್ರೀತಃ ಶುಕಶಾವಾನಿದಂ ವಚಃ ।
ಅಯಿ ಪತ್ರರಥಾ ಬ್ರೂತ ಸಾಧವೋ ಧರ್ಮಸಂಗತಾಃ ॥ ೧೧ ॥

---

ವಿಷ್ಣುಗಳೂ ಸಹ ಸಮಗ್ರವಾಗಿ ತಿಳಿಯಲು ಸಾಧ್ಯವಿಲ್ಲವೊ, ಅಂತಹ ನಿನ್ನಿಂದಲೇ ನಾನು ವರಸ್ವೀಕಾರಕ್ಕೆ ಯೋಗ್ಯನೆಂದು ಹೇಳಲ್ಪಟ್ಟಿರುವುದರಿಂದ ಈಗ ಪ್ರಾರ್ಥನೆಯನ್ನು ಮಾಡಿಕೊಳ್ಳುತ್ತೇನೆ.

೬. ನೀಲಕಂಠನೆ! ಈ ಗಿಳಿಯ ಮರಿಗಳನ್ನು ನೋಡು. ಇವು ಮಧುರವಾಗಿ ಮಾತನಾಡುತ್ತಿರುವುವು. ನನ್ನ ತಪಸ್ಸಿಗೆ ಬಹಳಕಾಲದಿಂದಲೂ ಸಾಕ್ಷಿಗಳಾಗಿರುವುವು. ನನ್ನ ಮುಂದೆಯೇ ಜನ್ಮವನ್ನು ತಾಳಿದುವು.

೭. ಇವುಗಳಿಗೆ ತಂದೆತಾಯಿಗಳಿಬ್ಬರೂ ಇಲ್ಲ. ಇವು ಸಮಸ್ತಗಳಾದ ಇತಿಹಾಸಕಥೆಗಳನ್ನೂ ಬಲ್ಲವು. ನನ್ನಂತೆಯೇ ಆಹಾರವಿಹಾರಗಳನ್ನು ತ್ಯಜಿಸಿರುವುವು. ಆದುದರಿಂದ ಇವುಗಳಿಗೂ ವರವನ್ನು ಕೊಡುವನಾಗು.

೮. ಇವು ಹುಟ್ಟುವ ಕಾಲದಲ್ಲಿ ಪ್ರಸವವೇದನೆಯಿಂದ ಪೀಡಿತಳಾಗಿ ತಾಯಿ ಪಕ್ಷಿಯು ಮರಣವನ್ನು ಹೊಂದಿತು. ಬಳಿಕ ತಂದೆಯಾದ ಗಂಡು ಗಿಳಿಯೂ ಒಂದು ಗಿಡಗನ ಕೈಯಲ್ಲಿ ಸಿಕ್ಕಿ ಭಕ್ಷಿಸಲ್ಪಟ್ಟಿತು.

೯. ಹುಟ್ಟಿದಂದಿನಿಂದಲೂ ಇವು ನನ್ನ ಮುಖವನ್ನು ನೋಡಿಯೇ ಬೆಳೆದಿರುವುವು. ಎಲೈ ಅನಾಥರಕ್ಷಕನೆ! ದೀರ್ಘಾಯುಸ್ಸ್ವರೂಪನಾದ ನಿನ್ನಿಂದಲೇ ಈ ಅನಾಥ ಪಕ್ಷಿಗಳು ರಕ್ಷಿಸಲ್ಪಟ್ಟಿರುವುವಲ್ಲವೆ.''

೧೦–೧೧. ಅಗಸ್ತ್ಯಮುನಿಯೆ! ಕೇವಲ ಪರೋಪಕಾರನಿರತವೂ ಅತ್ಯಂತ ನಿರ್ಮಲವೂ ಆದ ಧರ್ಮರಾಜನ ಈ ಮಾತುಗಳನ್ನು ಲಾಲಿಸಿ ಆತನಲ್ಲಿ ಬಹಳ ಸಂತೋಷಗೊಂಡವನಾಗಿ ವಿನಯದಿಂದ ಕತ್ತುಗಳನ್ನು ಬಗ್ಗಿಸಿಕೊಂಡು ನಿಂತಿದ್ದ ಆ ಗಿಳಿಯ ಮರಿಗಳನ್ನು ಸಮೀಪಕ್ಕೆ ಕರೆದು ಮಾತನಾಡಿದನು. ''ಎಲೈ

**ಕೋ ವರೋ ಭವತಾಂ ದೇಯೋ ಧರ್ಮೇಶಪರಿಚಾರಿಣಾಂ ।**
**ಸಾಧುಸಂಸರ್ಗಸಂಕ್ಷೀಣಜನ್ಮಾಂತರಮಹೈನಸಾಂ ॥ ೧೨ ॥**
**ಇತಿ ಶ್ರುತ್ವಾ ಮಹೇಶಸ್ಯ ವಚನಂ ತೇ ಪತತ್ತ್ರಿಣಃ ।**
**ಪ್ರೋಚುಃ ಪ್ರಣಮ್ಯ ದೇವೇಶಂ ನಮಸ್ತೇ ಭವನಾಶನ ॥ ೧೩ ॥**

**ಪಕ್ಷಿಣ ಊಚುಃ:—**

**ಅನಾಥನಾಥ ಸರ್ವಜ್ಞ ಕೋ ವರೋ ನಃ ಸನಿಾಹಿತಃ ।**
**ಇತೋಽಪಿ ತ್ರ್ಯಕ್ಷ ಯತ್ಸಾಕ್ಷಾತ್ತಿರ್ಯಕ್ತ್ವೇಪಿ ಸಮೀಕ್ಷಿತಾಃ ॥ ೧೪ ॥**
**ಲಾಭಾಃ ಸಂತೂದ್ಯಮವತಾಂ ಗಿರೀಶೇಹ ಪರಾಃ ಶತಾಃ ।**
**ಪರಂಪರೋಽಯಂ ಲಾಭೋಽತ್ರ ಯತ್ತ್ವಂ ದೃಗ್ಗೋಚರೀಭವೇಃ ॥ ೧೫ ॥**
**ಯದೇತದ್ದೃಶ್ಯತೇ ನಾಥ ತತ್ಸರ್ವಂ ಕ್ಷಣಭಂಗುರಂ ।**
**ಅಭಂಗುರೋ ಭವಾನೇಕಸ್ತ್ವತ್ಸಪರ್ಯಾಪ್ಯಭಂಗುರಾ ॥ ೧೬ ॥**

---

ಪಕ್ಷಿಗಳಿರಾ! ನಿಮಗೆ ಬೇಕಾದುದನ್ನು ಕೇಳಿರಿ. ನೀವು ಸಾಧುವೃತ್ತವುಳ್ಳವುಗಳಾಗಿರುವಿರಿ. ಕೇವಲ ಧರ್ಮಾಚರಣೆಯಲ್ಲಿಯೇ ತೊಡಗಿರುವಿರಿ.

೧೨. ಧರ್ಮೇಶ್ವರನಿಗೆ ಪರಿಚರ್ಯೆಯನ್ನು ಮಾಡುತ್ತಿರುವ ನಿಮಗೆ ನಾನು ಯಾವ ವರವನ್ನು ಕೊಡಲಿ? ನೀವು ಸಾಧುಗಳಾದ ಧರ್ಮರಾಜನೇ ಮೊದಲಾದವರ ಸಹವಾಸದಿಂದ ಜನ್ಮಾಂತರಗಳಲ್ಲಿ ಮಾಡಿದ ನಿಮ್ಮ ಮಹಾಪಾತಕಗಳೂ ನಾಶವಾಗಿರುವುವು.''

೧೩. ಮಹೇಶ್ವರನ ಈ ಮಾತುಗಳನ್ನು ಕೇಳಿ ಪಕ್ಷಿಗಳು ಆ ದೇವತಾಸಾರ್ವಭೌಮನಿಗೆ ಪ್ರಣಾಮವನ್ನು ಮಾಡಿ ಹೇಳತೊಡಗಿದುವು. ಭಕ್ತಜನರ ಸಂಸಾರಕ್ಲೇಶವನ್ನು ನಾಶಮಾಡುವ ನಿನಗೆ ನಮಸ್ಕರಿಸುವೆವು.

೧೪. ಪಕ್ಷಿಗಳು ಹೇಳುತ್ತವೆ:—ಅನಾಥನಾಥನೆ! ಸರ್ವಜ್ಞನೆ! ತ್ರಿಲೋಚನನೆ! ಇನ್ನು ನಮಗೆ ಬೇರೆ ಬೇಕಾದ ವರವು ಯಾವುದಿರುವುದು? ತಿರ್ಯಗ್ಯೋನಿಯಲ್ಲಿ ಜನಿಸಿದ್ದರೂ ನಮಗೆ ನೀನು ಸಾಕ್ಷಾತ್ಕರಿಸಿ ಅನುಗ್ರಹದಿಂದ ನೋಡುತ್ತಿರುವೆ.

೧೫. ಗಿರೀಶ್ವರನೆ! ಇಲ್ಲಿ ಸಾಧನೆಯನ್ನು ಮಾಡುವ ಮನುಷ್ಯರಿಗೆ ನೂರಾರು ಇತರ ಪ್ರಯೋಜನಗಳು ಯಥೇಚ್ಛವಾಗಿ ಲಭಿಸಲಿ. ಆದರೆ ನಮಗೆ ಮಾತ್ರ ನೀನು ಸ್ಥೂಲನೇತ್ರಗಳಿಗೆ ಕಾಣಿಸುತ್ತ ನಿಂತಿರುವುದೇ ಸರ್ವೋತ್ತಮವಾದ ಪ್ರಯೋಜನವು.

೧೬. ಸರ್ವೇಶ್ವರನೆ! ಇದಿರಿನಲ್ಲಿ ಕಾಣಿಸುತ್ತಿರುವ ಈ ಪ್ರಪಂಚವೆಲ್ಲವೂ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದುವುದಾಗಿರುವುದು. ನೀನೊಬ್ಬನೇ ನಾಶರಹಿತನಾಗಿರುವೆ. ನಿನ್ನ ಪೂಜೆಯೂ ಅಕ್ಷಯಫಲದಾಯಕವಾಗಿರುವುದರಿಂದ ನಾಶರಹಿತವೇ ಆಗಿರುವುದು.

ವಿಚಿತ್ರಜನ್ಮಕೋಟೀನಾಂ ಸ್ಮೃತಿರ್ನೋಽತ್ರ ಪರಿಸ್ಫುರೇತ್ ।
ಏತತ್ತಪಸ್ವಿರಚಿತಲಿಂಗಪೂಜಾವಿಲೋಕನಾತ್ ॥ ೧೭ ॥
ದೇವಯೋನಿರಪಿ ಪ್ರಾಪ್ತಾ ಚಿರಮಸ್ಮಾಭಿರೀಶಿತಃ ।
ದಿವ್ಯಾಂಗನಾಸಹಸ್ರಾಣಿ ತತ್ರ ಭುಕ್ತ್ವಾ ಸ್ವಲೀಲಯಾ ॥ ೧೮ ॥
ಆಸುರೀ ದಾನವೀ ನಾಗೀ ನೈರ್ಋತೀ ಚಾಪಿ ಕೈನ್ನರೀ ।
ವಿದ್ಯಾಧರೀ ಚ ಗಾಂಧರ್ವೀ ಯೋನಿರಸ್ಮಾಭಿರರ್ಜಿತಾ ॥ ೧೯ ॥
ನರತ್ವೇ ಭೂಪತಿತ್ವಂ ಚ ಪರಿಪ್ರಾಪ್ತಮನೇಕಶಃ ।
ಜಲೇ ಜಲಚರತ್ವಂ ಚ ಸ್ಥಲೇ ಚ ಸ್ಥಲಚಾರಿತಾ ॥ ೨೦ ॥
ವನೇ ವನ್ಯೈಕಸೋ ಜಾತಾ ಗ್ರಾಮೇಷು ಗ್ರಾಮವಾಸಿನಃ ।
ದಾತಾರೋ ಯಾಚಿತಾರಶ್ಚ ರಕ್ಷಿತಾರಶ್ಚ ಘಾತುಕಾಃ ॥ ೨೧ ॥
ಸುಖಿನೋಽಪಿ ವಯಂ ಜಾತಾ ದುಃಖಿನೋ ವಯಮಾಸ್ಮ ಚ ।
ಜೇತಾರಶ್ಚ ವಯಂ ಜಾತಾಃ ಪರಾಜೇತಾರ ಏವ ಚ ॥ ೨೨ ॥

---

೧೭. ತಪಸ್ಸಂಪನ್ನನಾದ ಈ ಯಮಧರ್ಮರಾಜನು ಮಾಡಿದ ಶಿವಲಿಂಗಾರ್ಚನೆಯನ್ನು ನೋಡಿದುದರಿಂದ ನಮಗೆ ಇಲ್ಲಿ ಹಿಂದೆ ವಿಚಿತ್ರಯೋನಿಗಳಲ್ಲಿ ಸಂಭವಿಸಿದ ಕೋಟಿಜನ್ಮಗಳ ನೆನಪೂ ಸಹ ಈಗ ಉಂಟಾಗುತ್ತಿರುವುದು.

೧೮. ಮಹೇಶ್ವರನೆ! ಹಿಂದೆ ನಮಗೆ ಬಹುಕಾಲದವರೆಗೂ ದಿವ್ಯಯೋನಿಗಳಲ್ಲಿ ಜನ್ಮವು ಲಭಿಸಿದ್ದಿತು. ಆಗ ಯಥೇಚ್ಛವಾಗಿ ಸಾವಿರಾರು ದೇವಕನ್ಯೆಯರೊಡನೆ ಅನೇಕ ಭೋಗಗಳನ್ನು ಪಡೆದು ಸುಖಿಸಿದೆವು.

೧೯. ರಾಕ್ಷಸ, ದಾನವ, ನಾಗ, ನೈಋುತ (ಯಕ್ಷ), ಕಿನ್ನರ, ವಿದ್ಯಾಧರ ಮತ್ತು ಗಂಧರ್ವರೇ ಮೊದಲಾದ ಅನೇಕ ಕುಲಗಳಲ್ಲಿ ನಾವು ಜನ್ಮಗಳನ್ನು ತಾಳಿದೆವು.

೨೦. ಅನೇಕ ಜನ್ಮಗಳಲ್ಲಿ ಮನುಷ್ಯಲೋಕದಲ್ಲಿ ಮಹಾರಾಜರಾಗಿ ಜನಿಸಿರುವೆವು. ಜಲದಲ್ಲಿ ಮೀನು ಮೊದಲಾಗಿಯೂ, ನೆಲದಲ್ಲಿ ಕ್ರಿಮಿಪಶ್ವಾದಿಗಳಾಗಿಯೂ ಅನೇಕಸಲ ಹುಟ್ಟಿರುವೆವು.

೨೧. ಅರಣ್ಯಗಳಲ್ಲಿ ಕಾಡುಮೃಗಗಳಾಗಿದ್ದೆವು. ನಗರಗಳಲ್ಲಿ ನಗರವಾಸಿಗಳಾಗಿದ್ದೆವು. ಜೀವನಯಾತ್ರೆಯನ್ನು ಸಾಗಿಸಲು ದಾನಮಾಡಿರುವೆವು. ಯಾಚಿಸಿರುವೆವು. ಆರ್ತರನ್ನು ಸಂರಕ್ಷಿಸಿರುವೆವು. ಕೊಂದುಹಾಕಿರುವೆವು.

೨೨. ಕಾಲಕ್ರಮದಿಂದ ಸುಖಸಂಪತ್ತುಗಳಲ್ಲಿಯೂ ಬೆಳೆದಿರುವೆವು. ದುಃಖಕ್ಕೂ ಭಾಗಿಗಳಾಗಿರುವೆವು. ಯುದ್ಧಾದಿಗಳಲ್ಲಿ ಜಯವನ್ನೂ ಪಡೆದಿರುವೆವು. ಪರಾಜಯವನ್ನೂ ಅನುಭವಿಸಿರುವೆವು.

ಅಧೀತಿನೋಽಪಿ ಮೂರ್ಖಾಶ್ಚ ಸ್ವಾಮಿನಃ ಸೇವಕಾ ಅಪಿ ।
ಚತುರ್ಷ್ವ ಭೂತಗ್ರಾಮೇಷು ಉತ್ತಮಾಧಮಮಧ್ಯಮಾಃ ॥ ೨೩ ॥
ಅಭೂಮ ಭೂರಿಶಂ ಶಂಭೋ ನ ಕ್ವಾಪಿ ಸ್ಥೈರ್ಯಮಾಗತಾಃ ।
ಇತೋ ಯೋನಸ್ತತೋ ಯೋನೌ ತತೋ ಯೋನೇಸ್ತತೋನ್ಯತಃ॥ ೨೪ ॥
ಪಿನಾಕಿನ್ಕ್ವಾಪಿ ನ ಪ್ರಾಪಿ ಸುಖಲೇಶೋ ಮನಾಗಪಿ ।
ಇದಾನೀಂ ಪುಣ್ಯಸಂಭಾರೈರ್ಧರ್ಮೇಶ್ವರವಿಲೋಕನಾತ್ ॥ ೨೫ ॥
ತಾಪನೇಃ ಸುತಪೋವಹ್ನಿಜ್ವಾಲಾಪ್ರಜ್ವಲಿತೈನಸಃ ।
ಸಂವೀಕ್ಷ್ಯ ತ್ರ್ಯಕ್ಷ ಸಾಕ್ಷಾತ್ತ್ವಾಂ ಕೃತಕೃತ್ಯಾ ಬಭೂವಿಮ ॥ ೨೬ ॥
ತಥಾಪಿ ಚೇದ್ವರೋ ದೇಯುಸ್ತಿರ್ಯಕ್ತ್ವಸ್ಮಾಸು ಧೂರ್ಜಟೇ ।
ಕೃಪಣೇಷ್ವಪಿ ಶೋಚ್ಯೇಷು ಜ್ಞಾನಂ ಸರ್ವಜ್ಞ ದೇಹಿ ತತ್ ॥ ೨೭ ॥
ಯೇನ ಜ್ಞಾನೇನ ಮುಕ್ತಾಃಸ್ಮೋಽಮುಷ್ಮಾತ್ಸಂಸಾರಬಂಧನಾತ್ ।
ಯಂತ್ರಿತಾಃ ಪ್ರಾಕೃತೈಃ ಪಾಶೈಃ ಅದುರ್ಭೇದ್ಯೈಶ್ಚ ಮಾದೃಶೈಃ ॥ ೨೮ ॥

೨೩. ವೇದಶಾಸ್ತ್ರಗಳ ಅಧ್ಯಯನಗಳನ್ನೂ ಮಾಡಿರುವೆವು. ಆದರೂ ನಾವು ಕೇವಲ ಮೂರ್ಖರಾಗಿಯೆ ಜನಿಸಿರುವೆವು. ಅನೇಕಬಾರಿ ಸ್ವಾಮಿಗಳಾಗಿಯೂ, ಸೇವಕರಾಗಿಯೂ ಇದ್ದೆವು. ಜರಾಯುಜ, ಸ್ವೇದಜ, ಅಂಡಜ ಮತ್ತು ಉದ್ಭಿಜ್ಜ ಗಳೆಂಬ ನಾಲ್ಕುವಿಧ ಪ್ರಾಣಿಗಳ ಮಧ್ಯದಲ್ಲಿಯೂ ಸತ್ತ್ವರಜಸ್ತಮೋಗುಣಗಳ ಪ್ರಾಚುರ್ಯದಿಂದ ಕ್ರಮವಾಗಿ ಉತ್ತಮ, ಮಧ್ಯಮ ಮತ್ತು ಅಧಮ ವ್ಯಾಪಾರ ಗಳನ್ನು ನಡೆಸಿರುವೆವು.

೨೪. ಶಂಭುವೆ! ಇಂತು ಅಸಂಖ್ಯಾಕಗಳಾದ ಜನ್ಮಗಳನ್ನು ಪಡೆದಿದ್ದರೂ ಎಲ್ಲಿಯೂ ಮನಸ್ಥೈರ್ಯವನ್ನು ಹೊಂದಲಾಗಲಿಲ್ಲ. ಈ ಜನ್ಮದಿಂದ ಮತ್ತೊಂದು, ಅದರಿಂದ ಮಗುದೊಂದು—ಹೀಗೆಯೇ ಜನ್ಮಗಳು ನಡೆದುಬಂದಿರುವುವು.

೨೫–೨೬. ಓ ಪಿನಾಕಪಾಣಿಯೆ! ತ್ರಿನೇತ್ರನೆ! ಯಾವ ಜನ್ಮದಲ್ಲಿಯೂ ಸ್ವಲ್ಪಕಾಲವಾದರೂ ಸುಖಲೇಶವನ್ನು ಪಡೆಯಲಿಲ್ಲ. ಈ ಜನ್ಮದಲ್ಲಿ ನಮ್ಮ ಪುಣ್ಯದ ಫಲವಾಗಿಯೋ ಎಂಬಂತೆ ಧರ್ಮೇಶ್ವರನ ದರ್ಶನಲಾಭದಿಂದಲೂ ಸೂರ್ಯಪುತ್ರ ನಾದ ಈತನ ತಪೋಗ್ನಿಯ ಜ್ವಾಲೆಗಳಿಂದ ನಮ್ಮ ಪಾತಕಗಳೆಲ್ಲವೂ ಭಸ್ಮವಾಗಿರು ವುದರಿಂದಲೂ, ಸ್ಥೂಲನೇತ್ರಗಳಿಂದಲೇ ನಿನ್ನನ್ನು ನೋಡಿ ಕೃತಾರ್ಥತೆಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

೨೭. ತಿರ್ಯಗ್ಯೋನಿಯಲ್ಲಿ ಜನಿಸಿದುವುಗಳೂ, ದೀನಗಳೂ, ಅನು ಕಂಪಾರ್ಹಗಳೂ ಆದ ನಮಗೆ ನೀನು ವರವನ್ನೇ ಕೊಡುವೆಯಾದರೆ ನಮಗೆ ಜ್ಞಾನವನ್ನನುಗ್ರಹಿಸು.

೨೮. ತ್ರಿಗುಣಾತ್ಮಕವಾದ ಪ್ರಕೃತಿಯ ಪಾಶಗಳು ನಮ್ಮನ್ನು ಬಂಧಿಸಿ

ಐಂದ್ರಂ ಪದಂ ನ ವಾಂಛಾಮೋ ನ ಚಾಂದ್ರಂ ನಾನ್ಯದೇವ ಹಿ ।
ವಾಂಛಾಮಃ ಕೇವಲಂ ಮೃತ್ಯುಂ ಕಾಶ್ಯಾಂ ಶಂಭೋಽಪುನರ್ಭವಂ ॥
ತ್ವತ್ಸಾನ್ನಿಧ್ಯಾದ್ವಿಜಾನೀಮಃ ಸರ್ವಜ್ಞ ಸಕಲಂ ವಯಂ ।
ಯಥಾ ಚಂದನಸಂಸರ್ಗಾತ್ಸರ್ವೇ ಸುರಭಯೋ ದ್ರುಮಾಃ ॥ ೩೦ ॥
ಏತದೇವ ಪರಂ ಜ್ಞಾನಂ ಸಂಸಾರೋಚ್ಛಿತ್ತಿಕಾರಣಂ ।
ವಪುರ್ವಿಸರ್ಜನಂ ಕಾಲೇ ಯತ್ರ ವಾನಂದಕಾನನೇ ॥ ೩೧ ॥
ನಿರ್ಮಥ್ಯ ವಿಷ್ವಗ್ವಾಗ್ಜಾಲಂ ಸಾರಭೂತಮಿದಂ ಪರಂ ।
ಬ್ರಹ್ಮಣೋದೀರಿತಂ ಪೂರ್ವಂ ಕಾಶ್ಯಾಂ ಮುಕ್ತಿಸ್ತನುತ್ಯಜಾಂ ॥ ೩೨ ॥
ಯದ್ವಾಚ್ಯಂ ಬಹುಭಿರ್ಗ್ರಂಥೈಸ್ತದಷ್ಟಾಭಿರಿವಾಕ್ಷರೈಃ ।
ಹರಿಣೋಕ್ತಂ ರವಿಪುರಃ ಕೈವಲ್ಯಂ ಕಾಶಿಸಂಸ್ಥಿತೈಃ ॥ ೩೩ ॥

---

ನಮ್ಮಂತಹ ಸಾಧಾರಣ ಜೀವರಿಗೆ ದುರ್ಭೇದ್ಯವಾಗಿ ಕೈಗೊಂಬೆಗಳಂತೆ ನಮ್ಮನ್ನು ಆಡಿಸುತ್ತಿರುವುವು. ಪ್ರಕೃತಿಬಂಧನರೂಪವಾದ ಆ ಸಂಸಾರದಿಂದ ಮೋಕ್ಷವನ್ನು ಪಡೆಯಲು ಯಾವ ಜ್ಞಾನವು ಕಾರಣವಾಗಿರುವುದೊ, ಅದನ್ನು ನಮಗೆ ಅನುಗ್ರಹಿಸು.

೨೯. ಶಂಭುವೆ! ನಾವು ಮಹೇಂದ್ರನ ಪದವಿಯನ್ನಾಗಲಿ, ಚಂದ್ರಲೋಕವನ್ನಾಗಲಿ, ಮತ್ತೆ ಬೇರೆ ಯಾವುದನ್ನಾಗಲಿ ಅಪೇಕ್ಷಿಸುವುದಿಲ್ಲ. ಆದರೆ ಕಾಶೀಕ್ಷೇತ್ರದಲ್ಲಿ ದೇಹತ್ಯಾಗವು ಪುನರ್ಜನ್ಮವನ್ನು ನಾಶಮಾಡುವುದೆಂದು ಕೇಳಿರುವೆವು. ಆದುದರಿಂದ ಅದನ್ನುಮಾತ್ರವೇ ಅಪೇಕ್ಷಿಸುತ್ತಿರುವೆವು.

೩೦. ಮಲಯಪರ್ವತದಲ್ಲಿ ಚಂದನವೃಕ್ಷಗಳ ಮೇಲೆ ಬೀಸುವ ಗಾಳಿಯ ಸಂಪರ್ಕದಿಂದ ಇತರ ವೃಕ್ಷಗಳೂ ಸುವಾಸನಾಯುಕ್ತಗಳೇ ಆಗುವಂತೆ ಸರ್ವಜ್ಞನಾದ ನಿನ್ನ ಸಾನ್ನಿಧ್ಯದಲ್ಲಿ ನಿಂತಿರುವುದರಿಂದ ನಾವೂ ಸಮಸ್ತವನ್ನೂ ತಿಳಿದವರಾಗಿರುವೆವು.

೩೧. ನಿನ್ನ ಪ್ರಿಯವಾಸಸ್ಥಳವಾದ ಈ ಆನಂದಕಾನನದಲ್ಲಿಯೇ ಯಥಾಕಾಲದಲ್ಲಿ ದೇಹವನ್ನು ತ್ಯಜಿಸಬೇಕೆಂಬ ಜ್ಞಾನವೇ ಸರ್ವೋತ್ತಮವು. ಇದೊಂದೇ ಸಂಸಾರಬಂಧನದ ವಿಚ್ಛೇದನಕ್ಕೆ ಕಾರಣವಾಗಿರುವುದು.

೩೨. ಪ್ರಪಂಚದ ಸಕಲ ವೇದಶಾಸ್ತ್ರಗಳ ವಾಗ್ಜಾಲವನ್ನೂ ಶೋಧನೆಮಾಡಿ ಬ್ರಹ್ಮದೇವನು ಕಾಶಿಯಲ್ಲಿ ದೇಹತ್ಯಾಗವನ್ನು ಮಾಡಿದವರು ಮೋಕ್ಷವನ್ನು ಪಡೆಯುವರೆಂಬ ಈ ವಾಕ್ಯವೇ ಸಾರಭೂತವಾದುದೆಂದು ಉದ್ಘೋಷಿಸಿರುವನು.

೩೩. ಅನೇಕ ಗ್ರಂಥಗಳಲ್ಲಿ ಯಾವ ತತ್ತ್ವಾರ್ಥವು ಪ್ರತಿಪಾದಿಸಲ್ಪಟ್ಟಿರುವುದೊ, ಅದನ್ನೇ ''ಕಾಶಿವಾಸವೇ ಕೈವಲ್ಯ'' ಎಂಬ ಕೇವಲ ಎಂಟು ಅಕ್ಷರಗಳಿಂದ ಮಹಾವಿಷ್ಣುವು ಪೂರ್ವದಲ್ಲಿ ಸೂರ್ಯದೇವನಿಗೆ ಹೇಳಿರುವನು.

ಯಾಜ್ಞವಲ್ಕ್ಯೋ ಮುನಿವರಃ ಪ್ರೋಕ್ತವಾನ್ಮುನಿಸಂಸದಿ ।
ರವೇರಧೀತ್ಯ ನಿಗಮಾನ್ಕಾಶ್ಯಾಮನ್ತೇ ಪರಂ ಪದಮ್ ॥ ೩೪ ॥
ಸ್ವಾಮಿನಾಪಿ ಜಗದ್ಧಾತ್ರೀ ಪುರತೋ ಮಂದರಾಚಲೇ ।
ಇದಮೇವ ಪುರಾ ಪ್ರೋಕ್ತಂ ಕಾಶೀ ನಿರ್ವಾಣಜನ್ಮಭೂಃ ॥ ೩೫ ॥
ಕೃಷ್ಣದ್ವೈಪಾಯನೋಽಪ್ಯೇವಂ ಶಂಭೋ ವಕ್ಷ್ಯತಿ ನಾನ್ಯಥಾ ।
ಯತ್ರ ವಿಶ್ವೇಶ್ವರಃ ಸಾಕ್ಷಾನ್ಮುಕ್ತಿಸ್ತತ್ರ ಪದೇ ಪದೇ ॥ ೩೬ ॥
ವದನ್ತ್ಯನ್ಯೇಽಪಿ ಮುನಯಸ್ತೀರ್ಥಸಂನ್ಯಾಸಕಾರಿಣಃ ।
ಚಿರಂತನಾ ಲೋಮಶಾದ್ಯಾಃ ಕಾಶಿಕಾ ಮುಕ್ತಿಕಾಶಿಕಾ ॥ ೩೭ ॥
ವಯಮಪ್ಯೇವಂ ಜಾನೀಮೋ ಯತ್ರ ಸ್ವರ್ಗತರಂಗಿಣೀ ।
ಆನಂದಕಾನನೇ ಶಂಭೋ ಮೋಕ್ಷಸ್ತತ್ರೈವ ನಿಶ್ಚಿತಮ್ ॥ ೩೮ ॥
ಭೂತಂ ಭಾವಿ ಭವಿಷ್ಯಂ ಯತ್ಸ್ವರ್ಗೇ ಮರ್ತ್ಯೇ ರಸಾತಲೇ ।
ತತ್ಸರ್ವಮೇವ ಜಾನೀಮೋ ಧರ್ಮೇಶಾನುಗ್ರಹಾತ್ಪರಾತ್ ॥ ೩೯ ॥

---

೩೪. ಮುನಿಶ್ರೇಷ್ಠನಾದ ಯಾಜ್ಞವಲ್ಕ್ಯನೂ ಸೂರ್ಯನಿಂದ ಸಕಲ ವೇದಗಳನ್ನೂ ಅಧ್ಯಯನಮಾಡಿ ಮುನಿಮಂಡಲದ ಮಧ್ಯದಲ್ಲಿ, "ಕಾಶಿಯಲ್ಲಿ ಮರಣವನ್ನು ಪಡೆಯುವವರಿಗೆ ಪರಮಪದವು ಲಭಿಸುವುದು" ಎಂಬುದಾಗಿ ಹೇಳಿರುವನು.

೩೫. ಸರ್ವೇಶ್ವರನಾದ ನೀನೂ ಹಿಂದೆ ಮಂದರಪರ್ವತದಲ್ಲಿ ಲೋಕಜನನಿಯಾದ ಪಾರ್ವತೀದೇವಿಯನ್ನು ಕುರಿತು ಈ ಕಾಶಿಯೇ ಮೋಕ್ಷಕ್ಕೆ ಕಾರಣವಾದ ಪುಣ್ಯಭೂಮಿಯೆಂದು ನಿರೂಪಿಸಿರುವೆ.

೩೬. ಶಂಭುವೆ! ಕೃಷ್ಣದ್ವೈಪಾಯನಮುನಿಯೂ ಹೀಗೆಯೇ ಹೇಳುತ್ತಿರುವುದರಿಂದ ಇದು ಸುಳ್ಳಲ್ಲವು. ಎಲ್ಲಿ ವಿಶ್ವೇಶ್ವರನು ಸಾಕ್ಷಾತ್ತಾಗಿ ನೆಲಸಿರುವನೊ, ಅಲ್ಲಿ ಅಡಿಗಡಿಗೂ ಮುಕ್ತಿಯು ಸಿದ್ಧವಾಗಿರುವುದು.

೩೭. ತೀರ್ಥಕ್ಷೇತ್ರದಲ್ಲಿ ಕಾಮ್ಯಕರ್ಮಸನ್ಯಾಸಗಳನ್ನು ಮಾಡಿದವರೂ, ಬಹಳಕಾಲದಿಂದಿರುವವರೂ ಆದ ಲೋಮಶನೇ ಮುಂತಾದ ಇತರ ಮಹರ್ಷಿಗಳೂ "ಕಾಶಿಯೇ ಮೋಕ್ಷಪ್ರಕಾಶಿನಿಯು" ಎಂಬುದಾಗಿ ಹೇಳುತ್ತಿರುವರು.

೩೮. ಎಲೈ ಮಹಾದೇವನೆ! ಯಾವ ನಿನ್ನ ಈ ಆನಂದಕಾನನದಲ್ಲಿ ದೇವನದಿಯಾದ ಗಂಗೆಯು ಪ್ರವಹಿಸುತ್ತಿರುವುದೊ, ಆ ಪ್ರದೇಶವೇ ಮೋಕ್ಷಪ್ರಾಪಕವೆಂಬ ಶಾಸ್ತ್ರಸಿದ್ಧಾಂತವನ್ನು ನಾವೂ ಚೆನ್ನಾಗಿ ಬಲ್ಲೆವು.

೩೯. ಧರ್ಮೇಶ್ವರನ ಅನುಗ್ರಹದಿಂದ ನಾವು ಸ್ವರ್ಗ ಮರ್ತ್ಯ ಪಾತಾಳಲೋಕಗಳಲ್ಲೆಲ್ಲವೂ ಹಿಂದೆ ನಡೆದುದನ್ನೂ, ಈಗ ನಡೆಯುತ್ತಿರುವುದನ್ನೂ ಮುಂದೆ ನಡೆಯಲಿರುವುದನ್ನೂ ಆಮೂಲಾಗ್ರವಾಗಿ ತಿಳಿದಿರುವೆವು.

ಅತೋ ಹಿರಣ್ಯಗರ್ಭೋಕ್ತಂ ಹರಿಪ್ರೋಕ್ತಂ ಮುನೀರಿತಂ ।
ಭವತೋಕ್ತಂ ಚ ನಿಖಿಲಂ ಶಂಭೋ ಜಾನೀಮಹೇ ವಯಂ ॥ ೪೦ ॥
ಕರಾಮಲಕವತ್ಸರ್ವಮೇತದ್ಬ್ರಹ್ಮಾಂಡಗೋಲಕಂ ।
ಅಸ್ಮದ್ಭಾಗ್ಯೋಚರೇಽಸ್ಯೈವ ಧರ್ಮಪೀಠನಿಷೇವಣಾತ್ ॥ ೪೧ ॥
ಧರ್ಮರಾಜಸ್ಯ ತಪಸಾ ತಿರ್ಯಂಚೋಽಪಿ ವಯಂ ವಿಭೋ ।
ಜಾತಾಃ ಸ್ಮ ನಿರ್ವಿಕಲ್ಪಂ ಹಿ ಸರ್ವಜ್ಞಾನಸ್ಯ ಭಾಜನಂ ॥ ೪೨ ॥
ಮಧುರಂ ಮೃದುಲಂ ಸತ್ಯಂ ಸ್ವಪ್ರಮಾಣಂ ಸುಸಂಸ್ಕೃತಂ ।
ಹಿತಂ ಮಿತಂ ಸದೃಷ್ಟಾಂತಂ ಶ್ರುತ್ವಾ ಪಕ್ಷಿಸುಭಾಷಿತಂ ॥ ೪೩ ॥
ದೇವೋಽತಿವಿಸ್ಮಯಾಪನ್ನೋಽವರ್ಣಯತ್ಪೀಠಗೌರವಂ ।
ತ್ರೈಲೋಕ್ಯನಗರೇ ಚಾತ್ರ ಕಾಶೀ ರಾಜಗೃಹಂ ಮಮ ॥ ೪೪ ॥
ತತ್ರಾಪಿ ಭೋಗಭವನಮನರ್ಘ್ಯಮಣಿನಿರ್ಮಿತಂ ।
ಮೋಕ್ಷಲಕ್ಷ್ಮೀವಿಲಾಸಾಖ್ಯಃ ಪ್ರಾಸಾದೋ ಮೇಽತಿಶರ್ಮಭೂಃ ॥ ೪೫ ॥

---

೪೦. ಆದುದರಿಂದ ಬ್ರಹ್ಮದೇವನು ಹೇಳಿದುದೂ, ವಿಷ್ಣುವು ಹೇಳಿದುದೂ, ಮಹರ್ಷಿಗಳು ಹೇಳಿದುದೂ, ನೀನು ಹೇಳಿದುದೂ ಎಲ್ಲವೂ ಒಂದೇ ಸಿದ್ಧಾಂತವೆಂಬ ವಿಷಯವನ್ನು ನಾವು ಬಲ್ಲೆವು.

೪೧. ಧರ್ಮಪೀಠವನ್ನು ಸೇವನೆಮಾಡಿದುದರ ಫಲವಾಗಿ ಈ ಬ್ರಹ್ಮಾಂಡ ಮಂಡಲವೆಲ್ಲವೂ ಅಂಗೈಯೊಳಗಿನ ನೆಲ್ಲಿಯಕಾಯಿಯಂತೆ ನಮಗೆ ನಿಸ್ಸಂಶಯವಾಗಿ ತಿಳಿದಿರುವುದಲ್ಲದೆ ಬಾಯಿಮಾತುಗಳಿಂದಲೂ ವರ್ಣಿಸಲು ಸಾಧ್ಯವಾಗಿರುವುದು.

೪೨. ಸರ್ವೇಶ್ವರನೆ! ನಾವು ತಿರ್ಯಗ್ಯೋನಿಯಲ್ಲಿ ಜನ್ಮವನ್ನು ಪಡೆದಿದ್ದರೂ ಈ ಧರ್ಮರಾಜನ ತಪಸ್ಸಿನ ಪ್ರಭಾವದಿಂದ ನಿಶ್ಚಯವಾಗಿಯೂ ಸಕಲ ಜ್ಞಾನದ ಭಂಡಾರಗಳಾಗಿಯೇ ಪರಿಣಾಮವನ್ನು ಹೊಂದಿರುವೆವು.

೪೩–೪೫. ಸುಶ್ರಾವ್ಯವೂ, ಮೃದುವೂ, ಸತ್ಯಸಹಿತವೂ, ಸ್ವತಃಪ್ರಮಾಣವೂ, ಸಂಸ್ಕಾರಸಹಿತವೂ, ಮನಸ್ಸಿಗೆ ಹಿತವೂ, ಮಿತವೂ, ದೃಷ್ಟಾಂತದಿಂದೊಡಗೂಡಿದುದೂ ಆದ ಈ ವಾಗ್ಜಾಲವನ್ನು ಪಕ್ಷಿಗಳ ಮುಖಗಳಿಂದ ಕೇಳಿ, ಆ ಮಹಾದೇವನು ಅತ್ಯಂತ ವಿಸ್ಮಯಗೊಂಡು ಧರ್ಮಪೀಠದ ಮಾಹಾತ್ಮ್ಯವನ್ನು ಬಹುವಿಧವಾಗಿ ವರ್ಣಿಸಿದನು : "ಮೂರು ಲೋಕಗಳನ್ನೊಳಕೊಂಡ ಬ್ರಹ್ಮಾಂಡವೆಂಬ ನಗರದಲ್ಲಿ ಕಾಶೀಕ್ಷೇತ್ರವೇ ನನಗೆ ಅರಮನೆಯಾಗಿರುವುದು. ಅದರಲ್ಲಿಯೂ ಮೋಕ್ಷಲಕ್ಷ್ಮೀವಿಲಾಸವೆಂಬ ಹೆಸರಿನ ದೇವಾಲಯವೇ ಅನರ್ಘರತ್ನಗಳಿಂದ ಅಲಂಕೃತವಾದ ನನ್ನ ಭೋಗಸ್ಥಾನವಾಗಿರುವುದು. ಅದೇ ನನಗೆ ಅತ್ಯಂತ ಸೌಖ್ಯವನ್ನು ಕೊಡುವಂತಹ ಪ್ರದೇಶವು.

ಪತತ್ರಿಣೋಽಪಿ ಮುಚ್ಯಂತೇ ಯಂ ಕುರ್ವಾಣಾಃ ಪ್ರದಕ್ಷಿಣಂ ।
ಸ್ವೇಚ್ಛಯಾ ವಿಚರಂತಃ ಖೇ ಖೇಚರಾ ಅಪಿ ದೇವತಾಃ ॥ ೪೬ ॥
ಮೋಕ್ಷಲಕ್ಷ್ಮೀವಿಲಾಸಾಖ್ಯ ಪ್ರಾಸಾದಸ್ಯ ವಿಲೋಕನಾತ್ ।
ಶರೀರಾದ್ದೂರತೋ ಯಾತಿ ಬ್ರಹ್ಮಹತ್ಯಾಪಿ ನಾನ್ಯಥಾ ॥ ೪೭ ॥
ಮೋಕ್ಷಲಕ್ಷ್ಮೀವಿಲಾಸಸ್ಯ ಕಲಶೋ ಯೈರ್ನಿರೀಕ್ಷಿತಃ ।
ನಿಧಾನಕಲಶಾಸ್ತಾಂಸ್ತು ನ ಮುಂಚತಿ ಪದೇ ಪದೇ ॥ ೪೮ ॥
ದೂರತೋಽಪಿ ಪತಾಕಾಪಿ ಮಮ ಪ್ರಾಸಾದಮೂರ್ಧಗಾ ।
ನೇತ್ರಾತಿಥೀಕೃತಾ ಯೈಸ್ತು ನಿತ್ಯಂ ತೇಽತಿಥಯೋ ಮಮ ॥ ೪೯ ॥
ಭೂಮಿಂ ಭಿತ್ತ್ವಾ ಸ್ವಯಂ ಜಾತಸ್ತತ್ಪ್ರಾಸಾದಮಿಷೇಣ ಹಿ ।
ಆನಂದಾಖ್ಯಸ್ಯ ಕಂದಸ್ಯ ಕೋಽಪ್ಯೇಷ ಪರಮೋಽಂಕುರಃ ॥ ೫೦ ॥
ಬ್ರಹ್ಮಾದಿಸ್ಥಾವರಾಂತಾನಿ ಯತ್ರ ರೂಪಾಣ್ಯನೇಕಶಃ ।
ಮಾಮೇವೋಪಾಸತೇ ನಿತ್ಯಂ ಚಿತ್ರಂ ಚಿತ್ರಗತಾನ್ಯಪಿ ॥ ೫೧ ॥

೪೬. ಈ ದೇವಾಲಯಕ್ಕೆ ಪ್ರದಕ್ಷಿಣೆಗಳನ್ನು ಮಾಡುವ ಪಕ್ಷಿಗಳೂ, ಸ್ವೇಚ್ಛೆಯಾಗಿ ಆಕಾಶದಲ್ಲಿ ವಿಹರಿಸುತ್ತಿರುವ ಗಂಧರ್ವರೂ, ದೇವತಾಗಣಗಳೂ ಮೋಕ್ಷಸಾಮ್ರಾಜ್ಯಕ್ಕೆ ಭಾಗಿಗಳಾಗುವರು.

೪೭. ಮೋಕ್ಷಲಕ್ಷ್ಮೀವಿಲಾಸವೆಂಬ ಪ್ರಾಸಾದವನ್ನು ನೋಡುವ ಮಾತ್ರದಿಂದಲೇ ಬ್ರಹ್ಮಹತ್ಯೆಯೆಂಬ ಮಹಾಪಾತಕವೂ ಮನುಷ್ಯನ ಶರೀರವನ್ನು ಬಿಟ್ಟು ಓಡಿಹೋಗುವುದು. ಇದರಲ್ಲಿ ಸಂಶಯವಿಲ್ಲವು.

೪೮. ಮೋಕ್ಷಲಕ್ಷ್ಮೀವಿಲಾಸದೇವಾಲಯದ ಕಳಶವನ್ನು ಯಾರು ನೋಡುವರೋ, ಅವರನ್ನು ಅಷ್ಟೈಶ್ವರ್ಯಗಳೆಂಬ ಕಳಶಗಳು ಹೆಜ್ಜೆಹೆಜ್ಜೆಗೂ ಹಿಂಬಾಲಿಸುತ್ತ ಎಂದಿಗೂ ಎಡಬಿಡದಿರುವುವು.

೪೯. ಎಷ್ಟು ದೂರದಿಂದಲೇ ಆಗಲಿ ಯಾರು ನನ್ನ ದೇವಾಲಯ ಗೋಪುರದ ಮೇಲಿನ ಪತಾಕೆಯನ್ನು ತಮ್ಮ ದೃಷ್ಟಿಗೆ ವಿಷಯವನ್ನಾಗಿ ಮಾಡಿಕೊಳ್ಳುವರೋ, ಅವರು ನಿತ್ಯವೂ ನನಗೆ ಪ್ರಿಯರಾದ ಅತಿಥಿಗಳು.

೫೦. ಆನಂದವನವೆಂಬ ಮಹಾವೃಕ್ಷದ ಸರ್ವೋತ್ಕೃಷ್ಟವಾದ ಒಂದು ಅಂಕುರವೇ ಭೂಮಿಯನ್ನು ಭೇದಿಸಿಕೊಂಡು ಬಂದು ಈ ದೇವಾಲಯದ ವ್ಯಾಜದಿಂದ ಕಾಣುತ್ತಿರುವುದರಲ್ಲಿ ಸಂದೇಹವಿಲ್ಲ.

೫೧—೫೨. ಬ್ರಹ್ಮನು ಮೊದಲುಗೊಂಡು ಸ್ಥಾವರಾಂತಗಳಾದ ಅಸಂಖ್ಯಾತ ಪ್ರಾಣಿಗಳು ಚಿತ್ರಲಿಖಿತಗಳಾಗಿದ್ದರೂ ಯಾವ ದೇವಾಲಯದಲ್ಲಿ ನಿತ್ಯವೂ ಅನೇಕ ಉಪಚಾರಗಳಿಂದ ನನ್ನನ್ನೇ ಉಪಾಸನೆಮಾಡುತ್ತಿರುವುವೋ, ಆ ಪ್ರಾಸಾದವೇ ಸಮಸ್ತಲೋಕಗಳಲ್ಲಿಯೂ ನನಗೆ ಪರಮಾನಂದವನ್ನುಂಟುಮಾಡುವ ಸ್ಥಾನವು.

ಸ ಸೌಧೋ ಮೇಽಖಿಲೇ ಲೋಕೇ ಸ್ಥಾನಂ ಪರಮನಿರ್ವೃತೇಃ ।
ರತಿಶಾಲಾ ಸ ಮೇ ರಮ್ಯಾ ಸ ಮೇ ವಿಶ್ವಸಭೂಮಿಕಾ ॥ ೫೨ ॥
ಮಮ ಸರ್ವಗತಸ್ಯಾಪಿ ಪ್ರಾಸಾದೋಽಯಂ ಪರಾಸ್ಪದಂ ।
ಪರಂ ಬ್ರಹ್ಮ ಯದಾಮ್ನಾತಂ ಪರಮೋಪನಿಷದ್ಗಿರಾ ।
ಅಮೂರ್ತಂ ತದಹಂ ಮೂರ್ತ್ಯಾ ಭೂಯಾಂ ಭಕ್ತಕೃಪಾವಶಾತ್ ॥
ನೈಃಶ್ರೇಯಸೀ ಶ್ರಿಯೋ ಧಾಮ ತದ್ಯಾಮ್ಯಾಂ ಮಂಡಪೋಽಸ್ತಿ ಮೇ ।
ತತ್ರಾಹಂ ಸತತಂ ತಿಷ್ಠೇ ತತ್ಸದೋ ಮಂಡಪಂ ಮಮ ॥ ೫೪ ॥
ನಿಮೇಷಾರ್ಧಪ್ರಮಾಣಂ ಚ ಕಾಲಂ ತಿಷ್ಠತಿ ನಿಶ್ಚಲಃ ।
ತತ್ರ ಯಸ್ತೇನ ವೈ ಯೋಗಃ ಸಮಭ್ಯಸ್ತಃ ಸಮಾಃ ಶತಂ ॥ ೫೫ ॥
ನಿರ್ವಾಣಮಂಡಪಂ ನಾಮ ತತ್ಸ್ಥಾನಂ ಜಗತೀತಲೇ ।
ತತ್ರಾರ್ಚನ್ ಸಂಜಪನ್ನೇಕಾಂ ಲಭೇತ್ಸರ್ವಶ್ರುತೇಃ ಫಲಂ ॥ ೫೬ ॥
ಪ್ರಾಣಾಯಾಮಂ ತು ಯಃ ಕುರ್ಯಾದಪ್ಯೇಕಂ ಮುಕ್ತಿಮಂಡಪೇ ।
ತೇನಾಷ್ಟಾಂಗಾಃ ಸಮಭ್ಯಸ್ತಾಃ ಯೋಗೋಽನ್ಯತ್ರಾಯುತಂ ಸಮಾಃ ॥

---

ಅದೇ ನನ್ನ ಮನೋಹರವಾದ ಕ್ರೀಡಾಭವನವು. ಅದೇ ನನಗೆ ವಿಶ್ವಾಸಪಾತ್ರವಾದ ಭೂಮಿಯು.

೫೩. ನಾನು ಸರ್ವವ್ಯಾಪಿಯಾಗಿದ್ದರೂ ಈ ದೇವಾಲಯವು ನನಗೆ ಅತಿಶಯಿತವಾದ ನೆಲೆಮನೆಯಾಗಿರುವುದು. ಸರ್ವೋತ್ತಮವಾದ ಉಪನಿಷದ್ವಾಕ್ಯಗಳು, ನನ್ನನ್ನು ಪರಬ್ರಹ್ಮವೆಂದೂ, ರೂಪರಹಿತನೆಂದೂ ವರ್ಣಿಸಿರುವುದು ನಿಜವೇ ಆದರೂ ಭಕ್ತರಲ್ಲಿ ನನಗಿರುವ ಅಭಿಮಾನವಶದಿಂದ ಅವರನ್ನು ಅನುಗ್ರಹಿಸುವುದಕ್ಕಾಗಿಯೆ ನಾನು ಅನೇಕ ರೂಪಗಳನ್ನು ಧರಿಸುತ್ತಿರುವೆನು.

೫೪. ಈ ಪ್ರಾಸಾದಕ್ಕೆ ದಕ್ಷಿಣದಿಕ್ಕಿನಲ್ಲಿ ಮೋಕ್ಷವೆಂಬ ಐಶ್ವರ್ಯದ ನೆಲೆಮನೆಯಾದ ನನ್ನ ಒಂದು ಮಂಟಪವಿರುವುದು. ಅಲ್ಲಿ ನಾನು ಯಾವಾಗಲೂ ಸನ್ನಿಹಿತನಾಗಿರುವೆನು. ಅದೇ ನನ್ನ ಸಭಾಮಂಟಪವಾಗಿರುವುದು.

೫೫. ಯಾವನು ಅಲ್ಲಿ ಅರ್ಧನಿಮಿಷದ ಕಾಲವಾದರೂ ನಿಶ್ಚಂಚಲವಾದ ಮನಸ್ಸಿನಿಂದ ನಿಂತಿರುವನೊ, ಅವನು ನಿಜವಾಗಿಯೂ ನೂರು ವರ್ಷದವರೆಗೂ ಯೋಗಾಭ್ಯಾಸವನ್ನು ಮಾಡಿದವನೆಂದು ತಿಳಿಯಬೇಕು.

೫೬. ಆ ಸ್ಥಾನವು ಪ್ರಪಂಚದಲ್ಲಿ ನಿರ್ವಾಣಮಂಟಪವೆಂದು ಪ್ರಖ್ಯಾತವಾಗಿರುವುದು. ಅಲ್ಲಿ ಕುಳಿತು ಒಂದೇ ಋಕ್ಕನ್ನು ಜಪಿಸಿದರೂ ಸಹ ಮನುಷ್ಯನು ನಾಲ್ಕು ವೇದಗಳನ್ನು ಅಧ್ಯಯನಮಾಡಿದ ಫಲವನ್ನು ಪಡೆಯುವನು.

೫೭. ಯಾವ ಮಾನವನೇ ಆಗಲಿ ಈ ಮುಕ್ತಿಮಂಟಪದಲ್ಲಿ ಕುಳಿತು ಒಂದು ಪ್ರಾಣಾಯಾಮವನ್ನು ಮಾಡಿದರೂ ಇತರ ಕ್ಷೇತ್ರಗಳಲ್ಲಿ ಹತ್ತುಸಾವಿರ

ನಿರ್ವಾಣಮಂಡಪೇ ಯಸ್ತು ಜಪೇದೇಕಂ ಷಡಕ್ಷರಂ ।
ಕೋಟಿರುದ್ರೇಣ ಜಪ್ತೇನ ಯತ್ಫಲಂ ತಸ್ಯ ತದ್ಭವೇತ್ ॥ ೫೮ ॥
ಶುಚಿರ್ಗಂಗಾಭಸಿ ಸ್ನಾತೋ ಯೋ ಜಪೇಚ್ಛತರುದ್ರಿಯಂ ।
ನಿರ್ವಾಣಮಂಡಪೇ ಜ್ಞೇಯಃ ಸ ರುದ್ರೋ ದ್ವಿಜವೇಷಭೃತ್ ॥ ೫೯ ॥
ಬ್ರಹ್ಮಯಜ್ಞಂ ಸಕೃತ್ಕೃತ್ವಾ ಮಮ ದಕ್ಷಿಣಮಂಡಪೇ ।
ಬ್ರಹ್ಮಲೋಕಮವಾಪ್ಯಾಥ ಪರಂ ಬ್ರಹ್ಮಾಧಿಗಚ್ಛತಿ ॥ ೬೦ ॥
ಧರ್ಮಶಾಸ್ತ್ರಂ ಪುರಾಣಾನಿ ಸೇತಿಹಾಸಾನಿ ತತ್ರ ಯಃ ।
ಪಠೇನ್ನಿರಭಿಲಾಷುಃ ಸನ್ನಿವಸೇನ್ಮಮ ವೇಶ್ಮನಿ ॥ ೬೧ ॥
ತಿಷ್ಠೇದಿಂದ್ರಿಯಚಾಪಲ್ಯಂ ಯೋ ನಿವಾರ್ಯ ಕ್ಷಣಂ ಕೃತೀ ।
ನಿರ್ವಾಣಮಂಡಪೇಽನ್ಯತ್ರ ತೇನ ತಪ್ತಂ ಮಹತ್ತಪಃ ॥ ೬೨ ॥
ವಾಯುಭಕ್ಷಣತೋಽನ್ಯತ್ರ ಯತ್ಪುಣ್ಯಂ ಶರದಾಂಶತಂ ।
ತತ್ಪುಣ್ಯಂ ಘಟಿಕಾರ್ಧೇನ ಮೌನಂ ದಕ್ಷಿಣಮಂಡಪೇ ॥ ೬೩ ॥

---

ವರ್ಷಗಳವರೆಗೂ ಯಮನಿಯಮಾದ್ಯಷ್ಟಾಂಗಸಹಿತವಾದ ಯೋಗಾಭ್ಯಾಸವನ್ನು ಸಮಗ್ರವಾಗಿ ಆಚರಿಸಿದವನಾಗುವನು.

೫೮. ನಿರ್ವಾಣಮಂಟಪದಲ್ಲಿ ಯಾವನು ಒಂದೇ ಸಲ ಷಡಕ್ಷರೀಮಂತ್ರವನ್ನು ಜಪಿಸುವನೊ, ಅವನಿಗೆ ಮಹಾರುದ್ರವನ್ನು ಒಂದುಕೋಟಿಸಲ ಪುರಶ್ಚರಣೆ ಮಾಡಿದ ಪುಣ್ಯವು ಲಭಿಸುವುದು.

೫೯. ಯಾವನು ಗಂಗಾನದಿಯಲ್ಲಿ ಮಿಂದು ಶುಚಿರ್ಭೂತನಾಗಿ ನಿರ್ವಾಣ ಮಂಟಪದಲ್ಲಿ ಶತರುದ್ರೀಯವನ್ನು ಜಪಿಸುವನೊ, ಅವನನ್ನು ನಿಜವಾಗಿಯೂ ಬ್ರಾಹ್ಮಣವೇಷಧಾರಿಯಾದ ಮಹೇಶ್ವರನೆಂದೇ ತಿಳಿಯಬೇಕು.

೬೦. ನನ್ನ ದೇವಾಲಯಕ್ಕೆ ದಕ್ಷಿಣದಲ್ಲಿರುವ ಈ ಮಂಟಪದಲ್ಲಿ ಒಮ್ಮೆ ಬ್ರಹ್ಮಯಜ್ಞವನ್ನುಮಾಡುವ ಮಾತ್ರದಿಂದಲೇ ಮನುಷ್ಯನು ಬ್ರಹ್ಮಲೋಕವನ್ನು ಪಡೆಯುವುದಲ್ಲದೆ ಪರಬ್ರಹ್ಮಸ್ವರೂಪವನ್ನೂ ಜ್ಞಾಪಿಸಿಕೊಳ್ಳುವನು.

೬೧. ಅಲ್ಲಿ ಯಾವನು ಧರ್ಮಶಾಸ್ತ್ರಗಳನ್ನಾಗಲಿ, ಪುರಾಣಗಳನ್ನಾಗಲಿ, ಇತಿಹಾಸಗಳನ್ನಾಗಲಿ ಫಲಾಭಿಲಾಷೆಯಿಲ್ಲದೆ ಪಠನಮಾಡುವನೊ, ಅವನು ನನ್ನ ನಿವಾಸವಾದ ಕೈಲಾಸದಲ್ಲಿಯೇ ಶಾಶ್ವತವಾಗಿ ವಾಸಮಾಡುವನು.

೬೨. ಯಾವಪುಣ್ಯಪುರುಷನು ಸಮಸ್ತೇಂದ್ರಿಯಗಳ ಚಾಪಲ್ಯವನ್ನೂ ದೂರ ಮಾಡಿ ನಿರ್ವಾಣಮಂಟಪದಲ್ಲಿ ಒಂದು ಕ್ಷಣಮಾತ್ರವಾದರೂ ಏಕಾಗ್ರಮನಸ್ಕನಾಗಿ ನಿಲ್ಲುವನೊ, ಅವನು ಇತರ ಸ್ಥಳಗಳಲ್ಲಿ ಮಹತ್ತರವಾದ ತಪಸ್ಸನ್ನಾಚರಿಸಿದವನಿಗೆ ಸಮಾನನು.

೬೩. ಒಂದುನೂರು ವರ್ಷಗಳವರೆಗೂ ಇತರ ಕ್ಷೇತ್ರಗಳಲ್ಲಿ ವಾಯು

ಮಿತಂ ಕಷ್ಣಲಕೇನಾಪಿ ಯೋ ದದ್ಯಾನ್ಮುಕ್ತಿಮಂಡಪೇ ।
ಸ್ವರ್ಣಂ ಸೌವರ್ಣಯಾನೇನ ಸ ತು ಸಂಚರತೇ ದಿವಿ ॥ ೬೪ ॥
ತತ್ರೈಕಂ ಜಾಗರಂ ಕುರ್ಯಾದ್ಯಸ್ಮಿನ್ಕಸ್ಮಿನ್ದಿನೇಽಪಿ ಯಃ ।
ಉಪೋಷಿತೋಽರ್ಚಯೇಲ್ಲಿಂಗಂ ಸ ಸರ್ವವ್ರತಪುಣ್ಯಭಾಕ್ ॥ ೬೫ ॥
ತತ್ರ ದತ್ತ್ವಾ ಮಹಾದಾನಂ ತತ್ರ ಕೃತ್ವಾ ಮಹಾವ್ರತಂ ।
ತತ್ರಾಧೀತ್ಯಾಖಿಲಂ ವೇದಂ ಚ್ಯವತೇ ನ ನರೋ ದಿವಃ ॥ ೬೬ ॥
ಪ್ರಯಾಣಂ ಕುರ್ವತೇ ಯಸ್ಯ ಪ್ರಾಣಾ ಮೇ ಮುಕ್ತಿಮಂಡಪೇ ।
ಸಮಾಮನುಪ್ರವಿಷ್ಟೋಽತ್ರ ತಿಷ್ಠೇದ್ಯಾವದಹಂ ಖಲು ॥ ೬೭ ॥
ಜಲಕ್ರೀಡಾಂ ಸದಾ ಕುರ್ಯಾಂ ಜ್ಞಾನವಾಪ್ಯಾಂ ಸಹೋಮಯಾ ।
ಯದಂಬುಪಾನಮಾತ್ರೇಣ ಜ್ಞಾನಂ ಜಾಯೇತ ನಿರ್ಮಲಂ ॥ ೬೮ ॥
ತಜ್ಜಲಕ್ರೀಡನಸ್ಥಾನಂ ಮಮ ಪ್ರೀತಿಕರಂ ಮಹತ್ ।
ಅಮುಷ್ಮಿನ್ರಾಜಸದನೇ ಜಾಡ್ಯಹೃಜ್ಜಲಪೂರಿತಂ ॥ ೬೯ ॥

---

ಭಕ್ಷಣವನ್ನು ಮಾಡುವುದರಿಂದ ಯಾವ ಪುಣ್ಯವುಂಟೊ, ಆ ಪುಣ್ಯವೇ ದಕ್ಷಿಣ ಮಂಟಪದಲ್ಲಿ ಅರ್ಧಘಳಿಗೆಯಷ್ಟು ಮಾತ್ರ ಮೌನದಿಂದಿರಲು ಪ್ರಾಪ್ತವಾಗುವುದು.

೬೪. ಮುಕ್ತಿಮಂಟಪದಲ್ಲಿ ಯಾವನು ಗುಲಗಂಜಿಯ ಪ್ರಮಾಣದಷ್ಟು ಚಿನ್ನವನ್ನು ದಾನಮಾಡುವನೊ, ಅವನೂ ಚಿನ್ನದ ವಿಮಾನದಲ್ಲಿಯೇ ಕುಳಿತು ಸ್ವರ್ಗಲೋಕದಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿರುವನು.

೬೫. ಯಾವ ದಿವಸದಲ್ಲಿಯೇ ಆಗಲಿ, ಯಾವ ಮಾನವನು ಹಗಲಿನಲ್ಲಿ ಉಪವಾಸವನ್ನೂ ರಾತ್ರಿಯಲ್ಲಿ ಜಾಗರಣೆಯನ್ನೂ ಮಾಡುತ್ತ ಶಿವಲಿಂಗಪೂಜೆಯನ್ನು ಮಾಡುವನೊ, ಅವನು ಸಕಲವ್ರತಗಳನ್ನೂ ಮಾಡಿದ ಪುಣ್ಯಕ್ಕೆ ಭಾಗಿಯಾಗುವನು.

೬೬. ಆ ಮಂಟಪದಲ್ಲಿ ಮಹಾದಾನಗಳನ್ನು ಕೊಟ್ಟವನೂ, ಮಹಾವ್ರತಗಳನ್ನಾಚರಿಸಿದವನೂ, ಸಮಸ್ತವೇದವನ್ನು ಅಧ್ಯಯನಮಾಡಿದವನೂ ಎಂದಿಗೂ ಸ್ವರ್ಗಲೋಕದಿಂದ ಈ ಭೂಲೋಕಕ್ಕೆ ಬಂದು ಪುನಃ ಸಂಸಾರದಲ್ಲಿ ಬೀಳುವುದಿಲ್ಲ.

೬೭. ನನ್ನ ಈ ಮುಕ್ತಿಮಂಟಪದಲ್ಲಿಯೇ ಯಾವನ ಪ್ರಾಣಗಳು ದೇಹವನ್ನು ಬಿಟ್ಟುಹೋಗುವುವೊ, ಅವನು ಇಲ್ಲಿಯೇ ನನ್ನಲ್ಲಿ ಐಕ್ಯವನ್ನು ಪಡೆಯುವುದಲ್ಲದೆ ನಿಜವಾಗಿಯೂ ನಾನಿರುವವರೆಗೂ ನನ್ನಲ್ಲಿಯೇ ನಿಲ್ಲುವನು.

೬೮. ನಾನು ಜ್ಞಾನವಾಪಿಯಲ್ಲಿ ಯಾವಾಗಲೂ ಪಾರ್ವತೀಸಮೇತನಾಗಿ ಜಲಕ್ರೀಡೆಯನ್ನಾಡುತ್ತಿರುವೆನು. ಆದುದರಿಂದ ಅದರ ಜಲವನ್ನು ಪಾನಮಾಡುವ ಮಾತ್ರದಿಂದಲೇ ಪರಿಶುದ್ಧವಾದ ಜ್ಞಾನವುಂಟಾಗುವುದು.

೬೯. ಈ ಜಲಕ್ರೀಡಾಸ್ಥಾನವು ನನಗೆ ಮಹತ್ತರವಾದ ಪ್ರೀತಿಯನ್ನುಂಟು

ತತ್ಪ್ರಾಸಾದಪುರೋಭಾಗೇ ಮಮ ಶೃಂಗಾರಮಂಡಪಃ ।
ಶ್ರೀಪೀಠಂ ತದ್ಧಿ ವಿಜ್ಞೇಯಂ ನಿಃಶ್ರೀಕಃ ಶ್ರೀಸಮರ್ಪಣಂ ॥ ೭೦ ॥
ಮದರ್ಥಂ ತತ್ರ ಯೋ ದದ್ಯಾದ್ದುಕೂಲಾನಿ ಶುಚೀನ್ಯಹೋ ।
ಮಾಲ್ಯಾಣಿ ಸುವಿಚಿತ್ರಾಣಿ ಯಕ್ಷಕರ್ದಮವಂತಿ ಚ ॥ ೭೧ ॥
ನಾನಾ ನೇಪಥ್ಯವಸ್ತೂನಿ ಪೂಜೋಪಕರಣಾನ್ಯಪಿ ।
ಸ ಶ್ರಿಯಾಲಂಕೃತಸ್ತಿಷ್ಠೇದ್ಯತ್ರ ಕುತ್ರಾಪಿ ಸತ್ತಮಃ ॥ ೭೨ ॥
ನಿರ್ವಾಣಲಕ್ಷ್ಮೀರ್ವೃಣುತೇ ತಂ ನಿರ್ವಾಣಪದಾಪ್ತಯೇ ।
ಯತ್ರ ಕುತ್ರಾಪಿ ನಿಧನಂ ಪ್ರಾಪ್ನುಯಾದಪಿ ಸ ಧ್ರುವಂ ॥ ೭೩ ॥
ಮೋಕ್ಷಲಕ್ಷ್ಮೀವಿಲಾಸಾಖ್ಯ ಪ್ರಾಸಾದಸ್ಯೋತ್ತರೇ ಮಮ ।
ಐಶ್ವರ್ಯಮಂಡಪಂ ರಮ್ಯಂ ತತ್ರೈಶ್ವರ್ಯಂ ದದಾಮ್ಯಹಂ ॥ ೭೪ ॥
ಮತ್ಪ್ರಾಸಾದ್ಯೈಂದ್ರದಿಗ್ಭಾಗೇ ಜ್ಞಾನಮಂಡಪಮಸ್ತಿ ಯತ್ ।
ಜ್ಞಾನಂ ದಿಶಾಮಿ ಸತತಂ ತತ್ರ ಮಾಂ ಧ್ಯಾಯತಾಂ ಸತಾಂ ॥ ೭೫ ॥

---

ಮಾಡುವುದಾಗಿರುವುದು. ನನ್ನ ಅರಮನೆಯಲ್ಲಿರುವ ಈ ತೀರ್ಥವು ಸಮಸ್ತ ಜಾಡ್ಯಗಳನ್ನೂ ಪರಿಹರಿಸುವ ದಿವ್ಯಜಲದಿಂದ ಪೂರಿತವಾಗಿರುವುದು.

೭೦. ಮೋಕ್ಷಲಕ್ಷ್ಮೀವಿಲಾಸವೆಂಬ ಆ ಪ್ರಾಸಾದದ ಮುಂದುಗಡೆಯಲ್ಲಿ (ಪಶ್ಚಿಮದಿಕ್ಕಿಗಿರುವ ಭೈರವಪ್ರದೇಶದಲ್ಲಿ) ನನ್ನ ಶೃಂಗಾರಮಂಟಪವಿರುವುದು. ಅದೇ ಶ್ರೀಪೀಠವೆಂದೂ ಕರೆಯಲ್ಪಡುತ್ತಿರುವುದು. ಅದು ದರಿದ್ರರಿಗೆ ಸಕಲೈಶ್ವರ್ಯಗಳನ್ನೂ ಕೊಡುವಂಥದು.

೭೧–೭೨. ಆ ಮಂಟಪದಲ್ಲಿ ನನ್ನ ಸಂತೋಷಾರ್ಥವಾಗಿ ಯಾವನು ಶುಭ್ರವಸ್ತ್ರಗಳನ್ನಾಗಲಿ, ವಿಚಿತ್ರಗಳಾದ ಪುಷ್ಪಮಾಲೆಗಳನ್ನಾಗಲಿ, ಯಕ್ಷಕರ್ದಮವೇ ಮೊದಲಾದ ಸುಗಂಧಲೇಪನ ದ್ರವ್ಯಗಳನ್ನಾಗಲಿ, ಅನೇಕವಿಧಗಳಾದ ಆಭರಣ ವಿಶೇಷಗಳನ್ನಾಗಲಿ, ಪೂಜಾಸಾಮಗ್ರಿಗಳನ್ನಾಗಲಿ ದಾನಮಾಡುವನೊ, ಆ ಮನುಷ್ಯೋತ್ತಮನು ಯಾವ ಸ್ಥಳದಲ್ಲಿಯೇ ವಾಸಮಾಡುತ್ತಿದ್ದರೂ ಅತುಲೈಶ್ವರ್ಯದಿಂದಲಂಕೃತನಾಗಿರುವನು.

೭೩. ಅವನನ್ನು ಮೋಕ್ಷಪದವಿಗೆ ಕರೆದುಕೊಂಡುಹೋಗಲು ಮೋಕ್ಷಲಕ್ಷ್ಮಿಯೇ ಬಂದು ಕಾದಿರುವಳು. ಅವನು ಯಾವ ಸ್ಥಳದಲ್ಲಿ ಮರಣವನ್ನು ಹೊಂದಿದರೂ ಸದ್ಗತಿಪ್ರಾಪ್ತಿಯು ಅವನಿಗೆ ನಿಶ್ಚಯವು.

೭೪. ಮೋಕ್ಷಲಕ್ಷ್ಮೀನಿವಾಸವೆಂಬ ನನ್ನ ಪ್ರಾಸಾದಕ್ಕೆ ಉತ್ತರದಿಕ್ಕಿನಲ್ಲಿ ಮನೋರಮ್ಯವಾದ ಐಶ್ವರ್ಯಮಂಟಪವೊಂದಿರುವುದು. ಅಲ್ಲಿಯೂ ನಾನು ನೆಲಸಿ ಭಕ್ತರಿಗೆ ಸಕಲೈಶ್ವರ್ಯಗಳನ್ನೂ ಕೊಡುತ್ತಿರುವೆನು.

೭೫. ನನ್ನ ಆ ದೇವಾಲಯದ ಪೂರ್ವದಿಕ್ಕಿಗೆ ಯಾವ ಜ್ಞಾನಮಂಟಪ

ಭವಾನಿ ರಾಜಸದನೇ ಮಮಾಸ್ತಿ ಹಿ ಮಹಾಸನಂ ।
ಯತ್ತತ್ರೋಪಹೃತಂ ಪುಣ್ಯಂ ನಿರ್ವಿಶಾಮಿ ಮುದೈವ ತತ್ ॥ ೭೬ ॥
ವಿಶಾಲಾಕ್ಷ್ಯಾ ಮಹಾಸೌಧೇ ಮಮ ವಿಶ್ರಾಮಭೂಮಿಕಾ ।
ತತ್ರ ಸಂಸೃತಿಖಿನ್ನಾನಾಂ ವಿಶ್ರಾಮಂ ಶ್ರಾಣಯಾಮ್ಯಹಂ ॥ ೭೭ ॥
ನಿಯಮಸ್ನಾನತೀರ್ಥಂ ಚ ಚಕ್ರಪುಷ್ಕರಿಣೀ ಮಮ ।
ತತ್ರ ಸ್ನಾನವತಾಂ ಪುಂಸಾಂ ತನ್ನೈರ್ಮಲ್ಯಂ ದಿಶಾಮ್ಯಹಂ ॥ ೭೮ ॥
ಯದಾಹುಃ ಪರಮಂ ತತ್ತ್ವಂ ಯದಾಹುರ್ಬ್ರಹ್ಮಸತ್ತಮಂ ।
ಸ್ವಸಂವೇದ್ಯಂ ಯದಾಹುಶ್ಚ ತತ್ತತ್ರಾಂತೇ ದಿಶಾಮ್ಯಹಂ ॥ ೭೯ ॥
ಯದಾಹುಸ್ತಾರಕಂ ಜ್ಞಾನಂ ಯದಾಹುರತಿನಿರ್ಮಲಂ ।
ಸ್ವಾತ್ಮಾರಾಮಂ ಯದಾಹುಶ್ಚ ತತ್ತತ್ರಾಂತೇ ದಿಶಾಮ್ಯಹಂ ॥ ೮೦ ॥
ಜಗನ್ಮಂಗಲಭೂಯರ್ಾತ್ರ ಪರಮಾ ಮಣಿಕರ್ಣಿಕಾ ।
ವಿಪಾಶಯಾಮಿ ತತ್ರಾಹಂ ಕರ್ಮಭಿಃ ಪಾಶಿತಾನ್ಪಶೂನ್ ॥ ೮೧ ॥

---

ವಿರುವುದೊ, ಅದರಲ್ಲಿ ಯಾವಾಗಲೂ ನನ್ನನ್ನು ಧ್ಯಾನಿಸುವ ಸತ್ಪುರುಷರಿಗೆ ಸಂಸಾರೋತ್ತಾರಕವಾದ ಜ್ಞಾನವನ್ನು ಉಪದೇಶಮಾಡುತ್ತಿರುವೆನು.

೭೬. ಎಲೌ ಭವಾನಿಯೆ! ಈ ನನ್ನ ರಾಜಸದನದಲ್ಲಿಯೇ ಒಂದು ಪಾಕಶಾಲೆ ಇರುವುದು. ಅಲ್ಲಿ ಸಿದ್ಧಗೊಳಿಸಿದ ಉಪಹಾರವೆಲ್ಲವೂ ಪುಣ್ಯಪ್ರದವಾದುದು. ಅದನ್ನು ನಾನು ನಿತ್ಯವೂ ಸಂತೋಷದಿಂದಲೇ ಸೇವಿಸುವೆನು.

೭೭. ವಿಶಾಲಾಕ್ಷಿಯ ಮಹಾಪ್ರಾಸಾದದಲ್ಲಿಯೇ ನನ್ನ ವಿಶ್ರಾಂತಿಗೃಹ ವಿರುವುದು. ಅಲ್ಲಿ ಸಂಸಾರದಿಂದ ವಿರಕ್ತರಾಗಿ ನನ್ನನ್ನು ಸೇವಿಸುವ ಭಕ್ತರಿಗೆ ನಾನು ಜನನಮರಣಗಳಿಂದ ವಿಶ್ರಾಂತಿಯನ್ನು ನೀಡುವೆನು.

೭೮. ಅಲ್ಲಿಯೇ ನನ್ನ ಚಕ್ರಪುಷ್ಕರಿಣೀತೀರ್ಥವಿರುವುದು. ಅದರಲ್ಲಿ ನಿಯಮದಿಂದ ಮಧ್ಯಾಹ್ನಕಾಲದಲ್ಲಿ ಸ್ನಾನಮಾಡುವ ಪುರುಷರಿಗೆ ನಾನು ಅಂತರಂಗಶುದ್ಧಿಯನ್ನು ಅನುಗ್ರಹಿಸುವೆನು.

೭೯. ಯಾವುದನ್ನು ಜ್ಞಾನಿಗಳು ಪರಮತತ್ತ್ವವೆಂದು ಕರೆಯುವರೊ, ಯಾವುದನ್ನು ನಿಷ್ಕಲ್ಮಷನಾದ ಬ್ರಹ್ಮವೆಂದು ಹೇಳುವರೊ, ಯಾವುದನ್ನು ಸ್ವಪ್ರಕಾಶವೆಂದು ನಿರೂಪಿಸುವರೊ, ಅದನ್ನೇ ಅಲ್ಲಿ ಭಕ್ತರಿಗೆ ದೇಹಾವಸಾನ ಕಾಲದಲ್ಲಿ ನಾನು ಉಪದೇಶಮಾಡುವೆನು.

೮೦. ಯಾವುದನ್ನು ತಾರಕಜ್ಞಾನವೆಂದು ಕರೆಯುವರೊ, ಯಾವುದನ್ನು ಅತಿನಿರ್ಮಲವೆಂದು ಕರೆಯುವರೊ, ಯಾವುದನ್ನು ಸ್ವಾತ್ಮಾರಾಮವೆಂದು ಹೇಳುವರೊ, ಆ ಪರತತ್ತ್ವವನ್ನೇ ಅಂತ್ಯಕಾಲದಲ್ಲಿ ಭಕ್ತರಿಗೆ ತೋರಿಸಿಕೊಡುವೆನು.

೮೧. ಮಣಿಕರ್ಣಿಕಾಪ್ರದೇಶವು ಲೋಕವಲ್ಲೆಲ್ಲ ಮಂಗಳಪ್ರದೇಶವಾಗಿರು

ನಿರ್ವಾಣಶ್ರಾವಣನೇ ಯತ್ರ ಪಾತ್ರಾಪಾತ್ರಂ ನ ಚಿಂತಯೇ ।
ಆನಂದಕಾನನೇ ತನ್ಮೇ ದಾನಾಸ್ಥಾನಂ ದಿವಾನಿಶಂ ॥ ೮೨ ॥
ಭವಾಂಬುಧೌ ಮಹಾಗಾಧೇ ಪ್ರಾಣಿನಃ ಪರಿಮಜ್ಜತಃ ।
ಭೂತ್ವೈವ ಕರ್ಣಧಾರೋಽಂತೇ ಯತ್ರ ಸಂತಾರಯಾಮ್ಯಹಂ ॥ ೮೩ ॥
ಸೌಭಾಗ್ಯಭಾಗ್ಯಭೂರ್ಯಾ ವೈ ವಿಖ್ಯಾತಾ ಮಣಿಕರ್ಣಿಕಾ ।
ದದಾಮಿ ತಸ್ಯಾಂ ಸರ್ವಸ್ವಮಗ್ರಜಾಯಾಂತ್ಯಜಾಯ ವಾ ॥ ೮೪ ॥
ಮಹಾಸಮಾಧಿಸಂಪನ್ನೈರ್ವೇದಾಂತಾರ್ಥನಿಷೇವಿಭಿಃ ।
ದುಷ್ಪ್ರಾಪೋಽನ್ಯತ್ರ ಯೋ ಮೋಕ್ಷಃ ಶ್ವಪಚೈರಪಿ ಸ ಲಭ್ಯತೇ ॥ ೮೫ ॥
ದೀಕ್ಷಿತೋ ವಾ ದಿವಾಕೀರ್ತಿಃ ಪಂಡಿತೋ ವಾಪ್ಯಪಂಡಿತಃ ।
ತುಲ್ಯೋ ಮೇ ಮೋಕ್ಷದೀಕ್ಷಾಯಾಂ ಸಂಪ್ರಾಪ್ಯ ಮಣಿಕರ್ಣಿಕಾಂ ॥ ೮೬ ॥

---

ವುದು. ಸರ್ವೋತ್ಕೃಷ್ಟವಾದ ಯಾತ್ರಾಸ್ಥಳವಾಗಿರುವುದು. ಅಲ್ಲಿ ನಾನು ಕರ್ಮ ಪಾಶಗಳಿಂದ ಬಂಧಿತರಾಗಿ ಪಶುಪ್ರಾಯರಾಗಿರುವ ಜೀವರ ಪಾಶಗಳನ್ನು ಬಿಡಿಸುವೆನು.

೮೨. ಅಲ್ಲಿ ಸ್ನಾನಮಾಡಿದವರಿಗೆ ಮೋಕ್ಷವನ್ನು ಕೊಡುವ ವಿಷಯದಲ್ಲಿ ನಾನು ಪಾತ್ರಾಪಾತ್ರಗಳ ಚಿಂತೆಯನ್ನು ಮಾಡುವುದಿಲ್ಲ. ಆನಂದಕಾನನದಲ್ಲೆಲ್ಲ ನಿಸ್ಸಂಕೋಚವಾಗಿ ದಾನವನ್ನು ಮಾಡುವ ಪ್ರದೇಶವೆಂದರೆ ಇದೊಂದೇ ಆಗಿರುವುದು.

೮೩. ಅತ್ಯಂತ ದುಸ್ತರವಾದ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿ ಸಂಕಟಪಡುತ್ತಿರುವ ಪ್ರಾಣಿಗಳಿಗೆಲ್ಲ ಅಲ್ಲಿ ನಾನು ಹರಿಗೋಲಾಗಿ ಅಂತ್ಯದಲ್ಲಿ ಅವರನ್ನೆಲ್ಲ ನೀರಿನಿಂದ ಕಡೆಹಾಯಿಸುವೆನು.

೮೪. ಆ ಮಣಿಕರ್ಣಿಕೆಯೇ ಸಮಸ್ತ ಸೌಭಾಗ್ಯಭಾಗ್ಯಗಳಿಗೆ ಜನ್ಮಭೂಮಿ ಯೆಂದು ವಿಖ್ಯಾತವಾಗಿರುವುದು. ಬ್ರಾಹ್ಮಣನೇ ಆಗಲಿ, ಶೂದ್ರನೇ ಆಗಲಿ ಅಲ್ಲಿ ನನ್ನನ್ನು ಸೇವಿಸಿದ ಭಕ್ತನಿಗೆ ಸರ್ವಸ್ವವನ್ನೂ ಕೊಡುವೆನು.

೮೫. ಮಹಾ ಸಮಾಧಿಯಲ್ಲಿ ನಿಷ್ಠರಾಗಿರುವವರಿಗೂ, ನಿತ್ಯವೂ ವೇದಾಂತ ವಾಕ್ಯಗಳನ್ನು ವಿಚಾರಿಸುತ್ತಿರುವವರಿಗೂ ಇತರ ಸ್ಥಳಗಳಲ್ಲಿ ಯಾವ ಮೋಕ್ಷ ಪದವಿಯು ದುರ್ಲಭವಾಗಿರುವುದೊ. ಅದನ್ನೇ ಇಲ್ಲಿ ಅನುಕಂಪಾರ್ಹರಾದ ನೀಚರೂ ಪಡೆಯುವರು.

೮೬. ದೀಕ್ಷಿತನಾಗಲಿ, ಚಂಡಾಲನಾಗಲಿ, ಪಂಡಿತನಾಗಲಿ, ಪಾಮರ ನಾಗಲಿ. ಮಣಿಕರ್ಣಿಕೆಯನ್ನು ಸೇರಿದ ಮೇಲೆ ಮೋಕ್ಷಮಾರ್ಗಕ್ಕೆ ದೀಕ್ಷೆಯನ್ನು ಕೊಡುವ ವಿಷಯದಲ್ಲಿ ಸಕಲ ಜೀವರೂ ನನಗೆ ಒಂದೇ ಸಮವಾಗಿರುವುದು.

ಯತ್ತ್ಯಾಗೇಽನ್ಯತ್ರ ಕೃಪಣಸ್ತತ್ಪ್ರಾಪ್ಯ ಮಣಿಕರ್ಣಿಕಾಂ ।
ದದಾಮಿ ಜಂತುಮಾತ್ರಾಯ ಸರ್ವಸ್ವಂ ಚಿರಸಂಚಿತಂ ॥ ೮೭ ॥
ಯದಿ ದೈವಾದಿಹ ಪ್ರಾಪ್ತಸ್ತ್ರಿಸಂಯೋಗೋಽತಿದುರ್ಘಟಃ ।
ಅವಿಚಾರಂ ತದಾ ದೇಯಂ ಸರ್ವಸ್ವಂ ಚಿರಸಂಚಿತಂ ॥ ೮೮ ॥
ಶರೀರಮಥ ಸಂಪತ್ತಿರಥ ಸಾ ಮಣಿಕರ್ಣಿಕಾ ।
ತ್ರಿಸಂಯೋಗೋಽಯಮಪ್ರಾಪ್ಯೋ ದೇವೈರಿಂದ್ರಾದಿಕೈರಪಿ ॥ ೮೯ ॥
ಪುನಃ ಪುನರ್ವಿಚಾರ್ಯೇತಿ ಜಂತುಮಾತ್ರೇಭ್ಯ ಏವ ಚ ।
ನಿರ್ವಾಣಲಕ್ಷ್ಮೀಂ ಯಚ್ಛಾಮಿ ಸದೋಪಮಣಿಕರ್ಣಿಕಾಂ ॥ ೯೦ ॥
ಮುಕ್ತಿದಾನಮಹೀ ಸಾ ಮೇ ವಾರಾಣಸ್ಯಾಂ ಮಹೀಯಸೀ ।
ತನ್ಮಹೀರಜಸಾ ಸಾಮ್ಯಂ ತ್ರಿಲೋಕ್ಯಪಿ ನ ಚೋದ್ವಹೇತ್ ॥ ೯೧ ॥
ಪರಂ ಲಿಂಗಾರ್ಚನಸ್ಥಾನಮವಿಮುಕ್ತೇಶ್ವರೇಶ್ವರಂ ।
ತತ್ರ ಪೂಜಾಂ ಸಕೃತ್ಕೃತ್ವಾ ಕೃತಕೃತ್ಯೋ ನರೋ ಭವೇತ್ ॥ ೯೨ ॥

---

೮೭. ಯಾವ ನಾನು ಇತರ ಕ್ಷೇತ್ರಗಳಲ್ಲಿ ಮೋಕ್ಷವನ್ನು ಕೊಡುವುದರಲ್ಲಿ ಅತ್ಯಂತ ಲೋಭಿಯಾಗಿರುವೆನೊ, ಆ ನಾನು ಬಹುಕಾಲದಿಂದ ಸಂಚಯಿಸಿದ ಆ ನನ್ನ ಸರ್ವಸ್ವವನ್ನೇ ಮಣಿಕರ್ಣಿಕಾಕ್ಷೇತ್ರದಲ್ಲಿ ಪ್ರಾಣಿಮಾತ್ರಕ್ಕೂ ಕೊಡುತ್ತಿರುವೆನು.

೮೮. ಯಾವ ಮನುಷ್ಯನಿಗೆ ಪೂರ್ವಪುಣ್ಯದ ಫಲವಾಗಿ ಮುಂದೆ ಹೇಳುವ ಮೂರು ಸಾಧನಗಳೂ ಒಮ್ಮೆಯೇ ಲಭಿಸುವುವೊ, ಅವನು ಅತ್ಯಂತ ದುರ್ಲಭವಾದ ಆ ಸಮಯದಲ್ಲಿ ತಾನು ಬಹುಕಾಲದಿಂದಾರ್ಜಿಸಿದ ಸರ್ವಸ್ವವನ್ನೂ ವಿಚಾರಮಾಡದೆ ಅಲ್ಲಿ ದಾನಮಾಡಬೇಕು.

೮೯. ಮೊದಲನೆಯದು ನೀರೋಗವಾದ ದೇಹವು. ಎರಡನೆಯದು ಧನಸಂಪತ್ತಿಯು. ಮೂರನೆಯದು ಮಣಿಕರ್ಣಿಕಾತೀರ್ಥವು. ಈ ಮೂರು ಭಾಗ್ಯಗಳ ಸಮಾಹಾರವು ಇಂದ್ರಾದಿ ದೇವತೆಗಳಿಗೂ ಸಹ ಅಪ್ರಾಪ್ಯವಾಗಿರುವುದು.

೯೦. ಈ ವಿಷಯಗಳೆಲ್ಲವನ್ನೂ ಪುನಃಪುನಃ ಚೆನ್ನಾಗಿ ವಿಚಾರಮಾಡಿಯೇ ನಾನು ಯಾವ ಪ್ರಾಣಿಮಾತ್ರಕ್ಕಾದರೂ ಮಣಿಕರ್ಣಿಕೆಯ ಸನಿಹದಲ್ಲಿ ಮೋಕ್ಷಲಕ್ಷ್ಮಿಯನ್ನು ಸುಲಭವಾಗಿ ಕೊಡುತ್ತಿರುವೆನು.

೯೧. ಸಕಲ ಕಾಶೀಕ್ಷೇತ್ರದಲ್ಲಿಯೂ ಅದೇ ಮೋಕ್ಷದಾನಕ್ಕೆ ನನಗೆ ಸರ್ವೋತ್ತಮವಾದ ಪ್ರದೇಶವಾಗಿರುವುದು. ಸಮಸ್ತ ಬ್ರಹಾಂಡವೂ ಆ ಪ್ರದೇಶದ ಒಂದು ಧೂಳಿನ ಕಣಕ್ಕೂ ಎಂದಿಗೂ ಸಮಹೋಗಲಾರದು.

೯೨. ಅವಿಮುಕ್ತೇಶ್ವರಕ್ಷೇತ್ರವೇ ಲಿಂಗಾರ್ಚನೆಗೆ ಉತ್ಕೃಷ್ಟವಾದ ಸ್ಥಾನವಾಗಿರುವುದು. ಅಲ್ಲಿ ಒಂದುಸಲ ಶಿವಲಿಂಗದ ಪೂಜೆಯನ್ನು ಮಾಡುವುದರಿಂದಲೇ ಮನುಷ್ಯನು ಕೃತಕೃತ್ಯನಾಗುವನು.

ಸಾಯಂ ಪಾಶುಪತೀಂ ಸಂಧ್ಯಾಂ ಕುರ್ಯಾಂ ಪಾಶುಪತೀಶ್ವರೇ ।
ವಿಭೂತಿಧಾರಣಾತ್ತತ್ರ ಪಶುಪಾಶೈರ್ನ ಬಧ್ಯತೇ ॥ ೯೩ ॥
ಪ್ರಾತಃಸಂಧ್ಯಾಂ ಕರೋಮ್ಯೇವ ಸದೋಂಕಾರನಿಕೇತನೇ ।
ತತ್ರೈಕಾಪಿ ಕೃತಾ ಸಂಧ್ಯಾ ಸರ್ವಪಾತಕಕೃಂತನೀ ॥ ೯೪ ॥
ವಸಾಮಿ ಕೃತ್ತಿವಾಸೋಽಹಂ ಸದಾ ಪ್ರತಿ ಚತುರ್ದಶಿ ।
ಅತ್ರ ಜಾಗರಣಂ ಕೃತ್ವಾ ಚತುರ್ದಶ್ಯಾಂ ನ ಗರ್ಭಭಾಕ್ ॥ ೯೫ ॥
ರತ್ನೇಶ್ವರೋಽರ್ಚಿತೋ ದದ್ಯಾನ್ಮಹಾರತ್ನಾನಿ ಭಕ್ತಿತಃ ।
ರತ್ನೈಃ ಸಮರ್ಚ್ಯ ತಲ್ಲಿಂಗಂ ಸ್ತ್ರೀರತ್ನಾದಿ ಲಭೇನ್ನರಃ ॥ ೯೬ ॥
ವಿಷ್ಟಪತ್ರಿತಯಾಂತಃಸ್ಥೋಽಪ್ಯಹಂ ಲಿಂಗೇ ತ್ರಿವಿಷ್ಟಪೇ ।
ತಿಷ್ಠಾಮಿ ಸತತಂ ಭಕ್ತಮನೋರಥಸಮೃದ್ಧಯೇ ॥ ೯೭ ॥
ವಿರಜಸ್ಕಂ ಮಹಾಪೀಠಂ ತತ್ರ ಸಂಸೇವ್ಯ ಮಾನವಃ ।
ವಿರಜಾ ಜಾಯತೇ ನೂನಂ ಚತುರ್ನದಕೃತೋದಕಃ ॥ ೯೮ ॥

೯೩. ನಾನು ಪ್ರತಿದಿನದ ಸಾಯಂಕಾಲದಲ್ಲಿಯೂ ಪಶುಪತೀಶ್ವರನ ಸನ್ನಿಧಿಯಲ್ಲಿ ಮಾಹೇಶ್ವರರಿಗೆ ಕಾರ್ಯವಾದ ಸಂಧ್ಯಾಕಾರ್ಯವನ್ನು ಮಾಡುವೆನು. ಅಲ್ಲಿ ವಿಭೂತಿ ಧಾರಣೆಯನ್ನು ಮಾಡುವುದರಿಂದ ಮನುಷ್ಯನು ಪಶುಪಾಶಗಳ ಬಂಧಕ್ಕೆ ಸಿಕ್ಕುವುದಿಲ್ಲ.

೯೪. ನಾನು ಯಾವಾಗಲೂ ಪ್ರಾತಃಕಾಲದ ಸಂಧ್ಯಾಕಾರ್ಯವನ್ನು ಓಂಕಾರೇಶ್ವರನ ದೇವಾಲಯದಲ್ಲಿ ಮಾಡುವೆನು. ಅಲ್ಲಿ ಮಾಡಿದ ಒಂದು ಆಹ್ನಿಕ ಕ್ರಿಯೆಯೆ ಸರ್ವಪಾಪಗಳನ್ನೂ ನಾಶಗೊಳಿಸುವುದು.

೯೫. ಪ್ರತಿಯೊಂದು ಚತುರ್ದಶಿಯ ದಿವಸದಲ್ಲಿಯೂ ನಾನು ಕೃತ್ತಿವಾಸೇಶ್ವರ ಲಿಂಗದಲ್ಲಿ ಸನ್ನಿಹಿತನಾಗಿರುವೆನು. ಆ ದೇವಾಲಯದಲ್ಲಿ ಚತುರ್ದಶಿಯ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುವವನು ಗರ್ಭವಾಸಕ್ಕೆ ಭಾಗಿಯಾಗುವುದಿಲ್ಲ.

೯೬. ರತ್ನೇಶ್ವರನನ್ನು ಭಕ್ತಿಯಿಂದ ಅರ್ಚಿಸಲು ಆತನು ಮಹಾ ರತ್ನಗಳನ್ನು ಕೊಡುವನು. ಆ ಲಿಂಗವನ್ನು ನವರತ್ನಗಳ ರಾಶಿಗಳಿಂದ ಪೂಜಿಸಿದ ಮನುಷ್ಯನು ಸ್ತ್ರೀರತ್ನವೇ ಮೊದಲಾದ ಸಕಲೈಶ್ವರ್ಯಗಳನ್ನೂ ಪಡೆಯುವನು.

೯೭. ಮೂರು ಲೋಕಗಳಲ್ಲಿ ಅಂತರ್ಯಾಮಿಯಾಗಿದ್ದರೂ ನಾನು ತ್ರಿಲೋಚನೇಶ್ವರಲಿಂಗದಲ್ಲಿ ವಿಶೇಷಸಾನ್ನಿಧ್ಯವನ್ನಿಟ್ಟಿರುವೆನು. ನಿತ್ಯವೂ ಅಲ್ಲಿ ಭಕ್ತರ ಮನೋರಥಗಳನ್ನೂ ಪೂರ್ಣಗೊಳಿಸುತ್ತಿರುವೆನು.

೯೮. ವಿರಜಸ್ಕವೂ ನನ್ನ ಒಂದು ಮಹಾಪೀಠವಾಗಿರುವುದು. ನಾಲ್ಕುನದಿಗಳ ಸಂಗಮವಾದ ಪಿಲಿಪಿಲಾತೀರ್ಥದ ಸ್ನಾನವನ್ನು ಮಾಡಿಕೊಂಡು ವಿರಜೇಶ್ವರನನ್ನು ಸೇವಿಸುವ ಮನುಷ್ಯನು ಖಂಡಿತವಾಗಿಯೂ ನಿಷ್ಪಾಪನಾಗುವನು.

**ಮಹಾದೇವೇ ಮಹಾಪೀಠಂ ಮಮ ಸಾಧಕಸಿದ್ಧಿದಂ ।**
**ತತ್ಪೀಠದರ್ಶನಾದೇವ ಮಹಾಪಾಪೈಃ ಪ್ರಮುಚ್ಯತೇ ॥ ೯೯ ॥**
**ಪಿತೃಪ್ರೀತಿಪ್ರದಂ ಪೀಠಂ ವೃಷಭಧ್ವಜಸಂಜ್ಞಕಂ ।**
**ಪಿತೃತರ್ಪಣಕೃತ್ತತ್ರ ಪಿತೄಂಸ್ತಾರಯತಿ ಕ್ಷಣಾತ್ ॥ ೧೦೦ ॥**
**ಆದಿಕೇಶವಪೀಠೇಽಹಮಾದಿಕೇಶವಪೀಠಧೃಕ್ ।**
**ಶ್ವೇತದ್ವೀಪಂ ನಯೇ ಭಕ್ತಾನ್ವೈಷ್ಣವಾನತಿವಲ್ಲಭಾನ್ ॥ ೧೦೧ ॥**
**ತತ್ರೈವ ಮಂಗಲಾಪೀಠೇ ಸರ್ವಮಂಗಲದಾಯಿನಿ ।**
**ಉಪಪಂಚನದೇ ತೀರ್ಥೇ ಭಕ್ತಾನ್ಸಂತಾರಯಾಮ್ಯಹಂ ॥ ೧೦೨ ॥**
**ಬಿಂದುಮಾಧವರೂಪೇಣ ಯತ್ರಾಹಂ ವೈಷ್ಣವಾನ್ ಜನಾನ್ ।**
**ನಯೇ ಪಂಚನದಸ್ನಾತಾಂಸ್ತದ್ವಿಷ್ಣೋಃ ಪರಮಂ ಪದಂ ॥ ೧೦೩ ॥**
**ಪಂಚಮುದ್ರೇ ಮಹಾಪೀಠೇ ಯೇ ವೀರೇಶ್ವರಸೇವಕಾಃ ।**
**ತೇಷಾಂ ಪರಮನಿರ್ವಾಣಂ ಕಾಲೇನಾಲ್ಪೇನ ಜಾಯತೇ ॥ ೧೦೪ ॥**

೯೯. ಮಹಾದೇವೇಶ್ವರನಿಂದೊಡಗೂಡಿದ ನನ್ನ ಮಹಾಪೀಠವು ಸಾಧಕರಿಗೆ ಸಿದ್ಧಿಯನ್ನು ಕೊಡುವುದಾಗಿರುವುದು. ಆ ಪೀಠವನ್ನು ದರ್ಶನಮಾಡುವುದರಿಂದಲೇ ನರನು ಮಹಾಪಾತಕಗಳಿಂದಲೂ ಮುಕ್ತನಾಗುವನು.

೧೦೦. ವೃಷಭಧ್ವಜವೆಂಬ ಹೆಸರಿನ ನನ್ನ ಪೀಠವು ಪಿತೃದೇವತೆಗಳಿಗೆ ಅತ್ಯಂತ ಸಂತೋಷಕರವಾದುದು. ಅಲ್ಲಿ ಪಿತೃತರ್ಪಣಗಳನ್ನಿತ್ತವನು ಕ್ಷಣಮಾತ್ರದಲ್ಲಿಯೇ ತನ್ನ ಪಿತೃಗಳನ್ನುದ್ಧರಿಸುವನು.

೧೦೧. ಆದಿಕೇಶವಪೀಠದಲ್ಲಿ ನಾನೇ ಆದಿಕೇಶವನ ರೂಪವನ್ನು ಧರಿಸಿರುವೆನು. ಅಲ್ಲಿ ನಾನು ವಿಷ್ಣುರೂಪವನ್ನು ಧ್ಯಾನಿಸುವವರೂ, ನನಗೆ ಅತ್ಯಂತ ಪ್ರಿಯರೂ ಆದ ಭಕ್ತರನ್ನು ಶ್ವೇತದ್ವೀಪಕ್ಕೆ ಕರೆದೊಯ್ಯುವೆನು.

೧೦೨. ಅಲ್ಲಿಯೇ ಪಂಚನದತೀರ್ಥದ ಸಮೀಪದಲ್ಲಿ ಸಕಲ ಮಂಗಳದಾಯಕವಾದ ಮಂಗಳಾಪೀಠವಿರುವುದು. ಅಲ್ಲಿ ನಾನು ನೆಲಸಿ ಭಕ್ತರನ್ನು ಸಂಸಾರಸಾಗರದಿಂದ ಕಡೆಹಾಯಿಸುತ್ತಿರುವೆನು.

೧೦೩. ಪಂಚನದೇಶ್ವರಕ್ಷೇತ್ರದಲ್ಲಿ ನಾನು ಬಿಂದುಮಾಧವರೂಪದಿಂದ ನೆಲಸಿ ವಿಷ್ಣುಭಕ್ತರಾದ ಜನರನ್ನೆಲ್ಲ ಪಂಚನದತೀರ್ಥದಲ್ಲಿ ಮಾಡಿದ ಸ್ನಾನದ ಫಲವಾಗಿ ಮಹಾವಿಷ್ಣುವಿನ ಪರಮಪದವಾದ ವೈಕುಂಠಕ್ಕೆ ಕರೆದೊಯ್ಯುವೆನು.

೧೦೪. ಪಂಚಮುದ್ರವೆಂಬ ಮಹಾಪೀಠದಲ್ಲಿರುವ ವೀರೇಶ್ವರನಿಗೆ ಯಾರು ಸೇವಕರಾಗಿರುವರೊ, ಅವರಿಗೆ ಅತ್ಯಲ್ಪಕಾಲದಲ್ಲಿಯೆ ಪರಮೋತ್ಕೃಷ್ಟವಾದ ಮೋಕ್ಷಪದವಿಯು ದೊರಕುವುದು.

ತತ್ರ ಸಿದ್ಧೇಶ್ವರೀಪೀಠೇ ಚಂದ್ರೇಶ್ವರಸಮೀಪತಃ ।
ತತ್ರ ಸಂನಿಧಿಕರ್ತೄಣಾಂ ಸಿದ್ಧಿಃ ಷಣ್ಮಾಸತೋ ಭವೇತ್ ॥ ೧೦೫ ॥
ಕಾಶ್ಯಾಂ ಚ ಯೋಗಿನೀಪೀಠೇ ಯೋಗಸಿದ್ಧಿವಿಧಾಯಿನಿ ।
ಸಿದ್ಧೀರುಚ್ಚಾಟನಾದ್ಯಾಶ್ಚ ಕೈರ್ನಲಬ್ಧಾಃ ಸುಸಾಧಕೈಃ ॥ ೧೦೬ ॥
ಅನೇಕಾನೀಹ ಪೀಠಾನಿ ಸಂತಿ ಕಾಶ್ಯಾಂ ಪದೇ ಪದೇ ।
ಪರಂ ಧರ್ಮೇಶಪೀಠಸ್ಯ ಕಾಚಿಚ್ಛಕ್ತಿರನುತ್ತಮಾ ॥ ೧೦೭ ॥
ಯಂತ್ರಾಮೀ ಬಾಲಕೀರಾಶ್ಚ ನಿರ್ಮಲಜ್ಞಾನಭಾಜನಂ ।
ಆಸುಃ ಸದುಪದೇಶಾನ್ಮೇ ತ್ರಾತ ತ್ರಾತೇತಿ ಭಾಷಿಣಃ ॥ ೧೦೮ ॥
ಏತದ್ಧರ್ಮೇಶ್ವರಂ ಪೀಠಂ ತ್ಯಜಾಮ್ಯದ್ಯದಿನಾವಧಿ ।
ನ ಕದಾಚಿತ್ತರಣಿಜ ತ್ವತ್ತಪೋವನಮುತ್ತಮಂ ॥ ೧೦೯ ॥
ಮಮಾನುಗ್ರಹತಃ ಕೀರಾನೇಕಾನ್ಪಶ್ಯ ರವೇಃ ಸುತಃ ।
ದಿವ್ಯಂ ವಿಮಾನಮಾರುಹ್ಯ ಗಂತಾರೋ ಮತ್ಪುರಂ ಮಹತ್ ॥ ೧೧೦ ॥

---

೧೦೫. ಅದರ ಸಮೀಪದಲ್ಲಿಯೇ ಸಿದ್ಧೇಶ್ವರೀಪೀಠವಿರುವುದು. ಅಲ್ಲಿರುವ ಚಂದ್ರೇಶ್ವರನ ಸಮೀಪದಲ್ಲಿ ಸನ್ನಿಧಿಸೇವೆಯನ್ನು ಮಾಡುವವರಿಗೆ ಆರುತಿಂಗಳ ಕಾಲದಲ್ಲಿಯೇ ಕಾರ್ಯಸಿದ್ಧಿಯಾಗುವುದು.

೧೦೬. ಕಾಶೀಕ್ಷೇತ್ರದಲ್ಲಿ ಯೋಗಸಿದ್ಧಿಗಳನ್ನು ಕೈಗೂಡಿಸುವ ಯೋಗಿನೀ ಪೀಠವೊಂದಿರುವುದು. ಅಲ್ಲಿ ಸಾಧನೆಗಳನ್ನು ಮಾಡುತ್ತಿರುವ ಯಾರಿಗೆತಾನೆ ಉಚ್ಚಾಟನಾದಿ ಸಿದ್ಧಿಗಳು ಕರಗತಗಳಾಗುವುದಿಲ್ಲ?

೧೦೭. ಕಾಶಿಯಲ್ಲಿ ಹೆಜ್ಜೆಹೆಜ್ಜೆಗೂ ಅಸಂಖ್ಯಾಕಗಳಾದ ಪೀಠಗಳಿರುವುವು. ಆದರೆ ಎಲ್ಲವುಗಳಿಗಿಂತಲೂ ಈ ಧರ್ಮೇಶ್ವರಪೀಠದಲ್ಲಿ ಅಸದೃಶವಾದ ಒಂದು ಶಕ್ತಿಯು ನೆಲೆಗೊಂಡಿರುವುದು.

೧೦೮. ಆದುದರಿಂದಲೇ ನನ್ನ ಉತ್ತಮೋಪದೇಶವನ್ನು ಕೇಳಿದ ಈ ಗಿಳಿ ಮರಿಗಳೂ ಸಹ ಪರಿಶುದ್ಧವಾದ ಜ್ಞಾನವನ್ನು ಪಡೆದು "ನಮ್ಮನ್ನು ಕಾಪಾಡು, ಕಾಪಾಡು" ಎಂದು ಮೊರೆಯಿಡುತ್ತಿರುವುವು.

೧೦೯. ಸೂರ್ಯನಂದನನಾದ ಎಲೈ ಧರ್ಮರಾಜನೆ! ಈ ದಿನ ಮೊದಲು ಗೊಂಡು ಉತ್ತಮ ತಪೋವನವೆನಿಸಿದ ಈ ಧರ್ಮೇಶ್ವರಪೀಠವನ್ನು ನಾನು ಎಂದಿಗೂ ಎಡಬಿಡುವುದಿಲ್ಲ.

೧೧೦. ಧರ್ಮರಾಜ! ಈ ಗಿಳಿಗಳನ್ನು ನೋಡು. ಇವು ನನ್ನ ಅನುಗ್ರಹದ ಬಲದಿಂದ ದಿವ್ಯವಾದ ವಿಮಾನವನ್ನು ಹತ್ತಿಕೊಂಡು ಮಹೈಶ್ವರ್ಯಭರಿತವಾದ ನನ್ನ ಪಟ್ಟಣಕ್ಕೆ ಹೊರಟುಹೋಗುವುವು.

ತತ್ರ ಭುಕ್ತ್ವಾ ಚಿರಂ ಭೋಗಾನ್ ಯೋಗಾನ್ ಪ್ರಾಪ್ಯ ಮದೀರಿತಂ ।
ಇಹ ಮುಕ್ತಿಮವಾಪ್ಸ್ಯಂತಿ ತ್ವತ್ಸಂಸರ್ಗಾತಿನಿರ್ಮಲಾಃ ॥ ೧೧೧ ॥
ಇತ್ಯುಕ್ತವತಿ ದೇವೇಶೇ ಕೈಲಾಸಶಿಖರೋಪಮಂ ।
ದಿವ್ಯಂ ವಿಮಾನಮಾಪನ್ನಂ ರುದ್ರಕನ್ಯಾಪರಿಷ್ಕೃತಂ ॥ ೧೧೨ ॥
ಆರುಹ್ಯ ತೇನ ಯಾನೇನ ದಿವ್ಯರೂಪಧರಾಃ ಖಗಾಃ ।
ಕೈಲಾಸಮಭಿಸಂಜಗ್ಮುರ್ಧರ್ಮಮಾಪೃಚ್ಛ್ಯ ತೇಽಮಲಾಃ ॥ ೧೧೩ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಧರ್ಮೇಶಾಖ್ಯಾನವರ್ಣನ" ನಾಮೈಕೋನವಿಂಶೋಽಧ್ಯಾಯಃ**

---

೧೧೧. ಅಲ್ಲಿ ನನ್ನ ಸಹವಾಸದಿಂದ ಸಕಲ ಕಲ್ಮಷಗಳನ್ನೂ ಕಳೆದುಕೊಂಡು ನಾನು ನಿರೂಪಿಸಿರುವ ದಿವ್ಯಜ್ಞಾನವನ್ನು ಪಡೆದು ಕೈಲಾಸದಲ್ಲಿ ಬಹುಕಾಲದ ವರೆಗೂ ಅನೇಕ ಭೋಗಗಳನ್ನನುಭವಿಸಿ ಕೊನೆಯಲ್ಲಿ ಯೋಗವನ್ನು ಪಡೆದು ಮೋಕ್ಷವನ್ನು ಪಡೆಯುವುವು.''

೧೧೨. ಇಂತೆಂದು ಮಹಾದೇವನು ಹೇಳುತ್ತಿರುವಂತೆಯೇ ಕೈಲಾಸ ಪರ್ವತದ ಶಿಖರವೆಂಬಂತೆ ಥಳಥಳಿಸುತ್ತ ರುದ್ರಕನ್ಯೆಯರಿಂದ ಕೂಡಿದ್ದ ದಿವ್ಯ ವಿಮಾನವೊಂದು ಆಕಾಶದಿಂದಿಳಿದುಬಂದಿತು.

೧೧೩. ಪರಿಶುದ್ಧಗಳಾದ ಆ ಪಕ್ಷಿಗಳು ದಿವ್ಯರೂಪಗಳನ್ನು ತಳೆದು ಧರ್ಮರಾಜನ ಅಪ್ಪಣೆಯನ್ನು ಪಡೆದು ಆ ವಿಮಾನವನ್ನಧಿರೋಹಿಸಿ ಕೈಲಾಸವನ್ನು ಕುರಿತು ಹೊರಟುಹೋದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಧರ್ಮೇಶಾಖ್ಯಾನವರ್ಣನ"ವೆಂಬ ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀ ೯೬ ॥

# ಅಥಾಶೀತಿತಮೋಽಧ್ಯಾಯಃ

**ವಿಶ್ವಭುಜಾಂಶಾವಿನಾಯಕಪ್ರಶಂಸನಂ — ಮನೋರಥತೃತೀಯಾವ್ರತನಿರೂಪಣಂ**

**ಸ್ಕಂದ ಉವಾಚ :—**

**ಕುಂಭೋದ್ಭೂತ ತದಾಶ್ಚರ್ಯಂ ವಿಲೋಕ್ಯ ಜಗದಂಬಿಕಾ ।**
**ಉವಾಚ ಶಂಭುಂ ಪ್ರಣತಾ ಪ್ರಣತಾರ್ತಿಹರಂ ಪರಂ ॥ ೧ ॥**

**ಅಂಬಿಕೋವಾಚ :—**

**ಅಸ್ಯ ಪೀಠಸ್ಯ ಮಾಹಾತ್ಮ್ಯಂ ಮಹದೇವ ಮಹೇಶ್ವರ ।**
**ತಿರಶ್ಚಾಮಪಿ ಯಜ್ಜಾತಂ ಜ್ಞಾನಂ ಸಂಸಾರಮೋಚನಂ ॥ ೨ ॥**
**ಅತಃ ಪ್ರಭಾವಂ ವಿಜ್ಞಾಯ ಧರ್ಮಪೀಠಸ್ಯ ಧೂರ್ಜಟೇ ।**
**ಧರ್ಮೇಶ್ವರಸಮೀಪೇಽಹಂ ಸ್ಥಾಸ್ಯಾಮ್ಯದ್ಯದಿನಾವಧಿ ॥ ೩ ॥**
**ಅತ್ರ ಲಿಂಗೇ ತು ಯೇ ಭಕ್ತಾಃ ಸ್ತ್ರಿಯೋ ವಾ ಪುರುಷಾಸ್ತು ವಾ ।**
**ತೇಷಾಮಭೀಷ್ಟಸಂಸಿದ್ಧಿಂ ಸಾಧಯಿಷ್ಯಾಮ್ಯಹಂ ಸದಾ ॥ ೪ ॥**

**ಈಶ್ವರ ಉವಾಚ :—**

**ಸಾಧೂ ಕೃತಂ ತ್ವಯಾ ದೇವಿ ಕೃತವತ್ಯಾ ಪರಿಗ್ರಹಂ ।**
**ಅಸ್ಯೇಹ ಧರ್ಮಪೀಠಸ್ಯ ಮನೋರಥಕೃತಃ ಸತಾಂ ॥ ೫ ॥**

---

## ಕನ್ನಡದ ಅನುವಾದ

**ವಿಶ್ವಭುಜಾಶಾವಿನಾಯಕಪ್ರಶಂಸನ — ಮನೋರಥತೃತೀಯಾವ್ರತನಿರೂಪಣ**

೧. ಸ್ಕಂದನು ಹೇಳುತ್ತಾನೆ:— ಎಲೈ ಅಗಸ್ತ್ಯನೆ! ಈ ಆಶ್ಚರ್ಯವನ್ನು ನೋಡುತ್ತಿದ್ದ ಜಗದಂಬಿಕೆಯು ಪ್ರಣತರದುಃಖಗಳನ್ನು ನಾಶಮಾಡುವವನೂ ಪರಾತ್ಪರನೂ ಆದ ಮಹಾದೇವನನ್ನು ಕುರಿತು ಇತೆಂದಳು.

೨. ಪಾರ್ವತಿಯು ಹೇಳುತ್ತಾಳೆ:— ಮಹೇಶ್ವರನೆ! ತಿರ್ಯಗ್ಜಂತುಗಳಿಗೂ ಸಂಸಾರವಿಮೋಚಕವಾದ ಜ್ಞಾನವುಂಟಾದುದರಿಂದ ಈ ಪೀಠದ ಮಾಹಾತ್ಮ್ಯವು ನಿಜವಾಗಿಯೂ ಅಪಾರವಾಗಿರುವುದು.

೩. ಧೂರ್ಜಟಿಯೆ! ಈ ಧರ್ಮಪೀಠದ ಪ್ರಭಾವವನ್ನು ಮನಗಂಡಿರುವೆನಾದುದರಿಂದ ಇಂದು ಮೊದಲುಗೊಂಡು ನಾನು ಧರ್ಮೇಶ್ವರನ ಸಮೀಪದಲ್ಲಿಯೇ ಶಾಶ್ವತವಾಗಿ ನೆಲಸಿರುವೆನು.

೪. ಸ್ತ್ರೀಯರೇ ಆಗಲಿ, ಪುರುಷರೇ ಆಗಲಿ ಈ ಲಿಂಗದಲ್ಲಿ ಯಾರು ಭಕ್ತಿಯುಕ್ತರಾಗಿರುವರೊ, ಅವರ ಅಭಿಲಾಷೆಗಳ ಈಡೇರುವಿಕೆಯನ್ನೇ ನಾನು ಯಾವಾಗಲೂ ಸಾಧಿಸುತ್ತಿರುವೆನು.

೫. ಈಶ್ವರನು ಹೇಳುತ್ತಾನೆ:— ದೇವೀ! ಸತ್ಪುರುಷರ ಸಕಲ ಮನೋರಥ

ತ ಏವ ವಿಶ್ವಭೋಕ್ತಾರೋ ವಿಶ್ವಮಾನ್ಯಾಸ್ತ ಏವ ಹಿ ।
ಯೇ ತ್ವಾಂ ವಿಶ್ವಭುಜಾಮತ್ರ ಪೂಜಯಿಷ್ಯಂತಿ ಮಾನವಾಃ ॥ ೬ ॥
ವಿಶ್ವೇ ವಿಶ್ವಭುಜೇ ವಿಶ್ವಸ್ಥಿತ್ಯುತ್ಪತ್ತಿಲಯಪ್ರದೇ ।
ನರಾಸ್ತ್ವದರ್ಚಕಾಶ್ಚಾತ್ರ ಭವಿಷ್ಯತ್ಯಮಲಾತ್ಮಕಾಃ ॥ ೭ ॥
ಮನೋರಥತೃತೀಯಾಯಾಂ ಯಸ್ತೇ ಭಕ್ತಿಂ ವಿಧಾಸ್ಯತಿ ।
ತನ್ಮನೋರಥಸಂಸಿದ್ಧಿರ್ಭವಿತ್ರೀ ಮದನುಗ್ರಹಾತ್ ॥ ೮ ॥
ನಾರೀ ವಾ ಪುರುಷೋ ವಾಥ ತ್ವದ್ವ್ರತಾಚರಣಾತ್ಪ್ರಿಯೇ ।
ಮನೋರಥಾನಿಹ ಪ್ರಾಪ್ಯ ಜ್ಞಾನಮಂತೇ ಚ ಲಪ್ಸ್ಯತೇ ॥ ೯ ॥

ದೇವ್ಯುವಾಚ :—

ಮನೋರಥತೃತೀಯಾಯಾಂ ವ್ರತಂ ಕೀದೃಕ್ಕಥಾ ಕಥಂ ।
ಕಿಂ ಫಲಂ ಕೈಃ ಕೃತಂ ನಾಥ ಕಥಯೈತತ್ಕೃಪಾಂ ಕುರು ॥ ೧೦ ॥

---

ಗಳನ್ನೂ ಕೈಗೂಡಿಸುವ ಈ ಧರ್ಮಪೀಠವನ್ನೇ ನಿನ್ನ ಸ್ಥಾನವಾಗಿ ಪರಿಗ್ರಹಿಸಿದ ನೀನು ನಿಜವಾಗಿಯೂ ಸಾಧುಕೃತ್ಯವನ್ನೇ ಮಾಡಿದೆ.

೬. ಯಾವ ಮಾನವರು ಇಲ್ಲಿ ನೆಲಸಿರುವ ವಿಶ್ವಭುಜಾನಾಮಕಳಾದ ನಿನ್ನನ್ನು ಪೂಜಿಸುವರೊ, ಅವರೇ ಸಮಸ್ತ ಭೋಗಗಳಿಗೆ ಭಾಗಿಗಳಾಗುವರು. ಅವರೇ ಸಕಲ ಮಾನವರ ಪೂಜೆಗೆ ಅರ್ಹರಾದವರು.

೭. ವಿಶ್ವಾಕಾರಳೆ! ವಿಶ್ವಭುಜೆಯೆ! ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳಿಗೆ ಕಾರಣಳೆ! ಇಲ್ಲಿ ನಿನ್ನ ಪೂಜೆಯನ್ನು ಮಾಡುವ ಮನುಷ್ಯರೆಲ್ಲರೂ ನಿಷ್ಕಲ್ಮಷವಾದ ಅಂತಃಕರಣವುಳ್ಳವರಾಗುವರು.

೮. ಯಾವ ಮನುಷ್ಯನು ಮನೋರಥತೃತೀಯೆಯ ದಿನದಲ್ಲಿ ಅಲ್ಲಿ ನಿನಗೆ ಭಕ್ತಿಯಿಂದ ಪೂಜೆಯನ್ನು ಮಾಡುವನೊ, ಅವನ ಮನೋರಥಗಳೆಲ್ಲವೂ ಅವನಿಗೆ ನನ್ನ ಅನುಗ್ರಹದಿಂದ ಸಂಸಿದ್ಧಗಳಾಗುವುವು.

೯. ಪ್ರಿಯಳೆ! ನಾರಿಯೇ ಆಗಲಿ ಪುರುಷನೇ ಆಗಲಿ ನಿನ್ನ ಈ ವ್ರತವನ್ನು ಆಚರಿಸುವುದರಿಂದ ಇಹಲೋಕದಲ್ಲಿ ಸಕಲಾಭೀಷ್ಟಗಳನ್ನೂ ಪಡೆಯುವುದಲ್ಲದೆ ಅಂತ್ಯದಲ್ಲಿ ಸಂಸಾರಮೋಚಕವಾದ ಜ್ಞಾನವನ್ನೂ ಸಂಪಾದಿಸುವನು.

೧೦. ದೇವಿಯು ಪ್ರಶ್ನೆಮಾಡುತ್ತಾಳೆ:—ಮನೋರಥತೃತೀಯೆಯ ವ್ರತವೆಂಬುದು ಯಾವುದು? ಅದರ ಕಥೆಯೇನು? ಅದನ್ನು ಆಚರಿಸುವುದರಿಂದ ಯಾವ ಫಲವು ಲಭಿಸುವುದು? ಹಿಂದೆ ಯಾರು ಯಾರು ಅದನ್ನು ಮಾಡಿದರು? ಸ್ವಾಮಿಯೆ! ನನ್ನಲ್ಲಿ ಕೃಪೆಯಿಟ್ಟು ಇದೆಲ್ಲವನ್ನೂ ವಿಸ್ತಾರವಾಗಿ ತಿಳಿಸುವವನಾಗು.

ಈಶ್ವರ ಉವಾಚ :—

ಶೃಣು ದೇವಿ ಯಥಾ ಪೃಷ್ಟಂ ಭವತ್ಯಾ ಭವತಾರಿಣಿ ।
ಮನೋರಥವ್ರತಂ ಚೈತದ್ಗುಹ್ಯಾದ್ಗುಹ್ಯತರಂ ಪರಂ ॥ ೧೧ ॥
ಪುಲೋಮತನಯಾ ಪೂರ್ವಂ ತತಾಪ ಪರಮಂ ತಪಃ ।
ಕಿಂಚಿನ್ಮನೋರಥಂ ಪ್ರಾಪ್ತುಂ ನ ಚಾಪ ತಪಸಃ ಫಲಂ ॥ ೧೨ ॥
ಅಪೂಪುಜತ್ತಪೋ ಮಾಂ ಸಾ ಭಕ್ತ್ಯಾ ಪರಮಯಾ ಮುದಾ ।
ಗೀತೇನ ಸರಹಸ್ಯೇನ ಕಲಕಂಠೀಕಲೇನ ಹಿ ॥ ೧೩ ॥
ತದ್ಗಾನೇನಾತಿಸಂತುಷ್ಟೋ ಮೃದುನಾ ಮಧುರೇಣ ಚ ।
ಸುತಾಳೇನ ಸುರಂಗೇಣ ತಾನಮಾತ್ರಾಕಲಾವತಾ ॥ ೧೪ ॥
ಪ್ರೋವಾಚ ತಾಂ ವರಂ ಬ್ರೂಹಿ ಪ್ರಸನ್ನೋಽಸ್ಮಿ ಪುಲೋಮಜೇ ।
ಅನೇನ ಚ ಸುಗೀತೇನ ತ್ವನಯಾ ಲಿಂಗಪೂಜಯಾ ॥ ೧೫ ॥

ಪುಲೋಮಜೋವಾಚ :—

ಯದಿ ಪ್ರಸನ್ನೋ ದೇವೇಶ ತದಾ ಯೋ ಮೇ ಮನೋರಥಃ ।
ತಂ ಪೂರಯ ಮಹಾದೇವ ಮಹಾದೇವೀಮಹಾಪ್ರಿಯ ॥ ೧೬ ॥

---

೧೧. ಈಶ್ವರನು ಹೇಳುತ್ತಾನೆ :—ಭಕ್ತರನ್ನು ಸಂಸಾರದಿಂದ ಕಡೆಹಾಯಿಸುವ ಓ ದೇವಿಯೆ ! ಕೇಳು. ನೀನು ಕೇಳಿದುದನ್ನು ಹೇಳುವೆನು. ಈ ಮನೋರಥ ವ್ರತವು ಸಕಲ ರಹಸ್ಯಗಳಲ್ಲಿಯೂ ಅತ್ಯಂತ ರಹಸ್ಯವಾಗಿರುವುದು.

೧೨. ಪುಲೋಮನ ಮಗಳಾದ ಶಚೀದೇವಿಯು ಒಮ್ಮೆ ಯಾವುದೋ ಒಂದು ಮನೋರಥವನ್ನು ಪಡೆಯುವ ಉದ್ದೇಶದಿಂದ ಅತ್ಯುಗ್ರವಾದ ತಪಸ್ಸನ್ನು ಮಾಡಿದಳು. ಆದರೂ ತಪಸ್ಸಿನ ಫಲವನ್ನು ಪಡೆಯಲಿಲ್ಲ.

೧೩. ಆಗ ಪರಮಭಕ್ತಿಯಿಂದಲೂ ಸಂತೋಷದಿಂದಲೂ ಆಕೆಯು ನನ್ನನ್ನು ರಹಸ್ಯಾನ್ವಿತವೂ ಕೋಗಿಲೆಯ ಇಂಚರವನ್ನು ಹೋಲುವ ಮಧುರಧ್ವನಿಸಹಿತವೂ ಆದ ಸಂಗೀತದಿಂದ ಸೇವಿಸಿದಳು.

೧೪. ಮಾರ್ದವವುಳ್ಳುದೂ, ಸುಶ್ರಾವವೂ, ತಾಲಬದ್ಧವೂ, ಮನೋಹರವೂ, ತಾನ, ಮಾತ್ರಾ, ಕಲೆಗಳಿಂದ ಕೂಡಿದುದೂ ಆದ ಆಕೆಯ ಸಂಗೀತವನ್ನು ಕೇಳಿ ನಾನು ಬಹಳವಾಗಿ ಸಂತೋಷಗೊಂಡೆನು.

೧೫. ಆಗ ನಾನು ಆಕೆಯನ್ನು ಕುರಿತು ಇಂತೆಂದೆನು :—" ಶಚೀದೇವಿಯೆ ! ದಿವ್ಯವಾದ ಈ ನಿನ್ನ ಸಂಗೀತದಿಂದಲೂ ಈ ಶಿವಲಿಂಗದ ಪೂಜೆಯಿಂದಲೂ ನಾನು ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ.

೧೬. ಶಚಿಯು ಹೇಳುತ್ತಾಳೆ :—ಮಹಾದೇವ ! ಮಹಾದೇವಿಗೆ ಅತ್ಯಂತ ಪ್ರಿಯನಾದ ಓ ಸ್ವಾಮಿಯೆ ! ದೇವೇಶ್ವರನಾದ ನೀನು ನನಗೆ ಪ್ರಸನ್ನನಾಗಿರುವೆಯಾದರೆ ನನ್ನ ಮನೋರಥವು ಯಾವುದಿರುವುದೊ, ಅದನ್ನು ಪೂರೈಸಿಕೊಡು.

ವರದೋಽಭಯಹಸ್ತಶ್ಚ ಸಾಕ್ಷಸೂತ್ರಃ ಸಮೋದಕಃ ।
ದೇವ್ಯಾಃ ಪುರಸ್ತಾದ್ವ್ರತಿನಾ ಪೂಜ್ಯ ಆಶಾವಿನಾಯಕಃ ॥ ೨೯ ॥
ಚೈತ್ರಶುಕ್ಲತೃತೀಯಾಯಾಂ ಕೃತ್ವಾ ವೈ ದಂತಧಾವನಂ ।
ಸಾಯಂತನೀಂ ಚ ನಿರ್ವರ್ತ್ಯ ನಾತಿತೃಪ್ತ್ಯಾ ಭುಜಿಕ್ರಿಯಾಂ ॥ ೩೦ ॥
ನಿಯಮಂ ಚೇತಿ ಗೃಹ್ಣೀಯಾಜ್ಜಿತಕ್ರೋಧೋ ಜಿತೇಂದ್ರಿಯಃ ।
ಸಂತ್ಯಕ್ತಾಸ್ಪೃಶ್ಯಸಂಸ್ಪರ್ಶಃ ಶುಚಿಸ್ತದ್ಗತಮಾನಸಃ ॥ ೩೧ ॥
ಪ್ರಾತರ್ವ್ರತಂ ಚರಿಷ್ಯಾಮಿ ಮಾತರ್ವಿಶ್ವಭುಜೇಽನಘೇ ।
ವಿಧೇಹಿ ತತ್ರ ಸಾಂನಿಧ್ಯಂ ಮನ್ಮನೋರಥಸಿದ್ಧಯೇ ॥ ೩೨ ॥
ನಿಯಮಂ ಚೇತಿ ಸಂಗೃಹ್ಯ ಸ್ವಪೇದ್ರಾತ್ರೌ ಶುಭಂ ಸ್ಮರನ್ ।
ಪ್ರಾತರುತ್ಥಾಯ ಮೇಧಾವೀ ವಿಧಾಯಾವಶ್ಯಕಂ ವಿಧಿಂ ॥ ೩೩ ॥
ಶೌಚಮಾಚಮನಂ ಕೃತ್ವಾ ದಂತಕಾಷ್ಠಂ ಸಮಾದದೇತ್ ।
ಅಶೋಕವೃಕ್ಷಸ್ಯ ಶುಭಂ ಸರ್ವಶೋಕನಿಶಾತನಂ ॥ ೩೪ ॥

---

ಮಾಡಬೇಕಾದ ಈ ವ್ರತವು ಪರಮಮಂಗಳವು. ಆ ಪೂಜೆಯಲ್ಲಿ ಇಪ್ಪತ್ತು ಭುಜಗಳಿಂದೊಡಗೂಡಿದ ವಿಶ್ವಭುಜಾನಾಮಕಳಾದ ಗೌರಿಯನ್ನು ಪೂಜಿಸಬೇಕು.

೨೯. ಮೊದಲು ಆಕೆಯ ಮುಂದುಗಡೆಯಲ್ಲಿ ವರದ ಅಭಯಮುದ್ರೆಗಳಿಂದಲೂ, ಅಕ್ಷಮಾಲೆ ಮತ್ತು ಮೋದಕಗಳಿಂದಲೂ ಕಂಗೊಳಿಸುತ್ತಿರುವ ನಾಲ್ಕುಕೈಗಳುಳ್ಳ ಆಶಾವಿನಾಯಕನೆಂಬ ಗಣಪತಿಯನ್ನು ಸ್ಥಾಪಿಸಿ ಪೂಜಿಸಬೇಕು.

೩೦–೩೧. ಚೈತ್ರಮಾಸದ ಶುಕ್ಲಪಕ್ಷತೃತೀಯಾತಿಥಿಯ ಪ್ರಾತಃಕಾಲದಲ್ಲಿ ದಂತಧಾವನವನ್ನು ಮಾಡಿಕೊಂಡು ಸ್ನಾನಾಹ್ನಿಕಾದಿ ನಿತ್ಯಕರ್ಮಗಳನ್ನು ತೀರಿಸಿ ಅತಿತೃಪ್ತಿಯಾಗದಂತೆ ಅಲ್ಪಭೋಜನವನ್ನು ಮಾಡಿ ಕ್ರೋಧವನ್ನೂ ಇಂದ್ರಿಯವ್ಯಾಪಾರಗಳನ್ನೂ ಜಯಿಸಿ ಮುಂದೆ ಹೇಳುವ ನಿಯಮವನ್ನು ಸ್ವೀಕರಿಸಬೇಕು. ಆ ದಿನದಲ್ಲಿ ವ್ರತಿಯಾದವನು ಅಸ್ಪೃಶ್ಯರೊಡನೆ ಸಹವಾಸವನ್ನು ಬಿಟ್ಟು ಶುಚಿಯಾಗಿ ವ್ರತಾಚರಣೆಯಲ್ಲಿಯೇ ಏಕಾಗ್ರಚಿತ್ತವುಳ್ಳವನಾಗಿರಬೇಕು.

೩೨. "ನಿಷ್ಪಾಪಳಾದ ಓ ತಾಯಿ! ವಿಶ್ವಭುಜಾದೇವಿಯೆ! ನಾಳಿನ ಪ್ರಾತಃಕಾಲದಲ್ಲಿ ನಿನ್ನ ವ್ರತವನ್ನು ಆಚರಿಸುತ್ತೇನೆ. ನೀನು ಅಲ್ಲಿ ಸನ್ನಿಧಿಯನ್ನನುಗ್ರಹಿಸಿ ನನ್ನ ಮನೋರಥಗಳನ್ನು ಸಿದ್ಧಿಗೊಳಿಸುವವಳಾಗು."

೩೩. ಇಂತೆಂದು ವ್ರತನಿಯಮವನ್ನು ಸ್ವೀಕರಿಸಿ ರಾತ್ರಿಯಲ್ಲಿ ಮಂಗಳವನ್ನೇ ಚಿಂತಿಸುತ್ತ ನಿದ್ರೆಯನ್ನು ಮಾಡಬೇಕು. ಬಳಿಕ ಪ್ರಾಜ್ಞನಾದ ಭಕ್ತನು ಉಷಃಕಾಲದಲ್ಲಿ ಎದ್ದು ತನ್ನ ನಿತ್ಯಕರ್ಮಗಳನೆಲ್ಲ ತೀರಿಸಿಕೊಳ್ಳಬೇಕು.

೩೪. ಶೌಚವನ್ನೂ ಆಚಮನವನ್ನೂ ಮಾಡಿ ಸಮಸ್ತಶೋಕಗಳನ್ನೂ ನಾಶ

ನಿತ್ಯಂತನಂ ಚ ನಿಷ್ಪಾದ್ಯ ವಿಧಿಂ ವಿಧಿವಿದಾಂ ವರಃ ।
ಸ್ನಾತ್ವಾ ಶುದ್ಧಾಂಬರಃ ಸಾಯಂ ಗೌರೀಪೂಜಾಂ ಸಮಾಚರೇತ್ ॥ ೩೫ ॥
ಆದೌ ವಿನಾಯಕಂ ಪೂಜ್ಯ ಘೃತಪೂರಾನ್ನಿವೇದ್ಯ ಚ ।
ತತೋಽರ್ಚಯೇದ್ವಿಶ್ವಭುಜಾಮಶೋಕಕುಸುಮೈಃ ಶುಭೈಃ ॥ ೩೬ ॥
ಅಶೋಕವರ್ತಿನೈವೇದ್ಯೈರ್ಧೂಪೈಶ್ಚಾಗುರುಸಂಭವೈಃ ।
ಕುಂಕುಮೇನಾನುಲಿಪ್ಯಾದಾವೇಕಭುಕ್ತಂ ತತಶ್ಚರೇತ್ ॥ ೩೭ ॥
ಅಶೋಕವರ್ತಿಸಹಿತೈರ್ಘೃತಪೂರೈರ್ಮನೋಹರೈಃ ।
ಏವಂ ಚೈತ್ರತೃತೀಯಾಯಾಂ ವ್ರತೀಯಾಯಾಂ ಪುಲೋಮಜೇ ॥ ೩೮ ॥
ರಾಧಾದಿಫಾಲ್ಗುನಾಂತಾಸು ತೃತೀಯಾಸು ವ್ರತಂ ಚರೇತ್ ।
ಕ್ರಮೇಣ ದಂತಕಾಷ್ಠಾನಿ ಕಥಯಾಮಿ ತವಾನಘೇ ॥ ೩೯ ॥

---

ಗೊಳಿಸುವ ಅಶೋಕವೃಕ್ಷದಿಂದ ಪವಿತ್ರವಾದ ದಂತಕಾಷ್ಠವನ್ನು ತಂದು ಮುಖ ಮಾರ್ಜನವನ್ನು ನೆರವೇರಿಸಿಕೊಳ್ಳಬೇಕು.

೩೫. ಶಾಸ್ತ್ರೋಕ್ತವಿಧಿಗಳನ್ನು ತಿಳಿದ ಮನುಷ್ಯನು ನಿತ್ಯಕರ್ಮಗಳಲ್ಲಿ ಸೇರಿರುವ ಕ್ರಿಯೆಗಳೆಲ್ಲವನ್ನೂ ಪೂರೈಸಿಕೊಂಡು ಸ್ನಾನವನ್ನು ಮಾಡಿ ಶುಭ್ರವಾದ ವಸ್ತ್ರವನ್ನುಟ್ಟು ಉಪವಾಸದಿಂದ ಆ ದಿನದ ಸಾಯಂಕಾಲದಲ್ಲಿ ಗೌರೀಪೂಜೆಯನ್ನು ನಡೆಸಬೇಕು.

೩೬. ಮೊದಲು ಆಶಾವಿನಾಯಕನಿಗೆ ಷೋಡಶೋಪಚಾರ ಪೂಜೆಯನ್ನು ಮಾಡಿ ಘೃತಪೂರಗಳ ನೈವೇದ್ಯವನ್ನು ಸಮರ್ಪಿಸಬೇಕು. ಬಳಿಕ ವಿಶ್ವಭುಜಾ ದೇವಿಯನ್ನು ಅಖಂಡಗಳೂ ಪವಿತ್ರಗಳೂ ಆದ ಅಶೋಕಪುಷ್ಪಗಳಿಂದ ಪೂಜಿಸಬೇಕು.

೩೭. ಅಶೋಕಪತ್ರಗಳಲ್ಲಿಯೇ ಅರ್ಪಿಸಿದ ಘೃತಪೂರನೈವೇದ್ಯಗಳಿಂದಲೂ, ಅಗುರುದ್ರವ್ಯಗಳಿಂದ ಮಾಡಿದ ಧೂಪಗಳಿಂದಲೂ, ಪೂಜಿಸಬೇಕು. ಮೊದಲು ಕುಂಕುಮದ ಅನುಲೇಪನವನ್ನು ಮಾಡಬೇಕು. ಆ ದಿನದಲ್ಲಿ ವ್ರತಿಯು ಏಕಭುಕ್ತವನ್ನು ಆಚರಿಸಬೇಕು.

೩೮. ಅಶೋಕವರ್ತಿಗಳಿಂದ ಕೂಡಿದ ಮನೋಹರಗಳಾದ ಘೃತಪೂರಗಳನ್ನೇ ಅಂದು ಭೋಜನ ಮಾಡಬೇಕು. ಶಚೀದೇವಿಯೆ! ಇಂತು ಚೈತ್ರ ತೃತೀಯೆಯ ದಿವಸವನ್ನು ನಿಯಮದಿಂದ ಕಳೆಯಬೇಕು.

೩೯. ಇದೇ ಪ್ರಕಾರವಾಗಿಯೇ ವೈಶಾಖವು ಮೊದಲಾಗಿ ಫಾಲ್ಗುನಾಂತವಾದ ಸಕಲ ಮಾಸಗಳಲ್ಲಿಯೂ ಶುಕ್ಲತೃತೀಯೆಯಲ್ಲಿ ವ್ರತವನ್ನು ಆಚರಿಸಬೇಕು. ಎಲೌ ನಿಷ್ಕಲ್ಮಷಳೆ! ಆ ಮಾಸಗಳಲ್ಲಿ ಪ್ರಾತಃಕಾಲದಲ್ಲಿ ಉಪಯೋಗಾರ್ಹಗಳಾದ ದಂತಕಾಷ್ಠಗಳನ್ನು ತಿಳಿಸುವೆನು.

ನಿವೇದಯೇದ್ಯದನ್ನಂ ಹಿ ಏಕಭಕ್ತೇಽಪಿ ತತ್ಸ್ಮೃತಂ ।
ಅನ್ಯಂ ನಿವೇದ್ಯ ಸಂಮೂಢೋ ಭುಂಜಾನೋಽನ್ಯತ್ಪತೇದಧಃ ॥ ೩೨ ॥
ಪ್ರತಿಮಾಸಂ ತೃತೀಯಾಯಾಮೇವಮಾರಾಧ್ಯ ವತ್ಸರಂ ।
ವ್ರತಸಂಪೂರ್ತಯೇ ಕುರ್ಯಾತ್ಸ್ಥಂಡಿಲೇಽಗ್ನಿಸಮರ್ಚನಂ ॥ ೩೩ ॥
ಜಾತವೇದಸಮಂತ್ರೇಣ ತಿಲಾಜ್ಯದ್ರವಿಣೇನ ಚ ।
ಶತಮಷ್ಟಾಧಿಕಂ ಹೋಮಂ ಕಾರಯೇದ್ವಿಧಿನಾ ವ್ರತೀ ॥ ೩೪ ॥
ಸದೈವ ನಕ್ತೇ ಪೂಜೋಕ್ತಾ ಸದಾ ನಕ್ತೇ ತು ಭೋಜನಂ ।
ನಕ್ತ ಏವ ಹಿ ಹೋಮೋಽಯಂ ನಕ್ತ ಏವ ಕ್ಷಮಾಪನಂ ॥ ೩೫ ॥
ಗೃಹಾಣ ಪೂಜಾಂ ಮೇ ಭಕ್ತ್ಯಾ ಮಾತರ್ವಿಘ್ನಜಿತಾ ಸಹ ।
ನಮೋಽಸ್ತು ತೇ ವಿಶ್ವಭುಜೇ ಪೂರಯಾಶು ಮನೋರಥಂ ॥ ೩೬ ॥
ನಮೋ ವಿಘ್ನಕೃತೇ ತುಭ್ಯಂ ನಮ ಆಶಾವಿನಾಯಕ ।
ತ್ವಂ ವಿಶ್ವಭುಜಯಾ ಸಾರ್ಧಂ ಮಮ ದೇಹಿ ಮನೋರಥಂ ॥ ೩೭ ॥

೩೨. ಯಾವ ಅನ್ನವನ್ನು ದೇವತೆಗೆ ನೈವೇದ್ಯವನ್ನಾಗಿಡುವನೋ, ಅದನ್ನೇ ವ್ರತವನ್ನಾಚರಿಸುವವನು ಏಕಭುಕ್ತಕ್ಕಾಗಿ ಸ್ವೀಕರಿಸಬೇಕು. ಯಾವ ಮೂಢನು ಬೇರೆ ನೈವೇದ್ಯವನ್ನು ದೇವರಿಗರ್ಪಿಸಿ ಬೇರೆ ಅನ್ನವನ್ನು ಊಟಮಾಡುವನೋ ಅವನು ಅಧೋಲೋಕಗಳಲ್ಲಿ ಬೀಳುವನು.

೩೩. ಇಂತು ಒಂದು ವರ್ಷದವರೆಗೂ ಪ್ರತಿಮಾಸದ ಶುಕ್ಲತೃತೀಯೆಯಲ್ಲಿಯೂ ವಿಶ್ವಭುಜಾದೇವಿಯ ಪೂಜೆಯನ್ನು ಮಾಡಿ ಪುನಃ ಚೈತ್ರಮಾಸವು ಬರಲು ವ್ರತವು ಸಾಂಗವಾಗಿ ನೆರವೇರಿಸಲು ಸ್ಥಂಡಿಲೋಲ್ಲೇಖನಾದಿಗಳಿಂದ ಅಗ್ನಿಯನ್ನು ಪೂಜಿಸಬೇಕು.

೩೪. ಮತ್ತು "ಜಾತವೇದಸೇ ಸುನವಾಮ" ಎಂಬ ಮಂತ್ರದಿಂದಲೂ, ತಿಲಮಿಶ್ರಿತವಾದ ಆಜ್ಯದ ಚರುದ್ರವ್ಯದಿಂದಲೂ ವ್ರತಿಯು ವಿಧ್ಯುಕ್ತರೀತಿಯಿಂದ ಆ ಅಗ್ನಿಯಲ್ಲಿ ನೂರೆಂಟು ಹೋಮಗಳನ್ನು ಮಾಡಬೇಕು.

೩೫. ಈ ವ್ರತಕ್ಕೆ ವಿಶೇಷ ನಿಯಮವೆಂದರೆ ಯಾವಾಗಲೂ ರಾತ್ರಿಯಲ್ಲಿಯೇ ಪೂಜೆಯನ್ನು ಮಾಡಬೇಕು. ಏಕಭುಕ್ತವನ್ನೂ ಕರ್ತೃವು ರಾತ್ರಿಯಲ್ಲಿಯೇ ಮಾಡಬೇಕು. ಅಂತ್ಯವಲ್ಲಿ ಈ ಹೋಮವೂ ಸಹ ರಾತ್ರಿಯಲ್ಲಿಯೇ ಆಗಬೇಕು. ಮತ್ತು ಆಗಲೇ ಕ್ಷಮಾಪಣೆಯನ್ನೂ ಕೇಳಿಕೊಳ್ಳಬೇಕಾಗಿರುವುದು.

೩೬. "ತಾಯೆ! ನೀನು ವಿನಾಯಕನೊಡಗೂಡಿ ಭಕ್ತಿಯಿಂದ ನಾನು ಮಾಡಿರುವ ಈ ಪೂಜೆಯನ್ನು ಸ್ವೀಕರಿಸು. ವಿಶ್ವಭುಜಾದೇವಿಯೆ! ನಿನ್ನನ್ನು ನಮಸ್ಕರಿಸುವೆನು. ಶೀಘ್ರವಾಗಿ ನನ್ನ ಮನೋರಥವನ್ನು ಪೂರ್ಣಮಾಡು.

೩೭. 'ಅಭಕ್ತರಿಗೆ ವಿಘ್ನಗಳನ್ನುಂಟುಮಾಡುವ ಆಶಾವಿನಾಯಕನೆ! ನಿನಗೆ

ಏತೌ ಮಂತ್ರೌ ಸಮುಚ್ಚಾರ್ಯ ಪೂಜ್ಯೌ ಗೌರೀವಿನಾಯಕೌ ।
ವ್ರತಕ್ಷಮಾಪನೇ ದೇಯಃ ಪರ್ಯಂಕಃ ಸತೂಲಿಕಾನ್ವಿತಃ ॥ ೫೮ ॥
ಉಪಧಾನ್ಯಾ ಸಮಾಯುಕ್ತೋ ದೀಪೀದರ್ಪಣಸಂಯುತಃ ।
ಆಚಾರ್ಯಂ ಚ ಸಪತ್ನೀಕಂ ಪರ್ಯಂಕ ಉಪವೇಶ್ಯ ಚ ॥ ೫೯ ॥
ವ್ರತೀ ಸಮರ್ಚಯೇದ್ವಸ್ತ್ರೈಃ ಕರಕರ್ಣವಿಭೂಷಣೈಃ ।
ಸುಗಂಧಚಂದನೈರ್ಮಾಲ್ಯೈರ್ದಕ್ಷಿಣಾಭಿರ್ಮುದಾನ್ವಿತಃ ॥ ೬೦ ॥
ದದ್ಯಾತ್ಪಯಸ್ವಿನೀಂ ಗಾಂ ಚ ವ್ರತಸ್ಯ ಪರಿಪೂರ್ತಯೇ ।
ತಥೋಪಭೋಗವಸ್ತೂನಿ ಚ್ಛತ್ರೋಪಾನತ್ಕಮಂಡಲುಂ ॥ ೬೧ ॥
ಮನೋರಥತೃತೀಯಾಯಾ ವ್ರತಮೇತನ್ಮಯಾ ಕೃತಂ ।
ನ್ಯೂನಾತಿರಿಕ್ತಂ ಸಂಪೂರ್ಣಮೇತದಸ್ತು ಭವದ್ಗಿರಾ ॥ ೬೨ ॥

---

ನಮಸ್ಕಾರವು. ನೀನೂ ವಿಶ್ವಭುಜಾದೇವಿಯೊಡನೆ ನನ್ನ ಇಷ್ಟಾರ್ಥವನ್ನು ಸಲ್ಲಿಸುವವನಾಗು.

೫೮. ಈ ಎರಡು ಮಂತ್ರಗಳನ್ನು ಪಠಿಸುತ್ತ ಗೌರೀವಿನಾಯಕರನ್ನು ಪೂಜಿಸಬೇಕು. ವ್ರತವು ಸಾಂಗವಾಗಿ ನೆರವೇರಿ ಕ್ಷಮೆಯನ್ನು ಬೇಡುವ ಸಮಯದಲ್ಲಿ ಹಂಸತೂಲಿಕಾತಲ್ಪದೊಡಗೂಡಿದ ಪರ್ಯಂಕವನ್ನು ಸಮರ್ಪಿಸಬೇಕು.

೫೯–೬೦. ಆ ಪರ್ಯಂಕವು ದಿಂಬುಗಳಿಂದ ಸಹಿತವಾಗಿರಬೇಕು. ದೀಪಗಳನ್ನು ಹಿಡಿದಿರುವ ಕನ್ಯೆಯರ ಪ್ರತಿಮೆಗಳಿಂದಲೂ ಕನ್ನಡಿಗಳಿಂದಲೂ ಕೂಡಿರಬೇಕು. ವ್ರತಿಯಾದವನು ಸಂತೋಷಭರಿತನಾಗಿ ಆಚಾರ್ಯನನ್ನು ಪತ್ನಿಯೊಡನೆ ಆ ಮಂಚದಮೇಲೆ ಕುಳ್ಳಿರಿಸಿ ಆ ದಂಪತಿಗಳನ್ನು ವಸ್ತ್ರಗಳಿಂದಲೂ, ಕಡಗ, ಉಂಗುರಗಳೇ ಮೊದಲಾದ ಕರಾಭರಣಗಳಿಂದಲೂ, ಕುಂಡಲ, ಕಿವಿಯೋಲೆಗಳೇ ಮುಂತಾದ ಕರ್ಣಭೂಷಣಗಳಿಂದಲೂ, ಸುಗಂಧಯುಕ್ತಗಳಾದ ಚಂದನದ್ರವ್ಯಗಳಿಂದಲೂ, ಪುಷ್ಪಮಾಲೆಗಳಿಂದಲೂ, ದ್ರವ್ಯದಕ್ಷಿಣೆಗಳಿಂದಲೂ ಯಥಾವಿಧಿಯಾಗಿ ಪೂಜಿಸಬೇಕು.

೬೧. ವ್ರತಸಾಫಲ್ಯಕ್ಕಾಗಿ ಹಾಲು ಕರೆಯುತ್ತಿರುವ ಆಕಳನ್ನೂ, ಇತರ ಉಪಭೋಗವಸ್ತುಗಳನ್ನೂ, ಛತ್ರಿಯನ್ನೂ, ಪಾದರಕ್ಷೆಗಳನ್ನೂ, ಕಮಂಡಲವನ್ನೂ ಸತ್ಪಾತ್ರಗಳಲ್ಲಿ ದಾನಮಾಡಬೇಕು.

೬೨. ನಾನು ನಡೆಸಿರುವ ಈ ಮನೋರಥತೃತೀಯಾವ್ರತವು ಅನೇಕ ನ್ಯೂನಾತಿರೇಕಗಳಿಂದ ಕೂಡಿದ್ದರೂ ನಿನ್ನ ಮಾತಿನಿಂದ ನನಗೆ ಸಂಪೂರ್ಣಫಲದಾಯಕವಾಗಿ ಪರಿಣಮಿಸಲಿ.

ಇತ್ಯಾಚಾರ್ಯಂ ಸಮಾಪೃಚ್ಛ್ಯ ತಥೇತ್ಯುಕ್ತಶ್ಚ ತೇನ ವೈ ।
ಆಸೀಮಾಂತಮನುವ್ರಜ್ಯ ದತ್ವಾನ್ಯೇಭ್ಯೋಽಪಿ ಶಕ್ತಿತಃ ॥ ೬೩ ॥
ನಕ್ತಂ ಸಮಾಚರೇತ್ಪ್ರೇಷ್ಯೈಃ ಸಾರ್ಧಂ ಸುಪ್ರೀತಮಾನಸಃ ।
ಪ್ರಾತಶ್ಚತುರ್ಥ್ಯಾಂ ಸಂಭೋಜ್ಯ ಚತುರಶ್ಚ ಕುಮಾರಕಾನ್ ॥ ೬೪ ॥
ಅಭ್ಯರ್ಚ್ಯ ಗಂಧಮಾಲ್ಯಾದ್ಯೈರ್ದ್ವಾದಶಾಪಿ ಕುಮಾರಿಕಾಃ ।
ಏವಂ ಸಂಪೂರ್ಣತಾಂಯಾತಿ ವ್ರತಮೇತತ್ಸುನಿರ್ಮಲಂ ॥ ೬೫ ॥
ಕಾರ್ಯೈರ್ಮನೋರಥಾವಾಪ್ತ್ಯೈ ಸರ್ವೈರೇತದ್ವ್ರತಂ ಶುಭಂ ।
ಪತ್ನೀಂ ಮನೋರಮಾಂ ಕುಲ್ಯಾಂ ಮನೋವೃತ್ತ್ಯನುಸಾರಿಣೀಂ ॥ ೬೬ ॥
ತಾರಣೀಂ ದುಃಖಸಂಸಾರಸಾಗರಸ್ಯ ಪತಿವ್ರತಾಂ ।
ಕುರ್ವನ್ನೇತದ್ವ್ರತಂ ವರ್ಷಂ ಕುಮಾರಃ ಪ್ರಾಪ್ನುಯಾತ್ಸ್ಫುಟಂ ॥ ೬೭ ॥
ಕುಮಾರೀ ಪತಿಮಾಪ್ನೋತಿ ಸ್ವಾಢ್ಯಂ ಸರ್ವಗುಣಾಧಿಕಂ ।
ಸುವಾಸಿನೀ ಲಭೇತ್ಪುತ್ರಾನ್ಪತ್ಯುಃ ಸೌಖ್ಯಮಖಂಡಿತಂ ॥ ೬೮ ॥

---

೬೩. ಇಂತೆಂದು ಆಚಾರ್ಯನನ್ನು ಪ್ರಾರ್ಥಿಸಿಕೊಂಡು ಆತನಿಂದ ಹಾಗೆಯೇ ಆಗಲೆಂದು ಪ್ರತ್ಯುತ್ತರನ್ನು ಪಡೆದು ಹೊರಟುಹೋಗುವ ಆತನನ್ನು ತನ್ನ ಮನೆಯ ಹೆಬ್ಬಾಗಿಲವರೆಗೂ ಹಿಂಬಾಲಿಸಿ ಕಳುಹಿಸಿಕೊಟ್ಟು ಅಲ್ಲಿ ನೆರೆದಿರುವ ಇತರರಿಗೂ ಯಥಾಶಕ್ತಿಯಾಗಿ ದಾನಗಳನ್ನು ಕೊಡಬೇಕು.

೬೪–೬೫. ಆ ತದಿಗೆಯ ರಾತ್ರಿಯಲ್ಲಿ ಸಂತುಷ್ಟವಾದ ಅಂತರಂಗದಿಂದ ತನ್ನ ಪ್ರೇಷ್ಯವರ್ಗದವರೊಡನೆ ಏಕಭುಕ್ತವನ್ನಾಚರಿಸಬೇಕು. ಬಳಿಕ ಮಾರನೆಯ ಚತುರ್ಥಿಯ ತಿಥಿಯಲ್ಲಿ ನಾಲ್ಕು ಜನ ಕುಮಾರರನ್ನೂ ಹನ್ನೆರಡು ಮಂದಿ ಕುಮಾರಿಕೆಯರನ್ನೂ ಉತ್ತಮ ಭೋಜನದಿಂದ ತೃಪ್ತಿಗೊಳಿಸಿ ಗಂಧ ಪುಷ್ಪಾದಿಗಳಿಂದ ಅವರನ್ನು ಪೂಜಿಸಿ ಕಳುಹಿಸಬೇಕು. ಅಂತು ಪರಮಪವಿತ್ರವಾದ ವ್ರತವು ಸಂಪೂರ್ಣತೆಯನ್ನು ಹೊಂದುವುದು.

೬೬–೬೭. ಮಂಗಳಕರವಾದ ಈ ವ್ರತವು ಮನಸ್ಸಿನ ಅಭಿಲಾಷೆಗಳು ಪೂರ್ಣವಾಗಬೇಕೆಂದು ಬಯಸುವ ಸಕಲರಿಗೂ ಅವಶ್ಯಕರ್ತವ್ಯವಾಗಿರುವುದು. ಯುವಕನು ಸಂಪೂರ್ಣವ್ರತವನ್ನು ಒಂದು ವರ್ಷ ಮಾಡಲು ಸುಂದರಿಯೂ, ಸತ್ಕುಲಪ್ರಸೂತಳೂ, ತನ್ನ ಇಚ್ಛೆಯನ್ನನುಸರಿಸಿ ನಡೆಯುವವಳೂ, ಸಂಸಾರ ಸಾಗರವನ್ನು ದಾಟಿಸುವವಳೂ, ಪತಿವ್ರತೆಯೂ ಆದ ಉತ್ತಮ ಸ್ತ್ರೀಯನ್ನೇ ಹೆಂಡತಿಯನ್ನಾಗಿ ಪಡೆಯುವನು.

೬೮. ಕನ್ಯೆಯು ವ್ರತಾಚರಣೆಯಿಂದ ಧನವಂತನೂ, ಸದ್ಗುಣಗಳಿಂದ ಉತ್ತಮನೂ ಆದ ಗಂಡನನ್ನು ಪಡೆಯುವಳು. ಸುವಾಸಿನಿಯು ಸತ್ಪುತ್ರ ಸಂತತಿಯನ್ನೂ ಅವಿಚ್ಛಿನ್ನವಾದ ದಾಂಪತ್ಯಸೌಖ್ಯವನ್ನೂ ಪಡೆಯುವಳು.

ದುರ್ಭಗಾ ಸುಭಗಾ ಸ್ಯಾಚ್ಚ ಧನಾಢ್ಯಾ ಸ್ಯಾದ್ದರಿದ್ರಿಣೀ ।
ವಿಧವಾಪಿ ನ ವೈಧವ್ಯಂ ಪುನರಾಪ್ನೋತಿ ಕುತ್ರಚಿತ್ ॥ ೬೯ ॥
ಗುರ್ವಿಣೀ ಚ ಶುಭಂ ಪುತ್ರಂ ಲಭತೇ ಸುಚಿರಾಯುಷಂ ।
ಬ್ರಾಹ್ಮಣೋ ಲಭತೇ ವಿದ್ಯಾಂ ಸರ್ವಸೌಭಾಗ್ಯದಾಯಿನೀಂ ॥ ೭೦ ॥
ರಾಜ್ಯಭ್ರಷ್ಟೋ ಲಭೇದ್ರಾಜ್ಯಂ ವೈಶ್ಯೋ ಲಾಭಂ ಚ ವಿಂದತಿ ।
ಚಿಂತಿತಂ ಲಭತೇ ಶೂದ್ರೋ ವ್ರತಸ್ಯಾಸ್ಯ ನಿಷೇವಣಾತ್ ॥ ೭೧ ॥
ಧರ್ಮಾರ್ಥೀ ಧರ್ಮಮಾಪ್ನೋತಿ ಧನಾರ್ಥೀ ಧನಮಾಪ್ನುಯಾತ್ ।
ಕಾಮೀ ಕಾಮಾನವಾಪ್ನೋತಿ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥
ಯೋ ಯೋ ಮನೋರಥೋ ಯಸ್ಯ ತಂ ತಂ ಸ ವಿಂದತೇಧ್ರುವಂ ।
ಮನೋರಥತೃತೀಯಾಯಾ ವ್ರತಸ್ಯ ಚರಣಾದ್ವ್ರತೀ ॥ ೭೩ ॥

ಸ್ಕಂದ ಉವಾಚ :—

ಇತ್ಥಂ ನಿಶಮ್ಯ ಶಿವತಃ ಶಿವಾ ಸಂತುಷ್ಟಮಾನಸಾ ।
ಪುನಃ ಪಪ್ರಚ್ಛ ವಿಶ್ವೇಶಂ ಪ್ರಬದ್ಧಕರಸಂಪುಟಾ ॥ ೭೪ ॥

---

೬೯. ಕಷ್ಟಗಳಲ್ಲಿ ಸಿಲುಕಿ ಬಳಲುತ್ತಿರುವವಳು ಸೌಭಾಗ್ಯವನ್ನು ಪಡೆಯುವಳು. ದಾರಿದ್ರ್ಯದುಃಖಪೀಡಿತಳಾದವಳು ಧನಧಾನ್ಯಸಂಪನ್ನಳಾಗುವಳು. ವಿಧವೆಯು ಪುನಃ ಯಾವ ಜನ್ಮಾಂತರಗಳಲ್ಲಿಯೂ ವೈಧವ್ಯವನ್ನು ಪಡೆಯುವುದಿಲ್ಲ.

೭೦. ಗರ್ಭಿಣಿಯಾದ ಸ್ತ್ರೀಯು ಸುಂದರನೂ ಧೀರ್ಘಾಯುಷ್ಯವಂತನೂ ಆದ ಪುತ್ರನನ್ನು ಪಡೆಯುವಳು. ಬ್ರಾಹ್ಮಣನಾದವನು ಸಕಲೈಶ್ವರ್ಯಗಳನ್ನೂ ಕೈಗೂಡಿಸುವ ವಿದ್ಯಾಲಾಭವನ್ನು ಹೊಂದುವನು.

೭೧. ರಾಜ್ಯಭ್ರಷ್ಟನಾದ ದೊರೆಯು ರಾಜ್ಯವನ್ನು ಪುನಃ ಪಡೆಯುವನು. ವೈಶ್ಯನು ವ್ಯಾಪಾರದಲ್ಲಿ ಲಾಭವನ್ನು ಕಾಣುವನು. ಶೂದ್ರನೂ ಈ ಮಹಾವ್ರತವನ್ನು ಆಚರಿಸುವುದರಿಂದ ಮನಸ್ಸಿನ ಇಷ್ಟಗಳು ಕೈಗೂಡುವುವು.

೭೨. ಧರ್ಮಾರ್ಥಿಯಾದವನು ಧರ್ಮವನ್ನು ಪಡೆಯುವನು. ಧನಾಭಿಲಾಷಿಯು ಧನವನ್ನು ಹೊಂದುವನು. ಕಾಮಿಯು ಕಾಮಭೋಗಗಳನ್ನನುಭವಿಸುವನು. ಮೋಕ್ಷದ ಅಭಿಲಾಷೆಯುಳ್ಳವನು ಮುಕ್ತನೂ ಆಗುವನು.

೭೩. ಯಾವ ಯಾವ ಮನುಷ್ಯನು ನಿಯಮಸಹಿತವಾಗಿ ಮನೋರಥ ತೃತೀಯೆಯ ವ್ರತವನ್ನಾಚರಿಸುವನೊ, ಆಯಾ ಮನುಷ್ಯನು ತನ್ನ ಮನೋರಥವನ್ನು ಸಂಪೂರ್ಣವಾಗಿ ಪಡೆಯುವನೆಂಬುದು ನಿಶ್ಚಯವು.

೭೪. ಸ್ಕಂದನು ಹೇಳುತ್ತಾನೆ:—ಈ ವೃತಾಂತವನ್ನು ಶಿವನಿಂದ ಕೇಳಿ ಪಾರ್ವತಿಯು ಮನಸ್ಸಿನಲ್ಲಿ ಸಂತೋಷಗೊಂಡು ಪುನಃ ಕೈಗಳನ್ನು ಜೋಡಿಸಿಕೊಂಡು ಆ ವಿಶ್ವೇಶ್ವರನನ್ನು ಪ್ರಶ್ನೆಮಾಡಿದಳು.

ಅನ್ಯತ್ರ ಯೇ ವ್ರತಂ ಚೈತತ್ಕರಿಷ್ಯಂತಿ ಸದಾಶಿವ ।
ತೇ ಕಥಂ ಪ್ರೂಜಯಿಷ್ಯಂತಿ ಮಾಂ ಚ ಆಶಾವಿನಾಯಕಂ ॥ ೭೫ ॥
ಶಿವ ಉವಾಚ :—
ಸಾಧು ಪೃಷ್ಟಂ ತ್ವಯಾ ದೇವಿ ಸರ್ವಸಂದೇಹಭೇದಿನಿ ।
ವಾರಾಣಸ್ಯಾಂ ಸಮುರ್ಚ್ಯಾ ತ್ವಂ ವಿಶ್ವೇ ಪ್ರತ್ಯಕ್ಷರೂಪಿಣೀ ॥ ೭೬ ॥
ಆಶಾವಿಘ್ನಜಿತಾ ಸಾರ್ಧಂ ಸರ್ವಾಶಾ ಪೂರ್ತಿಕಾರಿಣಾ ।
ಹಾರಿಣಾನಂತವಿಘ್ನಾನಾಂ ಮಮ ಕ್ಷೇತ್ರಶುಭಾರ್ಥಿನಾ ॥ ೭೭ ॥
ಕ್ಷಿಪ್ರಮಾಗಮಯಿತ್ವಾ ಚ ನತ್ವಾ ದೂರಂಗತಾನಪಿ ।
ಕೃತಕೃತ್ಯಾನ್ವಿಧಾಯಾಥ ಚಿಂತಿತೈಃ ಸುಮನೋರಥೈಃ ॥ ೭೮ ॥
ಅನ್ಯತ್ರ ವ್ರತಿಭಿರ್ನಿರ್ಶ್ವೇ ಕಾಂಚನೀ ಪ್ರತಿಮಾ ತವ ।
ಪಂಚಕೃಷ್ಣಲತಾದೂರ್ಧ್ವಂ ಕಾರ್ಯಾ ವಿಘ್ನಹೃತೋಽಪಿ ಚ ॥ ೭೯ ॥
ಆಚಾರ್ಯಾಯ ವ್ರತೀ ದದ್ಯಾದ್ವ್ರತಾಂತೇ ಪ್ರತಿಮಾದ್ವಯಂ ।
ಸಕೃತ್ಕೃತೇ ವ್ರತೇ ಚಾಸ್ಮಿನ್ಕೃತಕೃತ್ಯೋ ವ್ರತೀ ಭವೇತ್ ॥ ೮೦ ॥

---

೭೫. ಸದಾಶಿವನೆ! ಇತರ ಸ್ಥಳಗಳಲ್ಲಿ ಯಾರು ಈ ವ್ರತವನ್ನು ಆಚರಿಸುವರೊ, ಅವರು ನನ್ನನ್ನೂ, ಆಶಾವಿನಾಯಕನನ್ನೂ ಪೂಜಿಸುವುದು ಹೇಗೆಂಬುದನ್ನು ವಿಶದವಾಗಿ ತಿಳಿಸುವವನಾಗು.

೭೬. ಶಿವನು ಹೇಳುತ್ತಾನೆ :—ದೇವಿಯೆ! ನೀನು ಸಾಧುವಾದ ಪ್ರಶ್ನೆಯನ್ನೇ ಮಾಡಿರುವೆ. ಜನರ ಸಕಲ ಸಂದೇಹಗಳನ್ನೂ ಕಳೆಯಲೋಸುಗವೇ ನೀನು ಈ ಪ್ರಶ್ನೆಯನ್ನು ಮಾಡಿರುವೆಯೆಂದು ತಿಳಿಯುವೆನು. ವಿಶ್ವೇಶ್ವರಿಯೆ! ನೀನು ವಾರಾಣಸೀಕ್ಷೇತ್ರದಲ್ಲಿ ಸನ್ನಿಹಿತಳೇ ಆಗಿರುವುದರಿಂದ ಇಲ್ಲಿ ನಿನ್ನ ಪ್ರತ್ಯಕ್ಷರೂಪವನ್ನೇ ಭಕ್ತರು ಪೂಜಿಸಬೇಕು.

೭೭. ನಿನ್ನೊಡನೆಯೇ ಸಮಸ್ತಾಭಿಲಾಷೆಗಳನ್ನು ಪೂರ್ತಿಗೊಳಿಸುವವನೂ, ಭಕ್ತರ ಅನಂತವಿಘ್ನಗಳನ್ನು ನಾಶಮಾಡುವವನೂ, ಯಾವಾಗಲೂ ನನ್ನ ಕ್ಷೇತ್ರದ ಶುಭವನ್ನೇ ಚಿಂತಿಸುತ್ತಿರುವವನೂ ಆದ ಆಶಾವಿನಾಯಕನನ್ನೂ ಪೂಜಿಸಬೇಕು.

೭೮. ನಮಸ್ಕಾರಗಳನ್ನು ಮಾತ್ರ ಮಾಡಿ ದೂರದಲ್ಲಿಯೇ ವಾಸಿಸುವವರನ್ನೂ ಆತನು ಕ್ಷಿಪ್ರದಲ್ಲಿಯೇ ಹತ್ತಿರಕ್ಕೆ ಬರಮಾಡಿಕೊಂಡು ಅವರ ಮನಸ್ಸಿನಲ್ಲಿರುವ ಮನೋರಥಗಳನ್ನಿತ್ತು ಅವರನ್ನು ಕೃತಕೃತ್ಯರನ್ನಾಗಿ ಮಾಡುವನು.

೭೯. ಎಲೌ ವಿಶ್ವಭುಜೆಯೆ! ಇತರ ಸ್ಥಳಗಳಲ್ಲಿ ವ್ರತಿಗಳು ಐದು ಗುಲಗಂಜಿಗಳ ತೂಕಕ್ಕೆ ಹೆಚ್ಚಾಗಿರುವ ಚಿನ್ನದಿಂದ ನಿನ್ನ ಮತ್ತು ಆಶಾವಿನಾಯಕನ ಪ್ರತಿಮೆಗಳನ್ನು ಹಿಂದೆ ಹೇಳಿದ ಲಕ್ಷಣಗಳಿಂದ ಮಾಡಿಸಬೇಕು.

೮೦. ವ್ರತವು ಕೊನೆಗಂಡಮೇಲೆ ಆ ಎರಡು ಪ್ರತಿಮೆಗಳನ್ನೂ ವ್ರತಿಯು

ತತಃ ಪುಲೋಮಜಾದೇವಿ ಶ್ರುತ್ವೈತದ್ವ್ರತಮುತ್ತಮಂ ।
ಕೃತ್ವಾ ಮನೋರಥಂ ಪ್ರಾಪ ಯಥಾಭಿವಾಂಛಿತಂ ಹೃದಿ ॥ ೮೧ ॥
ಅರುಂಧತ್ಯಾ ವಶಿಷ್ಠೋಽಪಿ ಲಬ್ಧೋಽತ್ರಿರನಸೂಯಯಾ ।
ಸುನೀತ್ಯೋತ್ತಾನಪಾದಾಚ್ಚ ಧ್ರುವಃ ಪ್ರಾಪ್ತೋಽಂಗಜೋತ್ತಮಃ ॥ ೮೨ ॥
ಸುನೀತೇರ್ದುರ್ಭಗತ್ವಂ ಚ ಪುನರಸ್ಮಾದ್ವ್ರತಾದ್ಗತಂ ।
ಚತುರ್ಭುಜಃ ಪತಿಃ ಪ್ರಾಪ್ತಃ ಕ್ಷೀರನೀರಧಿಜನ್ಮಯಾ ॥ ೮೩ ॥
ಕಿಂ ಬಹೂಕ್ತೇನ ಸುಶ್ರೋಣಿ ಕೃತಂ ಯೇನ ವ್ರತಂ ತ್ವಿದಂ ।
ವ್ರತಾನಿ ತೇನ ಸರ್ವಾಣಿ ಕೃತಾನಿ ವ್ರತಿನಾ ಧ್ರುವಂ ॥ ೮೪ ॥
ಶ್ರುತ್ವಾ ಧೀಮಾನ್ಕಥಾಂ ಪುಣ್ಯಾಂ ಪುನಸ್ತದ್ಗತಮಾನಸಃ ।
ಶುಭಬುದ್ಧಿಮವಾಪ್ನೋತಿ ಪಾಪೈರಪಿ ವಿಮುಚ್ಯತೇ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವಿಶ್ವಭುಜಾಽಶಾವಿನಾಯಕಪ್ರಶಂಸನಂ—ಮನೋರಥತೃತೀಯಾವ್ರತನಿರೂಪಣಂ" ನಾಮಾಶೀತಿತಮೋಽಧ್ಯಾಯಃ

---

ಆಚಾರ್ಯನಿಗೆ ದಾನಮಾಡಬೇಕು. ಪ್ರತಿಮಾಸಹಿತವಾಗಿ ಈ ವ್ರತವನ್ನು ಒಂದು ಸಲ ಮಾಡುವುದರಿಂದಲೂ ಮನುಷ್ಯನು ಕೃತಕೃತ್ಯನಾಗುವನು.

೮೧. ದೇವೀ! ಬಳಿಕ ಶಚೀದೇವಿಯು ಈ ಉತ್ತಮವ್ರತದ ಪ್ರಕಾರವನ್ನು ಕೇಳಿ ಅದರಂತೆ ಆಚರಿಸಿ ತನ್ನ ಮನಸ್ಸಿನಲ್ಲಿದ್ದ ಸಕಲಾಭೀಷ್ಟಗಳನ್ನೂ ಪಡೆದು ಸುಖವಾಗಿದ್ದಳು.

೮೨. ಈ ವ್ರತವನ್ನಾಚರಿಸಿದ ಫಲವಾಗಿಯೇ ಅರುಂಧತಿಗೆ ವಸಿಷ್ಠನೂ, ಅನುಸೂಯಾದೇವಿಗೆ ಅತ್ರಿಮಹರ್ಷಿಯೂ ಪತಿಗಳಾಗಿ ಲಭಿಸಿದರು. ಸುನೀತಿಗೆ ಉತ್ತಾನಪಾದಮಹಾರಾಜನಿಂದ ಉತ್ತಮನಾದ ಧ್ರುವಕುಮಾರನು ಜನಿಸಿದನು.

೮೩. ಈ ವ್ರತದಿಂದಲೇ ಸುನೀತಿಯ ಕಷ್ಟಪರಂಪರೆಯೂ ಕಡೆಗಂಡಿತು. ಕ್ಷೀರಸಾಗರದಲ್ಲಿ ಜನನವನ್ನು ತಳೆದ ಮಹಾಲಕ್ಷ್ಮಿಗೆ ಶಂಖಚಕ್ರಗದಾಪದ್ಮಧಾರಿಯಾದ ಮಹಾವಿಷ್ಣುವೇ ಪತಿಯಾದನು.

೮೪. ಮಂಗಳಾಂಗಿಯೆ! ಹೆಚ್ಚಾಗಿ ಹೇಳುವುದರಿಂದೇನು? ಯಾವ ವ್ರತಿಯು ಈ ಮಹಾವ್ರತವನ್ನು ಆದರದಿಂದ ಆಚರಿಸುವನೊ, ಅವನಿಂದ ಸಮಸ್ತ ವ್ರತಗಳೂ ಆಚರಿಸಲ್ಪಟ್ಟಂತಾದುವೆಂಬುದು ನಿಶ್ಚಯವು.

೮೫. ಯಾವ ಬುದ್ಧಿವಂತನು ಈ ಪುಣ್ಯಕಥೆಯನ್ನು ಏಕಾಗ್ರಚಿತ್ತದಿಂದ ಕೇಳುವನೊ, ಅವನು ಮುಂದೆ ಮಂಗಳಗಳ ಅಭಿವೃದ್ಧಿಪರಂಪರೆಯನ್ನು ಪಡೆಯುವುದಲ್ಲದೆ ಹಿಂದೆ ಮಾಡಿದ ಪಾತಕಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವಿಶ್ವಭುಜಾಶಾವಿನಾಯಕಪ್ರಶಂಸನ—ಮನೋರಥತೃತೀಯಾವ್ರತನಿರೂಪಣ"ವೆಂಬ ಎಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾಶೀತಿತಮೋಽಧ್ಯಾಯಃ

## ಧರ್ಮೇಶಮಾಹಾತ್ಮ್ಯಂ— ದುರ್ದಮಾಖ್ಯಾನವರ್ಣನಂ

**ಅಗಸ್ತ್ಯ ಉವಾಚ :—**

**ಧರ್ಮತೀರ್ಥಸ್ಯ ಮಾಹಾತ್ಮ್ಯಂ ಕೀದೃಗ್ದೇವೇನ ಶಂಭುನಾ ।**
**ಸ್ಕಂದ ದೇವ್ಯೈ ಸಮಾಖ್ಯಾತಂ ತದಾಖ್ಯಾಹಿ ಕೃಪಾಂ ಕುರು ॥ ೧ ॥**

**ಸ್ಕಂದ ಉವಾಚ :—**

**ವಿಂಧ್ಯೋನ್ನತಿಹೃದಾಖ್ಯಾಸ್ಯೇ ಧರ್ಮತೀರ್ಥಸಮುದ್ಭವಂ ।**
**ಆಕರ್ಣಯ ಮಹಾಪ್ರಾಜ್ಞ ಯಥಾ ದೇವೇನ ಭಾಷಿತಂ ॥ ೨ ॥**
**ವೃತ್ರಂ ನಿಹತ್ಯ ವೃತ್ರಾರಿರ್ಬ್ರಹ್ಮಹತ್ಯಾಮವಾಪ್ತವಾನ್ ।**
**ಅನುತಪ್ತೋಽಥ ಪಪ್ರಚ್ಛ ಪ್ರಾಯಶ್ಚಿತ್ತಂ ಪುರೋಹಿತಂ ॥ ೩ ॥**

**ಬೃಹಸ್ಪತಿರುವಾಚ :—**

**ಯದಿ ತ್ವಂ ದೇವರಾಜೋ ಮಾಂ ಬ್ರಹ್ಮಹತ್ಯಾಂ ಸುದುಸ್ತ್ಯಜಾಂ ।**
**ಅಪಾನುನುತ್ಸು ತದ್ಯಾಹಿ ಕಾಶೀಂ ವಿಶ್ವೇಶಪಾಲಿತಾಂ ॥ ೪ ॥**

---

## ಕನ್ನಡದ ಅನುವಾದ

### ಧರ್ಮೇಶಮಾಹಾತ್ಮ್ಯ— ದುರ್ದಮಾಖ್ಯಾನವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಸ್ಕಂದನೆ! ದೇವದೇವನಾದ ಶಂಭುವು ಪಾರ್ವತಿಗೆ ಧರ್ಮತೀರ್ಥದ ಮಾಹಾತ್ಮ್ಯವನ್ನು ಹೇಗೆ ವಿವರಿಸಿದನು? ನನ್ನಲ್ಲಿ ಕೃಪೆಮಾಡಿ ಅದನ್ನು ವಿಸ್ತರಿಸಿ ಹೇಳುವವನಾಗು.

೨. ಸ್ಕಂದನು ಹೇಳುತ್ತಾನೆ:—ವಿಂಧ್ಯಪರ್ವತದ ಮದವನ್ನಡಗಿಸಿದ ಎಲೈ ಅಗಸ್ತ್ಯನೆ! ಮಹಾದೇವನು ಹೇಳಿದ ಕ್ರಮದಿಂದಲೇ ನಿನಗೆ ಧರ್ಮತೀರ್ಥವು ಉದ್ಭವಿಸಿದ ವಿಚಾರವನ್ನು ತಿಳಿಸುವೆನು. ಮಹಾಪ್ರಾಜ್ಞನಾದ ನೀನು ಕಿವಿಗೊಟ್ಟು ಕೇಳು.

೩. ಹಿಂದೆ ವೃತ್ರಾಸುರನನ್ನು ನಿಗ್ರಹಿಸಿ ಮಹೇಂದ್ರನು ಬ್ರಹ್ಮಹತ್ಯೆಯನ್ನು ಪಡೆದನಷ್ಟೆ. ಆ ಪಾಪದಿಂದ ಪರಿತಪಿಸುತ್ತ ಅವನು ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದು ಅದಕ್ಕೆ ಪ್ರಾಯಶ್ಚಿತ್ತವೇನೆಂದು ಪ್ರಶ್ನೆಮಾಡಿದನು.

೪. ಬೃಹಸ್ಪತಿಯು ಹೇಳುತ್ತಾನೆ:—ದೇವರಾಜ! ಬ್ರಹ್ಮಹತ್ಯೆಯೆಂಬುದು ಮಹಾದುಸ್ತ್ಯಜವಾಗಿರುವುದು. ಇದನ್ನು ಕಳೆದುಕೊಳ್ಳಲಾಶಿಸುವೆಯಾದರೆ ವಿಶ್ವೇಶ್ವರನಿಂದ ಅಭಿರಕ್ಷಿತವಾಗಿರುವ ಕಾಶೀಕ್ಷೇತ್ರಕ್ಕೆ ಹೋಗು.

ನಾನ್ಯತ್ಕಿಂಚಿತ್ಕ್ವಚಿದ್ದೃಷ್ಟಂ ಬ್ರಹ್ಮಹತ್ಯಾಮಹೌಷಧಂ ।
ರಾಜಧಾನೀಂ ಪರಿತ್ಯಜ್ಯ ಶಕ್ರ ವಿಶ್ವೇಶಿತುಃ ಪರಾಂ ॥ ೫ ॥
ಭೈರವಸ್ಯಾಪಿ ಹಸ್ತಾಗ್ರಾದಪತದ್ವೈಧಸಂ ಶಿರಃ ।
ಯತ್ರಾನಂದವನೇ ತತ್ರ ವೃತ್ರಶತ್ರೋ ವ್ರಜ ದ್ರುತಂ ॥ ೬ ॥
ಸೀಮಾನಮಪಿ ಸಂಪ್ರಾಪ್ಯ ಶಕ್ರಾನಂದವನಸ್ಯ ಹಿ ।
ಬ್ರಹ್ಮಹತ್ಯಾ ಪಲಾಯೇತ ನೇಪಮಾನಾ ನಿರಾಶ್ರಯಾ ॥ ೭ ॥
ಅನ್ಯೇಷಾಮಪಿ ಪಾಪಾನಾಂ ಮಹಾಪಾಪಜುಷಾಮಪಿ ।
ನಾಶಯಿತ್ರೀ ಪರಾ ಕಾಶೀ ವಿಶ್ವೇಶಸಮಧಿಷ್ಠಿತಾ ॥ ೮ ॥
ಮಹಾಪಾತಕತೋ ಮುಕ್ತಿಃ ಕಾಶ್ಯಾಮೇವ ಶತಕ್ರತೋ ।
ಮಹಾಸಂಸಾರತೋ ಮುಕ್ತಿಃ ಕಾಶ್ಯಾಮೇವ ನ ಚಾನ್ಯತಃ ॥ ೯ ॥
ನಿರ್ವಾಣನಗರೀ ಕಾಶೀ ಕಾಶೀ ಸರ್ವಾಘಸಂಘಹೃತ್ ।
ವಿಶ್ವೇಶಿತುಃ ಪ್ರಿಯಾ ಕಾಶೀ ದ್ಯೌಃ ಕಾಶೀಸದೃಶೀ ನ ಹಿ ॥ ೧೦ ॥

---

೫. ಈ ಬ್ರಹ್ಮಹತ್ಯೆಗೆ ಬೇರೆಲ್ಲಿಯೂ ಯಾವ ಮಹೌಷಧವನ್ನೂ ನಾನು ನೋಡಿರುವುದಿಲ್ಲ. ಅಯ್ಯಾ ಇಂದ್ರನೆ! ಸರ್ವೋತ್ಕೃಷ್ಟವೂ, ವಿಶ್ವೇಶ್ವರನ ರಾಜಧಾನಿಯೂ ಆದ ಆ ಕ್ಷೇತ್ರವೊಂದೇ ಇದಕ್ಕೆ ಪರಿಹಾರಕವು.

೬. ಎಲೈ ವೃತ್ರಾರಿಯೆ! ಮಹೇಶ್ವರನಿಂದ ಕತ್ತರಿಸಲ್ಪಟ್ಟ ಬ್ರಹ್ಮದೇವನ ತಲೆಯು ಯಾವ ಆನಂದಕಾನನದಲ್ಲಿ ಬಂದು ಬಿದ್ದಿತೊ, ಆ ಕ್ಷೇತ್ರವನ್ನೇ ನೀನು ಸಹ ವಿಲಂಬಮಾಡದೆ ಹೋಗಿ ಸೇರು.

೭. ಮಹೇಂದ್ರ! ನೀನು ಆನಂದವನದ ಎಲ್ಲೆಯನ್ನು ಮುಟ್ಟುತ್ತಲೇ ಈ ಬ್ರಹ್ಮಹತ್ಯೆಯು ಆ ಕ್ಷೇತ್ರಮಾಹಾತ್ಮ್ಯಕ್ಕೆ ಹೆದರಿ ನಿನ್ನನ್ನು ತ್ಯಜಿಸಿ ನಿರಾಶ್ರಯವಾಗಿ ಪಲಾಯನವನ್ನು ಮಾಡುವುದು.

೮. ವಿಶ್ವೇಶ್ವರನಿಗೆ ಅಧಿಷ್ಠಾನಭೂಮಿಯಾದ ಉತ್ತಮವಾದ ಈ ಕಾಶೀಕ್ಷೇತ್ರವು ಮಹಾಪಾತಕಗಳನ್ನು ಮಾಡಿರುವ ಇತರರ ಪಾತಕಗಳನ್ನೂ ನಿರ್ಮೂಲವಾಗಿ ನಾಶಮಾಡುವಂಥ ಮಾಹಾತ್ಮ್ಯದಿಂದ ಕೂಡಿರುವುದು.

೯. ಎಲೈ ಮಹೇಂದ್ರನೆ! ಮಹಾಪಾತಕಗಳಿಂದ ಮುಕ್ತಿಯಾಗಬೇಕಾದರೆ ಕಾಶಿಯಲ್ಲಿಯೇ ಆಗಬೇಕು. ಅಗಾಧವಾದ ಸಂಸಾರದಿಂದ ಬಿಡುಗಡೆಯಾಗಬೇಕಾದರೂ ಕಾಶಿಯಿಂದಲೇ ಆಗಬೇಕಲ್ಲದೆ ಇತರ ಕ್ಷೇತ್ರಗಳಲ್ಲಿ ಆಗಲಾರದು.

೧೦. ಕಾಶಿಯೇ ಮೋಕ್ಷನಗರಿಯು. ಕಾಶಿಯೇ ಸಮಸ್ತ ಪಾಪಕೋಟಿಗಳನ್ನು ನಾಶಗೊಳಿಸುವುದು. ಕಾಶೀಕ್ಷೇತ್ರವೇ ವಿಶ್ವೇಶ್ವರನಿಗೆ ಪರಮಪ್ರಿಯವಾದ ವಾಸಸ್ಥಾನವು. ಸ್ವರ್ಗಲೋಕವೂ ಕಾಶಿಯನ್ನೆಂದೂ ಸರಿಹೋಲಲಾರದು.

ಬ್ರಹ್ಮಹತ್ಯಾಭಯಂ ಯಸ್ಯ ಯಸ್ಯ ಸಂಸಾರತೋ ಭಯಂ ।
ಜಾತುಚಿತ್ತೇನ ನ ತ್ಯಾಜ್ಯಾ ಕಾಶಿಕಾ ಮುಕ್ತಿಕಾಶಿಕಾ ॥ ೧೧ ॥
ಜಂತೂನಾಂ ಕರ್ಮಬೀಜಾನಾಂ ಯತ್ರ ದೇಹವಿಸರ್ಜನೇ ।
ನ ಜಾತುಚಿತ್ಪ್ರರೋಹೋಽಸ್ತಿ ಹರದೃಷ್ಟ್ಯಾಪ್ತಶುಷ್ಮಣಾಂ ॥ ೧೨ ॥
ತಾಂ ಕಾಶೀಂ ಪ್ರಾಪ್ಯ ವೃತ್ರಾರೇ ವೃತ್ರಹತ್ಯಾಪನುತ್ತಯೇ ।
ಸಮಾರಾಧಯ ವಿಶ್ವೇಶಂ ವಿಶ್ವಮುಕ್ತಿಪ್ರದಾಯಕಂ ॥ ೧೩ ॥
ಬೃಹಸ್ಪತೇರಿತಿ ವಚೋ ನಿಶಮ್ಯ ಸ ಸಹಸ್ರದೃಕ್ ।
ಅಯಾದ್ದ್ರುತತರಂ ಕಾಶೀಂ ಮಹಾಪಾತಕಘಾತುಕಾಂ ॥ ೧೪ ॥
ಸ್ನಾತ್ವೋತ್ತರವಹಾಯಾಂ ಚ ಧರ್ಮೇಶಂ ಪರಿತಃ ಸ್ಥಿತಃ ।
ಆರಾಧಯನ್ಮಹಾದೇವಂ ಬ್ರಹ್ಮಹತ್ಯಾಪನುತ್ತಯೇ ॥ ೧೫ ॥
ಮಹಾರುದ್ರಜಪಾಸಕ್ತಃ ಸುತ್ರಾಮಾಥ ತ್ರಿಲೋಚನಂ ।
ದದರ್ಶ ಲಿಂಗಮಧ್ಯಸ್ಥಂ ಸ್ವಭಾಸಾ ದೀಪಿತಾಂಬರಂ ॥ ೧೬ ॥

---

೧೧. ಯಾವನಿಗೆ ಬ್ರಹ್ಮಹತ್ಯೆಯ ಭಯವಿರುವುದೊ, ಯಾವನು ಸಂಸಾರ ಬಂಧನಕ್ಕೆ ಭಯಪಡುವನೊ, ಅವನು ಮೋಕ್ಷಮಾರ್ಗಪ್ರಕಾಶಕವಾದ ಕಾಶಿಯನ್ನೆಂದಿಗೂ ಬಿಟ್ಟು ಹೋಗಬಾರದು.

೧೨. ಆ ಕ್ಷೇತ್ರದಲ್ಲಿ ದೇಹವನ್ನು ತ್ಯಾಗಮಾಡುವ ಜಂತುಗಳ ಭಾವಿಜನ್ಮಗಳಿಗೆ ಕಾರಣವಾದ ಸಂಚಿತಕರ್ಮಗಳೆಂಬ ಬೀಜಗಳು ಮಹೇಶ್ವರನ ದೃಷ್ಟಿಯೆಂಬ ಬೆಂಕಿಯಲ್ಲಿ ಬೆಂದು ಮೊಳೆಯಲು ಅಯೋಗ್ಯಗಳಾಗುವುವು.

೧೩. ಅಯ್ಯಾ ವೃತ್ರಶತ್ರುವೆ! ನೀನು ಬ್ರಹ್ಮಹತ್ಯೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಅಂತಹ ಕಾಶೀಕ್ಷೇತ್ರವನ್ನು ಸೇರಿ ಸಕಲ ಜೀವರಿಗೂ ಮೋಕ್ಷವನ್ನು ನೀಡುತ್ತಿರುವ ವಿಶ್ವೇಶ್ವರನನ್ನು ಚೆನ್ನಾಗಿ ಪೂಜಿಸು.''

೧೪. ಇಂತೆಂದ ಬೃಹಸ್ಪತಿಯ ಮಾತುಗಳನ್ನು ಕೇಳಿ ಆ ಸಹಸ್ರಾಕ್ಷನು ಮಹಾಪಾತಕಗಳನ್ನೂ ನಾಶಮಾಡುವ ಕಾಶೀಕ್ಷೇತ್ರವನ್ನು ಕುರಿತು ಅತ್ಯಂತ ವೇಗದಿಂದ ಪ್ರಯಾಣಮಾಡಿದನು.

೧೫. ಆವನು ಉತ್ತರವಾಹಿನಿಯಾದ ಗಂಗೆಯಲ್ಲಿ ಸ್ನಾನವನ್ನು ಮಾಡಿ ತನ್ನ ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳುವುದಕ್ಕಾಗಿ ವಿಶ್ವೇಶ್ವರನ ಪೂಜೆಯನ್ನು ಮುಗಿಸಿ ಧರ್ಮೇಶ್ವರನ ಸಮೀಪಕ್ಕೆ ಬಂದು ನಿಂತನು.

೧೬. ಮಹಾರುದ್ರಜಪದಲ್ಲಿಯೇ ಆಸಕ್ತನಾಗಿದ್ದ ಆ ಮಹೇಂದ್ರನು ಆ ಲಿಂಗದ ಮಧ್ಯದಲ್ಲಿಯೇ ನೆಲಸಿ ತನ್ನ ದಿವ್ಯಜ್ಯೋತಿಯಿಂದ ಆಕಾಶವನ್ನೆಲ್ಲ ಬೆಳಗುತ್ತಿದ್ದ ಮಹೇಶ್ವರನನ್ನು ಕಾಣುವವನಾದನು.

ಪುನಸ್ತುಷ್ಟಾವ ವೇದೋಕ್ತೈ ರುದ್ರಸೂಕ್ತೈರನೇಕಧಾ ।
ವಿನಿಷ್ಕ್ರಮ್ಯ ತತೋ ಲಿಂಗಾದಾವಿರ್ಭೂಯ ಭವೋಽವದತ್ ॥ ೧೭ ॥
ಶಚೀಪತೇ ಪ್ರಸನ್ನೋಽಸ್ಮಿ ವರಂ ವರಯ ಸುವ್ರತ ।
ಕಿಂ ದೇಯಂ ದ್ರುತಮಾಖ್ಯಾಹಿ ಧರ್ಮಪೀಠಕೃತಾಸ್ಪದ ॥ ೧೮ ॥
ಶ್ರುತ್ವೇತಿ ದೇವದೇವಸ್ಯ ಸ ಪ್ರೇಮವಚನಂ ಹರಿಃ ।
ಸರ್ವಜ್ಞ ಕಿಂ ತೇಽವಿದಿತಂ ತಮುವಾಚೇತಿ ವೃತ್ರಹಾ ॥ ೧೯ ॥
ತತಸ್ತತ್ಪರಯಾ ಸುಪ್ರೀತೋ ಧರ್ಮಪೀಠನಿಷೇವಣಾತ್ ।
ನಿಷ್ಪಾದ್ಯ ತೀರ್ಥಂ ತತ್ರೇಶೋಽತ್ರ ಸ್ನಾಹೀಂದ್ರೇತಿ ಚಾಬ್ರವೀತ್ ॥ ೨೦ ॥
ತತ್ರೇಂದ್ರಃ ಸ್ನಾನಮಾತ್ರೇಣ ದಿವ್ಯಗಂಧೋಽಭವತ್ಕ್ಷಣಾತ್ ।
ಅವಾಪ ಚ ರುಚಿಂ ಚಾರು ಪ್ರಾಕ್ತನೀಂ ಶತಯಾಜ್ಞಿಕೀಂ ॥ ೨೧ ॥
ತದಾಶ್ಚರ್ಯಮಥೋ ದೃಷ್ಟ್ವಾ ಮುನಯೋ ನಾರದಾದಯಃ ।
ಪರಿಸಸ್ನುರ್ಮುದಾ ಯುಕ್ತಾ ಧರ್ಮತೀರ್ಥೇಽಘಹಾರಿಣಿ ॥ ೨೨ ॥

---

೧೭. ವೇದೋಕ್ತಮಂತ್ರಗಳಿಂದಲೂ, ರುದ್ರಸೂಕ್ತದಿಂದಲೂ ಆತನನ್ನು ಬಹು ವಿಧವಾಗಿ ಸ್ತೋತ್ರಮಾಡಿದನು. ಆಗ ಮಹಾದೇವನು ಲಿಂಗದಿಂದ ಪ್ರತ್ಯಕ್ಷನಾಗಿ ಹೊರಗೆ ಬಂದು ಹೇಳತೊಡಗಿದನು.

೧೮. "ಶಚೀಪತಿಯೆ! ನಿನ್ನ ವಿಷಯದಲ್ಲಿ ನಾನು ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ. ಧರ್ಮಪೀಠವನ್ನಾಶ್ರಯಿಸಿ ನೀನು ಉತ್ತಮ ವ್ರತವನ್ನಾಚರಿಸಿರುವೆ. ನಿನಗಾವ ವರವನ್ನು ಕೊಡಬೇಕೆಂಬುದನ್ನು ಬೇಗ ಹೇಳು."

೧೯. ಇಂತೆಂದ ಮಹಾದೇವನ ಪ್ರೇಮಪೂರ್ವಕವಾದ ಮಾತುಗಳನ್ನು ಕೇಳಿ ವೃತ್ರವೈರಿಯಾದ ಮಹೇಂದ್ರನು "ಸರ್ವಜ್ಞನಾದ ನಿನಗೆ ತಿಳಿಯದಿರುವ ವಿಷಯವಾವುದು?" ಎಂದು ಪ್ರತ್ಯುತ್ತರವನ್ನು ಹೇಳಿದನು.

೨೦. ಆಗ ಆತನ ಧರ್ಮಪೀಠದ ಪರಿಚರ್ಯೆಯಿಂದ ಸಂತೋಷಗೊಂಡು ಅನುರಾಗದಿಂದ ಚೋದಿತನಾದ ಮಹೇಶ್ವರನು ಅಲ್ಲಿಯೇ ಒಂದು ತೀರ್ಥವನ್ನುಂಟು ಮಾಡಿ, "ಅಯ್ಯಾ ಇಂದ್ರನೆ! ಇದರಲ್ಲಿ ಸ್ನಾನಮಾಡು" ಎಂದು ಬೆಸಸಿದನು.

೨೧. ಇಂದ್ರನು ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಒಂದು ನಿಮಿಷದಲ್ಲಿಯೇ ದಿವ್ಯಗಂಧಾಢ್ಯವಾದ ದೇಹವುಳ್ಳವನಾಗಿ ನೂರು ಅಶ್ವಮೇಧಯಜ್ಞಗಳನ್ನು ಮಾಡಿದ್ದ ಫಲವಾಗಿ ಪಡೆದ ಹಿಂದಿನ ದೇಹಕಾಂತಿಯನ್ನೂ ಪಡೆದನು.

೨೨. ಈ ಮಹಾಶ್ಚರ್ಯವನ್ನು ಕಂಡು ನಾರದನೇ ಮೊದಲಾದ ಮಹರ್ಷಿಗಳೆಲ್ಲರೂ ಸಕಲ ಪಾಪಾಪನೋದಕವಾದ ಆ ಧರ್ಮತೀರ್ಥದಲ್ಲಿ ಸಂತೋಷದಿಂದ ಸ್ನಾನಗಳನ್ನು ಮಾಡಿದರು.

ಅತರ್ಪಯನ್ಪಿತೄನ್ದಿವ್ಯಾನ್ವ್ಯಧುಃ ಶ್ರಾದ್ಧಾನಿ ಶ್ರದ್ಧಯಾ ।
ಧರ್ಮೇಶಂ ಸ್ನಾಪಯಾಮಾಸುಸ್ತತ್ತೀರ್ಥಾಂಬುಭೃತೈರ್ಘಟೈಃ ॥ ೨೩ ॥
ತದಾಪ್ರಭೃತಿ ತತ್ತೀರ್ಥಂ ಧರ್ಮಾಂಧುರಿತಿ ವಿಶ್ರುತಂ ।
ಬ್ರಹ್ಮಹತ್ಯಾದಿ ಪಾಪಾನಾಮಕ್ಲೇಶಂ ಕ್ಷಾಲನಂ ಪರಂ ॥ ೨೪ ॥
ಯತ್ಫಲಂ ತೀರ್ಥರಾಜಸ್ಯ ಸ್ನಾನೇನ ಪರಿಕೀರ್ತ್ಯತೇ ।
ಸಹಸ್ರಗುಣಿತಂ ತತ್ಸ್ಯಾದ್ಧರ್ಮಾಂಧುಃಸ್ನಾನಮಾತ್ರತಃ ॥ ೨೫ ॥
ಗಂಗಾದ್ವಾರೇ ಕುರುಕ್ಷೇತ್ರೇ ಗಂಗಾಸಾಗರಸಂಗಮೇ ।
ಯತ್ಫಲಂ ಲಭತೇ ಮರ್ತ್ಯೋ ಧರ್ಮತೀರ್ಥೇ ತದಾಪ್ನುಯಾತ್ ॥ ೨೬ ॥
ನರ್ಮದಾಯಾಂ ಸರಸ್ವತ್ಯಾಂ ಗೌತಮ್ಯಾಂ ಸಿಂಹಗೇ ಗುರೌ ।
ಸ್ನಾತ್ವಾ ಯತ್ಫಲಮಾಪ್ನೋತಿ ಧರ್ಮಕೂಪೇ ತದಾಪ್ನುಯಾತ್ ॥ ೨೭ ॥
ಮಾನಸೇ ಪುಷ್ಕರೇ ಚೈವ ದ್ವಾರಕೇ ಸಾಗರೇ ತಥಾ ।
ತೀರ್ಥೇ ಸ್ನಾತ್ವಾ ಫಲಂ ಯತ್ಸ್ಯಾತ್ತತ್ಸ್ಯಾದ್ಧರ್ಮಜಲಾಶಯೇ ॥ ೨೮ ॥

---

೨೩. ಸ್ವರ್ಗಲೋಕವಾಸಿಗಳಾದ ತಮ್ಮ ಪಿತೃದೇವತೆಗಳಿಗೆ ತರ್ಪಣಗಳನ್ನಿತ್ತರು. ಶ್ರದ್ಧಾನ್ವಿತರಾಗಿ ಶ್ರಾದ್ಧಕಾರ್ಯಗಳನ್ನು ನೆರವೇರಿಸಿದರು. ಆ ತೀರ್ಥೋದಕದಿಂದ ಕಳಶಗಳನ್ನು ತುಂಬಿಕೊಂಡು ಬಂದು ಧರ್ಮೇಶ್ವರ ಲಿಂಗಕ್ಕೆ ಅಭಿಷೇಕಗಳನ್ನುಮಾಡಿದರು.

೨೪. ಆ ದಿನದ ಮೊದಲುಗೊಂಡು ಆ ತೀರ್ಥವು ಧರ್ಮಕೂಪವೆಂಬುದಾಗಿ ಪ್ರಖ್ಯಾತಿಯನ್ನು ಪಡೆಯಿತು. ಅದು ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳನ್ನೂ ಅನಾಯಾಸವಾಗಿಯೇ ತೊಡೆದುಹಾಕುವ ತೀರ್ಥವಾಗಿರುವುದು.

೨೫. ಪ್ರಯಾಗಕ್ಷೇತ್ರದಲ್ಲಿ ಸ್ನಾನಮಾಡುವುದರಿಂದ ಯಾವ ಫಲವು ಲಭಿಸುವುದೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದೊ, ಅದರ ಸಹಸ್ರಗುಣಿತವಾದ ಫಲವನ್ನು ಧರ್ಮಕೂಪದ ಸ್ನಾನಮಾತ್ರದಿಂದ ಪಡೆಯಬಹುದು.

೨೬. ಗಂಗಾದ್ವಾರ (ಹರಿದ್ವಾರ)ದಲ್ಲಿಯೂ, ಕುರುಕ್ಷೇತ್ರದಲ್ಲಿಯೂ, ಗಂಗಾಸಾಗರಸಂಗಮದಲ್ಲಿಯೂ ಸ್ನಾನಗಳನ್ನುಮಾಡುವುವರ ಒಟ್ಟು ಫಲವನ್ನು ಧರ್ಮತೀರ್ಥದ ಒಂದೇ ಸ್ನಾನದಿಂದ ಮನುಷ್ಯನು ಪಡೆಯುವನು.

೨೭. ಗುರುಗ್ರಹವು ಸಿಂಹರಾಶಿಯಲ್ಲಿರಲು ನರ್ಮದಾ, ಸರಸ್ವತಿ ಮತ್ತು ಗೌತಮಿ (ಗೋದಾವರಿ)ಗಳೆಂಬ ಮೂರು ನದಿಗಳಲ್ಲಿಯೂ ಸ್ನಾನಮಾಡುವುದರಿಂದ ಯಾವ ಫಲವುಂಟೊ, ಅದನ್ನೇ ಧರ್ಮಕೂಪದ ಒಂದು ಸ್ನಾನದಿಂದಲೇ ಪಡೆಯಬಹುದು.

೨೮. ಮಾನಸಸರೋವರದಲ್ಲಿಯೂ, ಪುಷ್ಕರಕ್ಷೇತ್ರದಲ್ಲಿಯೂ, ದ್ವಾರಕೆಯ

ಕಾರ್ತಿಕ್ಯಾಂ ಸೂಕರಕ್ಷೇತ್ರೇ ಚೈತ್ರ್ಯಾಂ ಗೌರೀಮಹಾಹ್ರದೇ ।
ಶಂಖೋದ್ಧಾರೇ ಹರಿದಿನೇ ಯತ್ಫಲಂ ತತ್ಫಲಂ ತ್ವಿಹ ॥ ೨೯ ॥
ತೀರ್ಥದ್ವಯಂ ಪ್ರತೀಕ್ಷಂತೇ ಸುಸ್ನಾಸೂನ್ಪಿತರೋ ನರಾನ್ ।
ಗಂಗಾಯಾಂ ಧರ್ಮಕೂಪೇ ಚ ಪಿಂಡನಿರ್ವಪಣಾಶಯಾ ॥ ೩೦ ॥
ಪಿತಾಮಹಸಮೀಪೇ ಚ ಧರ್ಮೇಶಸ್ಯಾಗ್ರತೋಽಥ ವಾ ।
ಫಲ್ಗೌ ಚ ಧರ್ಮಪೀಠೇ ಚ ಮೋದ್ಯಂತಿ ಪ್ರಪಿತಾಮಹಾಃ ॥ ೩೧ ॥
ಧರ್ಮಕೂಪೇ ನರಃ ಸ್ನಾತ್ವಾ ಪರಿತರ್ಪ್ಯ ಪಿತಾಮಹಾನ್ ।
ಗಯಾಂ ಗತ್ವಾ ಕಿಮಧಿಕಂ ಕರ್ತಾ ಪಿತೃಮುದಾವಹಂ ॥ ೩೨ ॥
ಯಥಾ ಗಯಾಯಾಂ ತೃಪ್ತಾಃ ಸ್ಯುಃ ಪಿಂಡದಾನೇ ಪಿತಾಮಹಾಃ ।
ಧರ್ಮತೀರ್ಥೇ ತಥೈವ ಸ್ಯುರ್ನ ನ್ಯೂನಂ ನೈವ ಚಾಧಿಕಂ ॥ ೩೩ ॥

---

ಬಳಿಯಲ್ಲಿ ಸಮುದ್ರದಲ್ಲಿಯೂ ಸ್ನಾನಮಾಡುವುದರಿಂದ ಯಾವ ಫಲವು ಲಭಿಸುವುದೊ, ಅದನ್ನೇ ಧರ್ಮಕೂಪದಲ್ಲಿಯೂ ಸ್ನಾನಮಾತ್ರದಿಂದಲೇ ಪಡೆಯಬಹುದು.

೨೯. ಕಾರ್ತಿಕ ಪೌರ್ಣಿಮೆಯ ದಿನದಲ್ಲಿ ಸೂಕರಕ್ಷೇತ್ರದಲ್ಲಿಯೂ, ಚೈತ್ರ ಪೌರ್ಣಮಿಯಲ್ಲಿ ಗೌರೀತೀರ್ಥದಲ್ಲಿಯೂ, ಹರಿವಾಸರಗಳಲ್ಲಿ ಶಂಖೋದ್ಧಾರ ತೀರ್ಥದಲ್ಲಿಯೂ ಮಾಡಿದ ಸ್ನಾನಗಳ ಫಲವನ್ನೇ ಈ ತೀರ್ಥದಲ್ಲಿಯೂ ಪಡೆಯಬಹುದು.

೩೦. ಪಿತೃದೇವತೆಗಳು ತಮ್ಮ ಸಂತತಿಯವರು ಎರಡು ತೀರ್ಥಗಳಲ್ಲಿ ಮಾತ್ರ ಸ್ನಾನಗಳನ್ನುಮಾಡಿ ತಮಗೆ ಪಿಂಡಗಳನ್ನು ಕೊಡುವರೆಂಬ ಮಹಾ ಕಾಂಕ್ಷೆಯಿಂದೆದುರುನೋಡುತ್ತಿರುವರು. ಒಂದನೆಯದು ಗಂಗಾನದಿಯು, ಎರಡನೆಯದೇ ಧರ್ಮಕೂಪವು.

೩೧. ಪಿತಾಮಹೇಶ್ವರನ ಸಮೀಪದಲ್ಲಿಯಾಗಲಿ, ಧರ್ಮೇಶ್ವರನ ಸಮ್ಮುಖದಲ್ಲಿಯಾಗಲಿ, ಫಲ್ಗುತೀರ್ಥದಲ್ಲಿಯಾಗಲಿ, ಧರ್ಮಕೂಪದಲ್ಲಿಯಾಗಲಿ ಪಿತೃಕಾರ್ಯಗಳನ್ನುಮಾಡಲು ಪ್ರಪಿತಾಮಹರೂ ಸಹ ಮಹಾನಂದಭರಿತರಾಗುವರು.

೩೨. ಧರ್ಮಕೂಪದಲ್ಲಿ ಸ್ನಾನವನ್ನುಮಾಡಿ ಯಾವ ಮನುಷ್ಯನು ಪಿತಾಮಹರಿಗೆ ತರ್ಪಣಗಳನ್ನೀಯುವನೊ, ಅವನು ಪಿತೃಗಳಿಗೆ ಸಂತೋಷವನ್ನುಂಟುಮಾಡಲು ಗಯಾಕ್ಷೇತ್ರಕ್ಕೆ ಹೋಗಿ ಹೆಚ್ಚಾಗಿ ಮಾಡುವುದೇನು?

೩೩. ಗಯೆಯಲ್ಲಿ ಪಿಂಡದಾನವನ್ನು ಮಾಡುವುದರಿಂದ ಪಿತಾಮಹರು ಹೇಗೆ ಸಂತುಷ್ಟರಾಗುವರೊ, ಹಾಗೆಯೇ ಧರ್ಮತೀರ್ಥದಲ್ಲಿಯೂ ತೃಪ್ತಿಯನ್ನು ಪಡೆಯುವರು. ಎರಡರ ಫಲಗಳಲ್ಲಿಯೂ ನ್ಯೂನತೆಯಾಗಲಿ ಆಧಿಕ್ಯವಾಗಲಿ ಇರುವುದಿಲ್ಲ.

ತೇ ಧನ್ಯಾಃ ಪಿತೃಭಕ್ತಾಸ್ತೇ ಪ್ರೀಣಿತಾಸ್ತೈಃ ಪಿತಾಮಹಾಃ ।
ಪೈತ್ರಾದ್ದೃಣಾದ್ಧರ್ಮತೀರ್ಥೇ ನಿಷ್ಕೃತಿರ್ಯೈಃ ಕೃತಾ ಸುತೈಃ ॥ ೩೪ ॥
ತತ್ತೀರ್ಥಸ್ಯ ಪ್ರಭಾವೇಣ ನಿಷ್ಪಾಪೋಽಭೂತ್ಕ್ಷಣೇನ ಚ ।
ಪ್ರಣಮ್ಯ ದೇವದೇವೇಶಮಿಂದ್ರೋಽಗಾದಮರಾವತೀಂ ॥ ೩೫ ॥
ಅಪಾರೋ ಮಹಿಮಾ ತಸ್ಯ ಧರ್ಮತೀರ್ಥಸ್ಯ ಕುಂಭಜ ।
ತತ್ಕೂಪೇ ಸ್ವಂ ನಿರೀಕ್ಷ್ಯಾಪಿ ಶ್ರಾದ್ಧದಾನಫಲಂ ಲಭೇತ್ ॥ ೩೬ ॥
ತತ್ರಾಪಿ ಕಾಕಿಣೀಮಾತ್ರಂ ಯಚ್ಛೇತ್ಪಿತೃಮುದೇ ನರಃ ।
ಅಕ್ಷಯಂ ಫಲಮಾಪ್ನೋತಿ ಧರ್ಮಪೀಠಪ್ರಭಾವತಃ ॥ ೩೭ ॥
ತತ್ರ ಯೋ ಭೋಜಯೇದ್ವಿಪ್ರಾನ್ಯತೀನೋಽಥ ತಪಸ್ವಿನಃ ।
ಸಿಕ್ಥೇ ಸಿಕ್ಥೇ ಲಭೇತ್ಸೋಽಥ ವಾಜಪೇಯಫಲಂ ಸ್ಫುಟಂ ॥ ೩೮ ॥
ಪ್ರಾಪ್ಯಾಮರಾವತೀಂ ಶಕ್ರಸ್ತತೋ ದಿವಿಷದಾಂ ಪುರಃ ।
ಧರ್ಮಪೀಠಸ್ಯ ಮಾಹಾತ್ಮ್ಯಂ ಮಹತ್ಕಾಶ್ಯಾಮವರ್ಣಯತ್ ॥ ೩೯ ॥

---

೩೪. ಯಾವ ಸತ್ಪುತ್ರರು ಧರ್ಮತೀರ್ಥದಲ್ಲಿ ಶ್ರಾದ್ಧವನ್ನಾಚರಿಸಿ ಪಿತೃಗಳ ಋಣವನ್ನು ಪರಿಹರಿಸಿಕೊಂಡಿರುವರೊ, ಅವರೇ ಧನ್ಯರು. ಅವರೇ ಪಿತೃ ಭಕ್ತರು. ಅವರಿಂದಲೇ ಪಿತಾಮಹಾದಿಗಳೂ ಸಂತೋಷಗೊಳ್ಳುವರು.

೩೫. ಇಂತಹ ಮಹಾತೀರ್ಥದ ಪ್ರಭಾವದಿಂದ ಕ್ಷಣಮಾತ್ರದಲ್ಲಿಯೇ ಮಹೇಂದ್ರನು ನಿಷ್ಕಲ್ಮಷನಾದನು. ಆ ದೇವದೇವೇಶ್ವರನಿಗೆ ಪ್ರಣಾಮಗಳನ್ನು ಮಾಡಿ ತನ್ನ ರಾಜಧಾನಿಯಾದ ಅಮರಾವತಿಗೆ ಹೊರಟುಹೋದನು.

೩೬. ಎಲೈ ಕುಂಭಸಂಭವನೆ! ಆ ಧರ್ಮತೀರ್ಥದ ಮಹಿಮೆಯು ಅತ್ಯದ್ಭುತ ವಾಗಿರುವುದು. ಆ ಕೂಪದ ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡುವಮಾತ್ರ ದಿಂದಲೇ ಮನುಷ್ಯನು ಶ್ರಾದ್ಧದಾನವನ್ನು ಮಾಡಿದ ಫಲವನ್ನು ಪಡೆಯುವನು.

೩೭. ಅಲ್ಲಿ ಪಿತೃದೇವತೆಗಳ ಸಂತೋಷಕ್ಕಾಗಿ ಪ್ರತಿಯೊಬ್ಬ ಮಾನವನೂ ಒಂದು ಕವಡೆಯಷ್ಟನ್ನಾದರೂ ದಾನಮಾಡಬೇಕು. ಅಷ್ಟುಮಾತ್ರದಿಂದಲೇ ಧರ್ಮಪೀಠದ ಪ್ರಭಾವದ ಫಲವಾಗಿ ಆತನು ಅಕ್ಷಯಫಲವನ್ನು ಪಡೆಯುವನು.

೩೮. ಆ ತೀರ್ಥದ ಬಳಿಯಲ್ಲಿ ಯಾವನು ಬ್ರಾಹ್ಮಣರಿಗಾಗಲಿ, ಯತಿಗಳಿ ಗಾಗಲಿ, ತಪಸ್ವಿಗಳಿಗಾಗಲಿ ಭೋಜನವನ್ನು ಮಾಡಿಸುವನೊ, ಅವನು ಅವರು ತಿನ್ನುವ ಒಂದೊಂದು ತುತ್ತಿಗೂ ಒಂದೊಂದು ಅಶ್ವಮೇಧದ ಫಲವನ್ನು ಪಡೆ ಯುವನು. ಇದು ನಿಶ್ಚಯವು.

೩೯. ಇಂತು ಮಹೇಂದ್ರನು ಅಮರಾವತಿಯನ್ನು ಸೇರಿ ಸಭಾಸದರಾದ ದೇವತೆಗಳ ಮುಂದೆ ಕಾಶೀಕ್ಷೇತ್ರದಲ್ಲಿರುವ ಧರ್ಮಪೀಠದ ಮಹತ್ತರವಾದ ಮಾಹಾತ್ಮ್ಯವನ್ನು ವಿಸ್ತಾರವಾಗಿ ವರ್ಣಿಸಿದನು.

ಆಗತ್ಯ ಪುನರಪ್ಯತ್ರ ಶಂಭೋರಾನಂದಕಾನನೇ ।
ಮುನಿವೃಂದಾರಕೈಃ ಸಾರ್ಧಂ ಲಿಂಗಮುಸ್ಥಾಪಯದ್ಧರಿಃ ॥ ೪೦ ॥
ತಾರಕೇಶಾತ್ಪಶ್ಚಿಮತ ಇಂದ್ರೇಶ್ವರಮಿತೀರಿತಂ ।
ತಸ್ಯ ಸಂದರ್ಶನಾತ್ಪುಂಸಾಮ್ಮೈಂದ್ರಲೋಕೇ ನ ದೂರತಃ ॥ ೪೧ ॥
ತದ್ದಕ್ಷಿಣೇ ಶಚೀಶಶ್ಚ ಸ್ವಯಂ ಶಚ್ಯಾ ಪ್ರತಿಷ್ಠಿತಃ ।
ಶಚೀಶಾರ್ಚನತಃ ಸ್ತ್ರೀಣಾಂ ಸೌಭಾಗ್ಯಮತುಲಂ ಭವೇತ್ ॥ ೪೨ ॥
ತತ್ಸಮೀಪೇಽಸ್ತಿ ರಂಭೇಶೋ ಬಹುಸೌಖ್ಯಸಮೃದ್ಧಿದಃ ।
ಇಂದ್ರೇಶ್ವರಸ್ಯ ಪರಿತೋ ಲೋಕಪಾಲೇಶ್ವರೋ ಪರಃ ॥ ೪೩ ॥
ತದರ್ಚನಾತ್ಪ್ರಸೀದಂತಿ ಲೋಕಪಾಲಾಃ ಸಮೃದ್ಧಿದಾಃ ।
ಧರ್ಮೇಶಾತ್ಪಶ್ಚಿಮಾಶಾಯಾಂ ಧರಣೀಶಃ ಪ್ರಕೀರ್ತಿತಃ ।
ತದ್ದರ್ಶನೇನ ಧೈರ್ಯಂ ಸ್ಯಾದ್ರಾಜ್ಯೇ ರಾಜಕುಲಾದಿಷು ॥ ೪೪ ॥
ಧರ್ಮೇಶಾದ್ದಕ್ಷಿಣೇ ಪೂಜ್ಯಂ ತತ್ತ್ವೇಶಾಖ್ಯಂ ಪರಂ ನರೈಃ ।
ತತ್ತ್ವಜ್ಞಾನಂ ಪ್ರವರ್ತೇತ ತಲ್ಲಿಂಗಸ್ಯ ಸಮರ್ಚನಾತ್ ॥ ೪೫ ॥

೪೦. ಆ ಪುರಂದರನು ಪುನಃ ಅಲ್ಲಿಗೆ ಬಂದು ಮಹರ್ಷಿಗಳೊಡನೆಯೂ ದೇವತೆಗಳೊಡನೆಯೂ ಕೂಡಿದವನಾಗಿ ಆ ಆನಂದಕಾನನದಲ್ಲಿ ಮಹೇಶ್ವರನ ಮತ್ತೊಂದು ಲಿಂಗವನ್ನು ಪ್ರತಿಷ್ಠೆಗೊಳಿಸಿದನು.

೪೧. ಈ ಲಿಂಗವು ತಾರಕೇಶ್ವರನಿಗೆ ಪಶ್ಚಿಮದಲ್ಲಿ ಇಂದ್ರೇಶ್ವರನೆಂದು ಕರೆಯಲ್ಪಡುತ್ತಿರುವುದು. ಅದನ್ನು ನೋಡುವುದರಿಂದ ಮನುಷ್ಯರಿಗೆ ಮಹೇಂದ್ರಲೋಕದ ಪ್ರಾಪ್ತಿಯು ದೂರವಾಗಿರುವುದಿಲ್ಲ.

೪೨. ಅದಕ್ಕೆ ದಕ್ಷಿಣದಲ್ಲಿಯೇ ಶಚೀದೇವಿಯಿಂದ ಪ್ರತಿಷ್ಠಾಪಿಸಲ್ಪಟ್ಟ ಶಚೀಶ್ವರಲಿಂಗವಿರುವುದು. ಈ ಶಚೀಶ್ವರಲಿಂಗವನ್ನು ಪೂಜಿಸುವುದರಿಂದ ಸ್ತ್ರೀಯರಿಗೆ ಅಪ್ರತಿಮವಾದ ಸೌಭಾಗ್ಯವು ಕೈಗೂಡುವುದು.

೪೩. ಅದರ ಸಮೀಪದಲ್ಲಿಯೇ ಅನೇಕ ಸೌಖ್ಯಗಳ ಸಮೃದ್ಧಿಯನ್ನು ಕೊಡುವ ರಂಭೇಶ್ವರನಿರುವನು. ಇಂದ್ರೇಶ್ವರನ ಸಮೀಪದಲ್ಲಿಯೇ ಸರ್ವೋತ್ತಮನಾದ ಲೋಕಪಾಲೇಶ್ವರನು ನೆಲಸಿರುವನು.

೪೪. ಆ ಲಿಂಗವನ್ನು ಪೂಜಿಸುವುದರಿಂದ ಸಕಲ ಲೋಕಪಾಲಕರೂ ಪ್ರಸನ್ನರಾಗಿ ಸರ್ವಸಮೃದ್ಧಿಗಳನ್ನೀಯುವರು. ಧರ್ಮೇಶ್ವರಲಿಂಗಕ್ಕೆ ಪಶ್ಚಿಮದಿಕ್ಕಿನಲ್ಲಿ ಧರಣೀಶ್ವರಲಿಂಗವು ಪ್ರಖ್ಯಾತಿಯನ್ನು ಪಡೆದಿರುವುದು. ಅದರ ದರ್ಶನವನ್ನು ಮಾಡುವುದರಿಂದ ಮನುಷ್ಯನು ರಾಷ್ಟ್ರದಲ್ಲಿಯಾಗಲಿ ರಾಜಗೃಹಗಳಲ್ಲಿಯಾಗಲಿ ನಿರ್ಭಯನಾಗಿರುವನು.

೪೫. ಧರ್ಮೇಶ್ವರನಿಗೆ ದಕ್ಷಿಣದಲ್ಲಿರುವ ತತ್ತ್ವೇಶ್ವರವೆಂಬ ಲಿಂಗವು

ಸ್ವಪ್ರಜಾಸ್ವೇಕ ಉದಿತೋ ಧೂಮಕೇತುರಿವಾಪರಃ ।
ದುರ್ದಮೋ ನಾಮ ಭೂಪಾಲಃ ಕ್ಷಯಾಯಾಕಾಂಡ ಏವ ಹಿ ॥ ೫೭ ॥
ಸ ಕದಾಚಿನ್ಮೃಗಯುಭಿಃ ಪಾಪರ್ಧಿವ್ಯಸನಾತುರಃ ।
ಸಾರ್ಧಂ ಪಿವೇಶಾರಣ್ಯಾನಿ ಗೃಷ್ಟಿಪೃಷ್ಠಾನುಗೋ ಹಯಾ ॥ ೫೮ ॥
ಏಕಾಕೀ ದೈವಯೋಗೇನ ದುರ್ದಮಃ ಸೋಽವನೀಪತಿಃ ।
ಧನ್ವೀ ತುರಂಗಮಾರೂಢೋಽವಿಶದಾನಂದಕಾನನಂ ॥ ೫೯ ॥
ಸ ವಿಲೋಕ್ಯಾಥ ಸರ್ವತ್ರ ಪಾದಪಾನವಕೇಶಿನಃ ।
ಸುಚ್ಛಾಯಾಂ ಚ ಸವಿಸ್ತಾರಾನ್ಗತಶ್ರಮ ಇವಾಭವತ್ ॥ ೬೦ ॥
ಸುಗಂಧೇನ ಸುಶೀತೇನ ಸುಮಂದೇನ ಸುವಾಯುನಾ ।
ಕ್ಷಣಂ ಸಂವೀಜಿತೋ ರಾಜಾ ಪಲ್ಲವವ್ಯಜನೈಃ ಕುಜೈಃ ॥ ೬೧ ॥
ಕೇವಲಂ ಮೃಗಯಾಜಾತಸ್ತತ್ಖೇದೋ ನ ವ್ಯಪಾವ್ರಜತ್ ।
ಆಜನ್ಮಜನಿತಃ ಖೇದೋ ನಿರಗಾತ್ತದ್ವನೇ ಕ್ಷಣಾತ್ ॥ ೬೨ ॥

೫೭. ದುರ್ದಮನೆಂಬ ಆ ಮಹಾರಾಜನು ತನ್ನ ರಾಜ್ಯದ ಪ್ರಜೆಗಳ ನಾಶಕ್ಕಾಗಿಯೇ ಹುಟ್ಟಿಬಂದ ಮತ್ತೊಂದು ಧೂಮಕೇತುವೋ ಎಂಬಂತೆ ನಿಷ್ಕಾರಣವಾಗಿಯೇ ಅವರಿಗೆ ಮೃತ್ಯುದೇವತೆಯಂತಿದ್ದನು.

೫೮. ಇಂತು ತನ್ನ ಪಾಪದ ರಾಶಿಯನ್ನೇ ಬೆಳಸುವುದರಲ್ಲಿ ನಿರತನಾಗಿದ್ದ ಆ ರಾಜನೊಮ್ಮೆ ಬೇಡರ ಪಡೆಯಿಂದ ಪರಿವೃತನಾಗಿ ಕುದುರೆಯಮೇಲೆ ಹೊರಟು ಒಂದಾನೊಂದು ಮೃಗವನ್ನು ಹಿಂಬಾಲಿಸುತ್ತ ಘೋರಾರಣ್ಯವನ್ನು ಪ್ರವೇಶಿಸಿದನು.

೫೯–೬೦. ಅವನು ಧನುಸ್ಸನ್ನು ಕೈಯಲ್ಲಿ ಹಿಡಿದು ಕುದುರೆಯನ್ನೇರಿ ಏಕಾಕಿಯಾಗಿಯೇ ಬರುತ್ತ ದೈವಯೋಗದಿಂದ ಆನಂದಕಾನನವನ್ನು ಪ್ರವೇಶಮಾಡಿದನು. ಆ ಪ್ರದೇಶದ ಮರಗಳೆಲ್ಲವೂ ನಿಷ್ಫಲಗಳಾಗಿದ್ದರೂ ದಟ್ಟವಾದ ನೆರಳನ್ನು ಕೊಡುತ್ತ ನಿಬಿಡವಾಗಿ ಹರಡಿರುವುದನು ನೋಡುತ್ತ ಬರುತ್ತಿರಲು ಸ್ವಲ್ಪಕಾಲದಲ್ಲಿಯೇ ಅವನ ಆಯಾಸವು ಕಳೆಯಿತು.

೬೧. ಸುಗಂಧಯುಕ್ತವೂ, ಸುಶೀತಲವೂ ಆದ ಮಂದಮಾರುತವು ಗಿಡಗಳಡಿಯಲ್ಲಿ ಬೀಸುತ್ತಿರಲು ಆ ವೃಕ್ಷಗಳೇ ಮಹಾರಾಜನಿಗೆ ತಮ್ಮ ಎಲೆಗಳೆಂಬ ಬೀಸಣಿಗೆಯಿಂದ ಗಾಳಿಯನ್ನು ಹಾಕುತ್ತಿರುವುವೋ ಎಂಬಂತಿದ್ದುವು.

೬೨. ಅಲ್ಲಿ ದುರ್ದಮನಿಗೆ ಬರಿಯ ಬೇಟೆಯ ಆಯಾಸವೊಂದೇ ಕಳೆಯಲಿಲ್ಲ. ಅದರ ಜೊತೆಯಲ್ಲಿಯೇ ವನಪ್ರವೇಶವನ್ನು ಮಾಡಿದ ಕ್ಷಣದಲ್ಲಿ ತಾನು ಹುಟ್ಟಿದಂದಿನಿಂದಲೂ ಮಾಡಿದ್ದ ಪಾತಕಗಳ ದುಃಖವೂ ಕಳೆಯಿತು.

ಮಧ್ಯೇವನಂ ಸ ಚಾಪಶ್ಯತ್ಪ್ರಾಸಾದಂ ಚುಂಬಿತಾಂಬರಂ ।
ಮಹಾರತ್ನಶಲಾಕಾನಾಂ ರಮ್ಯಮೇಕಮಿವಾಕರಂ ॥ ೬೩ ॥
ಅಥಾವರುಹ್ಯ ತುರಗಾತ್ಸ ಭೂಪಾಲೋಽತಿವಿಸ್ಮಿತಃ ।
ಧರ್ಮೇಶಮಂಡಪಂ ಪ್ರಾಪ್ಯ ಸ್ವಾತ್ಮಾನಂ ಪ್ರಶಶಂಸ ಹ ॥ ೬೪ ॥
ಧನ್ಯೋಽಸ್ಮ್ಯಹಂ ಪ್ರಸನ್ನೋಽಸ್ಮಿ ಧನ್ಯೇ ಮೇಽದ್ಯ ವಿಲೋಚನೇ ।
ಧನ್ಯಮದ್ಯತನಂ ಚಾಹರ್ಯದಪಶ್ಯಮಿಮಾಂ ಭುವಂ ॥ ೬೫ ॥
ಪುನರ್ನಿನಿಂದ ಚಾತ್ಮಾನಂ ಧರ್ಮಪೀಠಪ್ರಭಾವತಃ ।
ಧಿಙ್ಮಾಂ ದುರ್ಜನಸಂಸರ್ಗತ್ಯಕ್ತಸಜ್ಜನಸಂಗಮಂ ॥ ೬೬ ॥
ಜಂತೂದ್ವೇಗಕರಂ ಮೂಢಂ ಪ್ರಜಾಪೀಡನಪಂಡಿತಂ ।
ಪರದಾರಪರದ್ರವ್ಯಾಪಹೃತ್ಯಾ ಸುಖಮಾನಿನಂ ॥ ೬೭ ॥
ಅದ್ಯ ಯಾವನ್ಮಮಗತಂ ವೃಥಾ ಜನ್ಮಾಲ್ಪಮೇಧಸಃ ।
ಧರ್ಮಸ್ಥಾನಾನೀದೃಶಾನ್ಯದೃಷ್ಟಾನ್ಯಪಿ ಕುತ್ರಚಿತ್ ॥ ೬೮ ॥

---

೬೩. ಬರಬರುತ್ತ ಆ ರಾಜನು, ಆಕಾಶವನ್ನು ಚುಂಬಿಸುತ್ತ ನವರತ್ನಗಳ ಸಲಾಕೆಗಳ ಸಮೂಹಗಳಿಂದಲೇ ಮಾಡಿದಂತೆ ನೋಟಕ್ಕೆ ಮನೋಹರವಾಗಿರುವ ದೇವಾಲಯವೊಂದನ್ನು ನಿರೀಕ್ಷಿಸುವವನಾದನು.

೬೪. ಆಗ ತನ್ನ ಕುದುರೆಯಿಂದಿಳಿದು ಆ ಮಹಾರಾಜನು ಅತ್ಯಂತವಿಸ್ಮಯಗೊಂಡು ಧರ್ಮೇಶ್ವರಲಿಂಗದ ದೇವಾಲಯವನ್ನು ಸೇರಿ ತನ್ನ ಅದೃಷ್ಟಕ್ಕಾಗಿ ತನ್ನನ್ನು ತಾನೇ ಕೊಂಡಾಡಿಕೊಂಡನು.

೬೫. "ಇಂದು ನಾನು ಧನ್ಯನಾದೆನು. ನನ್ನ ಅಂತಃಕರಣವು ಪ್ರಸನ್ನವಾಯಿತು. ನನ್ನ ಈ ನೇತ್ರಗಳೂ ಮಹಾಪುಣ್ಯವನ್ನು ಮಾಡಿದ್ದುವು. ಈ ಪುಣ್ಯಭೂಮಿಯನ್ನು ನೋಡಿದ ಈ ಶುಭದಿವಸವೇ ನನ್ನ ಜನ್ಮದಲ್ಲೆಲ್ಲ ಪರಮಪವಿತ್ರವು."

೬೬. ಇಂತೆಂದು ಯೋಚಿಸುತ್ತ ಉತ್ತರಕ್ಷಣದಲ್ಲಿಯೇ ಧರ್ಮಪೀಠದ ಪ್ರಭಾವದ ಫಲವಾಗಿ ತನ್ನನ್ನು ತಾನೇ ನಿಂದಿಸಿಕೊಂಡನು. "ಇಂದಿನವರೆಗೂ ದುರ್ಜನರ ಸಹವಾಸವನ್ನೇ ಬೆಳೆಸುತ್ತ ಸಜ್ಜನರ ಸಂಗವನ್ನು ದೂರಮಾಡಿದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ.

೬೭–೬೮. ಇದುವರೆಗೂ ನಾನು ಸಕಲ ಪ್ರಾಣಿಗಳನ್ನೂ ಹಿಂಸೆಗೊಳಿಸುತ್ತ ಮೂರ್ಖನಾಗಿ ಪ್ರಜೆಗಳನ್ನು ಪೀಡಿಸುವುದರಲ್ಲಿ ನಿಪುಣನಾಗಿ, ಪರಸ್ತ್ರೀಯರನ್ನೂ ಪರರ ದ್ರವ್ಯವನ್ನೂ ಅಪಹರಿಸುವುದರಲ್ಲಿಯೇ ಸೌಖ್ಯವುಂಟೆಂದು ತಿಳಿದುಕೊಂಡಿದ್ದೆನು. ಅಲ್ಪಬುದ್ಧಿಯಾದ ನನ್ನ ಜನ್ಮವು ಇಂದಿನವರೆಗೂ ವ್ಯರ್ಥವಾಗಿಯೇ ಕಳೆದುಹೋಯಿತಲ್ಲವೆ! ಒಂದು ದಿನವಾದರೂ ಇಂತಹ ಧರ್ಮಕ್ಷೇತ್ರಗಳನ್ನು ಎಲ್ಲಿಯೂ ನೋಡದೆಯೇ ಕಾಲವನ್ನು ಕಳೆದುಬಿಟ್ಟೆನು."

ಏವಂ ಬಹುವಿನಿಂದ್ಯ ಸ್ವಂ ನತ್ವಾ ಧರ್ಮೇಶ್ವರಂ ವಿಭುಂ ।
ಆರುಹ್ಯಾಶ್ವಂ ಯಯೌ ರಾಜಾ ದುರ್ದಮೋ ವಿಷಯಂ ಸ್ವಕಂ ॥ ೬೯ ॥
ತತೋಽಮಾತ್ಯಾನ್ಸಮಾಹೂಯ ಕ್ರಮಾಯಾತಾಂಶ್ಚಿರಂತನಾನ್ ।
ನವೀನಾನ್ಪರಿನಿರ್ವಾಸ್ಯ ಪೌರಾಂಶ್ಚಾಪಿ ಸಮಾಹ್ವಯತ್ ॥ ೭೦ ॥
ಬ್ರಾಹ್ಮಣಾಂಶ್ಚ ನಮಸ್ಕೃತ್ಯ ತೇಭ್ಯೋ ವೃತ್ತೀಃ ಪ್ರದಾಯ ಚ ।
ಪುತ್ರೇ ರಾಜ್ಯಂ ಸಮಾರೋಪ್ಯ ಪ್ರಜಾಧರ್ಮೇ ನಿವೇಶ್ಯ ಚ ॥ ೭೧ ॥
ಪರಿದಂಡ್ಯ ಚ ದಂಡಾರ್ಹಾನ್ಸಾಧೂಂಶ್ಚ ಪರಿತೋಷ್ಯ ಚ ।
ದಾರಾನಪಿ ಪರಿತ್ಯಜ್ಯ ವಿಷಯೇಷು ಪರಾಙ್ಮುಖಃ ॥ ೭೨ ॥
ಸಮಾಗಚ್ಛದಥೈಕಾಕೀ ಕಾಶೀಂ ಶ್ರೇಯೋವಿಕಾಸಿನೀಂ ।
ಧರ್ಮೇಶ್ವರಂ ಸಮಾರಾಧ್ಯ ಕಾಲಾನ್ನಿರ್ವಾಣಮಾಪ್ತವಾನ್ ॥ ೭೩ ॥
ಧರ್ಮೇಶದರ್ಶನಾನ್ನಿತ್ಯಂ ತಥಾಭೂತಃ ಸ ದುರ್ದಮಃ ।
ಬಭೂವ ದಮಿನಾಂ ಶ್ರೇಷ್ಠಃ ಪ್ರಾಂತೇ ಮೋಕ್ಷಂ ಚ ಲಬ್ಧವಾನ್ ॥ ೭೪ ॥

---

೬೯. ಇಂತೆಂದು ತನ್ನನ್ನು ತಾನೇ ಬಹುವಿಧವಾಗಿ ನಿಂದಿಸಿಕೊಳ್ಳುತ್ತ ಲೋಕೇಶ್ವರನಾದ ಧರ್ಮೇಶ್ವರನಿಗೆ ನಮಸ್ಕಾರವನ್ನು ಮಾಡಿ ಆ ದುರ್ದಮ ರಾಜನು ಕುದುರೆಯನ್ನು ಹತ್ತಿಕೊಂಡು ತನ್ನ ರಾಜ್ಯಕ್ಕೆ ಹಿಂದಿರುಗಿದನು.

೭೦. ಬಳಿಕ ತಾನು ಹೊಸದಾಗಿ ನೇಮಿಸಿಕೊಂಡಿದ್ದ ಮಂತ್ರಿಗಳೆಲ್ಲರನ್ನೂ ದೇಶದಿಂದ ಹೊರಡಿಸಿ ವಯೋವೃದ್ಧರೂ ಕುಲಕ್ರಮದಿಂದ ಬಂದವರೂ ಆದ ಹಿಂದಿನ ಮಂತ್ರಿಗಳನ್ನೇ ಕರೆಯಿಸಿದನು. ನಗರದ ಜನರನ್ನೂ ಸಭೆಗೆ ಕರೆಸಿಕೊಂಡನು.

೭೧. ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡಿ ಅವರಿಗೆಲ್ಲ ವೃತ್ತಿಗಳನ್ನು ಕಲ್ಪಿಸಿಕೊಟ್ಟು ತನ್ನ ಮಗನಿಗೆ ರಾಜ್ಯಾಧಿಕಾರವನ್ನು ವಹಿಸಿ ಪ್ರಜೆಗಳೆಲ್ಲರನ್ನೂ ಸ್ವಾಶ್ರಮಸ್ವವರ್ಣೋಚಿತಗಳಾದ ಧರ್ಮಗಳಲ್ಲಿ ಸ್ಥಾಪಿಸಿದನು.

೭೨. ದಂಡಾರ್ಹರಾದ ದುಷ್ಟರೆಲ್ಲರನ್ನೂ ನಿಗ್ರಹಿಸಿ ಸಾಧುಜನರಿಗೆ ಸಂತೋಷವನ್ನುಂಟುಮಾಡಿದನು. ತನ್ನ ಹೆಂಡತಿಯರನ್ನೂ ತ್ಯಜಿಸಿ ಸಕಲ ಪ್ರಾಪಂಚಿಕ ಸುಖಗಳಲ್ಲಿಯೂ ಉದಾಸೀನಭಾವವನ್ನು ತಾಳಿದವನಾದನು.

೭೩. ಬಳಿಕ ಏಕಾಕಿಯಾಗಿ ಸಕಲ ಶ್ರೇಯಸ್ಸುಗಳನ್ನೂ ಕೈಗೂಡಿಸುವ ಕಾಶೀಕ್ಷೇತ್ರಕ್ಕೈತಂದು ನೆಲಸಿ, ಧರ್ಮೇಶ್ವರನ ಪೂಜೆಯನ್ನೇ ಮಾಡುತ್ತಿದ್ದು ಯಥಾಕಾಲದಲ್ಲಿ ಮೋಕ್ಷವನ್ನೂ ಪಡೆದನು.

೭೪. ಹಿಂದೆ ಅತ್ಯಂತ ಕ್ರೂರಿಯಾಗಿದ್ದ ಆ ದುರ್ದಮರಾಜನೂ ಹೀಗೆ ಧರ್ಮೇಶ್ವರನ ದರ್ಶನವನ್ನು ನಿತ್ಯವೂ ಮಾಡುತ್ತಿದ್ದುದರ ಫಲವಾಗಿ ಇಂದ್ರಿಯ ನಿಗ್ರಹವುಳ್ಳವರಲ್ಲಿ ಶ್ರೇಷ್ಠತೆಯನ್ನು ಪಡೆದು ಅಂತ್ಯದಲ್ಲಿ ಮೋಕ್ಷವನ್ನು ಪಡೆದನು.

ಇತ್ಥಂ ಧರ್ಮೇಶಮಾಹಾತ್ಮ್ಯಂ ಮಯಾ ಸ್ವಲ್ಪಂ ನಿರೂಪಿತಂ ।
ಧರ್ಮಪೀಠಸ್ಯ ಮಾಹಾತ್ಮ್ಯಂ ಸಮ್ಯಕ್ಕೋ ವೇದ ಕುಂಭಜ ॥ ೭೫ ॥
ಇದಂ ಧರ್ಮೇಶ್ವರಾಖ್ಯಾನಂ ಯಃ ಶ್ರೋಷ್ಯತಿ ನರೋತ್ತಮಃ ।
ಆಜನ್ಮಸಂಚಿತಾತ್ಪಾಪಾತ್ಸ ಮುಕ್ತೋ ಭವತಿ ಕ್ಷಣಾತ್ ॥ ೭೬ ॥
ಶ್ರಾದ್ಧಕಾಲೇ ವಿಶೇಷೇಣ ಧರ್ಮೇಶಾಖ್ಯಾನಮುತ್ತಮಂ ।
ಶ್ರಾವಯೇದ್ಬ್ರಾಹ್ಮಣಾನ್ಧೀಮಾನ್ಪಿತೄಣಾಂ ತೃಪ್ತಿಕಾರಣಂ ॥ ೭೭ ॥
ಧರ್ಮಾಖ್ಯಾನಮಿದಂ ಶೃಣ್ವನ್ನಪಿ ದೂರಸ್ಥಿತಃ ಸುಧೀಃ ।
ಸರ್ವಪಾಪೈರ್ವಿನಿರ್ಮುಕ್ತೋ ಗಂತಾಂತೇ ಶಿವಮಂದಿರಂ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಧರ್ಮೇಶಮಾಹಾತ್ಮ್ಯಂ—
ದುರ್ದಮಾಖ್ಯಾನ ವರ್ಣನಂ" ನಾಮೈಕಾಶೀತಿತಮೋಽಧ್ಯಾಯಃ

---

೭೫. ಇಂತು ಧರ್ಮೇಶ್ವರಲಿಂಗದ ಮಹಾತ್ಮ್ಯವನ್ನು ಸ್ವಲ್ಪಮಟ್ಟಿಗೆ ನಿನಗೆ ನಿರೂಪಿಸಿರುವೆನು. ಎಲೈ ಕುಂಭೋದ್ಭವನೆ! ಈ ಧರ್ಮಪೀಠದ ಮಾಹಾತ್ಮ್ಯವನ್ನು ಸಮಗ್ರವಾಗಿ ತಿಳಿದವನು ಭೂಲೋಕದಲ್ಲಿ ಯಾವನು ತಾನೆ ಇರುವನು?

೭೬. ಯಾವ ಮನುಷ್ಯೋತ್ತಮನು ಧರ್ಮೇಶ್ವರನ ಈ ಚರಿತ್ರೆಯನ್ನು ಕೇಳುವನೊ, ಅವನು ಒಂದು ಕ್ಷಣದಲ್ಲಿಯೇ ಜನನದಿನದ ಮೊದಲುಗೊಂಡು ಮಾಡಿದ ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವನು.

೭೭. ಸಕಲಪಿತೃದೇತೆಗಳಿಗೂ ತೃಪ್ತಿಯನ್ನುಂಟುಮಾಡಲು ಕಾರಣವಾದ ಉತ್ತಮವಾದ ಈ ಧರ್ಮೇಶ್ವರನ ಚರಿತ್ರೆಯನ್ನು ಪ್ರಾಜ್ಞನಾದವನು ವಿಶೇಷವಾಗಿ ಶ್ರಾದ್ಧಕಾಲದಲ್ಲಿ ಬ್ರಾಹ್ಮಣರಿಗೆ ಶ್ರವಣಮಾಡಿಸಬೇಕು.

೭೮. ಯಾವ ಸದ್ಬುದ್ಧಿಯು ಕಾಶಿಗೆ ದೂರದಲ್ಲಿದ್ದರೂ ಶ್ರದ್ಧೆಯಿಂದ ಈ ಧರ್ಮೇಶ್ವರಲಿಂಗದ ಮಹಿಮೆಯನ್ನು ಕೇಳುವನೊ, ಅವನು ಸಕಲ ಪಾತಕಗಳಿಂದಲೂ ಮುಕ್ತನಾಗಿ ಅಂತ್ಯದಲ್ಲಿ ಕೈಲಾಸವನ್ನು ಹೋಗಿ ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತರಾರ್ಧದಲ್ಲಿ
"ಧರ್ಮೇಶಮಾಹಾತ್ಮ್ಯಂ—ದುರ್ದಮಾಖ್ಯಾನ ವರ್ಣನ"ವೆಂಬ
ಎಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವ್ಯಶೀತಿತಮೋಽಧ್ಯಾಯಃ

## ವೀರೇಶ್ವರಾವಿರ್ಭಾವೇಽಮಿತ್ರಜಿತ್ಪರಾಕ್ರಮವರ್ಣನಂ

**ಪಾರ್ವತ್ಯುವಾಚ :—**

**ವೀರೇಶಸ್ಯ ಮಹೇಶಾನ ಶ್ರೂಯತೇ ಮಹಿಮಾ ಮಹಾನ್ ।**
**ಪರಾಂ ಸಿದ್ಧಿಂ ತು ತೇ ತತ್ರ ಪ್ರಾಪುಃ ಸಿದ್ಧಾಃ ಪರಂ ಶತಾಃ ॥ ೧ ॥**
**ಕಥಮಾವಿರ್ಭವಸ್ತಸ್ಯ ಕಾಶ್ಯಾಂ ಲಿಂಗವರಸ್ಯ ತು ।**
**ಆಶುಸಿದ್ಧಿಪ್ರದಸ್ಯೇಹ ತನ್ಮೇ ಬ್ರೂಹಿ ಜಗತ್ಪತೇ ॥ ೨ ॥**

**ಮಹೇಶ್ವರ ಉವಾಚ :—**

**ನಿಶಾಮಯ ಮಹಾದೇವಿ ವೀರೇಶಾವಿರ್ಭವಂ ಪರಂ ।**
**ಯಂ ಶ್ರುತ್ವಾಪಿ ನರಃ ಪುಣ್ಯಂ ಪ್ರಾಪ್ನೋತಿ ವಿಪುಲಂ ಪ್ರಿಯೇ ॥ ೩ ॥**
**ಆಸೀದಮಿತ್ರಜಿನ್ನಾಮ ರಾಜಾ ಪರಪುರಂಜಯಃ ।**
**ಧಾರ್ಮಿಕಃ ಸತ್ತ್ವಸಂಪನ್ನಃ ಪ್ರಜಾರಂಜನತತ್ಪರಃ ॥ ೪ ॥**

---

## ಕನ್ನಡದ ಅನುವಾದ

### ವೀರೇಶ್ವರಾವಿರ್ಭಾವ— ಅಮಿತ್ರಜಿತ್ಪರಾಕ್ರಮವರ್ಣನ

೧. ಪಾರ್ವತಿಯು ಕೇಳುತ್ತಾಳೆ:— ಮಹೇಶ್ವರನೆ! ವೀರೇಶ್ವರಲಿಂಗದ ಮಾಹಾತ್ಮ್ಯವು ಅತ್ಯುತ್ತಮವಾದುದೆಂದು ಕೇಳಿರುವೆನು. ಅಲ್ಲಿ ಹಿಂದೆ ನೂರಾರು ಸಿದ್ಧರು ಮೋಕ್ಷಸಿದ್ಧಿಯನ್ನು ಪಡೆದರೆಂದೂ ತಿಳಿದಿರುವೆನು.

೨. ಕಾಶಿಯಲ್ಲಿ ಈ ಉತ್ತಮಲಿಂಗವು ಆವಿರ್ಭವಿಸಿದ ಬಗೆಯೆಂತು? ಲೋಕೇಶ್ವರನೆ! ಆ ಲಿಂಗವು ಶೀಘ್ರವಾಗಿಯೇ ಸಕಲ ಸಿದ್ಧಿಗಳನ್ನು ಕೊಡುವುದೆಂಬುದು ನಿಜವೆ? ಈ ವಿಷಯಗಳೆಲ್ಲವನ್ನೂ ನನಗೆ ವಿಸ್ತರಿಸುವವನಾಗು.

೩. ಮಹೇಶ್ವರನು ಹೇಳುತ್ತಾನೆ:—ಮಹಾದೇವಿಯೆ! ಸರ್ವೋತ್ತಮವಾದ ವೀರೇಶ್ವರನ ಆವಿರ್ಭಾವವನ್ನು ಕುರಿತ ಚರಿತ್ರೆಯನ್ನು ಕೇಳು. ಸರ್ವಮಂಗಳೆ! ಈ ಚರಿತ್ರೆಯನ್ನು ಕೇಳಿದರೆ ಸಾಕು; ಮನುಷ್ಯನು ಪುಣ್ಯಭಾಗಿಯಾಗುವನು.

೪. ಪೂರ್ವದಲ್ಲಿ ಶತ್ರುಜಿತ್ ಎಂಬೊಬ್ಬ ಮಹಾರಾಜನಿದ್ದನು. ಆತನು ಸಕಲ ಶತ್ರುಗಳ ರಾಜಧಾನಿಗಳನ್ನೂ ಜಯಿಸಿದ್ದನು; ಧರ್ಮಬುದ್ಧಿಯುಳ್ಳವನು; ಮಹಾಪರಾಕ್ರಮಿಯು: ತನ್ನ ಪ್ರಜೆಗಳನ್ನು ಸಂತೋಷಗೊಳಿಸುವುದರಲ್ಲಿಯೇ ಆವನು ನಿರತನಾಗಿದ್ದನು.

ಯಶೋಧನೋ ವದಾನ್ಯಶ್ಚ ಸುಧೀರ್ಬ್ರಾಹ್ಮಣದೈವತಃ ।
ಸದೈವಾವಭೃತಸ್ನಾನಪರಿಕ್ಲಿನ್ನಶಿರೋರುಹಃ ॥ ೫ ॥
ವಿನೀತೋ ನೀತಿಸಂಪನ್ನಃ ಕುಶಲಃ ಸರ್ವಕರ್ಮಸು ।
ವಿದ್ಯಾಬ್ಧಿಪಾರದೃಶ್ವಾ ಚ ಗುಣವಾನ್ಗುಣಿವತ್ಸಲಃ ॥ ೬ ॥
ಕೃತಜ್ಞೋ ಮಧುರಾಲಾಪಃ ಪಾಪಕರ್ಮಪರಾಙ್ಮುಖಃ ।
ಸತ್ಯವಾಕ್ಛೌಚನಿಲಯಃ ಸ್ವಲ್ಪವಾಗ್ವಿಜಿತೇಂದ್ರಿಯಃ ॥ ೭ ॥
ರಣಾಂಗಣೇ ಕೃತಾಂತಾಭಃ ಸಂಖ್ಯಾವಾಂಶ್ಚ ಸದೋಜಿರೇ ।
ಕಾಮಿನೀಕಾಮಕೇಲಿಜ್ಞೋ ಯುವಾಪಿ ಸ್ಥವಿರಪ್ರಿಯಃ ॥ ೮ ॥
ಧರ್ಮಾರ್ಥೈರ್ಧಿತಕೋಶಶ್ಚ ಸಮೃದ್ಧಬಲವಾಹನಃ ।
ಸುಭಗಶ್ಚ ಸುರೂಪಶ್ಚ ಸುಮೇಧಾಃ ಸುಪ್ರಜಾಶ್ರಯಃ ॥ ೯ ॥
ಸ್ಥೈರ್ಯಧೈರ್ಯಸಮಾಪನ್ನೋ ದೇಶಕಾಲವಿಚಕ್ಷಣಃ ।
ಮಾನ್ಯಮಾನಪ್ರದೋ ನಿತ್ಯಂ ಸರ್ವದೂಷಣವರ್ಜಿತಃ ॥ ೧೦ ॥

---

೫. ಕೀರ್ತಿಯನ್ನೇ ತನ್ನ ಧನವನ್ನಾಗಿ ಎಣಿಸಿದ್ದನು; ದಾನಶೀಲನಾಗಿದ್ದನು; ಕುಶಾಗ್ರಬುದ್ಧಿಯುಳ್ಳವನು; ಬ್ರಾಹ್ಮಣರನ್ನೇ ತನ್ನ ದೈವವನ್ನಾಗಿ ತಿಳಿದಿದ್ದನು; ಯಾವಾಗಲೂ ಯಜ್ಞಗಳನ್ನು ಮಾಡಿ ಅವಭೃಥಸ್ನಾನಗಳಿಂದ ಒದ್ದೆಯಾದ ತಲೆಗೂದಲುಗಳುಳ್ಳವನಾಗಿದ್ದನು.

೬. ದೊಡ್ಡವರಲ್ಲಿ ನಮ್ರಭಾವದಿಂದಿರುತ್ತಿದ್ದನು. ನೀತಿಶಾಸ್ತ್ರವನ್ನು ತಿಳಿದವನು. ಸಕಲ ಕರ್ಮಗಳಲ್ಲಿಯೂ ಕುಶಲನು. ವಿದ್ಯಾಪಾರಂಗತನು. ಸದ್ಗುಣವಂತನು. ಗುಣವಂತರಲ್ಲಿ ಪ್ರೀತಿಯುಳ್ಳವನು.

೭. ಉಪಕಾರವನ್ನು ಮರೆಯದವನು. ಮಧುರವಾಗಿ ಮಾತನಾಡುವವನು. ಪಾಪಕೃತ್ಯಗಳನ್ನು ಮಾಡುವುದರಲ್ಲಿ ಹಿಂಜರಿಯುವವನು. ಸತ್ಯವಾಕ್ಯತತ್ಪರನು. ಶೌಚಾಚಾರಗಳಿಗೆ ತವರುಮನೆಯು. ಮಿತಭಾಷಿಯು. ಜಿತೇಂದ್ರಿಯನು.

೮. ಯುದ್ಧರಂಗದಲ್ಲಿ ಯಮನಿಗೆ ಸಮಾನನು. ಸಭಾಮಂಟಪದಲ್ಲಿ ಮಹಾವಿದ್ವಾಂಸನಾಗಿದ್ದನು. ಸ್ತ್ರೀಯರ ಕಾಮಚೇಷ್ಟೆಗಳೆಲ್ಲವನ್ನೂ ತಿಳಿದವನು. ಯೌವನಸ್ಥನಾದರೂ ವೃದ್ಧರಿಗೂ ಸಹ ಅತ್ಯಂತ ಪ್ರಿಯನಾಗಿದ್ದನು.

೯. ಧರ್ಮದಿಂದಲೇ ಹಣವನ್ನು ಸಂಪಾದಿಸಿ ತನ್ನ ಭಂಡಾರವನ್ನು ಅಭಿವೃದ್ಧಿಗೊಳಿಸಿದ್ದನು. ಯಥೇಚ್ಛವಾಗಿ ಸೈನ್ಯವನ್ನೂ ವಾಹನಗಳನ್ನೂ ಶೇಖರಿಸಿದ್ದನು. ತೇಜಸ್ವಿಯಾಗಿದ್ದನು. ಸುಂದರರೂಪನು. ತೀಕ್ಷ್ಣಪ್ರಜ್ಞೆಯುಳ್ಳವನು. ಪ್ರಜೆಗಳಿಗೆ ಉತ್ತಮಾಶ್ರಯನಾಗಿದ್ದನು.

೧೦. ಸ್ಥೈರ್ಯಧೈರ್ಯಗಳಿಂದ ಕೂಡಿದವನು. ದೇಶಕಾಲಗಳನ್ನು ತಿಳಿದ

ವಾಸುದೇವಾಂಘ್ರಿಯುಗಲೇ ಚೇತೋವೃತ್ತಿಂ ನಿಧಾಯ ಸಃ ।
ಚಕಾರ ರಾಜ್ಯಂ ನಿರ್ದ್ವಂದ್ವಂ ವಿಷ್ವಗೀತಿವಿವರ್ಜಿತಂ ॥ ೧೧ ॥
ಅಲಂಘ್ಯಶಾಸನಃ ಶ್ರೀಮಾನ್ವಿಷ್ಣುಭಕ್ತಿಪರಾಯಣಃ ।
ಭುಂಜಾನಃ ಪ್ರಚುರಾನ್ಭೋಗಾನ್ಸಮಂತಾದ್ವಿಷ್ಣುಸಾತ್ಕೃತಾನ್ ॥ ೧೨ ॥
ಹರೇರಾಯತನಾನ್ಯುಚ್ಚೈಃ ಪ್ರತಿಸೌಧಂ ಪದೇ ಪದೇ ।
ತಸ್ಯ ರಾಜ್ಯೇ ಸಮಭವನ್ಮಹಾಭಾಗ್ಯನಿಧೇಃ ಶಿವೇ ॥ ೧೩ ॥
ಗೋವಿಂದ ಗೋಪ ಗೋಪಾಲ ಗೋಪೀಜನಮನೋಹರ ।
ಗದಾಪಾಣೇ ಗುಣಾತೀತ ಗುಣಾಢ್ಯ ಗರುಡಧ್ವಜ ॥ ೧೪ ॥
ಕೇಶಿಹೃತ್ಕೈಟಭಾರಾತೇ ಕಂಸಾರೇ ಕಮಲಾಪತೇ ।
ಕೃಷ್ಣ ಕೇಶವ ಕಂಜಾಕ್ಷ ಕೀನಾಶಭಯನಾಶನ ॥ ೧೫ ॥
ಪುರುಷೋತ್ತಮ ಪಾಪಾರೇ ಪುಂಡರೀಕವಿಲೋಚನ ।
ಪೀತಕೌಶೇಯವಸನ ಪದ್ಮನಾಭ ಪರಾತ್ಪರ ॥ ೧೬ ॥

---

ವಿಚಕ್ಷಣನು. ಲೋಕಮಾನ್ಯರಾದವರಿಗೆ ನಿತ್ಯವೂ ಸನ್ಮಾನಗಳನ್ನು ಮಾಡುತ್ತಿದ್ದನು. ಸಮಸ್ತ ದುರಾಚಾರಗಳಿಂದಲೂ ದೂರನಾಗಿದ್ದನು.

೧೧. ಇಂತಹ ಮಹಾರಾಜನು ಶ್ರೀವಾಸುದೇವನ ಪಾದಪದ್ಮಗಳಲ್ಲಿಯೇ ನಿಶ್ಚಂಚಲವಾದ ಮನೋವೃತ್ತಿಯನ್ನು ತಳೆದವನಾಗಿ ಅಪ್ರತಿಮವೂ ಆರುವಿಧಗಳಾದ ಈತಿಬಾಧೆಗಳಿಂದ ರಹಿತವೂ ಆದ ರಾಜ್ಯವನ್ನು ಧರ್ಮದಿಂದ ಆಳುತ್ತಿದ್ದನು.

೧೨. ಆತನ ಆಜ್ಞೆಯು ಅನುಲ್ಲಂಘ್ಯವಾಗಿದ್ದಿತು. ಆತನು ಸರ್ವೈಶ್ವರ್ಯಾನ್ವಿತನೂ, ವಿಷ್ಣುಭಕ್ತಿಪರಾಯಣನೂ ಆಗಿ ತನ್ನ ರಾಜ್ಯವೈಭವಗಳನ್ನೆಲ್ಲ ತ್ರಿಕರಣಶುದ್ಧಿಯಾಗಿ ವಿಷ್ಣುವಿಗೆ ಸಮರ್ಪಿಸಿ ಆ ನೈವೇದ್ಯವನ್ನೇ ಅನುಭವಿಸುತ್ತಿದ್ದನು.

೧೩. ಎಲೌ ಪಾರ್ವತಿಯೆ! ಮಹಾಭಾಗ್ಯವಂತನಾದ ಆತನ ರಾಜ್ಯದಲ್ಲಿ ಹೆಜ್ಜೆಹೆಜ್ಜೆಗೂ ವಿಷ್ಣುವಿನ ದೇವಾಲಯಗಳೂ ಅವುಗಳ ಗೋಪುರಗಳೂ ಕಂಗೊಳಿಸುತ್ತಿದ್ದುವು.

೧೪–೨೧. "ಗೋವಿಂದ, ಗೋಪಾಲ, ಗೋಪಿಕಾಸ್ತ್ರೀಯರ ಮನಸ್ಸನ್ನು ಅಪಹರಿಸಿದವನೆ, ಗದಾಪಾಣಿಯೆ, ತ್ರಿಗುಣಾತೀತನೆ, ಸಕಲಕಲ್ಯಾಣಗುಣನಿಲಯನೆ, ಗರುಡಧ್ವಜನೆ, ಕೇಶಿಸಂಹಾರಕನೆ, ಕೈಟಭವೈರಿಯೆ, ಕಂಸಮರ್ದನನೆ, ಲಕ್ಷ್ಮೀರಮಣನೆ, ಶ್ರೀಕೃಷ್ಣನೆ, ಕೇಶವನೆ, ಕಮಲನೇತ್ರನೆ, ರಾಕ್ಷಸಭಯನಾಶಕನೆ, ಪುರುಷೋತ್ತಮನೆ, ಪಾಪದೂರನೆ, ಪುಂಡರೀಕನೇತ್ರನೆ, ಪೀತಾಂಬರಧಾರಿಯೆ, ಪದ್ಮನಾಭನೆ, ಪರವೆನಿಸಿದ ಪ್ರಕೃತಿಗೂ ಪರನಾದವನೆ, ಜನಾರ್ದನನೆ, ಲೋಕೇಶ್ವರನೆ, ಗಂಗಾಪ್ರವಾಹಕ್ಕೆ ಜನ್ಮಸ್ಥಾನವಾದವನೂ, ಜೀವರ ಸಂಸಾರ

ಜನಾರ್ದನ ಜಗನ್ನಾಥ ಜಾಹ್ನವೀಜಲಜನ್ಮಭೂಃ ।
ಜನ್ಮಿನಾಂ ಜನ್ಮಹರಣ ಜಂಜಪೂಕಾಘನಾಶನ ॥ ೧೭ ॥
ಶ್ರೀವತ್ಸವಕ್ಷಃ ಶ್ರೀಕಾಂತ ಶ್ರೀಕರ ಶ್ರೇಯಸಾಂ ನಿಧೇ ।
ಶ್ರೀರಂಗ ಶಾರ್ಙ್ಗಕೋದಂಡ ಶೌರೇ ಶೀತಾಂಶುಲೋಚನ ॥ ೧೮ ॥
ದೈತ್ಯಾರೇ ದಾನವಾರಾತೇ ದಾಮೋದರ ದುರಂತಕ ।
ದೇವಕೀಹೃದಯಾನಂದ ದಂದಶೂಕೇಶ್ವರೇಶಯ ॥ ೧೯ ॥
ವಿಷ್ಣೋ ವೈಕುಂಠನಿಲಯ ಬಾಣಾರೇ ವಿಷ್ಟರಶ್ರವ ।
ವಿಷ್ವಕ್ಸೇನ ವಿರಾಧಾರೇ ವನಮಾಲಿನ್ವನಪ್ರಿಯ ॥ ೨೦ ॥
ತ್ರಿವಿಕ್ರಮ ತ್ರಿಲೋಕೇಶ ಚಕ್ರಪಾಣೇ ಚತುರ್ಭುಜ ।
ಇತ್ಯಾದೀನಿ ಪವಿತ್ರಾಣಿ ನಾಮಾನಿ ಪ್ರತಿಮಂದಿರಂ ॥ ೨೧ ॥
ಸ್ತ್ರೀವೃದ್ಧಬಾಲಗೋಪಾಲವದನೋದೀರಿತಾನಿ ತು ।
ಶ್ರೂಯಂತೇ ಯತ್ರಕುತ್ರಾಪಿ ರಮ್ಯಾಣಿ ಮಧುವಿದ್ವಿಷಃ ॥ ೨೨ ॥
ಸುರಸಾ ಕಾನನಾನ್ಯೇವ ವಿಲೋಕ್ಯಂತೇ ಗೃಹೇ ಗೃಹೇ ।
ಚರಿತ್ರಾಣಿ ವಿಚಿತ್ರಾಣಿ ಪವಿತ್ರಾಣ್ಯಬ್ಧಿಜಾಪತೇಃ ॥ ೨೩ ॥

---

ವಸ್ತುಕಳೆಯುವವನೂ, ನಿನ್ನನ್ನು ಕುರಿತು ಜಪಗಳನ್ನು ಮಾಡುವವರ ಪಾತಕಗಳನ್ನು ನಾಶಮಾಡುವವನೂ ಆದವನೆ, ಶ್ರೀವತ್ಸವನ್ನು ವಕ್ಷಸ್ಥಳದಲ್ಲಿ ಧರಿಸಿದವನೆ, ಶ್ರೀಕಾಂತನೆ, ಐಶ್ವರ್ಯಪ್ರದನೆ, ಶ್ರೇಯಸ್ಸುಗಳ ನಿಧಿಯೆ, ಶ್ರೀರಂಗನಾಥನೆ, ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದವನೆ, ಶೌರಿಯೆ, ಚಂದ್ರನಂತೆ ಅಮೃತಮಯವಾದ ಕಟಾಕ್ಷವುಳ್ಳವನೆ, ದೈತ್ಯಶತ್ರುವೆ, ದಾನವವೈರಿಯೆ, ದಾಮೋದರನೆ, ದುಷ್ಟಸಂಹಾರಕನೆ, ದೇವಕಿಯ ಹೃದಯಕ್ಕೆ ಆಹ್ಲಾದವನ್ನುಂಟುಮಾಡುವವನೆ, ಫಣಿರಾಜನಾದ ಆದಿಶೇಷನ ಮೇಲೆ ಮಲಗಿರುವವನೆ, ಮಹಾವಿಷ್ಣುವೆ, ವೈಕುಂಠವಾಸಿಯೆ, ಬಾಣಾಸುರನನ್ನು ಗೆದ್ದವನೆ, ವಿಷ್ಟರಶ್ರವಸನೆ, ವಿಷ್ವಕ್ಸೇನನೆ, ವಿರಾಧವಿನಾಶನನೆ, ವನಮಾಲಿಯೆ, ತುಲಸೀಪ್ರಿಯನೆ, ತ್ರಿವಿಕ್ರಮನೆ, ತ್ರಿಲೋಕೇಶ್ವರನೆ, ಚಕ್ರಾಯುಧಧಾರಿಯೆ, ಚತುರ್ಭುಜನೆ— ಎಂಬ ಇವೇ ಮುಂತಾದ ಮಹಾವಿಷ್ಣುವಿನ ಪವಿತ್ರನಾಮಗಳು ದೇಶದ ಎಲ್ಲೆಡೆಗಳಲ್ಲಿಯೂ ದೇವಾಲಯಗಳಲ್ಲಿ ವಿಜೃಂಭಿಸುತ್ತ ಪ್ರತಿಧ್ವನಿಗಳನ್ನು ಕೊಡುತ್ತಿದ್ದುವು.

೨೨. ಸ್ತ್ರೀಯರು, ವೃದ್ಧರೂ, ಬಾಲಕರು, ಗೋಪಾಲಕರೇ ಮೊದಲಾದ ಎಲ್ಲರ ಮುಖಗಳಲ್ಲಿಯೂ ಹೊರಡುತ್ತಿರುವ ಮಧುವೈರಿಯ ನಾಮಾವಳಿಗಳ ಶಬ್ದಗಳು ಮನೋಹರವಾಗಿ ಎಲ್ಲೆಲ್ಲಿಯೂ ಕೇಳಿಬರುತ್ತಿದ್ದುವು.

೨೩. ಪ್ರತಿಯೊಂದು ಮನೆಯಲ್ಲಿಯೂ ತುಲಸಿಯ ತೋಟಗಳೂ, ಕಡಲ

ಸೌಧಭಿತ್ತಿಷು ದೃಶ್ಯಂತೇ ಚಿತ್ರಕೃನ್ನಿರ್ಮಿತಾನಿ ತು ।
ಋತೇ ಹರಿಕಥಾಯಾಸ್ತು ನಾಸ್ಯಾವರ್ತಾ ನಿಶಮ್ಯತೇ ॥ ೨೪ ॥
ಹರಿಣಾ ನೈವ ವಿಧ್ಯಂತೇ ಹರಿನಾಮಾಂಶಧಾರಿಣಃ ।
ತಸ್ಯ ರಾಜ್ಞೋ ಭಯಾದ್ವ್ಯಾಧೈರರಣ್ಯಸುಖಚಾರಿಣಃ ॥ ೨೫ ॥
ನ ಮತ್ಸ್ಯಾ ನೈವ ಕಮಠಾ ನ ವರಾಹಾಶ್ಚ ಕೇನಚಿತ್ ।
ಇತ್ಥಂ ತೇ ಕ್ವಾಪಿ ತದ್ಭೀತ್ಯಾ ಮತ್ಸ್ಯಮಾಂಸಾಶಿನಾಪಿ ವೈ ॥ ೨೬ ॥
ಅಪ್ಯುತ್ತಾನಶಯಾಸ್ತಸ್ಯ ರಾಷ್ಟ್ರೇಽಮಿತ್ರಜಿತಃ ಕ್ವಚಿತ್ ।
ಸ್ತನ್ಯಪಾನಂ ನ ಕುರ್ವಂತಿ ಸಂಪ್ರಾಪ್ಯ ಹರಿವಾಸರಂ ॥ ೨೭ ॥
ಪಶವೋಽಪಿ ತೃಣಾಹಾರಂ ಪರಿತ್ಯಜ್ಯ ಹರೇರ್ದಿನೇ ।
ಉಪೋಷಣಪರಾ ಜಾತಾ ಅನ್ಯೇಷಾಂ ಕಾ ಕಥಾ ನೃಣಾಂ ॥ ೨೮ ॥
ಮಹಾಮಹೋತ್ಸವಾಃ ಸರ್ವೈಃ ಪುರೌಕೋಭಿರ್ವಿತನ್ಯತೇ ।
ತಸ್ಮಿನ್ನೃಶಾಸತಿ ಭುವಂ ಸಂಪ್ರಾಪ್ತೇ ಹರಿವಾಸರೇ ॥ ೨೯ ॥

ಮಗಳೊಡೆಯನ ಪವಿತ್ರಗಳೂ, ವಿಚಿತ್ರಗಳೂ ಆದ ಲೀಲೆಗಳ ಅನುವಾದಗಳೂ ಕಾಣುತ್ತಿದ್ದುವು.

೨೪. ಮಹಡಿಗಳ ಗೋಡೆಗಳಲ್ಲಿಯೂ ಬೋದಿಗೆಗಳಲ್ಲಿಯೂ ಮಹಾವಿಷ್ಣುವಿನ ಲೀಲೆಯ ಚಿತ್ರಗಳು ಮತ್ತು ಪುತ್ಥಳಿಗಳೇ ಕಾಣುತ್ತಿದ್ದುವು. ಯಾವ ಮನೆಯನ್ನು ಹೊಕ್ಕರೂ ಹರಿಕಥೆ ಪುರಾಣಶ್ರವಣ ಮತ್ತು ಕೀರ್ತನಗಳಲ್ಲದೆ ಬೇರೆ ಯಾವ ಶಬ್ದವೂ ಕೇಳುತ್ತಿರಲಿಲ್ಲ.

೨೫. ಆ ರಾಜನ ಭಯದಿಂದ ಬೇಡರೂ ಕಾಡುಗಳಲ್ಲಿ ಸಂಚರಿಸುತ್ತಿದ್ದ ಜಿಂಕೆಗಳನ್ನು ಕೊಲ್ಲುತ್ತಿರಲಿಲ್ಲ. ಕಾರಣವೇನೆಂದರೆ ಜಿಂಕೆಯು "ಹರಿಣ" ಎಂಬ ಹೆಸರಿನಲ್ಲಿ ಮಹಾವಿಷ್ಣುವಿನ ನಾಮವಾದ "ಹರಿ" ಎಂಬುದು ಒಂದು ಭಾಗವಾಗಿದ್ದಿತಷ್ಟೆ!

೨೬. ಮತ್ಸ್ಯಮಾಂಸಗಳನ್ನು ಸಹಜವಾಗಿ ತಿನ್ನುವವನೂ ಆ ರಾಜನ ಭಯದಿಂದ ಶ್ರೀಹರಿಯ ಅವತಾರಗಳನ್ನು ಜ್ಞಾಪಕಪಡಿಸತಕ್ಕ ಮತ್ಸ್ಯಗಳನ್ನಾಗಲಿ, ಆಮೆಗಳನ್ನಾಗಲಿ, ಹಂದಿಗಳನ್ನಾಗಲಿ ಕೊಲ್ಲುವ ಹಾಗಿರಲಿಲ್ಲ.

೨೭. ಶತ್ರುಸೂದನನಾದ ಆತನ ರಾಜ್ಯದಲ್ಲಿ ನಿದ್ರೆಯಿಂದೆಚ್ಚತ್ತ ಹಸುಗೂಸುಗಳೂ ಸಹ ಹರಿವಾಸರವು ಪ್ರಾಪ್ತವಾಗಲು ಎಂದಿಗೂ ತಾಯಿಯರ ಸ್ತನ್ಯವನ್ನು ಪಾನಮಾಡುತ್ತಿರಲಿಲ್ಲ.

೨೮. ಹರಿದಿನದಲ್ಲಿ ಪಶುಗಳೂ ಸಹ ಹುಲ್ಲುಮೇಯುವುದನ್ನು ಬಿಟ್ಟು ಉಪವಾಸವನ್ನು ಮಾಡುತ್ತಿದ್ದುವೆಂದ ಮೇಲೆ ಉತ್ತಮ ಜೀವರೆನಿಸಿದ ಮನುಷ್ಯರ ಮಾತನ್ನು ಬೇರೆ ಹೇಳಲು ಆವಶ್ಯಕತೆಯೇನು?

೨೯. ಹೀಗೆ ಆ ಮಹಾರಾಜನು ರಾಜ್ಯಭಾರವನ್ನು ಮಾಡುತ್ತಿರಲು

ಸ ಏವ ದಂಡ್ಯೋಽಭೂತ್ತಸ್ಯ ರಾಜ್ಞೋಽಮಿತ್ರಜಿತಃ ಕ್ಷಿತೌ ।
ಯೋ ವಿಷ್ಣುಭಕ್ತಿರಹಿತಃ ಪ್ರಾಣೈರಪಿ ಧನೈರಪಿ ॥ ೩೦ ॥
ಅಂತ್ಯಜಾ ಅಪಿ ತದ್ರಾಷ್ಟ್ರೇ ಶಂಖಚಕ್ರಾಂಕಧಾರಿಣಃ ।
ಸಂಪ್ರಾಪ್ಯ ವೈಷ್ಣವೀಂ ದೀಕ್ಷಾಂ ದೀಕ್ಷಿತಾ ಇವ ಸಂಬಭುಃ ॥ ೩೧ ॥
ಶುಭಾನಿ ಯಾನಿ ಕರ್ಮಾಣಿ ಕ್ರಿಯಂತೇಽನುದಿನಂ ಜನೈಃ ।
ವಾಸುದೇವೇ ಸಮರ್ಪ್ಯಂತೇ ತಾನಿ ತೈರಫಲೇಪ್ಸುಭಿಃ ॥ ೩೨ ॥
ವಿನಾ ಮುಕುಂದಂ ಗೋವಿಂದಂ ಪರಮಾನಂದಮಚ್ಯುತಂ ।
ನಾನ್ಯೋ ಜಪ್ಯೇತ ಮನ್ಯೇತ ನ ಭಜ್ಯೇತ ಜನೈಃ ಕ್ವಚಿತ್ ॥ ೩೩ ॥
ಕೃಷ್ಣ ಏವ ಪರೋ ದೇವಃ ಕೃಷ್ಣ ಏವ ಪರಾ ಗತಿಃ ।
ಕೃಷ್ಣ ಏವ ಪರೋ ಬಂಧುಸ್ತಸ್ಯಾಸೀದವನೀಪತೇಃ ॥ ೩೪ ॥
ಏವಂ ತಸ್ಮಿನ್ಮಹೀಪಾಲೇ ರಾಜ್ಯಂ ಸಂಯಕ್ಪ್ರಶಾಸತಿ ।
ಏಕದಾ ನಾರದಃ ಶ್ರೀಮಾಂಸ್ತಂ ದಿದೃಕ್ಷುಃ ಸಮಾಯಯೌ ॥ ೩೫ ॥

---

ಹರಿವಾಸರವು ಬಂದ ದಿನಗಳಲ್ಲೆಲ್ಲ ರಾಜಧಾನಿಯ ಜನರೆಲ್ಲರೂ ಒಟ್ಟುಗೂಡಿ ಶ್ರೀಮನ್ನಾರಾಯಣನಿಗೆ ಅಮೋಘವಾದ ಮಹೋತ್ಸವವನ್ನು ನಡೆಸುತ್ತಿದ್ದರು.

೩೦. ರಾಜ್ಯದಲ್ಲಿ ಪ್ರಾಣವನ್ನು ಧನವನ್ನೂ ತ್ಯಜಿಸಿಯಾದರೂ ಯಾವನು ವಿಷ್ಣುಭಕ್ತಿಯನ್ನು ಮಾಡುತ್ತಿರಲಿಲ್ಲವೋ, ಆ ಮನುಷ್ಯನೊಬ್ಬನೇ ಶತ್ರುನಾಶಕನಾದ ಆ ರಾಜನಿಗೆ ಶಿಕ್ಷಾರ್ಹನಾಗುತ್ತಿದ್ದನು.

೩೧. ಆ ರಾಜ್ಯದಲ್ಲಿ ವಾಸಿಸುತ್ತಿದ್ದ ಅಂತ್ಯಜರೂ ಸಹ ಶಂಖಚಕ್ರಗಳೇ ಮುಂತಾದ ಮುದ್ರೆಗಳನ್ನು ಧರಿಸುತ್ತಿದ್ದರು. ವಿಷ್ಣುಭಕ್ತಿಯೆಂಬ ದೀಕ್ಷೆಯನ್ನು ಕೈಕೊಂಡು ಅವರು ಯಜ್ಞಗಳನ್ನು ಮಾಡುವ ದೀಕ್ಷಿತರಂತೆಯೇ ತೇಜೋವಂತರಾಗಿದ್ದರು.

೩೨. ರಾಷ್ಟ್ರದ ಜನರು ದಿನದಿನದಲ್ಲಿಯೂ ಯಾವ ಶುಭಕಾರ್ಯಗಳನ್ನು ಮಾಡುತ್ತಿದ್ದರೋ, ಅವುಗಳನ್ನೆಲ್ಲ ಫಲೇಚ್ಛಾರಹಿತರಾಗಿ ವಾಸುದೇವನಿಗೆ ಸಮರ್ಪಣೆಮಾಡಿ ನಿಶ್ಚಿಂತರಾಗಿರುತ್ತಿದ್ದರು.

೩೩. ಗೋವಿಂದನೂ, ಪರಮಾನಂದವಿಗ್ರಹನೂ, ನಾಶರಹಿತನೂ ಆದ ಮುಕುಂದನೊಬ್ಬನನ್ನುಳಿದು ಯಾವ ಮನುಷ್ಯನೂ ಎಂದೂ ಬೇರೆ ದೈವವನ್ನು ಸೇವಿಸುತ್ತಿರಲಿಲ್ಲ; ಹೆಸರನ್ನು ಜಪಿಸುತ್ತಿರಲಿಲ್ಲ; ಮನಸ್ಸಿನಲ್ಲಿಯೂ ಚಿಂತಿಸುತ್ತಿರಲಿಲ್ಲ.

೩೪. ಆ ಭೂಪಾಲನಿಗೂ ಸಹ ಶ್ರೀಕೃಷ್ಣನೇ ಪರಾತ್ಪರದೈವವು. ಆತನೇ ಸದ್ಗತಿದಾಯಕನು. ಆತನೇ ಸರ್ವೋತ್ತಮನಾದ ಬಂಧುವೂ ಆಗಿದ್ದನು.

೩೫. ಇಂತು ಆ ಮಹಾರಾಜನು ತನ್ನ ರಾಜ್ಯವನ್ನು ಧರ್ಮದಿಂದ

ರಾಜ್ಞಾ ಸಮರ್ಚಿತಃ ಸೋಽಥ ಮಧುಪರ್ಕವಿಧಾನತಃ ।
ನಾರದೋ ವರ್ಣಯಾಮಾಸ ತಮಮಿತ್ರಜಿತಂ ನೃಪಂ ॥ ೩೬ ॥

ನಾರದ ಉವಾಚ :—

ಧನ್ಯೋಽಸಿ ಕೃತಕೃತ್ಯೋಽಸಿ ಮಾನ್ಯೋಽಪ್ಯಸಿ ದಿವೌಕಸಾಂ ।
ಸರ್ವಭೂತೇಷು ಗೋವಿಂದಂ ಪರಿಪಶ್ಯನ್ವಿಶಾಂಪತೇ ॥ ೩೭ ॥
ಯೋ ವೇದಪುರುಷೋ ವಿಷ್ಣುರ್ಯೋ ಯಜ್ಞಪುರುಷೋ ಹರಿಃ ।
ಯೋಽಂತರಾತ್ಮಾಸ್ಯ ಜಗತಃ ಕರ್ತಾ ಹರ್ತಾವಿತಾ ವಿಭುಃ ॥ ೩೮ ॥
ತಸ್ಮಿಯಂ ಪಶ್ಯತೋ ವಿಶ್ವಂ ತವ ಭೂಪಾಲಸತ್ತಮ ।
ದರ್ಶನಂ ಪ್ರಾಪ್ಯ ಶುಭದಂ ಶುಚಿತ್ವಮಗಮಂ ಪರಂ ॥ ೩೯ ॥
ಏಕ ಏವ ಹಿ ಸಾರೋಽತ್ರ ಸಂಸಾರೇ ಕ್ಷಣಭಂಗುರೇ ।
ಕಮಲಾಕಾಂತಪಾದಾಬ್ಜಭಕ್ತಿಭಾವೋಽಖಿಲಪ್ರದಃ ॥ ೪೦ ॥
ಪರಿತ್ಯಜ್ಯ ಹಿ ಯಃ ಸರ್ವಂ ವಿಷ್ಣುಮೇಕಂ ಸದಾ ಭಜೇತ್ ।
ಸುಮೇಧಸೋ ಭಜಂತೇ ತಂ ಪರಾರ್ಥಾಃ ಸರ್ವ ಏವ ಹಿ ॥ ೪೧ ॥

ಪಾಲಿಸುತ್ತಿರಲು ಒಮ್ಮೆ ನಾರದಮಹರ್ಷಿಯು ಆತನನ್ನು ನೋಡಬೇಕೆಂಬ ಇಚ್ಛೆಯಿಂದ ಅರಮನೆಗೆ ಚಿತ್ತೈಸಿದನು.

೩೬. ಮಧುಪರ್ಕದಾನವೇ ಮೊದಲಾದುವುಗಳಿಂದ ಕೂಡಿದ ಆ ರಾಜನ ಸತ್ಕಾರವನ್ನು ಸ್ವೀಕರಿಸಿ ನಾರದಮುನಿಯು ಅಂತರ್ಬಹಿಶ್ಶತ್ರುಗಳನ್ನು ನಿಗ್ರಹಿಸಿದ್ದ ಆತನನ್ನು ಅನೇಕ ವಿಧವಾಗಿ ಸ್ತೋತ್ರಮಾಡತೊಡಗಿದನು.

೩೭. ನಾರದನು ಹೇಳುತ್ತಾನೆ:—ರಾಜೇಂದ್ರನೆ! ಸಕಲ ಭೂತಗಳಲ್ಲಿಯೂ ಗೋವಿಂದನೇ ಅಂತರ್ಯಾಮಿಯಾಗಿರುವ ತತ್ತ್ವಾರ್ಥವನ್ನು ತಿಳಿದಿರುವ ನೀನೇ ಧನ್ಯನು. ಕೃತಾರ್ಥನು. ದೇವತೆಗಳಿಗೂ ಸಹ ನೀನು ಪೂಜ್ಯನಾಗಿರುವೆ.

೩೮–೩೯. ಯಾವ ಮಹಾವಿಷ್ಣುವು ವೇದಪುರುಷನಾಗಿರುವನೊ, ಯಾವ ಶ್ರೀಹರಿಯು ಯಜ್ಞಪುರುಷನೆನಿಸಿರುವನೊ, ಯಾವನು ಅಖಿಲ ಬ್ರಹ್ಮಾಂಡಕ್ಕೂ ಅಂತರಾತ್ಮನಾಗಿರುವನೊ. ಯಾವ ಸ್ವಾಮಿಯು ಪ್ರಪಂಚದ ಸೃಷ್ಟಿ, ಸಂಹಾರ, ಸ್ಥಿತಿಗಳನ್ನು ಮಾಡುತ್ತಿರುವನೊ, ಅಂತಹ ಪರಮಾತ್ಮನ ಸಾನ್ನಿಧ್ಯವನ್ನೇ ಎಲ್ಲೆಲ್ಲಿಯೂ ಕಾಣುತ್ತಿರುವ ಭೂಪಾಲಕೋತ್ತಮನಾದ ನಿನ್ನ ದರ್ಶನವನ್ನು ಪಡೆದು ನಾನೂ ನಿರುಪಮವಾದ ಶುಚಿತ್ವವನ್ನು ಪಡೆದೆನು. ವೈಷ್ಣವರ ದರ್ಶನವೇ ಮಂಗಳಕರವಾದುದಲ್ಲವೆ.

೪೦. ನಿಮಿಷನಿಮಿಷಕ್ಕೂ ನಾಶ ಹೊಂದುತ್ತಿರುವ ಈ ಸಂಸಾರದಲ್ಲಿ ನಿಜ ವಾದ ಸಾರವೆಂದರೆ ಸಕಲಾಭೀಷ್ಟಪ್ರದನಾದ ಲಕ್ಷ್ಮೀರಮಣನ ಪಾದಕಮಲ ಗಳಲ್ಲಿ ಮಾಡಬೇಕಾದ ಭಕ್ತಿಭಾವವೊಂದೇ ಆಗಿರುವುದು.

೪೧. ಯಾವನು ಸಕಲವನ್ನೂ ತ್ಯಾಗಮಾಡಿ ನಿರಂತರವೂ ವಿಷ್ಣುವೊಬ್ಬ

**ಹೃಷೀಕೇಶೇ ಹೃಷೀಕಾಣಿ ಯಸ್ಯ ಸ್ಥೈರ್ಯಂ ಗತಾನ್ಯಹೋ ।**
**ಸ ಏವ ಸ್ಥೈರ್ಯಮಾಪ್ನೋತಿ ಬ್ರಹ್ಮಾಂಡೇಽತೀವಚಂಚಲೇ ॥ ೪೨ ॥**
**ಯೌವನಂ ಧನಮಾಯುಷ್ಯಂ ಪದ್ಮಿನೀಜಲಬಿಂದುವತ್ ।**
**ಅತೀವ ಚಪಲಂ ಜ್ಞಾತ್ವಾಽಚ್ಯುತಮೇಕಂ ಸಮಾಶ್ರಯೇತ್ ॥ ೪೩ ॥**
**ವಾಚಿ ಚೇತಸಿ ಸರ್ವತ್ರ ಯಸ್ಯ ದೇವೋ ಜನಾರ್ದನಃ ।**
**ಸ ಏವ ಸರ್ವದಾ ವಂದ್ಯೋ ನರರೂಪೀ ಜನಾರ್ದನಃ ॥ ೪೪ ॥**
**ನಿರ್ವ್ಯಾಜಪ್ರಣಿಧಾನೇನ ಶೀಲಯಿತ್ವಾ ಶ್ರಿಯಃಪತಿಂ ।**
**ಪುರುಷೋತ್ತಮತಾಂ ಕೋ ನ ಪ್ರಾಪ್ತವಾನಿಹ ಭೂತಲೇ ॥ ೪೫ ॥**
**ಅನಯಾ ವಿಷ್ಣುಭಕ್ತ್ಯಾ ತೇ ಸಂತುಷ್ಟೇಂದ್ರಿಯಮಾನಸಃ ।**
**ಉಪಕರ್ತುಮನಾ ಬ್ರೂಯಾಂ ತನ್ನಿಶಾಮಯ ಭೂಪತೇ ॥ ೪೬ ॥**
**ಬಾಲಾ ವಿದ್ಯಾಧರಸುತಾ ನಾಮ್ನಾ ಮಲಯಗಂಧಿನೀ ।**
**ಕ್ರೀಡಂತೀ ಪಿತುರಾಕ್ರೀಡೇ ಹೃತಾ ಕಂಕಾಲಕೇತುನಾ ।**
**ಕಪಾಲಕೇತುಪುತ್ರೇಣ ದಾನವೇನ ಬಲೀಯಸಾ ॥ ೪೭ ॥**

---

ನನ್ನೇ ಧ್ಯಾನಮಾಡುತ್ತಿರುವನೊ, ಆ ಬುದ್ಧಿಶಾಲಿಯನ್ನು ಸಕಲ ಪದಾರ್ಥಗಳೂ ತಾನಾಗಿಯೇ ಆಶ್ರಯಿಸಿ ಬಂದು ಸೇವಿಸುತ್ತಿರುವುವು.

೪೨. ಯಾವ ಪುಣ್ಯಾತ್ಮನ ಸಕಲೇಂದ್ರಿಯಗಳೂ ಮಹಾವಿಷ್ಣುವಿನಲ್ಲಿಯೇ ಏಕಾಗ್ರತೆಯಿಂದ ಸ್ಥಿರವಾಗಿ ನಿಂತಿರುವುವೊ, ಅವನೊಬ್ಬನೇ ಅತ್ಯಂತ ಚಂಚಲವಾದ ಈ ಬ್ರಹ್ಮಾಂಡದಲ್ಲಿ ಚಿತ್ತಸ್ಥೈರ್ಯವನ್ನು ಪಡೆದವನು.

೪೩. ಯೌವನ, ಧನ, ಆಯುಷ್ಯ—ಎಲ್ಲವೂ ಕಮಲದಳದಲ್ಲಿ ಬಿದ್ದ ನೀರಿನ ಹನಿಯಂತೆ ಅತ್ಯಂತ ಚಪಲವಾದುದೆಂಬ ತತ್ವವನ್ನು ತಿಳಿದು ಅಚ್ಯುತನೊಬ್ಬನನ್ನೇ ಗತಿದಾಯಕನನ್ನಾಗಿ ಆಶ್ರಯಿಸಬೇಕು.

೪೪–೪೫. ಸರ್ವಕಾಲದಲ್ಲಿಯೂ ಯಾವನ ಬಾಯಿಯಲ್ಲಿ ಹರಿನಾಮವಿರುವುದೊ, ಚಿತ್ತದಲ್ಲಿ ಹರಿಮೂರ್ತಿಯಿರುವುದೊ, ಆತನೇ ಸರ್ವಕಾಲಗಳಲ್ಲಿಯೂ ವಂದನಾರ್ಹನು. ಆತನು ನಿಜವಾಗಿಯೂ ಮನುಷ್ಯರೂಪವನ್ನು ಧರಿಸಿದ ಮಹಾವಿಷ್ಣುವೆಂದು ತಿಳಿಯಬೇಕು. ಫಲಾಪೇಕ್ಷಾರಹಿತವಾದ ಪರಿಚರ್ಯೆಯಿಂದ ಶ್ರೀಯಃಪತಿಯನ್ನು ಸಂತೋಷಗೊಳಿಸಿದ ಯಾವ ಮನುಷ್ಯನು ತಾನೆ ಭೂಲೋಕದಲ್ಲಿ ಪುರುಷೋತ್ತಮನ ಸಾರೂಪ್ಯಮೋಕ್ಷವನ್ನು ಪಡೆದಿರುವುದಿಲ್ಲ?

೪೬. ಎಲೈ ಭೂಪಾಲಕನೆ! ಈ ನಿನ್ನ ವಿಷ್ಣುಭಕ್ತಿಯಿಂದ ನನ್ನ ಇಂದ್ರಿಯಗಳೂ ಮನಸ್ಸೂ ಬಹಳ ಸಂತೋಷಗೊಂಡಿರುವುವು. ಆದುದರಿಂದ ನಿನಗೆ ಉಪಕಾರವನ್ನು ಮಾಡಲು ಒಂದು ಮಾತನ್ನು ಹೇಳುವೆನು. ಅದನ್ನು ಶ್ರದ್ಧೆಯಿಂದ ಕೇಳು.

೪೭. ವಿದ್ಯಾಧರನ ಮಗಳಾದ ಮಲಯಗಂಧಿನಿಯೆಂಬೋರ್ವ ಕನ್ಯೆಯು

**ಆಗಾಮಿನ್ಯಾಸ್ತೃತೀಯಾಯಾಂ ತಸ್ಯಾಃ ಪಾಣಿಗ್ರಹಃ ಕಿಲ ।**
**ಪಾತಾಲೇ ಚಂಪಕಾವತ್ಯಾಂ ನಗರ್ಯಾಂ ಸಾಸ್ತಿ ಸಾಂಪ್ರತಂ ॥ ೪೮ ॥**
**ಹಾಟಕೇಶಾತ್ಸಮಾಗಚ್ಛಂಸ್ತಯಾಹಂ ಸಾಶ್ರುನೇತ್ರಯಾ ।**
**ದೃಷ್ಟಃ ಪ್ರಣಮ್ಯ ವಿಜ್ಞಪ್ತೋ ಯಥಾ ತಚ್ಛ ನಿಶಾಮಯ ॥ ೪೯ ॥**
**ಬ್ರಹ್ಮಚಾರಿನ್ಮುನಿಶ್ರೇಷ್ಠ ಗಂಧಮಾದನಶೈಲತಃ ।**
**ಬಾಲಕ್ರೀಡನಕಾಸಕ್ತಾಂ ಮೋಹಯಿತ್ವಾ ನಿನಾಯ ಸಃ ॥ ೫೦ ॥**
**ಕಂಕಾಲಕೇತುರ್ದುರ್ವೃತ್ತೋ ದುರ್ಜಯೋಽನ್ಯಾಸ್ತ್ರಘಾತತಃ ।**
**ಸ್ವಸ್ಯ ತ್ರಿಶೂಲಘಾತೇನ ಮ್ರಿಯತೇ ನಾನ್ಯಥಾ ರಣೇ ॥ ೫೧ ॥**
**ಜಗತ್ಪಯರ್ಾಕುಲೀಕೃತ್ಯ ನಿದ್ರಾತ್ಯತ್ರ ವಿನಿರ್ಭಯಃ ॥ ೫೨ ॥**
**ಯದಿ ಕೋಽಪಿ ಕೃತಜ್ಞೋ ಮಾಂ ಹತ್ವೇಮಂ ದುಷ್ಟದಾನವಂ ।**
**ಮದ್ದತ್ತೇನ ತ್ರಿಶೂಲೇನ ನಯೇದ್ಭದ್ರಂ ಭವೇನ್ಮುನೇ ॥ ೫೩ ॥**

---

ತನ್ನ ತಂದೆಯ ಉದ್ಯಾನವನದಲ್ಲಿ ಕ್ರೀಡಿಸುತ್ತಿರಲು ಬಲಶಾಲಿಯೂ ಕಪಾಲಕೇತುವಿನ ಮಗನೂ ಆದ ಕಂಕಾಲಕೇತುವೆಂಬ ರಾಕ್ಷಸನಿಂದ ಬಲಾತ್ಕಾರವಾಗಿ ಅಪಹರಿಸಲ್ಪಟ್ಟಳು.

೪೮. ನಾಳಿನ ತೃತೀಯೆಯ ದಿನವೇ ಆ ಕನ್ಯೆಗೆ ಪಾಣಿಗ್ರಹಣವು ನಿಶ್ಚಿತವಾಗಿದ್ದಿತು. ಅವಳು ಈಗ ಪಾತಾಳಲೋಕದಲ್ಲಿ ಚಂಪಕಾವತಿಯೆಂಬ ಪಟ್ಟಣದಲ್ಲಿ ಬಂಧಿತಳಾಗಿರುವಳು.

೪೯. ಹಾಟಕೇಶ್ವರನ ದರ್ಶನವನ್ನು ಮಾಡಿಕೊಂಡು ನಾನು ಹಿಂದಿರುಗುತ್ತಿರಲು ಆ ಕನ್ಯೆಯು ನನ್ನನ್ನು ಕಂಡು ಕಣ್ಣೀರು ಸುರಿಸುತ್ತ ನನಗೆ ಪ್ರಣಾಮವನ್ನು ಮಾಡಿ ಹೇಳಿದ ಸಂದೇಶವನ್ನು ಕೇಳು.

೫೦. "ಬ್ರಹ್ಮಚಾರಿಯಾದ ಮುನಿವರ್ಯನೆ! ಗಂಧಮಾದನಪರ್ವತದಲ್ಲಿ ನಾನು ಬಾಲಕ್ರೀಡೆಗಳಲ್ಲಿ ಆಸಕ್ತಳಾಗಿರಲು ಈ ರಾಕ್ಷಸನು ನನ್ನನ್ನು ಮೋಸಗೊಳಿಸಿ ಇಲ್ಲಿಗೆ ಕರೆದುತಂದಿರುವನು.

೫೧. ದುರಾಚಾರನಿರತನಾದ ಈ ಕಂಕಾಲಕೇತುವು ಬೇರಾವ ಅಸ್ತ್ರಶಸ್ತ್ರಗಳಿಂದಲೂ ಮರಣವನ್ನು ಹೊಂದುವುದಿಲ್ಲ. ಯುದ್ಧರಂಗದಲ್ಲಿ ತನ್ನ ತ್ರಿಶೂಲದ ಪೆಟ್ಟಿನಿಂದಲೇ ಈ ದಾನವನು ಸಾಯಬೇಕಲ್ಲದೆ ಬೇರೆ ಉಪಾಯವಿಲ್ಲ.

೫೨-೫೩. ಇವನು ಹದಿನಾಲ್ಕು ಲೋಕಗಳನ್ನೂ ಕ್ಷೋಭಗೊಳಿಸಿ ಬಂದು ಇಲ್ಲಿ ನಿರ್ಭೀತನಾಗಿ ನಿದ್ರೆಮಾಡುತ್ತಿರುವನು. ಯಾವ ಮಹಾತ್ಮನಾದರೂ ಈ ದುಷ್ಟದಾನವನನ್ನು ನಾನು ಕೊಡುವ ಈ ತ್ರಿಶೂಲದಿಂದ ಸಂಹರಿಸಿ ನನ್ನನ್ನು ಬಿಡಿಸಿಕೊಂಡುಹೋದರೆ ನಮ್ಮಿಬ್ಬರಿಗೂ ಮಂಗಳವಾದೀತು.

**ಯದತ್ರೋಪಚಿಕೀರ್ಷುಸ್ತ್ವಂ ರಕ್ಷ ಮಾಂ ದುಷ್ಟದಾನವಾತ್ ।**
**ಮಮಾಪಿ ಹಿ ವರೋ ದತ್ತೋ ಭಗವತ್ಯಾ ಮಹಾಮುನೇ ॥ ೩೪ ॥**
**ವಿಷ್ಣುಭಕ್ತೋ ಯುವಾ ಧೀಮಾನ್ಪತಿಸ್ತ್ವಾಂ ಪರಿಣೇಷ್ಯತಿ ।**
**ಆತೃತೀಯಾ ತಿಥಿ ಯಥಾ ತದ್ವಾಕ್ಯಂ ತಥ್ಯತಾಂ ವ್ರಜೇತ್ ॥ ೩೫ ॥**
**ತಥಾ ನಿಮಿತ್ತಮಾತ್ರಂ ತ್ವಂ ಭವ ಯತ್ನಂ ಸಮಾಚರ ।**
**ಇತಿ ತದ್ವಚನಾದ್ರಾಜನ್ವಿಷ್ಣುಭಕ್ತಿಪರಾಯಣಂ ।**
**ಯುವಾನಂ ಚಾಪಿ ಧೀಮಂತಂ ತ್ವಮನುಪ್ರಾಪ್ತವಾನಹಂ ॥ ೩೬ ॥**
**ತದ್ಗಚ್ಛ ಕಾರ್ಯಸಿದ್ಧ್ಯೈ ತ್ವಂ ಹತ್ವಾ ತಂ ದುಷ್ಟದಾನವಂ ।**
**ಆನಯಾಶು ಮಹಾಭಾಗೋ ಶುಭಾಂ ಮಲಯಗಂಧಿನೀಂ ॥ ೩೭ ॥**
**ಸಾ ತು ವಿದ್ಯಾಧರೀ ಜೀವೇದ್ವಿಲೋಕ್ಯ ತ್ವಾಂ ನರೇಶ್ವರ ।**
**ಪಾರ್ವತೀವಚನಾದ್ದುಷ್ಟಂ ಘಾತಯಿಷ್ಯಸ್ಯಯತ್ನತಃ ॥ ೩೮ ॥**
**ಇತಿ ನಾರದವಾಕ್ಯಂ ಸ ನಿಶಮ್ಯಾಮಿತ್ರಜಿನ್ನೃಪಃ ।**
**ಅನಲ್ಪೋತ್ಕಲಿಕೋ ಜಾತೋ ವಿದ್ಯಾಧರಸುತಾಂ ಪ್ರತಿ ॥ ೩೯ ॥**

---

೩೪–೩೫. ನೀನು ನನಗೆ ಉಪಕಾರವನ್ನು ಮಾಡಲೆಳಸುವೆಯಾದರೆ ನನ್ನನ್ನು ಈ ಕ್ರೂರರಾಕ್ಷಸನ ಕೈಯಿಂದ ಸಂರಕ್ಷಿಸು. ಮಹಾಮುನಿಯೆ! ನನಗೂ ಸಹ ಭಗವತಿಯಿಂದ ಒಂದು ವರವು ದತ್ತವಾಗಿರುವುದು : 'ಮಗಳೆ! ವಿಷ್ಣುಭಕ್ತನೂ ಬುದ್ಧಿಶಾಲಿಯೂ ಆದ ಯುವಕನೊಬ್ಬನು ನಿನ್ನನ್ನು ಮದುವೆಯಾಗುವನು. ಮುಂದಿನ ತದಿಗೆಯು ಬರುವಷ್ಟರಲ್ಲಿಯೇ ಈ ನನ್ನ ವಾಕ್ಯವು ನಿಜವೆಂಬುದು ನಿನಗೆ ತಿಳಿಯುವುದು.'

೩೬. ಆದುದರಿಂದ ನೀನು ಈ ಕಾರ್ಯದಲ್ಲಿ ನಿಮಿತ್ತ ಮಾತ್ರವಾಗಿದ್ದು ನನ್ನ ಬಿಡುಗಡೆಗೆ ಪ್ರಯತ್ನವನ್ನು ಮಾಡು.'' ಎಲೈ ರಾಜನೆ! ಇಂತೆಂದ ಆಕೆಯ ಮಾತುಗಳನ್ನನುಸರಿಸಿ ನಾನು ವಿಷ್ಣುಭಕ್ತಿಪರಾಯಣನೂ, ಯೌವನವಂತನೂ ಬುದ್ಧಿವಂತನೂ ಆದ ನಿನ್ನನ್ನು ನೋಡಲು ಬಂದಿರುವೆನು.

೩೭. ಎಲೈ ಮಹಾಪರಾಕ್ರಮಿಯೆ! ಈಗ ನೀನು ಕಾರ್ಯಸಿದ್ಧಿಗಾಗಿ ಹೊರಡು. ದುಷ್ಟನಾದ ಆ ರಾಕ್ಷಸನನ್ನು ಸಂಹಾರಮಾಡಿ ಸರ್ವಾಂಗಸುಂದರಿಯಾದ ಮಲಯಗಂಧಿನಿಯನ್ನು ಶೀಘ್ರವಾಗಿ ಬಿಡಿಸಿಕೊಂಡುಬಾ.

೩೮. ರಾಜೇಶ್ವರಾ! ಆ ವಿದ್ಯಾಧರಕನ್ಯೆಯೂ ಸಹ ನಿನ್ನನ್ನು ಕಂಡು ಜೀವಿತಾಶೆಯುಳ್ಳವಳಾಗುವಳು. ಪಾರ್ವತೀದೇವಿಯ ವರಬಲದಿಂದ ಆ ದುಷ್ಟನು ಅನಾಯಾಸವಾಗಿಯೇ ನಾಶವಾಗುವನು.

೩೯. ಶತ್ರುಸಂಹಾರಕನಾದ ಆ ರಾಜೇಂದ್ರನು ಇಂತೆಂದ ನಾರದ ಮುನಿಯ ಮಾತುಗಳನ್ನು ಕೇಳಿ ಆ ವಿದ್ಯಾಧರಕನ್ಯೆಯ ವಿಷಯದಲ್ಲಿ ಸಂತೋಷ ದಿಂದ ಅಧಿಕವಾಗಿ ಪುಳಕಿತಗಾತ್ರನಾದನು.

ಉಪಾಯಂ ಚಾಪಿ ಪಪ್ರಚ್ಛ ಗಂತುಂ ತಾಂ ಚಂಪಕಾವತೀಂ ।
ನಾರದೇನ ಪುನಃ ಪ್ರೋಕ್ತಃ ಸ ರಾಜಾ ಗಿರಿರಾಜಜೇ ॥ ೬೦ ॥
ತೂರ್ಣಮರ್ಣವಮಾಸಾದ್ಯ ಪೂರ್ಣಿಮಾದಿವಸೇ ನೃಪಃ ।
ಭವಾನ್ದ್ರಕ್ಷ್ಯತಿ ಪೋತಸ್ಥಃ ಕಲ್ಪವೃಕ್ಷಂ ರಥಸ್ಥಿತಂ ॥ ೬೧ ॥
ತತ್ರ ದಿವ್ಯಾಂಗನಾ ಕಾಚಿದ್ದಿವ್ಯಪರ್ಯಂಕಸಂಸ್ಥಿತಾ ।
ವೀಣಾಮಾದಾಯ ಗಾಯಂತೀ ಗಾಥಾಂ ಗಾಸ್ಯತಿ ಸುಸ್ವರಂ ॥ ೬೨ ॥
ಯತ್ಕರ್ಮವಿಹಿತಂ ಯೇನ ಶುಭಂ ವಾಥ ಶುಭೇತರಂ ।
ಸ ಏವ ಭುಂಕ್ತೇ ತತ್ತಥ್ಯಂ ವಿಧಿಸೂತ್ರನಿಯಂತ್ರಿತಃ ॥ ೬೩ ॥
ಗಾಥಾಮಿಮಾಂ ಸಾ ಸಂಗೀಯ ಸರಥಾ ಸಮಹೀರುಹಾ ।
ಸಪರ್ಯಂಕಾ ಕ್ಷಣಾದೇವ ಮಧ್ಯೇಸಿಂಧುಂ ಪ್ರವೇಕ್ಷ್ಯತಿ ॥ ೬೪ ॥
ಭವಾನಪ್ಯವಿಶಂಕಂ ಚ ತತಃ ಪೋತಾನ್ಮಹಾರ್ಣವೇ ।
ತಾಮನುವ್ರಜತು ಕ್ಷಿಪ್ರಂ ಯಜ್ಞವಾರಾಹಮಾಸ್ತುವನ್ ॥ ೬೫ ॥

---

೬೦. ಆ ಚಂಪಕಾವತಿಯೆಂಬ ನಗರಿಗೆ ಹೋಗುವ ಉಪಾಯವನ್ನು ಕುರಿತು ಅವನು ನಾರದನನ್ನು ಪ್ರಶ್ನೆಮಾಡಿದನು. ಎಲೌ ಪಾರ್ವತಿಯೆ! ಅಗ ನಾರದನು ಆ ರಾಜನಿಗೆ ಪುನಃ ಹೇಳತೊಡಗಿದನು.

೬೧. "ಮಹಾರಾಜನೆ! ನಾಳೆಯ ಪೂರ್ಣಿಮಾದಿನದಲ್ಲಿಯೇ ನೀನು ಶೀಘ್ರವಾಗಿ ಹೊರಟು ಸಮುದ್ರದ ದಡವನ್ನು ಸೇರು. ಅಲ್ಲಿ ಒಂದು ದೋಣಿಯನ್ನು ಹತ್ತಿ ಹೋಗಲು ಒಂದು ದ್ವೀಪದಲ್ಲಿ ಮಂಟಪವನ್ನೂ, ಮಂಟಪ ಮಧ್ಯದಲ್ಲಿ ಕಲ್ಪವೃಕ್ಷವನ್ನೂ ನೋಡುವೆ.

೬೨. ಆ ವೃಕ್ಷದ ಕೆಳಗೆ ದಿವ್ಯಪರ್ಯಂಕದಲ್ಲಿ ಒಬ್ಬ ದಿವ್ಯಕನ್ಯೆಕೆಯು ಪವಡಿಸಿ ವೀಣೆಯನ್ನು ಕೈಯಲ್ಲಿ ಹಿಡಿದು ಮಧುರಕಂಠದಿಂದ ಹಾಡುತ್ತ ಮುಂದೆ ಹೇಳುವ ಲೋಕೋಕ್ತಿಯನ್ನು ಹಾಡುವಳು.

೬೩. 'ಯಾವ ಕರ್ಮವು ಯಾವನಿಂದ ಮಾಡಲ್ಪಟ್ಟಿರುವುದೊ, ಅದರ ಒಳ್ಳೆಯ ಅಥವ ಕೆಟ್ಟ ಫಲವನ್ನು ಕಾರ್ಯಕಾರಣಭಾವವೆಂಬ ಸೂತ್ರದಿಂದ ನಿಯಂತ್ರಿತನಾಗಿ ಮಾಡಿದವನೇ ಆವಶ್ಯಕವಾಗಿ ಅನುಭವಿಸುವನು. ಇದು ನಿಜವು.

೬೪-೬೫. ಈ ಗಾದೆಯನ್ನು ಆಕೆಯು ಗಾಯನ ಮಾಡುತ್ತ ಕ್ಷಣಮಾತ್ರ ದಲ್ಲಿಯೇ ಮಂಟಪ, ಕಲ್ಪವೃಕ್ಷ, ಪರ್ಯಂಕಗಳೊಡನೆ ಸಮುದ್ರಮಧ್ಯವನ್ನು ಪ್ರವೇಶಮಾಡುವಳು. ನೀನೂ ಹಿಂದುಮುಂದು ಯೋಚನೆಯನ್ನು ಮಾಡದೆ ಯಜ್ಞವರಾಹಸ್ವಾಮಿಯ ಸ್ತೋತ್ರವನ್ನು ಮಾಡುತ್ತ ದೋಣಿಯಿಂದಿಳಿದು ವೇಗವಾಗಿ ಸಮುದ್ರದ ನೀರಿನಲ್ಲಿಯೇ ಹೋಗುತ್ತಿರುವ ಆಕೆಯನ್ನು ಹಿಂಬಾಲಿಸು.

ತತೋ ದ್ರಕ್ಷ್ಯಸಿ ಪಾತಾಲೇ ನಗರೀಂ ಚಂಪಕಾವತೀಂ ।
ಮಹಾಮನೋಹರಾಂ ರಾಜನ್ಸಹಿತಾಂ ಬಾಲಯಾನಯಾ ॥ ೬೬ ॥
ಇತ್ಯುಕ್ತ್ವಾಂತರ್ಹಿತೋ ದೇವಿ ಸ ಚತುರ್ಮುಖನಂದನಃ ।
ರಾಜಾಪ್ಯರ್ಣವಮಾಸಾದ್ಯ ಯಥೋಕ್ತಂ ಪರಿಲಕ್ಷ್ಯ ಚ ॥ ೬೭ ॥
ವಿವೇಶಾಂತಃ ಸಮುದ್ರಂ ಚ ನಗರೀಮಾಸಸಾದ ತಾಂ ।
ಸಾಥ ವಿದ್ಯಾಧರೀ ಬಾಲಾ ನೇತ್ರಪ್ರಾಘುಣಕೀಕೃತಾ ॥ ೬೮ ॥
ತೇನ ರಾಜ್ಞಾ ತ್ರಿಜಗತೀಸೌಂದರ್ಯಶ್ರೀರಿವೈಕಿಕಾ ।
ಪಾತಾಲದೇವತೇಯಂ ವಾ ಮಮ ನೇತ್ರೋತ್ಸವಾಯ ಕಿಂ ॥ ೬೯ ॥
ನಿರಗಾಯ ಮಧುದ್ವೇಷ್ಟುಃ ಸ್ರಷ್ಟುಃ ಸೃಷ್ಟಿವಿಲಕ್ಷಣಾ ।
ಕುಹೂ ರಾಹುಭಯಾದೇಷಾ ಕಾಂತಿಶ್ಚಾಂದ್ರಮಸೀ ಕಿಮು ॥ ೭೦ ॥
ಯೋಷಿದ್ರೂಪಂ ಸಮಾಶ್ರಿತ್ಯ ತಿಷ್ಠತೇಽತ್ರಾಕುತೋಽಭಯಾ ।
ಇತ್ಥಂ ಕ್ಷಣಂ ತಾಂ ನಿರ್ವರ್ಣ್ಯ ಸ ರಾಜಾಗಾತ್ತದಂತಿಕಂ ॥ ೭೧ ॥

---

೬೬. ರಾಜನೆ! ಕಡೆಯಲ್ಲಿ ಪಾತಾಳಲೋಕವನ್ನು ಸೇರಿ ಅಲ್ಲಿ ಅತ್ಯಂತ ಮನೋಹರವೂ ನಾನು ಹೇಳಿದ ಕನ್ಯೆಯ ಬಂಧನಪ್ರದೇಶವೂ ಆದ ಚಂಪಕಾವತಿ ಯೆಂಬ ನಗರವನ್ನು ನೋಡುವೆ.''

೬೭. ಗಿರಿಜೆಯೆ! ಇಂತೆಂದು ಹೇಳಿ ಬ್ರಹ್ಮಮಾನಸಪುತ್ರನಾದ ನಾರದನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ರಾಜನೂ ಸಹ ಅಂತೆಯೇ ಸಮುದ್ರ ವನ್ನು ಸೇರಿ ಅದರ ಮಧ್ಯದಲ್ಲಿ ಮಂಟಪವೇ ಮುಂತಾದುವನ್ನೆಲ್ಲ ನೋಡಿದನು.

೬೮. ಸಮುದ್ರಮಧ್ಯವನ್ನೂ ಪ್ರವೇಶಿಸಿ ಯಥಾಕಾಲದಲ್ಲಿ ಚಂಪಕಾವತಿ ಯನ್ನೂ ಸೇರಿದನು. ವಿದ್ಯಾಧರಬಾಲಿಕೆಯಾದ ಆ ಮಲಯಗಂಧಿನಿಯೂ ಆತನ ಕಣ್ಣುಗಳಿಗೆ ಕಾಣುವವಳಾದಳು.

೬೯. ಆ ರಾಜನಿಗೆ ಆ ಕನ್ಯೆಕೆಯು ಮೂರು ಲೋಕಗಳ ಸೌಂದರ್ಯವೂ ರಾಶಿಗೊಂಡು ನಿಂತ ಶೃಂಗಾರಪುತ್ಥಳಿಯಂತಿದ್ದಳು. ಅವಳನ್ನು ಕಂಡು ರಾಜನು ಹೀಗೆ ಯೋಚಿಸಿದನು. ''ಆಹಾ! ನನ್ನ ಕಣ್ಣುಗಳಿಗೆ ಹಬ್ಬವನ್ನುಂಟುಮಾಡಲು ಎದುರಿಗೆ ಬಂದಿರುವ ಪಾತಾಳದೇವತೆಯೇ ಇವಳಿರಬಹುದೇನು?

೭೦. ಚತುರ್ಮುಖನ ಸೃಷ್ಟಿಗೆ ವಿಲಕ್ಷಣವಾದ ಸೌಂದರ್ಯವುಳ್ಳ ಈ ಕನ್ಯೆಯು ನನಗಾಗಿಯೇ ಮಹಾವಿಷ್ಣುವಿನಿಂದ ನಿರ್ಮಿತಳಾಗಿರುವವಳೆ? ಅಮಾವಾಸ್ಯೆ ಮತ್ತು ರಾಹುಗಳ ಭಯದಿಂದ ಪಾತಾಳದಲ್ಲಿ ಬಚ್ಚಿಟ್ಟುಕೊಂಡಿರುವ ಚಂದ್ರಕಳೆಯೇ ಇವಳಿರಬಹುದೆ?

೭೧. ಆ ಬೆಳದಿಂಗಳೇ ಸ್ತ್ರೀಯ ರೂಪವನ್ನು ಧರಿಸಿ ಇಲ್ಲಿ ನಿರ್ಭಯವಾಗಿ ಸಂಚರಿಸುತ್ತಿರುವುದೊ?'' ಇಂತೆಂದು ಮುಹೂರ್ತಕಾಲದವರೆಗೂ ಆಕೆಯ ಸೌಂದರ್ಯವನ್ನು ವರ್ಣಿಸುತ್ತ ಆ ರಾಜನು ಆಕೆಯನ್ನು ಸಮೀಪಿಸಿದನು.

ಗೃಹಾಣೇಮಾನಿ ರತ್ನಾನಿ ದಿವ್ಯಾನಿ ವರವರ್ಣಿನಿ ।
ಕನ್ಯಾತ್ವಂ ಚ ಪರಶ್ವಸ್ತೇ ಪಾಣಿಗ್ರಾಹಾದಪೈಷ್ಯತಿ ॥ ೮೪ ॥
ದಾಸೀನಾಮಯುತಂ ಪ್ರಾತರ್ದಾಸ್ಯಾಮಿ ತವ ಸುಂದರಿ ।
ಅಸುರೀಣಾಂ ಸುರೀಣಾಂ ಚ ದಾನವೀನಾಂ ಮನೋಹರಂ ॥ ೮೫ ॥
ಗಂಧರ್ವೀಣಾಂ ಸರೀಣಾಂ ಚ ಕಿನ್ನರೀಣಾಂ ಶತಂ ಶತಂ ।
ವಿದ್ಯಾಧರೀಣಾಂ ನಾಗೀನಾಂ ಯಕ್ಷಿಣೀನಾಂ ಶತಾನಿ ಷಟ್ ॥ ೮೬ ॥
ರಾಕ್ಷಸೀನಾಂ ಶತಾನ್ಯಷ್ಟೌ ಶತಮಪ್ಸರಸಾಂ ವರಂ ।
ಏತಾಸ್ತೇ ಪರಿಚಾರಿಣ್ಯೋ ಭವಿಷ್ಯಂತ್ಯಮಲಾಶಯೇ ॥ ೮೭ ॥
ಯಾವತ್ಸಂಪತ್ತಿಸಂಭಾರೋ ದಿಕ್ಪಾಲಾನಾಂ ಗೃಹೇಷು ವೈ ।
ಮತ್ಪರಿಗ್ರಹತಾಂ ಪ್ರಾಪ್ಯ ತಾವತಸ್ತ್ವಂ ಮಹೇಶ್ವರಿ ॥ ೮೮ ॥
ದಿವ್ಯಾನ್ಭೋಗಾನ್ಮಯಾ ಸಾರ್ಧಂ ಭೋಕ್ಷ್ಯಸೇ ಮತ್ಪರಿಗ್ರಹಾತ್ ।
ಕದಾ ಪರಶ್ವೋ ಭವಿತಾ ಯಸ್ಮಿನ್ವೈವಾಹಿಕೋ ವಿಧಿಃ ॥ ೮೯ ॥

---

೮೪. ಎಲೌ ಸುಂದರಾವಯವಸಂಪನ್ನಳೆ! ಸ್ವರ್ಗಲೋಕದಿಂದ ಕಸಿದು ಕೊಂಡುಬಂದಿರುವ ಈ ರತ್ನಗಳನ್ನು ಸ್ವೀಕರಿಸು. ನನ್ನನ್ನು ಮದುವೆಯಾಗುವುದರಿಂದ ನಾಳಿದ್ದು ನಿನ್ನ ಕನ್ಯಾತ್ವವು ಕೊನೆಗಾಣುವುದಷ್ಟೆ.

೮೫. ಸುಂದರಿ! ನಾಳೆ ಬೆಳಿಗ್ಗೆ ನಿನಗೆ ಹತ್ತುಸಾವಿರ ದಾಸಿಯರನ್ನು ಕೊಡುವೆನು. ಅವರೆಲ್ಲರೂ ಅತ್ಯಂತ ಸುಂದರಿಯರಾಗಿ ರಾಕ್ಷಸರಲ್ಲಿಯೂ, ದೇವತೆಗಳಲ್ಲಿಯೂ ದಾನವರಲ್ಲಿಯೂ ನಿನಗಾಗಿಯೇ ಆರಿಸಲ್ಪಟ್ಟಿರುವವರು.

೮೬. ಒಂದೊಂದು ನೂರು ಗಂಧರ್ವರು, ಮನುಷ್ಯರು, ಕಿನ್ನರರು—ಇವರ ಸ್ತ್ರೀಯರು ನಿನಗೆ ದಾಸಿಯರಾಗಿರುವರು. ವಿದ್ಯಾಧರರು, ನಾಗರು, ಯಕ್ಷರು ಇವರ ಸ್ತ್ರೀಯರೂ ಆರುನೂರು ಜನರಿರುವರು.

೮೭. ರಾಕ್ಷಸಿಯರು ಎಂಟುನೂರು ಜನರು. ಅಪ್ಸರಸ್ತ್ರೀಯರಲ್ಲಿ ಉತ್ತಮರಾದ ನೂರುಜನರೂ ಇಲ್ಲಿರುವರು. ಎಲೌ ನಿರ್ಮಲಮನಸ್ಕಳೆ! ಇವರೆಲ್ಲರೂ ನಿನಗೆ ಪರಿಚಾರಿಣಿಯರಾಗಿ ಸಂಚರಿಸುವರು.

೮೮. ಅಷ್ಟದಿಕ್ಪಾಲಕರ ಮನೆಗಳಲ್ಲಿರುವ ಐಶ್ವರ್ಯವನ್ನು ಒಟ್ಟುಗೂಡಿಸಲು ಎಷ್ಟು ಐಶ್ವರ್ಯವಾಗುವುದೊ, ಅಷ್ಟಕ್ಕೂ ನನ್ನ ಕೈಹಿಡಿಯುವುದರಿಂದ ನೀನೇ ಮಹೇಶ್ವರಿಯಾಗುವೆ.

೮೯. ನನ್ನ ಪಾಣಿಗ್ರಹಣವನ್ನು ಮಾಡುವುದರಿಂದ ಅನೇಕ ದಿವ್ಯಭೋಗಗಳನ್ನು ಯಥೇಚ್ಛವಾಗಿ ಅನುಭವಿಸುವೆ. ಆ ವಿವಾಹಮುಹೂರ್ತದ ದಿನವಾದ ನಾಳಿದ್ದು ಯಾವಾಗ ಬರುತ್ತದೆಯೊ ಎಂದೇ ನಾನು ಇದಿರುನೋಡುತ್ತಿರುವೆನು.

ತ್ವದಂಗಸಂಗಸಂಸ್ಪರ್ಶಸುಖಸಂದೋಹಮೇದುರಃ ।
ಪರಾಂ ನಿರ್ವೃತಿಮಾಪ್ಸ್ಯಾಮಿ ಪರಶ್ವೋ ನಿಕಟಂ ಯದಿ ॥ ೯೦ ॥
ಮನೋರಥಾಶ್ಚಿರಂ ಯಾವದ್ಯೇಮೇ ಹೃದಿ ಸಮೇಧಿತಾಃ ।
ತಾನ್ಕೃತಾರ್ಥೀಕರಿಷ್ಯಾಮಿ ಪರಶ್ವಸ್ತವ ಸಂಗಮಾತ್ ॥ ೯೧ ॥
ಜಿತ್ವಾ ದೇವಾನ್ರಣೇ ಸರ್ವಾನಿಂದ್ರಾದೀನ್ಮೃಗಲೋಚನೇ ।
ತ್ರೈಲೋಕ್ಯೈಶ್ವರ್ಯಸಂಪತ್ತೇಸ್ತ್ವಾಂ ಕರಿಷ್ಯಾಮಿ ಚೇಶ್ವರೀಂ ॥ ೯೨ ॥
ಆಧಾಯಾಂಕೇ ತ್ರಿಶೂಲಂ ಸ್ವೇ ಸುಷ್ವಾಪೇತಿ ಪ್ರಲಪ್ಯ ಸಃ ।
ನರಮಾಂಸವಸಾಸ್ವಾದಪ್ರಮತ್ತೋ ವೀತಸಾಧ್ವಸಃ ॥ ೯೩ ॥
ವರಂ ಸ್ಮರಂತೀ ಸಾ ಗೌರ್ಯಾ ವಿದ್ಯಾಧರಕುಮಾರಿಕಾ ।
ವಿಜ್ಞಾಯ ತಂ ಪ್ರಮತ್ತಂ ಚ ಸುಸುಪ್ತಂ ಚಾತಿನಿರ್ಭಯಂ ॥ ೯೪ ॥
ಆಹೂಯ ತಂ ನರಪತಿವರಂ ಸರ್ವಾಂಗಸುಂದರಂ ।
ವಿಷ್ಣುಭಕ್ತಿಕೃತತ್ರಾಣಂ ಪ್ರಾಣನಾಥೇತಿ ಜಲ್ಪ್ಯ ಚ ॥ ೯೫ ॥

---

೯೦. ನಾಳಿದ್ದೆಂಬ ದಿವಸವು ಇಂದೇ ಆಗಿದ್ದರೆ ನಿನ್ನ ಅಂಗಸಂಗವನ್ನು ಉಂಟುಮಾಡುವ ಸುಖಪರಂಪರೆಯಲ್ಲಿ ಮುಳುಗಿದವನಾಗಿ ಸರ್ವೋತ್ತಮವಾದ ಸೌಖ್ಯವನ್ನು ಈ ದಿವಸವೇ ಪಡೆಯುತ್ತಿದ್ದೆ.

೯೧. ಇಲ್ಲಿಯವರೆಗೂ ನನ್ನ ಹೃದಯದಲ್ಲಿ ದಿನದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿದ್ದ ಯಾವ ಮನೋರಥಗಳಿದ್ದುವೊ, ಅವುಗಳೆಲ್ಲವನ್ನೂ ನಾಳಿದ್ದು ನಿನ್ನನ್ನು ಸೇರುವುದರಿಂದ ಈಡೇರಿಸಿಕೊಳ್ಳುವೆನು.

೯೨. ಹರಿಣಾಕ್ಷಿಯೆ! ಮಹೇಂದ್ರನೇ ಮೊದಲಾದ ಸಕಲ ದೇವತೆಗಳನ್ನೂ ಯುದ್ಧದಲ್ಲಿ ಜಯಿಸಿ ಮೂರು ಲೋಕಗಳ ಸಕಲೈಶ್ವರ್ಯಕ್ಕೂ ನಿನ್ನನ್ನೇ ಒಡೆತಿಯನ್ನಾಗಿ ಮಾಡಿಬಿಡುತ್ತೇನೆ.''

೯೩. ಇಂತೆಂದು ಗಳಹುತ್ತ ಆ ರಾಕ್ಷಸನು ಮನುಷ್ಯರ ಮಾಂಸವಸಾದಿಗಳನ್ನು ತಿಂದು ಉನ್ಮತ್ತನಾಗಿ ಎಚ್ಚರಿಕೆಯಿಲ್ಲದೆ ತನ್ನ ತ್ರಿಶೂಲವನ್ನು ತೊಡೆಯಮೇಲೆಯೇ ಇಟ್ಟುಕೊಂಡು ಗಾಢನಿದ್ರೆಯಲ್ಲಿ ಆಸಕ್ತನಾದನು.

೯೪. ಆಗಲು ವಿದ್ಯಾಧರಕುಮಾರಿಯು ತನಗೆ ಪಾರ್ವತಿಯು ಕೊಟ್ಟಿದ್ದ ವರವನ್ನು ಸ್ಮರಿಸಿಕೊಳ್ಳುತ್ತ ಆ ರಾಕ್ಷಸನು ಮತ್ತನೂ, ನಿದ್ರಾಸಕ್ತನೂ, ಭಯರಹಿತನೂ ಆಗಿದ್ದುದನ್ನು ತಿಳಿದುಕೊಂಡಳು.

೯೫. ಅವಳು ರಾಜರಲ್ಲಿ ಉತ್ತಮನೂ, ಸರ್ವಾವಯವಸುಂದರನೂ, ವಿಷ್ಣುಭಕ್ತಿಯೆಂಬ ಕವಚವನ್ನು ತೊಟ್ಟಿರುವವನೂ ಆದ ಆತನನ್ನು ''ಪ್ರಾಣನಾಥ!'' ಎಂದು ಸಂಬೋಧಿಸಿ ಮೆಲ್ಲಗೆ ಕರೆದಳು.

ಶೂಲಂ ತದಂಕಾದಾದಾಯ ಗೃಹಾಣೇಮಂ ಜಹಿದ್ರುತಂ ।
ಇತಿ ತ್ರಿಶೂಲಂ ಬಾಲಾತೋ ಬಾಲಾರ್ಕಸದೃಶದ್ಯುತಿಃ ॥ ೯೬ ॥
ಸಮಾದಾಯ ಮಹಾಬಾಹುಃ ಸ ತದಾಮಿತ್ರಜಿನ್ನೃಪಃ ।
ಜಹರ್ಷ ಚ ಜಗಾದೋಚ್ಚೈರ್ಬಾಲಾಯಾಶ್ಚಾಭಯಂ ದಿಶನ್ ॥ ೯೭ ॥
ವಾಮಪಾದಪ್ರಹಾರೇಣ ತಮಾತಾಡ್ಯ ಸ ನಿರ್ಭಯಃ ।
ಸಂಸ್ಮರಂಶ್ಚಕ್ರಿಣಂ ಚಿತ್ತೇ ಜಗದ್ರಕ್ಷಾಮಣಿಂ ಹರಿಂ ॥ ೯೮ ॥
ಜಗಾದ ತಿಷ್ಠ ರೇ ದುಷ್ಟ ಕನ್ಯಾಧರ್ಷಣಲಾಲಸ ।
ಯುಧ್ಯಸ್ವಾತ್ರ ಮಯಾ ಸಾರ್ಧಂ ನ ಸುಪ್ತಂ ಹನ್ಮಿ ಯಂ ರಿಪುಂ ॥ ೯೯ ॥
ಇತಿ ಸಂಸ್ಮೃತ್ಯ ಸಂಭ್ರಾಂತ ಉತ್ಥಾಯ ಸ ದನೋಃ ಸುತಃ ।
ತ್ರಿಶೂಲಂ ದೇಹಿ ಮೇ ಕಾಂತೇ ಪ್ರೋವಾಚೇತಿ ಮುಹುರ್ಮುಹುಃ॥೧೦೦॥
ಕೋಽಯಂ ಮೃತ್ಯುಗೃಹಂ ಪ್ರಾಪ್ತಃ ಕಸ್ಯ ರುಷ್ಟೋಽದ್ಯ ಚಾಂತಕಃ ।
ಕ ಆಯುಷಾದ್ಯ ಸಂತ್ಯಕ್ತೋ ಯಃ ಪ್ರಾಪ್ತೋ ಮಮ ಗೋಚರಂ ॥೧೦೧॥

---

೯೬–೯೭. ಮೆಲ್ಲಗೆ ಆ ರಾಕ್ಷಸನ ತೊಡೆಗಳಿಂದ ಶೂಲವನ್ನು ಸೆಳೆದು ಕೊಂಡು "ಇದನ್ನು ತೆಗೆದುಕೊಂಡು ಶೀಘ್ರವಾಗಿ ಈ ದುರಾತ್ಮನನ್ನು ನಿಗ್ರಹಿಸು" ಎಂದಳು. ಇಂತೆಂದ ಆ ಬಾಲಿಕೆಯ ಕೈಗಳಿಂದ ತ್ರಿಶೂಲವನ್ನು ತೆಗೆದುಕೊಂಡು ಕೈಯಲ್ಲಿ ಹಿಡಿದು ಹರ್ಷಗೊಂಡನು. ಎಳನೇಸರಿನ ಹೊಂಬಣ್ಣವುಳ್ಳವನೂ, ಮಹಾಬಾಹುವೂ ಆದ ಆ ಶತ್ರುಜಿದ್ರಾಜನು ಆ ಕನ್ಯೆಗೆ ಅಭಯವನ್ನು ಕೊಡುವವನಾಗಿ ಇಂತೆಂದು ಹೇಳಿದನು.

೯೮. ಆಗಲವನು ಮಲಗಿರುವ ರಾಕ್ಷಸನನ್ನು ನಿರ್ಭಯವಾಗಿ ಎಡಗಾಲಿನಿಂದ ಒದೆಯುತ್ತ ಚಕ್ರಾಯುಧವನ್ನು ಧರಿಸಿ ಲೋಕಗಳನ್ನು ಸಂರಕ್ಷಿಸುವ ಶ್ರೀಹರಿಯನ್ನೇ ಮನಸ್ಸಿನಲ್ಲಿ ಸ್ಮರಿಸುತ್ತಿದ್ದನು.

೯೯. "ಎಲೈ ಮೂಢನೆ! ಕನ್ಯೆಯರನ್ನು ಬಲಾತ್ಕಾರದಿಂದ ಸೆಳೆಯುವುದರಲ್ಲಿ ಲಾಲಸನಾಗಿರುವವನೆ! ಎದ್ದು ನನ್ನೊಡನೆ ಯುದ್ಧವನ್ನು ಮಾಡು. ನಾನು ನಿದ್ರಿಸುತ್ತಿರುವ ಶತ್ರುವನ್ನು ಕೊಲ್ಲುವವನಲ್ಲ."

೧೦೦. ಇಂತೆಂದ ಅವನ ಮಾತನ್ನು ಕೇಳಿ ಆ ರಾಕ್ಷಸಪುತ್ರನು ಸಂಭ್ರಮದಿಂದ ಎಚ್ಚತ್ತು "ಪ್ರಿಯೆ! ನನ್ನ ತ್ರಿಶೂಲವನ್ನು ಕೊಡು" ಎಂದು ಆ ವಿದ್ಯಾಧರ ಕನ್ಯೆಯನ್ನು ಮತ್ತೆ ಮತ್ತೆ ಕೇಳಿದನು.

೧೦೧. "ಮೃತ್ಯುವಿನ ಮನೆಯನ್ನು ಹೊಕ್ಕಿರುವ ಇವನು ಯಾರು? ಯಾವನಲ್ಲಿ ಯಮಧರ್ಮರಾಜನು ಇಂದು ಕೋಪಗೊಂಡಿರುವನು? ಯಾವನ ಆಯುಷ್ಯವು ಇಂದಿಗೆ ಮುಗಿದಿರುವುದು? ಅಂತಹವನೇ ಇಂದು ನನ್ನ ಕಣ್ಣುಗಳಿಗೆ ಕಾಣಿಸಬೇಕು.

ಮಮ ಪ್ರಚಂಡದೋರ್ದ್ವಂಡಕಂಡೂಕಂಡೂಯನಕ್ಷಮಃ ।
ನಾಲ್ಪೋ ನರೋಽಯಂ ಭವಿತಾ ಕಿಂ ತ್ರಿಶೂಲೇನ ಸುಂದರಿ ॥ ೧೦೨ ॥
ಮಾಭೈರ್ಮೇ ಕೌತುಕಂ ಪಶ್ಯ ಭಕ್ಷ್ಯೋಽಯಂ ಮಮ ಸಾಂಪ್ರತಂ ।
ಕಾಲೇನ ಮತ್ತೋ ಭೀತೇನ ಸ್ವಯಮೇವೋಪಢೌಕಿತಃ ॥ ೧೦೩ ॥
ಇತ್ಯುಕ್ತ್ವಾ ಮುಷ್ಟಿಘಾತೇನ ತೇನೋಚ್ಚೈರ್ದನುಸೂನುನಾ ।
ಹೃದಯೇ ನಿಹತೋ ರಾಜಾ ಶಿಲಾತಿಕಠಿನೇ ದ್ರುತಂ ॥ ೧೦೪ ॥
ಸ ಚಕ್ರಿಣಾ ಕೃತತ್ರಾಣಃ ಪೀಡಾಮಲ್ಪೀಯಸೀಮಪಿ ।
ನೋ ವೇದ ಕಠಿನೋರಸ್ಕಃ ತತ್ಕಾರಂ ಪ್ರತ್ಯುತಾಮುದಂ ॥ ೧೦೫ ॥
ಅಥ ಕೋಪವಶಾ ರಾಜ್ಞಾ ಹತೋ ವಕ್ತ್ರೇ ಚಪೇಟಯಾ ।
ಆಘೂರ್ಣಿತ ಶಿರಾ ಭೂಮೌ ಪತಿತ್ವಾ ಪುನರುತ್ಥಿತಃ ॥ ೧೦೬ ॥
ಉವಾಚ ಚ ವಚೋ ಧೈರ್ಯಮವಷ್ಟಭ್ಯ ಮಹಾಬಲೀ ॥ ೧೦೭ ॥

೧೦೨. ಎಲೌ ಸುಂದರಿಯೆ! ನನಗೆ ತ್ರಿಶೂಲವಾದರೂ ಏಕೆ? ಪ್ರಚಂಡಗಳಾದ ಈ ಬಾಹುದಂಡಗಳ ತಿನಿಸನ್ನು ಕಳೆಯುವ ಭುಜಬಂಧವನ್ನು ಸಹಿಸಲು ಕ್ಷುದ್ರನಾದ ಈ ಮನುಷ್ಯನೆಂದಾದರೂ ಶಕ್ತನಾದಾನೆ?

೧೦೩. ನೀನು ಹೆದರಬೇಡ. ಈಗ ನನ್ನ ಚಮತ್ಕಾರವನ್ನು ನೋಡು. ಈತನು ನನಗೆ ಈಗ ಭಕ್ಷ್ಯಪದಾರ್ಥವಾಗಿರುವನು. ನನಗೆ ಹೆದರಿರುವ ಕಾಲಯಮನಿಂದಲೇ ಈ ಮನುಷ್ಯನು ನನಗೆ ಆಹಾರವಾಗಿ ಕಳುಹಿಸಲ್ಪಟ್ಟಿರುವನು.''

೧೦೪. ಇಂತು ನುಡಿದು ಆ ದಾನವನು ಕಲ್ಲಿಗಿಂತಲೂ ಕಠಿನಗಳಾದ ತನ್ನ ಮುಷ್ಟಿಗಳಿಂದ ವೇಗವಾಗಿ ಹಿಡಿಬಂದು ಆ ಮಹಾರಾಜನ ಹೃದಯಪ್ರದೇಶಕ್ಕೆ ಗಾಢವಾದ ಪ್ರಹಾರಗಳನ್ನು ಕೊಟ್ಟನು.

೧೦೫. ಚಕ್ರಪಾಣಿಯಾದ ಮಹಾವಿಷ್ಣುವಿನಿಂದ ರಕ್ಷಣೆಯನ್ನು ಪಡೆದಿದ್ದ ಆ ರಾಜನಾದರೋ, ಕಠಿನವಾದ ವಕ್ಷಃಪ್ರದೇಶವುಳ್ಳವನಾದುದರಿಂದ ಅತ್ಯಲ್ಪವಾದ ನೋವನ್ನೂ ಹೊಂದಲಿಲ್ಲ. ಅದಕ್ಕೆ ಬದಲಾಗಿ ರಾಕ್ಷಸನ ಕೈಯೇ ಜರ್ಝರಿತವಾಯಿತು.

೧೦೬. ಆಗ ರಾಜನು ಕೋಪಗೊಂಡು ಅಂಗೈಯಿಂದ ರಾಕ್ಷಸನ ಮುಖಕ್ಕೆ ಬಲವಾದ ಪೆಟ್ಟನ್ನು ಕೊಟ್ಟನು. ಅವನು ತಲೆತಿರುಗಿ ಭೂಮಿಯಲ್ಲಿ ಬಿದ್ದು ಮೆಲ್ಲಗೆ ಚೇತರಿಸಿಕೊಂಡು ಮೇಲಕ್ಕೆದ್ದನು.

೧೦೭. ಮಹಾಬಲಶಾಲಿಯಾದುದರಿಂದ ಅವನು ಮತ್ತೆ ಧೈರ್ಯವನ್ನವಲಂಬಿಸಿ ರಾಜನಿಗೆ ಹೇಳತೊಡಗಿದನು.

ದಾನವ ಉವಾಚ :—

ಜ್ಞಾತಂ ನತ್ವಂ ಮನುಷ್ಯೋಽಸಿ ನೃರೂಪೇಣ ಚತುರ್ಭುಜಃ ।
ಆಯಾತಶ್ಛಿದ್ರಮಾಸಾದ್ಯ ಹಂತುಂ ಮಾಂ ದಾನವಾಂತಕಃ ॥ ೧೦೮ ॥
ಏಕಂ ವಿಧೇಹಿ ಮಧುಭಿದ್ಯದಿ ತ್ವಂ ಬಲವಾನಸಿ ।
ವಿಹಾಯೈತನ್ಮಹಚ್ಛೂಲಂ ಯುಧ್ಯಸ್ವ ಸ್ವಾಯುಧೈರ್ಮಯಾ ॥ ೧೦೯ ॥
ತ್ವಯಾ ಕಪಟರೂಪೇಣ ಬಲಿನಃ ಕೈಟಭಾದಯಃ ।
ನ ಬಲೇನ ಹತಾಃ ಸಂಖ್ಯೇ ಹತಾ ಏವ ಚ್ಛಲೇನ ಹಿ ॥ ೧೧೦ ॥
ಬಲಿಂ ಪಾತಾಲಮನಯಸ್ತ್ವಂ ನೃವಾಮನತಾಂ ದಧತ್ ।
ನೃಮೃಗತ್ವೇನ ಭವತಾ ಹಿರಣ್ಯಕಶಿಪುರ್ಹತಃ ॥ ೧೧೧ ॥
ತ್ವಯಾ ಜಟಿಲರೂಪೇಣ ಲಂಕೇಶೋ ವಿನಿಪಾತಿತಃ ।
ಗೋಪಾಲವೇಷಮಾಸಾದ್ಯ ಕಂಸಾದ್ಯಾ ಘಾತಿತಾಸ್ತ್ವಯಾ ॥ ೧೧೨ ॥
ಸ್ತ್ರೀರೂಪೇಣ ಹರಸ್ತ್ವಂ ತು ವಿಪ್ರಲಾಪ್ಯಾಸುರಾನ್ಸುಧಾಂ ।
ಯಾದೋರೂಪೇಣ ಭವತಾ ಶಂಖಾದ್ಯಾ ನಿಹತಾ ಬಹು ॥ ೧೧೩ ॥

---

೧೦೮. ರಾಕ್ಷಸನು ಹೇಳುತ್ತಾನೆ:—ಈಗ ತಿಳಿಯಿತು. ನೀನು ಮನುಷ್ಯ ಮಾತ್ರನಲ್ಲ. ಚತುರ್ಭುಜನೂ, ದಾನವವೈರಿಯೂ ಆದ ಮಹಾವಿಷ್ಣುವೇ ನೀನು. ನನ್ನ ಅಜಾಗರೂಕತೆಯ ಸಮಯವನ್ನರಿತು ಮನುಷ್ಯವೇಷದಿಂದ ಬಂದಿರುವೆ.

೧೦೯. ಮಧುಸೂದನನೆ! ನೀನು ನಿಜವಾಗಿಯೂ ಪರಾಕ್ರಮಿಯಾಗಿದ್ದರೆ ನಾನು ಕೇಳುವ ಈ ಮಾತನ್ನು ನಡೆಸಿಕೊಡು. ಈ ಮಹಾಶೂಲವನ್ನು ನನಗೆ ಕೊಟ್ಟು ನಿನ್ನ ಆಯುಧಗಳನ್ನೇ ತೆಗೆದುಕೊಂಡು ನನ್ನೊಡನೆ ಯುದ್ಧಮಾಡು.

೧೧೦. ಮಹಾಬಲಶಾಲಿಗಳಾದ ಕೈಟಭನೇ ಮುಂತಾದ ಅನೇಕ ರಾಕ್ಷಸರು ಕಪಟ ರೂಪಿಯಾದ ನಿನ್ನ ಮೋಸಕ್ಕೆ ಒಳಗಾಗಿ ಯುದ್ಧರಂಗದಲ್ಲಿ ಮಡಿದರು. ಒಬ್ಬನನ್ನಾದರೂ ನೀನು ಬಲದಿಂದ ನಿಗ್ರಹಿಸಲಿಲ್ಲ.

೧೧೧. ನೀನು ವಾಮನರೂಪವನ್ನು ತಾಳಿ ಬಲಿಚಕ್ರವರ್ತಿಯನ್ನು ಪಾತಾಳಲೋಕಕ್ಕೆ ಕಳುಹಿಸಿದೆಯಲ್ಲವೆ. ನಾರಸಿಂಹವೆಂಬ ನಿನ್ನ ವಿಚಿತ್ರರೂಪ ದಿಂದ ಹಿರಣ್ಯಕಶಿಪುವು ಹತನಾದನು.

೧೧೨. ಜಡೆಗಳನ್ನು ಕಟ್ಟಿದ ತಾಪಸವೇಷದಿಂದ ಲಂಕೇಶ್ವರನಾದ ರಾವಣನು ನಾಶವನ್ನು ಹೊಂದಿದನು. ಗೊಲ್ಲರ ಹುಡುಗನ ವೇಷವನ್ನು ತಾಳಿದ ನಿನ್ನಿಂದ ಕಂಸನೇ ಮೊದಲಾದ ರಾಕ್ಷಸರೆಲ್ಲರೂ ನಿಗ್ರಹಿಸಲ್ಪಟ್ಟರು.

೧೧೩. ಮೋಹಿನಿಯ ರೂಪದಿಂದ ದಾನವರನ್ನು ಮೋಸಗೊಳಿಸಿ ನೀನು ಅಮೃತವನ್ನು ಕದ್ದುಕೊಂಡು ಹೋದೆ. ಮತ್ಸ್ಯರೂಪಧಾರಿಯಾದ ನಿನ್ನಿಂದ ಶಂಖನೇ ಮೊದಲಾದ ಅನೇಕ ರಾಕ್ಷಸರು ನಿಹತರಾದರು.

ಮಾಯಾವಿನಾಮಗ್ರಗಣ್ಯ ಸರ್ವಮರ್ಮಜ್ಞಸಾಧಕ ।
ನ ತ್ವತ್ತೋಽಹಂ ಬಿಭೇಮ್ಯದ್ಯ ಯದಿ ಶೂಲಂ ವಿಹಾಸ್ಯಸಿ ॥ ೧೧೪ ॥
ಅಥವಾ ದೈತ್ಯವಚನೈಃ ಕಿಮೇಭಿಃ ಕಾತರೋಚಿತೈಃ ।
ನ ತ್ಯಕ್ಷ್ಯಸಿ ತ್ರಿಶೂಲಂ ತ್ವಂ ನತ್ವಾಂ ಜ್ಯೇಷ್ಯಾಮ್ಯಹಂ ರಣೇ ॥ ೧೧೫ ॥
ಅವಶ್ಯಮೇವ ಮರ್ತವ್ಯಮದ್ಯ ಪ್ರಾತಃ ಶರೀರಿಣಾ ।
ತ್ವತ್ಕರೇಣ ವರಂ ಮೃತ್ಯುರ್ಬಲೇನಾಪಿ ಛಲೇನ ವಾ ॥ ೧೧೬ ॥
ಇಯಂ ವಿದ್ಯಾಧರೀ ಕನ್ಯಾ ನ ಮಯಾ ದೂಷಿತಾ ಸತೀ ।
ಸಾಕ್ಷಾಚ್ಛ್ರೀರೇವ ಮಂತವ್ಯಾ ತವಾರ್ಥಂ ರಕ್ಷಿತಾ ಮಯಾ ॥ ೧೧೭ ॥
ಇತ್ಯುಕ್ತ್ವಾ ವಾಮದೋರ್ದಂಡಪ್ರಹಾರೇಣಾತಿನಿಷ್ಠುರಂ ।
ನಿಜಘಾನ ದನೋಃ ಸೂನುಸ್ತಾಂ ಶಿಲೋಚ್ಚಯಕಂಪಿನಾ ॥ ೧೧೮ ॥
ನೃಪೋ ವಕ್ಷಃಪ್ರಹಾರಂ ತಂ ವಿಷಹ್ಯ ರಣಮೂರ್ಧನಿ ।
ಲಕ್ಷೀಚಕಾರ ತದ್ವಕ್ಷಸ್ತ್ರಿಶೂಲಂ ತೋಲಯನ್ಕರೇ ॥ ೧೧೯ ॥

---

೧೧೪. ನೀನು ಮಾಯಾವಿಗಳಲ್ಲಿ ಅಗ್ರಗಣ್ಯನು. ಶತ್ರುಗಳ ಮರ್ಮಗಳನ್ನು ತಿಳಿದು ಕಾರ್ಯವನ್ನು ಸಾಧಿಸಿಕೊಳ್ಳುವವನು. ಇಂದು ಆ ಶೂಲವೊಂದನ್ನು ನನಗೆ ಕೊಟ್ಟೆಯಾದರೆ ನಿನಗೆ ನಾನು ಹೆದರುವುದಿಲ್ಲ.

೧೧೫. ಅಥವಾ ಕೇವಲ ಹೇಡಿಗಳಿಗೆ ಉಚಿತಗಳಾದ ಈ ದೈನ್ಯದ ಮಾತುಗಳಿಂದಾಗಬೇಕಾದುದೇನು ? ಆ ತ್ರಿಶೂಲವನ್ನು ನೀನು ಬಿಡಲೊಲ್ಲೆ. ನಿನ್ನನ್ನು ನಾನು ಯುದ್ಧದಲ್ಲಿ ಜಯಿಸಲಾಗುವುದಿಲ್ಲ.

೧೧೬. ದೇಹವನ್ನು ತಾಳಿದವನು ಇಂದೊ ನಾಳೆಯೊ ಅವಶ್ಯವಾಗಿ ಸಾಯಲೇಬೇಕು. ಪರಾಕ್ರಮದಿಂದಾಗಲಿ, ಮೋಸದಿಂದಲೇ ಆಗಲಿ, ನಿನ್ನ ಕೈಗಳಲ್ಲಿ ಮರಣವನ್ನು ಪಡೆಯುವುದೇ ಉತ್ತಮವು.

೧೧೭. ಈ ವಿದ್ಯಾಧರಕನ್ಯೆಯು ನನ್ನಿಂದ ದೂಷಿತಳಾಗಿಲ್ಲ. ಸತಿಯಾಗಿಯೇ ಇರುವಳು. ಇವಳನ್ನು ನೀನು ಸಾಕ್ಷಾತ್ಕರಿಸಿದ ಲಕ್ಷ್ಮೀದೇವಿಯೆಂದೇ ತಿಳಿಯಬೇಕು. ನಿನಗೋಸ್ಕರವಾಗಿಯೇ ಇವಳು ನನ್ನಿಂದ ರಕ್ಷಿತಳಾಗಿರುವಳು.''

೧೧೮. ಇಂತು ನುಡಿದು ಆ ರಾಕ್ಷಸನು ಪರ್ವತಗಳ ಕೋಡುಗಲ್ಲುಗಳನ್ನೂ ಅಲ್ಲಾಡಿಸುವಂತಹ ತನ್ನ ಎಡಗೈಯಿಂದ ಮಹಾರಾಜನ ವಕ್ಷಸ್ಥಳಕ್ಕೆ ಗುರಿಯಿಟ್ಟು ಅತ್ಯಂತ ಬಲವಾಗಿ ಪ್ರಹಾರಮಾಡಿದನು.

೧೧೯. ಆ ರಾಜೇಂದ್ರನಾದರೊ, ಆ ಪ್ರಹಾರವನ್ನು ಸಹಿಸಿಕೊಂಡು ತ್ರಿಶೂಲವನ್ನು ಕೈಯಲ್ಲಿ ತೂಗಾಡಿಸುತ್ತ ರಾಕ್ಷಸನ ವಕ್ಷವನ್ನೇ ಅದಕ್ಕೆ ಗುರಿಯಾಗಿ ಮಾಡಿಕೊಂಡನು.

ನಿಜಘಾನ ಮಹಾಬಾಹುಃ ಸ ಚ ಪ್ರಾಣಾನ್‌ಜಹೌ ಕ್ಷಣಾತ್ ।
ಇತ್ಥಂ ಕಂಕಾಲಕೇತುಂ ಸ ನಿಹತ್ಯ ಸುರಕಂಪನಂ ॥ ೧೨೦ ॥
ವಿದ್ಯಾಧರೀಂ ಪ್ರಪಶ್ಯಂತೀಂ ಪ್ರಾಹ ಹೃಷ್ಟತನೂರುಹಾಂ ।
ನಾರದಸ್ಯ ಮುನೇರ್ವಾಕ್ಯಾತ್ತವ ಸುಶ್ರೋಣಿ ವಾಂಛಿತಂ ॥ ೧೨೧ ॥
ಕೃತಂ ಮಯಾ ಕೃತಜ್ಞೇ ಕಿಂ ಕರವಾಣ್ಯಧುನಾ ವದ ।
ಶ್ರುತ್ವೇತಿ ತಸ್ಯ ಸಾ ವಾಕ್ಯಂ ಪ್ರಾಹ ಗಂಭೀರಚೇತಸಃ ॥ ೧೨೨ ॥

ಮಲಯಗಂಧಿನ್ಯುವಾಚ :—

ಅಥೋದಾರಮತೇ ವೀರ ನಿಜಪ್ರಾಣೈಃ ಪಣೀಕೃತಾಂ ।
ಕಿಂ ಮಾಂ ಪೃಚ್ಛಸಿ ಜೀವಾತೋ ಕುಲಕನ್ಯಾಮದೂಷಿತಾಂ ॥ ೧೨೩ ॥
ಇತಿ ಬ್ರುವತ್ಯಾಂ ಕನ್ಯಾಯಾಂ ಪುನಃ ಸ್ವೈರಚರೋ ಮುನಿಃ ।
ಅತರ್ಕಿತಾಗಮಃ ಪ್ರಾಪ್ತೋ ನಾರದೋ ದೇವಲೋಕತಃ ॥ ೧೨೪ ॥
ತತಸ್ತುತುಷತುಸ್ತೌ ತು ದೃಷ್ಟ್ವಾ ತಂ ಮುನಿಸತ್ತಮಂ ।
ಕೃತಪ್ರಣಾಮೌ ಮುನಿನಾ ಪರಿವಿಶ್ರಾಣಿತಾಶಿಷೌ ॥ ೧೨೫ ॥

---

೧೨೦–೧೨೨. ಮಹಾಬಾಹುವಾದ ಆತನು ಹೊಡೆದು ತಿವಿದ ಕ್ಷಣದಲ್ಲಿಯೇ ಆ ರಾಕ್ಷಸನು ಪ್ರಾಣಗಳನ್ನು ತ್ಯಜಿಸಿ ನೆಲಕ್ಕೆ ಬಿದ್ದನು. ಇಂತು ದೇವತೆಗಳನ್ನೂ ನಡುಗಿಸುತ್ತಿದ್ದ ಕಂಕಾಲಕೇತುವನ್ನು ನಿಗ್ರಹಿಸಿ ಶತ್ರುಜಿದ್ರಾಜೇಂದ್ರನು ಪುಳಕಿತ ಶರೀರವುಳ್ಳವಳಾಗಿ ನೋಡುತ್ತ ನಿಂತಿದ್ದ ವಿದ್ಯಾಧರಿಯನ್ನು ಕುರಿತು ಇಂತೆಂದನು. "ಎಲೌ ಮಂಗಳಾಂಗಿಯೆ! ಕೃತಜ್ಞಳೆ! ನಾರದಮುನಿಯು ಆಜ್ಞೆಮಾಡಿದಂತೆ ನಿನ್ನ ಅಭೀಷ್ಟವು ಹೀಗೆ ನನ್ನಿಂದ ನೆರವೇರಿತು. ಈಗ ನಿನಗಾಗಿ ನಾನು ಮತ್ತೇನನ್ನು ಮಾಡಬೇಕೆಂಬುದನ್ನು ತಿಳಿಸು." ಗಂಭೀರಮಾನಸನಾದ ಆತನ ಈ ಮಾತುಗಳನ್ನು ಕೇಳಿ ಆಕೆಯು ಹೇಳತೊಡಗಿದಳು.

೧೨೩. ಮಲಯಗಂಧಿನಿಯು ಹೇಳುತ್ತಾಳೆ:—ವಿಶಾಲಬುದ್ಧಿಯೆ! ವೀರನೆ! ಪ್ರಾಣೇಶ್ವರಾ! ನಿನ್ನ ಪ್ರಾಣಗಳನ್ನೇ ಪಣವನ್ನಾಗಿಟ್ಟು ಜಯಿಸಲ್ಪಟ್ಟವಳೂ, ಸತ್ಕುಲಪ್ರಸೂತಳೂ, ಪರಿಶುದ್ಧಳೂ, ಕನ್ಯೆಯೂ ಆದ ನನ್ನನ್ನು ಹೀಗೇಕೆ ಪ್ರಶ್ನೆ ಮಾಡುತ್ತಿರುವೆ?"

೧೨೪. ಇಂತೆಂದು ಆ ಕನ್ಯೆಯು ಹೇಳುತ್ತಿರುವಂತೆಯೇ ಸ್ವೇಚ್ಛಾಚಾರಿಯಾದ ನಾರದಮುನಿವರ್ಯನು ಪುನಃ ದೇವಲೋಕದಿಂದ ಅನಿರೀಕ್ಷಿತವಾಗಿಯೇ ಅವರಿದ್ದಲ್ಲಿಗೆ ಬಂದು ಸೇರಿದನು.

೧೨೫. ಮುನಿಶ್ರೇಷ್ಠನಾದ ಆತನನ್ನು ಕಂಡು ಅವರಿಬ್ಬರೂ ಅತ್ಯಂತ ಸಂತೋಷಗೊಂಡರು. ಆತನಿಗೆ ಪ್ರಣಾಮಗಳನ್ನು ಮಾಡಲು ಮುನಿಯು ಅವರಿಗೆ ಅನೇಕ ಆಶೀರ್ವಾದಗಳನ್ನು ಮಾಡಿದನು.

ಪಾಣಿಗ್ರಹೇಣ ವಿಧಿನಾಽಭಿಷಿಕ್ತೌ ನಾರದೇನ ತು ।
ಜಗ್ಮತುರ್ನಾರದಾದಿಷ್ಟವರ್ತ್ಮನಾ ಕೃತಮಂಗಲೌ ॥ ೧೨೬ ॥
ತಯಾ ಮಲಯಗಂಧಿನ್ಯಾ ಯುತಃ ಸೋಽಮಿತ್ರಜಿನ್ನೃಪಃ ।
ಪುರೀಂ ವಾರಾಣಸೀಂ ಪ್ರಾಪ್ಯ ಪೌರೈರ್ವಿಹಿತಮಂಗಲಾಂ ॥ ೧೨೭ ॥
ಯದ್ವೀಕ್ಷಣಾದಪಿ ನರೋ ನಾರಕೀಂ ನೈವ ಜಾತುಚಿತ್ ।
ಗತಿಮಾಪ್ನೋತಿ ಮೇಧಾವೀ ತಾಂ ಪುರೀಮವಿಶನ್ನೃಪಃ ॥ ೧೨೮ ॥
ಯಸ್ಯಾಂ ಪುರ್ಯಾಂ ಪ್ರವೇಶಂ ನ ಲಭಂತೇ ವಾಸವಾದಯಃ ।
ಕೈವಲ್ಯಜನಯಿತ್ರೀ ಹಿ ತಾಂ ಪುರೀಮವಿಶನ್ನೃಪಃ ॥ ೧೨೯ ॥
ಅಪಿ ಸ್ಮೃತ್ವಾ ಪುರೀಂ ಯಾಂ ವೈ ಕಾಶೀಂ ತ್ರೈಲೋಕ್ಯಕಾಂಕ್ಷಿತಾಂ ।
ನ ನರೋ ಲಿಪ್ಯತೇ ಪಾಪೈಸ್ತಾಂ ವಿವೇಶ ಸ ಭೂಪತಿಃ ॥ ೧೩೦ ॥
ಯಸ್ಯಾಂ ಪುರ್ಯಾಂ ಪ್ರವಿಷ್ಟೋ ವಾ ಮಹದ್ಭಿರಪಿ ಪಾತಕೈಃ ।
ನಾಭಿಭೂಯೇತ ತಾಂ ಕಾಶೀಂ ಪ್ರಾವಿಶತ್ಸ ವಿಶಾಂ ಪತಿಃ ॥ ೧೩೧ ॥
ಸಾಪಿ ವಿದ್ಯಾಧರೀ ಕಾಶೀಸಮೃದ್ಧಿಂ ವೀಕ್ಷ್ಯ ದೂರತಃ ।
ನಿನಿಂದ ಸ್ವರ್ಗಲೋಕಂ ಚ ಪಾತಾಲನಗರೀಮಪಿ ॥ ೧೩೨ ॥

---

೧೨೬. ಬಳಿಕ ನಾರದಮಹರ್ಷಿಯು ಅವರೀರ್ವರಿಗೂ ಪಾಣಿಗ್ರಹಣವನ್ನು ಮಾಡಿಸಿದನು. ಅಕ್ಷತಾರೋಪಣಾದಿಗಳನ್ನು ಮಾಡಿಕೊಂಡು, ಮಂಗಳಾಶೀರ್ವಾದಗಳನ್ನೂ ತಳೆದು ತಮಗೆ ಇಷ್ಟಬಂದಂತೆ ಹೊರಡಲನುವಾದರು.

೧೨೭. ಬಳಿಕ ಆ ಶತ್ರುಜಿನ್ಮಹಾರಾಜನು ಮಡದಿಯಾದ ಮಲಯಗಂಧಿನಿಯೊಡನೆ ಪಾತಾಳಲೋಕವನ್ನು ಬಿಟ್ಟು ನಾಗರಿಕರಿಂದ ಬಹುವಿಧವಾಗಿ ಅಲಂಕೃತವಾಗಿದ್ದ ತನ್ನ ವಾರಾಣಸೀನಗರಕ್ಕೆ ಹಿಂದಿರುಗಿದನು.

೧೨೮. ಆ ಕ್ಷೇತ್ರವನ್ನು ನೋಡುವುದರಿಂದಲೇ ಕುಶಲನಾದ ಮಾನವನು ಎಂದಿಗೂ ನರಕವಾಸವನ್ನನುಭವಿಸುವುದಿಲ್ಲವಷ್ಟೆ.

೧೨೯. ಆ ನಗರವು ಮಹೇಂದ್ರಾದಿಗಳಿಗೂ ಪ್ರವೇಶಿಸಲು ದುಸ್ಸಾಧವಾದುದು. ಮೋಕ್ಷಪದವಿಗೆ ಅದು ಕಾರಣವಾದುದು.

೧೩೦. ಮೂರುಲೋಕದ ಜೀವರಿಗೂ ಅಭಿಲಾಷಾಸ್ಪದವಾದ ಆ ಪುರಿಯನು ಸ್ಮರಿಸಿದಮಾತ್ರದಿಂದಲೇ ಮನುಷ್ಯನ ಪಾತಕಗಳೂ ದೂರವಾಗುವುವು.

೧೩೧. ಆ ಪುರವನ್ನು ಪ್ರವೇಶಮಾಡುವುದರಿಂದ ಮನುಷ್ಯನು ಮಹಾಪಾತಕಗಳಿಂದಲೂ ಪರಾಭವವನ್ನು ಹೊಂದುವುದಿಲ್ಲವು. ಅಂತಹ ಕಾಶೀಕ್ಷೇತ್ರವನ್ನು ಆ ರಾಜನು ಪ್ರವೇಶಿಸಿದನು.

೧೩೨. ಆ ವಿದ್ಯಾಧರಕನ್ಯೆಯೂ ದೂರದಿಂದಲೇ ಕಾಶಿಯ ಮಹಾವೈಭವವನ್ನು ನೋಡಿದವಳಾಗಿ ಸ್ವರ್ಗಲೋಕವನ್ನೂ, ತಾನು ವಾಸವಾಗಿದ್ದ ಪಾತಾಳಲೋಕವನ್ನೂ ತಾನೇ ನಿಂದಿಸಿಕೊಂಡಳು.

ಪ್ರಾಪ್ಯಾಮಿತ್ರಜಿತಂ ಕಾಂತಂ ತಥಾ ದೃಷ್ಟ್ವಾ ನ ಸಾ ವಧೂಃ ।
ಯಥಾ ದೃಷ್ಟ್ವಾಪ್ಯಹೋ ಕಾಶೀಂ ಪರಮಾನಂದಕೇತನಂ ॥ ೧೩೩ ॥
ಸಾ ಕೃತಾರ್ಥಮಿವಾತ್ಮಾನಂ ಮನ್ಯಮಾನಾ ಮನಸ್ವಿನೀ ।
ತೇನ ಪತ್ಯಾ ಚ ಕಾಶ್ಯಾ ಚ ಪರಾಂ ನಿರ್ವೃತಿಮಾಯಯೌ ॥ ೧೩೪ ॥
ಸೋಽಪ್ಯಮಿತ್ರಜಿತಾಸಾದ್ಯ ಪತ್ನೀಂ ಮಲಯಗಂಧಿನೀಂ ।
ಧರ್ಮಪ್ರಧಾನಂ ಸಂಸೇವ್ಯ ಕಾಮಂ ಪ್ರಾಪೋತ್ತಮಂ ಸುಖಂ ॥ ೧೩೫ ॥
ಸೈಕದಾ ತಂ ಪತಿಂ ರಾಜ್ಞೀ ವಿಷ್ಣುಭಕ್ತಿಪರಾಯಣಂ ।
ರಹೋ ವಿಜ್ಞಾಪಯಾಂಚಕ್ರೇ ಪತಿಭಕ್ತಾ ಸುತಾರ್ಥಿನೀ ॥ ೧೩೬ ॥

ರಾಜ್ಞ್ಯುವಾಚ :—

ಭೂಪಾಭೀಷ್ಟತೃತೀಯಾಯಾಶ್ಚರಿಷ್ಯಾಮಿ ಮಹಾವ್ರತಂ ।
ಯದ್ಯನುಜ್ಞಾ ಭವೇದ್ಭರ್ತುಃ ಪುತ್ರಕಾಮಾರ್ಥಿತಪ್ರದಂ ॥ ೧೩೭ ॥

ರಾಜೋವಾಚ :—

ದೇವ್ಯಭೀಷ್ಟತೃತೀಯಾಯಾಂ ವ್ರತಂ ಕೀದೃಗ್ಭವೇದ್ವದ ।
ಕಾ ದೇವತಾ ತತ್ರ ಪೂಜ್ಯಾ ವಿಧಾನಂ ಚಾಪಿ ಕಿಂ ಫಲಂ ॥ ೧೩೮ ॥

---

೧೩೩. ಆ ಮದವಣಿಗಿತ್ತಿಯು ಅಪರಿಮಿತಾನಂದದ ಧ್ವಜದಂತೆ ಮೆರೆಯುತ್ತಿರುವ ಆ ಕಾಶಿಯನ್ನು ಕಂಡು ಎಷ್ಟು ಸಂತೋಷಗೊಂಡಳೊ, ಅಷ್ಟನ್ನು ಶತ್ರುಜಿದ್ರಾಜನನ್ನು ಪತಿಯಾಗಿ ಪಡೆದುದರಿಂದಲೂ ಹೊಂದಲಿಲ್ಲ.

೧೩೪. ತೀಕ್ಷ್ಣಬುದ್ಧಿಯುಳ್ಳ ಆಕೆಯು ಆತನನ್ನು ಪತಿಯಾಗಿಯೂ, ಕಾಶಿಯನ್ನು ರಾಜಧಾನಿಯಾಗಿಯೂ ಪಡೆದು ತಾನೇ ಕೃತಕೃತ್ಯಳೆಂದು ಚಿಂತಿಸಿ ಅನ್ಯಾದೃಶವಾದ ಸೌಖ್ಯವನ್ನು ಪಡೆದಳು.

೧೩೫. ಆ ಶತ್ರುಜಿದ್ರಾಜನೂ ಮಲಯಗಂಧಿನಿಯನ್ನು ರಾಣಿಯನ್ನಾಗಿ ಪಡೆದು ಧರ್ಮವನ್ನನುಸರಿಸಿದ ಕಾಮವನ್ನೇ ಸೇವಿಸುತ್ತಿರುವವನಾಗಿ ಉತ್ತಮ ಸುಖವನ್ನು ಪಡೆದನು.

೧೩೬. ಪತಿಭಕ್ತಿಪರಾಯಣೆಯಾದ ಆ ಮಹಾರಾಣಿಯು ಪುತ್ರಸಂತತಿಯನ್ನಪೇಕ್ಷಿಸಿ ಒಮ್ಮೆ ವಿಷ್ಣುಭಕ್ತಾಗ್ರೇಸರನಾದ ಆ ಪತಿದೇವನಲ್ಲಿ ಏಕಾಂತವಾಗಿ ಇಂತೆಂದು ವಿಜ್ಞಾಪಿಸಿಕೊಂಡಳು.

೧೩೭. ರಾಣಿಯು ಹೇಳುತ್ತಾಳೆ :—"ಮಹಾರಾಜ ! ಸ್ವಾಮಿಯಾದ ನಿನ್ನ ಅಪ್ಪಣೆಯಾದರೆ ನಾನು ಪುತ್ರಾಭಿಲಾಷೆಯನ್ನು ಈಡೇರಿಸುವಂತಹ ಅಭೀಷ್ಟ ತೃತೀಯೆಯೆಂಬ ಮಹಾವ್ರತವನ್ನಾಚರಿಸಬೇಕೆಂದಿರುವೆನು."

೧೩೮. ರಾಜನು ಹೇಳುತ್ತಾನೆ:—" ದೇವಿಯೆ ! ಅಭೀಷ್ಟತೃತೀಯೆಯಲ್ಲಿ ಮಾಡುವ ವ್ರತವು ಎಂತಹುದೆಂಬುದನ್ನು ನನಗೆ ಹೇಳು. ಆದರಲ್ಲಿ ಯಾವ

ನಾರೀ ಪತ್ಯನನುಜ್ಞಾತಾ ಯಾ ವ್ರತಾದಿ ಸಮಾಚರೇತ್ ।
ಜೀವಂತೀ ದುಃಖಿನೀ ಸಾ ಸ್ಯಾನ್ಮೃತಾ ನಿರಯಮೃಚ್ಛತಿ ॥ ೧೩೯ ॥
ಇತಿ ರಾಜ್ಞೋದಿತಾ ರಾಜ್ಞೀ ಪ್ರವಕ್ತುಮುಪಚಕ್ರಮೇ ।
ಇತಿಕರ್ತವ್ಯತಾಂ ತಸ್ಯ ವ್ರತಸ್ಯ ಸರಹಸ್ಯಕಾಂ ॥ ೧೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವೀರೇಶ್ವರಾವಿರ್ಭಾವೇಽಮಿತ್ರಜಿತ್ಪರಾಕ್ರಮವರ್ಣನಂ"ನಾಮ ದ್ವ್ಯಶೀತಿತಮೋಽಧ್ಯಾಯಃ

---

ದೇವತೆಯು ಪೂಜಿಸಲ್ಪಡಬೇಕು? ಪೂಜೆಯ ಕ್ರಮವೇನು? ಯಾವ ಫಲವು ಲಭಿಸುವುದು?

೧೩೯. ಪತಿಯಿಂದ ಅನುಜ್ಞೆಯನ್ನು ಪಡೆಯದೆ ಪತ್ನಿಯು ಯಾವ ವ್ರತಾದಿಗಳನ್ನು ನಡೆಸಿದರೂ ಅವಳು ಜೀವಿಸಿರುವವರೆಗೂ ದುಃಖಗಳನ್ನೇ ಅನುಭವಿಸುತ್ತ ಮೃತಳಾದಮೇಲೆ ನರಕವನ್ನು ಸೇರುವಳಲ್ಲವೆ."

೧೪೦. ಇಂತೆಂದು ರಾಜನು ಮಾಡಿದ ಪ್ರಶ್ನೆಯನ್ನು ಕೇಳಿ ಮಹಾರಾಣಿಯು ಆ ವ್ರತದ ಕರ್ತವ್ಯವನ್ನೆಲ್ಲ ರಹಸ್ಯಸಹಿತವಾಗಿ ಆತನಿಗೆ ಹೇಳಲುಪಕ್ರಮಿಸಿದಳು.

'ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವೀರೇಶ್ವರಲಿಂಗಪ್ರಾದುರ್ಭಾವ—ಅಮಿತ್ರಜಿತ್ಪರಾಕ್ರಮವರ್ಣನ"ವೆಂಬ ಎಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರ್ಯಶೀತಿತಮೋಽಧ್ಯಾಯಃ

## ವೀರೇಶ್ವರಾವಿರ್ಭಾವವರ್ಣನಂ

**ರಾಜ್ಞ್ಯುವಾಚ :—**

**ಅವಧೇಹಿ ಧರಾನಾಥ ಕಥಯಾಮಿ ಯಥಾತಥಂ ।**
**ವ್ರತಸ್ಯಾಸ್ಯ ವಿಧಾನಂ ಚ ಫಲಂ ಚಾಭೀಷ್ಟದೇವತಾಂ ॥ ೧ ॥**
**ಪುರಾ ಪುರಃ ಶ್ರೀದಪತ್ನ್ಯಾಃ ಶ್ರೀಮುಖ್ಯಾ ಬ್ರಹ್ಮಸೂನುನಾ ।**
**ನಾರದೇನ ಸುತಾರ್ಥಿನ್ಯಾ ವ್ರತಮೇತದುದೀರಿತಂ ॥ ೨ ॥**
**ಚೀರ್ಣಂ ಚಾಥ ತಯಾ ದೇವ್ಯಾ ಪುತ್ರೋಽಭೂನ್ನಳಕೂಬರಃ ।**
**ಅನ್ಯಾಭಿರಪಿ ಬಹ್ವೀಭಿಃ ಪುತ್ರಾಃ ಪ್ರಾಪ್ತಾ ವ್ರತಾದಿತಃ ॥ ೩ ॥**
**ವಿಧಿನಾಪ್ಯತ್ರ ಸಂಪೂಜ್ಯಾ ಗೌರೀ ಸರ್ವವಿಧಾನವಿತ್ ।**
**ಸ್ತನಂಧಯೇನ ಸಹಿತಾ ಧಯತಾ ಸ್ತನಮುನ್ಮುಖಂ ॥ ೪ ॥**
**ಮಾರ್ಗಶೀರ್ಷತೃತೀಯಾಯಾಂ ಶುಕ್ಲಾಯಾಂ ಕಲಶೋಪರಿ ।**
**ತಾಮ್ರಪಾತ್ರಂ ನಿಧಾಯೈಕಂ ತಂಡುಲೈಃ ಪರಿಪೂರಿತಂ ॥ ೫ ॥**

---

## ಕನ್ನಡದ ಅನುವಾದ

### ವೀರೇಶ್ವರಾವಿರ್ಭಾವವರ್ಣನ

೧. ರಾಣಿಯು ಹೇಳುತ್ತಾಳೆ:—ಭೂಪಾಲಕನೆ! ಕೇಳು. ಈ ವ್ರತದ ವಿಧಾನವನ್ನೂ, ಅದರಿಂದಾಗುವ ಫಲವನ್ನೂ, ಪೂಜೆಗೆ ಅಭೀಷ್ಟವಾಗಿರುವ ದೇವತೆಯನ್ನೂ ನಿನಗೆ ಯಥಾರ್ಥವಾಗಿ ಹೇಳುವೆನು.

೨. ಮುನ್ನ ಕುಬೇರನ ಹೆಂಡತಿಯೂ, ಸರ್ವಲಕ್ಷಣಾನ್ವಿತೆಯೂ ಆದ ಋದ್ಧಿದೇವಿಯು ಪುತ್ರಲಾಲಸೆಯಾಗಿದ್ದ ಸಮಯದಲ್ಲಿ ಬ್ರಹ್ಮಮಾನಸಪುತ್ರನಾದ ನಾರದಮುನಿಯಿಂದ ಈ ವ್ರತವು ಆಕೆಗೆ ಉಪದೇಶಿಸಲ್ಪಟ್ಟಿತು.

೩. ಆತನ ಉಪದೇಶದಂತೆಯೇ ಆಕೆಯು ವ್ರತವನ್ನಾಚರಿಸಲು ನಳಕೂಬರ ನೆಂಬ ಪುತ್ರನನ್ನು ಪಡೆಯುವವಳಾದಳು. ಈ ವ್ರತಾಚರಣೆಯಿಂದ ಇತರ ಅನೇಕ ಸ್ತ್ರೀಯರೂ ಸಹ ಪುತ್ರರತ್ನಗಳನ್ನು ಪಡೆದಿರುವರು.

೪. ಈ ವ್ರತದಲ್ಲಿ ಸಕಲ ವಿಧಾನಗಳನ್ನೂ ತಿಳಿದ ಗೌರೀದೇವಿಯನ್ನು ವಿಧ್ಯುಕ್ತರೀತಿಯಿಂದ ಪೂಜಿಸಬೇಕು. ಆ ದೇವತೆಯು ಮುಖವನ್ನು ಮೇಲಕ್ಕೆತ್ತಿ ಕೊಂಡು ತಾಯಿಯ ಸ್ತನ್ಯವನ್ನು ಪಾನಮಾಡುತ್ತಿರುವ ಮಗುವಿನಿಂದ ಕೂಡಿರ ಬೇಕು.

೫. ಮಾರ್ಗಶೀರ್ಷಮಾಸದ ಶುಕ್ಲ ತೃತೀಯೆಯಲ್ಲಿ ಕಳಶಪಾತ್ರೆಯಮೇಲೆ ತಂಡುಲಪೂರಿತವಾದ ತಾಮ್ರದ ಪಾತ್ರೆಯೊಂದನ್ನು ಇಡಬೇಕು.

ಅವಿಚ್ಛಿನ್ನಂ ನವೀನಂ ಚ ರಜನೀರಾಗರಂಜಿತಂ ।
ವಾಸಃ ಪಾತ್ರೋಪರಿ ನ್ಯಸ್ಯ ಸೂಕ್ಷ್ಮಾತ್ಸೂಕ್ಷ್ಮತರಂ ಪರಂ ॥ ೬ ॥
ತಸ್ಯೋಪರಿ ಶುಭಂ ಪದ್ಮಂ ರವಿರಶ್ಮಿವಿಕಾಸಿತಂ ।
ತತ್ಕರ್ಣಿಕಾಯಾ ಉಪರಿ ಚತುಃಸ್ವರ್ಣವಿನಿರ್ಮಿತಂ ॥ ೭ ॥
ವಿಧಿಂ ಸಂಪೂಜಯೇದ್ಭಕ್ತ್ಯಾ ರತ್ನಪಟ್ಟಾಂಬರಾದಿಭಿಃ ।
ಪುಷ್ಪೈರ್ನಾನಾವಿಧೈ ರಮ್ಯೈಃ ಫಲೈರ್ನಾರಂಗಮುಖ್ಯಕೈಃ ॥ ೮ ॥
ಸುಗಂಧೈಶ್ಚಂದನಾದ್ಯೈಶ್ಚ ಕರ್ಪೂರಮೃಗನಾಭಿಭಿಃ ।
ಪರಮಾನ್ನಾದಿನೈವೇದ್ಯೈಃ ಪಕ್ವಾನ್ನೈರ್ಬಹುಭಂಗಿಭಿಃ ॥ ೯ ॥
ಧೂಪೈರಗುರುಮುಖ್ಯೈಶ್ಚ ರಮ್ಯೇ ಕುಸುಮಮಂಡಪೇ ।
ರಾತ್ರೌ ಜಾಗರಣಂ ಕಾರ್ಯಂ ವಿನಿದ್ರೈಃ ಪರಮೋತ್ಸವೈಃ ॥ ೧೦ ॥
ಹಸ್ತಮಾತ್ರಮಿತೇ ಕುಂಡೇ ಜಾತವೇದಸ ಇತ್ಯೃಚಾ ।
ಘೃತೇನ ಮಧುನಾಪ್ಲುತ್ಯ ಜುಹುಯಾನ್ಮಂತ್ರವಿದ್ದ್ವಿಜಃ ॥ ೧೧ ॥

೬. ಛಿದ್ರರಹಿತವಾಗಿಯೂ, ನೂತನವಾಗಿಯೂ, ಹರಿದ್ರಾಚೂರ್ಣದಿಂದ ಅಲಂಕೃತವಾಗಿಯೂ ಇರುವ ಅತ್ಯಂತ ಸೂಕ್ಷ್ಮವಾದ ಸರ್ವೋತ್ಕೃಷ್ಟ ವಸ್ತ್ರವೊಂದನ್ನು ಆ ಪಾತ್ರೆಯಮೇಲೆ ಇಡಬೇಕು.

೭–೮. ಅದರ ಮೇಲೆ ಸೂರ್ಯಕಾಂತಿಯಿಂದಲೇ ಪೂರ್ಣವಾಗಿ ಅರಳಿರುವ ಕಮಲವೊಂದನ್ನು ಇಡಬೇಕು. ಆ ಕಮಲದ ಕರ್ಣಿಕೆಯ ಮೇಲೆ ನಾಲ್ಕು ಭಾರದ ಚಿನ್ನದಿಂದ ಮಾಡಲ್ಪಟ್ಟ ಚತುರ್ಮುಖಬ್ರಹ್ಮನ ಪ್ರತಿಮೆಯನ್ನಿಟ್ಟು, ಭಕ್ತಿಯುಕ್ತನಾಗಿ ನವರತ್ನಗಳು, ಪೀತಾಂಬರಗಳು, ಅನೇಕ ವಿಧಗಳಾದ ಪುಷ್ಪಗಳು, ಕಿತ್ತಳೆಯೇ ಮುಂತಾದ ಅನೇಕ ಮನೋಹರಫಲಗಳು ಮುಂತಾದುವುಗಳಿಂದ ಪೂಜೆಯನ್ನು ಮಾಡಬೇಕು.

೯. ಚಂದನವೇ ಮುಂತಾದ ಸುಗಂಧದ್ರವ್ಯಗಳಿಂದಲೂ, ಕರ್ಪೂರಕಸ್ತೂರಿಗಳಿಂದಲೂ, ಪರಮಾನ್ನವೇ ಮೊದಲಾದ ನೈವೇದ್ಯಗಳಿಂದಲೂ ಅನೇಕ ಬಗೆಗಳಾದ ಪಕ್ವಾನ್ನಗಳಿಂದಲೂ ಪೂಜಿಸಬೇಕು.

೧೦. ಅಗುರುದ್ರವ್ಯಗಳು ಸೇರಿರುವ ಧೂಪಗಳಿಂದಲೂ ಸುಂದರವಾದ ಪುಷ್ಪಮಂಟಪದಲ್ಲಿ ಕುಳಿತಿರುವ ಬ್ರಹ್ಮದೇವನನ್ನು ಪೂಜಿಸಿ ರಾತ್ರಿಯಲ್ಲಿ ನಿದ್ರೆಯನ್ನು ತೊರೆದು ಮಹೋತ್ಸವಗಳನ್ನು ಮಾಡುತ್ತ ಜಾಗರಣೆಯನ್ನು ನೆರವೇರಿಸಬೇಕು.

೧೧. ಬಳಿಕ ಒಂದು ಹಸ್ತದ ಉದ್ದ, ಅಗಲ ಮತ್ತು ಆಳವುಳ್ಳ ಹೋಮಕುಂಡವನ್ನು ಮಾಡಿ ತುಪ್ಪ ಮತ್ತು ಜೇನುತುಪ್ಪಗಳು ಬೆರಸಿದ ಚರುದ್ರವ್ಯದಿಂದ ಬ್ರಾಹ್ಮಣನ ಮೂಲಕ "ಜಾತವೇದಸೇ" ಎಂಬ ಮಂತ್ರದಿಂದ ವಿಧಿಪತ್ತಾಗಿ ಹೋಮವನ್ನು ಮಾಡಬೇಕು.

ಸಹಸ್ರಂ ಕಮಲಾನಾಂಚ ಸ್ಮೇರಾಣಾಂ ಸ್ವಯಮೇವ ಹಿ ।
ನವಪ್ರಸೂತಾಂ ಕಪಿಲಾಂ ಸುಶೀಲಾಂ ಚ ಪಯಸ್ವಿನೀಂ ॥ ೧೨ ॥
ದದ್ಯಾದಾಚಾರ್ಯವರ್ಯಾಯ ಸಾಲಂಕಾರಾಂ ಸ ಲಕ್ಷಣಾಂ ।
ಉಪೋಷ್ಯ ದಂಪತೀ ಭಕ್ತ್ಯಾ ನವಾಂಬರವಿಭೂಷಿತೈಃ ॥ ೧೩ ॥
ಪ್ರಾತಃ ಸ್ನಾತ್ವಾ ಚತುರ್ಥ್ಯಾಂ ಚ ಸಂಪೂಜ್ಯಾಚಾರ್ಯಮಾದೃತಃ ।
ವಸ್ತ್ರೈರಾಭರಣೈರ್ಮಾಲ್ಯೈರ್ದಕ್ಷಿಣಾಭಿರ್ಮುದಾನ್ವಿತೌ ॥ ೧೪ ॥
ಸೋಪಸ್ಕರಾಂ ಚ ತಾಂ ಮೂರ್ತಿಮಾಚಾರ್ಯಾಯ ನಿವೇದಯೇತ್ ।
ಸಮುಚ್ಚರನ್ನಿಮಂ ಮಂತ್ರಂ ವ್ರತಕೃನ್ಮಿಥುನಂ ಮುದಾ ॥ ೧೫ ॥
ನಮೋ ವಿಶ್ವವಿಧಾನಜ್ಞೇ ವಿಧೇ ವಿವಿಧಕಾರಿಣಿ ।
ಸುತಂ ವಂಶಕರಂ ದೇಹಿ ತುಷ್ಟಾಮುಷ್ಮಾದ್ವ್ರತಾಚ್ಛುಭಾತ್ ॥ ೧೬ ॥
ಸಹಸ್ರಂ ಭೋಜಯಿತ್ವಾಥ ದ್ವಿಜಾನಾಂ ಭಕ್ತಿಪೂರ್ವಕಂ ।
ಭುಕ್ತಶೇಷೇಣ ಚಾನ್ನೇನ ಕುರ್ಯಾದ್ವೈ ಪಾರಣಂ ತತಃ ॥ ೧೭ ॥

---

೧೨—೧೩. ಅಂದಿನ ದಿನದಲ್ಲಿ ಪೂಜೆಮಾಡುವ ದಂಪತಿಗಳು ಉಪವಾಸವನ್ನು ಮಾಡಿ ಭಕ್ತಿಯಿಂದ ನೂತನವಸ್ತ್ರಗಳನ್ನು ಧರಿಸಿ ಆಚಾರ್ಯನಿಗೆ ತಾವಾಗಿಯೇ ಅರಳಿರುವ ಒಂದು ಸಾವಿರ ಕಮಲಗಳನ್ನೂ, ಹೊಸದಾಗಿ ಕರುವನ್ನು ಹಾಕಿರುವುದೂ, ಸಾಧುವೂ, ತುಂಬ ಹಾಲನ್ನು ಕೊಡುವುದೂ, ಸರ್ವಾಭರಣಭೂಷಿತವೂ, ಸಕಲ ಲಕ್ಷಣಯುಕ್ತವೂ ಆದ ಕಪಿಲೆಯಾಕಳನ್ನೂ ದಾನ ಮಾಡಬೇಕು.

೧೪. ಮಾರನೆಯ ಚತುರ್ಥಿಯ ದಿನದ ಪ್ರಾತಃಕಾಲದಲ್ಲಿ ಸ್ನಾನವನ್ನು ಮುಗಿಸಿಕೊಂಡು ಸಂತುಷ್ಟಾಂತರಂಗರಾಗಿ ದಂಪತಿಗಳು ಆಚಾರ್ಯನನ್ನು ಆದರದಿಂದ ಬರಮಾಡಿಕೊಂಡು ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಪುಷ್ಪಮಾಲೆಗಳಿಂದಲೂ, ದಕ್ಷಿಣೆಗಳಿಂದಲೂ ಆತನಿಗೆ ಪೂಜೆಯನ್ನು ಮಾಡಬೇಕು.

೧೫. ವ್ರತವನ್ನಾಚರಿಸುವ ದಂಪತಿಗಳು ಸಂತೋಷದಿಂದ ಮುಂದೆ ಹೇಳುವ ಮಂತ್ರವನ್ನುಚ್ಚರಿಸುತ್ತ ಸಕಲ ಸಂಭಾರಗಳೊಡನೆ ಆ ಪೂಜಾಮೂರ್ತಿಯನ್ನು ಆಚಾರ್ಯನಿಗೆ ಸಮರ್ಪಿಸಬೇಕು.

೧೬. "ಲೋಕದ ಸೃಷ್ಟಿವಿಧಾನವನ್ನರಿತ ಸೃಷ್ಟಿಶಕ್ತಿಯೆ! ಬಹುವಿಧ ಜೀವರನ್ನು ಸೃಜಿಸುವವಳೆ! ನಿನಗೆ ನಮಸ್ಕಾರವು. ಪವಿತ್ರವಾದ ಈ ವ್ರತದ ಆಚರಣೆಯಿಂದ ನೀನು ಸಂತುಷ್ಟಳಾಗಿ ನಮಗೆ ವಂಶವನ್ನುದ್ಧಾರಮಾಡುವ ಪುತ್ರನನ್ನನುಗ್ರಹಿಸು."

೧೭. ಬಳಿಕ ದಂಪತಿಗಳು ಭಕ್ತಿಪೂರ್ವಕವಾಗಿ ಒಂದು ಸಾವಿರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ಆಮೇಲೆ ಆ ಅನ್ನಶೇಷದಿಂದ ತಾವೂ ಪಾರಣೆಯನ್ನು ನಡೆಸಬೇಕು.

ಇತ್ಥಮೇತದ್ವ್ರತಂ ರಾಜಂಶ್ಚಿಕೀರ್ಷಾಮಿ ತ್ವಯಾ ಸಹ ।
ಕುರು ಚೈತತ್ಪ್ರಿಯಂ ಮಹ್ಯಮಭೀಷ್ಟಫಲಲಬ್ಧಯೇ ॥ ೧೮ ॥
ಇತಿ ಭೂಪಾಲವರ್ಯೇಣ ಶ್ರುತ್ವಾ ಸಂಹೃಷ್ಟಚೇತಸಾ ।
ಮುನೇ ವ್ರತಂ ಸಮಾಚೀರ್ಣಂ ಸಾಂತರ್ವತ್ನೀ ಬಭೂವ ಹ ॥ ೧೯ ॥
ತಯಾಥ ಪ್ರಾರ್ಥಿತಾ ಗೌರೀ ಗರ್ಭಿಣ್ಯಾ ಭಕ್ತಿತೋಷಿತಾ ।
ಪುತ್ರಂ ದೇಹಿ ಮಹಾಮಾಯೇ ಸಾಕ್ಷಾದ್ವಿಷ್ಣ್ವಂಶಸಂಭವಂ ॥ ೨೦ ॥
ಜಾತಾಮಾತ್ರೋ ವ್ರಜೇತ್ಸ್ವರ್ಗಂ ಪುನರಾಯಾತಿ ಚಾತ್ರ ವೈ ।
ಭಕ್ತಃ ಸದಾಶಿವೇಽತ್ಯರ್ಥಂ ಪ್ರಸಿದ್ಧಃ ಸರ್ವಭೂತಲೇ ॥ ೨೧ ॥
ವಿನೈವ ಸ್ತನ್ಯಪಾನೇನ ಷೋಡಶಾಬ್ದಾಕೃತಿಃ ಕ್ಷಣಾತ್ ।
ಏವಂ ಭೂತಃ ಸುತೋ ಗೌರಿ ಯಥಾ ಮೇ ಸ್ಯಾತ್ತಥಾ ಕುರು ॥ ೨೨ ॥
ಮೃಡಾನ್ಯಾಪಿ ತಥೇತ್ಯುಕ್ತಾ ರಾಜ್ಞೀ ಭಕ್ತ್ಯಾತಿತುಷ್ಟಯಾ ।
ಅಥ ಕಾಲೇನ ತನಯಂ ಮೂಲರ್ಕ್ಷೇ ಸಾಪ್ಯಜೀಜನತ್ ॥ ೨೩ ॥

---

೧೮. ಮಹಾರಾಜನೆ! ಈ ವ್ರತವು ಇಂತು ನಡೆಯಬೇಕು. ಇದನ್ನು ನಾನು ನಿನ್ನೊಡನೆ ಮಾಡಬೇಕೆಂದಿರುವೆನು. ನಮ್ಮಿಬ್ಬರ ಅಭೀಷ್ಟಫಲವು ಲಭಿಸುವುದಕ್ಕಾಗಿ ಈ ವಿಷಯದಲ್ಲಿ ನನಗೆ ಪ್ರಿಯವನ್ನು ಮಾಡುವವನಾಗು.

೧೯. ಅಗಸ್ತ್ಯಮಹಾಮುನಿಯೆ! ಇಂತಹ ವ್ರತವನ್ನು ಕೇಳುತ್ತಲೆ ಆ ರಾಜೋತ್ತಮನು ಸಂತೋಷದಿಂದ ತುಂಬಿದ ಮನಸ್ಸುಳ್ಳವನಾಗಿ ಪತ್ನಿಯೊಡನೆ ಆ ವ್ರತವನ್ನು ಯಥಾವಿಧಿಯಾಗಿ ಆಚರಿಸಿದನು. ಆಕೆಯೂ ಅಲ್ಪ ಕಾಲದಲ್ಲಿಯೇ ಗರ್ಭವನ್ನು ಧರಿಸುವವಳಾದಳು.

೨೦. ಗರ್ಭಿಣಿಯಾಗಿದ್ದಾಗಲೇ ಆಕೆಯು ಪಾರ್ವತೀದೇವಿಯನ್ನು ಭಕ್ತಿಯಿಂದ ಸಂತೋಷಗೊಳಿಸಿ ಇಂತೆಂದು ಪ್ರಾರ್ಥಿಸಿದಳು. "ಓ ಮಹಾಮಾಯೆ! ನನಗೆ ವಿಷ್ಣುವಿನ ಅಂಶದಿಂದ ಕೂಡಿರುವ ಒಬ್ಬ ಪುತ್ರನನ್ನು ಕೊಡು.

೨೧. ಅವನು ಹುಟ್ಟಿದ ಕ್ಷಣದಲ್ಲಿಯೇ ಸ್ವರ್ಗಲೋಕಕ್ಕೆ ಹೊರಟುಹೋಗಬೇಕು. ಪುನಃ ಇಲ್ಲಿಗೇ ಬಂದಿರಬೇಕು. ಅವನು ಮಹೇಶ್ವರನಿಗೆ ಅತ್ಯಂತ ಪ್ರಿಯನಾದ ಭಕ್ತನಾಗಿರಬೇಕು. ಸಕಲ ಭೂಮಂಡಲದಲ್ಲಿಯೂ ಪ್ರಖ್ಯಾತಿಯನ್ನು ಪಡೆಯಬೇಕು.

೨೨. ನನ್ನ ಸ್ತನ್ಯವನ್ನು ಪಾನಮಾಡದೆಯೇ ಹುಟ್ಟಿದ ಕ್ಷಣದಲ್ಲಿ ಹದಿನಾರು ವರ್ಷಗಳ ಪ್ರಾಯದವನಾಗಬೇಕು. ಎಲೌ ಗೌರಿಯೆ! ನನ್ನ ಮಗನು ಇಂತಹ ಮಾಹಾತ್ಮ್ಯೆಯುಳ್ಳವನಾಗುವ ವರವನ್ನು ನನಗೆ ಅನುಗ್ರಹಿಸು."

೨೩. ಮಹಾರಾಣಿಯ ಭಕ್ತಿಯಿಂದ ಸಂತುಷ್ಟಳಾದ ಪಾರ್ವತೀದೇವಿಯೂ ಹಾಗೆಯೇ ಆಗಲೆಂದು ಹೇಳಿದಳು. ಬಳಿಕ ನವಮಾಸಗಳು ತುಂಬಲು ಆಕೆಯು ಮೂಲಾನಕ್ಷತ್ರದಲ್ಲಿ ಒಂದು ಗಂಡುಮಗುವನ್ನು ಪಡೆದಳು.

ಹಿತೈರಮಾತ್ಯೈರಥ ಸಾ ವಿಜ್ಞಪ್ತಾರಿಷ್ಟಸಂಸ್ಥಿತಾ ।
ದೇವೀ ರಾಜಾರ್ಥಿನೀ ಚೇತ್ತ್ವಂ ತ್ಯಜ ದುಷ್ಟರ್ಕ್ಷಜಂ ಸುತಂ ॥ ೨೪ ॥
ಸಾ ಮಂತ್ರಿವಾಕ್ಯಮಾಕರ್ಣ್ಯ ಕೇವಲಂ ಪತಿದೇವತಾ ।
ಅತ್ಯಾಕ್ಷೀತ್ತಂ ತಥಾ ಪ್ರಾಪ್ತಂ ತನಯಂ ನಯಕೋವಿದಾ ॥ ೨೫ ॥
ಧಾತ್ರೇಯಿಕಾಂ ಸಮಾಕಾರ್ಯ ಪ್ರಾಹೇದಂ ಸಾ ನೃಪಾಂಗನಾ ।
ಪಂಚಮುದ್ರೇ ಮಹಾಪೀಠೇ ವಿಕಟಾನಾಮ ಮಾತೃಕಾ ॥ ೨೬ ॥
ತದಗ್ರೇ ಸ್ಥಾಪಯಿತ್ವಾಮುಂ ಬಾಲಂ ಧಾತ್ರೇಯಿಕೇ ವದ ।
ಗೌರ್ಯಾ ದತ್ತಃ ಶಿಶುರಸೌ ತವಾಗ್ರೇ ವಿನಿವೇದಿತಃ ॥ ೨೭ ॥
ರಾಜ್ಞ್ಯಾ ಪತ್ಯುಃ ಪ್ರಿಯೈಷಿಣ್ಯಾ ಮಂತ್ರಿವಿಜ್ಞಪ್ತಿನುನ್ನಯಾ ।
ಸಾಪಿ ರಾಜ್ಞ್ಯುದಿತಂ ಕೃತ್ವಾ ಶಿಶುಂ ಲಾಸ್ಯಶಶಿಪ್ರಭಂ ॥ ೨೮ ॥
ವಿಕಟಾಯಾಃ ಪುರಃ ಪ್ರಾಪ್ಯ ಗೃಹಂ ಧಾತ್ರೇಯಿಕಾ ಗತಾ ।
ಅಥ ಸಾ ವಿಕಟಾ ದೇವೀ ಸಮಾಹೂಯ ಚ ಯೋಗಿನೀಃ ॥ ೨೯ ॥

---

೨೪. ಕ್ಷಿಪ್ರದಲ್ಲಿಯೇ ಅರಿಷ್ಟವೊದಗುವ ಸಂಭವವನ್ನು ಕಂಡು ಆಪ್ತರಾದ ಮಂತ್ರಿಗಳೆಲ್ಲರೂ ಆಕೆಗೆ "ಎಲೌ ದೇವಿಯೆ! ನಿನಗೆ ಮಹಾರಾಜನ ಸೌಖ್ಯದಲ್ಲಿ ಅಭಿಲಾಷೆಯಿರುವುದಾದರೆ ದುಷ್ಟನಕ್ಷತ್ರದಲ್ಲಿ ಜನಿಸಿರುವ ಈ ಪುತ್ರನನ್ನು ತ್ಯಜಿಸು" ಎಂದು ವಿಜ್ಞಾಪಿಸಿದರು.

೨೫. ಆಕೆಯು ರಾಜನೀತಿವಿಶಾರದಳಾಗಿದ್ದುದರಿಂದಲೂ, ಕೇವಲ ಪತಿಯನ್ನೇ ಪರದೈವವೆಂದು ಭಾವಿಸಿದ್ದುದರಿಂದಲೂ ಮಂತ್ರಿಗಳ ವಾಕ್ಯವನ್ನು ಕೇಳಿ ವ್ರತದ ಫಲವಾಗಿ ಪಡೆದಿದ್ದರೂ ಮಗುವನ್ನು ತ್ಯಾಗಮಾಡಿದಳು.

೨೬–೨೭. ಆ ರಾಜಮಹಿಷಿಯು ಒಬ್ಬ ದಾಸಿಯನ್ನು ಹತ್ತಿರಕ್ಕೆ ಕರೆದು ಹೇಳಿದಳು. "ಪಂಚಮುದ್ರ ಮಹಾಪೀಠದಲ್ಲಿ ವಿಕಟೆಯೆಂಬ ಮಾತೃಕೆಯು ನೆಲಸಿರುವಳು. ಎಲೌ ದಾದಿಯೆ! ಈ ಮಗುವನ್ನು ಅದರ ಮುಂದೆ ಮಲಗಿಸಿ ಈ ಪ್ರಕಾರವಾಗಿ ಹೇಳು. 'ದೇವಿಯೆ! ಗೌರಿಯ ಪ್ರಸಾದವಾಗಿ ಲಭಿಸಿದ ಈ ಮಗುವನ್ನು ನಿನ್ನ ಮುಂದೆ ನಿವೇದನೆ ಮಾಡಿರುವೆನು.

೨೮–೩೦. ಇದರ ತಾಯಿಯಾದ ಮಹಾರಾಣಿಯು ಗಂಡನಿಗೆ ಪ್ರಿಯವನ್ನುಂಟುಮಾಡುವವಳಾಗಿ ಮಂತ್ರಿಗಳ ವಾಕ್ಯಗಳಿಂದ ಚೋದಿತಳಾಗಿ ನಿನಗೆ ಸಮರ್ಪಿಸಿರುವಳು'" ಎಂದಳು. ದಾದಿಯೂ ತನ್ನ ಒಡತಿಯ ಅಪ್ಪಣೆಯನ್ನು ಕೇಳಿ ಚಂದ್ರಬಿಂಬವನ್ನು ಹೋಲುವ ಮುಖವುಳ್ಳ ಆ ಶಿಶುವನ್ನು ಯಥಾವಿಧಿಯಾಗಿ ವಿಕಟಾದೇವಿಯ ಮುಂದೆ ಮಲಗಿಸಿ ತನ್ನ ಮನೆಗೆ ಹೊರಟುಹೋದಳು. ಬಳಿಕ ಆ ವಿಕಟಾದೇವಿಯು ತನ್ನ ಪರಿಚಾರಿಕೆಯರಾದ ಯೋಗಿನಿಯರನ್ನು ಬಳಿಗೆ ಕರೆದು ಅವರಿಗೆ ಅಪ್ಪಣೆಯನ್ನು ಮಾಡಿದಳು :—ಈ ಶಿಶುವನ್ನು ಮಾತೃಗಣಗಳ

ಉವಾಚ ನಯತ ಕ್ಷಿಪ್ರಂ ಶಿಶುಂ ಮಾತೃಗಣಾಗ್ರತಃ ।
ತಾಸಾಮಾಜ್ಞಾಂ ಚ ಕುರುತ ರಕ್ಷತಾಮುಂ ಪ್ರಯತ್ನತಃ ॥ ೩೦ ॥
ಯೋಗಿನ್ಯೋ ವಿಕಟಾವಾಕ್ಯಾತ್ಖೇಚರ್ಯಸ್ತಾಃ ಕ್ಷಣೇನ ತಂ ।
ನಿನ್ಯುರ್ಗಗನಮಾರ್ಗೇಣ ಬ್ರಾಹ್ಮ್ಯಾದ್ಯಾ ಯತ್ರ ಮಾತರಃ ॥ ೩೧ ॥
ಪ್ರಣಮ್ಯ ಯೋಗಿನೀವೃಂದಂ ತಂ ಶಿಶುಂ ಸೂರ್ಯವರ್ಚಸಂ ।
ಪುರೋ ನಿಧಾಯ ಮಾತೄಣಾಂ ಪ್ರೋವಾಚ ವಿಕಟೋದಿತಂ ॥ ೩೨ ॥
ಬ್ರಹ್ಮಾಣೀ ವೈಷ್ಣವೀ ರೌದ್ರೀ ವಾರಾಹೀ ನಾರಸಿಂಹಿಕೀ ।
ಕೌಮಾರೀ ಚಾಪಿ ಮಾಹೇಂದ್ರೀ ಚಾಮುಂಡಾ ಚೈವ ಚಂಡಿಕಾ ॥ ೩೩ ॥
ದೃಷ್ಟ್ವಾ ತಂ ಬಾಲಕಂ ರಮ್ಯಂ ವಿಕಟಾಪ್ರೇಷಿತಂ ತತಃ ।
ಪಪ್ರಚ್ಛುರ್ಯುಗಪಡ್ಡಿಂಭಂ ಕಸ್ತೇ ತಾತಃ ಪ್ರಸೂಶ್ಚ ಕಾ ॥ ೩೪ ॥
ಮಾತೃಭಿಶ್ಚೇತಿ ಪೃಷ್ಟಃ ಸ ಯದಾಕಿಂಚಿನ್ನವಕ್ತಿ ಚ ।
ತದಾ ತದ್ಯೋಗಿನೀಚಕ್ರಂ ಪ್ರಾಹ ಮಾತೃಗಣಾನ್ಸ್ತ್ವಿತಿ ॥ ೩೫ ॥
ರಾಜ್ಯಯೋಗ್ಯೋ ಭವತ್ಯೇಷ ಮಹಾಲಕ್ಷಣಲಕ್ಷಿತಃ ।
ಪುನಸ್ತತ್ರೈವ ನೇತವ್ಯೋ ಯೋಗಿನ್ಯಸ್ತ್ವವಿಲಂಬಿತಂ ॥ ೩೬ ॥

ಬಳಿಗೆ ಕರೆದೊಯ್ಯಿರಿ. ಅವರ ಅಪ್ಪಣೆಯನ್ನು ಪಾಲಿಸಿರಿ. ಅಲ್ಲಿಯವರೆಗೂ ಈ ಶಿಶುವನ್ನು ಬಹಳ ಜಾಗರೂಕತೆಯಿಂದ ಕಾಪಾಡಿರಿ.

೩೧. ವಿಕಟಾದೇವಿಯ ಮಾತಿನಂತೆಯೇ ಆಕಾಶಸಂಚಾರಿಗಳಾದ ಆ ಯೋಗಿನಿಯರು ಒಂದು ಕ್ಷಣಮಾತ್ರದಲ್ಲಿಯೇ ಆ ಮಗುವನ್ನೆತ್ತಿಕೊಂಡು ಆಕಾಶಮಾರ್ಗದಲ್ಲಿ ಬ್ರಾಹ್ಮಿಯೇ ಮೊದಲಾದ ಸಪ್ತಮಾತೃಕೆಯರಿದ್ದಲ್ಲಿಗೆ ಹೋದರು.

೩೨. ಆ ಯೋಗಿನಿಯರ ಗಡಣವು ಸಪ್ತಮಾತೃಕೆಯರನ್ನು ನಮಸ್ಕರಿಸಿ ಸೂರ್ಯತೇಜಸ್ಸಂಪನ್ನವಾದ ಆ ಮಗುವನ್ನು ಅವರ ಮುಂದಿಟ್ಟು ವಿಕಟಾದೇವಿಯ ಸಂದೇಶವನ್ನು ಬಿನ್ನವಿಸಿತು.

೩೩–೩೪. ಬ್ರಾಹ್ಮೀ, ವೈಷ್ಣವೀ, ಮಾಹೇಶ್ವರೀ, ವಾರಾಹೀ, ನಾರಸಿಂಹೀ, ಕೌಮಾರೀ, ಮಾಹೇಂದ್ರೀ, ಚಾಮುಂಡಾ ಮತ್ತು ಚಂಡಿಕೆಯರೆಂಬ ಆ ಮಾತೃಕೆಯರು ವಿಕಟಾದೇವಿಯು ಕಳುಹಿಸಿದ ಆ ಬಾಲಕನನ್ನು ಕಂಡು ಅವನ ಅಂದಕ್ಕೆ ಮನಸೋತು ಒಮ್ಮೆಯೇ ಎಲ್ಲರೂ 'ನಿನ್ನ ತಂದೆ ಯಾರು? ನಿನ್ನನ್ನು ಹಡೆದ ತಾಯಿ ಯಾರು?'' ಎಂದು ಪ್ರಶ್ನೆಮಾಡಿದರು.

೩೫. ಮಾತೃಕೆಯರು ಕೇಳಿದ ಈ ಪ್ರಶ್ನೆಗೆ ಆ ಮಗುವು ಯಾವ ಉತ್ತರವನ್ನೂ ಕೊಡಲಿಲ್ಲ. ಆಗ ಯೋಗಿನಿಯರು ಮಾತೃಗಳಿಗೆ ಮಗುವಿನ ವೃತ್ತಾಂತವನ್ನು ಹೇಳಿದರು.

೩೬–೩೭. ಎಲ್ಲವನ್ನೂ ಕೇಳಿ ಮಾತೃಕೆಯರು ಇಂತೆಂದರು. ''ಈ ಬಾಲಕನು

**ಪಂಚಮುದ್ರಾ ಮಹಾದೇವಿ ತಿಷ್ಠತೇ ಯತ್ರ ಕಾಮ್ಯದಾ ।**
**ಯಸ್ಯಾಃ ಸಂಸೇವನಾನ್ನೄಣಾಂ ನಿರ್ವಾಣಶ್ರೀರದೂರತಃ ॥ ೩೭ ॥**
**ಸರ್ವತ್ರ ಶುಭಜನ್ಮಿನ್ಯಾಂ ಕಾಶ್ಯಾಂ ಮುಕ್ತಿಃ ಪದೇ ಪದೇ ।**
**ತಥಾಪಿ ಸವಿಶೇಷಂ ಹಿ ತತ್ಪೀಠಂ ಸರ್ವಸಿದ್ಧಿಕೃತ್ ॥ ೩೮ ॥**
**ತತ್ಪೀಠಸೇವನಾದಸ್ಯ ಷೋಡಶಾಬ್ದಾಕೃತೇಃ ಶಿಶೋಃ ।**
**ಸಿದ್ಧಿರ್ಭವಿತ್ರೀ ಪರಮಾ ವಿಶ್ವೇಶಾನುಗ್ರಹಾತ್ಪರಾತ್ ॥ ೩೯ ॥**
**ಏವಂ ಮಾತೃಗಣಾಶೀರ್ಭಿರ್ಯೋಗಿನೀಭಿಃ ಕ್ಷಣೇನ ಹಿ ।**
**ಪ್ರಾಪಿತೋ ಮಾತೃವಾಕ್ಯೇನ ಪಂಚಮುದ್ರಾಂಕಿತಂ ಪುನಃ ॥ ೪೦ ॥**
**ಸಂಪ್ರಾಪ್ಯ ತನ್ಮಹಾಪೀಠಂ ಸ್ವರ್ಗಲೋಕಾದಿಹಾಗತಃ ।**
**ಆನಂದಕಾನನೇ ದಿವ್ಯಂ ತತಾಪ ವಿಪುಲಂ ತಪಃ ॥ ೪೧ ॥**
**ತಪಸಾತೀವ ತೀವ್ರೇಣ ನಿಶ್ಚಲೇಂದ್ರಿಯಚೇತಸಃ ।**
**ತಸ್ಯ ರಾಜಕುಮಾರಸ್ಯ ಪ್ರಸನ್ನೋಽಭೂದುಮಾಧವಃ ॥ ೪೨ ॥**

---

ಸಕಲ ಶುಭಲಕ್ಷಣಗಳಿಂದ ಕೂಡಿರುವುದರಿಂದ ರಾಜ್ಯಾಧಿಕಾರವನ್ನು ಮಾಡಲು ಯೋಗ್ಯನಾಗಿರುವನು. ಎಲೌ ಯೋಗಿನಿಯರಿರಾ ! ಪುನಃ ಇವನನ್ನು ತಡಮಾಡದೆ ಸರ್ವಾಭೀಷ್ಟಪ್ರದೆಯಾದ ಪಂಚಮುದ್ರಾದೇವಿಯಿರುವ ಸ್ಥಳಕ್ಕೇ ಕರೆದುಕೊಂಡು ಹೋಗಬೇಕು. ಆಕೆಯನ್ನು ಸೇವಿಸುವ ಮನುಷ್ಯನಿಗೆ ಮೋಕ್ಷಲಕ್ಷ್ಮಿಯು ಅನತಿದೂರದಲ್ಲಿಯೇ ಇರುವಳು.

೩೮. ಎಲ್ಲೆಲ್ಲಿಯೂ ಮಂಗಳಗಳನ್ನೇ ಕೊಡುತ್ತಿರುವ ಕಾಶೀಕ್ಷೇತ್ರದಲ್ಲಿ ಹೆಜ್ಜೆಹೆಜ್ಜೆಗೂ ಮೋಕ್ಷಫಲವಿದ್ದೇ ಇರುವುದು. ಅದರಲ್ಲಿಯೂ ಸರ್ವಾರ್ಥದಾಯಕವಾದ ಆ ಪೀಠದಲ್ಲಿ ಒಂದು ವಿಶೇಷವಿರುವುದು.

೩೯. ಆ ಪೀಠವನ್ನು ಸೇವಿಸುವುದರಿಂದ ಹದಿನಾರು ವರ್ಷಗಳ ಪ್ರಾಯದ ಆಕಾರವುಳ್ಳ ಈ ಶಿಶುವಿಗೆ ವಿಶ್ವೇಶ್ವರನ ಪರಮಾನುಗ್ರಹವು ಲಭಿಸುವುದು. ಅದರಿಂದ ಮುಂದೆ ಇವನಿಗೆ ಮಹಾಸಿದ್ಧಿಯೂ ಉಂಟಾಗಲಿರುವುದು.''

೪೦. ಇಂತೆಂದು ಆ ಮಾತೃಕೆಯರು ಮಗುವನ್ನು ಆಶೀರ್ವದಿಸಿಕೊಟ್ಟರು. ಅವರ ಮಾತಿನಂತೆಯೇ ಯೋಗಿನಿಯರು ಕ್ಷಣಮಾತ್ರದಲ್ಲಿಯೇ ಪುನಃ ಅದನ್ನು ಪಂಚಮುದ್ರಾದೇವಿಯ ಬಳಿಗೆ ಕರೆದುಕೊಂಡು ಬಂದರು.

೪೧. ಈ ವಿಧವಾಗಿ ಸ್ವರ್ಗಲೋಕದಿಂದ ಪುನಃ ಭೂಲೋಕಕ್ಕೆ ಬಂದು ಆ ಬಾಲಕನು ಆನಂದಕಾನನದಲ್ಲಿರುವ ಪಂಚಮುದ್ರಾ ಮಹಾಪೀಠವನ್ನು ಸೇರಿ ಸಾತ್ವಿಕವೂ, ಅತ್ಯುಗ್ರವೂ ಆದ ತಪಸ್ಸನ್ನಾಚರಿಸುತ್ತಿದ್ದನು.

೪೨. ನಿಶ್ಚಲಗಳಾದ ಇಂದ್ರಿಯಗಳೂ ಮನಸ್ಸೂ ಉಳ್ಳ ಆ ರಾಜಕುಮಾರನು ಮಾಡಿದ ಅತಿತೀವ್ರವಾದ ತಪಸ್ಸಿನಿಂದ ಕಾಲಕ್ರಮದಲ್ಲಿ ಮಹೇಶ್ವರನೂ ಅವನ ವಿಷಯದಲ್ಲಿ ಸಂತೋಷಗೊಂಡನು.

ಆವಿರ್ಬಭೂವ ಪುರತೋ ಲಿಂಗರೂಪೇಣ ಶಂಕರಃ ।
ಪ್ರೋವಾಚ ಚ ಪ್ರಸನ್ನೋಽಸ್ಮಿ ವರಂ ಬ್ರೂಹಿ ನೃಪಾಂಗಜ ॥ ೪೩ ॥
ಸ್ಕಂದ ಉವಾಚ :—
ಸರ್ವಜ್ಯೋತಿರ್ಮಯಂ ಲಿಂಗಂ ಪುರತೋ ವೀಕ್ಷ್ಯ ವಾಙ್ಮಯಂ ।
ಸಪ್ತಪಾತಾಲಮುದ್ಭಿದ್ಯ ಸ್ಥಿತಂ ಬೃಹದನುಗ್ರಹಾತ್ ॥ ೪೪ ॥
ಪ್ರಣಮ್ಯ ದಂಡವದ್ಭೂಮೌ ಪರಿತುಷ್ಟಾವ ಧೂರ್ಜಟಿಂ ।
ಸೂಕ್ತೈರ್ಜನ್ಮಾಂತರಾಭ್ಯಸ್ತೈಃ ಸುಹೃಷ್ಟೋ ರುದ್ರದೈವತೈಃ ॥ ೪೫ ॥
ತತಃ ಪ್ರಸನ್ನೋ ಭಗವಾನ್ದೇವದೇವೋ ಮಹೇಶ್ವರಃ ।
ಸಂತುಷ್ಟಸ್ತಪಸಾ ತಸ್ಯ ಪ್ರೋವಾಚ ವೃಷಭಧ್ವಜಃ ॥ ೪೬ ॥
ದೇವದೇವ ಉವಾಚ :—
ವರಂ ವರಯ ಸಂತಪ್ತ ತಪಸಾ ಕ್ಲೇಶಿತಂ ವಪುಃ ।
ತ್ವಯೇದಂ ಬಾಲವಪುಷಾ ವಶೀಕೃತಂ ಮನೋ ಮಮ ॥ ೪೭ ॥

---

೪೩. ಆತನ ಇದಿರಿನಲ್ಲಿಯೆ ಲಿಂಗರೂಪದಿಂದ ಪ್ರತ್ಯಕ್ಷವಾದ ಆ ಶಂಕರನು ಆತನನ್ನು ಕುರಿತು, "ರಾಜಪುತ್ರ! ನಿನ್ನ ತಪಸ್ಸಿನಿಂದ ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವನ್ನು ತಿಳಿಸು" ಎಂದು ಬೆಸಸಿದನು.

೪೪. ಸ್ಕಂದನು ಹೇಳುತ್ತಾನೆ:—ಸಮಸ್ತ ಜ್ಯೋತಿಗಳನ್ನೊಳಕೊಂಡುದೂ, ವೇದಮಯವೂ, ತನ್ನಲ್ಲಿರುವ ಹಿರಿದಾದ ಅನುಕಂಪದಿಂದ ಏಳು ಅಧೋಲೋಕಗಳನ್ನು ಭೇದಿಸಿಕೊಂಡು ಬಂದು ತನ್ನ ಮುಂದೆ ನಿಂತಿರುವುದೂ ಆದ ಆ ಮಹಾಲಿಂಗವನ್ನು ರಾಜಕುಮಾರನು ನೋಡಿದನು.

೪೫. ಒಡನೆಯೆ ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿ ಅಪರಿಮಿತಾನಂದದಿಂದ ಕೂಡಿ ಜನ್ಮಾಂತರಗಳಲ್ಲಿ ಅಭ್ಯಾಸಮಾಡಿದ್ದ ಅನೇಕ ರುದ್ರಸೂಕ್ತಮಂತ್ರಗಳಿಂದ ಆ ಮಹೇಶ್ವರನನ್ನು ಸ್ತೋತ್ರಮಾಡಿದನು.

೪೬. ಸರ್ವೈಶ್ವರ್ಯಸಮನ್ವಿತನೂ, ದೇವಾಧಿದೇವನೂ, ವೃಷಭವಾಹನನೂ ಆದ ಮಹೇಶ್ವರನು ಆ ಭಕ್ತನ ತಪಸ್ಸಿನಿಂದ ಸಂತೋಷಗೊಂಡು ಪ್ರಸನ್ನನಾಗಿ ಆತನನ್ನು ಕುರಿತು ಇಂತೆಂದು ಹೇಳತೊಡಗಿದನು.

೪೭. ಮಹಾದೇವನು ಹೇಳುತ್ತಾನೆ:—ಅಯ್ಯಾ ರಾಜಪುತ್ರನೆ! ವರವನ್ನು ಬೇಡಿಕೋ. ನೀನು ಆಚರಿಸಿರುವ ತಪಸ್ಸಿನಿಂದ ನಿನ್ನ ಶರೀರವು ಬಹಳ ಕ್ಲೇಶಕ್ಕೊಳಗಾಗಿರುವುದು. ಸುಕುಮಾರ ಶರೀರನಾದ ನಿನಗೆ ನನ್ನ ಮನಸ್ಸೇ ವಶವಾಗಿರುವುದು.

ಶಿವೋಕ್ತಂ ಚ ಸಮಾಕರ್ಣ್ಯ ವರದಾನಂ ಪುನಃ ಪುನಃ ।
ವರಂ ಚ ಪ್ರಾರ್ಥಯಾಂಚಕ್ರೇ ಪರಿಹೃಷ್ಟತನೂರುಹಃ ॥ ೪೮ ॥

ಕುಮಾರ ಉವಾಚ :—

ದೇವದೇವ ಮಹದೇವ ಯದಿ ದೇಯೋ ವರೋ ಮಮ ।
ತದತ್ರ ಭವತಾ ಸ್ಥೇಯಂ ಭವತಾಪಹೃತಾ ಸದಾ ॥ ೪೯ ॥
ಅಸ್ಮಿಂಲ್ಲಿಂಗೇ ಸ್ಥಿತಃ ಶಂಭೋ ಕುರು ಭಕ್ತಸಮೀಹಿತಂ ।
ವಿನಾ ಮುದ್ರಾದಿಕರಣಂ ಮಂತ್ರೇಣಾಪಿ ವಿನಾ ವಿಭೋ ॥ ೫೦ ॥
ದಿಶ ಸಿದ್ಧಿಂ ಪರಾಮತ್ರ ದರ್ಶನಾತ್ಸ್ಪರ್ಶನಾನ್ನತೇಃ ।
ಅಸ್ಯ ಲಿಂಗಸ್ಯ ಯೇ ಭಕ್ತಾ ಮನೋವಾಕ್ಕಾಯಕರ್ಮಭಿಃ ।
ಸದೈವಾನುಗ್ರಹಸ್ತೇಷು ಕರ್ತವ್ಯೋ ವರ ಏಷ ಮೇ ॥ ೫೧ ॥
ಇತಿ ತದ್ವರಮಾಕರ್ಣ್ಯ ಲಿಂಗರೂಪೋऽವದತ್ಪ್ರಭುಃ ।
ಏವಮಸ್ತು ಯದುಕ್ತಂ ತೇ ವೀರವೈಷ್ಣವಸೂನುನಾ ॥ ೫೨ ॥
ಜನೇತುರ್ವಿಷ್ಣುಭಕ್ತಾಚ್ಚ ರಾಜ್ಞೋऽಮಿತ್ರಜಿತೋ ಭವಾನ್ ।
ವಿಷ್ಣ್ವಂಶ ಏವಮುತ್ಪನ್ನೋ ಮಮ ಭಕ್ತಿಪರೋऽಂಗಜ ॥ ೫೩ ॥

---

೪೮. ಆ ಬಾಲಕನು ಮಹೇಶ್ವರನ ಈ ಮಾತುಗಳನ್ನೂ ಮತ್ತೆ ಮತ್ತೆ ವರವನ್ನು ಕೇಳೆಂಬುವ ಒತ್ತಾಯವನ್ನೂ ಕೇಳಿ ಹರ್ಷದಿಂದ ಮೈನವಿರೇಳುತ್ತಿರಲು ವರವನ್ನು ಪ್ರಾರ್ಥಿಸಿದನು.

೪೯. ಬಾಲಕನು ಕೇಳುತ್ತಾನೆ:—"ದೇವಾಧಿದೇವನೆ! ಮಹಾದೇವನೆ! ನನಗೆ ವರವನ್ನು ಕೊಡುವೆಯಾದರೆ ಭಕ್ತರ ಸಂಸಾರಕ್ಲೇಶಗಳನ್ನು ಪರಿಹರಿಸುತ್ತ ನೀನು ಇಲ್ಲಿಯೇ ನೆಲಸಿರಬೇಕು.

೫೦. ಶಂಭುವೆ! ಸರ್ವವ್ಯಾಪಿಯೆ! ನೀನು ಈ ಲಿಂಗದಲ್ಲಿಯೇ ಸನ್ನಿಹಿತನಾಗಿದ್ದುಕೊಂಡು ಮುದ್ರಾದಿಗಳಾಗಲಿ, ಮಂತ್ರಜಪಗಳಾಗಲಿ ಇಲ್ಲದೆಯೇ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುತ್ತಿರು.

೫೧. ನಿನ್ನ ದರ್ಶನವನ್ನೂ ಸ್ಪರ್ಶವನ್ನೂ ನಮಸ್ಕಾರವನ್ನೂ ಮಾಡುವ ಭಕ್ತರಿಗೆ ಇಲ್ಲಿ ಅಸದೃಶವಾದ ಕಾರ್ಯಸಿದ್ಧಿಯನ್ನು ಅನುಗ್ರಹಿಸು. ಯಾವ ಜನರು ತಮ್ಮ ಮನಸ್ಸು, ಮಾತು, ಶರೀರಗಳಿಂದ ಈ ಲಿಂಗದಲ್ಲಿ ಭಕ್ತಿಯನ್ನು ಮಾಡುವರೊ, ಅವರಲ್ಲಿ ನೀನು ಯಾವಾಗಲೂ ಅನುಗ್ರಹವನ್ನು ಮಾಡಬೇಕು. ಇದೊಂದೇ ನಾನು ಬೇಡುವ ವರವು."

೫೨–೫೩. ಇಂತೆಂದ ಅವನ ವರವನ್ನು ಕೇಳಿ ಲಿಂಗರೂಪಿಯಾದ ಈಶ್ವರನು ಹೇಳಿದನು. "ಎಲೈ ವೀರನೆ! ವಿಷ್ಣುಭಕ್ತನ ಮಗನಾದ ನೀನು ಹೇಳಿದಂತೆಯೇ ಇನ್ನುಮೇಲೆ ನಡೆಯುವುದು. ನಿನ್ನ ತಂದೆ ವಿಷ್ಣುಭಕ್ತಾಗ್ರೇಸರನಾದ

ವೀರ ವೀರೇಶ್ವರಂ ನಾಮ ಲಿಂಗಮೇತತ್ತ್ವದಾಖ್ಯಯಾ ।
ಕಾಶ್ಯಾಂ ದಾಸ್ಯತ್ಯಭೀಷ್ಟಾನಿ ಭಕ್ತಾನಾಂ ಚಿಂತಿತಾನ್ಯಹೋ ॥ ೫೪ ॥
ಅಸ್ಮಿಂಲ್ಲಿಂಗೇ ಸದಾ ವೀರ ಸ್ಥಾಸ್ಯಾಮ್ಯದ್ಯದಿನಾವಧಿ ।
ದಾಸ್ಯಾಮಿ ಚ ಪರಾಂ ಸಿದ್ಧಿಮಾಶ್ರಿತೇಭ್ಯೋ ನ ಸಂಶಯಃ ॥ ೫೫ ॥
ಪರಂ ನ ಮಹಿಮಾನಂ ಮೇ ಕಲೌ ಕಶ್ಚಿಚ್ಚ ವೇತ್ಸ್ಯತಿ ।
ಯಸ್ತು ವೇತ್ಸ್ಯತಿ ಭಾಗ್ಯೇನ ಸ ಪರಾಂ ಸಿದ್ಧಿಮಾಪ್ಸ್ಯತಿ ॥ ೫೬ ॥
ಅತ್ರ ಜಪ್ತಂ ಹುತಂ ದತ್ತಂ ಸ್ತುತಮರ್ಚಿತಮೇವ ವಾ ।
ಜೀರ್ಣೋದ್ಧಾರಾದಿಕರಣಮಕ್ಷಯ್ಯಫಲಹೇತುಕಂ ॥ ೫೭ ॥
ತ್ವಂ ತು ರಾಜ್ಯಂ ಪರಂ ಪ್ರಾಪ್ಯ ಸರ್ವಭೂಪಾಲದುರ್ಲಭಂ ।
ಭುಕ್ತ್ವಾ ಭೋಗಾಂಶ್ಚ ವಿಪುಲಾನಂತೇ ಸಿದ್ಧಿಮವಾಪ್ಸ್ಯಸಿ ॥ ೫೮ ॥
ಪುರೀ ವಾರಾಣಸೀ ರಮ್ಯಾ ಸರ್ವಸ್ಮಿನ್ಜಗತೀತಲೇ ।
ಪುಣ್ಯಾಸ್ತತ್ರಾಪಿ ಸಂಭೇದಃ ಸರಿತೋರಸಿಗಂಗಯೋಃ ॥ ೫೯ ॥

---

ಶತ್ರುಜಿದ್ರಾಜನು. ಆತನಿಂದ ಜನ್ಮವನ್ನು ತಳೆದಿರುವ ನೀನೂ ವಿಷ್ಣುವಿನ ಅಂಶದಿಂದಲೇ ಹುಟ್ಟಿರುವೆಯಾದುದರಿಂದ ನಿನಗೆ ನನ್ನಲ್ಲಿ ಭಕ್ತಿಯುಂಟಾಯಿತು.

೫೪. ಎಲೈ ವೀರನೆ! ಈ ಲಿಂಗವು ನಿನ್ನ ಹೆಸರಿನಿಂದಲೇ ವೀರೇಶ್ವರಲಿಂಗವೆಂದು ಪ್ರಖ್ಯಾತಿಯನ್ನು ಪಡೆಯುವುದು. ಕಾಶಿಯಲ್ಲಿ ನೆಲಸಿರುವ ಈ ಲಿಂಗವು ಭಕ್ತರು ಮನಸ್ಸಿನಲ್ಲಿ ಅಭಿಲಾಷಿಸುವ ಸಕಲ ಪದಾರ್ಥಗಳನ್ನೂ ಕೈಗೂಡಿಸುವುದು.

೫೫. ಪುತ್ರ ! ನಾನು ಈ ದಿನದ ಮೊದಲುಗೊಂಡು ಸರ್ವಕಾಲದಲ್ಲಿಯೂ ಈ ಲಿಂಗದಲ್ಲಿಯೆ ಸನ್ನಿಹಿತನಾಗಿರುವೆನು. ನನ್ನನ್ನು ಆಶ್ರಯಿಸಿದವರಿಗೆ ಮೋಕ್ಷರೂಪವಾದ ಸಿದ್ಧಿಯನ್ನೂ ಕೊಡುವೆನು. ಇದರಲ್ಲಿ ಸಂದೇಹವಿಲ್ಲ.

೫೬. ಆದರೆ ಮುಂದಿನ ಕಲಿಯುಗದಲ್ಲಿ ನನ್ನ ಮಹಾಮಹಿಮೆಯನ್ನು ಯಾವ ಮನುಷ್ಯನೂ ತಿಳಿಯಲಾರನು. ಯಾವನು ಪೂರ್ವಪುಣ್ಯದ ಫಲವಾಗಿ ಅದನ್ನು ತಿಳಿದುಕೊಳ್ಳುವನೊ, ಅವನು ಉತ್ತಮಸಿದ್ಧಿಯನ್ನೇ ಪಡೆಯುವನು.

೫೭. ಈ ಪೀಠದಲ್ಲಿ ಮಾಡಿದ ಜಪವಾಗಲಿ, ಹೋಮವಾಗಲಿ, ದಾನವಾಗಲಿ, ಸ್ತೋತ್ರವಾಗಲಿ, ಪೂಜೆಯಾಗಲಿ, ಈ ದೇವಾಲಯದ ಜೀರ್ಣೋದ್ಧಾರಕಾರ್ಯವಾಗಲಿ ಅಕ್ಷಯಫಲಪ್ರಾಪ್ತಿಗೆ ಕಾರಣವಾಗಿರುವುದು.

೫೮. ನೀನು ಸರ್ವೋತ್ತಮವೂ ಸಾಧಾರಣ ರಾಜರಿಗೆ ದುರ್ಲಭವೂ ಆದ ರಾಜ್ಯವನ್ನು ಹೊಂದಿ ಅನೇಕ ಭೋಗಭಾಗ್ಯಗಳನನುಭವಿಸಿ ಕಡೆಯಲ್ಲಿ ಮೋಕ್ಷಪದವಿಯನ್ನು ಪಡೆಯುವೆ.

೫೯. ಸಕಲ ಭೂಮಂಡಲದಲ್ಲಿಯೂ ವಾರಾಣಸೀಪುರಿಯು ರಮ್ಯವಾಗಿರುವುದು. ಅದರಲ್ಲಿಯೂ ಅಸಿ ಮತ್ತು ಗಂಗಾ ನದಿಗಳ ಸಂಗಮ ಪ್ರದೇಶವು ಪರಮಪುಣ್ಯಪ್ರದೇಶವೆನಿಸಿರುವುದು.

ತತೋಽಪಿ ಚ ಹಯಗ್ರೀವಂ ತೀರ್ಥಂ ಚೈವಾತಿಪುಣ್ಯದಂ ।
ಯತ್ರ ವಿಷ್ಣುರ್ಹಯಗ್ರೀವೋ ಭಕ್ತಚಿಂತಿತಮರ್ಪಯೇತ್ ॥ ೬೦ ॥
ಹಯಗ್ರೀವಾಚ್ಚ ವೈ ತೀರ್ಥಾದ್ಗಜತೀರ್ಥಂ ವಿಶಿಷ್ಯತೇ ।
ಯತ್ರ ವೈ ಸ್ನಾನಮಾತ್ರೇಣ ಗಜದಾನಫಲಂ ಲಭೇತ್ ॥ ೬೧ ॥
ಕೋಕಾವರಾಹತೀರ್ಥಂ ಚ ಪುಣ್ಯದಂ ಗಜತೀರ್ಥದಃ ।
ಕೋಕಾವರಾಹಮಭ್ಯರ್ಚ್ಯ ತತ್ರ ನೋ ಜನ್ಮಭಾಗ್ಜನಃ ॥ ೬೨ ॥
ಅಪಿ ಕೋಕಾವರಾಹಾಚ್ಚ ದಿಲೀಪೇಶ್ವರಸನ್ನಿಧೌ ।
ದಿಲೀಪತೀರ್ಥಂ ಸುಶ್ರೇಷ್ಠಂ ಸದ್ಯಃ ಪಾಪಹರಂ ಪರಂ ॥ ೬೩ ॥
ತತಃ ಸಗರತೀರ್ಥಂ ಚ ಸಗರೇಶಸಮೀಪತಃ ।
ಯತ್ರ ಮಜ್ಜನ್ನರೋ ಮಜ್ಜೇನ್ನ ಭೂಯೋ ದುಃಖಸಾಗರೇ ॥ ೬೪ ॥
ಸಪ್ತಸಾಗರತೀರ್ಥಂ ಚ ಶುಭಂ ಸಗರತೀರ್ಥತಃ ।
ಸಪ್ತಾಬ್ಧಿಸ್ನಾನಜಂ ಪುಣ್ಯಂ ಯತ್ರ ಸ್ನಾತ್ವಾ ನರೋ ಲಭೇತ್ ॥ ೬೫ ॥

---

೬೦. ಅದಕ್ಕಿಂತಲೂ ಮಹಾವಿಷ್ಣುವು ಹಯಗ್ರೀವರೂಪದಿಂದ ನೆಲಸಿ ಭಕ್ತರ ಮನೋಭೀಷ್ಟಗಳನ್ನು ನೆರವೇರಿಸುತ್ತಿರುವ ಹಯಗ್ರೀವತೀರ್ಥವು ಬಹು ಪುಣ್ಯಪ್ರದವಾದುದು. ಇಲ್ಲಿ ಹಯಗ್ರೀವನು ತನ್ನನ್ನು ಸೇವಿಸುವ ಭಕ್ತರಿಗೆ ಸಕಲ ಮನೋಭೀಷ್ಟಗಳನ್ನೂ ಅನುಗ್ರಹಿಸುತ್ತಿರುವನು.

೬೧. ಇಂತಹ ಹಯಗ್ರೀವತೀರ್ಥಕ್ಕಿಂತಲೂ ಗಜತೀರ್ಥವು ವಿಶೇಷದಿಂದ ಕೂಡಿರುವುದೆಂದು ಹೇಳುವರು. ಆ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ಮನುಷ್ಯನು ಗಜದಾನದ ಫಲವನ್ನು ಪಡೆಯುವನು.

೬೨. ಆ ಗಜತೀರ್ಥಕ್ಕಿಂತಲೂ ಕೋಕಾವರಾಹತೀರ್ಥವು ಪುಣ್ಯಪ್ರದವು. ಕೋಕಾವರಾಹಸ್ವಾಮಿಯನ್ನು ಪೂಜಿಸುವುದರಿಂದ ಜನರು ಪುನಃ ಭೂಲೋಕದಲ್ಲಿ ಜನ್ಮವನ್ನು ತಾಳುವುದಿಲ್ಲ.

೬೩. ಇಂತಹ ಕೋಕಾವರಾಹಕ್ಷೇತ್ರಕ್ಕಿಂತಲೂ ದಿಲೀಪೇಶ್ವರನ ಸನ್ನಿಧಿಯಲ್ಲಿರುವ ದಿಲೀಪತೀರ್ಥವು ಅತ್ಯುತ್ತಮವೂ, ತತ್‍ಕ್ಷಣದಲ್ಲಿಯೇ ಪಾಪಗಳನ್ನು ಕಳೆಯುವುದೂ, ಸರ್ವೋತ್ಕೃಷ್ಟವೂ ಆಗಿರುವುದು.

೬೪. ಅದಕ್ಕಿಂತಲೂ ಸಗರೇಶ್ವರನ ಸಮೀಪದಲ್ಲಿರುವ ಸಗರತೀರ್ಥವು ಉತ್ತಮವು. ಅದರಲ್ಲಿ ಮುಳುಗಿ ಸ್ನಾನವನ್ನು ಮಾಡಿದ ನರನು ಪುನಃ ದುಃಖಸಮುದ್ರದಲ್ಲಿ ಮುಳುಗುವುದಿಲ್ಲ.

೬೫. ಸಗರತೀರ್ಥಕ್ಕಿಂತಲೂ ಸಪ್ತಸಾಗರತೀರ್ಥವು ಪವಿತ್ರವಾದುದು. ಅದರಲ್ಲಿ ಸ್ನಾನವನ್ನು ಮಾಡುವುದರಿಂದ ಮನುಷ್ಯನು ಏಳು ಸಮುದ್ರಗಳಲ್ಲಿಯೂ ಸ್ನಾನಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು.

ಮಹೋದಧೀತಿ ವಿಖ್ಯಾತಂ ತೀರ್ಥಂ ಸಪ್ತಾಬ್ಧಿತೀರ್ಥತಃ ।
ಸಕೃದ್ಯತ್ರಾಪ್ಲುತೋ ಧೀಮಾನ್ದಹೇದಘಮಹೋದಧಿಂ. ॥ ೬೬ ॥
ಚೌರತೀರ್ಥಂ ತತಃ ಪುಣ್ಯಂ ಕಪಿಲೇಶ್ವರಸನ್ನಿಧೌ ।
ಪಾಪಂ ಸುವರ್ಣಚೌರ್ಯಾದಿ ಯತ್ರ ಸ್ನಾತ್ವಾ ಕ್ಷಯಂ ವ್ರಜೇತ್॥ ೬೭ ॥
ಹಂಸತೀರ್ಥಂ ತತೋಽಪೀಡ್ಯಂ ಕೇದಾರೇಶ್ವರಸನ್ನಿಧೌ ॥ ೬೮ ॥
ಹಂಸಸ್ವರೂಪೀ ಯತ್ರಾಹಂ ನಯಾಮಿ ಬ್ರಹ್ಮ ದೇಹಿನಃ ॥ ೬೯ ॥
ತತಸ್ತ್ರಿಭುವನಾಖ್ಯಾಸ್ಯ ಕೇಶವಸ್ಯಾತಿಪುಣ್ಯದಂ ।
ತೀರ್ಥಂ ಯತ್ರಾಪ್ಲುತಾ ಮರ್ತ್ಯಾ ಮರ್ತ್ಯಲೋಕಂ ವಿಶಂತಿ ನ ॥ ೭೦ ॥
ಗೋವ್ಯಾಘ್ರೇಶ್ವರತೀರ್ಥಂ ಚ ತತೋಽಪ್ಯಧಿಕಮೇವ ಹಿ ।
ಸ್ವಭಾವವೈರಮುತ್ಸೃಜ್ಯ ಯತ್ರೋಭೌ ಸಿದ್ಧಿಮಾಪತುಃ ॥ ೭೧ ॥
ತತೋಽಪಿ ಹಿ ವರಂ ವೀರ ತೀರ್ಥಂ ಮಾಂಧಾತೃಸಂಜ್ಞಿತಂ ।
ಚಕ್ರವರ್ತಿಪದಂ ಯತ್ರ ಪ್ರಾಪ್ತಂ ತೇನ ಮಹೀಭುಜಾ ॥ ೭೨ ॥

---

೬೬. ಮಹೋದಧಿತೀರ್ಥವು ಸಪ್ತಸಾಗರತೀರ್ಥಕ್ಕಿಂತಲೂ ಉತ್ತಮವೆಂಬ ಪ್ರಖ್ಯಾತಿಯನ್ನು ಪಡೆದಿರುವುದು. ಅಲ್ಲಿ ಮಾಡಿದ ಒಂದು ಸ್ನಾನದಿಂದಲೇ ಪ್ರಾಜ್ಞನಾದವನು ಪಾಪಮಹಾಸಮುದ್ರವನ್ನು ಬಡಬಾಗ್ನಿಯಂತೆ ಶೋಷಿಸುವನು.

೬೭. ಕಪಿಲೇಶ್ವರನ ಸನ್ನಿಧಾನದಲ್ಲಿರುವ ಚೋರತೀರ್ಥವು ಮಹೋದಧಿತೀರ್ಥಕ್ಕಿಂತಲೂ ಪುಣ್ಯತಮವು. ಅದರಲ್ಲಿ ಸ್ನಾನವನ್ನು ಮಾಡುವುದರಿಂದ ಸ್ವರ್ಣಸ್ತೇಯವೇ ಮುಂತಾದ ಪಾತಗಳು ನಾಶವನ್ನು ಹೊಂದುವುವು.

೬೮–೬೯. ಅದಕ್ಕಿಂತಲೂ ಕೇದಾರೇಶ್ವರನ ಸನ್ನಿಧಿಯಲ್ಲಿರುವ ಹಂಸತೀರ್ಥವು ಸ್ತೋತಾರ್ಹವಾಗಿರುವುದು. ಅಲ್ಲಿ ನಾನೇ ಹಂಸದ ರೂಪವನ್ನು ತಾಳಿ ಸಕಲ ಜೀವರನ್ನೂ ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವೆನು.

೭೦. ಅದಕ್ಕಿಂತಲೂ ತ್ರಿಭುವನನಾಮಕನಾದ ಕೇಶವನ ತೀರ್ಥವು ಅತ್ಯಂತ ಪುಣ್ಯಪ್ರದವಾಗಿರುವುದು. ಅದರಲ್ಲಿ ಮುಳುಗಿದ ಮನುಷ್ಯರು ಪುನಃ ಮರ್ತ್ಯಲೋಕವನ್ನು ಪ್ರವೇಶಿಸುವುದಿಲ್ಲ.

೭೧. ಗೋವ್ಯಾಘ್ರೇಶ್ವರತೀರ್ಥದಲ್ಲಿ ಅದಕ್ಕಿಂತಲೂ ಹೆಚ್ಚಿನದಾದ ಮಹತ್ತ್ವವಿರುವುದು. ಅಲ್ಲಿ ಹಿಂದೆ ಗೋವ್ಯಾಘ್ರಗಳೆರಡು ತಮಗೆ ಸ್ವಭಾವವಾದ ವೈರವನ್ನೂ ತ್ಯಜಿಸಿ ಸ್ನಾನಮಾಡಿದುದರಿಂದ ಸಿದ್ಧಿಯನ್ನು ಹೊಂದಿದುವು.

೭೨. ಎಲೈ ವೀರನೆ! ಅದಕ್ಕಿಂತಲೂ ಮಾಂಧಾತೃನಾಮಕವಾದ ತೀರ್ಥವು ಉತ್ತಮವಾಗಿರುವುದು. ಅದರ ಸೇವೆಯನ್ನು ಮಾಡಿದುದರಿಂದ ಪೂರ್ವದಲ್ಲಿ ಆ ಮಹಾರಾಜನು ಚಕ್ರವರ್ತಿಪದವಿಯನ್ನು ಪಡೆದನು.

ತತೋಽಪಿ ಮುಚುಕುಂದಾಖ್ಯಂ ತೀರ್ಥಂ ಚಾತೀವ ಪುಣ್ಯದಂ ।
ಯತ್ರ ಸ್ನಾತೋ ಸರೋ ಜಾತು ರಿಪುಭಿರ್ನಾಭಿಭೂಯತೇ ॥ ೭೩ ॥
ಪೃಥುತೀರ್ಥಂ ತತೋಽಪ್ಯುಚ್ಚೈಃ ಶ್ರೇಯಸಾಂ ಸಾಧನಂ ಪರಂ ।
ಪೃಥ್ವೀಶ್ವರಂ ಯತ್ರ ದೃಷ್ಟ್ವಾ ನರಃ ಪೃಥ್ವೀಪತಿರ್ಭವೇತ್ ॥ ೭೪ ॥
ತತಃ ಪರಶುರಾಮಸ್ಯ ತೀರ್ಥಂ ಚಾತೀವ ಸಿದ್ಧಿದಂ ।
ಯತ್ರ ಕ್ಷತ್ರವಧಾತ್ಪಾಪಾಜ್ಜಾಮದಗ್ನ್ಯೋ ವಿಮುಕ್ತವಾನ್ ॥ ೭೫ ॥
ಅದ್ಯಾಪಿ ಕ್ಷತ್ರವಧಜಂ ಪಾಪಂ ತತ್ರ ಪ್ರಣಶ್ಯತಿ ।
ಏಕೇನ ಸ್ನಾನಮಾತ್ರೇಣ ಜ್ಞಾನಾಜ್ಞಾನಕೃತೇನ ಚ ॥ ೭೬ ॥
ತತೋಽಪಿ ಶ್ರೇಯಸಾಂ ಕರ್ತೃ ತೀರ್ಥಂ ಕೃಷ್ಣಾಗ್ರಜಸ್ಯ ಹಿ ।
ಯತ್ರ ಸೂತವಧಾತ್ಪಾಪಾದ್ಬಲದೇವೋ ವಿಮುಕ್ತವಾನ್ ॥ ೭೭ ॥
ದಿವೋದಾಸಸ್ಯ ವೈ ತೀರ್ಥಂ ತತ್ರ ರಾಜ್ಞೋಽತಿಮೇಧಸಃ ।
ತತ್ರ ಸ್ನಾತೋ ನರೋ ಜಾತು ನ ಜ್ಞಾನಾಚ್ಚ್ಯವತೇಽಂತತಃ ॥ ೭೮ ॥

---

೭೩. ಮಾಂಧಾತೃತೀರ್ಥಕ್ಕಿಂತಲೂ ಮುಚುಕುಂದತೀರ್ಥವು ಅತ್ಯಂತ ಪುಣ್ಯಪ್ರದವಾಗಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮನುಷ್ಯನೆಂದಿಗೂ ಶತ್ರುಗಳಿಂದ ಪರಾಜಯವನ್ನು ಹೊಂದುವುದಿಲ್ಲ.

೭೪. ಪೃಥುತೀರ್ಥವು ಅದಕ್ಕಿಂತಲೂ ಹೆಚ್ಚಿನದೆನಿಸಿ ಉತ್ತಮಶ್ರೇಯಸ್ಸುಗಳಿಗೆ ಸಾಧನವೆನಿಸಿರುವುದು. ಅದರ ಸಮೀಪದಲ್ಲಿರುವ ಪೃಥ್ವೀಶ್ವರಲಿಂಗವನ್ನು ನೋಡಲು ಮನುಷ್ಯನು ಸಕಲ ಭೂಮಂಡಲಕ್ಕೂ ಅಧಿಪತಿಯಾಗುವನು.

೭೫. ಅದಕ್ಕಿಂತಲೂ ಪರಶುರಾಮತೀರ್ಥವು ಅತ್ಯಂತ ಸಿದ್ಧಿಪ್ರದವಾದುದು. ಜಮದಗ್ನಿಪುತ್ರನಾದ ಆತನು ಅಲ್ಲಿ ಸ್ನಾನವನ್ನು ಮಾಡಿ ಕ್ಷತ್ರಿಯರನ್ನು ನಾಶಮಾಡಿದ ಪಾತಕವನ್ನು ಕಳೆದುಕೊಂಡನು.

೭೬. ಬುದ್ಧಿಪೂರ್ವಕವಾಗಿಯಾಗಲಿ, ಅಜ್ಞಾನದಿಂದಾಗಲಿ ಆ ತೀರ್ಥದಲ್ಲಿ ಸ್ನಾನಮಾಡಲು ಒಂದು ಸ್ನಾನದಿಂದಲೇ ಇಂದಿಗೂ ಕ್ಷತ್ರಿಯರನ್ನು ಕೊಂದ ಮಹಾಪಾತಕವು ಅಲ್ಲಿ ದೂರವಾಗುವುದರಲ್ಲಿ ಸಂಶಯವಿಲ್ಲ.

೭೭. ಅದಕ್ಕಿಂತಲೂ ಶ್ರೇಯಸ್ಕಾರಕತೀರ್ಥವೆಂದರೆ ಶ್ರೀಕೃಷ್ಣನ ಅಣ್ಣನಾದ ಬಲರಾಮನ ತೀರ್ಥಶ್ರೇಷ್ಠವು. ಬಲದೇವನು ಅಲ್ಲಿ ಸೂತವಂಶಸಂಭೂತನಾದ ರೋಮಹರ್ಷಣನನ್ನು ಅವಮಾನಗೊಳಿಸಿದ ಪಾಪದಿಂದ ಮುಕ್ತನಾದನು.

೭೮. ಅಲ್ಲಿಯೇ ಮಹಾಮೇಧಾವಿಯಾದ ದಿವೋದಾಸಮಹಾರಾಜನ ತೀರ್ಥವೊಂದಿರುವುದು. ಅಲ್ಲಿ ಸ್ನಾವನ್ನು ಮಾಡಿದ ಮನುಷ್ಯನು ಎಂದಿಗೂ ಅಂತರಂಗದಲ್ಲಿ ಜ್ಞಾನಹೀನನಾಗುವುದಿಲ್ಲವೆಂದು ತಿಳಿಯಬೇಕು.

ತತೋಽಪಿ ಹಿ ಮಹಾತೀರ್ಥಂ ಸರ್ವಪಾಪಪ್ರಣಾಶನಂ ।
ಯತ್ರ ಭಾಗೀರಥೀ ಸಾಕ್ಷಾನ್ಮೂರ್ತಿರೂಪೇಣ ತಿಷ್ಠತಿ ॥ ೭೯ ॥
ಸ್ನಾತ್ವಾ ಭಾಗೀರಥೀತೀರ್ಥೇ ಕೃತ್ವಾ ಶ್ರಾದ್ಧಂ ವಿಧಾನವಿತ್ ।
ದತ್ವಾ ದಾನಂ ಚ ಪಾತ್ರೇಭ್ಯೋ ನ ಭೂಯೋ ಗರ್ಭಭಾಗ್ಭವೇತ್ ॥ ೮೦ ॥
ಹರಪಾಪಂ ಚ ಭೋ ವೀರ ತೀರ್ಥಂ ಭಾಗೀರಥೀ ತಟೇ ।
ತತ್ರ ಸ್ನಾತ್ವಾ ಕ್ಷಯಂ ಯಾಂತಿ ಮಹಾಪಾಪಕುಲಾನ್ಯಪಿ ॥ ೮೧ ॥
ಯೋ ನಿಷ್ಪಾಪೇಶ್ವರಂ ಲಿಂಗಂ ತತ್ರ ಪಶ್ಯತಿ ಮಾನವಃ ।
ನಿಷ್ಪಾಪೋ ಜಾಯತೇ ವೀರ ಸ ತಲ್ಲಿಂಗೇ ಕ್ಷಣಾತ್ಕ್ಷಣಾತ್ ॥ ೮೨ ॥
ದಶಾಶ್ವಮೇಧತೀರ್ಥಂ ಚ ತತೋಽಪಿ ಪ್ರವರಂ ಮತಂ ।
ದಶಾನಾಮಶ್ವಮೇಧಾನಾಂ ಯತ್ರ ಸ್ನಾತ್ವಾ ಫಲಂ ಲಭೇತ್ ॥ ೮೩ ॥
ತತೋಽಪಿ ಶುಭದಂ ವೀರ ಬಂದೀತೀರ್ಥಂ ಪ್ರಚಕ್ಷತೇ ।
ಯತ್ರ ಸ್ನಾತೋ ನರೋ ಮುಚ್ಯೇದಪಿ ಸಂಸಾರಬಂಧನಾತ್ ॥ ೮೪ ॥
ಹಿರಣ್ಯಾಕ್ಷೇಣ ದೈತ್ಯೇನ ಬಹುಶೋ ದೇವತಾಃ ಪುರಾ ।
ಬಂದೀಕೃತಾ ನಿಗಡಿತಾಸ್ತುಷ್ಟುವುರ್ಜಗದಂಬಿಕಾಂ ॥ ೮೫ ॥

---

೭೯. ಅದಕ್ಕೂ ಹೆಚ್ಚಿನದಾಗಿ ಅಲ್ಲಿ ಭಾಗೀರಥೀದೇವಿಯೇ ಸಾಕ್ಷಾತ್ತಾಗಿ ವಿಗ್ರಹದರೂಪವನ್ನು ತಾಳಿ ನಿಂತಿರುವಳು.

೮೦. ಶಾಸ್ತ್ರವಿಧಿಗಳನ್ನು ತಿಳಿದವನು ಈ ಭಾಗೀರಥೀತೀರ್ಥದಲ್ಲಿ ಸ್ನಾನವನ್ನು ಮಾಡಿ ಪಿತೃಶ್ರಾದ್ಧಗಳನ್ನು ನಡೆಸಿ ಸತ್ಪಾತ್ರಗಳನ್ನರಿತು ದಾನಗಳನ್ನು ಕೊಡಲು ಪುನಃ ಗರ್ಭವಾಸಕ್ಕೆ ಸಿಕ್ಕುವುದಿಲ್ಲ.

೮೧. ವೀರನೆ! ಆ ಭಾಗೀರಥಿಯ ತೀರದಲ್ಲಿಯೇ ಹರಪಾಪವೆಂಬ ತೀರ್ಥವಿರುವುದು. ಅಲ್ಲಿ ಸ್ನಾನಮಾಡಿದರೆ ಮಹಾಪಾತಕಗಳ ರಾಶಿಗಳೂ ಸಹ ಆ ಸ್ನಾನ ಮಾತ್ರದಿಂದಲೇ ನಾಶವನ್ನು ಹೊಂದುವುವು.

೮೨. ಯಾವ ಮಾನವನು ಅಲ್ಲಿರುವ ನಿಷ್ಪಾಪೇಶ್ವರನಾಮಕವಾದ ಲಿಂಗವನ್ನು ನೋಡುವನೊ, ಅವನು ಆ ಲಿಂಗದ ದರ್ಶನವನ್ನು ಮಾಡಿದ ಕ್ಷಣದಲ್ಲಿಯೇ ತನ್ನ ಪಾಪಗಳನ್ನು ಕಳೆದುಕೊಂಡು ಪರಿಶುದ್ಧನಾಗುವನು.

೮೩. ದಶಾಶ್ವಮೇಧತೀರ್ಥವು ಅದಕ್ಕಿಂತಲೂ ಉತ್ತಮವಾದುದೆಂದು ಹೇಳಲ್ಪಟ್ಟಿರುವುದು. ಅದರಲ್ಲಿ ಸ್ನಾನವನ್ನು ಮಾಡುವುದರಿಂದ ಹತ್ತು ಅಶ್ವಮೇಧಗಳನ್ನು ಮಾಡಿದ ಫಲವು ಮನುಷ್ಯನಿಗೆ ಲಭಿಸುವುದು.

೮೪. ಅದಕ್ಕಿಂತಲೂ ಪವಿತ್ರವಾದುದೆಂದು ಬಂದೀತೀರ್ಥವನ್ನು ಬಲ್ಲವರು ಹೇಳುವರು. ಅದರಲ್ಲಿ ಸ್ನಾನವನ್ನು ಮಾಡಲು ನರನು ಸಂಸಾರವೆಂಬ ಮಹಾ ಬಂಧನದಿಂದಲೂ ಬಿಡುಗಡೆಯನ್ನು ಹೊಂದುವನು.

೮೫–೮೬. ಪೂರ್ವದಲ್ಲಿ ಹಿರಣ್ಯಾಕ್ಷನೆಂಬ ಮಹಾರಾಕ್ಷಸನಿಂದ ಅನೇಕ

ತತೋ ವಿಶೃಂಖಲೀಭೂತೈರ್ವಂದಿತಾ ಯಜ್ಞಗಜ್ಞನಿಃ ।
ತದಾ ಪ್ರಭೃತಿ ಬಂದೀತಿ ಗೀಯತೇಽದ್ಯಾಪಿ ಮಾನವೈಃ ॥ ೮೬ ॥
ಬಂದೀತೀರ್ಥಂ ತು ತತ್ರೈವ ಮಹಾನಿಗಡಖಂಡನಂ ।
ತತ್ರ ಸ್ನಾತೋ ವಿಮುಚ್ಯೇತ ಸರ್ವಸ್ಮಾತ್ಕರ್ಮಪಾಶತಃ ॥ ೮೭ ॥
ಬಂದೀತೀರ್ಥಂ ಮಹಾಶ್ರೇಷ್ಠಂ ಕಾಶೀಪುರ್ಯಾಂ ವಿಶಾಂಪತೇ ।
ತತ್ರ ಸ್ನಾತೋ ನರೋ ಯಾಯಾದ್ವಿಮುಕ್ತಿಂ ದೇವ್ಯನುಗ್ರಹಾತ್ ॥ ೮೮ ॥
ತತೋಽಪಿ ಹಿ ಶ್ರೇಷ್ಠತರಂ ಪ್ರಯಾಗಮಿತಿ ವಿಶ್ರುತಂ ।
ಪ್ರಯಾಗಮಾಧವೋ ಯತ್ರ ಸರ್ವಯಾಗಫಲಪ್ರದಃ ॥ ೮೯ ॥
ಕ್ಷೋಣೀವರಾಹತೀರ್ಥಂ ಚ ತತೋಽಪಿ ಶುಭದಂ ಪರಂ ।
ತತ್ರ ಸ್ನಾತೋ ನರೋ ಜಾತು ತಿರ್ಯಗ್ಯೋನಿಂ ನ ಗಚ್ಛತಿ ॥ ೯೦ ॥
ತತಃ ಕಾಲೇಶ್ವರಂ ತೀರ್ಥಂ ವೀರ ಶ್ರೇಷ್ಠತರಂ ಪರಂ ।
ಕಲಿಕಾಲೌ ನ ಬಾಧೇತೇ ಯತ್ರ ಸ್ನಾತೋ ನರೋತ್ತಮಃ ॥ ೯೧ ॥

---

ದೇವತೆಗಳು ಕಾರಾಗೃಹದಲ್ಲಿಡಲ್ಪಟ್ಟು ಕಬ್ಬಿಣದ ಸಂಕೋಲೆಗಳಿಂದಲೂ ಬಂಧಿಸಲ್ಪಟ್ಟಿದ್ದರು. ಆಗ ಅವರೆಲ್ಲರೂ ಲೋಕಮಾತೆಯಾದ ಪಾರ್ವತಿಯನ್ನು ಸ್ತೋತ್ರಮಾಡಿದರು. ಆಗ ಆಕೆಯು ಅವರನ್ನೆಲ್ಲ ಶೃಂಖಲಗಳಿಂದಲೂ ಬಿಡಿಸಿದಳು. ದೇವತೆಗಳೂ ಆಕೆಯನ್ನು ಬಹುವಿಧವಾಗಿ ವಂದಿಸಿದರು. ಆ ಕಾರಣದಿಂದಲೇ ಲೋಕಮಾತೆಯು ಅಂದುಮೊದಲಾಗಿ ಇಂದಿಗೂ ಮನುಷ್ಯರಿಂದ ಬಂದೀದೇವಿಯೆಂದು ಕರೆಯಲ್ಪಡುತ್ತಿರುವಳು.

೮೭. ಆ ದೇವಿಯ ಸಮೀಪದಲ್ಲಿಯೇ ಮಹಾಬಂಧನಗಳನ್ನೂ ಕಡಿದುಹಾಕುವ ಬಂದೀತೀರ್ಥವೂ ಇರುವುದು. ಅದರಲ್ಲಿ ಸ್ನಾನಮಾಡಿದವನು ಸಕಲ ಕರ್ಮಪಾಶದಿಂದಲೂ ವಿಮೋಚನೆಯನ್ನು ಪಡೆಯುವನು.

೮೮. ಎಲೌ ರಾಜೋತ್ತಮನೆ! ಕಾಶೀಕ್ಷೇತ್ರದಲ್ಲೆಲ್ಲ ಬಂದೀತೀರ್ಥವು ಅತ್ಯಂತ ಶ್ರೇಷ್ಠವಾದುದು. ಅಲ್ಲಿ ಸ್ನಾನಮಾಡಿದ ಮಾನವನು ಜಗನ್ಮಾತೆಯ ಅನುಗ್ರಹದಿಂದ ಮೋಕ್ಷಪದವಿಯನ್ನೇ ಹೊಂದುವನು.

೮೯. ಅದಕ್ಕಿಂತಲೂ ಶ್ರೇಷ್ಠತರವೆಂಬ ಕೀರ್ತಿಯನ್ನು ಪ್ರಯಾಗತೀರ್ಥವು ಪಡೆದಿರುವುದು. ಅದರ ಬಳಿಯಲ್ಲಿಯೇ ಸಮಸ್ತ ಯಜ್ಞಗಳ ಫಲಗಳನ್ನೂ ಕೊಡುವ ಪ್ರಯಾಗಮಾಧವಸ್ವಾಮಿಯು ನೆಲಸಿರುವನು.

೯೦. ಶುಭಪ್ರದವೂ ಉತ್ತಮವೂ ಆದ ಧರಣೀವರಾಹತೀರ್ಥವು ಪ್ರಯಾಗತೀರ್ಥಕ್ಕಿಂತಲೂ ಶ್ರೇಷ್ಠವು. ಅದರಲ್ಲಿ ಸ್ನಾನವನ್ನು ಮಾಡಿದ ಮನುಷ್ಯನೆಂದಿಗೂ ಪುನಃ ನೀಚಯೋನಿಗಳಲ್ಲಿ ಜನ್ಮಗಳನ್ನು ಪಡೆಯುವುದಿಲ್ಲ.

೯೧. ಅದಕ್ಕಿಂತಲೂ ಶ್ರೇಷ್ಠತರವಾದ ಕಾಲೇಶ್ವರತೀರ್ಥವು ಉತ್ಕೃಷ್ಟವು.

ಅಶೋಕತೀರ್ಥಂ ತತ್ರೈವ ತತೋಽಪ್ಯತಿತರಾಂ ಶುಭಂ ।
ಯತ್ರ ಸ್ನಾತೋ ನರೋ ಜಾತು ನಾಪತೇಚ್ಛೋಕಸಾಗರೇ ॥ ೯೨ ॥
ತತೋಽತಿನಿರ್ಮಲತರಂ ಶುಕ್ರತೀರ್ಥಂ ನೃಪಾಂಗಜ ।
ಶುಕ್ರದ್ವಾರಾ ನ ಜಾಯೇತ ಯತ್ರ ಸ್ನಾತೋ ನರೋತ್ತಮಃ ॥ ೯೩ ॥
ತತೋಽಪಿ ಪುಣ್ಯದಂ ರಾಜನ್ಭವಾನೀತೀರ್ಥಮುತ್ತಮಂ ।
ಯತ್ರ ಸ್ನಾತ್ವಾ ಭವಾನೀಶೌ ದೃಷ್ಟ್ವಾ ನೈವ ಪುನರ್ಭವೇತ್ ॥ ೯೪ ॥
ಪ್ರಭಾಸತೀರ್ಥಂ ವಿಖ್ಯಾತಂ ತತೋಽಪಿ ಶುಭದಂ ನೃಣಾಂ ।
ಸೋಮೇಶ್ವರಸ್ಯ ಪುರತಸ್ತತ್ರ ಸ್ನಾತೋ ನ ಗರ್ಭಭಾಕ್ ॥ ೯೫ ॥
ತತೋ ಗರುಡತೀರ್ಥಂ ಚ ಸಂಸಾರವಿಷನಾಶನಂ ।
ಗರುಡೇಶಂ ಸಮಭ್ಯರ್ಚ್ಯ ತತ್ರ ಸ್ನಾತ್ವಾ ನ ಶೋಚತಿ ॥ ೯೬ ॥
ಬ್ರಹ್ಮತೀರ್ಥಂ ತತಃ ಪುಣ್ಯಂ ವೀರ ಬ್ರಹ್ಮೇಶ್ವರಾತ್ಪರಃ ।
ಬ್ರಹ್ಮವಿದ್ಯಾಮವಾಪ್ನೋತಿ ತತ್ರ ಸ್ನಾನೇನ ಮಾನವಃ ॥ ೯೭ ॥

---

ಅದರಲ್ಲಿ ಸ್ನಾನಮಾಡಿದ ಮನುಷ್ಯೋತ್ತಮನನ್ನು ಕಲಿಪುರುಷನಾಗಲಿ, ಯಮ ಧರ್ಮರಾಜನಾಗಲಿ ಎಂದಿಗೂ ಬಾಧಿಸಲಾರರು.

೯೨. ಆದರ ಸಮೀಪದಲ್ಲಿಯೇ ಇರುವ ಅಶೋಕತೀರ್ಥವು ಅದಕ್ಕಿಂತಲೂ ಅನೇಕ ಪಾಲು ಶುಭಪ್ರದವಾಗಿರುವುದು. ಅದರಲ್ಲಿ ಸ್ನಾನಮಾಡಿದ ಮನುಷ್ಯನು ಪುನಃ ಶೋಕಸಾಗರದಲ್ಲಿ ಬೀಳುವುದಿಲ್ಲ.

೯೩. ರಾಜಕುಮಾರ! ಶುಕ್ರತೀರ್ಥವೆಂಬುದು ಅದಕ್ಕಿಂತಲೂ ಅತ್ಯಂತ ಪರಿಶುದ್ಧವಾಗಿರುವುದು. ಅದರಲ್ಲಿ ಸ್ನಾನವನ್ನು ಮಾಡಲು ಮನುಷ್ಯಶ್ರೇಷ್ಠನು ಪುನಃ ತಂದೆಯ ಶುಕ್ರದ ಮೂಲಕ ಜನ್ಮವನ್ನು ಪಡೆಯುವುದಿಲ್ಲ.

೯೪. ದೊರೆಯೆ! ಅದಕ್ಕಿಂತಲೂ ಉತ್ತಮವಾದ ಭವಾನೀತೀರ್ಥವೇ ಹೆಚ್ಚಿನ ಪುಣ್ಯವನ್ನು ಕೊಡುವುದು. ಅಲ್ಲಿ ಸ್ನಾನವನ್ನು ಮಾಡಿ ಹತ್ತಿರದಲ್ಲಿರುವ ಭವಾನೀಮಹೇಶ್ವರರನ್ನು ದರ್ಶನಮಾಡಲು ಪುನರ್ಜನ್ಮವೆಲ್ಲಿ.

೯೫. ಪ್ರಖ್ಯಾತಿಯನ್ನು ಪಡೆದ ಪ್ರಭಾಸತೀರ್ಥವು ಅದಕ್ಕಿಂತಲೂ ಅಧಿಕವಾಗಿಯೇ ಮನುಷ್ಯರಿಗೆ ಶುಭಪ್ರದವಾಗಿರುವುದು. ಅದು ಸೋಮೇಶ್ವರನ ಮುಂದಿರುವುದು. ಅದರಲ್ಲಿ ಸ್ನಾನಮಾಡಿದವನು ಗರ್ಭವಾಸಕ್ಕೆ ಭಾಗಿಯಾಗುವುದಿಲ್ಲ.

೯೬. ಬಳಿಕ ಗರುಡತೀರ್ಥ. ಇದು ಸಂಸಾರವೆಂಬ ಮಹಾವಿಷವನ್ನು ನಾಶಗೊಳಿಸುವುದು. ಇಲ್ಲಿ ಸ್ನಾನವನ್ನು ಮಾಡಿಕೊಂಡು ಗರುಡೇಶ್ವರಲಿಂಗವನ್ನು ಪೂಜಿಸಲು ಮನುಷ್ಯನು ಎಂದಿಗೂ ಶೋಕಕ್ಕೀಡಾಗುವುದಿಲ್ಲ.

೯೭. ಅದಕ್ಕಿಂತಲೂ ಬ್ರಹ್ಮೇಶ್ವರನ ಸಮ್ಮುಖದಲ್ಲಿರುವ ಬ್ರಹ್ಮತೀರ್ಥವು

**ತತೋ ವೃದ್ಧಾರ್ಕತೀರ್ಥಂ ಚ ವಿಧಿತೀರ್ಥಂ ತತಃ ಪರಂ ।**
**ತತ್ರಾಪ್ಲುತೋ ನರೋ ಯಾತಿ ರವಿಲೋಕಂ ಸುನಿರ್ಮಲಂ ॥ ೯೮ ॥**
**ತತೋ ನೃಸಿಂಹತೀರ್ಥಂ ಚ ಮಹಾಭಯನಿವಾರಣಂ ।**
**ಕಾಲಾದಪಿ ಕುತಸ್ತತ್ರ ಸ್ನಾತ್ವಾ ಪರಿಬಿಭೇತಿ ಚ ॥ ೯೯ ॥**
**ತತೋಽಪಿ ಪುಣ್ಯದಂ ನೄಣಾಂ ತೀರ್ಥಂ ಚಿತ್ರರಥೇಶ್ವರಂ ।**
**ಯತ್ರ ಸ್ನಾತ್ವಾ ಚ ದತ್ವಾ ಚ ಚಿತ್ರಗುಪ್ತಂ ನ ಪಶ್ಯತಿ ॥ ೧೦೦ ॥**
**ಧರ್ಮತೀರ್ಥಂ ತತಃ ಪುಣ್ಯಂ ಧರ್ಮೇಶಪುರತಃ ಸ್ಥಿತಂ ।**
**ತತ್ರ ಶ್ರಾದ್ಧಾದಿಕಂ ಕೃತ್ವಾ ಪಿತೄಣಾಮನೃಣೋ ಭವೇತ್ ॥ ೧೦೧ ॥**
**ವಿಶಾಲತೀರ್ಥಂ ವಿಮಲಂ ವಿಶಾಲಫಲದಂ ತತಃ ।**
**ತತ್ರ ಸ್ನಾತ್ವಾ ವಿಶಾಲಾಕ್ಷೀಂ ದೃಷ್ಟ್ವಾ ಗರ್ಭೇ ನ ಜಾಯತೇ ॥ ೧೦೨ ॥**
**ಜರಾಸಂಧೇಶತೀರ್ಥಂ ಚ ಜರಾಸಂಧೇಶಸನ್ನಿಧೌ ।**
**ಸಂಸಾರಜ್ವರಪೀಡಾಯಾಸ್ತತ್ರ ಸ್ನಾತೋ ನ ಮುಹ್ಯತಿ ॥ ೧೦೩ ॥**

---

ಪುಣ್ಯತಮವಾಗಿರುವುದು. ಅದರಲ್ಲಿ ಮಾಡಿದ ಸ್ನಾನದ ಫಲವಾಗಿ ಮಾನವನು ಬ್ರಹ್ಮವಿದ್ಯೆಯನ್ನು ಸುಲಭವಾಗಿ ಪಡೆಯುವನು.

೯೮. ಆ ಬ್ರಹ್ಮತೀರ್ಥಕ್ಕಿಂತಲೂ ವೃದ್ಧಾರ್ಕತೀರ್ಥವೆಂಬುದು ಉತ್ಕೃಷ್ಟವೆನಿಸಿರುವುದು. ಅದರಲ್ಲಿ ಮಜ್ಜನವನ್ನು ಮಾಡಿದ ನರನು ಅತ್ಯಂತ ನಿರ್ಮಲವಾದ ಸೂರ್ಯಲೋಕಕ್ಕೆ ಹೋಗಿ ಸೇರುವನು.

೯೯. ಅದಕ್ಕಿಂತಲೂ ಉತ್ತಮವಾದ ನೃಸಿಂಹತೀರ್ಥವು ಮಹಾಭಯಗಳನ್ನು ನಾಶಗೊಳಿಸುತ್ತಿರುವುದು. ಅದರಲ್ಲಿ ಸ್ನಾನಮಾಡಿದವನು ಕಾಲರೂಪಿಯಾದ ಯಮನಿಗೂ ಭಯಪಡಬೇಕಾದ ಕಾರಣವಿಲ್ಲ.

೧೦೦. ಆ ತೀರ್ಥಕ್ಕಿಂತಲೂ ಚಿತ್ರರಥೇಶ್ವರತೀರ್ಥವು ಮನುಷ್ಯರಿಗೆ ಪುಣ್ಯಪ್ರದವೆನಿಸಿರುವುದು. ಅದರಲ್ಲಿ ಸ್ನಾನವನ್ನು ಮಾಡಿ ಯಥೋಚಿತಗಳಾದ ದಾನಗಳನ್ನು ಕೊಡಲು ಮಾನವನು ಚಿತ್ರಗುಪ್ತನನ್ನೇ ನೋಡುವುದಿಲ್ಲ.

೧೦೧. ಅದಕ್ಕಿಂತಲೂ ಧರ್ಮೇಶ್ವರನ ಮುಂದಿರುವ ಧರ್ಮತೀರ್ಥವು ಪುಣ್ಯಪ್ರದವಾದುದು. ಅದರಲ್ಲಿ ಶ್ರಾದ್ಧವೇ ಮೊದಲಾದ ಪಿತೃಕಾರ್ಯಗಳನ್ನು ಮಾಡಲು ಪಿತೃಗಳ ಋಣವು ಪರಿಹಾರವನ್ನು ಹೊಂದುವುದು.

೧೦೨. ಧರ್ಮತೀರ್ಥಕ್ಕಿಂತಲೂ ಅತಿ ನಿರ್ಮಲವಾದ ವಿಶಾಲತೀರ್ಥವು ಬಹು ವಿಧವಾದ ಫಲವನ್ನು ಕೊಡುವುದು. ಅದರಲ್ಲಿ ಸ್ನಾನವನ್ನು ಮಾಡಿ ವಿಶಾಲಾಕ್ಷಿಯನ್ನು ಸಂದರ್ಶಿಸಲು ಪುನರ್ಜನ್ಮವಿರುವುದಿಲ್ಲವು.

೧೦೩. ಜರಾಸಂಧೇಶ್ವರಲಿಂಗದ ಸನ್ನಿಧಿಯಲ್ಲಿ ಜರಾಸಂಧೇಶ್ವರತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದವನು ಸಂಸಾರವೆಂಬ ಜ್ವರದ ಸಂಕಟಗಳಿಂದ ಬುದ್ಧಿಭ್ರಮಣೆಯನ್ನು ಹೊಂದುವುದಿಲ್ಲ.

ತತೋಽಪಿ ಲಲಿತಾತೀರ್ಥಂ ಮಹಾಸೌಭಾಗ್ಯವರ್ಧನಂ ।
ಸ್ನಾತ್ವಾರ್ಚಯಿತ್ವಾ ಲಲಿತಾಂ ನ ದರಿದ್ರೋ ನ ದುಃಖಭಾಕ್ ॥ ೧೦೪ ॥
ತತೋ ಗೌತಮತೀರ್ಥಂ ಚ ಸರ್ವಪಾಪವಿಶೋಧನಂ ।
ಸ್ನಾತ್ವಾ ಪಿಂಡಾನ್ನಿನಿರ್ವಾಪ್ಯ ಯತ್ರ ಶೋಚತಿ ನ ಕ್ವಚಿತ್ ॥ ೧೦೫ ॥
ಗಂಗಾಕೇಶವತೀರ್ಥಂ ಚ ತೀರ್ಥಂ ಚಾಗಸ್ತ್ಯಸಂಜ್ಞಕಂ ।
ತತಸ್ತು ಯೋಗಿನೀತೀರ್ಥಂ ತ್ರಿಸಂಧ್ಯಾಖ್ಯಂ ತತಃ ಪರಂ ॥ ೧೦೬ ॥
ತತಸ್ತು ನಾರ್ಮದಂ ತೀರ್ಥಂ ತೀರ್ಥಮಾರುಂಧತೀಯಕಂ ।
ವಾಸಿಷ್ಠಂ ಚ ತತಸ್ತೀರ್ಥಂ ಮಾರ್ಕಂಡೇಯಮನುತ್ತಮಂ ।
ಜ್ಞೇಯಾನ್ಯೇತಾನಿ ತೀರ್ಥಾನಿ ಪುಣ್ಯದಾನ್ಯುತ್ತರೋತ್ತರಂ ॥ ೧೦೭ ॥
ಖುರಕರ್ತರಿಸಂಜ್ಞಂ ಚ ತತಸ್ತೀರ್ಥಮನುತ್ತಮಂ ।
ತತ್ರ ಶ್ರಾದ್ಧಾದಿಕರಣಾನ್ನರೋ ಮುಚ್ಯೇತ ಕಿಲ್ಬಿಷೈಃ ॥ ೧೦೮ ॥
ತತೋ ಭಾಗೀರಥಂ ತೀರ್ಥಂ ರಾಜರ್ಷೇರತಿ ಪುಣ್ಯದಂ ।
ತತ್ರಾಲ್ಪಮಪಿ ಯಚ್ಛೇದ್ಯತ್ಕಲ್ಪಾಂತೇಽಪ್ಯಕ್ಷಯಂ ಹಿ ತತ್ ॥ ೧೦೯ ॥

---

೧೦೪. ಬಳಿಕ ಲಲಿತಾತೀರ್ಥವು ಮಹಾ ಸೌಭಾಗ್ಯಗಳನ್ನು ಅಭಿವೃದ್ಧಿಗೊಳಿಸುತ್ತಿರುವುದು. ಅದರಲ್ಲಿ ಸ್ನಾನವನ್ನು ಮಾಡಿಕೊಂಡು ಸಮೀಪದಲ್ಲಿರುವ ಲಲಿತಾಂಬಿಕೆಯನ್ನು ಪೂಜಿಸಿದವನು ದರಿದ್ರನೂ ದುಃಖಭಾಗಿಯೂ ಆಗುವುದಿಲ್ಲ.

೧೦೫. ಅದಕ್ಕಿಂತಲೂ ಉತ್ತಮವಾದ ಗೌತಮತೀರ್ಥವು ಸಕಲ ಪಾತಕಗಳನ್ನೂ ಶೋಧಿಸಿ ಹೊರಗೆಹಾಕುವುದು. ಅದರಲ್ಲಿ ಸ್ನಾನವನ್ನಾಚರಿಸಿ ಪಿತೃದೇವತೆಗಳಿಗೆ ಪಿಂಡಗಳನ್ನು ಕೊಡಲು ಎಂದಿಗೂ ಶೋಕಕ್ಕೆ ಭಾಗಿಯಾಗುವುದಿಲ್ಲ.

೧೦೬. ಅಂತೆಯೇ ಇನ್ನೂ ಅನೇಕ ತೀರ್ಥಗಳಿರುವುವು. ಗಂಗಾಕೇಶವ ತೀರ್ಥ. ಅಗಸ್ತ್ಯತೀರ್ಥ. ಬಳಿಕ ಯೋಗಿನೀತೀರ್ಥ. ಅದಕ್ಕಿಂತಲೂ ಉತ್ತಮವಾದ ತ್ರಿಸಂಧ್ಯಾತೀರ್ಥವೆಂಬುದು ಅಲ್ಲಿಯೇ ಇರುವುದು.

೧೦೭. ನರ್ಮದಾತೀರ್ಥ. ಅರುಂಧತೀತೀರ್ಥ. ಬಳಿಕ ವಸಿಷ್ಠತೀರ್ಥ, ಅಪ್ರತಿಮವಾದ ಮಾರ್ಕಂಡೇಯತೀರ್ಥ. ಈ ಎಲ್ಲ ತೀರ್ಥಗಳನ್ನೂ ಕ್ರಮವಾಗಿ ಒಂದಕ್ಕಿಂತ ಒಂದು ಹೆಚ್ಚು ಪುಣ್ಯಪ್ರದವೆಂಬುದಾಗಿ ತಿಳಿಯಬೇಕು.

೧೦೮. ಎಲ್ಲಕ್ಕಿಂತಲೂ ಖುರಕರ್ತರಿಯೆಂಬ ತೀರ್ಥವು ಉತ್ತಮವಾಗಿರುವುದು. ಅಲ್ಲಿ ಶ್ರಾದ್ಧವೇ ಮೊದಲಾದ ಪಿತೃಕಾರ್ಯಗಳನ್ನು ಮಾಡುವುದರಿಂದ ಮನುಷ್ಯನು ಸಕಲ ಪಾತಕಗಳಿಂದಲೂ ಮೋಚನೆಯನ್ನು ಹೊಂದುವನು.

೧೦೯. ಬಳಿಕ ರಾಜರ್ಷಿಯಾದ ಭಗೀರಥನ ತೀರ್ಥವಿರುವುದು. ಇದು ಅತ್ಯಂತ ಪುಣ್ಯಪ್ರದವು. ಇಲ್ಲಿ ಯಾವ ಪದಾರ್ಥವನ್ನೇ ಆಗಲಿ ಅತ್ಯಲ್ಪವಾಗಿ ದಾನಮಾಡಿದರೂ ಸಹ ಪ್ರಳಯಕಾಲದಲ್ಲಿಯೂ ಅದು ಅಕ್ಷಯವಾಗಿ ನಿಲ್ಲುವುದು.

ಏತೇಭ್ಯೋಽಪಿ ಹಿ ತೀರ್ಥೇಭ್ಯೋ ಲಿಂಗಕೋಟಿತ್ರಯಾದಪಿ ।
ವೀರ ವೀರೇಶ್ವರಂ ಲಿಂಗಂ ಮಹಾಶ್ರೇಷ್ಠಂ ಭವಿಷ್ಯತಿ ॥ ೧೧೦ ॥
ವೀರತೀರ್ಥೇ ನರಃ ಸ್ನಾತ್ವಾ ವೀರೇಶಂ ಪರಿಪೂಜ್ಯ ಚ ।
ತೀರ್ಥೇಷ್ವೇತೇಷು ಸರ್ವೇಷು ಸ್ನಾತೋ ಭವತಿ ನಾನ್ಯಥಾ ॥ ೧೧೧ ॥
ಯಸ್ತು ವೀರೇಶ್ವರಂ ಲಿಂಗಂ ನಕ್ತಮಭ್ಯರ್ಚಯಿಷ್ಯತಿ ।
ತೇನ ತ್ರಿಕೋಟಿಸಂಖ್ಯಾನಿ ಲಿಂಗಾನೀಹಾರ್ಚಿತಾನಿ ವೈ ॥ ೧೧೨ ॥
ಯಸ್ತು ಕಾಮಯತೇ ಲಕ್ಷ್ಮೀಂ ಮುಕ್ತಿದಾಂ ಭುಕ್ತಿದಾಮಪಿ ।
ತೇನ ವೀರೇಶ್ವರಂ ಲಿಂಗಂ ಸಂಸೇವ್ಯಮತಿಯತ್ನತಃ ॥ ೧೧೩ ॥
ವಿಧಾಯೈಕಂ ಜಾಗರಣಂ ನರೋ ವೀರೇಶಮರ್ಚಯನ್ ।
ಭೂತಾಯಾಂ ನೈವ ಗೃಹ್ಣಾತಿ ಶರೀರಂ ಪಾಂಚಭೌತಿಕಂ ॥ ೧೧೪ ॥
ಇದಂ ಲಿಂಗಂ ಸದಾಭ್ಯರ್ಚ್ಯಂ ಸಿದ್ಧೈಃ ಸಂಸಿದ್ಧಿಕಾಮುಕೈಃ ।
ಐಹಿಕಾಮುಷ್ಮಿಕಾನ್ಯಸ್ಮಾತ್ಸರ್ವಾನ್ಕಾಮಾನ್ಸಮರ್ಥಯೇತ್ ॥ ೧೧೫ ॥

---

೧೧೦. ವೀರರಾಜಪುತ್ರನೆ! ಮೇಲೆ ಹೇಳಿದ ಈ ತೀರ್ಥಗಳಿಗಿಂತಲೂ ಕಾಶಿಯಲ್ಲಿರುವ ಮೂರು ಕೋಟಿ ಲಿಂಗಗಳಿಗಿಂತಲೂ ಈ ವೀರೇಶ್ವರಲಿಂಗವು ಮಹಾಶ್ರೇಷ್ಠವೆನಿಸಿ ಪ್ರಖ್ಯಾತಿಯನ್ನು ಪಡೆಯುವುದು.

೧೧೧. ಯಾವ ಮನುಷ್ಯನೇ ಆಗಲಿ ವೀರತೀರ್ಥದಲ್ಲಿ ಸ್ನಾನವನ್ನು ಮಾಡಿ ವೀರೇಶ್ವರಲಿಂಗವನ್ನು ಪೂಜಿಸಿದ ಮಾತ್ರದಿಂದಲೇ ಈ ಸಮಸ್ತ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದಂತಾಗುವುದು. ಇಲ್ಲದಿದ್ದಲ್ಲಿ ಸಕಲ ತೀರ್ಥಗಳಲ್ಲಿ ಮಾಡಿದ ಸ್ನಾನಗಳೂ ಸಹ ನಿಷ್ಫಲಗಳೇ ಆಗಿ ಪರಿಣಮಿಸುವುವು.

೧೧೨. ಯಾವನು ಈ ವೀರೇಶ್ವರಲಿಂಗವನ್ನು ರಾತ್ರಿಯ ಕಾಲದಲ್ಲಿ ಪೂಜಿಸುವನೊ, ಅವನಿಂದ ಕಾಶಿಯಲ್ಲಿರುವ ಮೂರು ಕೋಟಿ ಸಂಖ್ಯೆಯ ಲಿಂಗಗಳೆಲ್ಲವೂ ಪೂಜಿಸಲ್ಪಟ್ಟುವೆಂದು ತಿಳಿಯಬೇಕು.

೧೧೩. ಯಾವನು ಐಹಿಕಾಮುಷ್ಮಿಕ ಸೌಖ್ಯಗಳಿಗೆ ಕಾರಣವಾದ ಐಶ್ವರ್ಯವನ್ನಪೇಕ್ಷಿಸುವನೊ, ಅವನು ಅತಿ ಪ್ರಯತ್ನದಿಂದಾದರೂ ವೀರೇಶ್ವರ ಮಹಾಲಿಂಗವನ್ನು ಸೇವಿಸಬೇಕು.

೧೧೪. ಚತುರ್ದಶಿಯ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ಒಂದು ಸಲವಾದರೂ ಯಾವ ನರನು ವೀರೇಶ್ವರನನ್ನು ಪೂಜಿಸುವನೊ, ಅವನು ಪುನಃ ಪಾಂಚಭೌತಿಕವಾದ ಶರೀರವನ್ನು ಗ್ರಹಣಮಾಡುವುದಿಲ್ಲ.

೧೧೫. ಈ ಮಹಾಲಿಂಗವು ನಿರಂತರವೂ ಸಿದ್ಧಿಯನ್ನು ಹೊಂದಿದವರಿಗೂ ಸಿದ್ಧಿಯನ್ನು ಹೊಂದಲಪೇಕ್ಷಿಸುವವರಿಗೂ ಪೂಜಾರ್ಹವಾಗಿರುವುದು. ಇದರ

**ಪಂಚಾಮೃತೇನ ಸ್ನಪನಂ ಯಃ ಕರಿಷ್ಯತಿ ಮಾನವಃ ।**
**ಪಲೇ ಪಲೇ ಫಲಂ ತಸ್ಯ ವೀರೇಶೋ ಘಟಕೋಟಿಜಂ ॥ ೧೧೬ ॥**
**ಯದನ್ಯತ್ರ ಫಲಂ ಲಿಂಗೇ ಕೋಟಿಪುಷ್ಪಪ್ರದಾನತಃ ।**
**ತದೇಕೇನೈವ ಪುಷ್ಪೇಣ ವೀರೇಶೇ ನಾತ್ರ ಸಂಶಯಃ ॥ ೧೧೭ ॥**
**ಏಕಾಮಪ್ಯಾಹುತಿಂ ದತ್ವಾ ವೀರೇಶ್ವರಸಮೀಪತಃ ।**
**ಕೋಟಿಹೋಮಫಲಂ ಸಂಯುಜ್ ನಾತ್ರ ಕಾರ್ಯಾ ವಿಚಾರಣಾ ॥೧೧೮॥**
**ಸಿಕ್ಥೇ ಸಿಕ್ಥೇ ಚ ನೈವೇದ್ಯೇ ಕೋಟಿಸಿಕ್ಥಫಲಂ ಭವೇತ್ ।**
**ಅತ್ಯಲ್ಪಮಪಿ ವೀರೇಶೇ ಕೃತಮಕ್ಷಯತಾಂ ವ್ರಜೇತ್ ॥ ೧೧೯ ॥**
**ಅಪ್ಯೇಕಂ ಯೋ ಮಹಾರುದ್ರಂ ಜಪೇದ್ವೀರೇಶಸನ್ನಿಧೌ ।**
**ಜಾಪಯೇದ್ವಾ ಭವೇತ್ತಸ್ಯ ಕೋಟಿರುದ್ರಫಲಂ ಧ್ರುವಂ ॥ ೧೨೦ ॥**
**ವ್ರತೋತ್ಸರ್ಗಾದಿ ವೀರೇಶೇ ಯತ್ಕೃತಂ ವ್ರತಿಭಿರ್ನೃಭಿಃ ।**
**ತತ್ಕೋಟಿಗುಣಸಂಖ್ಯಾತಂ ಭವತ್ಯೇವ ನ ಸಂಶಯಃ ॥ ೧೨೧ ॥**

---

ಅರ್ಚನೆಯಿಂದ ಇಹಲೋಕ ಪರಲೋಕಗಳೆರಡರಲ್ಲಿಯೂ ಸಕಲಾಭೀಷ್ಟಗಳನ್ನೂ ಸಾಧಿಸಿಕೊಳ್ಳಬಹುದು.

೧೧೬. ಯಾವ ಮನುಷ್ಯನು ಈ ವೀರೇಶ್ವರಲಿಂಗಕ್ಕೆ ಪಂಚಾಮೃತದ ಅಭಿಷೇಕವನ್ನು ಮಾಡಿಸುವನೊ, ಅವನಿಗೆ ಪಂಚಾಮೃತದ ಒಂದೊಂದು ಪಲದ ಭಾರಕ್ಕೂ ಒಂದು ನೂರು ಕುಂಭಗಳ ಅಮೃತವನ್ನು ಅಭಿಷೇಕಮಾಡಿದ ಫಲವು ದೊರಕುವುದು.

೧೧೭. ಬೇರೆ ಲಿಂಗಕ್ಕೆ ಒಂದುಕೋಟಿ ಪುಷ್ಪಗಳನ್ನು ಪೂಜಿಸುವುದರಿಂದ ಯಾವ ಫಲವುಂಟೊ, ಅದನ್ನೇ ವೀರೇಶ್ವರಲಿಂಗಕ್ಕೆ ಅರ್ಪಿಸಿದ ಒಂದೇ ಪುಷ್ಪದಿಂದ ಪಡೆಯಬಹುದು. ಇದರಲ್ಲಿ ಸಂದೇಹವಿಲ್ಲ.

೧೧೮. ಈ ವೀರೇಶ್ವರನ ಸಮ್ಮುಖದಲ್ಲಿ ಅಗ್ನಿಯಲ್ಲಿ ಒಂದೇ ಒಂದು ಆಹುತಿಯನ್ನು ಕೊಟ್ಟರೂ ಅದರಿಂದ ಒಂದುಕೋಟಿ ಹೋಮಗಳನ್ನು ಸಾಂಗವಾಗಿ ಮಾಡಿದ ಫಲವು ಲಭಿಸುವುದು. ಇದರಲ್ಲಿ ವಿಚಾರಮಾಡಬೇಕಾಗಿಲ್ಲವು.

೧೧೯. ವೀರೇಶ್ವರಲಿಂಗಕ್ಕೆ ಅರ್ಪಿಸಿದ ನೈವೇದ್ಯದ ಒಂದೊಂದು ಕವಳಕ್ಕೂ ಕೋಟಿ ಕವಳಗಳನ್ನರ್ಪಿಸಿದ ಫಲವು ಪ್ರಾಪ್ತವಾಗುವುದು. ಇಲ್ಲಿ ಮಾಡಿದ ಅತ್ಯಲ್ಪಸೇವೆಯಾದರೂ ಅಕ್ಷಯವಾಗಿ ಪರಿಣಮಿಸುವುದು.

೧೨೦. ವೀರೇಶ್ವರನ ಸನ್ನಿಧಿಯಲ್ಲಿ ಯಾವನು ಒಂದೇ ಸಲವಾದರೂ ಮಹಾರುದ್ರವನ್ನು ಜಪಿಸುವನೊ, ಅಥವ ಮತ್ತೊಬ್ಬರ ಕಡೆಯಿಂದ ಜಪವನ್ನು ಮಾಡಿಸುವನೊ, ಅವನಿಗೆ ಒಂದುಕೋಟಿ ಜಪಗಳನ್ನು ಮಾಡಿದ ಫಲವು ಕೈಗೂಡುವುದು ನಿಶ್ಚಯವು.

೧೨೧. ವ್ರತಗಳನ್ನು ಮಾಡುತ್ತಿರುವ ಮನುಜರು ವೀರೇಶ್ವರನ ಸನ್ನಿಧಿ

ಕೃತ್ವಾ ಅಷ್ಟೌ ನಮಸ್ಕಾರಾ ಯೇ ನ ವೀರೇಶ್ವರಾಗ್ರತಃ ।
ಅಷ್ಟಕೋಟಿನಮಸ್ಕಾರಫಲಂ ತಸ್ಯ ನ ಸಂಶಯಃ ॥ ೧೨೨ ॥
ಸರ್ವಾಸಾಂ ಸಂಪದಾಂ ಸ್ಥಾನಮಿದಂ ಲಿಂಗಂ ಭವಿಷ್ಯತಿ ।
ವೀರೇಶ್ವರಂ ನ ಸಂದೇಹೋ ವೀರ ಮೇ ವರದಾನತಃ ॥ ೧೨೩ ॥
ಜ್ಞಾನಮುತ್ಪತ್ಸ್ಯತೇ ಪುಂಸಾಂ ತಾರಕಾಖ್ಯಂ ಮಮಾಜ್ಞಯಾ ।
ಜೀವತಾಮೇವ ತತ್ಸೇವ್ಯಮೇತಲ್ಲಿಂಗಂ ಶುಭಾರ್ಥಿಭಿಃ ॥ ೧೨೪ ॥
ಏತಚ್ಛ್ರುತ್ವಾ ಪುನಃ ಪ್ರಾಹ ವೀರೋಽಮಿತ್ರಜಿತಃ ಸುತಃ ।
ಪ್ರಣಮ್ಯ ದೇವದೇವೇಶಂ ಪರಿಪೂರ್ಣಮನೋರಥಃ ॥ ೧೨೫ ॥
ತೀರ್ಥಾನ್ಯೇತಾನಿ ದೇವೇಶ ಯಾನ್ಯುಕ್ತಾನಿ ಮಮಾಗ್ರತಃ ।
ಕೃಪಯಾ ಪುನರಪ್ಯೇವ ತದನ್ಯಾನಿ ವದ ಪ್ರಭೋ ॥ ೧೨೬ ॥
ಆದಿಕೇಶವಮಾರಭ್ಯ ತತ್ತೀರ್ಥಾಚ್ಚ ಭಗೀರಥಾತ್ ।
ಏಷಾಂ ಶ್ರವಣಮಾತ್ರೇಣ ನಿಷ್ಪಾಪೋ ಜಾಯತೇ ನರಃ ॥ ೧೨೭ ॥

ಯಲ್ಲಿ ತಮ್ಮ ವ್ರತಗಳ ಉತ್ಸರ್ಗ (ಉದ್ಯಾಪನೆ)ಗಳನ್ನು ಮಾಡುವುದರಿಂದ ಅವರ ಕಾರ್ಯವು ಕೋಟಿಗುಣಿತವಾದ ಫಲವನ್ನು ಕೊಡುವುದೆಂಬುವರಲ್ಲಿ ಸಂಶಯವಿಲ್ಲ.

೧೨೨. ಯಾವನು ವೀರೇಶ್ವರನ ಎದುರಿನಲ್ಲಿ ಎಂಟು ಸಾಷ್ಟಾಂಗ ನಮಸ್ಕಾರಗಳನ್ನು ಮಾಡುವನೋ, ಅವನಿಗೆ ಎಂಟುಕೋಟಿ ನಮಸ್ಕಾರಗಳನ್ನು ಮಾಡಿದ ಫಲವು ದೊರಕುವುದರಲ್ಲಿ ಸಂಶಯವಿಲ್ಲವು.

೧೨೩. ಎಲೈ ವೀರನೆ! ನಿನ್ನ ವರದಾನದ ಫಲವಾಗಿ ಈ ವೀರೇಶ್ವರಲಿಂಗವು ನಿಶ್ಚಯವಾಗಿಯೂ ಸಕಲ ಸಂಪತ್ತುಗಳನ್ನೂ ಭಕ್ತರಿಗೆ ಕೈಗೂಡಿಸುವ ದೇವತೆಯಾಗಿ ಕೀರ್ತಿಯನ್ನು ಪಡೆಯುವುದು.

೧೨೪. ಇಲ್ಲಿ ನನ್ನ ಆಜ್ಞೆಯಿಂದ ಮಾನವರಿಗೆ ಸಂಸಾರಮೋಚಕವಾದ ಜ್ಞಾನವು ಉಂಟಾಗುವುದು. ಆದುದರಿಂದ ಶ್ರೇಯಸ್ಕಾಮಿಗಳಾದವರು ಜೀವಂತರಾಗಿರುವಾಗಲೇ ಈ ಮಹಾಲಿಂಗವನ್ನು ಸೇವಿಸಬೇಕು.''

೧೨೫. ಶತ್ರುಜಿನ್ಮಹಾರಾಜನ ಪುತ್ರನಾದ ವೀರನು ಇದೆಲ್ಲವನ್ನೂ ಕೇಳಿ ತನ್ನ ಮನೋರಥಗಳೆಲ್ಲವೂ ಪೂರ್ಣಗೊಳಿಸಲ್ಪಟ್ಟುವೆಂದು ತಿಳಿದವನಾಗಿ ಮಹಾದೇವನಿಗೆ ನಮಸ್ಕಾರವನ್ನು ಮಾಡಿ ಪುನಃ ಹೇಳತೊಡಗಿದನು.

೧೨೬. ''ದೇವಾಧಿದೇವನೆ! ನನ್ನ ಸ್ವಾಮಿಯೆ! ಈಗ ನನ್ನಮುಂದೆ ನೀನು ಯಾವ ತೀರ್ಥಗಳನ್ನು ನಿರೂಪಿಸಿರುವೆಯೊ, ಇವುಗಳಲ್ಲದೆ ಬೇರೆ ಯಾವ ತೀರ್ಥಗಳಿರುವುವೆಂಬುದನ್ನು ನನಗೆ ದಯವಿಟ್ಟು ಹೇಳು.

೧೨೭. ಆದಿಕೇಶತೀರ್ಥವನ್ನೂ ಭಗೀರಥತೀರ್ಥವನ್ನೂ ಮೊದಲುಮಾಡಿ

**ಇತಿ ಶ್ರುತ್ವಾ ಮಹೇಶಾನೋ ಮಹೀಪತನಯೋದಿತಂ ।**
**ಪುನಸ್ತೀರ್ಥಾನಿ ಗಂಗಾಯಾಂ ವಕ್ತುಂ ಸಮುಪಚಕ್ರಮೇ ॥ ೧೨೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವೀರೇಶ್ವರಾವಿರ್ಭಾವವರ್ಣನಂ" ನಾಮ ತ್ರ್ಯಶೀತಿತಮೋಽಧ್ಯಾಯಃ**

---

ಕೊಂಡು ಯಾವ ತೀರ್ಥಗಳಿರುವುವೊ, ಅವುಗಳ ಹೆಸರುಗಳನ್ನು ಕೇಳುವ ಮಾತ್ರದಿಂದಲೇ ಮನುಷ್ಯನು ನಿಷ್ಕಲ್ಮಷನಾಗುವನು."

೧೨೮. ಇಂತೆಂದು ಶತ್ರುಂಜಯ ಮಹಾರಾಜಪುತ್ರನು ಮಾಡಿದ ಪ್ರಾರ್ಥನೆಯನ್ನು ಕೇಳಿ ಮಹೇಶ್ವರನು ಗಂಗಾನದಿಯ ತೀರದಲ್ಲಿರುವ ಇತರ ತೀರ್ಥಗಳನ್ನೂ ನಿರೂಪಿಸಲುಪಕ್ರಮಿಸಿದನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವೀರೇಶ್ವರಾವಿರ್ಭಾವವರ್ಣನ"ವೆಂಬ ಎಂಬತ್ತಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಚತುರಶೀತಿತಮೋಽಧ್ಯಾಯಃ

### ವೀರೇಶ್ವರಾಖ್ಯಾನಂ—ತೀರ್ಥಾಖ್ಯಾನ ವರ್ಣನಂ

ಸ್ಕಂದ ಉವಾಚ:—

ಆಕರ್ಣಯ ಕ್ಷೋಣೀಸುರ ಯಥಾ ಸ್ಥಾಣುರಚೀಕರತ್ ।
ಗಂಗಾವರಣಯೋಃ ಪುಣ್ಯಾತ್ಸಂಭೇದಾತ್ತೀರ್ಥಭೂಮಿಕಾಂ ॥ ೧ ॥
ಸಂಗಮೇ ತತ್ರ ನಿಷ್ಪಾಪಃ ಸಂಗಮೇಶಂ ಸಮರ್ಚ್ಯ ಚ ।
ನರೋ ನ ಜಾತು ಜನನೀಗರ್ಭಸಂಗಮವಾಪ್ನುಯಾತ್ ॥ ೨ ॥
ತತ್ರ ಪಾದೋದಕಂ ತೀರ್ಥಂ ಯತ್ರ ದೇವೇನ ಶಾರ್ಙ್ಗಿಣಾ ।
ಆದೌ ಪಾದೌ ಕ್ಷಾಲಿತೌ ತು ಮಂದರಾಚ್ಚಾಗತೇನ ಚ ॥ ೩ ॥
ವಿಷ್ಣುಪಾದೋದಕೇ ತೀರ್ಥೇ ವಾರಿಕಾರ್ಯಂ ಕರೋತಿ ಯಃ ।
ವ್ಯತೀಪಾತೇನ ನಿಯತಂ ಭೂಯಃ ಸಾಂಸಾರಿಕೀ ಗತಿಃ ॥ ೪ ॥
ಕೃತಪಾದೋದಕಸ್ನಾನಃ ಕೃತಕೇಶವಪೂಜನಃ ।
ವೀತಸಂಸಾರವಸತಿಃ ಕಾಶ್ಯಾಮಾಸೀನ್ನರೋತ್ತಮಃ ॥ ೫ ॥

## ಕನ್ನಡದ ಅನುವಾದ

### ವೀರೇಶ್ವರಾಖ್ಯಾನ—ತೀರ್ಥಾಖ್ಯಾನ ವರ್ಣನ

೧. ಸ್ಕಂದನು ಹೇಳುತ್ತಾನೆ:—ಅಯ್ಯಾ ಬ್ರಾಹ್ಮಣೋತ್ತಮನೆ! ಮಹೇಶ್ವರನು ಗಂಗಾವರಣಾನದಿಗಳ ಸಂಗಮಪ್ರದೇಶವನ್ನು ಪುಣ್ಯಪ್ರದವಾದ ತೀರ್ಥಭೂಮಿಯನ್ನಾಗಿ ಮಾಡಿದ ಪ್ರಕಾರವನ್ನು ಕಿವಿಗೊಟ್ಟು ಕೇಳು.

೨. ಆ ಎರಡು ನದಿಗಳ ಸಂಗಮದಲ್ಲಿ ಸ್ನಾನವನ್ನು ಮಾಡಿಕೊಂಡು ಸಂಗಮೇಶ್ವರನ ಪೂಜೆಯನ್ನು ನೆರವೇರಿಸಿದ ಮನುಷ್ಯನು ಎಂದಿಗೂ ತಾಯಿಯ ಗರ್ಭದ ಸಂಬಂಧವನ್ನು ಅನುಭವಿಸುವುದಿಲ್ಲ.

೩. ಅದರ ಬಳಿಯಲ್ಲಿಯೇ ಪಾದೋದಕತೀರ್ಥವಿರುವುದು. ಪರಮಶಿವನು ಕಾಶಿಗೆ ಬಂದ ವೇಳೆಯಲ್ಲಿ ಆತನೊಡನೆ ಮಂದರಪರ್ವತದಿಂದ ಬಂದ ವಿಷ್ಣುವು ಅಲ್ಲಿ ತನ್ನ ಪಾದಗಳನ್ನು ತೊಳೆದುಕೊಂಡನು.

೪. ವಿಷ್ಣುಪಾದೋದಕತೀರ್ಥದಲ್ಲಿ ಯಾವನು ಸ್ನಾನಾಹ್ನಿಕಾದಿ ಕೃತ್ಯಗಳನ್ನು ವ್ಯತೀಪಾತಗಳ ದಿವಸದಲ್ಲಿ ನೆರವೇರಿಸುವನೊ, ಅವನಿಗೆ ಖಂಡಿತವಾಗಿಯೂ ಪುನಃ ಸಂಸಾರದ ಬಂಧವು ಉಂಟಾಗುವುದಿಲ್ಲ.

೫. ಪಾದೋದಕದಲ್ಲಿ ಸ್ನಾನವನ್ನೂ ಅಲ್ಲಿರುವ ಕೇಶವನ ಪೂಜೆಯನ್ನೂ ಮಾಡಿದ ಮನುಷ್ಯನು ಸಂಸಾರವೆಂಬ ಆವರಣದಿಂದ ಬಿಡುಗಡೆಯನ್ನು ಹೊಂದುವುದಲ್ಲದೆ ಕಾಶೀಕ್ಷೇತ್ರದಲ್ಲಿಯೇ ಮಹಾರಾಜನಾಗಿ ಜನಿಸುವನು.

ಕಾಶ್ಯಾಂ ಸಾ ಭೂಮಿರುದ್ದಿಷ್ಟಾ ಶ್ವೇತದ್ವೀಪ ಇತಿ ದ್ವಿಜೈಃ ।
ತತ್ರ ಪುಣ್ಯಾರ್ಜನಂ ಕೃತ್ವಾ ಶ್ವೇತದ್ವೀಪಾಧಿಪೋ ಭವೇತ್ ॥ ೬ ॥
ತತಃ ಪಾದೋದಕಾತ್ತೀರ್ಥಾತ್ತೀರ್ಥಂ ಕ್ಷೀರಾಬ್ಧಿಸಂಜ್ಞಕಂ ।
ತತ್ರಾರ್ಜಿತಮಹಾಪುಣ್ಯೋ ವಸೇತ್ಕ್ಷೀರಾಬ್ಧಿರೋಧಸಿ ॥ ೭ ॥
ಕ್ಷೀರೋದಾದ್ದಕ್ಷಿಣೇ ಭಾಗೇ ತೀರ್ಥಂ ಶಂಖಾಖ್ಯಮುತ್ತಮಂ ।
ತತ್ರ ಸ್ನಾತೋ ಭವೇನ್ನೂನಂ ಸ ಶಂಖಾದಿನಿಧೇಃ ಪತಿಃ ॥ ೮ ॥
ಅರ್ವಾಕ್ಚ ಶಂಖತೀರ್ಥಾದ್ವೈ ಚಕ್ರತೀರ್ಥಮನುತ್ತಮಂ ।
ಸಂಸಾರಚಕ್ರೇ ನ ಪತೇತ್ತತ್ತೀರ್ಥಜಲಮಜ್ಜನಾತ್ ॥ ೯ ॥
ಗದಾತೀರ್ಥಂ ತದಗ್ರೇ ತು ಸಂಸಾರಗದನಾಶನಂ ।
ತತ್ರ ಶ್ರಾದ್ಧಾದಿಕರಣಾತ್ಪಶ್ಯೇದ್ದೇವಂ ಗದಾಧರಂ ॥ ೧೦ ॥
ಪದ್ಮಾಕೃತ್ಪದ್ಮತೀರ್ಥಂ ಚ ತದಗ್ರೇ ಪಿತೃತೃಪ್ತಿಕೃತ್ ।
ತತ್ರ ಸ್ನಾನಾದಿಕರಣಾತ್ಪ್ರಾಪ್ನುಯಾದಘಸಂಕ್ಷಯಂ ॥ ೧೧ ॥

---

೬. ಕಾಶಿಯಲ್ಲಿರುವ ಆ ಪ್ರದೇಶವನ್ನು ಬ್ರಾಹ್ಮಣರು ಶ್ವೇತದ್ವೀಪವೆಂದು ಕರೆಯುತ್ತಿರುವರು. ಅಲ್ಲಿ ಪುಣ್ಯವನ್ನು ಸಂಪಾದಿಸಿದವನು ಶ್ವೇತದ್ವೀಪಕ್ಕೆ ಅಧಿಪತಿಯಾಗುವನು.

೭. ಆ ಪಾದೋದಕತೀರ್ಥದ ಬಳಿಯಲ್ಲಿಯೇ ಕ್ಷೀರಾಬ್ಧಿತೀರ್ಥವೆಂಬ ಹೆಸರಿನ ತೀರ್ಥವೊಂದಿರುವುದು. ಅಲ್ಲಿ ಮಹಾಪುಣ್ಯವನ್ನು ಸಂಪಾದಿಸಿದವನು ಕ್ಷೀರಸಮುದ್ರದ ದಡದಲ್ಲಿ ವಾಸಮಾಡುತ್ತಿರುವನು.

೮. ಆ ಕ್ಷೀರಾಬ್ಧಿತೀರ್ಥದ ದಕ್ಷಿಣಭಾಗಕ್ಕೆ ಶಂಖತೀರ್ಥವೆಂಬ ಉತ್ತಮ ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮಾನವನು ನಿಜವಾಗಿಯೂ ಶಂಖವೇ ಮೊದಲಾದ ನವನಿಧಿಗಳಿಗೂ ಒಡೆಯನಾಗುವನು.

೯. ಶಂಖತೀರ್ಥದ ಕೆಳಗಡೆ ಸರ್ವೋತ್ತಮವಾದ ಚಕ್ರತೀರ್ಥವಿರುವುದು. ಆ ತೀರ್ಥದ ನೀರಿನಲ್ಲಿ ಮಜ್ಜನವನ್ನು ಮಾಡಿದವನು ಸಂಸಾರಚಕ್ರದಲ್ಲಿ ಭ್ರಮಿಸುವುದಿಲ್ಲ.

೧೦. ಅದರ ಸಮ್ಮುಖದಲ್ಲಿಯೇ ಸಂಸಾರವೆಂಬ ವ್ಯಾಧಿಯನ್ನು ನಾಶಗೊಳಿಸುವ ಗದಾತೀರ್ಥವಿರುವುದು. ಅಲ್ಲಿ ಶ್ರಾದ್ಧವೇ ಮೊದಲಾದ ಪಿತೃಕಾರ್ಯಗಳನ್ನು ಮಾಡುವುದರಿಂದ ಭಕ್ತನು ದೇವದೇವನಾದ ಗದಾಧರನನ್ನೇ ನೋಡುವನು.

೧೧. ಅದರ ಅಗ್ರಭಾಗದಲ್ಲಿರುವ ಪದ್ಮತೀರ್ಥವು ಸರ್ವೈಶ್ವರ್ಯಪ್ರದವೂ, ಪಿತೃತೃಪ್ತಿಕಾರಕವೂ ಆಗಿರುವುದು. ಅದರಲ್ಲಿ ಸ್ನಾನಾದಿಕಾರ್ಯಗಳನ್ನು ಮಾಡುವುದರಿಂದ ಸಕಲಪಾಪಗಳಿಗೂ ಕ್ಷಯವುಂಟಾಗುವುದು.

ತತಸ್ತೀರ್ಥಂ ಮಹಾಲಕ್ಷ್ಮ್ಯಾ ಮಹಾಪುಣ್ಯಫಲಪ್ರದಂ ।
ತತ್ರಾಭ್ಯರ್ಚ್ಯ ಮಹಾಲಕ್ಷ್ಮೀಂ ನಿರ್ವಾಣಕಮಲಾಂ ಲಭೇತ್ ॥ ೧೨ ॥
ತತೋ ಗಾರುತ್ಮತಂ ತೀರ್ಥಂ ಸಂಸಾರಗರನಾಶನಂ ।
ಕೃತೋದಕಕ್ರಿಯಸ್ತತ್ರ ವೈಕುಂಠೇ ವಸತಿಂ ಲಭೇತ್ ॥ ೧೩ ॥
ತತೋ ನಾರದತೀರ್ಥಂ ಚ ಬ್ರಹ್ಮಸಿದ್ಧ್ಯೈಕಕಾರಣಂ ।
ತತ್ರ ಸ್ನಾನೇನ ಮುಕ್ತಿಃ ಸ್ಯಾದ್ದೃಷ್ಟ್ವಾ ನಾರದಕೇಶವಂ ॥ ೧೪ ॥
ಪ್ರಹ್ಲಾದತೀರ್ಥಂ ತದ್ಯಾಮ್ಯೇ ಮಹಾಭಕ್ತಿಫಲಪ್ರದಂ ।
ತತ್ರ ವೈ ಸ್ನಾನಮಾತ್ರೇಣ ವಿಷ್ಣೋಃ ಪ್ರಿಯತರೋ ಭವೇತ್ ॥ ೧೫ ॥
ಅಂಬರೀಷಂ ತತಸ್ತೀರ್ಥಂ ಮಹಾಪಾತಕನಾಶನಂ ।
ತತ್ರ ವೈ ಶುಭಕರ್ಮಾಣೋ ಜನಾ ನೋ ಗರ್ಭಭಾಜನಂ ॥ ೧೬ ॥
ಆದಿತ್ಯಕೇಶವಂ ನಾಮ ತದಗ್ರೇ ತೀರ್ಥಮುತ್ತಮಂ ।
ಕೃತಾಭಿಷೇಕಸ್ತತ್ರಾಪಿ ಲಭೇತ್ಸ್ವರ್ಗಾಭಿಷೇಚನಂ ॥ ೧೭ ॥

---

೧೨. ಬಳಿಕ ಮಹಾಪುಣ್ಯಫಲಗಳನ್ನು ಕೊಡುವ ಮಹಾಲಕ್ಷ್ಮೀತೀರ್ಥವಿರುವುದು. ಅಲ್ಲಿರುವ ಮಹಾಲಕ್ಷ್ಮಿಯನ್ನು ಪೂಜಿಸಿದವನು ಮೋಕ್ಷಲಕ್ಷ್ಮಿಯ ಅನುಗ್ರಹಕ್ಕೆ ಪಾತ್ರನಾಗುವನು.

೧೩. ಗಾರುಡತೀರ್ಥವು ಸಂಸಾರವೆಂಬ ವಿಷವನ್ನು ನಾಶಮಾಡುವುದು. ಅಲ್ಲಿ ಸ್ನಾನಪಾನದಿಗಳನ್ನು ಮಾಡಿದವನು ವೈಕುಂಠಲೋಕದಲ್ಲಿ ಶಾಶ್ವತವಾದ ವಾಸವನ್ನು ಪಡೆಯುವನು.

೧೪. ನಾರದತೀರ್ಥವೆಂಬುದು ಬ್ರಹ್ಮವಿದ್ಯೆಯ ಪ್ರಾಪ್ತಿಗೆ ಏಕಾಂತಸಾಧನನಾಗಿರುವುದು. ಅಲ್ಲಿ ಸ್ನಾನವನ್ನು ಮಾಡಿಕೊಂಡು ನಾರದಕೇಶವಸ್ವಾಮಿಯ ದರ್ಶನವನ್ನು ಮಾಡಿದವನು ಮೋಕ್ಷಭಾಜನನೇ ಆಗುವನು.

೧೫. ನಾರದತೀರ್ಥದ ದಕ್ಷಿಣದಲ್ಲಿರುವ ಪ್ರಹ್ಲಾದತೀರ್ಥವು ಉತ್ತಮ ಭಕ್ತಿಯೆಂಬ ಫಲವನ್ನು ಕೊಡುವುದು. ಅದರಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದ ಮನುಷ್ಯನು ಮಹಾವಿಷ್ಣುವಿಗೆ ಅತ್ಯಂತ ಪ್ರಿಯನಾಗುವನು.

೧೬. ಮಹಾಪಾತಕಗಳನ್ನೂ ನಾಶಮಾಡುವ ಅಂಬರೀಷತೀರ್ಥವಿರುವುದು. ಆ ತೀರ್ಥದ ಸಮೀಪದಲ್ಲಿ ಶುಭಕಾರ್ಯಗಳನ್ನು ಮಾಡಿದವರು ಪುನಃ ಗರ್ಭವಾಸದ ದುಃಖಕ್ಕೆ ಭಾಗಿಗಳಾಗುವುದಿಲ್ಲ.

೧೭. ಅದರ ಸಮ್ಮುಖದಲ್ಲಿಯೇ ಆದಿತ್ಯಕೇಶವನೆಂಬ ಹೆಸರಿನ ತೀರ್ಥವಿರುವುದು. ಅತ್ಯುತ್ತಮವಾದ ಈ ತೀರ್ಥದಲ್ಲಿ ಮಜ್ಜನವನ್ನು ಮಾಡಿದವನು ಸ್ವರ್ಗಲೋಕದಲ್ಲಿಯೂ ಪಟ್ಟಾಭಿಷಿಕ್ತನಾಗುವನು.

ದತ್ತಾತ್ರೇಯಸ್ಯ ತತ್ರಾಸ್ತಿ ತೀರ್ಥಂ ತ್ರೈಲೋಕ್ಯಪಾವನಂ ।
ಯೋಗಸಿದ್ಧಿಂ ಲಭೇತ್ತತ್ರ ಸ್ನಾನಮಾತ್ರೇಣ ಭಾವತಃ ॥ ೧೮ ॥
ತದಗ್ರೇ ಭಾರ್ಗವಂ ತೀರ್ಥಂ ಮಹಾಜ್ಞಾನಸಮರ್ಪಕಂ ।
ತತ್ರ ಸ್ನಾನವಿಧಾನೇನ ಭವೇದ್ಭಾರ್ಗವಲೋಕಭಾಕ್ ॥ ೧೯ ॥
ತತೋ ವಾಮನತೀರ್ಥಂ ಚ ವಿಷ್ಣುಸಾನ್ನಿಧ್ಯಹೇತುಕಂ ।
ತತ್ರ ಶ್ರಾದ್ಧವಿಧಾನೇನ ಮುಚ್ಯತೇ ಪಿತೃಜಾದೃಣಾತ್ ॥ ೨೦ ॥
ನರನಾರಾಯಣಾಖ್ಯಂ ಹಿ ತತಸ್ತೀರ್ಥಂ ಶುಭಪ್ರದಂ ।
ತತ್ತೀರ್ಥಮಜ್ಜನಾತ್ಪುಂಸಾಂ ಗರ್ಭವಾಸಃ ಸುದುರ್ಲಭಃ ॥ ೨೧ ॥
ಯಜ್ಞವಾರಾಹತೀರ್ಥಂ ಚ ತತೋ ದಕ್ಷಿಣತಃ ಶುಭಂ ।
ಯತ್ರ ಸ್ನಾತಸ್ಯ ವೈ ಪುಂಸೋ ರಾಜಸೂಯಫಲಂ ಧ್ರುವಂ ॥ ೨೨ ॥
ವಿದಾರನಾರಸಿಂಹಾಖ್ಯಂ ತೀರ್ಥಂ ತತ್ರಾಸ್ತಿ ಪಾವನಂ ।
ಯತ್ರೈಕಸ್ನಾನತೋ ನಶ್ಯೇದಘಂ ಜನ್ಮಶತಾರ್ಜಿತಂ ॥ ೨೩ ॥

---

೧೮. ಅಲ್ಲಿಯೇ ಮೂರು ಲೋಕಗಳಲ್ಲಿಯೂ ಪರಮಪಾವನವೆನಿಸಿದ ದತ್ತಾತ್ರೇಯತೀರ್ಥವು ನೆಲಸಿರುವುದು. ಭಕ್ತಿಭರಿತನಾಗಿ ಅದರಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಮನುಷ್ಯನು ಅಷ್ಟಾಂಗಸಹಿತವಾದ ಯೋಗದ ಸಿದ್ಧಿಯನ್ನು ಪಡೆಯುವನು.

೧೯. ಆ ತೀರ್ಥದ ಎದುರಿನಲ್ಲಿ ಮಹತ್ತರವಾದ ಜ್ಞಾನವನ್ನು ಸಂಪಾದಿಸಿ ಕೊಡುವ ಭಾರ್ಗವತೀರ್ಥವಿರುವುದು. ಅದರಲ್ಲಿ ವಿಧ್ಯುಕ್ತವಾಗಿ ಸ್ನಾನವನ್ನು ಮಾಡಲು ಮಾನವನು ಭಾರ್ಗವಲೋಕದಲ್ಲಿ ವಾಸಮಾಡುವನು.

೨೦. ವಾಮನತೀರ್ಥವು ಮಹಾವಿಷ್ಣುವಿನ ಪ್ರತ್ಯಕ್ಷದರ್ಶನಕ್ಕೆ ಕಾರಣವಾಗಿರುವುದು. ಅದರಲ್ಲಿ ಶ್ರಾದ್ಧಕೃತ್ಯವನ್ನು ಮಾಡಿದ ಮನುಷ್ಯನು ಪಿತೃಋಣದಿಂದ ಬಿಡುಗಡೆಯನ್ನು ಹೊಂದಿ ಸುಖಿಸುವನು.

೨೧. ನರನಾರಾಯಣರ ಹೆಸರಿನ ತೀರ್ಥವೂ ಮಂಗಳಪ್ರದವೆನಿಸಿರುವುದು. ಆ ತೀರ್ಥದಲ್ಲಿ ಮಜ್ಜನವನ್ನು ಮಾಡುವುದರಿಂದ ಮಾನವರಿಗೆ ಪುನಃ ಗರ್ಭವಾಸವೇ ದುರ್ಲಭವಾಗಿ ಪರಿಣಮಿಸುವುದು.

೨೨. ಅದಕ್ಕೆ ದಕ್ಷಿಣದಲ್ಲಿ ಪವಿತ್ರವಾದ ಯಜ್ಞವರಾಹ ತೀರ್ಥವಿರುವುದು. ಆ ತೀರ್ಥದಲ್ಲಿ ಸ್ನಾನಮಾಡಿದ ಮನುಜನಿಗೆ ರಾಜಸೂಯಯಜ್ಞವನ್ನು ಮಾಡಿದ ಉತ್ತಮ ಫಲವು ಲಭಿಸುವುದರಲ್ಲಿ ಸಂದೇಹವಿಲ್ಲ.

೨೩. ಅಲ್ಲಿಯೇ ಪಾವನವಾದ ವಿದಾರನಾರಸಿಂಹವೆಂಬ ಹೆಸರುಳ್ಳ ತೀರ್ಥವಿರುವುದು. ಅದರಲ್ಲಿ ಮಾಡಿದ ಒಂದೊಂದು ಸ್ನಾನದಿಂದಲೂ ನೂರುಜನ್ಮಗಳಲ್ಲಿ ಸಂಪಾದಿಸಿದ ಪಾತಕಗಳು ನಾಶವಾಗುವುವು.

ಗೋಪೀಗೋವಿಂದತೀರ್ಥಂ ಚ ತತೋ ವೈಷ್ಣವಲೋಕದಂ ।
ಯಸ್ಮಿನ್ಸ್ನಾತೋ ನರೋ ವಿದ್ವಾನ್ನ ವಿಂದ್ಯಾದ್ಗರ್ಭವೇದನಾಂ ॥ ೨೪ ॥
ಲಕ್ಷ್ಮೀನೃಸಿಂಹತೀರ್ಥಂ ಚ ಗೋಪೀಗೋವಿಂದದಕ್ಷಿಣೇ ।
ನಿರ್ವಾಣಲಕ್ಷ್ಮ್ಯಾ ಯತ್ರತ್ಯೋ ವ್ರಿಯತೇ ತು ನರೋತ್ತಮಃ ॥ ೨೫ ॥
ತದ್ದಕ್ಷಿಣಾಯಾಂ ಕಾಷ್ಠಾಯಾಂ ಶೇಷತೀರ್ಥಮನುತ್ತಮಂ ।
ಮಹಾಪಾಪೌಘಶೇಷೋಽಪಿ ನ ತಿಷ್ಠೇದ್ಯನ್ನಿಮಜ್ಜನಾತ್ ॥ ೨೬ ॥
ಶಂಖಮಾಧವತೀರ್ಥಂ ಚ ತದ್ಯಾಮ್ಯಾಂ ದಿಶಿ ಚೋತ್ತಮಂ ।
ತತ್ತೀರ್ಥಸೇವನಾನ್ನೄಣಾಂ ಕುತಃ ಪಾಪಭಯಂ ಮಹತ್ ॥ ೨೭ ॥
ತತೋಽಪಿ ಪಾವನತರಂ ತೀರ್ಥಂ ತತ್ಕ್ಷಣಸಿದ್ಧಿದಂ ।
ನೀಲಗ್ರೀವಾಖ್ಯಮತುಲಂ ತತ್ಸ್ನಾಯೀ ಸರ್ವದಾ ಶುಚಿಃ ॥ ೨೮ ॥
ತತ್ರೋದ್ದಾಲಕತೀರ್ಥಂ ಚ ಸರ್ವಾಘೌಘವಿನಾಶನಂ ।
ದದಾತಿ ಮಹತೀಮೃದ್ಧಿಂ ಸ್ನಾನಮಾತ್ರೇಣ ತನ್ನೃಣಾಂ ॥ ೨೯ ॥

---

೨೪. ಬಳಿಕ ವೈಷ್ಣವಲೋಕಪ್ರಾಪಕವಾದ ಗೋಪೀಗೋವಿಂದತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಜ್ಞಾನಸಂಪನ್ನನಾಗಿ ಗರ್ಭವಾಸದ ವೇದನೆಯನ್ನನುಭವಿಸುವುದಿಲ್ಲ.

೨೫. ಗೋಪೀಗೋವಿಂದತೀರ್ಥದ ದಕ್ಷಿಣದಲ್ಲಿ ಲಕ್ಷ್ಮೀನರಸಿಂಹತೀರ್ಥವಿರುವುದು. ಅಲ್ಲಿ ಸೇವೆಯನ್ನು ಮಾಡಿದ ಮನುಜೋತ್ತಮನು ಅಪ್ರಯಾಸವಾಗಿಯೇ ಮೋಕ್ಷಲಕ್ಷ್ಮಿಯಿಂದ ವರಿಸಲ್ಪಡುವನು.

೨೬. ಅದಕ್ಕೆ ದಕ್ಷಿಣದಿಕ್ಕಿನಲ್ಲಿ ಅನುತ್ತಮವಾದ ಶೇಷತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದವನಲ್ಲಿ ಹಿಂದೆ ಮಾಡಿದ ಮಹಾಪಾತಕಗಳ ಲೇಶಾಂಶವೂ ಸಹ ನಿಲ್ಲಲಾರದು.

೨೭. ಅದರ ದಕ್ಷಿಣದಲ್ಲಿ ಉತ್ತಮವಾದ ಶಂಖಮಾಧವತೀರ್ಥವಿರುವುದು. ಆ ತೀರ್ಥವನ್ನು ಸೇವಿಸುವ ಮನುಷ್ಯರಿಗೆ ಮಹತ್ತರಗಳಾದ ಪಾತಕಗಳಿಂದಲೂ ಭಯವೆಲ್ಲಿಯದು ?

೨೮. ಅದಕ್ಕಿಂತಲೂ ಪವಿತ್ರತರವಾದುದೂ ಕ್ಷಣಮಾತ್ರದಲ್ಲಿಯೇ ಕಾರ್ಯಸಿದ್ಧಿಯನ್ನು ಕೈಗೂಡಿಸುವುದೂ ಆದ ತೀರ್ಥವೊಂದಿರುವುದು. ಅಸದೃಶವಾದ ಆ ನೀಲಗ್ರೀವ ತೀರ್ಥದಲ್ಲಿ ಸ್ನಾನವನ್ನು ಮಾಡಿದವನು ಯಾವಾಗಲೂ ಪರಿಶುದ್ಧನೇ ಆಗಿರುವನು.

೨೯. ಅಲ್ಲಿಯೇ ಸಮಸ್ತಪಾಪರಾಶಿಗಳನ್ನು ನಾಶಗೊಳಿಸುವ ಉದ್ದಾಲಕತೀರ್ಥವೆಂಬುದಿರುವುದು. ಸ್ನಾನಮಾತ್ರದಿಂದಲೇ ಅದು ನರರಿಗೆ ಅಪ್ರತಿಮವಾದ ಸಂಪತ್ತನ್ನು ಕೊಡುತ್ತಿರುವುದು.

ತತಃ ಸಾಂಖ್ಯಾಖ್ಯತೀರ್ಥಂ ಚ ಸಾಂಖ್ಯೇಶ್ವರಸಮೀಪತಃ ।
ತತ್ತೀರ್ಥಸೇವನಾತ್ಪುಂಸಾಂ ಸಾಂಖ್ಯಯೋಗಃ ಪ್ರಸೀದತಿ ॥ ೩೦ ॥
ಸ್ವರ್ಲೋಕಾದ್ಯತ್ರ ಸಂಲೀನಃ ಸ್ವಯಂ ದೇವ ಉಮಾಪತಿಃ ।
ಅತಃ ಸ್ವರ್ಲೀನತೀರ್ಥಂ ಚ ಸ್ವರ್ಲೀನೇಶ್ವರಸನ್ನಿಧೌ ॥ ೩೧ ॥
ತತ್ರ ಸ್ನಾನೇನ ದಾನೇನ ಶ್ರದ್ಧಯಾ ದ್ವಿಜಭೋಜನೈಃ ।
ಜಪಹೋಮಾರ್ಚನೈಃ ಪುಂಸಾಮಕ್ಷಯಂ ಸರ್ವಮೇವ ಹಿ ॥ ೩೨ ॥
ಮಹಿಷಾಸುರತೀರ್ಥಂ ಚ ತತ್ಸಮೀಪೇಽತಿಪಾವನಂ ।
ಯತ್ರ ತಪ್ತ್ವಾ ಸ ದೈತ್ಯೇಂದ್ರೋ ವಿಜಿಗ್ಯೇ ಸಕಲಾನ್ಸುರಾನ್ ॥ ೩೩ ॥
ತತ್ತೀರ್ಥಸೇವಕೋಽದ್ಯಾಪಿ ನಾಽರಿಭಿಃ ಪರಿಭೂಯತೇ ।
ನ ಪಾತಕೈರ್ಮಹದ್ಭಿಶ್ಚ ಪ್ರಾರ್ಥಿತಂ ಚ ಫಲಂ ಲಭೇತ್ ॥ ೩೪ ॥
ಬಾಣತೀರ್ಥಂ ಚ ತಸ್ಯಾರಾತ್ತತ್ಸಹಸ್ರಭುಜಪ್ರದಂ ।
ತತ್ರ ಸ್ನಾತೋ ನರೋ ಭಕ್ತಿಂ ಪ್ರಾಪ್ನುಯಾಚ್ಛಾಂಭವೀಂ ಸ್ಥಿರಾಂ ॥ ೩೫ ॥
ಗೋಪ್ರತಾರೇಶ್ವರಂ ನಾಮ ತದಗ್ರೇ ತೀರ್ಥಮುತ್ತಮಂ ।
ಅಪುತ್ರೋಽಪಿ ತರೇದ್ಯತ್ರ ಸ್ನಾತೋ ವೈತರಣೀಂ ಸುಖಂ ॥ ೩೬ ॥

---

೩೦. ಸಾಂಖ್ಯೇಶ್ವರನ ಸಮೀಪದಲ್ಲಿ ಸಾಂಖ್ಯತೀರ್ಥವಿರುವುದು. ಆ ತೀರ್ಥದ ಸೇವನೆಯಿಂದ ಪುರುಷರಿಗೆ ಸಾಂಖ್ಯಯೋಗವು ಚೆನ್ನಾಗಿ ಕರಗತವಾಗುವುದು.

೩೧. ಸ್ವರ್ಗಲೋಕದಿಂದ ಮಹಾದೇವನು ಭೂಮಿಗೆ ಬಂದು ಅಂತರ್ಧಾನವನ್ನು ಹೊಂದಿದ ಸ್ಥಳದಲ್ಲಿ ಸ್ವರ್ಲೀನೇಶ್ವರಲಿಂಗವಿರುವುದು. ಆ ಲಿಂಗದ ಸನ್ನಿಧಿಯಲ್ಲಿಯೇ ಸ್ವರ್ಲೀನತೀರ್ಥವೂ ಇರುವುದು.

೩೨. ಅಲ್ಲಿ ಸ್ನಾನ, ದಾನ, ಬ್ರಾಹ್ಮಣಭೋಜನ, ಜಪ, ಹೋಮ, ಪೂಜೆ ಮುಂತಾದ ಸರ್ವವೂ ಮನುಷ್ಯರಿಗೆ ಅಕ್ಷಯಫಲವನ್ನೇ ಕೊಡುವುದು.

೩೩. ಆ ಸ್ವರ್ಲೀನೇಶ್ವರನ ಸಮೀಪದಲ್ಲಿಯೇ ಅತ್ಯಂತ ಪಾವನವಾದ ಮಹಿಷಾಸುರತೀರ್ಥವಿರುವುದು. ಅಲ್ಲಿ ಜಪವನ್ನು ಮಾಡಿದುದರಿಂದಲೇ ಮಹಿಷಾಸುರನು ಸಮಸ್ತ ದೇವತೆಗಳನ್ನೂ ಜಯಿಸಿದವನಾದನು.

೩೪. ಇಂದಿಗೂ ಸಹ ಆ ತೀರ್ಥವನ್ನು ಸೇವಿಸಿದವನು ಶತ್ರುಗಳಿಂದ ಪರಾಜಯವನ್ನು ಹೊಂದುವುದಿಲ್ಲ. ಮಹಾಪಾತಕಗಳಿಂದಲೂ ಭಯಪಡಬೇಕಾದುದಿಲ್ಲ. ಮತ್ತು ಮನಸ್ಸಿನಲ್ಲಿ ನೆನೆದ ಫಲವನ್ನೂ ಪಡೆಯುವನು.

೩೫. ಅದರ ಸಮೀಪದಲ್ಲಿಯೇ ಬಾಣತೀರ್ಥವಿರುವುದು. ಅದು ಮಾನವನಿಗೆ ಸಾವಿರಬಾಹುಗಳ ಪರಾಕ್ರಮವನ್ನು ಕೊಡುವುದು. ಅದರಲ್ಲಿ ಸ್ನಾನಮಾಡಿದ ನರನು ಮಹಾದೇವನಲ್ಲಿ ಸ್ಥಿರವಾದ ಭಕ್ತಿಯೋಗವನ್ನು ಸುಲಭವಾಗಿ ಹೊಂದುವನು.

೩೬. ಆ ತೀರ್ಥದ ಎದುರಾಗಿಯೇ ಗೋಪ್ರತಾರೇಶ್ವರತೀರ್ಥವೆಂಬ ಉತ್ತಮ

**ತೀರ್ಥಂ ಹಿರಣ್ಯಗರ್ಭಾಖ್ಯಂ ತದ್ಯಾಮ್ಯೇ ಸರ್ವಪಾಪಹೃತ್ ।**
**ತತ್ರ ಸ್ನಾತೋ ಹಿರಣ್ಯೇನ ಮುಚ್ಯತೇ ನ ಕದಾಚನ ॥ ೩೭ ॥**
**ತತಃ ಪ್ರಣವತೀರ್ಥಂ ಚ ಸರ್ವತೀರ್ಥೋತ್ತಮೋತ್ತಮಂ ।**
**ಜೀವನ್ಮುಕ್ತೋ ಭವೇತ್ತತ್ರ ಸ್ನಾನಮಾತ್ರೇಣ ಮಾನವಃ ॥ ೩೮ ॥**
**ತತಃ ಪಿಶಂಗಿಲಾತೀರ್ಥಂ ದರ್ಶನಾದಪಿ ಪಾಪಹೃತ್ ।**
**ಮುನೇ ಮಮಾಧಿಷ್ಠಾನಂ ವೈ ತದಗಸ್ತ್ಯೇಽತಿಸಿದ್ಧಿದಂ ॥ ೩೯ ॥**
**ಸ್ನಾತ್ವಾ ಪಿಶಂಗಿಲಾತೀರ್ಥೇ ದತ್ವಾ ದಾನಂ ಚ ಕಿಂಚನ ।**
**ಕಂ ಶೋಚತಿ ಕೃತಾತ್ಪಾಪಾದನ್ಯತ್ರಾಪಿ ಮೃತೋ ಯದಿ ॥ ೪೦ ॥**
**ಯೋ ವೈ ಪಿಶಂಗಿಲಾತೀರ್ಥೇ ಸ್ನಾತ್ವಾ ಮಾಮರ್ಚಯಿಷ್ಯತಿ ।**
**ಭವಿಷ್ಯಂತಿ ಸ ಮೇ ಮಿತ್ರಂ ಮಿತ್ರತೇಜಃಸ್ಸಮಪ್ರಭಂ ॥ ೪೧ ॥**
**ತತಸ್ತ್ರೈವಿಷ್ಟಪೀದೃಷ್ಟಿನಿರ್ಮಲೀಕೃತಪುಷ್ಕಲಂ ।**
**ತೀರ್ಥಂ ಪಿಲಿಪಿಲಾಖ್ಯಂ ವೈ ಮನೋಮಲವಿನಾಶನಂ ॥ ೪೨ ॥**

---

ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮಾನವನು ಸಂತಾನರಹಿತನಾದರೂ ಯಮಲೋಕದ ದಾರಿಯಲ್ಲಿರುವ ವೈತರಣೀನದಿಯನ್ನು ಸುಖವಾಗಿ ದಾಟುವನು.

೩೭. ಅದರ ದಕ್ಷಿಣಕ್ಕೆ ಸಕಲ ಪಾಪಗಳನ್ನೂ ಪರಿಹರಿಸುವ ಹಿರಣ್ಯಗರ್ಭವೆಂಬ ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದವನು ಎಂದಿಗೂ ಧನರಹಿತನಾಗುವುದಿಲ್ಲ.

೩೮. ಈ ಪ್ರಣವತೀರ್ಥವು ಅಲ್ಲಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮಾತ್ರದಿಂದ ಮಾನವನು ಜೀವನ್ಮುಕ್ತನಾಗುವನು.

೩೯. ಬಳಿಕ ಪಿಶಂಗಿಲಾತೀರ್ಥವಿರುವುದು. ಅದರ ದರ್ಶನದಿಂದಲೇ ಸಕಲ ಪಾಪಗಳೂ ದೂರವಾಗುವುವು. ಅಗಸ್ತ್ಯಮುನಿಯೆ ! ಆ ತೀರ್ಥವು ನನಗೆ ಅಧಿಷ್ಠಾನವಾಗಿದ್ದು ಸಕಲ ಸಿದ್ಧಿಗಳನ್ನೂ ಕೈಗೂಡಿಸುವುದು.

೪೦. ಈ ಪಿಶಂಗಿಲಾತೀರ್ಥದಲ್ಲಿ ಸ್ನಾನವನ್ನು ಮಾಡಿ ಯತ್ಕಿಂಚಿತ್ತಾದರೂ ದಾನವನ್ನು ಕೊಟ್ಟವನು ಬೇರೆ ಸ್ಥಳದಲ್ಲಿ ಮರಣವನ್ನು ಹೊಂದಿದರೂ ಮಾಡಿದ ಪಾತಕಗಳಿಗೆ ಏತಕ್ಕೆ ಹೆದರಬೇಕು ?

೪೧. ಯಾವನೇ ಆಗಲಿ ಪಿಶಂಗಿಲಾತೀರ್ಥದಲ್ಲಿ ಸ್ನಾನವನ್ನು ಮಾಡಿ ನನ್ನ ಪೂಜೆಯನ್ನು ಸಮಗ್ರವಾಗಿ ನೆರವೇರಿಸುವನೊ, ಅವನು ಸೂರ್ಯಪ್ರಭೆಗೆ ಸಮಾನವಾದ ಕಾಂತಿಯುಳ್ಳವನಾಗಿ ನನಗೆ ಪರಮಮಿತ್ರನಾಗುವನು.

೪೨. ಪಿಲಿಪಿಲಾತೀರ್ಥವೂ ತ್ರಿಲೋಚನೇಶ್ವರನ ದೃಷ್ಟಿಯಿಂದ ಪವಿತ್ರೀಕೃತವಾದ ಜಲವುಳ್ಳದ್ದಾಗಿ ಸ್ನಾನಮಾಡುವವರ ಮನಸ್ಸಿನ ಮಲಗಳನ್ನೆಲ್ಲ ನಾಶಮಾಡುವುದು.

ತತ್ರ ಶ್ರಾದ್ಧಾದಿಕರಣಾದ್ದೀನಾನಾಥಪ್ರತರ್ಪಣಾತ್ ।
ಮಹತೀಂ ಶ್ರಿಯಮಾಪ್ನೋತಿ ಮಾನವೋಽತೀವನಿಶ್ಚಲಾಂ ॥ ೪೩ ॥
ತತೋ ನಾಗೇಶ್ವರಂ ತೀರ್ಥಂ ಮಹಾಘಪರಿಶೋಧನಂ ।
ತತ್ತೀರ್ಥಮಜ್ಜನಾದೇವ ಭವೇತ್ಸರ್ವಾಘಸಂಕ್ಷಯಃ ॥ ೪೪ ॥
ತದ್ದಕ್ಷಿಣೇ ಮಹಾಪುಣ್ಯಂ ಕರ್ಣಾದಿತ್ಯಾಖ್ಯಮುತ್ತಮಂ ।
ತೀರ್ಥಂ ಯತ್ರಾಪ್ಲುತೋ ಮರ್ತ್ಯೋ ಭಾಸ್ಕರೀಂ ಶ್ರಿಯಮಾವಹೇತ್ ॥
ತತೋ ಭೈರವತೀರ್ಥಂ ಚ ಮಹಾಘೌಘಕ್ಷಯಪ್ರದಂ ।
ಚತುರರ್ಥೋದಯಕರಂ ಸರ್ವವಿಘ್ನನಿವಾರಣಂ ॥ ೪೬ ॥
ಭೌಮಾಷ್ಟಮ್ಯಾಂ ತತ್ರ ನರಃ ಸ್ನಾತ್ವಾ ಸಂತರ್ಪಯೇತ್ಪಿತೄನ್ ।
ದೃಷ್ಟ್ವಾ ಚ ಭೈರವಂ ಕಾಲಂ ಕಲಿಂ ಕಾಲಂ ಚ ಸಂಜಯೇತ್ ॥ ೪೭ ॥
ತೀರ್ಥಂ ಖರ್ವನೃಸಿಂಹಾಖ್ಯಂ ತೀರ್ಥಾದ್ಭೈರವತಃ ಪುರಃ ।
ತತ್ರ ಸ್ನಾತಸ್ಯ ವೈ ಪುಂಸಃ ಕುತೋಽಘಜನಿತಂ ಭಯಂ ॥ ೪೮ ॥

---

೪೩. ಅಲ್ಲಿ ಶ್ರಾದ್ಧಾದಿ ಪೈತೃಕಕಾರ್ಯಗಳನ್ನು ಮಾಡಿ ದೀನರನ್ನೂ ಅನಾಥರನ್ನೂ ಸಂತೋಷಗೊಳಿಸುವುದರಿಂದ ಮಾನವನು ಎಂದಿಗೂ ಎಡಬಿಡದಿರುವ ಮಹದೈಶ್ವರ್ಯವನ್ನು ಹೊಂದುವನು.

೪೪. ಮಹಾಪಾತಕಗಳನ್ನು ಶೋಧಿಸಿ ಕಳೆಯುವ ನಾಗೇಶ್ವರತೀರ್ಥವಿರುವುದು. ಆ ತೀರ್ಥದಲ್ಲಿ ಮಜ್ಜನವನ್ನು ಮಾಡುವುದರಿಂದಲೇ ಸಮಸ್ತ ಪಾತಕಗಳ ನಾಶವಾಗುವುದು.

೪೫. ಅಲ್ಲದೆ ಆ ನಾಗೇಶ್ವರತೀರ್ಥದಲ್ಲಿ ಮುಳುಗಿದ ಮನುಷ್ಯನು ಸೂರ್ಯದೇವನ ಐಶ್ವರ್ಯವನ್ನು ಪಡೆಯುವನು.

೪೬. ಬಳಿಕ ಮಹಾಪಾತಕಗಳ ಸಮೂಹವನ್ನು ಕ್ಷಯಗೊಳಿಸುವ ಭೈರವತೀರ್ಥವಿರುವುದು. ಆ ತೀರ್ಥದ ಸ್ನಾನದಿಂದ ಚತುರ್ವಿಧ ಪುರುಷಾರ್ಥಗಳೂ ಕೈಗೂಡುವುವಲ್ಲದೆ ಸಮಸ್ತ ವಿಘ್ನಗಳೂ ದೂರವಾಗುವುವು.

೪೭. ಮಂಗಳವಾರದ ದಿನ ಅಷ್ಟಮಿಯ ತಿಥಿಯಿರಲು ಪ್ರತಿಯೊಬ್ಬನೂ ಅಲ್ಲಿ ಸ್ನಾನವನ್ನು ಮಾಡಿ ಪಿತೃದೇವತೆಗಳಿಗೆ ತರ್ಪಣಗಳನ್ನು ಕೊಡಬೇಕು. ಮತ್ತು ಭೈರವೇಶ್ವರನನ್ನು ನೋಡಲು, ಕಲಿಪುರುಷನನ್ನೂ ಕಾಲಯಮನನ್ನೂ ಸುಲಭವಾಗಿ ಜಯಿಸುವನು.

೪೮. ಆ ಭೈರವತೀರ್ಥದ ಮುಂದುಗಡೆಯಲ್ಲಿ ಖರ್ವನೃಸಿಂಹವೆಂಬ ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮನುಷ್ಯನಿಗೆ ಪಾತಕಗಳನ್ನು ಮಾಡಿದ ಭಯವೇಕೆ?

ಮೃಕಂಡಸ್ಯ ಮುನೇಸ್ತೀರ್ಥಂ ತದ್ಯಾಮ್ಯಾಮತಿನಿರ್ಮಲಂ ।
ತತ್ರ ಸ್ನಾನೇನ ಮರ್ತ್ಯಾನಾಂ ನಾಪಾಯಮರಣಂ ಕ್ವಚಿತ್ ॥ ೪೯ ॥
ತತಃ ಪಂಚನದಾಖ್ಯಂ ವೈ ಸರ್ವತೀರ್ಥನಿಷೇವಿತಂ ।
ತೀರ್ಥಂ ಯತ್ರ ನರಃ ಸ್ನಾತ್ವಾ ನ ಸಂಸಾರೀ ಪುನರ್ಭವೇತ್ ॥ ೫೦ ॥
ಬ್ರಹ್ಮಾಂಡೋದರವರ್ತೀನಿ ಯಾನಿ ತೀರ್ಥಾನಿ ಸರ್ವತಃ ।
ಊರ್ಜೇ ಯತ್ರ ಸಮಾಯಾಂತಿ ಸ್ವಾಘೌಘಪರಿಮುಕ್ತಯೇ ॥ ೫೧ ॥
ಸರ್ವದಾ ಯತ್ರ ಸರ್ವಾಣಿ ದಶಮ್ಯಾದಿದಿನತ್ರಯಂ ।
ತಿಷ್ಠಂತಿ ತೀರ್ಥವರ್ಯಾಣಿ ನಿಜನೈರ್ಮಲ್ಯಹೇತವೇ ॥ ೫೨ ॥
ಭೂರಿಶಃ ಸರ್ವತೀರ್ಥಾಣಿ ಮಧ್ಯೇಕಾಶಿ ಪದೇ ಪದೇ ।
ಪರಂ ಪಾಂಚನದಃ ಕೈಶ್ಚಿನ್ಮಹಿಮಾ ನಾಪಿ ಕುತ್ರಚಿತ್ ॥ ೫೩ ॥
ಅಪ್ಯೇಕಂ ಕಾರ್ತಿಕಸ್ಯಾಹಸ್ತತ್ರ ವೈ ಸಫಲೀಕೃತಂ ।
ಜಪಹೋಮಾರ್ಚನಾದಾನ್ಯೈಃ ಕೃತಕೃತ್ಯಾಸ್ತ ಏವ ಹಿ ॥ ೫೪ ॥

---

೪೯. ಅದರ ದಕ್ಷಿಣದಲ್ಲಿ ಅತಿ ನಿರ್ಮಲವಾದ ಮೃಕಂಡುಮಹಾಮುನಿಯ ತೀರ್ಥವಿರುವುದು. ಅಲ್ಲಿ ಸ್ನಾನವನ್ನು ಮಾಡಿದವನಿಗೆ ಎಂದಿಗೂ ಅಪಾಯಗಳಿಂದ ಮರಣವು ಸಂಭವಿಸುವುದಿಲ್ಲ.

೫೦. ಬಳಿಕ ಪಂಚನದತೀರ್ಥವೆಂಬುದಿರುವುದು. ಅದನ್ನು ಇತರ ಸಕಲ ತೀರ್ಥಗಳೂ ಸೇವಿಸುತ್ತಿರುವುವು. ಅದರಲ್ಲಿ ಸ್ನಾನವನ್ನು ಮಾಡಲು ನರನು ಪುನಃ ಸಂಸಾರದಬಂಧನಕ್ಕೊಳಗಾಗುವುದಿಲ್ಲ.

೫೧. ಸಕಲ ಬ್ರಹ್ಮಾಂಡವಲ್ಲಿಯೂ ಎಷ್ಟು ತೀರ್ಥಗಳು ನೆಲಸಿರುವುವೊ, ಆವುಗಳೆಲ್ಲವೂ ತಮ್ಮ ತಮ್ಮ ಪಾಪಗಳನ್ನು ಕಳೆದುಕೊಳ್ಳಲು ಕಾರ್ತಿಕಮಾಸವಲ್ಲಿ ಇಲ್ಲಿಗೆ ಬರುವುವು.

೫೨. ಆ ಮಾಸದಲ್ಲಿ ಶುಕ್ಲದಶಮಿಯ ಮೊದಲು ಮೂರು ದಿನಗಳವರೆಗೂ ಸಮಸ್ತ ಉತ್ತಮತೀರ್ಥಗಳೂ ನೈರ್ಮಲ್ಯವನ್ನು ಪಡೆಯುವುದಕ್ಕಾಗಿ ಇದರಲ್ಲಿ ಬಂದು ಸನ್ನಿಹಿತಗಳಾಗಿ ನಿಂತಿರುವುವು.

೫೩. ಕಾಶೀಕ್ಷೇತ್ರದ ಮಧ್ಯದಲ್ಲಿ ಹೆಜ್ಜೆ ಹೆಜ್ಜೆಗೂ ಅಸಂಖ್ಯಾತಗಳಾದ ತೀರ್ಥಗಳು ನೆಲಸಿರುವುವು. ಆದರೆ ಈ ಪಂಚನದತೀರ್ಥದ ಮಹಿಮೆಗೆ ಸಮಾನವಾದ ಮಹಿಮೆಯುಳ್ಳ ಯಾವ ತೀರ್ಥಗಳೂ ಎಲ್ಲಿಯೂ ಇರುವುದಿಲ್ಲ.

೫೪. ಕಾರ್ತೀಕಮಾಸದಲ್ಲಿ ಒಂದು ದಿವಸವನ್ನಾದರೂ ಆ ತೀರ್ಥದ ಬಳಿಯಲ್ಲಿ ಜಪ, ಹೋಮ, ಅರ್ಚನ, ದಾನ ಮುಂತಾದ ಕಾರ್ಯಗಳಿಂದ ಯಾರು ಸಫಲವನ್ನಾಗಿ ಮಾಡಿಕೊಳ್ಳುವರೊ, ಅವರೇ ಕೃತಾರ್ಥರೆಂದು ತಿಳಿಯಬೇಕು.

ಸರ್ವಾಣ್ಯಪಿ ಚ ತೀರ್ಥಾನಿ ಯುಗಪತ್ತುಲಿತಾನ್ಯಪಿ ।
ನಾಧಿಜಗ್ಮುಃ ಪಂಚನದ್ಯಾಃ ಕಲಾಯಾ ಅಪಿ ತುಲ್ಯತಾಂ ॥ ೫೫ ॥
ಸ್ನಾತ್ವಾ ಪಾಂಚನದೇ ತೀರ್ಥೇ ದೃಷ್ಟ್ವಾ ವೈ ಬಿಂದುಮಾಧವಂ ।
ಸ ಜಾತು ಜಾಯತೇ ಧೀಮಾನ್ ಜನನೀಜಠರಾಜಿರೇ ॥ ೫೬ ॥
ತತೋ ಜ್ಞಾನಹ್ರದಂ ತೀರ್ಥಂ ಜಡಾನಾಮಪಿ ಜಾಡ್ಯಹೃತ್ ।
ತತ್ರ ಸ್ನಾತೋ ನರೋ ಜಾತು ಜ್ಞಾನಭ್ರಂಶಂ ನ ಚಾಪ್ನುಯಾತ್ ॥ ೫೭ ॥
ತತ್ರ ಜ್ಞಾನಹ್ರದೇ ಸ್ನಾತ್ವಾ ದೃಷ್ಟ್ವಾ ಜ್ಞಾನೇಶ್ವರಂ ನರಃ ।
ಜ್ಞಾನಂ ತದಧಿಗಚ್ಛೇದ್ವೈ ಯೇನ ನೋ ಬಾಧ್ಯತೇ ಪುನಃ ॥ ೫೮ ॥
ತತೋಽಸ್ತಿ ಮಂಗಲಂ ತೀರ್ಥಂ ಸರ್ವಾಮಂಗಲನಾಶನಂ ।
ತತ್ರಾವಗಾಹನಂ ಕೃತ್ವಾ ಭವೇನ್ಮಂಗಲಭಾಜನಂ ॥ ೫೯ ॥
ಅಮಂಗಲಾನಿ ನಶ್ಯೇಯುರ್ಭವೇಯುರ್ಮಂಗಲಾನಿ ಚ ।
ಸ್ನಾತುರ್ವೈ ಮಂಗಲೇ ತೀರ್ಥೇ ನಮಸ್ಕರ್ತುಶ್ಚ ಮಂಗಲಂ ॥ ೬೦ ॥

---

೫೫. ಸಕಲ ತೀರ್ಥಗಳನ್ನೂ ಒಟ್ಟಿಗೆ ತಕ್ಕಡಿಯಲ್ಲಿ ಹಾಕಿ ತೂಕಮಾಡಲು ಅವು ಪಂಚನದತೀರ್ಥದ ಹದಿನಾರನೆಯ ಒಂದು ಭಾಗದ ತೂಕಕ್ಕೂ ಸಹ ಸರಿತೂಗಲಿಲ್ಲ.

೫೬. ಈ ಪಂಚನದತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಯಾವ ಬುದ್ಧಿಶಾಲಿಯು ಬಿಂದುಮಾಧವಸ್ವಾಮಿಯ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಪುನಃ ತಾಯಿಯ ಗರ್ಭರಂಗದಲ್ಲಿ ಜನನವನ್ನು ತಾಳುವುದಿಲ್ಲ.

೫೭. ಜ್ಞಾನಹ್ರದವೆಂಬ ತೀರ್ಥವು ಅತ್ಯಂತ ಮೂರ್ಖರಿಗೂ ಜಾಡ್ಯವನ್ನು ಹೋಗಲಾಡಿಸುವುದು. ಅಲ್ಲಿ ಸ್ನಾನವನ್ನು ಮಾಡಿದ ನರನೆಂದಿಗೂ ಜ್ಞಾನದ ಅಭಾವವನ್ನನುಭವಿಸುವುದಿಲ್ಲ.

೫೮. ಜ್ಞಾನಹ್ರದದಲ್ಲಿ ಸ್ನಾನವನ್ನು ಮಾಡಿಕೊಂಡು ಜ್ಞಾನೇಶ್ವರಲಿಂಗವನ್ನು ಸಂದರ್ಶನಮಾಡಲು ಪುನಃ ಸಂಸಾರಬಂಧನದಲ್ಲಿ ಸಿಕ್ಕಿಕೊಳ್ಳದಂತೆ ಮಾಡುವ ಜ್ಞಾನವನ್ನು ಪಡೆಯುವನು.

೫೯. ಮತ್ತು ಮಂಗಳತೀರ್ಥವಿರುವುದು. ಅದು ಸಕಲ ವಿಧಗಳಾದ ಅಶುಭಗಳನ್ನೂ ನಾಶಮಾಡುವುದು. ಅದರಲ್ಲಿ ಮಂಗಳಸ್ನಾನವನ್ನು ಮಾಡಿದವನು ಸಕಲೈಶ್ವರ್ಯಗಳಿಗೂ ಭಾಜನನಾಗುವನು.

೬೦. ಅವನ ಅಮಂಗಲಗಳೆಲ್ಲವೂ ನಾಶವಾಗಿ ಮಂಗಳಗಳೇ ಉಂಟಾಗುತ್ತಿರುವುವು. ಆದುದರಿಂದ ಮಂಗಳತೀರ್ಥದಲ್ಲಿ ಸ್ನಾನವನ್ನು ಮಾಡಿದ ಬಳಿಕ ಮಹೇಶ್ವರನಿಗೆ ನಮಸ್ಕಾರಗಳನ್ನರ್ಪಿಸಬೇಕು.

ಮಯೂಖಮಾಲಿನಸ್ತೀರ್ಥಂ ತದಗ್ರೇ ಮಲನಾಶನಂ ।
ತತ್ರಾಪ್ಲುತೋ ಗಭಸ್ತೀಶಂ ವಿಲೋಕ್ಯ ವಿಮಲೋ ಭವೇತ್ ॥ ೬೧ ॥
ಮುಖತೀರ್ಥಂ ತು ತತ್ರೈವ ಮುಖೇಶ್ವರಸಮೀಪತಃ ।
ಮುಖಜಂ ಪುಣ್ಯಮಾಪ್ನೋತಿ ತತ್ರ ಸ್ನಾತೋ ನರೋತ್ತಮಃ ॥ ೬೨ ॥
ತತ್ಪಾರ್ಶ್ವೇ ಬಿಂದುತೀರ್ಥಂ ಚ ಪರಮಜ್ಞಾನಕಾರಣಂ ।
ತತ್ರ ಶ್ರಾದ್ಧಾದಿಕಂ ಕೃತ್ವಾ ಲಭೇತ್ಸುಕೃತಮುತ್ತಮಂ ॥ ೬೩ ॥
ಪಿಪ್ಪಲಾದಸ್ಯ ಚ ಮುನೇಸ್ತೀರ್ಥಂ ತದ್ಯಾಮ್ಯದಿಕ್ಸ್ಥಿತಂ ।
ಸ್ನಾತ್ವಾ ಶನೇರ್ದಿನೇ ತತ್ರ ದೃಷ್ಟ್ವಾ ವೈ ಪಿಪ್ಪಲೇಶ್ವರಂ ॥ ೬೪ ॥
ಪಿಪ್ಪಲಂ ತತ್ರ ಸೇವಿತ್ವಾ ಅಶ್ವತ್ಥ ಇತಿ ಮಂತ್ರತಃ ।
ಶನಿಪೀಡಾಂ ನ ಲಭತೇ ದುಃಸ್ವಪ್ನಂ ಚಾಪಿ ನಾಶಯೇತ್ ॥ ೬೫ ॥
ತತಸ್ತಾಮ್ರವರಾಹಾಖ್ಯಂ ತೀರ್ಥಂ ಚೈವಾತಿಪಾವನಂ ।
ಯತ್ರ ಸ್ನಾನೇನ ದಾನೇನ ನ ಮಜ್ಜೇದಘಸಾಗರೇ ॥ ೬೬ ॥

---

೬೧. ಸಮಸ್ತ ಕಲ್ಮಷಗಳನ್ನೂ ದೂರಮಾಡುವ ಗಭಸ್ತೀಶ್ವರತೀರ್ಥವಿರುವುದು. ಅದರಲ್ಲಿ ಮುಳುಗಿಬಂದು ಗಭಸ್ತೀಶ್ವರನ ದರ್ಶನವನ್ನು ತೆಗೆದುಕೊಂಡ ನರನು ನಿಷ್ಕಲ್ಮಷನಾಗುವನು.

೬೨. ಅದರ ಸಮೀಪದಲ್ಲಿಯೇ ಮುಖೇಶ್ವರನ ಎದುರಾಗಿ ಮುಖತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮನುಷ್ಯೋತ್ತಮನು ಮಹಾಯಜ್ಞವನ್ನು ಮಾಡಿದ ಫಲವನ್ನು ಪಡೆಯುವನು.

೬೩. ಅದರ ಪಾರ್ಶ್ವದಲ್ಲಿಯೇ ಉತ್ತಮಜ್ಞಾನಕ್ಕೆ ಕಾರಣವಾದ ಬಿಂದುತೀರ್ಥವಿರುವುದು. ಅದರಲ್ಲಿ ಶ್ರಾದ್ಧಪಿಂಡಪ್ರದಾನಾದಿಕಾರ್ಯಗಳನ್ನು ಮಾಡಲು ಮನುಷ್ಯನು ಸರ್ವೋತ್ತಮವಾದ ಪುಣ್ಯವನ್ನು ಪಡೆಯುವನು.

೬೪–೬೫. ಅದರ ದಕ್ಷಿಣದಿಕ್ಕಿನಲ್ಲಿ ಪಿಪ್ಪಲಾದಮಹಾಮುನಿಯ ತೀರ್ಥವು ನೆಲಸಿರುವುದು. ಶನಿವಾರದ ದಿನದಲ್ಲಿ ಅದರಲ್ಲಿ ಸ್ನಾನವನ್ನು ಮಾಡಿ ಪಿಪ್ಪಲೇಶ್ವರನ ದರ್ಶನವನ್ನು ತೆಗೆದುಕೊಂಡು, ಅಲ್ಲಿರುವ ಪಿಪ್ಪಲವೃಕ್ಷವನ್ನು "ಅಶ್ವತ್ಥೋ ಸಿಪವನಂ" ಎಂಬ ಮಂತ್ರದಿಂದ ಸೇವೆಮಾಡಲು ಮನುಷ್ಯನು ಶನಿಗ್ರಹದ ಪೀಡೆಯನ್ನು ಕಳೆದುಕೊಳ್ಳುವನಲ್ಲದೆ ಅವನಿಗೆ ಎಂದಿಗೂ ದುಸ್ವಪ್ನಗಳು ಸಂಭವಿಸುವುದಿಲ್ಲ.

೬೬. ಬಳಿಕ ಅತಿ ಪವಿತ್ರವಾದ ತಾಮ್ರವರಾಹವೆಂಬ ಹೆಸರಿನ ಮತ್ತೊಂದು ತೀರ್ಥವಿರುವುದು. ಅಲ್ಲಿ ಸ್ನಾನದಾನಗಳನ್ನು ಮಾಡುವುದರಿಂದ ಮಾನವನು ಪಾತಕಸಮುದ್ರದಲ್ಲಿ ಮುಳುಗುವುದಿಲ್ಲ.

ತದಗ್ರೇ ಕಾಲಗಂಗಾ ಚ ಕಲಿಕಲ್ಮಷನಾಶಿನೀ ।
ತಸ್ಯಾಂ ಸ್ನಾತ್ವಾ ನರೋ ಧೀಮಾಂಸ್ತತ್‌ಕ್ಷಣಾನ್ನಿರಘೋ ಭವೇತ್ ॥ ೬೭ ॥
ಇಂದ್ರದ್ಯುಮ್ನಂ ಮಹಾತೀರ್ಥಮಿಂದ್ರದ್ಯುಮ್ನೇಶ್ವರಾಗ್ರತಃ ।
ತೋಯಕೃತ್ಯಂ ತತ್ರ ಕೃತ್ವಾ ಲೋಕಮೈಂದ್ರಮವಾಪ್ನುಯಾತ್ ॥ ೬೮ ॥
ತತಸ್ತು ರಾಮತೀರ್ಥಂ ಚ ವೀರರಾಮೇಶ್ವರಾಗ್ರತಃ ।
ತತ್ತೀರ್ಥಸ್ನಾನಮಾತ್ರೇಣ ವೈಷ್ಣವಂ ಲೋಕಮಾಪ್ನುಯಾತ್ ॥ ೬೯ ॥
ತತ ಐಕ್ಷ್ವಾಕವಂ ತೀರ್ಥಂ ಸರ್ವಾಘೌಘವಿನಾಶನಂ ।
ತತ್ರ ಸ್ನಾನೇನ ಪೂತಾತ್ಮಾ ಜಾಯತೇ ಮನುಜೋತ್ತಮಃ ॥ ೭೦ ॥
ಮರುತ್ತತೀರ್ಥಂ ತತ್ರಾಂತೇ ಮರುತ್ತೇಶ್ವರಸನ್ನಿಧೌ ।
ತತ್ರ ಸ್ನಾತ್ವಾ ತಮಚ್ಯೇಶಂ ಮಹದೈಶ್ವರ್ಯಮಾಪ್ನುಯಾತ್ ॥ ೭೧ ॥
ಮೈತ್ರಾವರುಣತೀರ್ಥಂ ಚ ಮೈತ್ರಾವರುಣಪಾತಕಂ ।
ತತ್ರ ಪಿಂಡಪ್ರದಾನೇನ ಪಿತೄಣಾಂ ಭವತಿ ಪ್ರಿಯಃ ॥ ೭೨ ॥

೬೭. ಅದರ ಎದುರಿನಲ್ಲಿ ಕಲಿದೋಷಗಳನ್ನು ದೂರಮಾಡುವ ಕಾಲಗಂಗೆ ಯೆಂಬ ತೀರ್ಥವಿರುವುದು. ಬುದ್ಧಿವಂತನಾದ ನರನು ಅದರಲ್ಲಿ ಸ್ನಾನವನ್ನು ಮಾಡಿದ ಕ್ಷಣದಲ್ಲಿಯೇ ಪಾಪರಹಿತನಾಗುವನು.

೬೮. ಇಂದ್ರದ್ಯುಮ್ನೇಶ್ವರನ ಎದುರಿನಲ್ಲಿ ಇಂದ್ರದ್ಯುಮ್ನನಾಮಕವಾದ ಮಹಾತೀರ್ಥವೊಂದಿರುವುದು. ಅದರಲ್ಲಿ ಮಜ್ಜನಾದಿ ಕೃತ್ಯಗಳನ್ನು ಮಾಡಲು ಮಹೇಂದ್ರಲೋಕವು ಲಭಿಸುವುದು.

೬೯. ವೀರರಾಮೇಶ್ವರನ ಸಮ್ಮುಖದಲ್ಲಿ ರಾಮತೀರ್ಥವಿರುವುದು. ಆ ತೀರ್ಥದಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ನರರು ಮಹಾವಿಷ್ಣುವಿನ ವೈಕುಂಠಲೋಕವನ್ನು ಸೇರುವರು.

೭೦. ಬಳಿಕ ಸಕಲ ಪಾತಕಕೋಟಿಗಳನ್ನು ಕಳೆಯುವ ಐಕ್ಷ್ವಾಕತೀರ್ಥ ವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮನುಜೋತ್ತಮನು ಪರಿಶುದ್ಧ ವಾದ ಅಂತಃಕರಣವುಳ್ಳವನಾಗುವನು.

೭೧. ಅದರ ಸಮೀಪದಲ್ಲಿಯೇ ಮರುತ್ತೇಶ್ವರನ ಸನ್ನಿಧಿಯಲ್ಲಿ ಮರುತ್ತ ತೀರ್ಥವೆಂಬುದಿರುವುದು. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಆ ಲಿಂಗವನ್ನು ಪೂಜಿಸಿದವನು ಅತುಲೈಶ್ವರ್ಯವನ್ನು ಪಡೆಯುವನು.

೭೨. ಮೈತ್ರಾವರುಣತೀರ್ಥವು ಸಕಲ ಪಾತಕಗಳನ್ನು ನಾಶಗೊಳಿಸು ತ್ತಿರುವುದು. ಅಲ್ಲಿ ಪಿಂಡಗಳನ್ನು ಸಮರ್ಪಿಸುವವನು ಪಿತೃದೇವತೆಗಳಿಗೆ ಅತ್ಯಂತ ಪ್ರಿಯನಾಗುವನು.

ತತೋಽಗ್ನಿತೀರ್ಥಂ ವಿಮಲಮಗ್ನೀಶಪುರತೋ ಮಹತ್ ।
ಅಗ್ನಿಲೋಕಮವಾಪ್ನೋತಿ ತತ್ತೀರ್ಥಪರಿಮಜ್ಜನಾತ್ ॥ ೭೩ ॥
ಅಂಗಾರತೀರ್ಥಂ ತತ್ರೈವ ಅಂಗಾರೇಶ್ವರಸನ್ನಿಧೌ ।
ತತ್ರಾಂಗಾರಚತುರ್ಥ್ಯಾಂ ತು ಸ್ನಾತ್ವಾ ನಿಷ್ಪಾಪತಾಮಿಯಾತ್ ॥ ೭೪ ॥
ತತೋ ವೈ ಕಲಿತೀರ್ಥಂ ಚ ಕಲಶೇಶ್ವರಸನ್ನಿಧೌ ।
ಸ್ನಾತ್ವಾ ತಲ್ಲಿಂಗಮಭ್ಯರ್ಚ್ಯ ಕಲಿಕಾಲಾನ್ನ ಬಿಭ್ಯತಿ ॥ ೭೫ ॥
ಚಂದ್ರತೀರ್ಥಂ ಚ ತತ್ರೈವ ಚಂದ್ರೇಶ್ವರಸಮೀಪತಃ ।
ತತ್ರ ಸ್ನಾತ್ವಾರ್ಚ್ಯ ಚಂದ್ರೇಶಂ ಚಂದ್ರಲೋಕಮವಾಪ್ನುಯಾತ್ ॥ ೭೬ ॥
ತದಗ್ರೇ ವೀರತೀರ್ಥಂ ಚ ವೀರೇಶ್ವರಸಮೀಪತಃ ।
ಯದುಕ್ತಂ ಪ್ರಾಕ್ತವ ಪುರಸ್ತೀರ್ಥಾನಾಮುತ್ತಮಂ ಪರಂ ॥ ೭೭ ॥
ವಿಘ್ನೇಶತೀರ್ಥಂ ಚ ತತಃ ಸರ್ವವಿಘ್ನವಿಘಾತಕೃತ್ ।
ಜಾತುಚಿತ್ತತ್ರ ಸಂಸ್ನಾತೋ ನ ವಿಘ್ನೈರಭಿಭೂಯತೇ ॥ ೭೮ ॥
ಹರಿಶ್ಚಂದ್ರಸ್ಯ ರಾಜರ್ಷೇಸ್ತತಸ್ತೀರ್ಥಮನುತ್ತಮಂ ।
ಯತ್ರ ಸ್ನಾತೋ ನರೋ ಜಾತು ನ ಸತ್ಯಾಚ್ಚ್ಯವತೇ ಕ್ವಚಿತ್ ॥ ೭೯ ॥

---

೭೩. ಅಗ್ನೀಶ್ವರನ ಎದುರಿನಲ್ಲಿ ಮಹತ್ತರವಾದ ಅಗ್ನಿತೀರ್ಥವಿರುವುದು. ಆ ತೀರ್ಥದ ಸ್ನಾನದಿಂದ ಮನುಷ್ಯನು ಅಗ್ನಿದೇವನ ಲೋಕವನ್ನು ಸೇರುವನು.

೭೪. ಅಂಗಾರೇಶ್ವರನ ಸನ್ನಿಧಿಯಲ್ಲಿ ಆ ಅಗ್ನಿತೀರ್ಥದ ಸಮೀಪದಲ್ಲಿಯೇ ಅಂಗಾರತೀರ್ಥವಿರುವುದು. ಮಂಗಳವಾರದ ಚತುರ್ಥಿಯ ದಿನದಲ್ಲಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಲು ಮನುಷ್ಯನು ನಿಷ್ಕಲ್ಮಷನಾಗುವನು.

೭೫. ಕಲಶೇಶ್ವರನ ಸನ್ನಿಧಾನದಲ್ಲಿ ಕಲಿತೀರ್ಥವೆಂಬುದಿರುವುದು. ಯಾವನೇ ಆಗಲಿ ಅಲ್ಲಿ ಸ್ನಾನವನ್ನುಮಾಡಿ ಆ ಲಿಂಗವನ್ನು ಪೂಜಿಸಲು ಕಲಿಯುಗದ ಪರಿತಾಪಗಳಿಗೆ ಭಯಪಡಬೇಕಾದುದಿಲ್ಲ.

೭೬. ಅದರ ಸಮೀಪದಲ್ಲಿಯೇ ಚಂದ್ರತೀರ್ಥವಿರುವುದು. ಅದರ ಬಳಿಯಲ್ಲಿಯೇ ಚಂದ್ರೇಶ್ವರಲಿಂಗವಿರುವುದು. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಲಿಂಗವನ್ನು ಪೂಜಿಸಲು ಮನುಷ್ಯನು ಚಂದ್ರಲೋಕವನ್ನು ಸೇರುವನು.

೭೭. ಅದರ ಎದುರಾಗಿ ವೀರೇಶ್ವರನ ಸಮೀಪದಲ್ಲಿರುವ ವೀರತೀರ್ಥವಿರುವುದು. ಸಕಲ ತೀರ್ಥಗಳಲ್ಲಿಯೂ ಸರ್ವೋತ್ತಮವೆನಿಸಿದ ಈ ತೀರ್ಥದ ವಿಷಯವನ್ನು ಹಿಂದೆಯೇ ನಿನಗೆ ವಿಸ್ತಾರವಾಗಿ ತಿಳಿಸಿರುವೆನಷ್ಟೆ.

೭೮. ಸಕಲ ವಿಘ್ನಗಳಿಗೂ ವಿಘ್ನವನ್ನುಂಟುಮಾಡುವ ವಿಘ್ನೇಶತೀರ್ಥವಿರುವುದು. ಅಲ್ಲಿ ಒಂದು ಸಲ ಸ್ನಾನವನ್ನು ಮಾಡಿದವನೂ ಎಂದಿಗೂ ವಿಘ್ನಗಳಿಂದ ಪರಾಭವವನ್ನು ಹೊಂದುವುದಿಲ್ಲ.

೭೯. ಬಳಿಕ ರಾಜರ್ಷಿಯೆನಿಸಿದ ಹರಿಶ್ಚಂದ್ರಮಹಾರಾಜನ ಹೆಸರಿನ

ಹರಿಶ್ಚಂದ್ರಸ್ಯ ತೀರ್ಥೇ ತು ಯಚ್ಛ್ರೇಯಃ ಸಮುಪಾರ್ಜಿತಂ ।
ತದಕ್ಷಯಫಲಂ ವೀರ ಇಹಲೋಕೇ ಪರತ್ರ ಚ ॥ ೮೦ ॥
ತತಃ ಪರ್ವತತೀರ್ಥಂ ಚ ಪರ್ವತೇಶಸಮೀಪತಃ ।
ಸರ್ವಪರ್ವಫಲಂ ತಸ್ಯ ಸ್ನಾತ್ವಾ ಪರ್ವಣ್ಯಪರ್ವಣಿ ॥ ೮೧ ॥
ಕಂಬಲಾಶ್ವತರಂ ತೀರ್ಥಂ ತತ್ರ ಸರ್ವವಿಷಾಪಹಂ ।
ತತ್ರ ಸ್ನಾತೋ ಭವೇನ್ಮರ್ತ್ಯೋ ಗೀತವಿದ್ಯಾವಿಶಾರದಃ ॥ ೮೨ ॥
ತತಃ ಸಾರಸ್ವತಂ ತೀರ್ಥಂ ಸರ್ವವಿದ್ಯೋಪಪಾದಕಂ ।
ತಿಷ್ಠೇಯುಃ ಪಿತರಸ್ತತ್ರ ಸಹದೇವರ್ಷಿಮಾನವೈಃ ॥ ೮೩ ॥
ಉಮಾತೀರ್ಥಂ ತು ತತ್ರೈವ ಸರ್ವಶಕ್ತಿಸಮನ್ವಿತಂ ।
ಔಮೇಯಲೋಕಸ್ಯಾಪ್ತಿಃ ಸ್ಯಾತ್ಸ್ನಾನಮಾತ್ರೇಣ ನಿಶ್ಚಿತಂ ॥ ೮೪ ॥
ತತಸ್ತ್ರಿಲೋಕೀವಿಖ್ಯಾತಂ ತ್ರಿಲೋಕ್ಯುದ್ಧರಣಕ್ಷಮಂ ।
ತೀರ್ಥಂ ಶ್ರೇಷ್ಠತರಂ ವೀರ ಯದಾಖ್ಯಾ ಮಣಿಕರ್ಣಿಕಾ ॥ ೮೫ ॥

---

ಅಪ್ರತಿಮವಾದ ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ನರನು ಎಂದಿಗೂ ಸತ್ಯವ್ರತದಿಂದ ಪರಿಚ್ಯುತನಾಗುವುದಿಲ್ಲ.

೮೦. ವೀರ ರಾಜಕುಮಾರನೆ! ಈ ಹರಿಶ್ಚಂದ್ರತೀರ್ಥದಲ್ಲಿ ಸಂಪಾದಿಸಿದ ಯಾವ ಶ್ರೇಯಸ್ಸಿರುವುದೊ, ಅದು ಈ ಲೋಕದಲ್ಲಿಯೂ, ಲೋಕಾಂತರಗಳಲ್ಲಿಯೂ ಅಕ್ಷಯವಾದ ಫಲವನ್ನು ಕೊಡುವುದು.

೮೧. ಪರ್ವತೇಶ್ವರನ ಸಮೀಪದಲ್ಲಿಯೇ ಪರ್ವತತೀರ್ಥವಿರುವುದು. ಪರ್ವದಿವಸಗಳಲ್ಲಿಯೇ ಆಗಲಿ, ಇತರ ದಿನಗಳಲ್ಲಿಯೇ ಆಗಲಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದವನು ಸಮಸ್ತ ಪರ್ವಕಾಲಗಳಲ್ಲಿಯೂ ಸ್ನಾನಗಳನ್ನು ಮಾಡಿದ ಫಲವನ್ನು ಪಡೆಯುವನು.

೮೨. ಕಂಬಳಾಶ್ವತರವೆಂಬ ತೀರ್ಥವು ಸಕಲ ವಿಧಗಳಾದ ವಿಷವ್ಯಾಧಿಗಳನ್ನೂ ನಾಶಮಾಡುವುದು. ಅದರಲ್ಲಿ ಸ್ನಾನಮಾಡಿದ ಮನುಷ್ಯನು ಸಂಗೀತವಿದ್ಯೆಯಲ್ಲಿ ವಿಶಾರದನಾಗುವನು.

೮೩–೮೪. ಸಾರಸ್ವತತೀರ್ಥವು ಸಕಲ ವಿದ್ಯೆಗಳನ್ನೂ ಮನುಷ್ಯನಿಗೆ ಕೈಗೂಡಿಸಿಕೊಡುವುದು. ಅದರ ಬಳಿಯಲ್ಲಿಯೇ ಯಾವಾಗಲೂ ಪಿತೃದೇವತೆಗಳು ದೇವತೆಗಳಿಂದಲೂ, ಮಹರ್ಷಿಗಳಿಂದಲೂ, ಮನುಷ್ಯೋತ್ತಮರಿಂದಲೂ ಕೂಡಿ ನೆಲಸಿರುವರು. ಅಲ್ಲಿಯೇ ಸಕಲ ಶಕ್ತಿಗಳಿಂದೊಡಗೂಡಿದ ಉಮಾತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದ ಪಾರ್ವತಿಯ ಲೋಕವು ಪ್ರಾಪ್ತವಾಗುವುದು. ಇದು ನಿಜವು.

೮೫. ಎಲೈ ವೀರನೆ! ಬಳಿಕ ಮೂರು ಲೋಕಗಳಲ್ಲಿ ಪ್ರಖ್ಯಾತಿಯನ್ನು ಪಡೆದುದೂ, ಮೂರು ಲೋಕಗಳ ಜೀವರನ್ನು ಉದ್ಧರಿಸುವ ಮಹಾಮಹಿಮೆ

**ಚಕ್ರಪುಷ್ಕರಿಣೀತೀರ್ಥಂ ತದಾದೌ ವಿಷ್ಣುನಾ ಕೃತಂ ।**
**ತದಾಖ್ಯಾಕರ್ಣನಾದೇವ ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೮೬ ॥**
**ಸ್ವರ್ಗೌಕಸಸ್ತ್ರಿಸಂಧ್ಯಂ ವೈ ಜಪಂತಿ ಮಣಿಕರ್ಣಿಕಾಂ ।**
**ಯನ್ನಾಮಗ್ರಹಣಂ ಪುಂಸಾಂ ಶ್ರೇಯಸೇ ಪರಮಾಯ ಹಿ ॥ ೮೭ ॥**
**ಯೈಃ ಶ್ರುತಾ ಯೈಃ ಸ್ಮೃತಾ ವೀರ ಯೈರ್ದೃಷ್ಟಾ ಮಣಿಕರ್ಣಿಕಾ ।**
**ತ ಏವ ಕೃತಿನೋ ಲೋಕೇ ಕೃತಕೃತ್ಯಾಸ್ತ ಏವ ಹಿ ॥ ೮೮ ॥**
**ತ್ರಿಲೋಕೇ ಯೇ ಜಪಂತೀಹ ಮಾನವಾ ಮಣಿಕರ್ಣಿಕಾಂ ।**
**ಜಪಾಮಿ ತಾನಹಂ ವೀರ ತ್ರಿಕಾಲಂ ಪುಣ್ಯಕರ್ಮಣಃ ॥ ೮೯ ॥**
**ಇಷ್ಟಂ ತೇನ ಮಹಾಯಜ್ಞೈಃ ಸಹಸ್ರಶತದಕ್ಷಿಣೈಃ ।**
**ಪಂಚಾಕ್ಷರೀ ಮಹಾವಿದ್ಯಾ ಯೇನೋಕ್ತಾ ಮಣಿಕರ್ಣಿಕಾ ॥ ೯೦ ॥**
**ಮಹಾದಾನಾನಿ ದತ್ತಾನಿ ತೇನ ವೈ ಪುಣ್ಯಕರ್ಮಣಾ ।**
**ಯೇನಾಹಮರ್ಚಿತೋ ವೀರ ಸಂಪ್ರಾಪ್ಯ ಮಣಿಕರ್ಣಿಕಾಂ ॥ ೯೧ ॥**

---

ಯುಳ್ಳುದೂ ಆದ ಶ್ರೇಷ್ಠತರವಾದ ತೀರ್ಥವೊಂದಿರುವುದು. ಅದರ ಹೆಸರೇ ಮಣಿಕರ್ಣಿಕೆ.

೮೬. ಪೂರ್ವದಲ್ಲಿ ಅದು ಮಹಾವಿಷ್ಣುವಿನಿಂದ ಚಕ್ರಪುಷ್ಕರಿಣಿಯೆಂಬ ತೀರ್ಥವಾಗಿ ನಿರ್ಮಿಸಲ್ಪಟ್ಟಿತು. ಆ ಹೆಸರನ್ನು ಕೇಳುವವಮಾತ್ರದಿಂದಲೇ ಮನುಷ್ಯನ ಸಕಲ ಪಾತಕಗಳೂ ಬಿಡುಗಡೆಯಾಗುವುವು.

೮೭. ಸ್ವರ್ಗದಲ್ಲಿರುವ ದೇವತೆಗಳೂ ಮೂರು ಸಂಜೆಗಳಲ್ಲಿಯೂ ಮಣಿಕರ್ಣಿಕೆಯ ನಾಮವನ್ನೇ ಜಪಿಸುತ್ತಿರುವರು. ಅದರ ನಾಮದ ಜಪವು ಮನುಷ್ಯರಿಗೆ ಪರಮ ಶ್ರೇಯಸ್ಸನ್ನುಂಟುಮಾಡುವುದರಲ್ಲಿ ಸಂಶಯವಿಲ್ಲ.

೮೮. ವೀರನೆ! ಯಾರು ಈ ಮಣಿಕರ್ಣಿಕೆಯ ಹೆಸರನ್ನು ಕೇಳಿರುವರೊ, ಯಾರು ಸ್ಮರಿಸುವರೊ, ಯಾರು ಈ ತೀರ್ಥವನ್ನು ನೋಡಿರುವರೊ, ಅವರೇ ಭೂಮಂಡಲದಲ್ಲಿ ಪುಣ್ಯವಂತರು. ಅವರೇ ಕೃತಕೃತ್ಯರು.

೮೯. ರಾಜಪುತ್ರನೆ! ಮೂರುಲೋಕಗಳಲ್ಲಿಯೂ ಯಾವ ಜನರು ಮಣಿಕರ್ಣಿಕೆಯ ನಾಮವನ್ನು ಜಪಿಸುತ್ತಿರುವರೊ, ಪುಣ್ಯವಂತರಾದ ಅವರ ಹೆಸರುಗಳನ್ನು ನಾನೂ ತ್ರಿಕಾಲಗಳಲ್ಲಿಯೂ ಜಪಿಸುತ್ತಿರುವೆನು.

೯೦. ಯಾವನು ಮಣಿಕರ್ಣಿಕೆಯೆಂಬ ಪಂಚಾಕ್ಷರೀಮಂತ್ರವನ್ನು ಜಪಿಸುತ್ತಿರುವನೊ, ಅವನು ಲಕ್ಷಾಂತರ ದ್ರವ್ಯದಕ್ಷಿಣೆಗಳೊಡನೆ ಸಕಲ ಮಹಾಯಜ್ಞಗಳನ್ನೂ ಮಾಡಿದವನೆಂದು ತಿಳಿಯಬೇಕು.

೯೧. ಯಾವನು ಮಣಿಕರ್ಣಿಕೆಯನ್ನು ಸೇರಿ ಅಲ್ಲಿ ನೆಲಸಿರುವ ನನ್ನನ್ನು ಪೂಜಿಸುವನೊ, ಆ ಪುಣ್ಯಪುರುಷನು ಸಮಸ್ತ ಮಹಾದಾನಗಳನ್ನೂ ದಾನ ಮಾಡಿದವನೆಂದು ಹೇಳಬೇಕು.

ಮಣಿಕರ್ಣ್ಯಂಬುಭಿರ್ಯೇನ ತರ್ಪಿತಾಃ ಪ್ರಪಿತಾಮಹಾಃ ।
ತೇನ ಶ್ರಾದ್ಧಾನಿ ದತ್ತಾನಿ ಗಯಾಯಾಂ ಮಧುಪಾಯಸೈಃ ॥ ೯೨ ॥
ಮಣಿಕರ್ಣೀಜಲಂ ಯೇನ ಸಂಪೀತಂ ಶುದ್ಧಬುದ್ಧಿನಾ ।
ಕಿಂ ತಸ್ಯ ಸೋಮಪಾನೈಸ್ತೈಃ ಪುನರಾವೃತ್ತಿಲಕ್ಷಣೈಃ ॥ ೯೩ ॥
ತೇ ಸ್ನಾತಾಃ ಸರ್ವತೀರ್ಥೇಷು ಮಹಾಪರ್ವಸು ಭೂರಿಶಃ ।
ತಥಾ ಸ ಸರ್ವಾವಭೃಥೈರ್ಯೈಃ ಸ್ನಾತಾ ಮಣಿಕರ್ಣಿಕಾ ॥ ೯೪ ॥
ತೈಃ ಸುರಾಃ ಪೂಜಿತಾಃ ಸರ್ವೇ ಬ್ರಹ್ಮವಿಷ್ಣುಮುಖಾ ಮುಖೈಃ ।
ಯೈಃ ಸ್ವರ್ಣಕುಸುಮೈ ರತ್ನೈರರ್ಚಿತಾ ಮಣಿಕರ್ಣಿಕಾ ॥ ೯೫ ॥
ಅಹಂ ತೇನೋಮಯಾ ಸಾರ್ಧಂ ದೀಕ್ಷಾಂ ಸಂಪ್ರಾಪ್ಯ ಶಾಂಭವೀಂ ।
ಅರ್ಚಿತಃ ಪ್ರತ್ಯಹಂ ಯೇನ ಪೂಜಿತಾ ಮಣಿಕರ್ಣಿಕಾ ॥ ೯೬ ॥
ತಪಾಂಸಿ ತೇನ ತಪ್ತಾನಿ ಶೀರ್ಣಪರ್ಣಾದಿನಾ ಚಿರಂ ।
ಸೇವಿತಾ ಶ್ರದ್ಧಯಾ ಯೇನ ಶ್ರೀಮತೀ ಮಣಿಕರ್ಣಿಕಾ ॥ ೯೭ ॥

---

೯೨. ಯಾವನು ಮಣಿಕರ್ಣಿಕಾತೀರ್ಥದಲ್ಲಿ ಪ್ರಪಿತಾಮಹರಿಗೆ ಜಲತರ್ಪಣಗಳನ್ನು ಕೊಡುವನೊ, ಅವನು ಗಯಾಕ್ಷೇತ್ರದಲ್ಲಿ ಜೇನುತುಪ್ಪ ಪಾಯಸಗಳಿಂದ ಶ್ರಾದ್ಧಕಾರ್ಯವನ್ನು ಮಾಡಿದವನಾಗುವನು.

೯೩. ಯಾವನು ಪರಿಶುದ್ಧಮನಸ್ಸಿನಿಂದ ಮಣಿಕರ್ಣಿಕೆಯ ಜಲವನ್ನು ಪಾನಮಾಡುವನೊ, ಅವನಿಗೆ ಪುನಃಪುನಃ ಸಂಸಾರದಲ್ಲಿಯೆ ತೊಡಗಿಸುವ ಸೋಮಪಾನಗಳಿಂದ ಲಭಿಸುವುದೇನು ?

೯೪. ಯಾರು ಮಣಿಕರ್ಣಿಕಾತೀರ್ಥದಲ್ಲಿ ಸ್ನಾನವನ್ನು ಮಾಡುವರೊ, ಅವರು ಮತ್ತೆ ಮತ್ತೆ ಸಕಲಪರ್ವಕಾಲಗಳಲ್ಲಿ ಸಕಲತೀರ್ಥಗಳಲ್ಲಿ ಸ್ನಾನ ಮಾಡಿದವರು. ಅವರೇ ಸಮಸ್ತಯಜ್ಞಗಳನ್ನೂ ಮುಗಿಸಿ ಅವಭೃಥಸ್ನಾನಗಳನ್ನು ನೆರವೇರಿಸಿದವರು.

೯೫. ಯಾರು ಈ ತೀರ್ಥವನ್ನು ಚಿನ್ನದ ಪುಷ್ಪಗಳಿಂದಲೂ ನವರತ್ನಗಳಿಂದಲೂ ಪೂಜೆ ಮಾಡುವರೊ, ಅವರು ಯಜ್ಞಗಳನ್ನು ಮಾಡಿ ಬ್ರಹ್ಮವಿಷ್ಣುಗಳೇ ಮುಂತಾದ ಸಮಸ್ತ ದೇವತೆಗಳನ್ನೂ ಪೂಜಿಸಿದವರಾಗುವರು.

೯೬. ಯಾವ ಮನುಷ್ಯನು ಪ್ರತಿನಿತ್ಯದಲ್ಲಿಯೂ ಮಣಿಕರ್ಣಿಕೆಯನ್ನು ಪೂಜಿಸುವನೊ, ಅವನು ಮಾಹೇಶ್ವರದೀಕ್ಷೆಯನ್ನು ಸ್ವೀಕರಿಸಿ ಪಾರ್ವತೀಸಮೇತನಾದ ನನ್ನನ್ನೇ ಪೂಜಿಸುತ್ತಿರುವನೆಂದು ತಿಳಿಯಬೇಕು.

೯೭. ಯಾವನು ಮಂಗಳಪ್ರದೆಯಾದ ಮಣಿಕರ್ಣಿಕೆಯನ್ನು ಶ್ರದ್ಧೆಯಿಂದ ಸೇವಿಸುವನೊ, ಅವನು ಬಹುಕಾಲಪರ್ಯಂತ ತರಗೆಲೆಗಳನ್ನು ತಿಂದು ಉಗ್ರವಾದ ತಪಸ್ಸನ್ನು ಮಾಡಿದವನೆಂದು ತಿಳಿಯಬೇಕು.

ದತ್ವಾ ದಾನಾನಿ ಭೂರೀಣಿ ಮಖಾನೀಷ್ಟ್ವಾ ತು ಭೂರಿಶಃ ।
ಚಿರಂ ತಪ್ತ್ವಾಽಪ್ಯರಣ್ಯೇಷು ಸ್ವರ್ಗೈಶ್ವರ್ಯಾನ್ಮಹೀಂ ಪುನಃ ॥ ೯೮ ॥
ವಿಪುಲೇಽತ್ರ ಮಹೀಪೃಷ್ಠೇ ಪಂಚಕ್ರೋಶ್ಯಾಂ ಮನೋಹರಾ ।
ಸಂಶ್ರಿತಾ ಮಣಿಕರ್ಣೀ ಯೈಸ್ತೇ ಯಾತಾಶ್ಚಾನಿವರ್ತಕಾಃ ॥ ೯೯ ॥
ದಾನಾನಾಂ ಚ ವ್ರತಾನಾಂಚ ಕ್ರತೂನಾಂ ತಪಸಾಮಪಿ ।
ಇದಮೇವ ಫಲಂ ಮನ್ಯೇ ಯದಾಪ್ಯಾ ಮಣಿಕರ್ಣಿಕಾ ॥ ೧೦೦ ॥
ಮೋಕ್ಷಲಕ್ಷ್ಮೀರಿಯಂ ಸಾಕ್ಷಾಚ್ಛ್ರೀಮತೀ ಮಣಿಕರ್ಣಿಕಾ ।
ಪ್ರಾಯೋಽಸ್ಯಾ ಮಹಿಮಾನಂ ನೈ ನ ವೇದ್ಮ್ಯಹಮಪಿ ಸ್ಫುಟಂ ॥ ೧೦೧ ॥
ಅವಾಚ್ಯಾಂ ಮಣಿಕರ್ಣ್ಯಾಶ್ಚ ತೀರ್ಥಂ ಪಾಶುಪತಂ ಪರಂ ।
ತೀರ್ಥಂ ತು ರುದ್ರವಾಸಾಖ್ಯಂ ವಿಶ್ವತೀರ್ಥಮತಃಪರಂ ॥ ೧೦೨ ॥
ಮುಕ್ತಿತೀರ್ಥಂ ತತೋ ರಮ್ಯಮವಿಮುಕ್ತಮಥೋತ್ತಮಂ ।
ತೀರ್ಥಂ ಚ ತಾರಕಂ ಸ್ಕಾಂದಂ ಢುಂಢೇಸ್ತೀರ್ಥಂ ತತೋಽಪಿ ಚ ॥೧೦೩॥

---

೯೮–೯೯. ಯಾರು ಮಣಿಕರ್ಣಿಕಾತೀರ್ಥವನ್ನೇ ಅನನ್ಯಭಾವದಿಂದಾಶ್ರಯಿಸಿರುವರೊ, ಅವರು ಮಹಾದಾನಗಳೆಲ್ಲವನ್ನೂ ಮಾಡಿ, ಮಹಾಯಜ್ಞಗಳೆಲ್ಲವನ್ನೂ ಪೂರೈಸಿ, ಅರಣ್ಯಗಳಲ್ಲಿ ಬಹುಕಾಲದವರೆಗೂ ತಪಸ್ಸನ್ನು ಮಾಡಿ ಸ್ವರ್ಗಭೋಗಗಳನ್ನೂ ಭೂಮಿಯ ಐಶ್ವರ್ಯಗಳನ್ನೂ ಪಡೆದವರಿಗೆ ಸಮಾನರಾಗುವರು. ಅವರಿಗೂ ಪುನರ್ಜನ್ಮವು ಸಂಭವಿಸುವುದು. ಆದರೆ ವಿಶಾಲವಾದ ಈ ಭೂಲೋಕದಲ್ಲೆಲ್ಲ ಅತ್ಯಂತ ಮನೋಹರವೂ, ಐದುಕ್ರೋಶಗಳ ವಿಸ್ತಾರವೂ ಉಳ್ಳ ಈ ತೀರ್ಥವನ್ನು ಸೇವಿಸಿದವರು ಪುನರ್ಜನ್ಮರಹಿತವಾದ ಮೋಕ್ಷವನ್ನೇ ಹೊಂದುವರು.

೧೦೦. ಸಮಸ್ತ ದಾನಗಳಿಗೂ, ವ್ರತೋಪವಾಸಗಳಿಗೂ, ಯಜ್ಞಯಾಗಾದಿಗಳಿಗೂ. ತಪಸ್ಸುಗಳಿಗೂ ಈ ಮಣಿಕರ್ಣಿಕೆಯ ಸೇವೆಯೊಂದೇ ಪರಮಪ್ರಾಪ್ಯವಾದ ಫಲವೆಂದು ನಾನು ತಿಳಿದಿರುವೆನು.

೧೦೧. ಸರ್ವಸಂಪತ್ಕಾರಕವಾದ ಈ ಮಣಿಕರ್ಣಿಕೆಯೇ ಮೋಕ್ಷಲಕ್ಷ್ಮಿಯ ರೂಪಾಂತರವಾಗುವುದು. ಪ್ರಾಯಶಃ ನಾನೂ ಆ ತೀರ್ಥದ ಮಹಿಮೆಯನ್ನು ಸಮಗ್ರವಾಗಿ ತಿಳಿದಿರಲಾರೆನು.

೧೦೨. ಆ ಮಣಿಕರ್ಣಿಕಾತೀರ್ಥದ ಕೆಳಗಡೆಯೇ ಪರಮೋತ್ಕೃಷ್ಟವಾದ ಪಾಶುಪತವೆಂಬ ತೀರ್ಥವಿರುವುದು. ಬಳಿಕ ರುದ್ರವಾಸವೆಂಬ ತೀರ್ಥವೂ ಅಲ್ಲಿಯೆ ಇರುವುದು.

೧೦೩. ಅದಾದಮೇಲೆ ಮನೋಹರವಾದ ಮುಕ್ತಿತೀರ್ಥ. ಉತ್ತಮವಾದ ಅವಿಮುಕ್ತತೀರ್ಥ. ತಾರಕ, ಸ್ಕಾಂದ, ಮತ್ತು ಢುಂಢಿತೀರ್ಥಗಳು.

ಭವಾನೀಯಮಥೈಶಾನಂ ಜ್ಞಾನತೀರ್ಥಮಥೋತ್ತಮಂ ।
ನಂದಿತೀರ್ಥಂ ವಿಷ್ಣುತೀರ್ಥಂ ತೀರ್ಥಂ ಪೈತಾಮಹಂ ತತಃ ॥ ೧೦೪ ॥
ನಾಭಿತೀರ್ಥಮಿದಂ ಚೈವ ಬ್ರಹ್ಮನಾಲಮತಃ ಪರಂ ।
ತತೋ ಭಾಗೀರಥಂ ತೀರ್ಥಂ ಯತ್ತ್ವಾಗ್ರೇ ಪುರಾಕಥಿ ॥ ೧೦೫ ॥
ತೀರ್ಥಾನ್ಯುತ್ತರವಾಹಿನ್ಯಾಂ ಸ್ವರ್ಧುನ್ಯಾಂ ಕಾಶಿಸನ್ನಿಧೌ ।
ಸಂತ್ಯನೇಕಾನಿ ಪುಣ್ಯಾನಿ ಮಯೋಕ್ತಾನ್ಯಲ್ಪಶಃ ಪುನಃ ॥ ೧೦೬ ॥
ತತ್ರಾಪಿ ನಿತರಾಂ ಶ್ರೇಷ್ಠಾ ಪಂಚತೀರ್ಥೀ ನೃಪಾಂಗಜ ।
ಯಸ್ಯಾಂ ಸ್ನಾತ್ವಾ ನರೋ ಭೂಯೋ ಗರ್ಭವಾಸಂ ನ ಸಂಸ್ಮರೇತ್ ॥
ಪ್ರಥಮಂ ಚಾಸಿಸಂಭೇಧಂ ತೀರ್ಥಾನಾಂ ಪ್ರವರಂ ಪರಂ ।
ತತೋ ದಶಾಶ್ವಮೇಧಾಖ್ಯಂ ಸರ್ವತೀರ್ಥನಿಷೇವಿತಂ ॥ ೧೦೮ ॥
ತತಃ ಪಾದೋದಕಂ ತೀರ್ಥಮಾದಿಕೇಶವಸನ್ನಿಧೌ ।
ತತಃ ಪಂಚನದಂ ಪುಣ್ಯಂ ಸ್ನಾನಮಾತ್ರಾದಘೌಘಹೃತ್ ॥ ೧೦೯ ॥
ಏತೇಷಾಮಪಿ ತೀರ್ಥಾನಾಂ ಚತುರ್ಣಾಮಪಿ ಸತ್ತಮ ।
ಪಂಚಮಂ ಮಣಿಕರ್ಣಾಖ್ಯಂ ಮನೋಽಪಯವಶುದ್ಧಿದಂ ॥ ೧೧೦ ॥

---

೧೦೪. ಭವಾನೀತೀರ್ಥ, ಈಶಾನ್ಯತೀರ್ಥ, ಉತ್ತಮವಾದ ಜ್ಞಾನತೀರ್ಥ, ನಂದಿತೀರ್ಥ, ವಿಷ್ಣುತೀರ್ಥ, ಪಿತಾಮಹತೀರ್ಥಗಳು.

೧೦೫. ನಾಭಿತೀರ್ಥ, ಬ್ರಹ್ಮನಾಳತೀರ್ಥ, ಮತ್ತು ನಾನು ಹಿಂದೆಯೇ ಹೇಳಿದ ಭಾಗೀರಥೀತೀರ್ಥವು.

೧೦೬. ಇವುಗಳೇ ಮೊದಲಾಗಿ ಉತ್ತರವಾಹಿನಿಯಾದ ಗಂಗೆಯ ತೀರದಲ್ಲಿ ಕಾಶೀಕ್ಷೇತ್ರದಲ್ಲೆಲ್ಲ ಪುಣ್ಯತಮಗಳಾದ ಅನೇಕ ತೀರ್ಥಗಳಿರುವುವು. ನಾನು ಅವುಗಳಲ್ಲಿ ಅತ್ಯಲ್ಪ ಸಂಖ್ಯೆಯ ತೀರ್ಥಗಳನ್ನು ಮಾತ್ರ ತಿಳಿಸಿರುವೆನು.

೧೦೭. ಮಹಾರಾಜಕುಮಾರನೆ! ಅವುಗಳಲ್ಲಿಯೂ ಐದು ತೀರ್ಥಗಳು ಮಾತ್ರ ಸರ್ವಶ್ರೇಷ್ಠಗಳಾಗಿರುವುವು. ಅವುಗಳಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಪುನಃ ಗರ್ಭವಾಸವನ್ನು ಸ್ಮರಿಸುವುದೂ ಸಂಭವಿಸುವುದಿಲ್ಲ.

೧೦೮. ಮೊದಲನೆಯದು ಅಸಿಸಂಭೇದವು. ಅದು ಇತರ ತೀರ್ಥಗಳೆಲ್ಲವುಗಳಿಗಿಂತಲೂ ಉತ್ತಮವೆನಿಸಿರುವುದು. ಎರಡನೆಯದೇ ಸಕಲ ತೀರ್ಥಗಳಿಂದಲೂ ಪರಿಚರ್ಯೆಯನ್ನು ಹೊಂದುತ್ತಿರುವ ದಶಾಶ್ವಮೇಧತೀರ್ಥವು.

೧೦೯. ಮೂರನೆಯದು ಆದಿಕೇಶವನ ಸನ್ನಿಧಿಯಲ್ಲಿರುವ ಪಾದೋದಕ ತೀರ್ಥವು. ನಾಲ್ಕನೆಯದೇ ಪುಣ್ಯಪ್ರದವೂ ಸ್ನಾನಮಾತ್ರದಿಂದಲೇ ಪಾಪಕೋಟಿಗಳನ್ನು ಕಳೆಯುವುದೂ ಎನಿಸಿದ ಪಂಚನದತೀರ್ಥವು.

೧೧೦. ಅಯ್ಯಾ ಉತ್ತಮನೆ! ಮೇಲೆ ಹೇಳಿದ ನಾಲ್ಕು ತೀರ್ಥಗಳಿಗಿಂತಲೂ

**ಅಹಂ ಸ್ನಾಮ್ಯತ್ರ ಸತತಮುಮಯಾ ಸಹ ಪರ್ವಸು ।**
**ಬ್ರಹ್ಮಣಾ ವಿಷ್ಣುನಾ ಸಾರ್ಧಂ ಸಹೇಂದ್ರಾದಿಸುರರ್ಷಿಭಿಃ ॥ ೧೧೧ ॥**
**ಅತ ಏವಾತ್ರ ಗೀಯೇತ ಗಾಥೇಯಂ ಶ್ರುತಿಸಂಮತಾ ।**
**ನಾಗಲೋಕಕೃತಾವಾಸೈಃ ಸ್ವರ್ಗೌಕೋಭಿಶ್ಚ ಸಂತತಂ ॥ ೧೧೨ ॥**
**ಸತ್ಯಂ ಸತ್ಯಂ ಪುನಃ ಸತ್ಯಂ ಸತ್ಯಪೂರ್ವಮಿದಂ ವಚಃ ।**
**ಮಣಿಕರ್ಣೀಸಮಂ ತೀರ್ಥಂ ನಾಸ್ತಿ ಬ್ರಹ್ಮಾಂಡಗೋಲಕೇ ॥ ೧೧೩ ॥**
**ಪಂಚತೀರ್ಥ್ಯಾಂ ನರಃ ಸ್ನಾತ್ವಾ ನ ದೇಹಂ ಪಾಂಚಭೌತಿಕಂ ।**
**ಗೃಹ್ಣಾತಿ ಜಾತುಚಿತ್ಕಾಶ್ಯಾಂ ಪಂಚಾಸ್ಯೋ ವಾಥ ಜಾಯತೇ ॥ ೧೧೪ ॥**
**ಇತಿ ದತ್ವಾ ವರಾನ್ದೇವೋ ವೀರಸ್ಯಾಂತರ್ದಧೇ ಹರಃ ।**
**ಸ ಚ ವೀರೋಽಪಿ ವೀರೇಶಂ ಪ್ರಾರ್ಚ್ಯ ಪ್ರಾಪ್ತಃ ಸಮೀಹಿತಂ ॥ ೧೧೫ ॥**
**ಸ್ಕಂದ ಉವಾಚ :—**
**ತೀರ್ಥಾಧ್ಯಾಯಮಿಮಂ ಪುಣ್ಯಮಗಸ್ತ್ಯೇ ಯೋ ನಿಶಾಮಯೇತ್ ।**
**ತಸ್ಯಾಘಂ ಸಂಕ್ಷಯಂ ಯಾಯಾದಪಿ ಜನ್ಮಶತಾರ್ಜಿತಂ ॥ ೧೧೬ ॥**

---

ಹೆಚ್ಚಾಗಿ ಐದನೆಯದಾದ ಮಣಿಕರ್ಣಿಕಾತೀರ್ಥವು ಮನಸ್ಸನ್ನೂ ಶರೀರವನ್ನೂ ಶುದ್ಧಿಗೊಳಿಸುವುದು.

೧೧೧. ಪರ್ವಕಾಲವು ಪ್ರಾಪ್ತವಾಗಲು ಯಾವಾಗಲೂ ನಾನೇ ಅದರಲ್ಲಿ ಪಾರ್ವತೀಸಮೇತನಾಗಿ, ಬ್ರಹ್ಮ, ವಿಷ್ಣು, ಮಹೇಂದ್ರನೇ ಮೊದಲಾದ ದೇವತೆಗಳು, ಮಹರ್ಷಿಗಳು— ಇವರಿಂದೊಡಗೂಡಿ ಸ್ನಾನವನ್ನು ಮಾಡುವೆನು.

೧೧೨. ಆದುದರಿಂದಲೇ ನಾಗಲೋಕದನಿವಾಸಿಗಳೂ, ಸ್ವರ್ಗದಲ್ಲಿರುವ ದೇವತೆಗಳೂ ನಿರಂತರವೂ ಇಲ್ಲಿ ವೇದಸಮ್ಮತವಾದ ಈ ಲೋಕೋಕ್ತಿಯನ್ನು ಗಾಯನಮಾಡುತ್ತಿರುವರು.

೧೧೩. ಈ ಮಾತು ಸತ್ಯವು; ಸತ್ಯವು; ಇದನ್ನು ಶಪಥಪೂರ್ವಕವಾಗಿಯೇ ಹೇಳುತ್ತಿರುವೆವು. ಸಕಲ ಬ್ರಹ್ಮಾಂಡದಲ್ಲಿಯೂ ಮಣಿಕರ್ಣಿಕೆಗೆ ಸಮಾನವಾದ ಕ್ಷೇತ್ರವು ಬೇರೆಲ್ಲಿಯೂ ಕಾಣುವುದಿಲ್ಲ.

೧೧೪. ಮೇಲೆ ಹೇಳಿದ ಐದು ತೀರ್ಥಗಳಲ್ಲಿ ಸ್ನಾನಮಾಡಿದ ಮನುಷ್ಯನು ಪುನಃ ಪಂಚಭೂತಗಳ ವಿಕಾರವಾದ ದೇಹವನ್ನು ಧರಿಸುವುದಿಲ್ಲ. ಅಲ್ಲದೆ ಆ ಮಾನವನು ಕಾಶಿಯಲ್ಲಿ ದೇಹವನ್ನು ತ್ಯಜಿಸಿ ಪಂಚಮುಖನಾದ ಮಹೇಶ್ವರನ ರೂಪವನ್ನೇ ಪಡೆಯುವನು.

೧೧೫. ಇಂತೆಂದು ವೀರನಿಗೆ ವರಗಳನ್ನಿತ್ತು ಮಹಾದೇವನು ಅಲ್ಲಿಯೇ ಅಂತರ್ಧಾನವನ್ನು ಪಡೆದನು. ಆ ವೀರನೂ ವೀರೇಶ್ವರಲಿಂಗವನ್ನು ಶ್ರದ್ಧೆಯಿಂದ ಪೂಜಿಸಿ ತನ್ನ ಅಭೀಷ್ಟಗಳೆಲ್ಲವನ್ನೂ ಪೂರ್ಣಗೊಳಿಸಿಕೊಂಡನು.

೧೧೬. ಸ್ಕಂದನು ಹೇಳುತ್ತಾನೆ. :—ಅಗಸ್ತ್ಯಮುನಿಯೆ ! **ಪುಣ್ಯತಮವಾದ**

**ಇತಿ ವೀರೇಶ್ವರಾಖ್ಯಾನಂ ತೀರ್ಥಾಖ್ಯಾನಪ್ರಸಂಗತಃ ।**
**ಕಥಿತಂ ತೇ ಪುರಾಗಸ್ತ್ಯೇ ಕಾಮೇಶಂ ಕಥಯಾಮ್ಯತಃ ॥ ೧೧೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವೀರೇಶ್ವರಾಖ್ಯಾನಂ–ತೀರ್ಥಾಖ್ಯಾನ ವರ್ಣನಂ"ನಾಮ ಚತುರಶೀತಿತಮೋಽಧ್ಯಾಯಃ**

---

ಈ ತೀರ್ಥಾಧ್ಯಾಯವನ್ನು ಯಾವನು ಭಕ್ತಿಯಿಂದ ಕೇಳುವನೊ, ಅವನಿಗೆ ನೂರು ಜನ್ಮಗಳಲ್ಲಿ ಸಂಚಿತಗಳಾದ ಪಾತಕಗಳು ನಾಶವಾಗುವುವು.

೧೧೭. ಅಗಸ್ತ್ಯನೆ! ಇಂತು ತೀರ್ಥಾಖ್ಯಾನವನ್ನು ತಿಳಿಸುವ ಅವಸರದಲ್ಲಿ ನಾನು ನಿನಗೆ ವೀರೇಶ್ವರನ ಚರಿತ್ರೆಯನ್ನು ಕಥನಮಾಡಿರುವೆನು. ಇನ್ನು ಕಾಮೇಶ್ವರ ಮಹಾಲಿಂಗದ ಚರಿತ್ರೆಯನ್ನು ತಿಳಿಸುವೆನು ; ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವೀರೇಶ್ವರಾಖ್ಯಾನ–ತೀರ್ಥಾಖ್ಯಾನವರ್ಣನ"ವೆಂಬ ಎಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

ಅಥ ಪಂಚಾಶೀತಿತಮೋಽಧ್ಯಾಯಃ

ದುರ್ವಾಸಸೋ ವರಪ್ರದಾನಂ— ಕಾಮೇಶ್ವರಾವಿರ್ಭಾವವರ್ಣನಂ

ಸ್ಕಂದ ಉವಾಚ :—

ಜಗಜ್ಜನನ್ಯಾಃ ಪಾರ್ವತ್ಯಾಃ ಪುರೋಽಗಸ್ತ್ಯೇ ಪುರಾರಿಣಾ ।
ಯಥಾಖ್ಯಾಯಿ ಕಥಾ ಪುಣ್ಯಾ ತಥಾ ತೇ ಕಥಯಾಮ್ಯಹಂ ॥ ೧ ॥
ಪುರಾ ಮಹೀಮಿಮಾಂ ಸರ್ವಾಂ ಸಸಮುದ್ರಾದ್ರಿಕಾನನಾಂ ।
ಸಸರಿತ್ಕಾಂ ಸಾರ್ಣವಾಂ ಚ ಸಗ್ರಾಮಪುರಪತ್ತನಾಂ ॥ ೨ ॥
ಪರಿಭ್ರಮ್ಯ ಮಹಾತೇಜಾ ಮಹಾಮರ್ಷೋ ಮಹಾತಪಾಃ ।
ದುರ್ವಾಸಾಃ ಸಂಪರಿಪ್ರಾಪ್ತಃ ಶಂಭೋರಾನಂದಕಾನನಂ ॥ ೩ ॥
ವಿಲೋಕ್ಯಾಕ್ರೀಡಮಖಿಲಂ ಬಹುಪ್ರಾಸಾದಮಂಡಿತಂ ।
ಬಹುಕುಂಡತಡಾಗಂ ಚ ಶಂಭೋಸ್ತೋಷಮುಪಾಗಮತ್ ॥ ೪ ॥
ಪದೇ ಪದೇ ಮುನೀನಾಂ ಚ ಜಿತಕಾಲಮಹಾಭಿಯಾಂ ।
ದೃಷ್ಟ್ವೋಟಜಾನಿ ರಮ್ಯಾಣಿ ದುರ್ವಾಸಾ ವಿಸ್ಮಿತೋಽಭವತ್ ॥ ೫ ॥

---

ಕನ್ನಡದ ಅನುವಾದ

ದುರ್ವಾಸವರಪ್ರದಾನ— ಕಾಮೇಶ್ವರಾವಿರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ :—ಅಗಸ್ತ್ಯಮಹರ್ಷಿಯೆ! ಜಗನ್ಮಾತೆಯಾದ ಪಾರ್ವತಿಯ ಮುಂದೆ ಮುನ್ನ ತ್ರಿಪುರಧ್ವಂಸಿಯು ಈ ಪುಣ್ಯಕಥೆಯನ್ನು ಹೇಗೆ ನಿರೂಪಿಸಿದನೊ, ಹಾಗೆಯೇ ನಾನೂ ನಿನಗೆ ಹೇಳುತ್ತೇನೆ.

೨–೩. ಪೂರ್ವದಲ್ಲಿ ಒಮ್ಮೆ ಸಮುದ್ರಗಳಿಂದಲೂ, ಅರಣ್ಯಗಳಿಂದಲೂ, ನದಿಗಳಿಂದಲೂ, ಪರ್ವತಗಳಿಂದಲೂ, ಗ್ರಾಮ ನಗರ ಪಟ್ಟಣಗಳಿಂದಲೂ ಸಮೃದ್ಧವಾದ ಸಮಸ್ತ ಭೂಮಂಡಲವನ್ನೂ ಸುತ್ತುತ್ತ ಮಹಾತೇಜಸ್ವಿಯೂ, ಮಹಾಕೋಪಿಯೂ, ಮಹಾತಪಸ್ಸಂಪನ್ನನೂ ಆದ ದೂರ್ವಾಸಮುನಿಯು ಕಾಲಕ್ರಮದಲ್ಲಿ ಮಹೇಶ್ವರನ ನಿವಾಸವೆನಿಸಿದ ಈ ಆನಂದಕಾನನಕ್ಕೆ ಬರುವವನಾದನು.

೪. ಅನೇಕ ಪ್ರಾಸಾದಗಳಿಂದಲೂ, ಕುಂಡಗಳಿಂದಲೂ, ತಟಾಕಗಳಿಂದಲೂ ಶೋಭಿಸುತ್ತಿರುವ ಶಂಭುವಿನ ಕ್ರೀಡಾಪ್ರದೇಶವೆನಿಸಿದ ಈ ಕ್ಷೇತ್ರವೆಲ್ಲವನ್ನೂ ನೋಡಿ ಆತನು ಅತ್ಯಂತ ಸಂತೋಷವನ್ನು ಹೊಂದಿದನು.

೫. ಹೆಜ್ಜೆಹೆಜ್ಜೆಗೂ ಯಮನ ಮಹಾಭಯವನ್ನೂ ಜಯಿಸಿರುವ ಮಹಾಮುನಿಗಳ ಮನೋಹರಗಳಾದ ಆಶ್ರಮಪ್ರದೇಶಗಳನ್ನು ನೋಡುತ್ತ ಆ ದೂರ್ವಾಸಮುನಿಯು ಆಶ್ಚರ್ಯಚಕಿತನಾಗಿ ತಿರುಗುತ್ತಿದ್ದನು.

ಸರ್ವರ್ತುಕುಸುಮಾನ್ವೃಕ್ಷಾನ್ಸುಚ್ಛಾಯಸ್ನಿಗ್ಧಪಲ್ಲವಾನ್ ।
ಸಫಲಾನ್ಸುಲತಾಶ್ಲಿಷ್ಟಾನ್ದೃಷ್ಟ್ವಾ ಪ್ರೀತಿಮಗಾನ್ಮುನಿಃ ॥ ೬ ॥
ದುರ್ವಾಸಾಶ್ಚಾತಿಹೃಷ್ಟೋಽಭೂದ್ದೃಷ್ಟ್ವಾ ಪಾಶುಪತೋತ್ತಮಾನ್ ।
ಭೂತಿಭೂಷಿತಸರ್ವಾಂಗಾನ್ಜಟಾಜಟಿತಮೌಲಿಕಾನ್ ॥ ೭ ॥
ಕೌಪೀನಮಾತ್ರವಸನಾನ್ಸ್ಮರಾರಿಧ್ಯಾನತತ್ಪರಾನ್ ।
ಕಕ್ಷೀಕೃತಮಹಾಲಾಬೂನ್ಹುಡುತ್ಕಾರಜಿತಾಂಬುದಾನ್ ॥ ೮ ॥
ಕರಂಡದಂಡಪಾನೀಯಪಾತ್ರಮಾತ್ರಪರಿಗ್ರಹಾನ್ ।
ಕ್ವಚಿತ್ತ್ರಿದಂಡಿನೋ ದೃಷ್ಟ್ವಾ ನಿಃಸಂಗಾನ್ನಿಷ್ಪರಿಗ್ರಹಾನ್ ॥ ೯ ॥
ಕಾಲಾದಪಿ ನಿರಾತಂಕಾನ್ವಿಶ್ವೇಶಶರಣಂಗತಾನ್ ।
ಕ್ವಚಿದ್ವೇದರಹಸ್ಯಜ್ಞಾನಾಬಾಲ್ಯಬ್ರಹ್ಮಚಾರಿಣಃ ॥ ೧೦ ॥
ನಿತ್ಯಂ ಭಾಗೀರಥೀಸ್ನಾನಪರಿಪಿಂಗಲಮೂರ್ಧಜಾನ್ ।
ವಿಲೋಕ್ಯ ಕಾಶ್ಯಾಂ ದುರ್ವಾಸಾಃ ಬ್ರಾಹ್ಮಣಾನ್ಮುಮುದೇ ತರಾಂ ॥ ೧೧ ॥

---

೬. ಸರ್ವಕಾಲದಲ್ಲಿಯೂ ಪುಷ್ಪಭರಿತಗಳೂ, ಶೀತಳವಾದ ನೆರಳನ್ನು ಕೊಡುವಂತೆ ದಟ್ಟವಾದ ಎಲೆಗಳ ವಿಸ್ತಾರವುಳ್ಳವುಗಳೂ, ಹಣ್ಣುಗಳಿಂದ ತೂಗುತ್ತಿರುವುವುಗಳೂ, ಬಳ್ಳಿಗಳಿಂದ ಸುತ್ತುವರೆಯಲ್ಪಟ್ಟವುಗಳೂ ಆದ ವೃಕ್ಷಗಳನ್ನು ಕಂಡು ಆ ಮಹಾಮುನಿಯು ಸಂತೋಷವನ್ನು ಹೊಂದಿದನು.

೭. ಆ ದೂರ್ವಾಸನು ಅಲ್ಲಿ ನೆರೆದಿದ್ದ ಉತ್ತಮರಾದ ಮಹೇಶ್ವರ ಭಕ್ತರನ್ನು ಕಂಡು ಅಪರಿಮಿತಾನಂದಭರಿತನಾದನು. ಅವರೆಲ್ಲರೂ ವಿಭೂತಿಗಳಿಂದ ಸರ್ವಾವಯವಗಳನ್ನೂ ಅಲಂಕರಿಸಿಕೊಂಡು ಕೂದಲುಗಳನ್ನು ತಲೆಯಮೇಲೆ ಜಡೆಗಳ ಕಿರೀಟಗಳಂತೆ ಧರಿಸಿದ್ದರು.

೮. ಅವರ ಉಡಿಗೆಯೆಂದರೆ ಕೌಪೀನವೊಂದೆ; ನಿರಂತರವೂ ಸ್ಮರವೈರಿಯ ಧ್ಯಾನದಲ್ಲಿಯೇ ತತ್ಪರರಾಗಿದ್ದರು. ಕಂಕುಳಿನಲ್ಲಿ ಸೋರೆಯ ವಿಭೂತಿ ಭರಣಿಗಳನ್ನು ಹೊತ್ತುಕೊಂಡು ತಮ್ಮ ಹುಡುತ್ಕಾರಗಳಿಂದ ಮೇಘಗಳ ಗಂಭೀರವಾದ ಗರ್ಜನೆಯನ್ನು ಕೀಳೆನಿಸುತ್ತಿದ್ದರು.

೯. ಎಲ್ಲರೂ ದೇವರ ಪೆಟ್ಟಿಗೆ, ದಂಡ, ಪಾನಪಾತ್ರೆ—ಇವುಗಳನ್ನು ಮಾತ್ರ ಸ್ವೀಕರಿಸಿದ್ದರು. ಕೆಲವೆಡೆಗಳಲ್ಲಿ ಸರ್ವಸಂಗಪರಿತ್ಯಾಗವನ್ನು ಮಾಡಿದವರೂ, ಪರಿಗ್ರಹಪರಾಙ್ಮುಖರೂ ಆದ ತ್ರಿದಂಡಿಸನ್ಯಾಸಿಗಳನ್ನೂ ದೂರ್ವಾಸಮುನಿಯು ಕಂಡನು.

೧೦. ಅವರು ಯಮನಿಗೂ ಭಯಗೊಳ್ಳುವವರಾಗಿರಲಿಲ್ಲ. ವಿಶ್ವೇಶ್ವರನನ್ನೇ ಶರಣುಹೊಕ್ಕಿದ್ದರು; ವೇದಗಳ ಗೂಢಾರ್ಥಗಳನ್ನೆಲ್ಲ ತಿಳಿದವರಾಗಿ ಜನ್ಮದಿಂದಲೂ ಬ್ರಹ್ಮಚಾರಿಗಳೇ ಆಗಿದ್ದರು.

೧೧. ನಿತ್ಯವೂ ಮಾಡುವ ಗಂಗಾಸ್ನಾನಗಳಿಂದ ಅವರ ಜಡೆಗಳು ಹೊಂಬಣ್ಣ

ಪಶುಷ್ವಪಿ ಚ ಯಾ ತುಷ್ಟಿರ್ಮೃಗೇಷ್ವಪಿ ಚ ಯಾ ದ್ಯುತಿಃ ।
ನಿರ್ಯಕ್ಷ್ವಪಿ ಚ ಯಾ ಹೃಷ್ಟಿಃ ಕಾಶ್ಯಾಂ ನಾನ್ಯತ್ರ ಸಾಸ್ಫುಟಂ ॥ ೧೨ ॥
ಇದಂ ಸುಶ್ರೇಯಸೋ ವೃಷ್ಟಿಃ ಕ್ವಾಮರೇಷು ತ್ರಿವಿಷ್ಟಪೇ ।
ಯತ್ರತ್ಯೇಷ್ವಪಿ ತಿರ್ಯಕ್ಷು ಪರಮಾನಂದವರ್ಧಿನೀ ॥ ೧೩ ॥
ವರಮೇತೇಽಪಿ ಪಶವ ಆನಂದವನ ಚಾರಿಣಃ ।
ಸದಾನಂದಾಃ ಪುನರ್ದೇವಾ ನ ನಂದನವನಾಶ್ರಿತಾಃ ॥ ೧೪ ॥
ವರಂಕಾಶೀಪುರೀವಾಸೀ ಮ್ಲೇಚ್ಛೋಽಪಿ ಹಿ ಶುಭಾಯತಿಃ ।
ನಾನ್ಯತ್ರತ್ಯೋಃ ದೀಕ್ಷಿತೋಽಪಿ ಸ ಹಿ ಮುಕ್ತೇರಭಾಜನಂ ॥ ೧೫ ॥
ವೈಶ್ವೇಶ್ವರೀ ಪುರೀ ಚೈಷಾ ಯಥಾ ಮೇ ಚಿತ್ತಹಾರಿಣೀ ।
ಸರ್ವಾಪಿ ನ ತಥಾ ಕ್ಷೋಣೀ ನ ಸ್ವರ್ಗೋ ನೈವ ನಾಗಭೂಃ ॥ ೧೬ ॥

---

ವನ್ನು ಹೊಂದಿದ್ದವು. ಇಂತಹ ಬ್ರಾಹ್ಮಣೋತ್ತಮರನ್ನು ಕಾಶಿಯಲ್ಲಿ ಕಂಡು ದೂರ್ವಾಸಮುನಿಯು ಬಹುವಾಗಿ ಸಂತೋಷಗೊಂಡನು.

೧೨. ಕಾಶೀಕ್ಷೇತ್ರದಲ್ಲಿರುವ ಪಶುಗಳಲ್ಲಿ ಯಾವ ಸಂತೋಷವಿರುವುದೊ, ಮೃಗಗಳಲ್ಲಿಯೂ ಯಾವ ದೇಹಕಾಂತಿಯಿರುವುದೊ, ಕ್ರಿಮಿಕೀಟಾದಿಗಳಲ್ಲಿಯೂ ಯಾವ ಹರ್ಷಭಾವವಿರುವುದೊ, ಅದು ಬೇರೆ ಸ್ಥಳಗಳಲ್ಲಿಲ್ಲವೆಂಬುದು ಸ್ಪಷ್ಟವು.

೧೩. ಇದೇ ಸರ್ವಶ್ರೇಯಸ್ಸುಗಳಿಗೆ ನೆಲಮನೆಯಾಗಿರುವುದು. ಇಲ್ಲಿ ವಾಸಮಾಡುತ್ತಿರುವ ತಿರ್ಯಗ್ಜಂತುಗಳಿಗೂ ಪರಮಾನಂದವನ್ನುಂಟುಮಾಡುವ ಯಾವ ಮಹಿಮೆಯಿರುವುದೊ, ಅದು ದೇವತೆಗಳಿಗೆ ಸ್ವರ್ಗಲೋಕದಲ್ಲಿಯೂ ಎಲ್ಲಿ ಸಿಕ್ಕಬಹುದು?

೧೪. ಆನಂದವನದಲ್ಲಿ ಸಂಚರಿಸುವ ಈ ಪಶುಗಳೂ ಸಹ ಉತ್ತಮರುಗಳೆಂದೇ ಹೇಳಬೇಕು. ಸದಾ ಆನಂದಮಯರೆಂದು ಹೆಸರಾದವರೂ ನಂದನವನದಲ್ಲಿ ವಿಹರಿಸುತ್ತಿರುವವರೂ ಆದ ದೇವತೆಗಳ ಜನ್ಮವನ್ನು ಯಾರೂ ಅಪೇಕ್ಷಿಸತಕ್ಕದ್ದಲ್ಲ.

೧೫. ಕಾಶೀನಗರದಲ್ಲಿರುವ ಮ್ಲೇಚ್ಛನೂ ಮುಂದೆ ಮಂಗಳವನ್ನು ಪಡೆಯುವನಾದುದರಿಂದ ಉತ್ತಮನೇ ಆಗಿರುವನು. ಬೇರೆ ಸ್ಥಳದಲ್ಲಿರುವ ದೀಕ್ಷಿತನೂ ಸಹ ಅವನಿಗೆ ಸಮಾನನಾಗಲಾರನು. ಏಕೆಂದರೆ ಆ ದೀಕ್ಷಿತನು ಮುಕ್ತಿಭಾಜನನಾಗುವುದಿಲ್ಲ.

೧೬. ವಿಶ್ವೇಶ್ವರಾಧಿಷ್ಠಿತವಾದ ಈ ಪಟ್ಟಣವು ಹೇಗೆ ನನ್ನ ಮನಸ್ಸನ್ನು ಸೂರೆಗೊಳ್ಳುತ್ತಿರುವುದೊ, ಹಾಗೆ ಸಮಸ್ತ ಭೂಮಂಡಲವಾಗಲಿ, ಸ್ವರ್ಗವಾಗಲಿ, ನಾಗಲೋಕವಾಗಲಿ ಆಕರ್ಷಿಸಲಾರವು.

ಸ್ಥೈರ್ಯಂ ಬಬಂಧ ನ ಕ್ವಾಪಿ ಭ್ರಮತೋ ಮೇ ಮನೋಗತಿಃ ।
ಸರ್ವಸ್ಮಿನ್ನಪಿ ಭೂಭಾಗೇ ಯಥಾ ಸ್ಥೈರ್ಯಮಗಾದಿಹ ॥ ೧೭ ॥
ರಮ್ಯಾ ಪುರೀ ಭವೇದೇಷಾ ಬ್ರಹ್ಮಾಂಡಾದಖಿಲಾದಪಿ ।
ಪರಿಷ್ಟುತ್ಯೇತಿ ದುರ್ವಾಸಾಶ್ಚೇತೋವೃತ್ತಿಮವಾಪ ಹ ॥ ೧೮ ॥
ತಪ್ಯಮಾನೋಽಪಿ ಹಿ ತಪಃ ಸುಚಿರಂ ಚ ಮಹಾತಪಾಃ ।
ಯದಾ ನಾಪ ಫಲಂ ಕಿಂಚಿಚ್ಚುಕೋಪ ಚ ತದಾ ಭೃಶಂ ॥ ೧೯ ॥
ಧಿಕ್ಚ ಮಾಂ ತಾಪಸಾಂ ದುಷ್ಟಂ ಧಿಕ್ಚ ಮೇ ದುಶ್ಚರಂ ತಪಃ ।
ಧಿಕ್ಚ ಕ್ಷೇತ್ರಮಿದಂ ಶಂಭೋಃ ಸರ್ವೇಷಾಂ ಚ ಪ್ರತಾರಕಂ ॥ ೨೦ ॥
ಯಥಾ ನ ಮುಕ್ತಿರತ್ರ ಸ್ಯಾತ್ಕಸ್ಯಾಪಿ ಕರವೈ ತಥಾ ।
ಇತಿ ಶಪ್ತುಂ ಯದೋದ್ಯುಕ್ತಃ ಸಂಜಹಾಸ ತದಾ ಶಿವಃ ॥ ೨೧ ॥
ತತ್ರ ಲಿಂಗಮಭೂದೇಕಂ ಖ್ಯಾತಂ ಪ್ರಹಸಿತೇಶ್ವರಂ ।
ತಲ್ಲಿಂಗದರ್ಶನಾತ್ಪುಂಸಾಮಾನಂದಃ ಸ್ಯಾತ್ಪದೇಪದೇ ॥ ೨೨ ॥

---

೧೭. ಚಿತ್ತಸ್ಥೈರ್ಯವನ್ನಪೇಕ್ಷಿಸಿ ನಾನು ಸಮಸ್ತ ಭೂಲೋಕವನ್ನೂ ಸುತ್ತಾಡುತ್ತಿರಲು ಈ ಕ್ಷೇತ್ರದಲ್ಲಿ ನನಗೆ ಮನಸ್ಸಿನ ಏಕಾಗ್ರತೆಯುಂಟಾದಂತೆ ಮತ್ತೆಲ್ಲಿಯೂ ಉಂಟಾಗಲಿಲ್ಲ.

೧೮. ಸಕಲ ಬ್ರಹ್ಮಾಂಡಕ್ಕಿಂತಲೂ ಈ ನಗರವೇ ಅತ್ಯಂತರಮಣೀಯವಾಗಿರುವುದು. ಇಂತೆಂದು ದೂರ್ವಾಸನು ಅಲ್ಲಿ ಮನಶ್ಶಾಂತಿಯನ್ನು ಹೊಂದಿನಿಂತನು. ಮತ್ತು ಆ ಪ್ರದೇಶವನ್ನು ಬಹುವಾಗಿ ಸ್ತೋತ್ರಮಾಡಿದನು.

೧೯. ಬಳಿಕ ಆ ಮಹಾತಪಸ್ವಿಯು ಅನೇಕ ಕಾಲದವರೆಗೂ ಅತ್ಯುಗ್ರವಾದ ತಪಸ್ಸನ್ನು ಮಾಡಿದನು. ಆದರೂ ಅವನು ಯಾವ ಅತ್ಯಲ್ಪಫಲವನ್ನೂ ಪಡೆಯಲಿಲ್ಲ. ಆಗ ಆತನು ಬಹುವಾಗಿ ಕೋಪಗೊಂಡನು.

೨೦. "ದುಷ್ಟತಪಸ್ವಿಯಾದ ನನಗೆ ಧಿಕ್ಕಾರವಿರಲಿ. ನನ್ನ ದುಸ್ಸಾಧ್ಯವಾದ ಈ ತಪಸ್ಸಿಗೂ ಧಿಕ್ಕಾರ. ಶಂಭುಕ್ಷೇತ್ರವೆನಿಸಿ ಎಲ್ಲರನ್ನೂ ಮೋಸಗೊಳಿಸುತ್ತಿರುವ ಈ ಕ್ಷೇತ್ರಕ್ಕೂ ಧಿಕ್ಕಾರವಿರಲಿ."

೨೧. ಇಲ್ಲಿ ಯಾವ ಪ್ರಾಣಿಗೂ ಎಂದಿಗೂ ಮೋಕ್ಷವು ಸಿಕ್ಕದಿರುವಂತೆ ಮಾಡುವೆನು. ಇಂತೆಂದು ಕ್ಷೇತ್ರವನ್ನು ಶಪಿಸುವುದಕ್ಕೆ ಉದ್ಯುಕ್ತನಾದ ಆ ದೂರ್ವಾಸಮುನಿಯನ್ನು ಕಂಡು ಪರಮಶಿವನು ಗಟ್ಟಿಯಾಗಿ ನಕ್ಕನು.

೨೨. ಅಲ್ಲಿಯೇ ಒಂದು ಶಿವಲಿಂಗವು ಆವಿರ್ಭವಿಸಿ ಪ್ರಹಸಿತೇಶ್ವರವೆಂಬುದಾಗಿ ಪ್ರಖ್ಯಾತವಾಯಿತು. ಆ ಲಿಂಗವನ್ನು ದರ್ಶನಮಾಡಿದ ಮಾನವರಿಗೆ ಹೆಜ್ಜೆಹೆಜ್ಜೆಗೂ ಆನಂದ ಪರಂಪರೆಗಳೇ ಉಂಟಾಗುತ್ತಿರುವುವು.

ಉವಾಚ ವಿಸ್ಮಯಾವಿಷ್ಟೋ ಮನಸ್ಯೇವ ಮಹೇಶಿತಾ ।
ಈದೃಶೇಭ್ಯಸ್ತಪಸ್ವಿಭ್ಯೋ ನಮೋಽಸ್ತ್ವಿತಿ ಪುನಃ ಪುನಃ ॥ ೨೩ ॥
ಯತ್ರೈವ ಹಿ ತಪಸ್ಯಂತಿ ಯತ್ರೈವ ವಿಹಿತಾಶ್ರಮಾಃ ।
ಲಬ್ಧಪ್ರತಿಷ್ಠಾ ಯತ್ರೈವ ತತ್ರೈವಾಮರ್ಷಿಣೋ ದ್ವಿಜಾಃ ॥ ೨೪ ॥
ಮನಾಕ್ಷಿಂತಿತಮಾತ್ರಂ ತು ಚೇಲ್ಲಭಂತೇ ನ ತಾಪಸಾಃ ।
ಕ್ರುಧಾ ತದೈವ ಜೀಯಂತೇ ಹಾರಿಣ್ಯಾ ತಪಸಾಂ ಶ್ರಿಯಃ ॥ ೨೫ ॥
ತಥಾಪಿ ತಾಪಸಾ ಮಾನ್ಯಾಃ ಸ್ವಶ್ರೇಯೋವೃದ್ಧಿಕಾಂಕ್ಷಿಭಿಃ ।
ಅಕ್ರೋಧನಾಃ ಕ್ರೋಧನಾ ವಾ ಕಾ ಚಿಂತಾ ಹಿ ತಪಸ್ವಿನಾಂ ॥ ೨೬ ॥
ಇತಿ ಯಾವನ್ಮಹೇಶಾನೋ ಮನಸ್ಯೇವ ವಿಚಿಂತಯೇತ್ ।
ತಾವತ್ತತ್ಕ್ರೋಧಜೋ ವಹ್ನಿರ್ವ್ಯಾನಶೇ ವ್ಯೋಮಮಂಡಲಂ ॥ ೨೭ ॥
ತತ್ಕ್ರೋಧಾನಲಧೂಮೌಘೈರ್ವ್ಯಾಪಿತಂ ಯನ್ನಭೋಽಂಗಣಂ ।
ತದ್ಧಾತಿ ನಭೋಽದ್ಯಾಪಿ ನೀಲಿಮಾನಂ ಮಹತ್ತರಂ ॥ ೨೮ ॥

---

೨೩. ಬಳಿಕ ಮಹೇಶ್ವರನು ವಿಸ್ಮಯದಿಂದ ಕೂಡಿದ ಅಂತರಂಗವುಳ್ಳವನಾಗಿ ತನ್ನಲ್ಲಿಯೇ "ದೇವರನ್ನೂ ಬಲಾತ್ಕರಿಸುವ ಇಂತಹ ತಪಸ್ವಿಗಳಿಗೆ ನಮಸ್ಕಾರ" ಎಂಬುದಾಗಿ ಮತ್ತೆ ಮತ್ತೆ ಹೇಳಿಕೊಂಡನು.

೨೪. "ತಪಸ್ವಿಗಳು ಎಲ್ಲಿ ತಪಸ್ಸನ್ನು ಮಾಡುತ್ತಿರುವರೊ, ಎಲ್ಲಿ ತಮ್ಮ ಆಶ್ರಮಗಳನ್ನು ಕಲ್ಪಿಸಿಕೊಂಡಿರುವರೊ, ಎಲ್ಲಿ ಸ್ಥಾನಮಾನಗಳನ್ನು ಪಡೆದಿರು ವರೊ, ಅಲ್ಲಿಯೇ ಬ್ರಾಹ್ಮಣರು ಅಸಹನಶೀಲರಾಗುವರು.

೨೫. ತಪಸ್ಸಂಪನ್ನರಾದವರು ಮನಸ್ಸಿನಿಂದ ಅಪೇಕ್ಷಿಸಿದ್ದರಲ್ಲಿ ಎಳ್ಳಷ್ಟು ಕೊರತೆಯಾದರೂ ತಪಸ್ಸಿನ ಸಮಸ್ತ ಫಲವನ್ನೂ ನಾಶಗೊಳಿಸುವ ಕ್ರೋಧದಿಂದ ಆವಿಷ್ಟರಾಗುವರು.

೨೬. ಹಾಗಾದರೂ ಆತ್ಮಶ್ರೇಯಸ್ಸನ್ನು ಅಪೇಕ್ಷಿಸುವ ತಾಪಸರು ಸಕಲರಿಗೂ ಪೂಜಾರ್ಹರೇ ಆಗಿರುವರು. ಶಾಂತಮನಸ್ಕರೇ ಆಗಲಿ, ಕ್ರೋಧಾವಿಷ್ಟರೇ ಆಗಲಿ, ತಪಸ್ಸಂಪನ್ನರಾಗಿರುವವರ ವಿಷಯದಲ್ಲಿ ಅದರ ಚಿಂತೆಯೇಕೆ?"

೨೭. ಇಂತೆಂದು ಮಹೇಶ್ವರನು ಮನಸ್ಸಿನಲ್ಲಿ ಯೋಚಿಸುತ್ತಿರುವಂತೆಯೇ ಆ ಮಾರ್ಕಂಡೇಯಮಹಾಮುನಿಯ ಕ್ರೋಧವೆಂಬ ಅಗ್ನಿಜ್ವಾಲೆಗಳು ಆಕಾಶಮಂಡಲ ವನ್ನೆಲ್ಲ ಆವರಿಸಿಕೊಂಡುವು.

೨೮. ಆತನ ಕ್ರೋಧಾಗ್ನಿಯ ಹೊಗೆಯಿಂದ ವ್ಯಾಪಿತವಾಗಿ ಆಕಾಶಮಂಡಲ ವೆಲ್ಲವೂ ಆ ಕಾರಣದಿಂದಲೇ ಅಂದುಮೊದಲುಗೊಂಡು ಅಪರಿಹಾರ್ಯವಾದ ನೀಲವರ್ಣವನ್ನು ತಳೆದಿರುವುದು.

ತತೋ ಗಣಾಃ ಪರಿಕ್ಷುಬ್ಧಾಃ ಪ್ರಲಯಾರ್ಣವನೀರವತ್ ।
ಆಃ ಕಿಮೇತತ್ಕಿಮೇತದ್ವೈ ಭಾಷಮಾಣಾಃ ಪರಸ್ಪರಂ ॥ ೨೯ ॥
ಗರ್ಜಂತಸ್ತರ್ಜಯಂತಶ್ಚ ಪ್ರೋದ್ಯತಾಯುಧಪಾಣಯಃ ।
ಪ್ರಮಥಾಃ ಪರಿತಸ್ಥುಸ್ತೇ ಪರಿತೋ ಧಾಮ ಶಾಂಭವಂ ॥ ೩೦ ॥
ಕೋ ಯಮಃ ಕೋಽಥ ವಾ ಕಾಲಃ ಕೋ ಮೃತ್ಯುಃ ಕಸ್ತಥಾಂತಕಃ ।
ಕೋ ವಾ ವಿಧಾತಾ ಕೇ ಲೇಖಾಃ ಕ್ರುದ್ಧೇಷ್ವಸ್ಮಾಸು ಕಃ ಪರಃ ॥ ೩೧ ॥
ಅಗ್ನಿಂ ಪಿಬಾಮೋ ಜಲವಚ್ಚೂರ್ಣೀಕುರ್ಮೋಽಖಿಲಾನ್ಗಿರೀನ್ ।
ಸಪ್ತಾಪಿ ಚಾರ್ಣವಾಂಸ್ತೂರ್ಣಂ ಕರವಾಮ ಮರುಸ್ಥಲೀಂ ॥ ೩೨ ॥
ಪಾತಾಲಂ ಚಾನಯಾಮೋರ್ಧ್ವಮಧೋ ದಧ್ಮೋಽಥ ವಾ ದಿವಂ ।
ಏಕಮೇವ ಹಿ ವಾ ಗ್ರಾಸಂ ಗಗನಂ ಕರವಾಮಹೇ ॥ ೩೩ ॥
ಬ್ರಹ್ಮಾಂಡಭಾಂಡಮಥ ವಾ ಸ್ಫೋಟಯಾಮಃ ಕ್ಷಣೇನ ಹಿ ।
ಆಸ್ಫಾಲಯಾಮೋ ವಾನ್ಯೋನ್ಯಂ ಕಾಲಂ ಮೃತ್ಯುಂ ಚ ತಾಲವತ್ ॥ ೩೪ ॥

---

೨೯. ಆಗ ಪರಮೇಶ್ವರನ ಗಣಗಳೆಲ್ಲರೂ "ಆಹಾ! ಇದೇನು? ಇದೇನು?" ಎನ್ನುತ್ತಲೆ ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತ ಪ್ರಳಯದಲ್ಲಿ ಭೂಲೋಕವನ್ನು ಆವರಿಸುವ ಸಮುದ್ರೋದಕದಂತೆ ಕ್ಷೋಭಗೊಂಡರು.

೩೦. ಸಿಂಹಗರ್ಜನೆಗಳನ್ನು ಮಾಡುತ್ತ, ಧಿಕ್ಕಾರವಚನಗಳನ್ನಾಡುತ್ತ, ತಮ್ಮ ಆಯುಧಗಳನ್ನು ಕೈಗಳಲ್ಲಿ ಎತ್ತಿ ಹಿಡಿದುಕೊಂಡು ಪ್ರಮಥಗಣಗಳೆಲ್ಲರೂ ಮಹೇಶ್ವರನ ಆ ಕ್ಷೇತ್ರವನ್ನು ಸುತ್ತುವರಿಸಿದರು.

೩೧. "ಯಮನು ಯಾರು? ಕಾಲನು ಯಾರು? ಅಥವಾ ಮೃತ್ಯುವು ಯಾರು? ಅಂತಕನಾರು? ಬ್ರಹ್ಮದೇವನು ಯಾರು? ದೇವತೆಗಳು ಯಾರು? ನಾವು ಕೋಪಗೊಂಡರೆ ಎದುರಿಗೆ ನಿಲ್ಲಲು ಯಾವನಿರುವನು?

೩೨. ಅಗ್ನಿಯನ್ನು ನೀರಿನಂತೆ ಪಾನಮಾಡಿಬಿಡುವೆವು. ಸಮಸ್ತ ಪರ್ವತಗಳನ್ನೂ ಚೂರ್ಣಗೊಳಿಸುವೆವು. ಏಳು ಸಮುದ್ರಗಳ ತಳಗಳನ್ನೂ ನಿಮಿಷಮಾತ್ರದಲ್ಲಿಯೇ ಮರಳುಗಾಡುಗಳಾಗಿ ಮಾಡಬಲ್ಲೆವು.

೩೩. ಪಾತಾಲಲೋಕವನ್ನು ಮೇಲಕ್ಕೆತ್ತಿಕೊಂಡು ಬರುವೆವು. ಸ್ವರ್ಗಲೋಕವನ್ನು ಕೆಳಕ್ಕೆ ತುಳಿದುಬಿಡುವೆವು. ಸಮಸ್ತಾಕಾಶವನ್ನೂ ಒಂದೇ ಕಬಳವನ್ನಾಗಿ ನುಂಗಿ ಮುಗಿಸಿಬಿಡುವೆವು.

೩೪. ಬ್ರಹ್ಮಾಂಡಕಟಾಹವನ್ನೇ ಕ್ಷಣಮಾತ್ರದಲ್ಲಿ ಒಡೆದುಹಾಕುವೆವು. ಕಾಲಯಮನನ್ನೂ, ಮೃತ್ಯುದೇವತೆಯನ್ನೂ ಎರಡು ಕೈಗಳಲ್ಲಿ ಹಿಡಿದು ಎರಡು ತಾಳಗಳಂತೆ ಬಡಿದುಬಿಡುವೆವು.

ಗ್ರಸಾಮೋ ವಾಥ ಭುವನಂ ಮುಕ್ತ್ವಾ ವಾರಾಣಸೀಂ ಪುರೀಂ ।
ಯತ್ರ ಮುಕ್ತ್ವಾ ಭವಂತ್ಯೇವ ಮೃತಮಾತ್ರೇಣ ಜಂತವಃ ॥ ೩೫ ॥
ಕುತೋಽಯಂ ಧೂಮಸಂಭಾರೋ ಜ್ವಾಲಾವಲ್ಯಃ ಕುತಸ್ತ್ವಮೂಃ ।
ಕೋ ವಾ ಮೃತ್ಯುಂಜಯಂ ರುದ್ರಂ ನೋ ವಿದ್ಯಾನ್ಮದಮೋಹಿತಃ ॥ ೩೬ ॥
ಇತಿ ಪಾರಿಷದಾಃ ಶಂಭೋರ್ಮಹಾಭಯಭಯಪ್ರದಾಃ ।
ಜಲ್ಪಂತಃ ಕಲ್ಪಯಾಮಾಸುಃ ಪ್ರಾಕಾರಂ ಗಗನಸ್ಪೃಶಂ ॥ ೩೭ ॥
ಶಕಲೀಕೃತ್ಯ ಬಹುಶಃ ಶಿಲಾವತ್ಪ್ರಲಯಾನಲಂ ।
ನಂದೀ ಚ ನಂದಿಷೇಣಶ್ಚ ಸೋಮನಂದೀ ಮಹೋದರಃ ॥ ೩೮ ॥
ಮಹಾಹನುರ್ಮಹಾಗ್ರೀವೋ ಮಹಾಕಾಲೋ ಜಿತಾಂತಕಃ ।
ಮೃತ್ಯುಪ್ರಕಂಪನೋ ಭೀಮೋ ಘಂಟಾಕರ್ಣೋ ಮಹಾಬಲಃ ॥ ೩೯ ॥
ಕ್ಷೋಭಣೋ ದ್ರಾವಣೋ ಜೃಂಭೀ ಪಂಚಾಸ್ಯಃ ಪಂಚಲೋಚನಃ ।
ದ್ವಿಶಿರಾಸ್ತ್ರಿಶಿರಾಃ ಸೋಮಃ ಪಂಚಹಸ್ತೋ ದಶಾನನಃ ॥ ೪೦ ॥
ಚಂಡೋ ಭೃಂಗಿರಿಟಿಸ್ತುಂಡೀ ಪ್ರಚಂಡಸ್ತಾಂಡವಪ್ರಿಯಃ ।
ಪಿಚಂಡಿಲಃ ಸ್ಥೂಲಶಿರಾಃ ಸ್ಥೂಲಕೇಶೋ ಗಭಸ್ತಿಮಾನ್ ॥ ೪೧ ॥
ಕ್ಷೇಮಕಃ ಕ್ಷೇಮಧನ್ವಾ ಚ ವೀರಭದ್ರೋ ರಣಪ್ರಿಯಃ ।
ಚಂಡಪಾಣಿಃ ಸ್ಥೂಲಪಾಣಿಃ ಪಾಶಪಾಣಿಃ ಕೃಶೋದರಃ ॥ ೪೨ ॥

---

೩೫. ಭೂಮಂಡಲವನ್ನು ನುಂಗುವೆವು. ಆದರೆ ವಾರಾಣಸೀಪುರಿಯು ಮಾತ್ರ ನಮಗೆ ತ್ಯಾಜ್ಯವಾಗಿರುವುದು. ಅಲ್ಲಿ ಮರಣವನ್ನು ಹೊಂದಿದ ಮಾತ್ರದಿಂದಲೇ ಜಂತುಗಳು ಸಂಸಾರದಿಂದ ಮುಕ್ತಿಯನ್ನು ಪಡೆಯುವುವಲ್ಲವೆ.

೩೬. ಈ ಹೊಗೆಯ ಸಂಭಾರವೆಲ್ಲಿಯದು? ಈ ಜ್ವಾಲೆಗಳ ಸಮೂಹ ಗಳೆಲ್ಲಿಯವು? ಮದದಿಂದ ಮೋಹವನ್ನು ಹೊಂದಿದ ಯಾವನು ತಾನೆ ನಮ್ಮ ಒಡೆಯನೂ, ಮೃತ್ಯುಂಜಯನೂ ಆದ ಮಹೇಶ್ವರನನ್ನು ತಿಳಿಯದಿರುವನು ?''

೩೭. ಇಂತೆಂದು ಭಯಕ್ಕೂ ಮಹಾಭಯವನ್ನುಂಟುಮಾಡುವವರಾದ ಮಹಾದೇವನ ಪಾರ್ಷದಗಣನಾಯಕರು ಆರ್ಭಟಿಸುತ್ತ ಕ್ಷೇತ್ರದ ಸುತ್ತಲೂ ಆಕಾಶವನ್ನು ಮುಟ್ಟುವಂತಹ ಪ್ರಾಕಾರವನ್ನು ನಿರ್ಮಿಸಿದರು.

೩೮–೪೬. ಪ್ರಳಯಾಗ್ನಿಗೆ ಸಮಾನವಾದ ಆ ದೂರ್ವಾಸಮುನಿಯ ಕೋಪಾಗ್ನಿಯನ್ನು ಛಿನ್ನಭಿನ್ನವಾಗಿ ಮಾಡಿ ಕಳೆದು ನಂದಿ, ನಂದಿಷೇಣ, ಸೋಮನಂದಿ, ಮಹೋದರ, ಮಹಾಹನು, ಮಹಾಗ್ರೀವ, ಮಹಾಕಾಲ, ಜಿತಾಂತಕ, ಮೃತ್ಯುಕಂಪನ, ಭೀಮ, ಘಂಟಾಕರ್ಣ, ಮಹಾಬಲ, ಕ್ಷೋಭಣ, ದ್ರಾವಣ, ಜೃಂಭಿ, ಪಂಚಮುಖ, ಪಂಚನೇತ್ರ, ದ್ವಿಶಿರ, ತ್ರಿಶಿರ, ಸೋಮ, ಪಂಚಹಸ್ತ, ದಶಮುಖ, ಚಂಡ, ಭೃಂಗಿರಿಟಿ, ತುಂಡಿ, ಪ್ರಚಂಡ, ತಾಂಡವಪ್ರಿಯ,

ದೀರ್ಘಗ್ರೀವೋಽಥ ಪಿಂಗಾಕ್ಷಃ ಪಿಂಗಲಃ ಪಿಂಗಮೂರ್ಧಜಃ ।
ಬಹುನೇತ್ರೋ ಲಂಬಕರ್ಣಃ ಖರ್ವಃ ಪರ್ವತವಿಗ್ರಹಃ ॥ ೪೩ ॥
ಗೋಕರ್ಣೋ ಗಜಕರ್ಣಶ್ಚ ಕೋಕಿಲಾಖ್ಯೋ ಗಜಾನನಃ ।
ಅಹಂ ವೈ ನೈಗಮೇಯಶ್ಚ ವಿಕಟಾಸ್ಯೋಽಟ್ಟಹಾಸಕಃ ॥ ೪೪ ॥
ಸೀರಪಾಣಿಃ ಶಿವಾರಾವೋ ವೈಣಿಕೋ ವೇಣುವಾದನಃ ।
ದುರಾಧರ್ಷೋ ದುಃಸಹಶ್ಚ ಗರ್ಜನೋ ರಿಪುತರ್ಜನಃ ॥ ೪೫ ॥
ಇತ್ಯಾದಯೋ ಗಣೇಶಾನಃ ಶತಕೋಟಿ ದುರಾಸದಾಃ ।
ಕಾಶ್ಯಾಂ ನಿವಾರಯಾಮಾಸುರಪಿ ಪ್ರಾಭಂಜನೀಂ ಗತಿಂ ॥ ೪೬ ॥
ಕ್ಷುಬ್ಧೇಷು ತೇಷು ವೀರೇಷು ಚಕಂಪೇ ಭುವನತ್ರಯಂ ।
ದುರ್ವಾಸಶ್ಚ ಕೋಪಾಗ್ನಿಜ್ವಾಲಾಭಿರ್ವ್ಯಾಕುಲೀಕೃತಂ ॥ ೪೭ ॥
ತದಾ ವಿವಿಶತುಃ ಕಾಶ್ಯಾಂ ಸೂರ್ಯಾಚಂದ್ರಮಸಾವಪಿ ।
ನ ಗಣೈರಕೃತಾನುಜ್ಞೌ ತತ್ತೇಜಃಶಮಿತಪ್ರಭೋಃ ॥ ೪೮ ॥
ನಿವಾರ್ಯ ಪ್ರಮಥಾನೀಕಮತಿಕ್ಷುಬ್ಧಮುಮಾಧವಃ ।
ಮದಂಶ ಏವ ಹಿ ಮುನಿರಾನಸೂಯೇಯ ಏಷ ವೈ ॥ ೪೯ ॥

---

ಪಿಚಂಡಿಲ, ಸ್ಥೂಲಶಿರ, ಸ್ಥೂಲಕೇಶ, ಗಭಸ್ತಿಮಂತ, ಕ್ಷೇಮಕ, ಕ್ಷೇಮಧನ್ವ, ವೀರಭದ್ರ, ಯುದ್ಧಪ್ರಿಯ, ಚಂಡಹಸ್ತ, ಶೂಲಪಾಣಿ, ಪಾಶಹಸ್ತ, ಕೃಶೋದರ, ದೀರ್ಘಕಂಠ, ಪಿಂಗಾಕ್ಷ, ಪಿಂಗಳ, ಪಿಂಗಕೇಶ, ಬಹುನೇತ್ರ, ಲಂಬಕರ್ಣ, ಖರ್ವ, ಪರ್ವತವಿಗ್ರಹ, ಗೋಕರ್ಣ, ಗಜಕರ್ಣ, ಕೋಕಿಲ, ಗಜಾನನ, ನೈಗಮೇಯ, ನಾನು (ಸ್ಕಂದನು), ವಿಕಟಾಸ್ಯ, ಅಟ್ಟಹಾಸಕ, ಸೀರಪಾಣಿ, ಶಿವಾರಾವ, ವೈಣಿಕ, ವೇಣುವಾದಕ, ದುರಾಧರ್ಷ, ದುಸ್ಸಹ, ಗರ್ಜನ, ರಿಪುತರ್ಜನ— ಇವರೇ ಮೊದಲಾದ ಒಂದುನೂರುಕೋಟಿ ಸಂಖ್ಯೆಯ ಅಜೇಯರಾದ ಗಣನಾಯಕರು ಕಾಶಿಯನ್ನು ಸುತ್ತುಬಳಸಿ ಅಲ್ಲಿ ವಾಯುವಿನ ಸಂಚಾರವನ್ನೂ ತಡೆಗಟ್ಟಿದರು.

೪೭. ಆ ಗಣಗಳೆಲ್ಲರೂ ಕ್ಷೋಭಗೊಂಡು ಹಾರಾಡುತ್ತಿದ್ದುದರಿಂದ ದೂರ್ವಾಸಮಹರ್ಷಿಯ ಕೋಪಾಗ್ನಿಯಿಂದ ಮೊದಲೇ ವ್ಯಾಕುಲಗೊಂಡಿದ್ದ ಮೂರು ಲೋಕಗಳೂ ಮತ್ತೂ ಹೆಚ್ಚಾಗಿ ನಡುಗತೊಡಗಿದವು.

೪೮. ಆ ಸಮಯದಲ್ಲಿ ಅವರ ತೇಜಸ್ಸಿನಿಂದ ಕಾಂತಿಹೀನರಾದ ಸೂರ್ಯಚಂದ್ರರೂ ಆ ಪ್ರಮಥಗಣಗಳ ಅನುಜ್ಞೆಯನ್ನು ಪಡೆಯದೆ ಕಾಶೀನಗರವನ್ನು ಪ್ರವೇಶಮಾಡುವಂತಿರಲಿಲ್ಲ.

೪೯. ಇಂತು ಅತ್ಯಂತವಾಗಿ ಕ್ಷೋಭೆಗೊಂಡು ಅಲ್ಲಿಯೆ ನೆರೆದಿರುವ ತನ್ನ ಪ್ರಮಥಸಮೂಹವನ್ನು ತಡೆದು ಮಹೇಶ್ವರನು, "ಈ ಮಹಾಮುನಿಯು ನನ್ನ ಅಂಶದಿಂದಲೇ ಅನಸೂಯಾದೇವಿಯಲ್ಲಿ ಹುಟ್ಟಿರುವನು" ಎಂದು ಹೇಳಿದನು.

ಅಥೋ ದುರ್ವಾಸಸೋ ಲಿಂಗಾದಾವಿರಾಸೀತ್ಕೃಪಾನಿಧಿಃ ।
ಮಹಾತೇಜೋಮಯಃ ಶಂಭುರ್ಮುನಿಶಾಪಾತ್ಪುರೀಮವನ್ ॥ ೫೦ ॥
ಮಾಭೂಚ್ಛಾಪೋ ಮುನೇಃ ಕಾಶ್ಯಾಂ ನಿರ್ವಾಣಪ್ರತಿಬಂಧಕಃ ।
ಇತ್ಯನುಕ್ರೋಶತೋ ದೇವಸ್ತಸ್ಯ ಪ್ರತ್ಯಕ್ಷತಾಂ ಗತಃ ॥ ೫೧ ॥
ಉವಾಚ ಚ ಪ್ರಸನ್ನೋಽಸ್ಮಿ ಮಹಾಕ್ರೋಧನ ತಾಪಸ ।
ವರಯಸ್ವ ವರಃ ಕಸ್ತೇ ಮಯಾ ದೇಯೋಽವಿಶಂಕಿತಃ ॥ ೫೨ ॥
ತತೋ ವಿಲಜ್ಜಿತೋಽಗಸ್ತ್ಯಶಾಪೋದ್ಯತಕರೋ ಮುನಿಃ ।
ಅಪರಾದ್ಧಂ ಬಹು ಮಯಾ ಕ್ರೋಧಾಂಧೇನೇತಿ ದುರ್ಧಿಯಾ ॥ ೫೩ ॥
ಉವಾಚ ಚೇತಿ ಬಹುಶೋ ಧಿಙ್ಮಾಂ ಕ್ರೋಧವಶಂಗತಂ ।
ತ್ರೈಲೋಕ್ಯಭಯದಾಂ ಕಾಶೀಂ ಶಪ್ತುಮುದ್ಯತಚೇತಸಂ ॥ ೫೪ ॥
ದುಃಖಾರ್ಣವನಿಮಜ್ಞಾನಾಂ ಯಾತಾಯಾತೇಽತಿಖೇದಿನಾಂ ।
ಕರ್ಮಪಾಶಿತಕಂಠಾನಾಂ ಕಾಶ್ಯೇಕಾ ಮುಕ್ತಿಸಾಧನಂ ॥ ೫೫ ॥

---

೫೦. ತರುವಾಯ, ಆ ಮಹಾಮುನಿಯ ಶಾಪದಿಂದ ಕ್ಷೇತ್ರವನ್ನು ಕಾಪಾಡುವುದಕ್ಕಾಗಿ ಕೃಪಾಸಮುದ್ರನಾದ ಮಹಾದೇವನು ತೇಜೋಮಯನಾದ ದೂರ್ವಾಸಮುನಿಯ ಮುಂದಿರುವ ಲಿಂಗದಿಂದಲೇ ಅವಿರ್ಭವಿಸಿದನು.

೫೧. “ಕಾಶೀಕ್ಷೇತ್ರದ ವಿಷಯದಲ್ಲಿ ಮೋಕ್ಷಲಾಭಕ್ಕೆ ಪ್ರತಿಬಂಧಕವಾದ ಶಾಪವು ಈ ಮುನಿವರ್ಯನಿಂದ ಉಂಟಾಗದಿರಲಿ” ಎಂಬ ಅನುಕ್ರೋಶದಿಂದಲೇ ಮಹಾದೇವನು ಆತನಿಗೆ ಪ್ರತ್ಯಕ್ಷದರ್ಶನವನ್ನು ಕೊಟ್ಟು ಅವನನ್ನು ಕುರಿತು ಇಂತೆಂದನು.

೫೨–೫೩. “ಎಲೈ ಅಗಸ್ತ್ಯನೆ! ಮಹಾ ಕೋಪಿಷ್ಠನಾದ ಅಯ್ಯಾ ತಪಸ್ವಿಯೇ! ಇದೊ; ನಾನು ನಿನಗೆ ಪ್ರಸನ್ನನಾಗಿರುವೆನು. ಯಾವ ಶಂಕೆಯನ್ನೂ ಇಟ್ಟುಕೊಳ್ಳದೆ ವರವನ್ನು ಬೇಡು. ನಿನಗೆ ಯಾವ ವರವನ್ನು ಕೊಡಬೇಕು ಹೇಳು.” ಆಗ ಶಾಪವನ್ನು ಕೊಡಲು ಕೈಯನ್ನೆತ್ತಿದ್ದ ಆ ಮುನಿಯು, “ಕ್ರೋಧದಿಂದ ಕಣ್ಣುಕಾಣದ ನಾನು ಮಹತ್ತರವಾದ ಅಪರಾಧವನ್ನು ಮಾಡಿದೆನು” ಎಂಬುದಾಗಿ ಮನಸ್ಸಿನಲ್ಲಿಯೇ ಕೊರಗುತ್ತ ನಾಚಿಕೆಪಟ್ಟು ನಿಂತಿದ್ದನು.

೫೪. ಮಹಾದೇವನನ್ನು ಕುರಿತು ಆತನಿಂತೆಂದು ಹೇಳಿದನು. “ಮೂರು ಲೋಕಗಳಿಗೂ ಅಭಯವನ್ನು ನೀಡುವ ಈ ಕಾಶೀಕ್ಷೇತ್ರವನ್ನು ಶಪಿಸುವ ದುರ್ಬುದ್ಧಿಯುಳ್ಳ ನನಗೆ ಅನೇಕ ಧಿಕ್ಕಾರಗಳಿರಲಿ.

೫೫. ದುಃಖಸಮುದ್ರದಲ್ಲಿ ಮುಳುಗಿದವರೂ, ಜನನಮರಣರೂಪ ಸಂಸಾರದಲ್ಲಿ ಖೇದಗೊಳ್ಳುತ್ತಿರುವವರೂ, ಕರ್ಮಪಾಶಗಳಿಂದ ಕಂಠದಲ್ಲಿ ಬಿಗಿಯಲ್ಪಡುವವರೂ ಆದವರಿಗೆ ಈ ಕಾಶಿಯೊಂದೇ ಮೋಕ್ಷಸಾಧನವು.

ಸರ್ವೇಷಾಂ ಜಂತುಜಾತಾನಾಂ ಜನನ್ಯೇಕೈವ ಕಾಶಿಕಾ ।
ಮಹಾಮೃತಸ್ತನ್ಯದಾತ್ರೀ ನೇತ್ರೀ ಚ ಪರಮಂ ಪದಂ ॥ ೫೬ ॥
ಜನನ್ಯಾ ಸಹ ನೋ ಕಾಶೀ ಲಭೇದುಪಮಿತಿಂ ಕ್ವಚಿತ್ ।
ಧಾರಯೇಜ್ಜನನೀಗರ್ಭೇ ಕಾಶೀ ಗರ್ಭಾದ್ವಿಮೋಚಯೇತ್ ॥ ೫೭ ॥
ಏವಂ ಭೂತಾಂ ತು ಯತ್ಕಾಶೀಮನ್ಯೋಽಪಿ ಹಿ ಶಪಿಷ್ಯತಿ ।
ತಸ್ಯೈವ ಶಾಪೋ ಭವಿತಾ ನ ತು ಕಾಶ್ಯಾಃ ಕಥಂಚನ ॥ ೫೮ ॥
ಇತಿ ದುರ್ವಾಸಸೋ ವಾಕ್ಯಂ ಶೃತ್ವಾ ದೇವಸ್ತ್ರಿಲೋಚನಃ ।
ಅತೀವ ತುಷ್ಟಿತೋ ಜಾತಃ ಕಾಶೀಸ್ತವನಲಬ್ಧಮುತ್ ॥ ೫೯ ॥
ಯಃ ಕಾಶೀಂ ಸ್ತೌತಿ ಮೇಧಾವೀ ಯಃ ಕಾಶೀಂ ಹೃದಿ ಧಾರಯೇತ್ ।
ತೇನ ತಪ್ತಂ ತಪಸ್ತೀವ್ರಂ ತೇನೇಷ್ಟಂ ಕ್ರತುಕೋಟಿಭಿಃ ॥ ೬೦ ॥
ಜಿಹ್ವಾಗ್ರೇ ವರ್ತತೇ ಯಸ್ಯ ಕಾಶೀತ್ಯಕ್ಷರಯುಗ್ಮಕಂ ।
ನ ತಸ್ಯ ಗರ್ಭವಾಸಃ ಸ್ಯಾತ್ಕ್ವಚಿದೇವ ಸುಮೇಧಸಃ ॥ ೬೧ ॥

---

೫೬. ಸಕಲ ವಿಧಗಳಾದ ಪ್ರಾಣಿಗಳಿಗೂ ಕಾಶೀಕ್ಷೇತ್ರವೊಂದೇ ಜನನಿಯೆನಿಸಿ ಮೋಕ್ಷವೆಂಬ ಅಮೃತದ ಸ್ತನ್ಯಪಾನದಿಂದಲೂ, ಮುಕ್ತಿಪಥದಲ್ಲಿ ಅವರನ್ನು ನಡೆಸುವುದರಿಂದಲೂ ಉದ್ಧರಿಸುತ್ತಿರುವುದು.

೫೭. ಅಥವಾ ಈ ಕಾಶಿಗೂ ತಾಯಿಗೂ ಹೋಲಿಕೆಯನ್ನು ಹೇಳಲು ಎಂದಿಗೂ ತಡೆಯುವುದಿಲ್ಲ. ಏಕೆಂದರೆ ತಾಯಿಯು ಮಗುವನ್ನು ಗರ್ಭದಲ್ಲಿ ಧರಿಸುವಳು. ಕಾಶಿಯಾದರೊ ಪ್ರಾಣಿಗಳಿಗೆ ಗರ್ಭವಾಸವನ್ನೇ ತಪ್ಪಿಸುವುದು.

೫೮. ಇಂತಹ ಕಾಶೀಕ್ಷೇತ್ರವನ್ನು ಯಾವ ಮೂಢನು ಶಪಿಸಲುದ್ಯುಕ್ತನಾಗುವನೊ, ಆವನೇ ಆ ಶಾಪದ ಫಲವನ್ನನುಭವಿಸುವನಲ್ಲದೆ ಕಾಶೀಕ್ಷೇತ್ರಕ್ಕೆ ಯಾವ ದೋಷವೂ ಸಂಭವಿಸುವುದಿಲ್ಲ.''

೫೯. ಇಂತೆಂದ ದೂರ್ವಾಸಮುನಿಯ ವಾಕ್ಯಗಳನ್ನು ಕೇಳಿ ಆತನಾಡಿದ ಕಾಶಿಯ ಸ್ತೋತ್ರವಚನಗಳಿಂದ ಸಂತೋಷಗೊಂಡ ತ್ರಿನೇತ್ರನಾದ ಮಹಾದೇವನು ಅತ್ಯಂತವಾದ ಸಂತೋಷವನ್ನು ತಾಳಿದನು.

೬೦. ಯಾವ ಬುದ್ಧಿವಂತನು ಸರ್ವಕಾಲಗಳಲ್ಲಿಯೂ ಕಾಶಿಯನ್ನು ಸ್ತುತಿಸುತ್ತಿರುವನೊ, ಯಾವನು ಅದನ್ನು ಹೃದಯದಲ್ಲಿ ಧಾರಣಮಾಡಿರುವನೊ, ಅವನೇ ಉಗ್ರವಾದ ತಪಸ್ಸನ್ನು ಮಾಡಿದವನು. ಅವನೇ ಕೋಟಿಯಜ್ಞಗಳನ್ನು ಮಾಡಿದವನು.

೬೧. ಯಾವನ ನಾಲಿಗೆಯಲ್ಲಿ ಕಾಶಿಯೆಂಬ ಎರಡು ಅಕ್ಷರಗಳು ಯಾವಾಗಲೂ ನಲಿದಾಡುತ್ತಿರುವುವೊ, ಆ ಕುಶಾಗ್ರಬುದ್ಧಿಗೆ ಎಂದಿಗೂ ಗರ್ಭವಾಸವು ಸಂಭವಿಸುವುದಿಲ್ಲವು.

ಯೋ ಮಂತ್ರಂ ಜಪತಿ ಪ್ರಾತಃ ಕಾಶೀವರ್ಣದ್ವಯಾತ್ಮಕಂ ।
ಸ ತು ಲೋಕದ್ವಯಂ ಜಿತ್ವಾ ಲೋಕಾತೀತಂ ವ್ರಜೇತ್ಪದಂ ॥ ೬೨ ॥
ಅನಸೂಯೇಯ ತೇ ಜ್ಞಾನಂ ಕಾಶೀಸ್ತವನಪುಣ್ಯತಃ ।
ಯಥೇದಾನೀಂ ಸಮುತ್ಪನ್ನಂ ತಥಾ ನ ತಪಸಃಪುರಾ ॥ ೬೩ ॥
ಮುನೇ ನ ಮೇ ಪ್ರಿಯಸ್ತದ್ವದ್ದೀಕ್ಷಿತೋ ಮಮ ಪೂಜಕಃ ।
ಯಾದೃಕ್ಪ್ರಿಯತರಃ ಸತ್ಯಂ ಕಾಶೀಸ್ತವನಲಾಲಸಃ ॥ ೬೪ ॥
ತಾದೃಕ್ತುಷ್ಟಿರ್ನಮೇ ದಾನೈಸ್ತಾದೃಕ್ತುಷ್ಟಿರ್ನಮೇ ಮಖೈಃ ।
ನ ತುಷ್ಟಿಸ್ತಪಸಾ ತಾದೃಗ್ಯಾದೃಶೀ ಕಾಶಿಸಂಸ್ತವೈಃ ॥ ೬೫ ॥
ಆನಂದಕಾನನಂ ಯೇನ ಸ್ತುತಮೇತತ್ಸುಚೇತಸಾ ।
ತೇನಾಹಂ ಸಂಸ್ತುತಃ ಸಂಯಕ್ಸರ್ವೈಃ ಸೂಕ್ತೈಃ ಶ್ರುತೀರಿತೈಃ ॥ ೬೬ ॥
ತವ ಕಾಮಾಃ ಸಮೃದ್ಧಾಃ ಸ್ಯುರಾನಸೂಯೇಯ ತಾಪಸ ।
ಜ್ಞಾನಂ ತೇ ಪರಮಂ ಭಾವಿ ಮಹಾಮೋಹವಿನಾಶನಂ ॥ ೬೭ ॥

---

೬೨. ಯಾವನು ಕಾಶಿಯೆಂಬ ಎರಡಕ್ಷರಗಳ ಮಹಾಮಂತ್ರವನ್ನು ಪ್ರತಿದಿನದ ಪ್ರಾತಃಕಾಲದಲ್ಲಿ ಜಪಿಸುವನೊ, ಅವನು ಇಹಲೋಕ ಪರಲೋಕಗಳೆರಡನ್ನೂ ಜಯಿಸಿ ಕೊನೆಯಲ್ಲಿ ಪುನರಾವೃತ್ತಿರಹಿತವಾದ ಪದವಿಯನ್ನು ಪಡೆಯುವನು.

೬೩. ಎಲೈ ಅನಸೂಯಾನಂದನನೆ! ಈಗ ಕಾಶಿಯನ್ನು ಸ್ತೋತ್ರಮಾಡಿದ ಪುಣ್ಯದಿಂದ ನಿನಗೆ ಯಾವ ಸಮ್ಯಜ್ಞಾನವುಂಟಾಗಿರುವುದೊ, ಇದು ಹಿಂದೆ ನಿನ್ನ ಸಮಗ್ರತಪಸ್ಸಿನಿಂದಲೂ ಉಂಟಾಗಲಿಲ್ಲ.

೬೪. ಮುನಿಯೆ! ಯಾವನು ಕಾಶಿಯನ್ನು ಸ್ತೋತ್ರಮಾಡುವುದರಲ್ಲಿಯೇ ನಿರತನಾಗಿರುವನೊ, ಅವನು ನನಗೆ ಪ್ರಿಯನಾದಂತೆ ನನ್ನನ್ನೇ ಪೂಜಿಸುತ್ತಿರುವ ದೀಕ್ಷಿತನೂ ಸಹ ಪ್ರೀತಿಪಾತ್ರನಲ್ಲ.

೬೫–೬೬. ಸಕಲ ದಾನಗಳನ್ನೂ ಮಾಡುವುದರಿಂದಾಗಲಿ, ಸಮಸ್ತ ಯಜ್ಞಗಳನ್ನೂ ಸಾಂಗವಾಗಿ ನೆರವೇರಿಸಿದರಾಗಲಿ, ಮಹಾ ತಪಸ್ಸುಗಳನ್ನು ಆಚರಿಸಿದರಾಗಲಿ, ಕಾಶಿಯ ಸ್ತೋತ್ರವನ್ನು ಮಾಡಿದಷ್ಟು ನನಗೆ ಸಂತೋಷವನ್ನುಂಟು ಮಾಡುವುದಿಲ್ಲ. ಯಾವನು ಶುದ್ಧಬುದ್ಧಿಯಿಂದ ಈ ಆನಂದಕಾನನವನ್ನು ಸ್ತೋತ್ರ ಮಾಡುವನೊ, ಅವನಿಂದ ನಾನು ವೇದೋಕ್ತಗಳಾದ ಸರ್ವ ಸೂಕ್ತಗಳಿಂದಲೂ ಸಂಸ್ತುತನಾದಂತೆಯೇ ತಿಳಿಯುವೆನು.

೬೭. ಅಯ್ಯಾ ಅನಸೂಯಾಪುತ್ರನೆ! ಮಹಾತಪಸ್ವಿಯೆ! ನಿನ್ನ ಸಕಲ ಇಷ್ಟಾರ್ಥಗಳೂ ಸಂಪೂರ್ಣಗೊಳ್ಳುವುವು. ಮುಂದೆ ನಿನಗೆ ಮಹಾಮೋಹ ಪ್ರಭವವಾದ ಸಂಸಾರವನ್ನು ನಾಶಮಾಡುವ ಜ್ಞಾನವುಂಟಾಗುವುದು.

ಅಪರಂ ಚ ವರಂ ಬ್ರೂಹಿ ಕಿಂ ದಾತವ್ಯಂ ತವಾನಘ ।
ತ್ವಾದೃಶಾ ಏವ ಮುನಯಃ ಶ್ಲಾಘನೀಯಾ ಯತಃ ಸತಾಂ ॥ ೭೮ ॥
ಯಸ್ಯಾಸ್ತ್ಯೇವ ಹಿ ಸಾಮರ್ಥ್ಯಂ ತಪಸಃ ಕ್ರುದ್ಧ್ಯತೀಹಿ ಸಃ ।
ಕುಪಿತೋಽಪ್ಯಸಮರ್ಥಸ್ತು ಕಿಂಕರ್ತಾ ಕ್ಷೀಣವೃತ್ತಿವತ್ ॥ ೭೯ ॥
ಇತಿ ಶ್ರುತ್ವಾ ಪರಿಷ್ಟುತ್ಯ ದುರ್ವಾಸಾಃ ಕೃತ್ತಿವಾಸಸಂ ।
ವರಂ ಚ ಪ್ರಾರ್ಥಯಾಮಾಸ ಪರಿಹೃಷ್ಟತನೂರುಹಃ ॥ ೮೦ ॥

ದುರ್ವಾಸಾ ಉವಾಚ:—

ದೇವದೇವ ಜಗನ್ನಾಥ ಕರುಣಾಕರ ಶಂಕರ ।
ಮಹಾಪರಾಧವಿಧ್ವಂಸಿನ್ನಂಧಕಾರೇ ಸ್ಮರಾಂತಕ ॥ ೮೧ ॥
ಮೃತ್ಯುಂಜಯೋಗ್ರ ಭೂತೇಶ ಮೃಡಾನೀಶ ತ್ರಿಲೋಚನ ।
ಯದಿ ಪ್ರಸನ್ನೋ ಮೇ ನಾಥ ಯದಿ ದೇಯೋ ವರೋ ಮಮ ॥ ೮೨ ॥
ತದಿದಂ ಕಾಮದಂ ನಾಮ ಲಿಂಗಮಸ್ತ್ವಿಹ ಧೂರ್ಜಟೇ ।
ಇದಂ ಚ ಪಲ್ವಲಂ ಮೇಽತ್ರ ಕಾಮಕುಂಡಾಖ್ಯಮಸ್ತು ವೈ ॥ ೮೩ ॥

---

೭೮. ನಿಷ್ಕಲ್ಮಷನೆ! ಬೇರೊಂದು ವರವನ್ನು ಕೇಳಿಕೊ. ನಿನಗೆ ನಾನೇನನ್ನು ಕೊಡಲಿ? ಸತ್ಪುರುಷರಿಗೆ ನಿನ್ನಂತಹ ಮುನಿವರ್ಯರೇ ಶ್ಲಾಘನೀಯರಾಗಿರುವರು.

೭೯. ಯಾವನಿಗೆ ತಪಸ್ಸಿನ ಸಾಮರ್ಥ್ಯವಿರುವುದೊ, ಅವನೇ ಕೋಪಗೊಳ್ಳುವುದಕ್ಕೂ ಶಕ್ತನಾಗುವನು. ಯಾವನನ್ನು ಉದ್ರೇಕ್ತಗೊಳಿಸಿದರೂ ಪರಮದರಿದ್ರನಂತೆ ಏನನ್ನೂ ಮಾಡಲಾರನೊ, ಅವನು ಏನನ್ನು ತಾನೆ ಸಾಧಿಸಬಲ್ಲನು?

೮೦. ಈ ಮಾತುಗಳನ್ನು ಕೇಳಿದ ದೂರ್ವಾಸನು ಮಹೇಶ್ವರನನ್ನು ಬಹುವಾಗಿ ಸ್ತೋತ್ರಮಾಡಿದನು. ಆ ಆನಂದದಿಂದಲೇ ಪುಳಕಾಂಕಿತನಾಗಿ ವರವನ್ನು ಪ್ರಾರ್ಥನೆ ಮಾಡಿಕೊಂಡನು.

೮೧. ದೂರ್ವಾಸನು ಹೇಳುತ್ತಾನೆ:— ದೇವದೇವ! ಲೋಕನಾಥ! ಕರುಣಾಸಮುದ್ರ! ಸುಖಪ್ರದ! ನೀನು ಮಹಾಪಾತಕಗಳನ್ನೂ, ಅಪರಾಧಗಳನ್ನೂ ದೂರಮಾಡುವವನು. ಅಂಧಕಾಸುರಮರ್ದನನೂ ನೀನೆ. ನೀನೇ ಮನ್ಮಥವೈರಿಯು.

೮೨–೮೩. ಓ ಮೃತ್ಯುಂಜಯ! ಉಗ್ರನೂ, ಭೂತನಾಥನೂ, ಪಾರ್ವತೀಪ್ರಿಯನೂ, ತ್ರಿಲೋಚನನೂ ಆದ ನೀನು ನನ್ನಲ್ಲಿ ಪ್ರಸನ್ನನಾಗಿರುವುದು ನಿಜವಾದರೆ, ನನಗೆ ವರವನ್ನೂ ಕೊಡುವವನಾಗಿದ್ದರೆ ಈ ಮಹಾಲಿಂಗವು ಕಾಮದಲಿಂಗವೆಂಬ ಹೆಸರುಳ್ಳದ್ದಾಗಲಿ. ಧೂರ್ಜಟಿಯೆ! ಈ ಕುಂಟೆಯೂ ನನ್ನ ಕೋರಿಕೆಯಂತೆ ಮಹಾತೀರ್ಥವಾಗಿ ಕಾಮಕುಂಡವೆಂದು ಪ್ರಸಿದ್ಧಿಯನ್ನು ಪಡೆಯಲಿ.

ದೇವದೇವ ಉವಾಚ :—

ಏವಮಸ್ತು ಮಹಾತೇಜೋ ಮುನೇ ಪರಮಕೋಪನ ।
ಯತ್ತ್ವಯಾ ಸ್ಥಾಪಿತಂ ಲಿಂಗಂ ದುರ್ವಾಸೇಶ್ವರಸಂಜ್ಞಿತಂ ।
ತದೇವ ಕಾಮಕೃನ್ನೃಣಾಂ ಕಾಮೇಶ್ವರಮಿಹಾಸ್ತ್ವಿತಿ ॥ ೭೪ ॥
ಯಃ ಪ್ರದೋಷೇ ತ್ರಯೋದಶ್ಯಾಂ ಶನಿವಾಸರಸಂಯುಜಿ ।
ಸಂಸ್ನಾಸ್ಯತಿ ನರೋ ಧೀಮಾನ್ಕಾಮಕುಂಡೇಽಸ್ತ್ವದಾಸ್ಪದೇ ॥ ೭೫ ॥
ತ್ವತ್ಸ್ಥಾಪಿತಂ ಚ ಕಾಮೇಶಂ ಲಿಂಗಂ ದ್ರಕ್ಷ್ಯತಿ ಮಾನವಃ ।
ಸ ವೈ ಕಾಮಕೃತಾದ್ದೋಷಾದ್ಯಾಮೀಂ ನಾಪ್ಸ್ಯತಿ ಯಾತನಾಂ ॥ ೭೬ ॥
ಬಹವೋಽಪಿ ಹಿ ಪಾಪ್ಮಾನೋ ಬಹುಭಿರ್ಜನ್ಮಭಿಃ ಕೃತಾಃ ॥ ೭೭ ॥
ಕಾಮತೀರ್ಥಾಂಬುಸಂಸ್ನಾನಾದ್ಯಾಸ್ಯಂತಿ ವಿಲಯಂ ಕ್ಷಣಾತ್ ।
ಕಾಮಾಃ ಸಮೃದ್ಧಿಮಾಪ್ಸ್ಯಂತಿ ಕಾಮೇಶ್ವರನಿಷೇವಣಾತ್ ।
ಇತಿ ದತ್ತ್ವಾ ವರಾನ್ಶಂಭುಸ್ತಲ್ಲಿಂಗೇ ಲಯಮಾಯಯೌ ॥ ೭೮ ॥

ಸ್ಕಂದ ಉವಾಚ :—

ತಲ್ಲಿಂಗಾರಾಧನಾತ್ಕಾಮಃ ಪ್ರಾಪ್ತಾ ದುರ್ವಾಸಸಾ ಭೃಶಂ ॥ ೭೯ ॥

---

೭೪. ಮಹಾದೇವನು ಹೇಳುತ್ತಾನೆ:—ಮಹಾತೇಜಸ್ವಿಯೂ ಪರಮಕೋಪನನೂ ಆದ ಮುನಿಯೆ! ಹಾಗೆಯೇ ಆಗಲಿ, ನೀನು ಸ್ಥಾಪಿಸಿದ ಲಿಂಗವು ದೂರ್ವಾಸೇಶ್ವರನೆಂಬ ಹೆಸರುಳ್ಳದ್ದಾಗಲಿ, ಅದೇ ಕಾಮೇಶ್ವರವೆಂದೂ ಪ್ರಸಿದ್ಧವಾಗಿ ಮನುಷ್ಯರ ಸಕಲಾಭೀಷ್ಟಗಳನ್ನೂ ಪೂರೈಸುತ್ತಿರುವುದು. ಈ ಕುಂಟಿಯೂ ಕಾಮದಕುಂಡವೆಂದು ಪ್ರಖ್ಯಾತವಾಗಲಿ.

೭೫—೭೭. ಶನಿವಾರದ ದಿನದಲ್ಲಿ ತ್ರಯೋದಶಿಯು ತಿಥಿಯೊದಗಲು ಸೂರ್ಯೋದಯಸಮಯದಲ್ಲಿ ನಿನಗೆ ಪ್ರಿಯವಾದ ಈ ಕಾಮಕುಂಡದಲ್ಲಿ ಸ್ನಾನವನ್ನು ಮುಗಿಸಿಕೊಂಡು ಧೀಮಂತನಾದ ಯಾವ ಮಾನವನು ನಿನ್ನಿಂದ ಸ್ಥಾಪಿತವಾದ ಈ ಕಾಮೇಶ್ವರಲಿಂಗವನ್ನು ನೋಡುವನೊ, ಅವನು ಕಾಮಾದಿಗಳಿಂದ ಪ್ರೇರಿತನಾಗಿ ಮಾಡಿದ ದೋಷಗಳಿಗಾಗಿ ಯಮಲೋಕದ ಯಾತನೆಯನ್ನನುಭವಿಸುವುದಿಲ್ಲ. ಹಿಂದಿನ ಅನೇಕ ಜನ್ಮಗಳಲ್ಲಿ ಅನೇಕ ವಿಧಗಳಾದ ಪಾತಕಗಳನ್ನು ಜನರು ಮಾಡಿರುತ್ತಾರೆಯಷ್ಟೆ. ಅವುಗಳೆಲ್ಲವೂ ಈ ಕಾಮತೀರ್ಥದ ನೀರಿನಲ್ಲಿ ಸ್ನಾನವನ್ನು ಮಾಡುವುದರಿಂದ ಕ್ಷಣದಲ್ಲಿಯೇ ನಾಶವನ್ನು ಹೊಂದುವುವು.

೭೮. ಕಾಮೇಶ್ವರನನ್ನು ಭಕ್ತಿಯಿಂದ ಸೇವಿಸಲು ಸಮಸ್ತ ಕಾಮಗಳೂ ಸಮೃದ್ಧಫಲವನ್ನು ಹೊಂದುವುವು. ಇಂತೆಂದು ಅನೇಕ ವರಗಳನ್ನಿತ್ತು ಮಹಾದೇವನು ಆ ಲಿಂಗದಲ್ಲಿಯೇ ಅಂತರ್ಧಾನವಾದನು.

೭೯—೮೦. ಸ್ಕಂದನು ಹೇಳುತ್ತಾನೆ:—ಆ ಲಿಂಗದ ಆರಾಧನೆಯಿಂದ

ತಸ್ಮಾತ್ಸರ್ವಪ್ರಯತ್ನೇನ ಕಾಶ್ಯಾಂ ಕಾಮೇಶ್ವರಃ ಸದಾ ।
ಪೂಜನೀಯಃ ಪ್ರಯತ್ನೇನ ಮಹಾಕಾಮಾಭಿಲಾಷುಕೈಃ ।
ಕಾಮಕುಂಡಕೃತಸ್ನಾನೈರ್ಮಹಾಪಾತಕಶಾಂತಯೇ ॥ ೮೦ ॥
ಇದಂ ಕಾಮೇಶ್ವರಾಖ್ಯಾನಂ ಯಃ ಪಠಿಷ್ಯಂತಿ ಪುಣ್ಯವಾನ್ ।
ಯಃ ಶ್ರೋಷ್ಯತಿ ಚ ಮೇಧಾವೀ ತೌ ನಿಷ್ಪಾಪೌ ಭವಿಷ್ಯತಃ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದುರ್ವಾಸಸೋ ವರಪ್ರದಾನಂ – ಕಾಮೇಶ್ವರಾವಿರ್ಭಾವವರ್ಣನಂ"ನಾಮ ಪಂಚಾಶೀತಿತಮೋಽಧ್ಯಾಯಃ

---

ದೂರ್ವಾಸಮುನಿಯು ಬಹುವಿಧಗಳಾದ ಇಷ್ಟಾರ್ಥಗಳನ್ನು ಪಡೆದನು. ಆದುದರಿಂದ ಮಹಾಭಿಲಾಷೆಗಳನ್ನು ಪಡೆಯಲಪೇಕ್ಷಿಸುವವರು, ತಮ್ಮ ಪೂರ್ವಸಂಚಿತಗಳಾದ ಮಹಾಪಾತಕಗಳನ್ನು ಕಳೆದುಕೊಳ್ಳುವುದಕ್ಕಾಗಿ ಕಾಮಕುಂಡದಲ್ಲಿ ಸ್ನಾನವನ್ನು ಮಾಡಿ ಸರ್ವಪ್ರಯತ್ನದಿಂದಲೂ ಯಾವಾಗಲೂ ಕಾಮೇಶ್ವರ ಲಿಂಗವನ್ನು ಪೂಜಿಸಬೇಕು.

೮೧. ಯಾವ ಪುಣ್ಯವಂತನು ಈ ಕಾಮೇಶ್ವರನ ಚರಿತ್ರೆಯನ್ನು ಪಠನ ಮಾಡುವನೊ, ಯಾವ ಪ್ರಾಜ್ಞನು ಶ್ರದ್ಧಾನ್ವಿತನಾಗಿ ಕೇಳುವನೊ, ಅವರಿಬ್ಬರೂ ನಿಷ್ಕಲ್ಮಷರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ದೂರ್ವಾಸವರಪ್ರದಾನ— ಕಾಮೇಶ್ವರಾವಿರ್ಭಾವವರ್ಣನ"ವೆಂಬ ಎಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡಶೀತಿತಮೋಽಧ್ಯಾಯಃ

### ವಿಶ್ವಕರ್ಮೇಶಪ್ರಾದುರ್ಭಾವವರ್ಣನಂ

**ಪಾರ್ವತ್ಯುವಾಚ :—**

**ವಿಶ್ವಕರ್ಮೇಶ್ವರಂ ಲಿಂಗಂ ಯತ್ಕಾಶ್ಯಾಂ ಪ್ರಥಿತಂ ಪರಂ ।**
**ತಸ್ಯ ಲಿಂಗಸ್ಯ ಕಥಯ ದೇವದೇವ ಸಮುದ್ಭವಂ ॥ ೧ ॥**

**ದೇವದೇವ ಉವಾಚ :—**

**ಶೃಣು ದೇವಿ ಪ್ರವಕ್ಷ್ಯಾಮಿ ಕಥಾಂ ಪಾತಕನಾಶಿನೀಂ ।**
**ವಿಶ್ವಕರ್ಮೇಶಲಿಂಗಸ್ಯ ಪ್ರಾದುರ್ಭಾವಂ ಮನೋಹರಂ ॥ ೨ ॥**
**ವಿಶ್ವಕರ್ಮಾಭವತ್ಪೂರ್ವಂ ಬ್ರಹ್ಮಣಸ್ತ್ವಪರಾ ತನುಃ ।**
**ತ್ವಷ್ಟುಃ ಪ್ರಜಾಪತೇಃ ಪುತ್ರೋ ನಿಪುಣಃ ಸರ್ವಕರ್ಮಸು ॥ ೩ ॥**
**ಕೃತೋಪನಯನಃ ಸೋಽಥ ಬಾಲೋ ಗುರುಕುಲೇ ವಸನ್ ।**
**ಚಕಾರ ಗುರುಶುಶ್ರೂಷಾಂ ಭಿಕ್ಷಾನ್ನಕೃತಭೋಜನಃ ॥ ೪ ॥**
**ಏಕದಾ ತದ್ಗುರುಃ ಪ್ರಾಹ ಪ್ರಾವೃಟ್ಕಾಲೇ ಸಮಾಗತೇ ।**
**ಕುರೂಟಜಂ ಮದರ್ಥಂ ತ್ವಂ ಯಥಾ ಪ್ರಾವೃಣ್ನ ಬಾಧತೇ ॥ ೫ ॥**

### ಕನ್ನಡದ ಅನುವಾದ

#### ವಿಶ್ವಕರ್ಮೇಶಪ್ರಾದುರ್ಭಾವವರ್ಣನ

೧. ಪಾರ್ವತಿಯು ಕೇಳುತ್ತಾಳೆ :—ದೇವದೇವನೆ! ಕಾಶೀಕ್ಷೇತ್ರದಲ್ಲಿರುವ ವಿಶ್ವಕರ್ಮೇಶ್ವರವೆಂಬ ಲಿಂಗವು ಅತ್ಯುತ್ತಮವೆಂದು ಕೀರ್ತಿಯನ್ನು ಪಡೆದಿರುವುದಲ್ಲವೆ. ಆ ಲಿಂಗವು ಉದ್ಭವವಾದ ಬಗೆಯನ್ನು ನನಗೆ ಹೇಳುವವನಾಗು.

೨. ಮಹಾದೇವನು ಹೇಳುತ್ತಾನೆ :—ದೇವಿ! ಪಾಪನಾಶಕವೂ, ಶ್ರವಣಮನೋಹರವೂ ಆದ ವಿಶ್ವಕರ್ಮೇಶ್ವರಮಹಾಲಿಂಗದ ಉದ್ಭವವು ಕಾಶಿಯಲ್ಲಿ ಆದುದೆಂತೆಂಬ ಕಥೆಯನ್ನು ಹೇಳುವೆನು, ಕೇಳು.

೩. ಪೂರ್ವದಲ್ಲಿ ತ್ವಷ್ಟೃಪ್ರಜಾಪತಿಯ ಮಗನಾದ ವಿಶ್ವಕರ್ಮನೆಂಬವನು ಸಕಲಕರ್ಮಗಳಲ್ಲಿಯೂ ಮಹಾನಿಪುಣನೆನಿಸಿ ಸೃಷ್ಟಿಕರ್ತನಾದ ಬ್ರಹ್ಮದೇವನಿಗೆ ಎರಡನೆಯ ಶರೀರವೋ ಎಂಬಂತಿದ್ದನು.

೪. ಆತನು ಬಾಲಕನಾಗಿರುವಾಗಲೇ ಉಪನಯನಸಂಸ್ಕಾರವನ್ನು ಹೊಂದಿದವನಾಗಿ ಗುರುಕುಲದಲ್ಲಿಯೇ ವಾಸಮಾಡುತ್ತ ಭಿಕ್ಷಾನ್ನದಿಂದಲೇ ಭೋಜನವನ್ನು ಮಾಡಿಕೊಂಡು ಗುರುಶುಶ್ರೂಷೆಯಲ್ಲಿಯೇ ನಿರತನಾಗಿರುತ್ತಿದ್ದನು.

೫. ಒಮ್ಮೆ ವರ್ಷಾಕಾಲವು ಪ್ರಾಪ್ತವಾಯಿತು. ಆಗ ಗುರುವು ತನ್ನ

ಯತ್ಕದಾಚಿನ್ನ ಭಜ್ಯೇತ ನ ಪುರಾತನತಾಂ ವ್ರಜೇತ್ ।
ಗುರುಪತ್ನ್ಯಾತ್ವಭಿಹಿತೋ ರೇ ತ್ವಾಷ್ಟ್ರ ಕುರು ಕಂಚುಕಂ ॥ ೬ ॥
ಮಮಾಂಗಯೋಗ್ಯಂ ನೋ ಗಾಢಂ ನಶ್ಲಥಂ ಚ ಪ್ರಯತ್ನತಃ ।
ವಿನೈವ ವಾಸಸಾ ಚಾರು ವಾಲ್ಕಲಂ ಚ ಸದೋಜ್ಜ್ವಲಂ ॥ ೭ ॥
ಗುರುಪುತ್ರೇಣ ಚಾಜ್ಞಪ್ತೋ ಮಮಾರ್ಥಂ ಪಾದುಕೇ ಕುರು ।
ಯದಾರೂಢಸ್ಯ ಮೇ ಪಾದೌ ನ ಪಂಕಃ ಸಂಸ್ಪೃಶೇ ಕ್ವಚಿತ್ ॥ ೮ ॥
ಚರ್ಮಾದಿಬಂಧನಿರ್ಮುಕ್ತೇ ಧಾವತೋ ಮೇ ಸುಖಪ್ರದೇ ।
ಯಾಭ್ಯಾಂ ಚ ಸಂಚರೇ ವಾರಿಸ್ಥಲೇ ಧೂಮಾಮಿವ ದ್ರುತಂ ॥ ೯ ॥
ಗುರುಕನ್ಯಾಪಿ ತಂ ಪ್ರಾಹ ತ್ವಾಷ್ಟ್ರ ಮೇ ಶ್ರವಣೋಚಿತೇ ।
ಭೂಷಣೇ ಸ್ವೇನ ಹಸ್ತೇನ ಕುರು ಕಾಂಚನನಿರ್ಮಿತೇ ॥ ೧೦ ॥
ಕುಮಾರೀ ಕ್ರೀಡನೀಯಾನಿ ಕೌತುಕಾನಿ ಚ ದೇಹಿ ಮೇ ।
ದಂತಿದಂತಮಯಾನ್ಯೇವ ಸ್ವಹಸ್ತರಚಿತಾನಿ ಚ ॥ ೧೧ ॥

ಶಿಷ್ಯನನ್ನು ಕುರಿತು, "ನನಗಾಗಿ ನೀನು ಮಳೆಯು ಭಾಧಿಸದಿರುವಂತಹ ಉತ್ತಮವಾದ ಪರ್ಣಶಾಲೆಯೊಂದನ್ನು ನಿರ್ಮಿಸು.

೬. ಅದು ಎಂದಿಗೂ ಶಿಥಿಲವಾಗಬಾರದು. ಹಳೆಯದೆನಿಸಬಾರದು" ಎಂದು ಆಜ್ಞೆಮಾಡಿದನು. ಗುರುಪತ್ನಿಯು ಅವನನ್ನು ಕುರಿತು ಇಂತೆಂದಳು. "ತ್ವಷ್ಟೃಪುತ್ರನೆ! ನನಗೊಂದು ಕುಪ್ಪಸವನ್ನು ಅಣಿಮಾಡಿಕೊಡು.

೭. ಅದನ್ನು ಪ್ರಯತ್ನಪೂರ್ವಕವಾಗಿ ನನ್ನ ದೇಹಕ್ಕೆ ಸರಿಯಾಗಿರುವಂತೆ ಮಾಡಬೇಕು. ಬಿಗಿಯಾಗಿಯೂ ಇರಬಾರದು. ಸಡಿಲವಾಗಿಯೂ ಇರಬಾರದು. ಹತ್ತಿಯ ಬಟ್ಟೆಯದಾಗದು. ನಾರಿನಿಂದ ಮಾಡಲ್ಪಟ್ಟು ಯಾವಾಗಲೂ ಹೊಸದಾಗಿ ಮಿರುಗುತ್ತಿರಬೇಕು."

೮. ಗುರುಪುತ್ರನು ಆಜ್ಞೆಮಾಡಿದನು. "ನನಗೆ ಎರಡು ಪಾದುಕೆಗಳನ್ನು ಮಾಡಿಕೊಡು. ಅವುಗಳನ್ನು ಹಾಕಿಕೊಂಡರೆ ನನ್ನ ಕಾಲುಗಳಿಗೆಂದಿಗೂ ಕೆಸರು ಅಂಟಿಕೊಳ್ಳಬಾರದು.

೯. ಅವು ಚರ್ಮದಿಂದ ಹೊಲಿಯಲ್ಪಟ್ಟುವುಗಳಾಗಿ ನಾನು ಓಡುತ್ತಿದ್ದರೂ ನನಗೆ ಸುಖವನ್ನುಂಟುಮಾಡುತ್ತಿರುವುಗಳಾಗಬೇಕು. ಅವುಗಳನ್ನು ಧರಿಸುವುದರಿಂದ ನೀರಿನ ಮೇಲೆಯೂ ಸಹ ನೆಲದಮೇಲೆ ನಡೆದಂತೆಯೇ ವೇಗವಾಗಿ ಸಂಚರಿಸುವುದಕ್ಕೆ ಸಹಾಯವಾಗಬೇಕು."

೧೦. ಬಳಿಕ ಗುರುಪುತ್ರಿಯೂ ಅವನಿಗೆ ಹೇಳಿದಳು. "ವಿಶ್ವಕರ್ಮ! ನನ್ನ ಕಿವಿಗಳಿಗೆ ಅಂದವಾಗಿರುವ ಎರಡು ಕಿವಿಯೋಲೆಗಳನ್ನು ಚಿನ್ನದಿಂದ ನಿನ್ನ ಕೈಯಿಂದಲೇ ಮಾಡಿಕೊಡುವವನಾಗು.

೧೧. ಕೌತುಕಪ್ರದಗಳೂ ಆನೆಯ ದಂತದಿಂದ ಮಾಡಿದವುಗಳೂ ಆದ

ಗೃಹೋಪಕರಣಂ ದ್ರವ್ಯಂ ಮುಸಲೋಲೂಖಲಾದಿಕಂ ।
ತಥಾ ಘಟಯ ಮೇಧಾವಿನ್ಯಥಾ ತ್ರುಟ್ಯತಿ ನ ಕ್ವಚಿತ್ ॥ ೧೨ ॥
ಅಕ್ಷಾಲಿತಾನ್ಯಪಿ ಯಥಾ ನಿತ್ಯಂ ಪೀಠಾನಿ ಸತ್ತಮ ।
ಉಜ್ಜ್ವಲಾನಿ ಭವಂತ್ಯೇವ ಸ್ಥಾಲಿಕಾಶ್ಚ ತಥಾ ಕುರು ॥ ೧೩ ॥
ಸೂಪಕರ್ಮಾಣ್ಯಪಿ ಚ ಮಾಂ ಪ್ರಶಾಧಿ ತ್ವಷ್ಟೃನಂದನ ।
ಯಥಾಂಗುಲ್ಯೋ ನ ದಹ್ಯಂತೇ ಪಾಕಃ ಸ್ಯಾಚ್ಚ ಯಥಾ ಶುಭಃ ॥ ೧೪ ॥
ಏಕಸ್ತಂಭಮಯಂ ದೇಹಮೇಕದಾರುವಿನಿರ್ಮಿತಂ ।
ತಥಾ ಕುರು ವರಂ ತ್ವಾಷ್ಟ್ರ ಯತ್ರೇಚ್ಛಾ ತತ್ರ ಧಾರಯೇ ॥ ೧೫ ॥
ಯೇ ಸಹಾಧ್ಯಾಯಿನೋಽಸ್ಯಸ್ಯ ವಯೋ ಜ್ಯೇಷ್ಠಾಶ್ಚ ತೇಽಪಿ ಹಿ ।
ಸರ್ವೇ ಸರ್ವಂ ಸಮೀಹಂತೇ ಕರ್ಮ ತತ್ಕೃತಮೇವ ಹಿ ॥ ೧೬ ॥
ತಥೇತಿ ಸ ಪ್ರತಿಜ್ಞಾಯ ಸರ್ವೇಷಾಂ ಪುರತೋಽದ್ರಿಜೇ ।
ಮಧ್ಯೇವನಂ ಪ್ರಾವಿಶಚ್ಚ ಮಹಾಚಿಂತಾಭಯಾರ್ದಿತಃ ॥ ೧೭ ॥

---

ಹೆಣ್ಣುಮಕ್ಕಳ ಆಟದ ಪದಾರ್ಥಗಳನ್ನೂ ನಿನ್ನ ಕೈಗಳಿಂದಲೇ ನನಗೆ ಮಾಡಿ ಕೊಡು.

೧೨. ಎಲೈ ಬುದ್ಧಿಶಾಲಿಯೆ! ಅಲ್ಲದೆ, ಎಂದೆಂದಿಗೂ ಮುರಿದುಹೋಗದಿರುವಂತಹ ಒನಕೆ, ಒರಳುಕಲ್ಲು ಮುಂತಾದ ಗೃಹೋಪಕರಣಗಳೆಲ್ಲವನ್ನೂ ನನಗಾಗಿ ಮಾಡು.

೧೩. ಉತ್ತಮನೆ! ನಿತ್ಯವೂ ಉಜ್ಜಿ ತೊಳೆಯದಿದ್ದರೂ ಯಾವಾಗಲೂ ಉಜ್ಜ್ವಲಗಳಾಗಿಯೆ ಕಾಣುತ್ತಿರುವ ಪೀಠಗಳನ್ನೂ ಅಡಿಗೆಯ ಪಾತ್ರೆಗಳನ್ನೂ ನನಗೆ ಒದಗಿಸಿಕೊಡುವವನಾಗು.

೧೪. ತ್ವಷ್ಟೃನಂದನನೆ! ನನ್ನ ಬೆರಳುಗಳು ಸುಡದಂತೆಯೂ, ಅಡಿಗೆಯ ರುಚಿಯು ಕೆಟ್ಟುಹೋಗದಿರುವಂತೆಯೂ, ಹೇಗೆ ಅಡಿಗೆಯ ಕೆಲಸವನ್ನು ಮಾಡಬೇಕೆಂಬುದನ್ನೂ ನನಗೆ ಚೆನ್ನಾಗಿ ಕಲಿಸಿಕೊಡು.

೧೫. ಒಂದೇ ಕಂಭದ ಆಧಾರದಮೇಲೆ ನಿಂತಿರುವುದೂ, ಒಂದೇ ಮರದಿಂದ ನಿರ್ಮಿತವಾದುದೂ ಆದ ಉತ್ತಮವಾದ ಮನೆಯೊಂದನ್ನು ನನಗೆ ಕಟ್ಟಿಕೊಡು. ಅದನ್ನು ನಾನು ಇಷ್ಟಬಂದಲ್ಲಿ ತೆಗೆದುಕೊಂಡು ಹೋಗುವಂತಿರಬೇಕು.

೧೬. ನಿನ್ನ ಸಹಪಾಠಿಗಳೆಲ್ಲರೂ ವಯಸ್ಸಿನಲ್ಲಿ ನಿನಗೆ ದೊಡ್ಡವರಾಗಿರುವುದು ನಿಜ. ಆದರೆ ಅವರೆಲ್ಲರೂ ಸಹ ಎಲ್ಲ ಕೆಲಸಗಳನ್ನೂ ನಿನ್ನ ಕೈಯಿಂದಲೇ ಮಾಡಿಸಬೇಕೆಂಬ ಕುತೂಹಲವುಳ್ಳವರಾಗಿರುವರು.''

೧೭. ಎಲೌ ಪಾರ್ವತಿಯೆ! ಹಾಗೆಯೇ ಆಗಲೆಂದು ಅವರೆಲ್ಲರ

ಕಿಂಚಿತ್ಕರ್ತುಂ ನ ಜಾನಾತಿ ಪ್ರತಿಜ್ಞಾತಂ ಚ ತೇನ ವೈ ।
ಸರ್ವೇಷಾಂ ಪುರತಃ ಸರ್ವಂ ಕರಿಷ್ಯಾಮೀತಿ ನಿಶ್ಚಿತಂ ॥ ೧೮ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕೋ ಮೇ ಸಾಹಾಯ್ಯಮರ್ಪಯೇತ್ ।
ಬುದ್ಧೇರಪಿ ವನಸ್ಥಸ್ಯ ಶರಣಂ ಕಂ ವ್ರಜಾಮಿ ಚ ॥ ೧೯ ॥
ಅಂಗೀಕೃತ್ಯ ಗುರೋರ್ವಾಕ್ಯಂ ಗುರುಪತ್ನ್ಯಾ ಗುರೋಃ ಶಿಶೋಃ ।
ಯೋ ನ ನಿಷ್ಪಾದಯೇನ್ಮೂಢಃ ಸ ಭವೇನ್ನಿರಯೀ ನರಃ ॥ ೨೦ ॥
ಗುರುಶುಶ್ರೂಷಣಂ ಧರ್ಮ ಏಕೋ ಹಿ ಬ್ರಹ್ಮಚಾರಿಣಾಂ ।
ಅನಿಷ್ಪಾದ್ಯ ತು ತದ್ವಾಕ್ಯಂ ಕಥಂ ಮೇ ನಿಷ್ಕೃತಿರ್ಭವೇತ್ ॥ ೨೧ ॥
ಗುರೂಣಾಂ ವಾಕ್ಯಕರಣಾತ್ಸರ್ವ ಏವ ಮನೋರಥಾಃ ।
ಸಿದ್ಧ್ಯಂತೀತರಥಾ ನೈವ ತಸ್ಮಾತ್ಕಾರ್ಯಂ ಹಿ ತದ್ವಚಃ ॥ ೨೨ ॥
ಕಥಂ ತದ್ವಚಸಃ ಸಿದ್ಧಿಂ ಪ್ರಾಪ್ಸ್ಯಾಮ್ಯತ್ರ ವನೇ ಸ್ಥಿತಃ ।
ಕಶ್ಚ ಮೇಽತ್ರ ಸಹಾಯೀ ಸ್ಯಾದ್ಧಿಷಣಾದುರ್ಬಲಸ್ಯ ವೈ ॥ ೨೩ ॥

---

ಮುಂದೆಯೂ ಪ್ರತಿಜ್ಞೆಗಳನ್ನು ಮಾಡಿ ಆ ವಿಶ್ವಕರ್ಮನು ಮಹತ್ತರವಾದ ಚಿಂತೆಯಿಂದಲೂ, ಭಯದಿಂದಲೂ ಪೀಡಿತನಾಗಿ ಅರಣ್ಯಮಧ್ಯವನ್ನು ಪ್ರವೇಶಿಸಿದನು.

೧೮. ಅವನಿಗೆ ಏನುಮಾಡುವುದಕ್ಕೂ ತೋರದು. ಎಲ್ಲರ ಮುಂದೆಯೂ "ಎಲ್ಲವನ್ನೂ ಮಾಡಿಕೊಂಡು ಬರುವೆನು; ಇದು ನಿಶ್ಚಯ" ಎಂಬುದಾಗಿ ಶಪಥವನ್ನು ಮಾತ್ರ ಮಾಡಿ ಹೊರಟದ್ದನು.

೧೯. ಈಗ ಏನು ಮಾಡಲಿ? ಎಲ್ಲಿಗೆ ಹೋಗಲಿ? ಅರಣ್ಯಮಧ್ಯದಲ್ಲಿ ಸಂಚರಿಸುತ್ತಿರುವ ನನ್ನ ಬುದ್ಧಿಗೆ ಸಹಾಯವನ್ನು ಯಾವನು ಮಾಡುವನು? ಇದಕ್ಕಾಗಿ ಯಾರನ್ನು ಶರಣು ಹೋಗಬೇಕು?

೨೦. ಗುರುವಿನ ಆಜ್ಞೆಯನ್ನೂ, ಗುರುಪತ್ನಿಯ ಮಾತನ್ನೂ, ಗುರುಪುತ್ರರ ಬೇಡಿಕೆಗಳನ್ನೂ ಅಂಗೀಕರಿಸಿ ಯಾವ ಮೂಢನು ಕಾರ್ಯವನ್ನು ಸಾಧಿಸುವುದಿಲ್ಲವೋ, ಅವನು ನಿಜವಾಗಿಯೂ ನರಕಭಾಜನನಾಗುವನು.

೨೧. ಬ್ರಹ್ಮಚಾರಿಗಳಿಗೆ ಗುರುಶುಶ್ರೂಷೆಯೊಂದೇ ಪರಮಧರ್ಮವು. ಆತನಿಗೆ ಕೊಟ್ಟ ಮಾತನ್ನುಳಿಸಿಕೊಳ್ಳದಿದ್ದರೆ ನನಗೆ ಮೋಕ್ಷವು ಹೇಗೆ ಉಂಟಾಗುವುದು?

೨೨. ಗುರುಗಳ ವಾಕ್ಯವನ್ನು ಕೇಳಿ ಅದರಂತೆ ನಡೆಯಲು ಶಿಷ್ಯನಿಗೆ ಸಮಸ್ತ ಮನೋರಥಗಳೂ ಸಿದ್ಧಿಸುವುವು. ಇಲ್ಲದಿದ್ದರೆ ಎಂದಿಗೂ ಕೈಗೂಡಲಾರವು. ಆದುದರಿಂದ ಗುರುವಾಕ್ಯವನ್ನು ಆವಶ್ಯಕವಾಗಿ ಪಾಲಿಸಬೇಕು.

೨೩. ಈ ನಿರ್ಜನಾರಣ್ಯದಲ್ಲಿ ನಿಂತಿರುವ ನಾನು ಆತನ ಮಾತನ್ನು ಹೇಗೆ

ಆಸ್ತಾಂ ಗುರುಕಥಾ ದೂರಂ ಯೋಽನ್ಯಸ್ಯಾಪಿ ಲಘೋರಪಿ ।
ಓಮಿತ್ಯುಕ್ತ್ವಾ ನ ಕುರುತೇ ಕಾರ್ಯಂ ಸೋಽಥ ವ್ರಜತ್ಯಧಃ ॥ ೨೪ ॥
ಕಥಮೇತಾನಿ ಕರ್ಮಾಣಿ ಕರಿಷ್ಯೇಽಜ್ಞೋಽಸಹಾಯವಾನ್ ।
ಅಂಗೀಕೃತಾನಿ ತದ್ಭೀತ್ಯಾ ನಮಸ್ತೇ ಭವಿತವ್ಯತೇ ॥ ೨೫ ॥
ಯಾವದಿತ್ಥಂ ಚಿಂತಯತಿ ಸ ತ್ವಾಷ್ಟ್ರೋ ವನಮಧ್ಯಗಃ ।
ತಾವತ್ತದೈವ ಸಂಪ್ರಾಪ್ತಸ್ತೇನೈಕೋಽದರ್ಶಿ ತಾಪಸಃ ॥ ೨೬ ॥
ಅಥ ನತ್ವಾ ಸ ತಂ ಪ್ರಾಹ ವನೇ ದೃಷ್ಟ್ವಾ ತಪಸ್ವಿನಂ ।
ಕೋ ಭವಾನ್ಮಾನಸಂ ಮೇ ಯೋ ನಿತರಾಂ ಸುಖಯತ್ಯಹೋ ॥ ೨೭ ॥
ತ್ವದ್ದರ್ಶನೇನ ಮೇ ಗಾತ್ರಂ ಚಿಂತಾಸಂತಾಪತಾಪಿತಂ ।
ಹಿಮಾನೀಗಾಹನೇನೇವ ಶೀತಲಂ ಭವತಿ ಕ್ಷಣಂ ॥ ೨೮ ॥
ಕಿಂ ತ್ವಂ ಮೇ ಪ್ರಾಕ್ತನಂ ಕರ್ಮ ಪ್ರಾಪ್ತಂ ತಾಪಸರೂಪಧೃಕ್ ।
ಅಥವಾ ಕರುಣಾವಾರ್ಧಿರಾವಿರ್ಭೂತಃ ಶಿವೋ ಭವಾನ್ ॥ ೨೯ ॥

---

ಯಥಾರ್ಥವನ್ನಾಗಿ ಮಾಡಲಿ? ಅತ್ಯಲ್ಪಬುದ್ಧಿಯುಳ್ಳವನಾದ ನನಗೆ ಈ ವಿಷಯದಲ್ಲಿ ಯಾವನು ತಾನೆ ಸಹಾಯವನ್ನು ಮಾಡುವನು?

೨೪. ಗುರುವಿನ ಆಜ್ಞೆಯೆಂಬುದೊಂದೆಡೆಗಿರಲಿ. ಯಾವನು ಬೇರೊಬ್ಬ ಅಲ್ಪಮಾನವನಿಗೇ ಆಗಲಿ, ಮಾತನ್ನು ಕೊಟ್ಟು ಕಾರ್ಯದಲ್ಲಿ ಮಾಡಿತೋರಿಸುವುದಿಲ್ಲವೋ, ಅವನು ನಿಜವಾಗಿಯೂ ಅಧೋಲೋಕಗಳಿಗೆ ಹೋಗುವನು.

೨೫. ಬುದ್ಧಿಹೀನನೂ, ನಿಸ್ಸಹಾಯನೂ ಆದ ನಾನು ಇಷ್ಟು ಕೆಲಸಗಳನ್ನೂ ಹೇಗೆ ಮಾಡಲಿ? ಅಷ್ಟನ್ನೂ ಗುರುಗಳ ಭಯದಿಂದ ಅಂಗೀಕರಿಸಿದೆನಲ್ಲದೆ ಬೇರೆಯಲ್ಲ. ಆಹಾ! ಭವಿತವ್ಯತೆಯೆ! ನಿನಗೆ ನಮಸ್ಕಾರವು.''

೨೬. ಇಂತು ವಿಶ್ವಕರ್ಮನು ಚಿಂತಿಸುತ್ತಿರುವಂತೆಯೇ ವನಮಧ್ಯದಲ್ಲಿ ಆಗ ತಾನೆ ಬಂದವನಂತೆ ತೋರುತ್ತಿರುವ ಒಬ್ಬಾನೊಬ್ಬ ತಪಸ್ವಿಯು ಆತನ ಕಣ್ಣುಗಳಿಗೆ ಬಿದ್ದನು.

೨೭. ವನಮಧ್ಯದಲ್ಲಿ ಆಕಸ್ಮಿಕವಾಗಿ ಇಂತು ದರ್ಶನವನ್ನಿತ್ತ ಆತನಿಗೆ ನಮಸ್ಕಾರವನ್ನುಮಾಡಿ ವಿಶ್ವಕರ್ಮನು ಹೇಳತೊಡಗಿದನು. ''ಮಹಾತ್ಮನೆ! ದರ್ಶನಮಾತ್ರದಿಂದಲೇ ನನ್ನ ಮನಸ್ಸಿಗೆ ಅತ್ಯಂತ ಸುಖವನ್ನುಂಟುಮಾಡುತ್ತಿರುವ ನೀನು ಯಾರು?

೨೮. ನಿನ್ನನ್ನು ನೋಡಿದಮಾತ್ರದಿಂದಲೇ ಚಿಂತಾರೂಪವಾದ ಅಗ್ನಿಯಿಂದ ದಹಿಸಲ್ಪಡುತ್ತಿದ್ದ ನನ್ನ ಶರೀರವೆಲ್ಲವೂ ನಿಮಿಷಮಾತ್ರದಲ್ಲಿಯೇ ಹಿಮೋದಕದಲ್ಲಿ ಸ್ನಾನವನ್ನು ಮಾಡಿದಂತೆ ಶೀತಲವಾಗುತ್ತಿರುವುದು.

೨೯. ನನ್ನ ಪೂರ್ವಕರ್ಮವೇ ತಪಸ್ವಿಯ ವೇಷವನ್ನು ಧರಿಸಿ ನನ್ನನ್ನು

ಯೋಽಸಿ ಸೋಽಸಿ ನಮಸ್ತುಭ್ಯಮುಪದೇಶೇನ ಯುಂಕ್ಷ್ವ ಮಾಂ ।
ಗುರೂಕ್ತಂ ಗುರುಪತ್ನ್ಯುಕ್ತಂ ಗುರ್ವಪತ್ಯೋಕ್ತಮೇವ ಚ ॥ ೩೦ ॥
ಕಥಂ ಕರ್ತುಮಹಂ ಶಕ್ತಃ ಕರ್ಮ ತತ್ರ ದಿಶಾದ್ಭುತಂ ।
ಕುರು ಮೇ ಬುದ್ಧಿಸಾಹಾಯ್ಯಂ ನಿರ್ಜನೇ ಬಂಧುತಾಂ ಗತಃ ॥ ೩೧ ॥
ಇತ್ಯುಕ್ತಸ್ತೇನ ಸ ವನೇ ತಾಪಸೋ ಬ್ರಹ್ಮಚಾರಿಣಾ ।
ಕಾರುಣ್ಯಪೂರ್ಣಹೃದಯೋ ಯಥೋಕ್ತಮುಪದಿಷ್ಟವಾನ್ ॥ ೩೨ ॥
ಯ ಆಪ್ತತ್ವೇನ ಸಂಪೃಷ್ಟೋ ದುರ್ಬುದ್ಧಿಂ ಸಂಪ್ರಯಚ್ಛತಿ ।
ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಂ ॥ ೩೩ ॥

ತಾಪಸ ಉವಾಚ :—

ಬ್ರಹ್ಮಚಾರಿನ್ಶೃಣು ಬ್ರೂಯಾಂ ಕಿಮದ್ಭುತತರಂ ತ್ವಿದಂ ।
ವಿಶ್ವೇಶಾನುಗ್ರಹಾದ್ಬ್ರಹ್ಮಾಪ್ಯಭವತ್ಸೃಷ್ಟಿಕೋವಿದಃ ॥ ೩೪ ॥

---

ದ್ಧರಿಸಲು ಬಂದಿರಬಹುದೆ? ಅಲ್ಲದೆ ನೀನು ಕರುಣಾಸಮುದ್ರನೆನಿಸಿದ ಪರಮೇಶ್ವರನೇ ಆಗಿ ನನ್ನ ಎದುರಿಗೆ ಕಾಣಿಸುತ್ತಿರಬಹುದು.

೩೦-೩೧. ನೀನು ಯಾರೇ ಆಗಿರುವೆಯಾದರೂ ನಿನಗೆ ನಮಸ್ಕಾರವನ್ನು ಮಾಡುತ್ತಿರುವೆನು. ನನಗೆ ನಿನ್ನ ಉಪದೇಶವನ್ನು ಅನುಗ್ರಹಿಸು. ನಾನು ಗುರುಗಳ ಮಾತನ್ನೂ, ಗುರುಪತ್ನಿಯ ಆಜ್ಞೆಯನ್ನೂ, ಗುರುಬಾಲಕಬಾಲಿಕೆಯರ ಬೇಡಿಕೆಗಳನ್ನೂ ಹೇಗೆ ನೆರವೇರಿಸಲು ಶಕ್ತನಾಗುವೆನು? ಇದಕ್ಕಾಗಿ ಮಾಡಬೇಕಾಗಿರುವ ಅದ್ಭುತಕರ್ಮವು ಯಾವುದೆಂಬುದನ್ನು ತಿಳಿಸು. ನನ್ನ ಬುದ್ಧಿಗೆ ಸಹಾಯವನ್ನು ಮಾಡುವವನಾಗು. ನಿರ್ಮಾನುಷವಾದ ಈ ಕಾಡಿನಲ್ಲಿ ನನಗೆ ಬಂಧುವಾಗಿ ಬಂದಿರುವೆ.''

೩೨. ಇಂತೆಂದು ನುಡಿದ ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಅರಣ್ಯಮಧ್ಯದಲ್ಲಿ ಆ ತಾಪಸನು ಅನುಕಂಪದಿಂದ ತುಂಬಿದ ಹೃದಯವುಳ್ಳವನಾಗಿ ಅವನು ಕೇಳಿದ ವಿದ್ಯೆಯನ್ನು ಉಪದೇಶಮಾಡಿದನು.

೩೩. ಯಾವನು ಭಕ್ತಿಯಿಂದ ಬಂದು ಪ್ರಶ್ನೆಮಾಡಿದವನಿಗೆ ವಿಪರೀತ ಬುದ್ಧಿಯನ್ನು ಬೋಧಿಸುವನೊ, ಅವನು ಪಂಚಭೂತಗಳು ಲಯವಾಗುವ ಮಹಾಪ್ರಳಯದವರೆಗೂ ಘೋರವಾದ ನರಕಕ್ಕೆ ಹೋಗುವನು.

೩೪. ತಪಸ್ವಿಯು ಹೇಳುತ್ತಾನೆ:—ಎಲೈ ಬ್ರಹ್ಮಚಾರಿಯೆ! ನಾನು ಹೇಳುವುದನ್ನು ಕೇಳು. ನಿನ್ನ ಅಭಿಲಾಷೆಯು ಅದ್ಭುತತರವಾದದ್ದೇನೂ ಅಲ್ಲ. ವಿಶ್ವೇಶ್ವರನ ಅನುಗ್ರಹದ ಬಲದಿಂದಲೇ ಬ್ರಹ್ಮದೇವನೂ ಜಗತ್ಸೃಷ್ಟಿಯಲ್ಲಿ ಕೋವಿದನಾಗಿರುವನು.

**ಆಸ್ತಾಂ ಗುರುಕಥಾ ದೂರಂ ಯೋಽನ್ಯಸ್ಯಾಪಿ ಲಘೋರಪಿ ।**
**ಓಮಿತ್ಯುಕ್ತ್ವಾ ನ ಕುರುತೇ ಕಾರ್ಯಂ ಸೋಽಥ ವ್ರಜತ್ಯಧಃ ॥ ೨೪ ॥**
**ಕಥಮೇತಾನಿ ಕರ್ಮಾಣಿ ಕರಿಷ್ಯೇಽಜ್ಞೋಽಸಹಾಯವಾನ್ ।**
**ಅಂಗೀಕೃತಾನಿ ತದ್ಭೀತ್ಯಾ ನಮಸ್ತೇ ಭವಿತವ್ಯತೇ ॥ ೨೫ ॥**
**ಯಾವದಿತ್ಥಂ ಚಿಂತಯತಿ ಸ ತ್ವಾಷ್ಟ್ರೋ ವನಮಧ್ಯಗಃ ।**
**ತಾವತ್ತದೈವ ಸಂಪ್ರಾಪ್ತಸ್ತೇನೈಕೋಽದರ್ಶಿ ತಾಪಸಃ ॥ ೨೬ ॥**
**ಅಥ ನತ್ವಾ ಸ ತಂ ಪ್ರಾಹ ವನೇ ದೃಷ್ಟ್ವಾ ತಪಸ್ವಿನಂ ।**
**ಕೋ ಭವಾನ್ಮಾನಸಂ ಮೇ ಯೋ ನಿತರಾಂ ಸುಖಯತ್ಯಹೋ ॥ ೨೭ ॥**
**ತ್ವದ್ದರ್ಶನೇನ ಮೇ ಗಾತ್ರಂ ಚಿಂತಾಸಂತಾಪತಾಪಿತಂ ।**
**ಹಿಮಾನೀಗಾಹನೇನೇವ ಶೀತಲಂ ಭವತಿ ಕ್ಷಣಂ ॥ ೨೮ ॥**
**ಕಿಂ ತ್ವಂ ಮೇ ಪ್ರಾಕ್ತನಂ ಕರ್ಮ ಪ್ರಾಪ್ತಂ ತಾಪಸರೂಪಧೃಕ್ ।**
**ಅಥವಾ ಕರುಣಾವಾರ್ಧಿರಾವಿರ್ಭೂತಃ ಶಿವೋ ಭವಾನ್ ॥ ೨೯ ॥**

---

ಯಥಾರ್ಥವನ್ನಾಗಿ ಮಾಡಲಿ? ಅತ್ಯಲ್ಪಬುದ್ಧಿಯುಳ್ಳವನಾದ ನನಗೆ ಈ ವಿಷಯದಲ್ಲಿ ಯಾವನು ತಾನೆ ಸಹಾಯವನ್ನು ಮಾಡುವನು?

೨೪. ಗುರುವಿನ ಆಜ್ಞೆಯೆಂಬುದೊಂದೆಡೆಗಿರಲಿ. ಯಾವನು ಬೇರೊಬ್ಬ ಅಲ್ಪಮಾನವನಿಗೇ ಆಗಲಿ, ಮಾತನ್ನು ಕೊಟ್ಟು ಕಾರ್ಯದಲ್ಲಿ ಮಾಡಿತೋರಿಸುವುದಿಲ್ಲವೊ, ಅವನು ನಿಜವಾಗಿಯೂ ಅಧೋಲೋಕಗಳಿಗೆ ಹೋಗುವನು.

೨೫. ಬುದ್ಧಿಹೀನನೂ, ನಿಸ್ಸಹಾಯನೂ ಆದ ನಾನು ಇಷ್ಟು ಕೆಲಸಗಳನ್ನೂ ಹೇಗೆ ಮಾಡಲಿ? ಅಷ್ಟನ್ನೂ ಗುರುಗಳ ಭಯದಿಂದ ಅಂಗೀಕರಿಸಿದೆನಲ್ಲದೆ ಬೇರೆಯಲ್ಲ. ಆಹಾ! ಭವಿತವ್ಯತೆಯೆ! ನಿನಗೆ ನಮಸ್ಕಾರವು.''

೨೬. ಇಂತು ವಿಶ್ವಕರ್ಮನು ಚಿಂತಿಸುತ್ತಿರುವಂತೆಯೇ ವನಮಧ್ಯದಲ್ಲಿ ಆಗ ತಾನೆ ಬಂದವನಂತೆ ತೋರುತ್ತಿರುವ ಒಬ್ಬಾನೊಬ್ಬ ತಪಸ್ವಿಯು ಆತನ ಕಣ್ಣುಗಳಿಗೆ ಬಿದ್ದನು.

೨೭. ವನಮಧ್ಯದಲ್ಲಿ ಆಕಸ್ಮಿಕವಾಗಿ ಇಂತು ದರ್ಶನವನ್ನಿತ್ತ ಆತನಿಗೆ ನಮಸ್ಕಾರವನ್ನುಮಾಡಿ ವಿಶ್ವಕರ್ಮನು ಹೇಳತೊಡಗಿದನು. ''ಮಹಾತ್ಮನೆ! ದರ್ಶನಮಾತ್ರದಿಂದಲೇ ನನ್ನ ಮನಸ್ಸಿಗೆ ಅತ್ಯಂತ ಸುಖವನ್ನುಂಟುಮಾಡುತ್ತಿರುವ ನೀನು ಯಾರು?

೨೮. ನಿನ್ನನ್ನು ನೋಡಿದಮಾತ್ರದಿಂದಲೇ ಚಿಂತಾರೂಪವಾದ ಅಗ್ನಿಯಿಂದ ದಹಿಸಲ್ಪಡುತ್ತಿದ್ದ ನನ್ನ ಶರೀರವೆಲ್ಲವೂ ನಿಮಿಷಮಾತ್ರದಲ್ಲಿಯೇ ಹಿಮೋದಕದಲ್ಲಿ ಸ್ನಾನವನ್ನು ಮಾಡಿದಂತೆ ಶೀತಲವಾಗುತ್ತಿರುವುದು.

೨೯. ನನ್ನ ಪೂರ್ವಕರ್ಮವೇ ತಪಸ್ವಿಯ ವೇಷವನ್ನು ಧರಿಸಿ ನನ್ನನ್ನು

ಯೋಽಸಿ ಸೋಽಸಿ ನಮಸ್ತುಭ್ಯಮುಪದೇಶೇನ ಯುಂಕ್ಷ್ವ ಮಾಂ ।
ಗುರೂಕ್ತಂ ಗುರುಪತ್ನ್ಯುಕ್ತಂ ಗುರ್ವಪತ್ಯೋಕ್ತಮೇವ ಚ ॥ ೩೦ ॥
ಕಥಂ ಕರ್ತುಮಹಂ ಶಕ್ತಃ ಕರ್ಮ ತತ್ರ ದಿಶಾದ್ಭುತಂ ।
ಕುರು ಮೇ ಬುದ್ಧಿಸಾಹಾಯ್ಯಂ ನಿರ್ಜನೇ ಬಂಧುತಾಂ ಗತಃ ॥ ೩೧ ॥
ಇತ್ಯುಕ್ತಸ್ತೇನ ಸ ವನೇ ತಾಪಸೋ ಬ್ರಹ್ಮಚಾರಿಣಾ ।
ಕಾರುಣ್ಯಪೂರ್ಣಹೃದಯೋ ಯಥೋಕ್ತಮುಪದಿಷ್ಟವಾನ್ ॥ ೩೨ ॥
ಯ ಆಪ್ತತ್ವೇನ ಸಂಪೃಷ್ಟೋ ದುರ್ಬುದ್ಧಿಂ ಸಂಪ್ರಯಚ್ಛತಿ ।
ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಂ ॥ ೩೩ ॥

ತಾಪಸ ಉವಾಚ :—

ಬ್ರಹ್ಮಚಾರಿಞ್ಛೃಣು ಬ್ರೂಯಾಂ ಕಿಮದ್ಭುತತರಂ ತ್ವಿದಂ ।
ವಿಶ್ವೇಶಾನುಗ್ರಹಾದ್ಬ್ರಹ್ಮಾಪ್ಯಭವತ್ಸೃಷ್ಟಿಕೋವಿದಃ ॥ ೩೪ ॥

---

ದ್ಧರಿಸಲು ಬಂದಿರಬಹುದೆ? ಅಲ್ಲದೆ ನೀನು ಕರುಣಾಸಮುದ್ರನೆನಿಸಿದ ಪರಮೇಶ್ವರನೇ ಆಗಿ ನನ್ನ ಎದುರಿಗೆ ಕಾಣಿಸುತ್ತಿರಬಹುದು.

೩೦–೩೧. ನೀನು ಯಾರೇ ಆಗಿರುವೆಯಾದರೂ ನಿನಗೆ ನಮಸ್ಕಾರವನ್ನು ಮಾಡುತ್ತಿರುವೆನು. ನನಗೆ ನಿನ್ನ ಉಪದೇಶವನ್ನು ಅನುಗ್ರಹಿಸು. ನಾನು ಗುರುಗಳ ಮಾತನ್ನೂ, ಗುರುಪತ್ನಿಯ ಆಜ್ಞೆಯನ್ನೂ, ಗುರುಬಾಲಕಬಾಲಿಕೆಯರ ಬೇಡಿಕೆಗಳನ್ನೂ ಹೇಗೆ ನೆರವೇರಿಸಲು ಶಕ್ತನಾಗುವೆನು? ಇದಕ್ಕಾಗಿ ಮಾಡಬೇಕಾಗಿರುವ ಅದ್ಭುತಕರ್ಮವು ಯಾವುದೆಂಬುದನ್ನು ತಿಳಿಸು. ನನ್ನ ಬುದ್ಧಿಗೆ ಸಹಾಯವನ್ನು ಮಾಡುವವನಾಗು. ನಿರ್ಮಾನುಷವಾದ ಈ ಕಾಡಿನಲ್ಲಿ ನನಗೆ ಬಂಧುವಾಗಿ ಬಂದಿರುವೆ.''

೩೨. ಇಂತೆಂದು ನುಡಿದ ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಅರಣ್ಯಮಧ್ಯದಲ್ಲಿ ಆ ತಾಪಸನು ಅನುಕಂಪದಿಂದ ತುಂಬಿದ ಹೃದಯವುಳ್ಳವನಾಗಿ ಅವನು ಕೇಳಿದ ವಿದ್ಯೆಯನ್ನು ಉಪದೇಶಮಾಡಿದನು.

೩೩. ಯಾವನು ಭಕ್ತಿಯಿಂದ ಬಂದು ಪ್ರಶ್ನೆಮಾಡಿದವನಿಗೆ ವಿಪರೀತ ಬುದ್ಧಿಯನ್ನು ಬೋಧಿಸುವನೊ, ಅವನು ಪಂಚಭೂತಗಳು ಲಯವಾಗುವ ಮಹಾಪ್ರಳಯದವರೆಗೂ ಘೋರವಾದ ನರಕಕ್ಕೆ ಹೋಗುವನು.

೩೪. ತಪಸ್ವಿಯು ಹೇಳುತ್ತಾನೆ:—ಎಲೈ ಬ್ರಹ್ಮಚಾರಿಯೆ! ನಾನು ಹೇಳುವುದನ್ನು ಕೇಳು. ನಿನ್ನ ಅಭಿಲಾಷೆಯು ಅದ್ಭುತತರವಾದದ್ದೇನೂ ಅಲ್ಲ. ವಿಶ್ವೇಶ್ವರನ ಅನುಗ್ರಹದ ಬಲದಿಂದಲೇ ಬ್ರಹ್ಮದೇವನೂ ಜಗತ್ಸೃಷ್ಟಿಯಲ್ಲಿ ಕೋವಿದನಾಗಿರುವನು.

ಯದಿ ತ್ವಂ ತ್ವಾಷ್ಟ ಸರ್ವಜ್ಞಂ ಕಾಶ್ಯಾಮಾರಾಧಯಿಷ್ಯಸಿ ।
ತತಸ್ತೇ ವಿಶ್ವಕರ್ಮೇತಿ ನಾಮ ಸತ್ಯಂ ಭವಿಷ್ಯತಿ ॥ ೩೫ ॥
ವಿಶ್ವೇಶಾನುಗ್ರಹಾತ್ಕಾಶ್ಯಾಮಭಿಲಾಷಾ ನ ದುರ್ಲಭಾಃ ।
ಸುಲಭೋ ದುರ್ಲಭೋ ವೈ ಯದ್ಯತ್ರ ಮೋಕ್ಷಸ್ತನುತ್ಯಜಾಂ ॥ ೩೬ ॥
ಸೃಷ್ಟೇಃ ಕರಣಸಾಮರ್ಥ್ಯಂ ಸೃಷ್ಟಿರಕ್ಷಾಪ್ರವೀಣತಾ ।
ವಿಧಿನಾ ವಿಷ್ಣುನಾ ಪ್ರಾಪಿ ವಿಶ್ವೇಶಾನುಗ್ರಹಾತ್ಪರಾತ್ ॥ ೩೭ ॥
ಯಾಹಿ ವೈಶ್ವೇಶ್ವರಂ ಸದ್ಮ ಪದ್ಮಯಾ ಸಮಧಿಷ್ಠಿತಂ ।
ನಿರ್ವಾಣಸಂಜ್ಞಯಾ ಬಾಲ ಯದೀಚ್ಛೇಃ ಸ್ವಾನ್ಮನೋರಥಾನ್ ॥ ೩೮ ॥
ಸ ಹಿ ಸರ್ವಪ್ರದಃ ಶಂಭುರ್ಯಾಚಿತಶ್ಚೋಪಮನ್ಯುನಾ ।
ಪಯೋಮಾತ್ರಂ ದದೌ ತಸ್ಮೈ ಸರ್ವಂ ಕ್ಷೀರಾಬ್ಧಿಮೇವ ಚ ॥ ೩೯ ॥
ಆನಂದಕಾನನೇ ಶಂಭೋಃ ಕಿಂ ಕಿಂ ಕೇನ ನ ಲಭ್ಯತೇ ।
ಯತ್ರ ವಾಸಕೃತಾಂ ಪುಂಸಾಂ ಧರ್ಮರಾಶಿಃ ಪದೇ ಪದೇ ॥ ೪೦ ॥

---

೩೫. ವಿಶ್ವಕರ್ಮನೆ! ಕಾಶಿಯಲ್ಲಿ ನೆಲಸಿರುವ ಸರ್ವಜ್ಞನಾದ ಆತನನ್ನು ನೀನು ಪೂಜೆಮಾಡುವೆಯಾದರೆ ವಿಶ್ವಕರ್ಮನೆಂಬ ನಿನ್ನ ಹೆಸರು ನಿಜವಾಗಿಯೂ ಸಾರ್ಥಕವಾಗುವುದು. ಸಂದೇಹವಿಲ್ಲ.

೩೬. ವಿಶ್ವೇಶ್ವರನ ಅನುಗ್ರಹದಿಂದ ಕಾಶಿಯಲ್ಲಿ ಯಾವ ಅಭಿಲಾಷೆಗಳೂ ದುರ್ಲಭಗಳಾಗುವುದಿಲ್ಲ. ದೇಹತ್ಯಾಗಮಾತ್ರದಿಂದಲೇ ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವ ಆ ಕ್ಷೇತ್ರದಲ್ಲಿ ದುಸ್ಸಾಧ್ಯವಾದುದೂ ಸಹ ಸುಲಭವಾಗುವುದು.

೩೭. ಅತ್ಯುತ್ತಮವಾದ ಈ ವಿಶ್ವೇಶ್ವರಾನುಗ್ರಹದಿಂದಲೇ ಬ್ರಹ್ಮನಲ್ಲಿ ಸೃಷ್ಟಿಯನ್ನು ಮಾಡುವ ಸಾಮರ್ಥ್ಯವೂ, ವಿಷ್ಣುವಿನಲ್ಲಿ ಜಗತ್ತನ್ನು ಪಾಲನೆ ಮಾಡುವ ಶಕ್ತಿಯೂ ನೆಲಗೊಂಡಿರುವುವು.

೩೮. ಅಯ್ಯಾ ಬಾಲಕನೆ! ನಿನ್ನ ಮನೋರಥಗಳು ಕೈಗೂಡಬೇಕೆಂಬ ಇಚ್ಛೆಯಿದ್ದರೆ ಮೋಕ್ಷಲಕ್ಷ್ಮಿಯಿಂದ ಅಧಿಷ್ಠಿತವಾದುದೂ, ವಿಶ್ವೇಶ್ವರನಿಗೆ ಪ್ರಿಯಾವಾಸವಾದುದೂ ಆದ ಕಾಶೀಕ್ಷೇತ್ರಕ್ಕೆ ಹೋಗು.

೩೯. ಆ ಮಹೇಶ್ವರನೇ ಸರ್ವಾಭೀಷ್ಟಫಲಪ್ರದನು. ಆ ಸ್ವಾಮಿಯು ಕುಡಿಯಲು ಹಾಲನ್ನು ಕೇಳಿದ ಮಾತ್ರಕ್ಕೇ ಉಪಮನ್ಯುವಿಗೆ ಸಮಸ್ತ ಕ್ಷೀರ ಸಮುದ್ರವನ್ನೂ ಅನುಗ್ರಹಮಾಡಿ ಕೊಟ್ಟನಲ್ಲವೆ.

೪೦. ಆನಂದಕಾನನವು ಆ ಪರಮೇಶ್ವರನಿಗೆ ಪ್ರಿಯವು. ಅಲ್ಲಿ ಯಾವನಿಗೇ ಆಗಲಿ ಯಾವ ಇಷ್ಟಾರ್ಥಗಳು ತಾನೆ ಲಭಿಸುವುದಿಲ್ಲ? ಅಲ್ಲಿ ವಾಸಮಾಡುವ ಮಾನವರಿಗೆ ಅಡಿಗಡಿಗೂ ಧರ್ಮರಾಶಿಯು ಅಭಿವೃದ್ಧಿಯನ್ನು ಪಡೆಯುತ್ತಿರುವುದು.

ಸ್ವರ್ಧುನೀಸ್ಪರ್ಶಮಾತ್ರೇಣ ಮಹಾಪಾತಕಸಂತತಿಃ ।
ಯತ್ರ ಸಂಕ್ಷಯತಿ ಕ್ಷಿಪ್ರಂ ತಾಂ ಕಾಶೀಂ ಕೋ ನ ಸಂಶ್ರಯೇತ್ ॥ ೪೧ ॥
ನ ತಾದೃಗ್ಧರ್ಮಸಂಭಾರೋ ಲಭ್ಯತೇ ಕ್ರತುಕೋಟಿಭಿಃ ।
ಯಾದೃಗ್ವಾರಾಣಸೀವೀಥೀಸಂಚಾರೇಣ ಪದೇ ಪದೇ ॥ ೪೨ ॥
ಧರ್ಮಾರ್ಥಕಾಮಮೋಕ್ಷಾಣಾಂ ಯದ್ಯತ್ರಾಸ್ತಿ ಮನೋರಥಃ ।
ತದಾ ವಾರಾಣಸೀಂ ಯಾಹಿ ಯಾ ಹಿ ತ್ರೈಲೋಕ್ಯಪಾವನೀ ॥ ೪೩ ॥
ಸರ್ವಕಾಮಫಲಪ್ರಾಪ್ತಿಸ್ತದೈವ ಸ್ಯಾದ್ಧ್ರುವಂ ನೃಣಾಂ ।
ಯದೈವ ಸರ್ವದಃ ಸರ್ವಃ ಕಾಶ್ಯಾಂ ವಿಶ್ವೇಶ್ವರಃ ಶ್ರಿತಃ ॥ ೪೪ ॥
ಸ ತಾಪಸೋಕ್ತಿಮಾಕರ್ಣ್ಯ ತ್ವಾಷ್ಟ್ರ ಇತ್ಥಂ ಸುಹೃಷ್ಟವಾನ್ ।
ಕಾಶೀಸಂಪ್ರಾಪ್ತ್ಯುಪಾಯಂ ಚ ತಮೇವ ಸಮಪೃಚ್ಛತ ॥ ೪೫ ॥

ತ್ವಾಷ್ಟ್ರ ಉವಾಚ:—

ತದಾನಂದವನಂ ಶಂಭೋಃ ಕ್ವಾಸ್ತಿ ತಾಪಸಸತ್ತಮ ।
ಯತ್ರ ನೋ ದುರ್ಲಭಂ ಕಿಂಚಿತ್ಸಾಧಕಾನಾಂ ತ್ರಯೀಸ್ಥಿತಂ ॥ ೪೬ ॥

---

೪೧. ಗಂಗೆಯ ಜಲವನ್ನು ಸ್ಪರ್ಶಿಸುವ ಮಾತ್ರದಿಂದಲೇ ಮಹಾಪಾತಕ ಸಮೂಹಗಳೂ ಕ್ಷಿಪ್ರವಾಗಿಯೇ ಕ್ಷಯವನ್ನು ಹೊಂದುವುವು. ಅಂತಹ ಕಾಶೀ ಕ್ಷೇತ್ರವನ್ನು ಯಾವನು ತಾನೆ ಆಶ್ರಯಿಸುವುದಿಲ್ಲ?

೪೨. ವಾರಾಣಸೀಕ್ಷೇತ್ರದ ಬೀದಿಗಳಲ್ಲಿ ಓಡಾಡಲು ಹೆಜ್ಜೆಹೆಜ್ಜೆಗೂ ಯಾವ ಧರ್ಮರಾಶಿಯು ಲಭಿಸುವುದೊ, ಅಷ್ಟನ್ನೂ ಇತರ ಸ್ಥಳಗಳಲ್ಲಿ ಒಂದು ಕೋಟಿ ಯಜ್ಞಗಳಿಂದಲೂ ಸಂಪಾದಿಸಲಾಗುವುದಿಲ್ಲ.

೪೩. ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ನಿನಗೆ ಯಾವುದು ಅಪೇಕ್ಷಿತವಾಗಿದ್ದರೂ ಮೂರು ಲೋಕಗಳನ್ನೂ ಪವಿತ್ರಗೊಳಿಸುತ್ತಿರುವ ಕಾಶೀಕ್ಷೇತ್ರಕ್ಕೇ ಪ್ರಯಾಣವನ್ನುಮಾಡು.

೪೪. ಸಕಲಾಭೀಷ್ಟದಾಯಕನೂ, ಸರ್ವಾತ್ಮಕನೂ, ಕಾಶೀನಿವಾಸಿಯೂ ಆದ ವಿಶ್ವೇಶ್ವರನನ್ನು ಮನುಷ್ಯರು ಯಾವಾಗ ಆಶ್ರಯಿಸುವರೊ, ಆಗಲೇ ಖಂಡಿತವಾಗಿಯೂ ಅವರಿಗೆ ಸಮಸ್ತ ಕಾಮಗಳ ಫಲವೂ ಲಭಿಸುವುದು.''

೪೫. ಇಂತೆಂದ ಮಹಾತಪಸ್ವಿಯ ಮಾತನ್ನುಕೇಳಿ ವಿಶ್ವಕರ್ಮನು ಅತ್ಯಂತ ಸಂತೋಷವನ್ನುಹೊಂದಿ ಆತನನ್ನೇ ಕುರಿತು ಕಾಶಿಯನ್ನು ಹೋಗಿ ಸೇರುವುದಕ್ಕೆ ಉಪಾಯವೇನೆಂದು ಪ್ರಶ್ನೆಮಾಡಿದನು.

೪೬. ವಿಶ್ವಕರ್ಮನು ಹೇಳುತ್ತಾನೆ:—''ತಾಪಸೋತ್ತಮನೆ! ಕಾಶೀಕ್ಷೇತ್ರದಲ್ಲಿರುವವರಿಗೆ ಮೂರುಲೋಕಗಳಲ್ಲಿರುವ ಯಾವುದೂ ದುರ್ಲಭವಲ್ಲವೆಂದು ಹೇಳಿದೆಯಲ್ಲವೆ. ಆ ಪರಮೇಶ್ವರನಿಗೆ ವಾಸಸ್ಥಳವಾದ ಆನಂದಕಾನನವು ಎಲ್ಲಿರುವುದು?

ಸ್ವರ್ಗೇ ವಾ ಮರ್ತ್ಯಲೋಕೇ ವಾ ಬಲಿಸದ್ಮನಿ ವಾ ಮುನೇ ।
ಕ್ವ ತದಾನಂದಗಹನಂ ಯತ್ರಾನಂದಪಯೋಽಬ್ಧಿಜಾ ॥ ೪೭ ॥
ಯತ್ರ ವಿಶ್ವೇಶ್ವರೋದೇವೋ ವಿಶ್ವೇಷಾಂ ಕರ್ಣಧಾರಕಃ ।
ವ್ಯಾಚಷ್ಟೇ ತಾರಕಂ ಜ್ಞಾನಂ ಯೇನ ತನ್ಮಯತಾಂ ಯಯುಃ ॥ ೪೮ ॥
ಸುಲಭಾ ಯತ್ರ ನಿಯತಮಾನಂದವನಚಾರಿಣಃ ।
ಅಪಿ ನೈಃಶ್ರೇಯಸೀ ಲಕ್ಷ್ಮೀಃ ಕಿಮನ್ಯೇಽಲ್ಪಮನೋರಥಾಃ ।
ಕಸ್ತಾಂ ಮಾಂ ಪ್ರಾಪಯೇಚ್ಛಂಭೋಃ ಕಥಂ ಯಾಮಿ ತಥಾ ವದ ॥ ೪೯ ॥
ಸ ತಪಸ್ವೀತಿ ತದ್ವಾಕ್ಯಮಾಕರ್ಣ್ಯ ಶ್ರದ್ಧಯಾನ್ವಿತಂ ।
ಪ್ರಾಹ ಗಚ್ಛ ನಯಾಮಿ ತ್ವಾಂ ಯಿಯಾಸುರಹಮಪ್ಯಹೋ ॥ ೫೦ ॥
ದುರ್ಲಭಂ ಪ್ರಾಪ್ಯ ಮಾನುಷ್ಯಂ ಯದಿ ಕಾಶೀ ನ ಸೇವಿತಾ ।
ಪುನಃ ಕ್ವ ನೃತ್ವಂ ಶ್ರೇಯೋಭೂಃ ಕ್ವ ಕಾಶೀ ಕರ್ಮಬಂಧಹೃತ್ ॥ ೫೧ ॥
ವೃಥಾಗತೇ ಹಿ ಮಾನುಷ್ಯೇ ಕಾಶೀಪ್ರಾಪ್ತಿವಿವರ್ಜನಾತ್ ।
ಆಯುಷ್ಯಂ ಚ ಭವಿಷ್ಯಂ ಚ ಸರ್ವಮೇವ ವೃಥಾ ಗತಂ ॥ ೫೨ ॥

---

೪೭. ಮುನಿಯೆ! ಅದು ಸ್ವರ್ಗದಲ್ಲಿರುವುದೊ? ಮರ್ತ್ಯಲೋಕದಲ್ಲಿರುವುದೊ? ಅಥವಾ ಬಲಿಚಕ್ರವರ್ತಿಯ ಪಾತಾಲದಲ್ಲಿರುವುದೊ? ಆನಂದ ಲಕ್ಷ್ಮಿಯು ವಾಸಿಸುತ್ತಿರುವ ಆ ಕ್ಷೇತ್ರವೆಲ್ಲಿರುವುದು?

೪೮. ಅಲ್ಲಿ ಮಹಾದೇವನಾದ ವಿಶ್ವೇಶ್ವರನು ಸಕಲ ಜೀವರನ್ನೂ ಸಂಸಾರ ಸಮುದ್ರದಿಂದ ಕಡೆಹಾಯಿಸುವ ನಾವಿಕನಾಗಿ ತನ್ಮಯತ್ವವನ್ನೇ ಹೊಂದಲು ಕಾರಣವಾದ ತಾರಕಜ್ಞಾನವನ್ನು ಅವರಿಗೆ ಉಪದೇಶಿಸುವನಲ್ಲವೆ.

೪೯. ಆ ಆನಂದವನದಲ್ಲಿ ಸಂಚರಿಸುವವನಿಗೆ ನಿಜವಾಗಿಯೂ ಮೋಕ್ಷ ಲಕ್ಷ್ಮಿಯೂ ಅತಿಸುಲಭವಾಗಿಯೇ ಪ್ರಾಪ್ತಳಾಗುವಳು. ಇನ್ನು ಇತರ ಕ್ಷುದ್ರ ಮನೋರಥಗಳ ವಿಷಯವನ್ನು ಹೇಳಲೇಕೆ? ಪರಮೇಶ್ವರನ ಆ ವಾಸಸ್ಥಳಕ್ಕೆ ನನ್ನನ್ನು ಯಾರು ಕರೆದುಕೊಂಡು ಹೋಗುವರು? ಅಲ್ಲಿಗೆ ಹೋಗಲು ಮಾರ್ಗವು ಯಾವುದೆಂಬುದನ್ನು ನನಗೆ ತಿಳಿಸುವವನಾಗು.''

೫೦. ಇಂತು ಶ್ರದ್ಧಾಸಮನ್ವಿತನಾಗಿ ವಿಶ್ವಕರ್ಮನಾಡಿದ ಮಾತುಗಳನ್ನು ಕೇಳಿ ಆ ತಪಸ್ವಿಯು ''ಈಗಲೇ ಹೊರಡು; ನಿನ್ನನ್ನು ಕರೆದುಕೊಂಡುಹೋಗುವೆನು. ನಾನೂ ಅಲ್ಲಿಗೇ ಹೋಗುತ್ತಿರುವೆನು.

೫೧–೫೨. ದುರ್ಲಭವಾದ ಮನುಷ್ಯಜನ್ಮವನ್ನು ಪಡೆದೂ ಯಾವನು ಕಾಶೀ ಕ್ಷೇತ್ರವನ್ನು ಸೇವಿಸುವುದಿಲ್ಲವೊ, ಅವನಿಗೆ ಪುನಃ ಸಕಲ ಶ್ರೇಯಸ್ಸಿಗೂ ಸಾಧನವಾದ ಮನುಷ್ಯಜನ್ಮವಾಗಲಿ ಕರ್ಮಬಂಧಗಳನ್ನು ಬಿಡಿಸುವ ಕಾಶೀ ಪ್ರಾಪ್ತಿಯಾಗಲಿ ಹೇಗೆ ಲಭಿಸುವುದು? ಕಾಶಿಯನ್ನು ಸೇವಿಸದೆ ಮನುಷ್ಯನು ತನ್ನ ಜನ್ಮ

ಅತೋಽಹಂ ಸಫಲೀಕರ್ತುಂ ಮಾನುಷ್ಯಂ ಚಾತಿಚಂಚಲಂ ।
ಯಾಸ್ಯಾಮಿ ಕಾಶೀಮಾಯಾಹಿ ಮಾಯಾಂ ಹಿತ್ವಾ ತ್ವಮಪ್ಯಹೋ ॥೫೩॥
ಇತಿ ತೇನ ಸಹ ತ್ವಾಷ್ಟ್ರೋ ಮುನಿನಾತಿಕೃಪಾಲುನಾ ।
ಪುರೀಂ ವಿಶ್ವೇಶ್ವರೀಂ ಪ್ರಾಪ್ತೋ ಮನಃಸ್ವಾಸ್ಥ್ಯಮವಾಪ ಚ ॥ ೫೪ ॥
ತತಃ ಪ್ರಾಪಯ್ಯ ತಾಂ ಕಾಶೀಂ ತಾಪಸಃ ಕ್ವಾಪ್ಯತರ್ಕಿತಂ ।
ಜಗಾಮ ಕುಂಭಸಂಭೂತ ಸ ತ್ವಾಷ್ಟ್ರೋಽಪೀತ್ಯಮನ್ಯತ ॥ ೫೫ ॥
ಅವಶ್ಯಂ ಸ ಹಿ ವಿಶ್ವೇಶಃ ಸರ್ವೇಷಾಂ ಚಿಂತಿತಪ್ರದಃ ।
ಸತ್ಪಥಸ್ಥಿರವೃತ್ತೀನಾಂ ದೂರಸ್ಥೋಽಪಿ ಸಮೀಪಗಃ ॥ ೫೬ ॥
ಯಸ್ಮಿನ್ಪ್ರಸನ್ನದೃಕ್ತ್ರ್ಯಕ್ಷಸ್ತಂ ದವಿಷ್ಠಮಪಿ ಧ್ರುವಂ ।
ಸುನೇದಿಷ್ಠಂ ಕರೋತ್ಯೇವ ಸ್ವಯಂ ವರ್ತ್ಮೋಪದೇಶಯನ್ ॥ ೫೭ ॥
ಕ್ವಾಹಂ ತತ್ರ ವನೇ ಬಾಲಶ್ಚಿಂತಾಕುಲಿತಮಾನಸಃ ।
ಕ್ವ ತಾಪಸಃ ಸ ಯೋ ಮಾಂ ವೈ ಸೂಪದಿಶ್ಯೇಹ ಚಾನಯತ್ ॥ ೫೮ ॥

---

ವನ್ನು ವ್ಯರ್ಥವಾಗಿ ಕಳೆದುಕೊಳ್ಳುವವನಾದರೆ ಅವನ ಆಯುಷ್ಯವೂ ಮುಂದಿನ ಸದ್ಗತಿಯೂ ಎಲ್ಲವೂ ವ್ಯರ್ಥವೇ ಆಗುವುದು.

೫೩. ಆದುದರಿಂದ ಕ್ಷಣಭಂಗುರವಾದ ಈ ಮನುಷ್ಯಜನ್ಮವನ್ನು ಸಫಲಗೊಳಿಸುವುದಕ್ಕಾಗಿ ನಾನೂ ಕಾಶಿಗೆ ಹೋಗುತ್ತಿರುವೆನು. ನೀನೂ ಅಭಿಮಾನರೂಪವಾದ ಮಾಯೆಯನ್ನು ತ್ಯಜಿಸಿ ನನ್ನೊಡನೆ ಬಾ.''

೫೪. ಇಂತು ನುಡಿದ ಮಹಾಕೃಪಾಳುವಾದ ಆ ಮುನಿವರ್ಯನೊಡನೆ ವಿಶ್ವಕರ್ಮನು ವಿಶ್ವೇಶ್ವರನ ಪಟ್ಟಣವನ್ನು ಸೇರಿದನು. ಅಲ್ಲಿ ತನ್ನ ಮನಸ್ಸಿನ ಕಾತುರತೆಯನ್ನೂ ಕಳೆದುಕೊಂಡು ಸ್ಥೈರ್ಯವನ್ನು ಹೊಂದಿದನು.

೫೫. ಕುಂಭಸಂಭೂತನೆ! ಇಂತು ಆ ತಾಪಸನು ತ್ವಾಷ್ಟ್ರನನ್ನು ಕಾಶೀಕ್ಷೇತ್ರಕ್ಕೆ ಸೇರಿಸಿ ಎಲ್ಲಿಯೋ ಕಾಣದಂತೆ ಹೊರಟುಹೋದನು. ಬಳಿಕ ಆ ವಿಶ್ವಕರ್ಮನೂ ತನ್ನಲ್ಲಿಯೇ ಇಂತೆಂದು ಯೋಚಿಸತೊಡಗಿದನು.

೫೬. ''ನಿಜವಾಗಿಯೂ ಆ ವಿಶ್ವೇಶ್ವರನೊಬ್ಬನೇ ಸಕಲರಿಗೂ ಅಭೀಷ್ಟಗಳನ್ನು ಕೊಡುವನು. ಸನ್ಮಾರ್ಗದಲ್ಲಿಯೇ ಸ್ಥಿರವಾಗಿ ನಡೆಯುವವರಿಗೆ ಆತನು ದೂರದಲ್ಲಿದ್ದಂತಿದ್ದರೂ ಸಮೀಪದಲ್ಲಿಯೇ ಇರುವನು.

೫೭. ಯಾವನಲ್ಲಿ ತ್ರಿಲೋಚನನು ಪ್ರಸನ್ನದೃಷ್ಟಿಯುಳ್ಳವನಾಗುವನೊ, ಅವನಿಗೆ ಆ ತ್ರಿಲೋಚನನೇ ಸುಲಭಮಾರ್ಗವನ್ನುಪದೇಶಮಾಡಿ ದೂರದಲ್ಲಿರುವುದನ್ನೂ ಅತ್ಯಂತ ಸಮೀಪಗತವನ್ನಾಗಿಯೇ ಮಾಡುವನು.

೫೮. ಅರಣ್ಯಮಧ್ಯದಲ್ಲಿ ಮಹಾಚಿಂತೆಯಿಂದ ವ್ಯಾಕುಲವಾದ ಮನಸ್ಸಿ

**ಲೀಲೋಽಯಮತ್ರ ತ್ರ್ಯಕ್ಷಸ್ಯ ಯಸ್ಯ ಭಕ್ತಸ್ಯ ಕುತ್ರಚಿತ್ ।**
**ನ ದುರ್ಲಭತರಂ ಕಿಂಚಿದಹೋ ಕ್ವಾಹಂ ಕ್ವ ಕಾಶಿಕಾ ॥ ೫೯ ॥**
**ನಾರಾಧಿತೋ ಮಯಾ ಶಂಭುಃ ಪ್ರಾಕ್ತನೇ ಜನ್ಮನಿ ಕ್ವಚಿತ್ ।**
**ಶರೀರಿತ್ವಾನುಮಾನೇನ ಜ್ಞಾತಮೇತದಸಂಶಯಂ ॥ ೬೦ ॥**
**ಅಸ್ಮಿನ್ಜನ್ಮನಿ ಬಾಲತ್ವಾನ್ನ ಚೈವಾರಾಧಿತಃ ಸ್ಫುಟಂ ।**
**ಪ್ರತ್ಯಕ್ಷಮೇವಮೇವೈತತ್ಕುತೋಽನುಗ್ರಹಧೀರ್ಮಯಿ ॥ ೬೧ ॥**
**ಆ ಜ್ಞಾತಂ ಗುರುಭಕ್ತಿರ್ಮೇ ಹೇತುಃ ಶಂಭುಪ್ರಸಾದನೇ ।**
**ಯಯೇಹಾನುಗೃಹೀತೋಽಸ್ಮಿ ವಿಶ್ವೇಶೇನ ಕೃಪಾಲುನಾ ॥ ೬೨ ॥**
**ಅಥವಾ ಕಾರಣಾಪೇಕ್ಷಸ್ತ್ರ್ಯಕ್ಷಸ್ತ್ವಿತರದೇವವತ್ ।**
**ರಂಕಮಪ್ಯನುಗೃಹ್ಣಾತಿ ಕೇವಲಂ ಕಾರಣಂ ಕೃಪಾ ॥ ೬೩ ॥**
**ಯದಿ ನೋ ಮಯ್ಯನುಕ್ರೋಶಃ ಕಥಂ ತಾಪಸಸಂಗತಿಃ ।**
**ತದ್ರೂಪೇಣ ಸ್ವಯಂ ಶಂಭುರಾನಿನಾಯೇಹ ಮಾಂ ಧ್ರುವಂ ॥ ೬೪ ॥**

ಸಿಂದೊಡಗೂಡಿದ ಬಾಲಕನಾದ ನಾನೆಲ್ಲಿ? ಉತ್ತಮವಾದ ಉಪದೇಶವನ್ನಿತ್ತು ನನ್ನನ್ನು ಈ ಕ್ಷೇತ್ರಕ್ಕೆ ಕರೆದುಕೊಂಡುಬಂದಿರುವ ಆ ತಪಸ್ವಿಯೆಲ್ಲಿ?

೫೯–೬೦. ಇದೆಲ್ಲವೂ ಆ ಮಹೇಶ್ವರನ ಲೀಲೆಯೇ ಆಗಿರುವುದು. ಆತನ ಭಕ್ತನಿಗೆ ಎಲ್ಲಿಯೂ ಯಾವುದೂ ದುರ್ಲಭವಾದುದಿಲ್ಲವಷ್ಟೆ. ಆಹಾ! ನಾನೆಲ್ಲಿ? ಉತ್ತಮವಾದ ಕಾಶೀಕ್ಷೇತ್ರವೆಲ್ಲಿ? ಪರಮೇಶ್ವರನೂ ನನ್ನಂತೆಯೇ ದೇಹವುಳ್ಳ ಸಾಮಾನ್ಯಜೀವನೆಂಬ ಅನುಮಾನದಿಂದ ನಾನು ಹಿಂದಿನ ಜನ್ಮದಲ್ಲಿ ಒಮ್ಮೆಯೂ ಆತನ ಪೂಜೆಯನ್ನು ಮಾಡಲಿಲ್ಲ. ಇದೇ ನನ್ನ ನಿಶ್ಚಿತಜ್ಞಾನವು.

೬೧. ಈ ಜನ್ಮದಲ್ಲಿ ಇನ್ನೂ ಬಾಲಕನಾಗಿರುವುದರಿಂದ ಆರಾಧಿಸಲಿಲ್ಲವೆಂಬುದು ಸ್ಪಷ್ಟವಾಗಿಯೇ ಇರುವುದು. ಇದಂತೂ ಪ್ರತ್ಯಕ್ಷವಿಷಯವೇ. ಹಾಗಾದರೂ ಮಹೇಶ್ವರನಿಗೆ ನನ್ನಲ್ಲಿ ಅನುಗ್ರಹವನ್ನುಂಟುಮಾಡುವ ಬುದ್ಧಿಯು ಹೇಗುಂಟಾಯಿತು?

೬೨. ಆಹಾ! ಈಗ ತಿಳಿಯಿತು. ನನ್ನಲ್ಲಿ ಶಂಭುವು ಪ್ರಸನ್ನನಾಗಲು ನನ್ನಲ್ಲಿರುವ ಗುರುಭಕ್ತಿಯೇ ಕಾರಣವಾಗಿರುವುದು. ಅದರಿಂದಲೇ ನಾನು ಕೃಪಾಳುವಾದ ವಿಶ್ವೇಶ್ವರನ ಕೃಪೆಗೆ ಪಾತ್ರನಾಗಿರುವೆನು.

೬೩. ಅಲ್ಲದೆ ವಿಶ್ವೇಶ್ವರನೂ ಇತರ ದೇವತೆಗಳಂತೆಯೇ ಕಾರಣಾಪೇಕ್ಷೆಯಿಂದಲೇ ವರ್ತಿಸುತ್ತಿರುವನು. ಆದರೆ ನೀಚರಲ್ಲಿಯೂ ಅನುಗ್ರಹವನ್ನು ತೋರುತ್ತಿರುವನು. ಅದಕ್ಕೆ ಕಾರಣವೆಂದರೆ ಕೇವಲವಾದ ಅವನ ಕೃಪೆಯೇ ಆಗಿರುವುದು.

೬೪. ನನ್ನಲ್ಲಿ ಅಂತಹ ಅನುಕಂಪವಿಲ್ಲದಿದ್ದರೆ ನನಗೆ ಆ ಮಹಾತಪಸ್ವಿ

ನ ದಾನಾನಿ ನ ವೈ ಯಜ್ಞಾ ನ ತಪಾಂಸಿ ವ್ರತಾನಿ ಚ ।
ಶಂಭೋಃ ಪ್ರಸಾದಹೇತೂನಿ ಕಾರಣಂ ತತ್ಕೃಪೈವ ಹಿ ॥ ೬೫ ॥
ದಯಾಮಪಿ ತದಾ ಕುರ್ಯಾದಸೌ ವಿಶ್ವೇಶ್ವರಃ ಪರಾಮ್ ।
ಯದಾ ಶ್ರುತ್ಯುಕ್ತಮಧ್ವಾನಂ ಸದ್ಭಿಃ ಕ್ಷುಣ್ಣಂ ನ ಸಂತ್ಯಜೇತ್ ॥ ೬೬ ॥
ಅನುಕ್ರೋಶಂ ಸಮುತ್ಪ್ರೇಕ್ಷ್ಯೇತಿ ಸ ತ್ವಾಷ್ಟ್ರಃ ಶಾಂಭವಂ ಶುಚಿಃ ।
ಸಂಸ್ಥಾಪ್ಯ ಲಿಂಗಮೈಶಸ್ಯಾರಾಧಯತ್ಸ್ವಸ್ಥಮಾನಸಃ ॥ ೬೭ ॥
ಆನೀಯ ಪುಷ್ಪಸಂಭಾರಮಾರ್ತವಂ ಕಾನನಾದ್ಬಹು ।
ಸ್ನಾತ್ವಾಭ್ಯರ್ಚಯತೀಶಾನಂ ಕಂದಮೂಲಫಲಾಶನಃ ॥ ೬೮ ॥
ಇತ್ಥಂ ತ್ವಷ್ಟೃತನೂಜಸ್ಯ ಲಿಂಗಾರಾಧನಚೇತಸಃ ।
ತ್ರಿಹಾಯನಾತ್ಪ್ರಸನ್ನೋಽಭೂತ್ತಸ್ಯೇಶಃ ಕರುಣಾನಿಧಿಃ ॥ ೬೯ ॥
ತಸ್ಮಾದೇವ ಹಿ ಲಿಂಗಾಚ್ಚ ಪ್ರಾದುರ್ಭೂಯ ಭವೋಽಬ್ರವೀತ್ ॥ ೭೦ ॥

---

ಯೊಡನೆ ಸಹವಾಸವಾದುದು ಹೇಗೆ? ಖಂಡಿತವಾಗಿಯೂ ಆ ಮುನಿಯ ರೂಪದಿಂದ ಮಹೇಶ್ವರನೇ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿರುವನು.

೬೫. ಮನುಷ್ಯನು ಮಾಡುವ ದಾನಗಳಾಗಲಿ, ಯಜ್ಞಗಳಾಗಲಿ, ತಪಸ್ಸುಗಳಾಗಲಿ, ವ್ರತಾಚರಣೆಗಳಾಗಲಿ ವಿಶ್ವೇಶ್ವರನ ಅನುಗ್ರಹಕ್ಕೆ ಕಾರಣಗಳಲ್ಲ. ನಿಜವಾದ ಹೇತುವೆಂದರೆ ಆತನ ಕೃಪೆಯೊಂದೆ.

೬೬. ಅನೇಕ ಸತ್ಪುರುಷರು ನಡೆದು ನಡೆದು ಸವೆದಿರುವ ವೇದೋಕ್ತವಾದ ಮಾರ್ಗವನ್ನು ಭಕ್ತನು ಯಾವಾಗ ಎಡಬಿಡದೆ ಅನುಸರಿಸುವನೊ, ಆಗಲೇ ವಿಶ್ವೇಶ್ವರನೂ ಅಪಾರವಾದ ತನ್ನ ದಯೆಯನ್ನು ಆತನ ಮೇಲೆ ತೋರುವನು.

೬೭. ಇಂತೆಂದು ವಿಶ್ವಕರ್ಮನು ಪರಮೇಶ್ವರನ ಅನುಕಂಪವೇ ತನ್ನ ಉದ್ಧಾರಕ್ಕೆ ಕಾರಣವೆಂದು ನಿಶ್ಚಯವನ್ನು ಮಾಡಿ ಶುಚಿರ್ಭೂತನಾಗಿ ತಾನಿದ್ದೆಡೆಯಲ್ಲಿಯೇ ಉತ್ತಮವಾದ ಮಹೇಶ್ವರಲಿಂಗವೊಂದನ್ನು ಪ್ರತಿಷ್ಠಿಸಿ ಏಕಾಗ್ರಚಿತ್ತದಿಂದ ಪೂಜಿಸುತ್ತಿದ್ದನು.

೬೮. ಅರಣ್ಯದಿಂದ ಆಯಾ ಋತುವಿನಲ್ಲಿ ಸಿಕ್ಕುವ ಪುಷ್ಪಗಳ ರಾಶಿಗಳನ್ನು ಶೇಖರಿಸಿಕೊಂಡು ತಂದು ಸ್ನಾನಮಾಡಿ ನಿತ್ಯವೂ ಮಹೇಶ್ವರನನ್ನು ಪೂಜಿಸುತ್ತಿದ್ದನು. ಗೆಡ್ಡೆಗೆಣಸುಗಳನ್ನೂ, ಹಣ್ಣುಗಳನ್ನೂ ಆಹಾರವಾಗಿ ತಿನ್ನುತ್ತಿದ್ದನು.

೬೯. ಇಂತು ತ್ವಷ್ಟೃವಿನ ಮಗನಾದ ಆ ವಿಶ್ವಕರ್ಮನು ಲಿಂಗಪೂಜೆಯಲ್ಲಿಯೇ ನಟ್ಟಮನಸ್ಸುಳ್ಳವನಾಗಿರಲು ಮೂರು ವರ್ಷಗಳು ಕಳೆದುಹೋದುವು. ಬಳಿಕ ಕರುಣಾನಿಧಿಯಾದ ಮಹೇಶ್ವರನು ಆ ಬಾಲಕನಿಗೆ ಪ್ರಸನ್ನನಾದನು.

೭೦. ಅಲ್ಲದೆ ಆತನು ಪೂಜಿಸುತ್ತಿದ್ದ ಲಿಂಗದಿಂದಲೇ ಉದ್ಭವಿಸಿ ಆತನಿಗೆ ಕಾಣಿಸಿಕೊಂಡವನಾಗಿ ಆ ಮಹಾದೇವನು ಹೀಗೆ ಹೇಳತೊಡಗಿದನು.

ವರಂ ವರಯ ರೇ ತ್ವಾಷ್ಟ್ರ ದೃಢಭಕ್ತ್ಯಾನಯಾ ತವ ।
ಪ್ರಸನ್ನೋಽಸ್ಮಿ ಭೃಶಂ ಬಾಲ ಗುರ್ವರ್ಥಕೃತಚೇತಸಃ ॥ ೭೧ ॥
ಗುರುಣಾ ಗುರುಪತ್ನ್ಯಾ ಚ ಗುರ್ವಪತ್ಯದ್ವಯೇನ ಚ ।
ಯಥಾರ್ಥಿತಂ ತಥಾ ಕರ್ತುಂ ತೇ ಸಾಮರ್ಥ್ಯಂ ಭವಿಷ್ಯತಿ ॥ ೭೨ ॥
ಅನ್ಯಾನ್ವರಾಂಶ್ಚ ತೇ ದದ್ಯಾಂ ತ್ವಾಷ್ಟ್ರ ತುಷ್ಟಸ್ತ್ವದರ್ಚಯಾ ।
ತಾನ್ವೃಣುಷ್ವ ಮಹಾಭಾಗ ಲಿಂಗಸ್ಯಾಸ್ಯಾದ್ಭುತಃ ಶ್ರಿಯಃ ॥ ೭೩ ॥
ತ್ವಂ ಸುವರ್ಣಾದಿಧಾತೂನಾಂ ದಾರೂಣಾಂ ದೃಷದಾಮಪಿ ।
ಮಣೀನಾಮಪಿ ರತ್ನಾನಾಂ ಪುಷ್ಪಾಣಾಮಪಿ ವಾಸಸಾಂ ॥ ೭೪ ॥
ಕರ್ಪೂರಾದಿಸುಗಂಧೀನಾಂ ದ್ರವ್ಯಾಣಾಮಪ್ಯಪಾಮಪಿ ।
ಕಂದಮೂಲಫಲಾನಾಂ ಚ ದ್ರವ್ಯಾಣಾಮಪಿ ಚತ್ವಚಾಂ ॥ ೭೫ ॥
ಸರ್ವೇಷಾಂ ವಸ್ತುಜಾತಾನಾಂ ಕರ್ತುಂ ಕರ್ಮ ಪ್ರವೇತ್ಸ್ಯಸಿ ॥ ೭೬ ॥
ಯಸ್ಯ ಯಸ್ಯ ರುಚಿರ್ಯತ್ರ ಸದ್ಮದೇವಾಲಯಾದಿಷು ।
ತಸ್ಯ ತಸ್ಯೇಹ ತುಷ್ಟ್ಯೈ ತ್ವಂ ತಥಾ ಕರ್ತುಂ ಪ್ರವೇತ್ಸ್ಯಸಿ ॥ ೭೭ ॥

---

೭೧. "ವಿಶ್ವಕರ್ಮನೆ! ನಿನಗೆ ಬೇಕಾದ ವರವನ್ನು ಬೇಡು. ಎಲೈ ಬಾಲಕನೆ! ಗುರುಕಾರ್ಯದಲ್ಲಿಯೇ ಏಕಾಗ್ರವಾದ ಮನಸ್ಸುಳ್ಳ ನಿನ್ನ ಈ ದೃಢವಾದ ಭಕ್ತಿಯಿಂದ ನಾನು ಬಹಳವಾಗಿ ಪ್ರಸನ್ನನಾಗಿರುವೆನು.

೭೨. ಗುರುವೂ, ಗುರುಪತ್ನಿಯೂ, ಗುರುವಿನ ಇಬ್ಬರು ಮಕ್ಕಳೂ ಯಾವುವನ್ನು ಕೇಳಿರುವರೊ, ಅವುಗಳನ್ನು ಹಾಗೆಯೇ ಮಾಡಿಕೊಡುವ ಸಾಮರ್ಥ್ಯವು ನಿನ್ನಲ್ಲಿ ಉಂಟಾಗುವುದು.

೭೩. ತ್ವಾಷ್ಟ್ರನೆ! ನಿನಗೆ ಇತರ ವರಗಳನ್ನೂ ಕೊಡುವೆನು. ಅದ್ಭುತ ಮಹಿಮೆಯಿಂದ ಕೂಡಿದ ಈ ಲಿಂಗಕ್ಕೆ ನೀನು ಮಾಡಿರುವ ಪೂಜೆಯಿಂದ ನಾನು ಬಹಳ ಸಂತೋಷಗೊಂಡಿರುವೆನು. ಆ ವರಗಳನ್ನೂ ಕೇಳು.

೭೪–೭೬. ನೀನು ಚಿನ್ನವೇ ಮೊದಲಾದ ಲೋಹಗಳಲ್ಲಿಯೂ, ಮರಗಳಲ್ಲಿಯೂ, ಕಲ್ಲುಗಳಲ್ಲಿಯೂ, ಮಣಿಗಳಲ್ಲಿಯೂ, ನವರತ್ನಗಳಲ್ಲಿಯೂ, ಪುಷ್ಪಗಳಲ್ಲಿಯೂ, ವಸ್ತ್ರಗಳಲ್ಲಿಯೂ, ಕರ್ಪೂರವೇ ಮೊದಲಾದ ಸುಗಂಧದ್ರವ್ಯಗಳಲ್ಲಿಯೂ, ನೀರಿನಲ್ಲಿಯೂ, ಗೆಡ್ಡೆಗೆಣಸು, ಹಣ್ಣುಗಳಲ್ಲಿಯೂ, ಚರ್ಮಗಳಲ್ಲಿಯೂ, ಇತರ ಸಮಸ್ತ ಪದಾರ್ಥಗಳಲ್ಲಿಯೂ ಯಥೇಪ್ಸಿತವಾದ ಕಾರ್ಯವನ್ನು ಮಾಡಲು ಬೇಕಾದ ಜ್ಞಾನವನ್ನು ಪಡೆಯುವೆ.

೭೭. ಯಾವ ಯಾವನಿಗೆ ಮನೆ, ದೇವಾಲಯಗಳೇ ಮುಂತಾದ ಯಾವ ಯಾವುದರಲ್ಲಿ ಅಭಿಲಾಷೆಯುಂಟಾಗುವುದೊ, ಅವನಿಗೆ ಸಂತೋಷವುಂಟಾಗುವಂತೆ ನೀನು ಆ ಸಮಸ್ತ ಕರ್ಮವನ್ನೂ ಮಾಡಲು ಸಮರ್ಥನಾಗಿರುವೆ.

ಸರ್ವನೇಪಥ್ಯರಚನಾಃ ಸರ್ವಾಃ ಸೂಪಸ್ಯ ಸಂಸ್ಕೃತೀಃ ।
ಸರ್ವಾಣಿ ಶಿಲ್ಪಿಕಾರ್ಯಾಣಿ ತೌರ್ಯತ್ರಿಕಮಥಾಪಿ ಚ ॥ ೭೮ ॥
ಸರ್ವಂ ಜ್ಞಾಸ್ಯಸಿ ಕರ್ತುಂ ತ್ವಂ ದ್ವಿತೀಯ ಇವ ಪದ್ಮಭೂಃ ।
ನಾನಾವಿಧಾನಿ ಯಂತ್ರಾಣಿ ನಾನಾಯುಧವಿಧಾನಕಂ ॥ ೭೯ ॥
ಜಲಾಶಯಾನಾಂ ರಚನಾಃ ಸುದುರ್ಗರಚನಾಸ್ತಥಾ ।
ತಾದೃಕ್ಕರ್ತುಂ ಪುರಾ ವೇತ್ತಿ ಯಾದೃಙ್ನಾನ್ಯೋಽಧಿಯಾಸ್ಯತಿ ॥೮೦॥
ಕಲಾಜಾತಂ ಹಿ ಸರ್ವಂ ತ್ವಮವಯಾಸ್ಯಸಿ ಮೇ ವರಾತ್ ।
ಸರ್ವೇಂದ್ರಜಾಲಿಕೀ ವಿದ್ಯಾ ತ್ವದಧೀನಾ ಭವಿಷ್ಯತಿ ॥ ೮೧ ॥
ಸರ್ವಕರ್ಮಸು ಕೌಶಲ್ಯಂ ಸರ್ವಬುದ್ಧಿವರಿಷ್ಠತಾಂ ।
ಸರ್ವೇಷಾಂ ಚ ಮನೋವೃತ್ತಿಂ ತ್ವಂ ಜ್ಞಾಸ್ಯಸಿ ವರಾನ್ಮಮ ॥ ೮೨ ॥
ಕಿಂ ಬಹೂಕ್ತೇನ ಯತ್ಸ್ವರ್ಗೇ ಯತ್ಪಾತಾಲೇ ಯದತ್ರ ಚ ।
ಅತಿಲೋಕೋತ್ತರಂ ಕರ್ಮ ತತ್ಸರ್ವಂ ವೇತ್ಸ್ಯಸಿ ಸ್ವಯಂ ॥ ೮೩ ॥

---

೭೮. ಸಕಲ ವಿಧಗಳಾದ ಅರಮನೆಗಳ ಅಲಂಕಾರಗಳನ್ನೂ, ಸರ್ವಪ್ರಕಾರವಾದ ಪಾಕಕಾರ್ಯದ ಸಂಸ್ಕಾರವನ್ನೂ, ಸಮಸ್ತ ಶಿಲ್ಪಿಕಾರ್ಯಗಳನ್ನೂ, ನೃತ್ಯ ಗೀತಾದಿಗಳಿಂದ ಕೂಡಿದ ಸಂಗೀತವನ್ನೂ ತಿಳಿಯುವೆ.

೭೯. ಅನೇಕ ವಿಧಗಳಾದ ಯಂತ್ರಗಳ ನಿರ್ಮಾಣವನ್ನೂ, ನಾನಾವಿಧಗಳಾದ ಆಯುಧವಿಶೇಷಗಳೆಲ್ಲವನ್ನೂ ನೀನು ತಿಳಿದು ಸೃಷ್ಟಿಮಾಡುವುದರಲ್ಲಿ ಎರಡನೆಯ ಬ್ರಹ್ಮನಾಗುವೆ.

೮೦. ಜಲಾಶಯಗಳನ್ನು ರಚಿಸುವುದರಲ್ಲಿಯೂ, ಬಲವಾದ ದುರ್ಗಗಳ ನಿರ್ಮಾಣದಲ್ಲಿಯೂ, ಹಿಂದೆ ಯಾವನೂ ತಿಳಿಯದಿದ್ದಂತಹ ಮಾರ್ಗದಿಂದ ಕಾರ್ಯವನ್ನು ಮಾಡುವ ಜ್ಞಾನವನ್ನು ನೀನು ಪಡೆಯುವೆ.

೮೧. ನನ್ನ ವರದ ಬಲದಿಂದ ನೀನು ಲಲಿತಕಲೆಗಳೆಲ್ಲವನ್ನೂ ಕೂಲಂಕಷವಾಗಿ ತಿಳಿಯುವೆ. ಸಮಸ್ತವಾದ ಇಂದ್ರಜಾಲ ವಿದ್ಯೆಯೂ ನಿನಗೆ ಅಧೀನವಾಗಿರುವುದು.

೮೨. ಸಕಲ ಕಾರ್ಯಗಳಲ್ಲಿಯೂ ಕೌಶಲ್ಯವನ್ನೂ, ಸಕಲರ ಬುದ್ಧಿತೀಕ್ಷ್ಣತೆಯಲ್ಲಿ ಶ್ರೇಷ್ಠತೆಯನ್ನೂ ಪಡೆದು, ಸಕಲ ಮಾನವರ ಮನಸ್ಸುಗಳ ಯೋಚನೆಗಳನ್ನೂ ನನ್ನ ವರದ ಪ್ರಭಾವದಿಂದ ನೀನು ತಿಳಿದುಕೊಳ್ಳುವೆ.

೮೩. ಹೆಚ್ಚಾಗಿ ಹೇಳುವುದರಿಂದೇನು ? ಸ್ವರ್ಗದಲ್ಲಿಯೇ ಆಗಲಿ, ಪಾತಾಲದಲ್ಲಿಯೇ ಆಗಲಿ, ಈ ಭೂಲೋಕದಲ್ಲಿಯೇ ಆಗಲಿ, ಮೂರು ಲೋಕಗಳಲ್ಲಿಯೂ ಕಾಣದಿರುವುದೇ ಆಗಲಿ, ಸಮಸ್ತವನ್ನೂ ನೀನು ಅಂತರಂಗದಲ್ಲಿಯೇ ಅನಾಯಾಸವಾಗಿ ತಿಳಿಯುವೆ.

ವಿಶ್ವೇಷಾಂ ವಿಶ್ವಕರ್ಮಾಣಿ ವಿಶ್ವೇಷು ಭುವನೇಷು ಚ ।
ಯತೋ ಜ್ಞಾಸ್ಯಸಿ ತನ್ನಾಮ ವಿಶ್ವಕರ್ಮೇತಿ ತೇಽನಘ ॥ ೮೪ ॥
ಅಪರಃ ಕೋ ವರೋ ದೇಯಸ್ತವ ತಂ ಪ್ರಾರ್ಥಯಾಶ್ವಹೋ ।
ತವಾದೇಯಂ ನ ಮೇ ಕಿಂಚಿಲ್ಲಿಂಗಾರ್ಚನರತಸ್ಯ ಹಿ ॥ ೮೫ ॥
ಅನ್ಯತ್ರಾಪಿ ಹಿ ಯೋ ಲಿಂಗಂ ಸಮರ್ಚಯತಿ ಸನ್ಮತಿಃ ।
ತಸ್ಯಾಪಿ ವಾಂಛಿತಂ ದೇಯಂ ಕಿಂ ಪುನರ್ಯೋ ವಿಕಾಶಿಕಂ ॥ ೮೬ ॥
ಯೇನ ಕಾಶ್ಯಾಂ ಸಮಭ್ಯರ್ಚಿ ಯೇನ ಕಾಶ್ಯಾಂ ಪ್ರತಿಷ್ಠಿತಂ ।
ಯೇನ ಕಾಶ್ಯಾಂ ಸ್ತುತಂ ಲಿಂಗಂ ಸ ಮೇ ರೂಪಾಯ ದರ್ಪಣಃ ॥ ೮೭ ॥
ತತ್ತ್ವಂ ಸ್ವಚ್ಛೋಽಸಿ ಮುಕುರೋ ಮಮ ನೇತ್ರತ್ರಯಸ್ಯ ಹಿ ।
ಕಾಶ್ಯಾಂ ಲಿಂಗಾರ್ಚನಾತ್ಸ್ವಸ್ತ್ಯ ವರಂ ವರಯ ಸುವ್ರತ ॥ ೮೮ ॥
ಕಾಶ್ಯಾಂ ಯೋ ರಾಜಧಾನ್ಯಾಂ ಮೇ ಹಿತ್ವಾ ಮಾಮನ್ಯಮರ್ಚಯೇತ್ ।
ಸ ವರಾಕೋಽಲ್ಪಧೀರ್ನ್ಯಷ್ಟೋಽಲ್ಪತುಷ್ಟಿರ್ಮುಕ್ತಿವರ್ಜಿತಃ ॥ ೮೯ ॥

---

೮೪. ಸಮಸ್ತಲೋಕಗಳಲ್ಲಿಯೂ, ಸಮಸ್ತ ಜೀವರೂ ಮಾಡುವ ಸಕಲ ಕರ್ಮಗಳನ್ನೂ ನೀನು ತಿಳಿಯಲು ಶಕ್ತನಾಗುವೆ. ನಿಷ್ಕಲ್ಮಷನೇ! ಆದುದರಿಂದ ನಿನಗೆ ವಿಶ್ವಕರ್ಮನೆಂಬ ಹೆಸರು ಅನ್ವರ್ಥವಾಗಿರುವುದು.

೮೫. ನಿನಗೆ ಬೇರೆ ಯಾವ ವರವನ್ನು ಕೊಡಲಿ? ಅದನ್ನು ಶೀಘ್ರವಾಗಿ ಪ್ರಾರ್ಥಿಸಿಕೊ. ಲಿಂಗಾರ್ಚನೆಯಲ್ಲಿ ನಿರತನಾಗಿರುವ ನಿನಗೆ ನಾನು ಕೊಡಬಾರದ ವರವೂ ಯಾವುದೂ ಇಲ್ಲವು.

೮೬. ಇತರ ಪ್ರದೇಶಗಳಲ್ಲಿಯೂ ಯಾವನು ಶುದ್ಧಬುದ್ಧಿಯಿಂದ ಶಿವಲಿಂಗದ ಪೂಜೆಯನ್ನು ಮಾಡುವನೊ, ಅವನಿಗೂ ಸಹ ಅಭೀಷ್ಟಗಳನ್ನು ನಾನು ಕೊಡಬೇಕಾಗಿರುವುದೆಂದಮೇಲೆ ಕಾಶಿಯಲ್ಲಿ ಪೂಜಿಸಿದವನ ವಿಷಯವನ್ನು ಹೇಳಬೇಕೆ?

೮೭. ಯಾವನು ಕಾಶಿಯಲ್ಲಿ ಶಿವಲಿಂಗವನ್ನು ಪೂಜಿಸಿರುವನೊ, ಯಾವನು ಲಿಂಗವನ್ನು ಪ್ರತಿಷ್ಠೆಮಾಡಿರುವನೊ, ಯಾವನು ಅಲ್ಲಿರುವ ಲಿಂಗವನ್ನು ಸ್ತೋತ್ರ ಮಾಡಿರುವನೊ, ಅವನನ್ನು ನನ್ನ ಸ್ವರೂಪದ ಕೈಕನ್ನಡಿಯನ್ನಾಗಿ ತಿಳಿಯಬೇಕು.

೮೮. ಆದುದರಿಂದ ತ್ರಿಲೋಚನನಾದ ನನಗೆ ನೀನು ಪ್ರತಿಬಿಂಬಗ್ರಾಹಿಯೆನಿಸಿದ ಸ್ವಚ್ಛವಾದ ಕೈಗನ್ನಡಿಯಾಗಿರುವೆ. ಕಾಶಿಯಲ್ಲಿ ಲಿಂಗಾರ್ಚನೆಯನ್ನು ಮಾಡುವ ಉತ್ತಮವ್ರತದಲ್ಲಿ ನಿರತನಾಗಿರುವುದರಿಂದ ನಿನಗೆ ಬೇಕಾದ ವರವನ್ನು ಕೇಳು.

೮೯. ನನ್ನ ರಾಜಧಾನಿಯಾದ ಕಾಶೀಕ್ಷೇತ್ರದಲ್ಲಿ ಯಾವನು ನನ್ನನ್ನುಳಿದು ಇತರ ದೇವತೆಗಳನ್ನು ಪೂಜಿಸುವನೊ, ಅವನು ನೀಚನು. ಅಲ್ಪಬುದ್ಧಿಯು. ಚೋರನು. ಅತ್ಯಲ್ಪದಿಂದಲೇ ಸಂತುಷ್ಟನಾದ ಅವನಿಗೆಂದಿಗೂ ಮೋಕ್ಷವು ಸಿಕ್ಕಲಾರದು.

ತದಾನಂದವನೇ ಹ್ಯತ್ರ ಸಮರ್ಚ್ಯೋಽಹಂ ಮುಮುಕ್ಷುಭಿಃ ।
ದ್ರುಹಿಣೋಪೇಂದ್ರಚಂದ್ರೇಂದ್ರೈರಿಹಾನ್ಯೋ ನ ಸಮರ್ಚ್ಯತೇ ॥ ೯೦ ॥
ಯಥಾನಂದವನಂ ಪ್ರಾಪ್ಯ ತ್ವಂ ಮಾಮರ್ಚಿತವಾನಸಿ ।
ತಥಾನ್ಯೇ ಪುಣ್ಯಕರ್ಮಾಣೋ ಮಾಮಭ್ಯರ್ಚ್ಯೈವ ಮಾಮಿಕಾಃ ॥ ೯೧ ॥
ಅನುಗ್ರಾಹ್ಯೋಽಸಿ ನಿತರಾಂ ತತೋ ವರಯ ದುರ್ಲಭಂ ।
ಶ್ರಾಣಿತಂ ತದವೈಹಿ ತ್ವಂ ವದ ಮಾ ಚಿರಯಸ್ವ ಭೋಃ ॥ ೯೨ ॥

ವಿಶ್ವಕರ್ಮೋವಾಚ –

ಇದಂ ಯತ್ಸ್ಥಾಪಿತಂ ಲಿಂಗಂ ಮಯಾಜ್ಞೇನಾಪಿ ಶಂಕರ ।
ತಲ್ಲಿಂಗಮನ್ಯೋಽಪ್ಯಾರಾಧ್ಯ ಸಂತು ಸದ್ಬುದ್ಧಿಭಾಜನಂ ॥ ೯೩ ॥
ಅನ್ಯಚ್ಚ ನಾಥ ಪ್ರಾರ್ಥ್ಯೋಽಸಿ ತಚ್ಚ ವಿಶ್ರಾಣಯಿಷ್ಯಸಿ ।
ಮಯಾ ವಿನಿರ್ಮಿತಂ ಸ್ವಂಚ ಸ್ವೀಕರೋಷಿ ಕದಾ ಭವಾನ್ ॥ ೯೪ ॥

ದೇವದೇವ ಉವಾಚ :—

ಏವಮಸ್ತು ಯದುಕ್ತಂ ತೇ ತವ ಲಿಂಗಸಮರ್ಚಕಾಃ ।
ಸದ್ಬುದ್ಧಿಭಾಜನಂ ವೈ ಸ್ಯುಃ ಸ್ಯುಶ್ಚ ನಿರ್ವಾಣದೀಕ್ಷಿತಾಃ ॥ ೯೫ ॥

---

೯೦. ಆದುದರಿಂದ ಈ ಆನಂದವನದಲ್ಲಿ ಮುಮುಕ್ಷುಗಳು ನನ್ನನ್ನೊಬ್ಬನನ್ನೇ ಪೂಜಿಸಬೇಕು. ಬ್ರಹ್ಮ, ವಿಷ್ಣು, ಮಹೇಂದ್ರ, ಚಂದ್ರರೇ ಮೊದಲಾದ ದೇವತೆಗಳೂ ಇಲ್ಲಿ ಬೇರೆ ದೇವತೆಯನ್ನು ಅರ್ಚಿಸುವುದಿಲ್ಲ.

೯೧. ಆನಂದವನಕ್ಕೆ ಬಂದು ನನ್ನನ್ನೇ ಹೇಗೆ ಪೂಜಿಸಿದೆಯೊ, ಹಾಗೆಯೇ ಇತರ ಅನೇಕ ಪುಣ್ಯಪುರುಷರೂ ನನ್ನನ್ನೇ ಪೂಜಿಸಿ ನನ್ನ ಸಾರೂಪ್ಯಮೋಕ್ಷವನ್ನು ಪಡೆದಿರುವರು.

೯೨. ನನ್ನ ಅನುಗ್ರಹಕ್ಕೆ ನೀನು ಉತ್ತಮಪಾತ್ರನಾಗಿರುವೆ. ಎಂತಹ ದುರ್ಲಭ ವರವಾದರೂ ನಿಶ್ಚಿಂತೆಯಾಗಿ ಲಭಿಸಿತೆಂದು ತಿಳಿದುಕೊ. ಎಲೈ ಬಾಲಕನೆ! ತಡಮಾಡದೆ ವರವನ್ನು ಬೇಡು.

೯೩. ವಿಶ್ವಕರ್ಮನು ಹೇಳುತ್ತಾನೆ:—ಶಂಕರ! ಅಜ್ಞನಾದರೂ ನಾನು ಸ್ಥಾಪಿಸಿರುವ ಈ ಲಿಂಗವನ್ನು ಆರಾಧನೆ ಮಾಡಿದ ಇತರ ಮಾನವರೂ ಸಹ ಉತ್ತಮಬುದ್ಧಿಯನ್ನು ಪಡೆಯುವರಾಗಲಿ.

೯೪. ಸ್ವಾಮಿಯೆ! ನಿನ್ನಲ್ಲಿ ಮತ್ತೊಂದು ವರವನ್ನು ಕೇಳುವೆನು. ಅದನ್ನೂ ಅನುಗ್ರಹಿಸು. ನಾನು ನಿನಗಾಗಿ ನಿರ್ಮಾಣಮಾಡುವ ದೇವಾಲಯವನ್ನು ನೀನು ಯಾವಾಗ ಸ್ವೀಕರಿಸುವೆ?

೯೫. ಮಹಾದೇವನು ಹೇಳುತ್ತಾನೆ:—ನೀನು ಹೇಳಿದಂತೆಯೇ ಎಲ್ಲವೂ ನಡೆಯಲಿ. ನೀನು ಪ್ರತಿಷ್ಠಿಸಿದ ಈ ಲಿಂಗವನ್ನು ಯಾರು ಭಕ್ತಿಯಿಂದ ಪೂಜಿಸು

ಯದಾ ಚ ರಾಜಾ ಭವಿತಾ ದಿವೋದಾಸೋ ವಿಧೇರ್ವರಾತ್ ।
ತದಾ ಮೇ ವಚನಾತ್ತಾತ ಪ್ರಾಸಾದಂ ಮೇ ವಿಧಾಸ್ಯತಿ ॥ ೯೬ ॥
ನವೀಕೃತ್ಯ ಪುನಃ ಕಾಶೀ ನಿರ್ವಿಷ್ಟಾ ತೇನ ಭೂಭುಜಾ ।
ಗಣೇಶಮಾಯಯಾ ರಾಜ್ಯಾತ್ಪರಿನಿರ್ವಾಣಚೇತಸಾ ॥ ೯೭ ॥
ವಿಷ್ಣೋಃ ಸದುಪದೇಶಾಚ್ಚ ಮಾಮೇವ ಶರಣಂ ಗತಃ ।
ನಿರ್ವಾಣಲಕ್ಷ್ಮ್ಯಾಃ ಪ್ರಾಪ್ತೇಹ ಹಿತ್ವಾ ರಾಜ್ಯಶ್ರಿಯಂ ಚಲಾಂ ॥ ೯೮ ॥
ವಿಶ್ವಕರ್ಮನ್ವ್ರಜ ಗುರೋಃ ಶಾಸನಾಯ ಯತಸ್ವ ಚ ।
ಗುರುಭಕ್ತಿಕೃತೋ ಯಸ್ಮಾನ್ಮದ್ಭಕ್ತಾ ನಾತ್ರ ಸಂಶಯಃ ॥ ೯೯ ॥
ಯೇ ಗುರುಂ ಚಾವಮನ್ಯಂತೇ ತೇಽವಮಾನ್ಯಾ ಮಯಾಪ್ಯಹೋ ।
ತಸ್ಮಾದ್ಗುರೂಪದಿಷ್ಟಂ ಹಿ ಕುರು ಶಿಷ್ಯಸಮೀಹಿತಂ ॥ ೧೦೦ ॥
ತತ ಆಗತ್ಯ ಮೇ ಪಾರ್ಶ್ವಂ ಯಾವನ್ನಿರ್ವಾಣಮೇಷ್ಯಸಿ ।
ತಾವತ್ಸ್ಥಾಸ್ಯಸಿ ಶುದ್ಧಾತ್ಮಾ ದೇವಾನಾಂ ಹಿತಮಾಚರನ್ ॥ ೧೦೧ ॥

---

ವರೊ, ಅವರೆಲ್ಲರೂ ಬ್ರಹ್ಮಜ್ಞಾನಕ್ಕೆ ಅಧಿಕಾರಿಗಳಾಗುವರಲ್ಲದೆ ಮೋಕ್ಷಸಾಧನೆಯಲ್ಲಿ ದೀಕ್ಷಿತರಾಗಿರುವರು.

೯೬. ಮುಂದಕ್ಕೆ ಬ್ರಹ್ಮದೇವನಿಂದ ವರವನ್ನು ಪಡೆದು ದಿವೋದಾಸನೆಂಬುವನು ಕಾಶೀಕ್ಷೇತ್ರಕ್ಕೆ ಮಹಾರಾಜನಾಗುವನು. ಆಗ ನನ್ನ ಮಾತಿನಂತೆ ಆತನು ನಿನ್ನ ಕೈಯಿಂದ ನನಗೆ ಪ್ರಾಸಾದವನ್ನು ಕಟ್ಟಿಸುವನು.

೯೭. ಈ ಕಾಶಿಯನ್ನು ಪುನಃ ಹೊಸದಾಗಿ ಮಾಡಿ ಆ ರಾಜನು ಪ್ರವೇಶಿಸುವನು. ಬಳಿಕ ಕಾಲಕ್ರಮದಲ್ಲಿ ವಿಘ್ನೇಶ್ವರನ ಮಾಯೆಗೆ ಸಿಕ್ಕಿದವನಾಗಿ ರಾಜ್ಯಾಧಿಕಾರದಲ್ಲಿ ಮನಸ್ಸಿಗೆ ಬೇಸರಿಕೆಯನ್ನು ತಾಳುವನು.

೯೮. ಮಹಾವಿಷ್ಣುವಿನ ಉತ್ತಮೋಪದೇಶದಿಂದ ನನ್ನನ್ನೇ ಶರಣುಹೊಂದುವನು. ಅತಿಚಂಚಲವಾದ ರಾಜ್ಯೈಶ್ವರ್ಯವನ್ನು ತ್ಯಾಗಮಾಡಿ ಆ ದಿವೋದಾಸನು ಮೋಕ್ಷಲಕ್ಷ್ಮಿಯನ್ನು ಪಡೆಯುವನು.

೯೯. ವಿಶ್ವಕರ್ಮನೆ! ಇನ್ನು ಹೊರಡು. ನಿನ್ನ ಗುರುವಿನ ಅಪ್ಪಣೆಯನ್ನು ಪಾಲಿಸಲು ಪ್ರಯತ್ನಮಾಡು. ನನ್ನ ಭಕ್ತರೆಲ್ಲರೂ ವಿಶೇಷವಾಗಿ ಗುರುಭಕ್ತರೆಂಬುದರಲ್ಲಿ ಸಂದೇಹವಿಲ್ಲ.

೧೦೦. ಯಾರು ಗುರುವನ್ನು ಕೀಳಾಗಿ ಕಾಣುವರೊ, ಅವರನ್ನು ನಾನೂ ಸಹ ಅವಮಾನದಿಂದಲೇ ಕಾಣುವೆನು. ಆದುದರಿಂದ ಗುರುಗಳ ಉಪದೇಶವನ್ನೂ ಶಿಷ್ಯರ ಅಭಿಲಾಷೆಗಳನ್ನೂ ಸಂಪೂರ್ಣಗೊಳಿಸು.

೧೦೧. ಬಳಿಕ ನನ್ನ ಬಳಿಗೇ ಬಂದು ನೀನು ಮೋಕ್ಷವನ್ನು ಪಡೆಯುವವರೆಗೂ ದೇವತೆಗಳಿಗೆ ಹಿತವನ್ನಾಚರಿಸುತ್ತ ಪರಿಶುದ್ಧಮನಸ್ಸನಾಗಿರುವೆ.

ತವಾತ್ರ ಲಿಂಗೇ ಸತತಂ ಸ್ಥಾಸ್ಯಾಮ್ಯಹಮಭೀಷ್ಟದಃ ।
ಅಸ್ಯ ಲಿಂಗಸ್ಯ ಭಕ್ತಾನಾಂ ನಿರ್ವಾಣಶ್ರೀರದೂರತಃ ॥ ೧೧೨ ॥
ಅಂಗಾರೇಶಾದುದೀಚ್ಯಾಂ ಯೇ ತ್ವಲ್ಲಿಂಗಸ್ಯ ಸಮರ್ಚಕಾಃ ।
ತೇಷಾಂ ಮನೋರಥಾವಾಪ್ತಿರ್ಭವಿಷ್ಯತಿ ಪದೇಪದೇ ॥ ೧೧೩ ॥
ಇತ್ಯುಕ್ತ್ವಾಂತರ್ದಧೇ ದೇವಸ್ತ್ವಷ್ಟಾಽಪಿ ಗುರುಮಾಪ್ತವಾನ್ ।
ಗುರೋಃ ಸನ್ನಿಹಿತಂ ಭೂರಿ ವಿಧಾಯ ಸ ಗೃಹಾನ್ಯಯೌ ॥ ೧೧೪ ॥
ಗೃಹೇಽಪಿ ಮಾತಾಪಿತರೌ ಸಂತೋಷ್ಯ ನಿಜಕರ್ಮಣಾ ।
ತದುಕ್ತಾಜ್ಞಾಂ ಸಮಾಧಾಯ ಪುನಃ ಕಾಶೀಂ ಸಮಾಯಯೌ ॥ ೧೧೫ ॥
ಸ್ವಲಿಂಗಾರಾಧನಾಸಕ್ತೋ ನಾದ್ಯಾಪಿ ತ್ವಷ್ಟನಂದನಃ ।
ಕಾಶೀಂ ತ್ಯಜತಿ ಮೇಧಾವೀ ಸರ್ವದೇವಪ್ರಿಯಂ ಚರನ್ ॥ ೧೧೬ ॥

ಈಶ್ವರ ಉವಾಚ :—

ಪೃಷ್ಟಾನಿ ಯಾನಿ ಲಿಂಗಾನಿ ತ್ವಯಾ ದೇವಿ ಗಿರೀಂದ್ರಜೇ ।
ಕಾಶೀಮುಕ್ತೌ ಸಮರ್ಥಾನಿ ತಾನ್ಯುಕ್ತಾನಿ ಮಯಾ ತವ ॥ ೧೧೭ ॥

---

೧೧೨. ಇಲ್ಲಿ ನೀನು ಪ್ರತಿಷ್ಠಿಸಿರುವ ಈ ಲಿಂಗದಲ್ಲಿಯೇ ನಾನು ಅಭೀಷ್ಟ ಪ್ರದನಾಗಿ ಯಾವಾಗಲೂ ನೆಲೆಗೊಂಡಿರುವೆನು. ಈ ಲಿಂಗದ ಭಕ್ತನಿಗೆ ಮೋಕ್ಷ ಸಾಮ್ರಾಜ್ಯವೆಂದಿಗೂ ದೂರದಲ್ಲಿರುವುದಿಲ್ಲ.

೧೧೩. ಅಂಗಾರೇಶ್ವರನಿಗೆ ಉತ್ತರದಲ್ಲಿ ನಿನ್ನಿಂದ ಪ್ರತಿಷ್ಠಿತವಾದ ಲಿಂಗ ವನ್ನು ಯಾರು ಪೂಜಿಸುವರೊ, ಅವರಿಗೆ ಹೆಜ್ಜೆಹೆಜ್ಜೆಗೂ ಸಕಲ ಇಷ್ಟಾರ್ಥಗಳೂ ಕೈಗೂಡುತ್ತಿರುವುವು.''

೧೧೪. ಇಂತು ನುಡಿದು ಮಹಾದೇವನು ಅಲ್ಲಿಯೇ ಅಂತರ್ಹಿತನಾದನು. ವಿಶ್ವಕರ್ಮನೂ ಗುರುವಿನ ಬಳಿಗೆ ಹಿಂದಿರುಗಿ ಗುರುಗಳಿಗೆ ಅಭೀಷ್ಟಗಳಾದು ವೆಲ್ಲವನ್ನೂ ಉತ್ತಮರೀತಿಯಿಂದ ಮಾಡಿಕೊಟ್ಟು ತನ್ನ ಮನೆಗೆ ಬಂದನು.

೧೧೫. ಮನೆಯಲ್ಲಿಯೂ ತಾಯಿತಂದೆಗಳನ್ನು ತನ್ನ ಕರ್ಮಕೌಶಲ್ಯದಿಂದ ಬಹಳ ಸಂತೋಷಗೊಳಿಸಿ ಅವರು ಹೇಳಿದ ಆಜ್ಞೆಗಳನ್ನು ನೆರವೇರಿಸಿಕೊಟ್ಟು ಪುನಃ ಕಾಶಿಗೆ ಬಂದು ಸೇರಿದನು.

೧೧೬. ತಾನು ಹಿಂದೆ ಪ್ರತಿಷ್ಠೆ ಮಾಡಿದ ಲಿಂಗದ ಪೂಜೆಯಲ್ಲಿಯೇ ಆಸಕ್ತ ನಾಗಿ ಆ ವಿಶ್ವಕರ್ಮನು ಮಹಾಪ್ರಾಜ್ಞನೆನಿಸಿ ಸಮಸ್ತ ದೇವತೆಗಳಿಗೂ ಪ್ರಿಯ ಗಳನ್ನೇ ಮಾಡಿಕೊಡುತ್ತ ಇಂದಿಗೂ ಸಹ ಕಾಶಿಯನ್ನು ಎಡಬಿಡದಿರುವನು.

೧೧೭. ಈಶ್ವರನು ಹೇಳುತ್ತಾನೆ:—ದೇವಿಯೆ! ಪರ್ವತಕುಮಾರಿಯೆ! ಕಾಶಿಯಲ್ಲಿ ಮೋಕ್ಷವನ್ನು ಕೊಡುವ ಲಿಂಗಗಳು ಯಾವುವೆಂದು ನೀನು ಕೇಳಿದೆ ಯಲ್ಲವೆ. ಮೋಕ್ಷವನ್ನು ಕೊಡಲು ಸಮರ್ಥಗಳಾದ ಲಿಂಗಗಳೆಲ್ಲವನ್ನೂ ನಾನು ನಿನಗೆ ತಿಳಿಸಿರುವೆನು.

ಲಿಂಗಮೋಂಕಾರಸಂಜ್ಞಂ ಚ ತಥಾ ದೇವಂ ತ್ರಿವಿಷ್ಟಪಂ ।
ಮಹಾದೇವಃ ಕೃತ್ತಿವಾಸಾ ರತ್ನೇಶಶ್ಚಂದ್ರಸಂಜ್ಞಕಃ ॥ ೧೦೮ ॥
ಕೇದಾರಶ್ಚಾಪಿ ಧರ್ಮೇಶಸ್ತಥಾ ವೀರೇಶ್ವರಾಭಿಧಃ ।
ಕಾಮೇಶವಿಶ್ವಕರ್ಮೇಶೌ ಮಣಿಕರ್ಣೀಶ್ವರಸ್ತಥಾ ॥ ೧೦೯ ॥
ಮಮಾರ್ಚ್ಯಮವಿಮುಕ್ತಾಖ್ಯಂ ತತೋ ದೇವಿ ಮಮಾಖ್ಯಕಂ ।
ವಿಶ್ವನಾಥೇತಿ ವಿಶ್ವಸ್ಮಿನ್ಪ್ರಥಿತಂ ವಿಶ್ವಸೌಖ್ಯದಂ ॥ ೧೧೦ ॥
ಅವಿಮುಕ್ತಂ ಸಮಾಸಾದ್ಯ ಯೇನ ವಿಶ್ವೇಶ್ವರೋಽರ್ಚಿತಃ ।
ನ ತಸ್ಯಾಸ್ತಿ ಪುನರ್ಜನ್ಮ ಕಲ್ಪಕೋಟಿಶತೇಷ್ವಪಿ ॥ ೧೧೧ ॥
ಅಷ್ಟೌ ಮಾಸಾನ್ವಿಹಾರಃ ಸ್ಯಾದ್ಯತೀನಾಂ ಸಂಯತಾತ್ಮನಾಂ ।
ಏಕತ್ರ ಚತುರೋ ಮಾಸಾನಬ್ದಂ ನಾವಾಸ ಇಷ್ಯತೇ ॥ ೧೧೨ ॥
ಅವಿಮುಕ್ತೇ ಪ್ರವಿಷ್ಟಾನಾಂ ವಿಹಾರೋ ನೈವ ಯುಜ್ಯತೇ ।
ಮೋಕ್ಷೋಽಪ್ಯಸಂಶಯಶ್ಚಾತ್ರ ತಸ್ಮಾತ್ತ್ಯಾಜ್ಯಾ ನ ಕಾಶಿಕಾ ॥ ೧೧೩ ॥

---

೧೦೮. ಅವು ಯಾವುವೆಂದರೆ—ಓಂಕಾರನಾಮಕವಾದ ಲಿಂಗವು. ತ್ರಿವಿಷ್ಟಪೇಶ್ವರಲಿಂಗವು. ಕೃತ್ತಿವಾಸೇಶ್ವರವೆಂಬ ಮಹಾದೇವಲಿಂಗವು. ಚಂದ್ರೇಶ್ವರವೆಂಬ ಅಪರನಾಮವುಳ್ಳ ರತ್ನೇಶ್ವರಲಿಂಗವು.

೧೦೯. ಕೇದಾರೇಶ್ವರ, ಧರ್ಮೇಶ್ವರ, ಬಳಿಕ ವೀರೇಶ್ವರ, ಕಾಮೇಶ್ವರ, ವಿಶ್ವಕರ್ಮೇಶ್ವರ, ಮಣಿಕರ್ಣೀಶ್ವರ ಲಿಂಗಗಳು.

೧೧೦. ನನಗೂ ಪೂಜ್ಯವೆನಿಸಿದ ಅವಿಮುಕ್ತೇಶ್ವರಲಿಂಗವು. ಇದೇ ನನ್ನ ಹೆಸರುಳ್ಳದುವಾಗಿ ವಿಶ್ವೇಶ್ವರವೆಂದು ಬ್ರಹ್ಮಾಂಡದಲ್ಲೆಲ್ಲ ಪ್ರಖ್ಯಾತವಾಗಿ ಸಕಲ ಬ್ರಹ್ಮಾಂಡಕ್ಕೂ ಸೌಖ್ಯಪ್ರದವಾದ ಲಿಂಗವಾಗಿರುವುದು.

೧೧೧. ಅವಿಮುಕ್ತಕ್ಷೇತ್ರಕ್ಕೆ ಬಂದು ಯಾವನು ವಿಶ್ವೇಶ್ವರನನ್ನು ಪೂಜಿಸುವುದರಲ್ಲಿ ಆಸಕ್ತನಾಗುವನೊ, ಅವನಿಗೆ ಒಂದು ನೂರು ಕೋಟಿ ಕಲ್ಪಗಳಾದರೂ ಪುನರ್ಜನ್ಮವೆಂಬುದಿಲ್ಲವು.

೧೧೨. ಮನಸ್ಸನ್ನೂ, ಇಂದ್ರಿಯಗಳನ್ನೂ ನಿಗ್ರಹಿಸಿರುವ ಸನ್ಯಾಸಿಗಳು ಎಂಟು ಮಾಸಗಳು ಸಂಚರಿಸುತ್ತಿರಬೇಕೆಂದೂ ವರ್ಷಾಕಾಲದ ನಾಲ್ಕು ಮಾಸಗಳು ಮಾತ್ರ ಒಂದೇ ಸ್ಥಳದಲ್ಲಿರಬೇಕೆಂದೂ ನಿಯಮವು. ಒಂದು ವರ್ಷ ಸಂಪೂರ್ಣವಾಗಿ ಒಂದೆಡೆಯಲ್ಲಿರಬಾರದು.

೧೧೩. ಆದರೆ ಅವಿಮುಕ್ತಕ್ಷೇತ್ರವನ್ನು ಪ್ರವೇಶಮಾಡಿದವರಿಗೆ ಅನ್ಯತ್ರ ಸಂಚಾರವು ಸರಿಹೋಗುವುದಿಲ್ಲ. ಇಲ್ಲಿ ಮೋಕ್ಷವೂ ನಿಸ್ಸಂದೇಹವಾಗಿ ಲಭಿಸುವುದು. ಆದುದರಿಂದ ಸನ್ಯಾಸಿಗಳೂ ಸಹ ಕಾಶಿಯನ್ನು ಬಿಟ್ಟು ಹೋಗಬಾರದು.

ಆನಂದಕಾನನಂ ಹಿತ್ವಾ ನಾನ್ಯದ್ಗಚ್ಛೇತ್ತಪೋವನಂ ।
ತಪೋಯೋಗಶ್ಚ ಮೋಕ್ಷಶ್ಚ ಯತೋಽತ್ರೈವ ಮದಾಶ್ರಯಾತ್ ॥೧೧೪॥
ಕೃಪಯಾ ಸರ್ವಜಂತೂನಾಂ ಕ್ಷೇತ್ರಮೇತನ್ಮಯಾ ಕೃತಂ ।
ಅವಶ್ಯಮೇವ ಸಿಧ್ಯಂತಿ ಕ್ಷೇತ್ರೇಽಸ್ಮಿನ್ಸಿದ್ಧಿಕಾಂಕ್ಷಿಣಃ ॥ ೧೧೫ ॥
ಅತೀತಂ ವರ್ತಮಾನಂ ಚ ಜ್ಞಾನತೋಽಜ್ಞಾನತಃ ಕೃತಂ ।
ಯದೇನಸ್ತಲ್ಲಯಂ ಯಾಯಾದಾನಂದವನವೀಕ್ಷಣಾತ್ ॥ ೧೧೬ ॥
ಅತ್ಯುಗ್ರೈಶ್ಚ ತಪೋಭಿರ್ಯನ್ಮಹಾದಾನೈರ್ಮಹಾವ್ರತೈಃ ।
ನಿಯಮೈಶ್ಚ ಯಮೈಃ ಸಂಯುಕ್ತ್ಯಯೋಗೇನ ಮಹಾಮಖೈಃ ॥ ೧೧೭ ॥
ವೇದಾಂತಶಾಸ್ತ್ರಾಭ್ಯಸನೈಃ ಸರ್ವೋಪನಿಷದಾಶ್ರಯಾತ್ ।
ಏಭಿರ್ಯೈರ್ಯದವಾಪ್ಯೇತ ತತ್ಕಾಶ್ಯಾಂ ಹೇಲಯಾಪ್ಯತೇ ॥ ೧೧೮ ॥
ಕರ್ಮಸೂತ್ರೇಣ ಬದ್ಧಾ ವೈ ಭ್ರಾಮ್ಯಂತೇ ತಾವದೇವ ಹಿ ।
ಯಾವದ್ವಿಶ್ವೇಶ್ವರೇ ಧಾಮ್ನಿ ಮಮ ನೈವ ತನುತ್ಯಜಃ ॥ ೧೧೯ ॥

---

೧೧೪. ಆನಂದಕಾನನವನ್ನು ಬಿಟ್ಟು ಬೇರೆ ತಪೋವನವನ್ನು ಹುಡುಕಿ ಕೊಂಡು ಹೋಗಬಾರದು. ಏಕೆಂದರೆ ಇಲ್ಲಿ ನನ್ನನ್ನು ಆಶ್ರಯಿಸುವುದೇ ತಪಸ್ಸು. ಅದೇ ಯೋಗಾಭ್ಯಾಸವು. ಅದೇ ಮೋಕ್ಷೋಪಾಯವು.

೧೧೫. ಸಕಲ ಪ್ರಾಣಿಗಳಲ್ಲಿಯೂ ನನಗಿರುವ ಕೃಪೆಯಿಂದಲೇ ಈ ಕ್ಷೇತ್ರವನ್ನು ನಾನು ನಿರ್ಮಿಸಿರುವೆನು. ಸಿದ್ಧಿಯನ್ನಪೇಕ್ಷಿಸುವವನಿಗೆ ಈ ಕ್ಷೇತ್ರದಲ್ಲಿ ಸಕಲ ಸಿದ್ಧಿಗಳೂ ಖಂಡಿತವಾಗಿ ಕೈಗೂಡುವುವು.

೧೧೬. ಹಿಂದೆ ಮಾಡಿದುದಾಗಲಿ, ಈಗ ಮಾಡುತ್ತಿರುವುದಾಗಲಿ, ಬುದ್ಧಿಪೂರ್ವಕವಾಗಿ ಮಾಡಿದುದಾಗಲಿ, ಅಜ್ಞಾನದಿಂದ ಮಾಡಿದುದಾಗಲಿ—ಸಮಸ್ತ ಪಾತಕವೂ ಆನಂದವನವನ್ನು ನೋಡುವ ಮಾತ್ರದಿಂದಲೇ ನಾಶವಾಗುವುದು.

೧೧೭–೧೧೮. ಅತ್ಯುಗ್ರಗಳಾದ ತಪಶ್ಚರಣೆಗಳಿಂದಲೂ, ಮಹಾದಾನಗಳನ್ನು ಮಾಡುವುದರಿಂದಲೂ, ಮಹಾವ್ರತಗಳ ಆಚರಣೆಯಿಂದಲೂ, ಬಾಹ್ಯೇಂದ್ರಿಯ ನಿಗ್ರಹದಿಂದಲೂ, ಅಂತರಿಂದ್ರಿಯ ನಿಗ್ರಹದಿಂದಲೂ, ಯೋಗಾಭ್ಯಾಸದಿಂದಲೂ, ಮಹಾಯಜ್ಞಗಳನ್ನು ನೆರವೇರಿಸುವುದರಿಂದಲೂ, ವೇದಾಂತಶಾಸ್ತ್ರವನ್ನು ಅಭ್ಯಾಸಮಾಡುವುದರಿಂದಲೂ, ಸಕಲ ಉಪನಿಷತ್ತುಗಳ ರಹಸ್ಯಗಳನ್ನು ತಿಳಿಯುವುದರಿಂದಲೂ, ಯಾವ ಮೋಕ್ಷವೆಂಬ ಪರಮ ಪುರುಷಾರ್ಥವು ಲಭಿಸುವುದೊ, ಅದು ಕಾಶಿಯಲ್ಲಿ ಅನಾಯಾಸವಾಗಿಯೇ ಸಿಕ್ಕುವುದು.

೧೧೯. ಕರ್ಮಸೂತ್ರದಿಂದ ಸಂಬದ್ಧರಾದ ಜೀವರು ವಿಶ್ವೇಶ್ವರನಾದ ನನ್ನ

**ಕಾಶ್ಯಾಂ ಸ್ವಲೀಲಯಾ ದೇವಿ ತಿರ್ಯಗ್ಯೋನಿಜುಷಾಮಪಿ ।**
**ದದಾಮಿ ಚಾಂತೇ ತತ್ಸ್ಥಾನಂ ಯತ್ರ ಯಾಂತಿ ನ ಯಾಜ್ಞಿಕಾಃ ॥ ೧೨೦ ॥**
**ಭೂತಗ್ರಾಮೋಽಖಿಲೋಽಪ್ಯತ್ರ ಮುಕ್ತಿಕ್ಷೇತ್ರೇ ಕೃತಾಲಯಃ ।**
**ಕಾಲೇನ ನಿಧನಂ ಯಾತೋ ಯಾತ್ಯೇವ ಪರಮಾಂ ಗತಿಂ ॥ ೧೨೧ ॥**
**ವಿಷಯಾಸಕ್ತಚಿತ್ತೋಽಪಿ ತ್ಯಕ್ತಧರ್ಮರತಿಸ್ತ್ವಪಿ ।**
**ಕಾಲೇನೋಜ್ಝಿತದೇಹೋಽತ್ರ ನ ಸಂಸಾರಂ ಪುನರ್ವಿಶೇತ್ ॥ ೧೨೨ ॥**
**ಪ್ರಯಾಗೇ ಯತ್ಫಲಂ ದೇವಿ ಮಾಘೇ ಚೋಷಸಿ ಮಜ್ಜನಾತ್ ।**
**ತತ್ಫಲಂ ಕೋಟಿಗುಣಿತಂ ವಾರಾಣಸ್ಯಾಂ ಕ್ಷಣೇಕ್ಷಣೇ ॥ ೧೨೩ ॥**
**ಅಸ್ಯ ಕ್ಷೇತ್ರಸ್ಯ ಮಹಿಮಾ ಕೋಽಪಿ ವಾಚಾಮಗೋಚರಃ ।**
**ಉದ್ದೇಶಮಾತ್ರಮಾಖ್ಯಾಯಿ ಮಯಾ ತೇ ಪ್ರೀತಿಕಾಮ್ಯಯಾ ॥ ೧೨೪ ॥**

---

ಕ್ಷೇತ್ರದಲ್ಲಿ ಎಲ್ಲಿಯವರೆಗೂ ದೇಹವನ್ನು ತ್ಯಾಗಮಾಡುವುದಿಲ್ಲವೊ, ಅಲ್ಲಿಯವರೆಗೆ ಮಾತ್ರ ಸಂಸಾರಚಕ್ರದಲ್ಲಿ ಭ್ರಮಿಸುತ್ತಿರುವರು.

೧೨೦. ದೇವಿಯೆ! ಕಾಶಿಯಲ್ಲಿ ನೀಚಯೋನಿಗಳಲ್ಲಿ ಹುಟ್ಟಿರುವ ಪ್ರಾಣಿಗಳಿಗೂ, ದೇಹಾವಸಾನಕಾಲದಲ್ಲಿ ಯಜ್ಞಯಾಗಾದಿಗಳನ್ನು ಮಾಡಿದವರಿಗೂ ಸಹ ದುರ್ಲಭವಾದ ಸ್ಥಾನವನ್ನು ನಾನು ಲೀಲಾಮಾತ್ರದಿಂದಲೇ ಕೊಡುವೆನು.

೧೨೧. ಮುಕ್ತಿಕ್ಷೇತ್ರವೆನಿಸಿದ ಕಾಶಿಯಲ್ಲಿ ವಾಸಮಾಡಿಕೊಂಡಿರುವ ಸಮಸ್ತ ಪ್ರಾಣಿ ಸಮೂಹವೂ ಸಹ ಯಥಾಕಾಲದಲ್ಲಿ ಮರಣವನ್ನು ಹೊಂದಲು ಉತ್ತಮ ಗತಿಯನ್ನೇ ಹೊಂದುವುದು.

೧೨೨. ವಿಷಯಸುಖಗಳಲ್ಲಿ ನಿರತನಾದವನೇ ಆಗಲಿ, ವರ್ಣಾಶ್ರಮ ಧರ್ಮಗಳನ್ನು ತ್ಯಜಿಸಿದವನೇ ಆಗಲಿ ಯಥಾಕಾಲದಲ್ಲಿ ಇಲ್ಲಿ ದೇಹವನ್ನು ಬಿಡಲು ಪುನಃ ಸಂಸಾರವನ್ನು ಪ್ರವೇಶಿಸುವುದಿಲ್ಲ.

೧೨೩. ಎಲೌ ದೇವಿಯೆ! ಮಾಘಮಾಸದಲ್ಲಿ ಉಷಃಕಾಲದಲ್ಲಿ ಪ್ರಯಾಗದಲ್ಲಿ ಸ್ನಾನವನ್ನು ಮಾಡುವುದರಿಂದ ಯಾವ ಫಲವುಂಟೋ ಅದರ ಕೋಟಿ ಗುಣಿತವಾದ ಫಲವು ವಾರಾಣಸೀಕ್ಷೇತ್ರದಲ್ಲಿ ವಾಸಮಾಡುವವರಿಗೆ ಒಂದೊಂದು ಕ್ಷಣಕ್ಕೂ ಲಭಿಸುವುದು.

೧೨೪. ಈ ಕ್ಷೇತ್ರದ ಮಹಿಮೆಯು ಅಪಾರವಾದುದು. ಯಾರ ಮಾತಿಗೂ ಸಿಕ್ಕುವುದಲ್ಲ. ನಿನ್ನಲ್ಲಿರುವ ಪ್ರೀತಿವಿಶ್ವಾಸಗಳಿಗಾಗಿ ನಾನು ಉದ್ದೇಶಮಾತ್ರಕ್ಕಾಗಿ ನಿನಗೆ ಅಲ್ಪವಾಗಿ ತಿಳಿಸಿರುವೆನು.

ಚತುರ್ದಶಾನಾಂ ಲಿಂಗಾನಾಂ ಶ್ರುತ್ವಾಖ್ಯಾನಾನಿ ಸತ್ತಮಃ ।
ಚತುರ್ದಶಸು ಲೋಕೇಷು ಪೂಜಾಂ ಪ್ರಾಪ್ಸ್ಯತ್ಯನುತ್ತಮಾಂ ॥ ೧೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವಿಶ್ವಕರ್ಮೇಶಪ್ರಾದುರ್ಭಾವವರ್ಣನಂ" ನಾಮ ಷಡಶೀತಿತಮೋಽಧ್ಯಾಯಃ

---

೧೨೫. ಈ ಹದಿನಾಲ್ಕು ಲಿಂಗಗಳ ಚರಿತ್ರೆಗಳನ್ನು ಯಾವ ಪುಣ್ಯಪುರುಷನು ಕೇಳುವನೊ, ಅವನು ಹದಿನಾಲ್ಕು ಲೋಕಗಳಲ್ಲಿಯೂ ಸರ್ವೋತ್ತಮಗಳಾದ ಪೂಜಾದಿ ಗೌರವಗಳನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವಿಶ್ವಕರ್ಮೇಶ್ವರಾವಿರ್ಭಾವವರ್ಣನ"ವೆಂಬ ಎಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಾಶೀತಿತಮೋಽಧ್ಯಾಯಃ

## ದಕ್ಷಯಜ್ಞವರ್ಣನಂ

ಅಗಸ್ತ್ಯ ಉವಾಚ :—

**ಸರ್ವಜ್ಞಸೂನೋ ಷಡ್ವಕ್ತ್ರ ಸರ್ವಾರ್ಥಕುಶಲ ಪ್ರಭೋ ।**
**ಪ್ರಾದುರ್ಭಾವಂ ನಿಶಮ್ಯೈಷಾಂ ಲಿಂಗಾನಾಂ ಮುಕ್ತಿದಾಯಿನಾಂ ।**
**ನಿತರಾಂ ಪರಿತೃಪ್ತೋಽಸ್ಮಿ ಸುಧಾಂ ಪೀತ್ವೇವ ನಿರ್ಜರಃ ॥ ೧ ॥**
**ಓಂಕಾರಪ್ರಮುಖೈರ್ಲಿಂಗೈರಿದಮಾನಂದಕಾನನಂ ।**
**ಆನಂದಮೇವ ಜನಯೇದಪಿ ಪಾಪಜುಷಾಮಿಹ ॥ ೨ ॥**
**ಪರಾನಂದಮಹಂ ಪ್ರಾಪ್ತಃ ಶ್ರುತ್ವೈತಲ್ಲಿಂಗಕೀರ್ತನಂ ।**
**ಜೀವನ್ಮುಕ್ತ ಇವಾಸಂ ಹಿ ಕ್ಷೇತ್ರತತ್ತ್ವಶ್ರುತೇರಹಂ ॥ ೩ ॥**
**ಸ್ಕಂದ ದಕ್ಷೇಶ್ವರಾದೀನಿ ಲಿಂಗಾನೀಹ ಚತುರ್ದಶ ।**
**ಯಾನ್ಯುಕ್ತಾನಿ ಸಮಾಚಕ್ಷ್ವ ತತ್ಪ್ರಭಾವಮಶೇಷತಃ ॥ ೪ ॥**

---

## ಕನ್ನಡದ ಅನುವಾದ

### ದಕ್ಷಯಜ್ಞವರ್ಣನ

೧. ಅಗಸ್ತ್ಯನು ಹೇಳುತ್ತಾನೆ :—ಸರ್ವಜ್ಞನಾದ ಓ ಮಹೇಶ್ವರನ ಪುತ್ರನೆ! ಷಡಾನನ! ನೀನು ಸರ್ವವಿಷಯಗಳನ್ನೂ ತಿಳಿದ ಕುಶಲನು! ಸ್ವಾಮಿಯೆ! ಮುಕ್ತಿದಾಯಕಗಳೆಂದು ಪ್ರಸಿದ್ಧಗಳಾಗಿರುವ ಈ ಲಿಂಗಗಳು ಉದ್ಭವಿಸಿದ ಚರಿತ್ರೆಗಳೆಲ್ಲವನ್ನೂ ಕೇಳಿ ನಾನು ಅಮೃತವನ್ನು ಪಾನಮಾಡಿದ ದೇವತೆಯಂತೆ ಅತ್ಯಂತ ಸಂತೃಪ್ತಿಯನ್ನು ಹೊಂದಿರುವೆನು.

೨. ಓಂಕಾರೇಶ್ವರವೇ ಮೊದಲಾದ ಈ ಲಿಂಗಗಳ ಸಾನ್ನಿಧ್ಯದಿಂದ ಈ ಆನಂದಕಾನನವು ಪಾಪಗಳನ್ನು ಮಾಡಿದವರಿಗೂ ಸಹ ಆನಂದವನ್ನೇ ಉಂಟುಮಾಡುತ್ತಿರುವುದು.

೩. ಈ ಲಿಂಗಗಳ ಚರಿತ್ರೆಗಳನ್ನು ಕೇಳಿ ನಾನು ಮಹತ್ತರವಾದ ಆನಂದವನ್ನು ಹೊಂದಿರುವೆನಲ್ಲದೆ ಈ ಕ್ಷೇತ್ರದ ಯಥಾರ್ಥಸ್ಥಿತಿಯನ್ನು ನಿನ್ನಿಂದ ಕೇಳಿ ನಾನು ಜೀವನ್ಮುಕ್ತಿಯನ್ನು ಹೊಂದಿದವನಾದೆನು.

೪. ಎಲೈ ಷಣ್ಮುಖನೆ! ಹಿಂದೆ ನೀನು ದಕ್ಷೇಶ್ವರನೇ ಮೊದಲಾದ ಹದಿನಾಲ್ಕು ಲಿಂಗಗಳನ್ನು ನಿರೂಪಿಸಿದೆಯಲ್ಲವೆ. ಅವುಗಳ ಮಾಹಾತ್ಮ್ಯಗಳನ್ನು ನಿಸ್ಸಂದೇಹವಾಗಿ ನನಗೆ ವಿವರಿಸುವವನಾಗು.

ಯೋ ದಕ್ಷೋ ಗರ್ಹಯಾಮಾಸ ಮಧ್ಯೇ ದೇವಸಭಂ ವಿಭುಂ ।
ಸ ಕಥಂ ಲಿಂಗಮಿಶಸ್ಯ ಪ್ರತ್ಯಸ್ಥಾಪಯದದ್ಭುತಂ ॥ ೫ ॥
ಇತಿ ಶ್ರುತ್ವಾ ಶಿಖಿರಥಃ ಕುಂಭಯೋನೇರುದೀರಿತಂ ।
ಸೂತ ಸಂಕಥಯಾಮಾಸ ದಕ್ಷೇಶ್ವರಸಮುದ್ಭವಂ ॥ ೬ ॥

ಸ್ಕಂದ ಉವಾಚ:—

ಆಕರ್ಣಯ ಮುನೇ ವಚ್ಮಿ ಕಥಾಂ ಕಲ್ಮಷಹಾರಿಣೀಂ ।
ಪುರಶ್ಚರಣಕಾಮೋಽಸೌ ದಕ್ಷಃ ಕಾಶೀಂ ಸಮಾಯಯೌ ॥ ೭ ॥
ಭಾಗವಕ್ತ್ರೋ ವಿರೂಪಾಸ್ಯೋ ದಧೀಚಪರಿಧಿಕ್ಕೃತಃ ।
ಪ್ರಾಯಶ್ಚಿತ್ತವಿಧಾನಾರ್ಥಂ ಸೂಪದಿಷ್ಟಃ ಸ್ವಯಂಭುವಾ ॥ ೮ ॥
ಏಕದಾ ದೇವದೇವಸ್ಯ ಸೇವಾರ್ಥಂ ಶಶಿಮೌಲಿನಃ ।
ಕೈಲಾಸಮಗಮದ್ವಿಷ್ಣುಃ ಪದ್ಮಯೋನಿಪುರಸ್ಕೃತಃ ॥ ೯ ॥
ಇಂದ್ರಾದಯೋ ಲೋಕಪಾಲಾ ವಿಶ್ವೇದೇವಾ ಮರುದ್ಗಣಾಃ ।
ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿದ್ಯಾಧರೋರಗಾಃ ॥ ೧೦ ॥

---

೫. ಯಾವನು ದೇವಸಭೆಯ ಮಧ್ಯದಲ್ಲಿ ಸರ್ವೇಶ್ವರನಾದ ಶಿವನನ್ನು ಒಹುವಾಗಿ ನಿಂದಿಸಿದನೊ, ಆ ದಕ್ಷಬ್ರಹ್ಮನು ಅದ್ಭುತವಾದ ಶಿವಲಿಂಗವನ್ನು ಇಲ್ಲಿ ಸ್ಥಾಪನೆಮಾಡಿದುದಕ್ಕೆ ಕಾರಣವೇನು?

೬. ಎಲೈ ಸೂತನೆ! ಇಂತೆಂದ ಕುಂಭಸಂಭವನ ಮಾತುಗಳನ್ನು ಕೇಳಿ ಮಯೂರವಾಹನನಾದ ಷಡಾನನನು ದಕ್ಷೇಶ್ವರಲಿಂಗವು ಉದ್ಭವಿಸಿದ ಚರಿತ್ರೆಯನ್ನು ಆತನಿಗೆ ಕಥನಮಾಡತೊಡಗಿದನು.

೭. ಸ್ಕಂದನು ಹೇಳುತ್ತಾನೆ:—ಮುನಿವರ್ಯ! ಸಮಸ್ತ ಪಾತಕಗಳನ್ನೂ ಪರಿಹರಿಸುವ ಈ ಕಥೆಯನ್ನು ಹೇಳುವೆನು, ಕೇಳು. ಶಿವನಾಮಗಳನ್ನು ಪುರಶ್ಚರಣಮಾಡಬೇಕೆಂಬ ಅಭಿಲಾಷೆಯಿಂದ ದಕ್ಷಪ್ರಜಾಪತಿಯು ಒಮ್ಮೆ ಕಾಶೀಕ್ಷೇತ್ರಕ್ಕೆ ಬಂದನು.

೮. ಮೇಕೆಯ ಮುಖವುಳ್ಳವನೂ, ವಿಕಾರಾವಯವಸಹಿತನೂ ಆಗಿ, ದಧೀಚಿಮಹರ್ಷಿಯಿಂದ ಅನೇಕ ಧಿಕ್ಕಾರಗಳನ್ನು ಕೇಳಿ, ತನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವೇನೆಂದು ಕೇಳಲು ಬ್ರಹ್ಮದೇವನು ಇದನ್ನೇ ಆತನಿಗೆ ಉಪದೇಶ ಮಾಡಿದನು.

೯. ಒಮ್ಮೆ ಮಹಾದೇವನಾದ ಚಂದ್ರಮೌಳೀಶ್ವರನ ಸೇವೆಯನ್ನು ಮಾಡಲು ಮಹಾವಿಷ್ಣುವು ಪದ್ಮಸಂಭವನಾದ ಬ್ರಹ್ಮನನ್ನು ಮುಂದು ಮಾಡಿಕೊಂಡು ಕೈಲಾಸಕ್ಕೆ ಬಂದನು.

೧೦–೧೧. ಮಹೇಂದ್ರನೇ ಮೊದಲಾದ ಲೋಕಪಾಲಕರೂ, ವಿಶ್ವೇದೇವರೂ,

ಋಷಯೋಽಪ್ಸರಸೋ ಯಕ್ಷಾಃ ಗಂಧರ್ವಾಃ ಸಿದ್ಧಚಾರಣಾಃ ।
ತೈರ್ನತೋ ದೇವದೇವೇಶಃ ಪರಿಹೃಷ್ಟತನೂರುಹೈಃ ॥ ೧೧ ॥
ಸ್ತುತಶ್ಚ ನಾನಾಸ್ತುತಿಭಿಃ ಶಂಭುನಾಪಿ ಕೃತಾದರಾಃ ।
ವಿವಿಶುಶ್ಚಾಸನಶ್ರೇಣ್ಯಾಂ ತನ್ಮುಖಾಸಕ್ತದೃಷ್ಟಯಃ ॥ ೧೨ ॥
ಅಥ ತೇಷೂಪವಿಷ್ಟೇಷು ಶಂಭುನಾ ವಿಷ್ಟರಶ್ರವಾಃ ।
ಕೃತಹಸ್ತಪರಿಸ್ಪರ್ಶಮಾನಃ ಸ್ಪೃಷ್ಟೋ ಮಹಾದರಂ ॥ ೧೩ ॥
ಶ್ರೀವತ್ಸಲಾಂಛನ ಹರೇ ದೈತ್ಯವಂಶದವಾನಲ ।
ಕಚ್ಚಿತ್ಪಾಲಯಿತುಂ ಶಕ್ತಿಸ್ತ್ರಿಲೋಕೀಮಸ್ತ್ಯಕುಂಠಿತಾ ॥ ೧೪ ॥
ದಿತಿಜಾನ್ದನುಜಾನ್ದುಷ್ಟಾನ್ಕಚ್ಚಿಚ್ಛಾಸಿ ರಣಾಂಗಣೇ ।
ಅಪಿ·ಕೃದ್ಧಾನ್ಮಹೀದೇವಾನ್ಮಾಮಿವ ಪ್ರತಿಮನ್ಯಸೇ ॥ ೧೫ ॥
ಬಾಧಯಾ ರಹಿತಾ ಗಾವಃ ಕಚ್ಚಿತ್ಸಂತಿ ಮಹೀತಲೇ ।
ಸ್ತ್ರಿಯಃ ಸಂತಿ ಹಿ ಸುಶ್ರೀಕಾಃ ಪತಿವ್ರತಪರಾಯಣಾಃ ॥ ೧೬ ॥

---

ಮರುತ್ತುಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಸಾಧ್ಯರೂ, ವಿದ್ಯಾಧರರೂ, ನಾಗರೂ, ಮಹರ್ಷಿಗಳೂ, ಅಪ್ಸರರೂ, ಯಕ್ಷ ಗಂಧರ್ವ ಸಿದ್ಧಗಣಗಳೂ, ಚಾರಣರೂ, ಆತನನ್ನು ಸುತ್ತುವರೆದು ಬಂದರು. ಅವರೆಲ್ಲರೂ ಸಂತೋಷದಿಂದ ಪುಳಕಾಂಕಿತಶರೀರರಾಗಿ ಆ ಮಹಾದೇವನಿಗೆ ನಮಸ್ಕಾರಗಳನ್ನು ಮಾಡಿದವರಾದರು.

೧೨. ಅನೇಕ ಸ್ತೋತ್ರಗಳಿಂದ ಆತನನ್ನು ಸ್ತುತಿಸಿದರು. ಮಹೇಶ್ವರನೂ ಅವರನ್ನು ಆದರದಿಂದ ಬರಮಾಡಿಕೊಂಡನು. ಬಳಿಕ ಎಲ್ಲರೂ ತಮಗೆ ಉಚಿತಗಳಾದ ಆಸನಪಙ್ತಿಗಳಲ್ಲಿ ಕುಳಿತುಕೊಂಡು ಪರಮೇಶ್ವರನ ಮುಖಪದ್ಮದಲ್ಲಿಯೇ ನಟ್ಟದೃಷ್ಟಿಯುಳ್ಳವರಾಗಿದ್ದರು.

೧೩. ಅವರೆಲ್ಲರೂ ಆಸನಾಸೀನರಾಗಿರಲು ಮಹಾದೇವನು ಕೈಯನ್ನು ನೀಡಿ ಮಹಾವಿಷ್ಣುವನ್ನು ಬರಮಾಡಿಕೊಂಡು ಮೈದಡವಿ ಮರ್ಯಾದೆಯನ್ನು ಮಾಡಿ ಆದರದಿಂದ ಪ್ರಶ್ನೆಮಾಡಿದನು.

೧೪. "ಶ್ರೀವತ್ಸಾಂಕಿತವಕ್ಷನಾದ ವಿಷ್ಣುವೆ! ದೈತ್ಯಸಮೂಹವೆಂಬ ಅರಣ್ಯಕ್ಕೆ ನೀನು ಕಾಳ್ಗಿಚ್ಚಾಗಿರುವೆ. ಬ್ರಹ್ಮಾಂಡವನ್ನು ಪಾಲಿಸುವುದರಲ್ಲಿ ನಿನ್ನ ಶಕ್ತಿಯು ಅಕುಂಠಿತವಾಗಿರುವುದಷ್ಟೆ?

೧೫. ದಿತೀದೇವಿಯ ಸಂತತಿಯವರಾದ ರಾಕ್ಷಸರನ್ನು ಯುದ್ಧರಂಗದಲ್ಲಿ ಚೆನ್ನಾಗಿ ಶಾಸನಮಾಡುತ್ತಿರುವೆಯಷ್ಟೆ. ಕೋಪಗೊಂಡ ಬ್ರಾಹ್ಮಣರನ್ನೂ ಸಹ ನನ್ನಂತೆಯೇ ಭಯಭಕ್ತಿಗಳಿಂದ ಪುರಸ್ಕರಿಸುತ್ತಿರುವೆಯಷ್ಟೆ?

೧೬. ಭೂಮಂಡಲದಲ್ಲಿ ಗೋವುಗಳು ಹಿಂಸೆಗೊಳಗಾಗದೆ ಸುಖದಿಂದಿರು

ವಿಧಿಯಜ್ಞಾಃ ಪ್ರವರ್ತಂತೇ ಪೃಥಿವ್ಯಾಂ ಬಹುದಕ್ಷಿಣಾಃ ।
ನಿರಾಬಾಧಂ ತಪಃ ಕಚ್ಚಿದಸ್ತಿ ಶಶ್ವತ್ತಪಸ್ವಿನಾಂ ॥ ೧೭ ॥
ನಿಷ್ಪ್ರತ್ಯೂಹಂ ಪಠಂತ್ಯೇವ ಸಾಂಗಾನ್ವೇದಾನ್ದ್ವಿಜೋತ್ತಮಾಃ ।
ಮಹೀಪಾಲಾಃ ಪ್ರಜಾಃ ಕಚ್ಚಿತ್ಪಾಂತಿ ತ್ವಮಿವ ಕೇಶವ ॥ ೧೮ ॥
ಸ್ವೇಷು ಸ್ವೇಷು ಚ ಧರ್ಮೇಷು ಕ್ವಚಿದ್ವರ್ಣಾಶ್ರಮಾಸ್ತಥಾ ।
ನಿಷ್ಠಾವಂತೋ ಹಿ ತಿಷ್ಠಂತಿ ಪ್ರಹೃಷ್ಟೇಂದ್ರಿಯಮಾನಸಾಃ ॥ ೧೯ ॥
ಧೂರ್ಜಟಿಃ ಪರಿಪೃಚ್ಛ್ಯೇತಿ ಹೃಷ್ಟಂ ವೈಕುಂಠನಾಯಕಂ ।
ಬ್ರಹ್ಮಾಣಂ ಚಾಪಿ ಪಪ್ರಚ್ಛ ಬ್ರಾಹ್ಮಂ ತೇಜಃ ಸಮೇಧತೇ ॥ ೨೦ ॥
ಸತ್ಯಮಸ್ಖಲಿತಂ ಕಚ್ಚಿದಸ್ತಿ ತ್ರೈಲೋಕ್ಯಮಂಡಪೇ ।
ತೀರ್ಥಾವರೋಧೋ ನ ಕ್ವಾಪಿ ಕೇನಚಿತ್ಕ್ರಿಯತೇ ವಿಧೇ ॥ ೨೧ ॥
ಇಂದ್ರಾದಯಃ ಸುರಾಃ ಕಚ್ಚಿತ್ಸ್ವೇಷು ಸ್ವೇಷು ಪುರೇಷ್ವಹೋ ।
ರಾಜ್ಯಂ ಪ್ರಶಾಸತಿ ಸ್ವಸ್ಥಾಃ ಕೃಷ್ಣದೋರ್ದಂಡಪಾಲಿತಾಃ ॥ ೨೨ ॥

---

ವುವೆ? ಸ್ತ್ರೀಯರೆಲ್ಲರೂ ಸೌಭಾಗ್ಯವಂತರೂ, ಪತಿಭಕ್ತಿಪರಾಯಣೆಯರೂ ಆಗಿ ವರ್ತಿಸುತ್ತಿರುವರಲ್ಲವೆ?

೧೭. ಭೂಮಿಯಲ್ಲಿ ಬಹುದಕ್ಷಿಣೆಗಳಿಂದೊಡಗೂಡಿದ ಯಜ್ಞಯಾಗಾದಿಗಳು ಶಾಸ್ತ್ರೋಕ್ತಕ್ರಮದಿಂದ ನಡೆಯುತ್ತಿರುವುವಲ್ಲವೆ? ತಾಪಸೋತ್ತಮರ ತಪಸ್ಸುಗಳು ನಿರಾತಂಕವಾಗಿಯೂ ನಿರಂತರವಾಗಿಯೂ ನಡೆಯುತ್ತಿರುವುವೆ?

೧೮. ಬ್ರಾಹ್ಮಣೋತ್ತಮರೆಲ್ಲರೂ ಸಕಲ ವಿಘ್ನಗಳಿಂದಲೂ ದೂರರಾಗಿ ಷಡಂಗಸಹಿತಗಳಾದ ವೇದಗಳನ್ನು ಅಧ್ಯಯನಮಾಡುತ್ತಿರುವರೆ? ಕೇಶವ! ನೀನು ಸಕಲ ಬ್ರಹ್ಮಾಂಡವನ್ನೂ ಪಾಲಿಸುತ್ತಿರುವಂತೆಯೇ ಮಹಾರಾಜರೂ ಸಹ ತಮ್ಮತಮ್ಮ ರಾಜ್ಯಗಳನ್ನು ಪಾಲಿಸುತ್ತಿರುವರೆ?

೧೯. ಸಕಲ ಮಾನವರೂ ಸಂತೋಷಗೊಂಡ ಮನಸ್ಸಿನಿಂದಲೂ ಇಂದ್ರಿಯಗಳಿಂದಲೂ ಕೂಡಿದವರಾಗಿ ತದೇಕನಿಷ್ಠರೆನಿಸಿ ತಮ್ಮತಮ್ಮ ವರ್ಣಾಶ್ರಮಗಳಿಗೆ ಉಚಿತಗಳಾದ ಧರ್ಮಗಳಲ್ಲಿಯೇ ಆಸಕ್ತರಾಗಿರುವರೆ?''

೨೦. ಇಂತೆಂದು ಮಹಾದೇವನು ಹೃಷ್ಟನಾದ ವಿಷ್ಣುವನ್ನು ಕುಶಲಪ್ರಶ್ನೆಯನ್ನು ಮಾಡಿದ ಬಳಿಕ ಬ್ರಹ್ಮನನ್ನೂ ಕೇಳತೊಡಗಿದನು. ''ಚತುರ್ಮುಖನೆ! ನಿನ್ನ ಬ್ರಾಹ್ಮತೇಜಸ್ಸು ಅಭಿವೃದ್ಧಿಯನ್ನು ಹೊಂದುತ್ತಿರುವುದೆ?

೨೧. ಮೂರು ಲೋಕಗಳನ್ನೊಳಕೊಂಡ ಬ್ರಹ್ಮಾಂಡಮಂಟಪದಲ್ಲಿ ಸತ್ಯವು ಅಸ್ಖಲಿತವಾಗಿ ನಡೆದುಕೊಂಡು ಬರುತ್ತಿರುವುದೆ? ಬ್ರಹ್ಮದೇವ! ಎಲ್ಲಿಯೂ ಯಾರಿಂದಲೂ ಮಹಾತ್ಮರಿಗೆ ಅವಮಾನಾದಿಗಳು ನಡೆಯುತ್ತಿಲ್ಲವಷ್ಟೆ!

೨೨. ಇಂದ್ರನೇ ಮೊದಲಾದ ಸಕಲ ದೇವತೆಗಳೂ ತಮ್ಮತಮ್ಮ ಪಟ್ಟಣ

**ಪ್ರತ್ಯೇಕಂ ಪರಿಪೃಚ್ಛ್ಯೇಶಃ ಸರ್ವಾನಿತ್ಥಂ ಕೃತಾದರಾನ್ ।**
**ಪೃಷ್ಟ್ವಾಗಮನಕಾರ್ಯಂ ಚ ತೇಷಾಂ ಕೃತ್ವಾ ಮನೋರಥಾನ್ ॥ ೨೩ ॥**
**ವಿಸಸರ್ಜಾಥ ತಾನ್ಸರ್ವಾನ್ದೇವಃ ಸೌಧಂ ಸಮಾವಿಶತ್ ।**
**ಗತೇಷ್ವಥ ಚ ದೇವೇಷು ಸ್ವಸ್ವಧಿಷ್ಣ್ಯೇಷು ಹೃಷ್ಟವತ್ ॥ ೨೪ ॥**
**ಮಧ್ಯೇ ಮಾರ್ಗಂ ಸ ಚಿಂತೋಽಭೂದ್ದಕ್ಷಃ ಸತ್ಯಾಃ ಪಿತಾ ತದಾ ।**
**ಅನ್ಯದೇವಸಮಾನಂ ಸ ಮಾನಂ ಪ್ರಾಪ ನ ಚಾಧಿಕಂ ॥ ೨೫ ॥**
**ಅತೀವಕ್ಷುಬ್ಧಚಿತ್ತೋಽಭೂನ್ಮಂದರಾಘಾತತೋಽಬ್ಧಿವತ್ ।**
**ಉವಾಚ ಚ ಮನಸ್ಯೇತನ್ಮಹಾಕ್ರೋಧರಯಾಂಧದೃಕ್ ॥ ೨೬ ॥**
**ಅತೀವ ಗರ್ವಿತೋ ಜಾತಃ ಸತೀಂ ಮೇ ಪ್ರಾಪ್ಯ ಕನ್ಯಕಾಂ ।**
**ಕಸ್ಯಚಿನ್ನಾಪ್ಯಸೌ ಪ್ರಾಯೋ ನ ಕೋಽಸ್ಯಾಪಿ ಕ್ವಚಿತ್ಪುನಃ ॥ ೨೭ ॥**
**ಕಿಂವಂಶ್ಯಸ್ತ್ವೇಷ ಕಿಂಗೋತ್ರಃ ಕಿಂದೇಶೀಯಃ ಕಿಮಾತ್ಮಕಃ ।**
**ಕಿಂವೃತ್ತಿಃ ಕಿಂಸಮಾಚಾರೋ ವಿಷಾದೀ ವೃಷವಾಹನಃ ॥ ೨೮ ॥**

---

ಗಳಲ್ಲಿ ನೆಲಸಿ ಶ್ರೀ ಕೃಷ್ಣನ ಬಾಹುಪರಾಕ್ರಮದಿಂದ ಪಾಲಿತರಾಗಿ ಸುಖದಿಂದ ತಮ್ಮ ಅಧಿಕಾರಗಳನ್ನು ನಡೆಸುತ್ತಿರುವರೆ?''

೨೩. ಇಂತು ಮಹೇಶ್ವರನು ಎಲ್ಲರನ್ನೂ ಬೇರೆಬೇರೆಯಾಗಿ ಆದರದಿಂದ ಯೋಗಕ್ಷೇಮವನ್ನು ವಿಚಾರಿಸಿ, ಅವರು ಬಂದುದಕ್ಕೆ ಕಾರಣವನ್ನು ಕೇಳಿ, ಅವರ ಮನೋರಥಗಳೆಲ್ಲವನ್ನೂ ಸಂಪೂರ್ಣಗೊಳಿಸಿದನು.

೨೪–೨೫. ಬಳಿಕ ಅವರೆಲ್ಲರನ್ನೂ ಬೀಳ್ಕೊಟ್ಟು ಆ ದೇವದೇವನು ತನ್ನ ಅರಮನೆಯನ್ನು ಪ್ರವೇಶಿಸಿದನು. ಆಗ ದೇವತೆಗಳೆಲ್ಲರೂ ಸಂತುಷ್ಟರಾಗಿ ತಮ್ಮ ನಿವಾಸಗಳಿಗೆ ಹೊರಟುಹೋಗುತ್ತಿರಲು ಸತೀದೇವಿಯ ತಂದೆಯಾದ ದಕ್ಷಪ್ರಜೇಶ್ವರನು ಮಾರ್ಗಮಧ್ಯದಲ್ಲಿ ಚಿಂತಾಪರಾಯಣನಾದನು. ಅವನು, ಮಹೇಶ್ವರನಲ್ಲಿಯೂ ಇತರದೇವತೆಗಳಿಗೆ ಸಮಾನವಾದ ಶಕ್ತಿಯನ್ನೇ ನೋಡಿದನಲ್ಲದೆ ಯಾವ ವಿಧವಾದ ಆಧಿಕ್ಯವನ್ನೂ ಕಾಣಲಿಲ್ಲ.

೨೬. ಮಂದರಪರ್ವತದ ಆಘಾತದಿಂದ ಸಮುದ್ರವು ಉಕ್ಕುವಂತೆ ಆತನ ಮನಸ್ಸು ಬಹಳ ಉಲ್ಲಕಲ್ಲೋಲವಾಯಿತು. ಮಹಾಕ್ರೋಧದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಅವನು ತನ್ನಲ್ಲಿಯೇ ಹೀಗೆಂದುಕೊಂಡನು.

೨೭. ''ಈ ಮಹಾದೇವನು ನನ್ನ ಮಗಳಾದ ಸತಿಯನ್ನು ಪಡೆದಮೇಲೆ ಅತ್ಯಂತ ಗರ್ವದಿಂದ ಕೂಡಿರುವನು. ಇವನು ಯಾರಿಗೂ ಬಂಧುವಾಗಿಲ್ಲ. ಇವನಿಗೂ ಯಾರೂ ಬಂಧುಗಳಿಲ್ಲ.

೨೮. ಇವನು ಯಾವ ವಂಶದವನು? ಇವನ ಗೋತ್ರವು ಯಾವುದು? ದೇಶವೆಲ್ಲಿರುವುದು? ಇವನ ಸ್ವರೂಪವೆಂತಹುದು? ಇವನ ಜೀವನೋಪಾಯ

ನ ಪ್ರಾಯುಶಸ್ತಪಸ್ವ್ಯೇಷ ಕ್ವ ತಪಃ ಕ್ವಾಸ್ತ್ರಧಾರಣಾ ।
ನ ಗೃಹಸ್ಥೇಷು ಗಣ್ಯೋಽಸೌ ಶ್ಮಶಾನನಿಲಯೋ ಯತಃ ॥ ೨೯ ॥
ಅಸೌ ನ ಬ್ರಹ್ಮಚಾರೀ ಸ್ಯಾತ್ಕೃತಪಾಣಿಗ್ರಹಸ್ಥಿತಿಃ ।
ವಾನಪ್ರಸ್ಥ್ಯಂ ಕುತಶ್ಚಾಸ್ಮಿನ್ನೈಶ್ವರ್ಯಮದನೋಹಿತೇ ॥ ೩೦ ॥
ನ ಬ್ರಾಹ್ಮಣೋ ಭವತ್ಯೇಷ ಯತೋ ವೇದೋ ನ ವೇತ್ತ್ಯಮುಂ ।
ಶಸ್ತ್ರಾಸ್ತ್ರಧರಣಾತ್ಪ್ರಾಯಃ ಕ್ಷತ್ರಿಯಃ ಸ್ಯಾನ್ನ ಸೋಽಪ್ಯಯಂ ॥ ೩೧ ॥
ಕ್ಷತಾತ್ಸಂತ್ರಾಣನಾತ್ಕ್ಷತ್ರಂ ತತ್ಕ್ವಾಸ್ಮಿನ್ಪ್ರಲಯಪ್ರಿಯೇ ।
ವೈಶ್ಯೋಽಪಿ ನ ಭವೇದೇಷ ಸದಾ ನಿರ್ಧನಚೇಷ್ಟನಃ ॥ ೩೨ ॥
ಶೂದ್ರೋಽಪಿ ನ ಭವೇತ್ಪ್ರಾಯೋ ನಾಗಯಜ್ಞೋಪವೀತವಾನ್ ।
ಏವಂ ವರ್ಣಾಶ್ರಮಾತೀತಃ ಕೋಽಸೌ ಸರ್ವಜ್ಞ ನ ಕೀರ್ತ್ಯತೇ ॥ ೩೩ ॥

---

ವೇನು? ಇವನ ಆಚಾರವ್ಯವಹಾರಗಳೆಂತು? ನಾವು ಕಂಡಂತೆಯೇ ಇವನು ವಿಷವನ್ನು ಭಕ್ಷಣಮಾಡುತ್ತ ಮುದಿ ಎತ್ತನ್ನೇರಿ ಓಡಾಡುತ್ತಿರುವನಲ್ಲವೆ.

೨೯. ಅಲ್ಲದೆ ಇವನು ಸಾಮಾನ್ಯರಂತೆ ತಪಸ್ವಿಯೂ ಅಲ್ಲ. ಶಮದಮಾದಿಗಳಿಂದ ಕೂಡಿದ ತಪಸ್ಸೆಲ್ಲಿ? ಇವನ ಅಸ್ತ್ರಶಸ್ತ್ರಧಾರಣೆಯೆಲ್ಲಿ? ನಿತ್ಯವೂ ಸ್ಮಶಾನಗಳಲ್ಲಿಯೇ ವಾಸಿಸುತ್ತಿರುವುದರಿಂದ ಇವನನ್ನು ಗೃಹಸ್ಥರಲ್ಲಿಯೂ ಗಣನೆಮಾಡುವಂತಿಲ್ಲ.

೩೦. ಇವನು ನನ್ನ ಮಗಳನ್ನು ಮದುವೆಮಾಡಿಕೊಂಡಿರುವನಾದುದರಿಂದ ಬ್ರಹ್ಮಚಾರಿಯೆಂದೂ ಕರೆಯಲಾಗದು. ಐಶ್ವರ್ಯದಿಂದಲೂ ಮದದಿಂದಲೂ ಬುದ್ಧಿಭ್ರಮಣೆಯಾಗಿರುವ ಇವನಲ್ಲಿ ವಾನಪ್ರಸ್ಥಾಶ್ರಮವೂ ಸಲ್ಲದು.

೩೧. ವೇದರಾಶಿಯೂ ಇವನನ್ನು ಶಬ್ದಗಳಿಂದ ತಿಳಿಯಲಾರದಿರುವುದರಿಂದ ಇವನು ಬ್ರಾಹ್ಮಣನೂ ಅಲ್ಲ. ಶಸ್ತ್ರಾಸ್ತ್ರಗಳನ್ನು ಧಾರಣೆಮಾಡಿರುವುದರಿಂದ ಇವನನ್ನು ಕ್ಷತ್ರಿಯನೆಂದು ಕರೆಯೋಣವೆಂದರೆ ಆ ಧರ್ಮಕ್ಕೂ ಇವನ ನಡತೆಯು ಸರಿಹೋಲುವುದಿಲ್ಲ.

೩೨. ಕಷ್ಟಗಳಿಂದ ಸಂರಕ್ಷಿಸುವವನನ್ನೇ ಕ್ಷತ್ರಿಯನೆಂದು ಹೇಳಬೇಕು. ಆದುದರಿಂದ ಪ್ರಳಯಮಾಡುವುದರಲ್ಲಿಯೇ ಆಸಕ್ತನಾಗಿರುವ ಇವನಲ್ಲಿ ಕ್ಷತ್ರಿಯತ್ವವೆಲ್ಲಿಯದು? ಧನಹೀನನಾಗಿ ದಿಗಂಬರನಾಗಿ ತಿರುಗುತ್ತಿರುವ ಇವನು ವೈಶ್ಯನೂ ಆಗಲಾರನು.

೩೩. ಶೂದ್ರನೆಂದಾದರೂ ಕರೆಯಬಹುದೆಂದರೆ ಹಾವುಗಳ ಯಜ್ಞೋಪವೀತವನ್ನು ಧರಿಸಿರುವನು. ಇಂತು ಚತುರ್ವರ್ಣಗಳ ಲಕ್ಷಣಗಳನ್ನೂ ಮೀರಿ ನಡೆಯುತ್ತಿರುವ ಇವನದು ಯಾವ ಧರ್ಮವೆಂಬುದನ್ನು ಎಲ್ಲಿಯೂ ಹೇಳಿರುವುದಿಲ್ಲ.

ಸರ್ವಃ ಪ್ರಕೃತ್ಯಾ ಜ್ಞಾಯೇತ ಸ್ಥಾಣುಃ ಪ್ರಕೃತಿವರ್ಜಿತಃ ।
ಪ್ರಾಯಶಃ ಪುರುಷೋ ನಾಸಾವರ್ಧನಾರೀವಪುರ್ಯತಃ ॥ ೩೪ ॥
ಯೋಷಾಪಿ ನ ಭವೇದೇಷ ಯತೋಽಸೌ ಶ್ಮಶ್ರುಲಾನನಃ ।
ನಪುಂಸಕೋಽಪಿ ನ ಭವೇಲ್ಲಿಂಗಮಸ್ಯ ಯತೋಽರ್ಚ್ಯತೇ ॥ ೩೫ ॥
ಬಾಲೋಽಪಿ ನ ಭವತ್ಯೇಷ ಯತೋಽಯಂ ಬಹುವಾರ್ಷಿಕಃ ।
ಅನಾದಿವೃದ್ಧೋ ಲೋಕೇಷು ಗೀಯತೇ ಚೋಗ್ರ ಏಷ ಯತ್ ॥ ೩೬ ॥
ಅತೋ ಯುವತ್ವಂ ಸಂಭಾವ್ಯಂ ನಾತ್ರ ನೂನಂ ಚಿರಂತನೇ ।
ವೃದ್ಧೋಽಪಿ ನ ಭವತ್ಯೇಷ ಜರಾಮರಣವರ್ಜಿತಃ ॥ ೩೭ ॥
ಬ್ರಹ್ಮಾದೀನ್ಸಂಹರೇತ್ಪ್ರಾಂತೇ ತಥಾಪಿ ನಸ ಪಾತಕೀ ।
ಪುಣ್ಯಲೇಶೋಽಪಿ ನಾಸ್ತ್ಯಸ್ಮಿನ್ಬ್ರಹ್ಮಮೌಲಿಚ್ಛಿದಿಕ್ರಿಯಾ ॥ ೩೮ ॥
ಅಸ್ಥಿನೇಪಥ್ಯವತಿ ಚ ಕ್ವ ಶುಚಿತ್ವಂ ವಿವಾಸಸಿ ।
ತಂ ಬಹೂಕ್ತೇನ ನೋ ಕಿಂಚಿತ್ ಜ್ಞಾಯತೇಽಸ್ಯ ವಿಚೇಷ್ಟಿತಂ ॥ ೩೯ ॥

---

೩೪. ಸಕಲವನ್ನೂ ಪ್ರಕೃತಿಯಿಂದಲೇ ತಿಳಿಯಬೇಕು. ಇವನು ಸ್ಥಾಣುವಾದುದರಿಂದ ಪ್ರಕೃತಿಗೂ ಅತೀತನಾಗಿರುವನು. ಪುರುಷನೆಂದಾದರೂ ಕರೆಯುವುದಕ್ಕೆ ಅವಕಾಶವನ್ನು ಕೊಡದೆ ಅರ್ಧನಾರೀಶರೀರವುಳ್ಳವನಾಗಿರುವನು.

೩೫. ಸ್ತ್ರೀಯೆಂದು ಕರೆಯಬಾರದು. ಗಡ್ಡಮೀಸೆಗಳನ್ನು ತಾಳಿರುವನು. ನಪುಂಸಕನೆಂದೂ ಕರೆಯಲಾಗದು. ಈತನ ಲಿಂಗವನ್ನೇ ಸಕಲರೂ ಪೂಜಿಸುತ್ತಿರುವರಲ್ಲವೆ.

೩೬–೩೭. ವಯಸ್ಸಿನಿಂದ ಇವನು ಬಾಲಕನೂ ಅಲ್ಲ. ಇವನು ಬಹುಕಾಲದಿಂದಿರುವನು. ಸಕಲಲೋಕಗಳಲ್ಲಿಯೂ ಇವನೇ ಅನಾದಿಯಾಗಿ ನೆಲಸಿರುವನೆಂದು ಶಾಸ್ತ್ರಗಳು ಹೇಳುತ್ತಿರುವುವು. ಇವನು ಉಗ್ರನಾಗಿಯೂ ಇರುವನು. ಆದುದರಿಂದ ಚಿರಕಾಲದಿಂದಲೂ ಸಿದ್ಧನೇ ಆಗಿರುವ ಇವನಲ್ಲಿ ಯೌವನಾವಸ್ಥೆಯನ್ನೂ ಆರೋಪಿಸಲಾಗುವುದಿಲ್ಲ. ಅದೂ ಸರಿಹೋಗದು. ಮುಪ್ಪು, ಸಾವುಗಳೆಂಬ ಅವಸ್ಥೆಗಳಿಲ್ಲದ ಇವನನ್ನು ವೃದ್ಧನೆಂದು ಕರೆಯುವುದೂ ಸರಿಯಲ್ಲ.

೩೮. ಮಹಾಪ್ರಳಯದಲ್ಲಿ ಬ್ರಹ್ಮಾದಿಗಳನ್ನೂ ಸಂಹರಿಸುವನಾದರೂ ಇವನು ಪಾತಕಿಯಾಗಿರುವುದಿಲ್ಲ. ಬ್ರಹ್ಮದೇವನ ತಲೆಯನ್ನು ಕೋಪದಿಂದ ಕಡಿದುಹಾಕಿದ ಇವನಲ್ಲಿ ಪುಣ್ಯಲೇಶವೂ ಕಾಣುವುದಿಲ್ಲ.

೩೯. ಮೂಳೆಗಳನ್ನೇ ಅಲಂಕಾರಗಳನ್ನಾಗಿ ಧರಿಸಿ ದಿಗಂಬರನಾಗಿ ತಿರುಗುತ್ತಿರುವ ಇವನಲ್ಲಿ ಶೌಚವೆಲ್ಲಿಯದು? ಹೆಚ್ಚಾಗಿ ಹೇಳುವುದರಿಂದೇನು? ಇವನ ಚೇಷ್ಟೆಯ ಕ್ರಮವನ್ನು ಯಾವ ಮನುಷ್ಯನೂ ತಿಳಿಯಲಾರನು.

ಅಹೋ ಧಾರ್ಷ್ಟ್ಯಂ ಮಹದ್ದೃಷ್ಟಂ ಜಟಿಲಸ್ಯಾದ್ಯ ಚಾದ್ಭುತಂ ।
ಯದಾಸನಾನ್ನೋತ್ಥಿತೋಽಸೌ ದೃಷ್ಟ್ವಾ ಮಾಂ ಶ್ವಶುರಂ ಗುರುಂ ॥೪೦॥
ಏವಂಭೂತಾ ಭವಂತ್ಯೇವ ಮಾತಾಪಿತೃವಿವರ್ಜಿತಾಃ ।
ನಿರ್ಗುಣಾ ಅಕುಲೀನಾಶ್ಚ ಕರ್ಮಭ್ರಷ್ಟಾ ನಿರಂಕುಶಾಃ ॥ ೪೧ ॥
ಸ್ವಚ್ಛಂದಚಾರಿಣೋಽನಾಥಾಃ ಸರ್ವತ್ರ ಸ್ವಾಭಿಮಾನಿನಃ ।
ಅಕಿಂಚನಾ ಅಪಿ ಪ್ರಾಯಸ್ತಥಾಪೀಶ್ವರಮಾನಿನಃ ॥ ೪೨ ॥
ಜಾಮಾತೄಣಾಂ ಸ್ವಭಾವೋಽಯಂ ಪ್ರಾಯಶೋ ಗರ್ವಭಾಜನಂ ।
ಕಿಂಚಿದೈಶ್ವರ್ಯಮಾಸಾದ್ಯ ಭವತ್ಯೇವ ನ ಸಂಶಯಃ ॥ ೪೩ ॥
ದ್ವಿಜರಾಜಃ ಸ ಗರ್ವಿಷ್ಠೋ ರೋಹಿಣೀಪ್ರೇಮನಿರ್ಭರಃ ।
ಕೃತ್ತಿಕಾದಿಷು ಚಾಸ್ನೇಹೀ ಮಯಾ ಶಪ್ತಃ ಕ್ಷಯೀಕೃತಃ ॥ ೪೪ ॥
ಅಸ್ಯಾಹಂ ಗರ್ವಸರ್ವಸ್ವಂ ಹರಿಷ್ಯಾಮ್ಯೇವ ಶೂಲಿನಃ ॥ ೪೫ ॥
ಯಥಾವಮಾನಿತಶ್ಚಾಹಮನೇನಾಸ್ಯ ಗೃಹಂ ಗತಃ ।
ತಥಾಸ್ಯಾಹಂ ಕರಿಷ್ಯಾಮಿ ಮಾನಹೀನಂ ಚ ಸರ್ವತಃ ॥ ೪೬ ॥

---

೪೦. ಆಹಾ! ಮಹತ್ತರವೂ ಅದ್ಭುತವೂ ಆದ ಇವನ ಗರ್ವವನ್ನು ಇಂದು ಕಂಡೆನಲ್ಲವೆ. ಜಟಾಧಾರಿಯಾದ ಇವನು ಮಾವನೂ, ಪೂಜ್ಯನೂ ಆದ ನನ್ನನ್ನು ಕಂಡರೂ ಆಸನದಿಂದೆದ್ದು ಸತ್ಕರಿಸಲಿಲ್ಲ.

೪೧. ತಾಯಿತಂದೆಗಳಿಲ್ಲದ ತಬ್ಬಲಿಗಳು ಇಂತಹ ದುರಾಚಾರನಿರತರೇ ಆಗುವರಲ್ಲವೆ. ಅವರು ಸದ್ಗುಣಹೀನರೂ, ಕುಲಮರ್ಯಾದೆಯಿಲ್ಲದವರೂ, ಕರ್ಮಭ್ರಷ್ಟರೂ, ಸ್ವೇಚ್ಛಾಚಾರಿಗಳೂ ಆಗಿಬಿಡುವರು.

೪೨. ಕೇಳುವವರಿಲ್ಲದೆ ಅನಾಥರಾಗಿ, ಎಲ್ಲ ಸ್ಥಳಗಳಲ್ಲಿಯೂ ಸ್ವಾಭಿಮಾನದಿಂದಲೇ ವರ್ತಿಸುತ್ತ ಪ್ರಾಯಶಃ ದರಿದ್ರರಾಗಿಯೇ ಇರುವರು. ಆದರೂ ತಾವು ಸರ್ವಸ್ವಾಮಿಗಳೆಂದೇ ಹೆಮ್ಮೆಪಡುತ್ತಿರುವರು.

೪೩. ಪ್ರಾಯಶಃ ಗರ್ವಗೊಳ್ಳುತ್ತಿರುವುದೇ ಅಳಿಯಂದಿರ ಸಹಜವಾದ ರೀತಿಯು. ಅಲ್ಲದೆ ಅಲ್ಪವಾದ ಐಶ್ವರ್ಯವನ್ನು ಹೊಂದಿದ್ದರೂ ಗರ್ವಿಷ್ಠರಾಗುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

೪೪. ರೋಹಿಣಿಯಲ್ಲಿಯೇ ಪ್ರೇಮವನ್ನಿಟ್ಟು ಕೃತ್ತಿಕಾದಿ ಇತರ ಪತ್ನಿಯರಲ್ಲಿ ಅನಾದರವನ್ನು ತೋರಿಸುತ್ತ ಗರ್ವಭರಿತನಾಗಿದ್ದ ಚಂದ್ರನಿಗೆ ನಾನು ಶಾಪವನ್ನು ಕೊಟ್ಟು ಕ್ಷಯವನ್ನು ಹೊಂದುವಂತೆ ಮಾಡಿದೆನು.

೪೫. ಹಾಗೆಯೇ ನಾನು ಈ ತ್ರಿಶೂಲಿಯ ಗರ್ವವನ್ನೂ ಖಂಡಿತವಾಗಿ ನಾಶಮಾಡುವೆನು.

೪೬. ಇವನ ಮನೆಗೆ ಹೋದವೇಳೆಯಲ್ಲಿ ಇವನು ನನ್ನನ್ನು ಹೇಗೆ ಅವಮಾನ

ಸಂಪ್ರಧಾರ್ಯೇತಿ ಬಹುಶಃ ಸ ತು ದಕ್ಷಃ ಪ್ರಜಾಪತಿಃ ।
ಪ್ರಾಪ್ಯ ಸ್ವಭವನಂ ದೇವಾನಾಜುಹಾವ ಸವಾಸವಾನ್ ॥ ೪೭ ॥
ಅಹಂ ಯಿಯಕ್ಷುರ್ಯೂಯಂ ಮೇ ಯಜ್ಞಸಾಹಾಯ್ಯಕಾರಿಣಃ ।
ಭವಂತು ಯಜ್ಞಸಂಭಾರಾನಾನಯಂತು ತ್ವರಾನ್ವಿತಾಃ ॥ ೪೮ ॥
ಶ್ವೇತದ್ವೀಪಮುಖೋ ಗತ್ವಾ ಚಕ್ರೇ ಚಕ್ರಿಣಮಚ್ಯುತಂ ।
ಮಹಾಕ್ರತೂಪದ್ರಷ್ಟಾರಂ ಯಜ್ಞಪೂರುಷಮೇವ ಚ ॥ ೪೯ ॥
ತಸ್ಯರ್ತ್ವಿಜೋಽಭವನ್ಸರ್ವೇ ಋಷಯೋ ಬ್ರಹ್ಮವಾದಿನಃ ।
ಪ್ರಾವರ್ತತ ತತಸ್ತಸ್ಯ ದಕ್ಷಸ್ಯ ಚ ಮಹಾಧ್ವರಃ ॥ ೫೦ ॥
ದೃಷ್ಟ್ವಾ ದೇವನಿಕಾಯಾಂಶ್ಚ ತಸ್ಮಿನ್ದಕ್ಷಮಹಾಧ್ವರೇ ।
ಅನೀಶ್ವರಾಂಸ್ತತೋ ವೇಧಾ ವ್ಯಾಜಂ ಕೃತ್ವಾ ಗೃಹಂ ಯಯೌ ॥ ೫೧ ॥
ದಧೀಚಿರಥ ಸಂವೀಕ್ಷ್ಯ ಸರ್ವಾಂಸ್ತ್ರೈಲೋಕ್ಯವಾಸಿನಃ ।
ದಕ್ಷಯಜ್ಞೇ ಸಮಾಯಾತಾನ್ಸತೀಶ್ವರವಿವರ್ಜಿತಾನ್ ॥ ೫೨ ॥

---

ಮಾಡಿದನೊ, ಹಾಗೆಯೇ ಇವನಿಗೂ ಸರ್ವಲೋಕಗಳಲ್ಲಿಯೂ ಮಾನಹಾನಿಯುಂಟಾಗುವಂತೆ ಒಂದು ಕಾರ್ಯವನ್ನು ಮಾಡುವೆನು.''

೪೭. ಆ ದಕ್ಷಪ್ರಜಾಪತಿಯು ಮನಸ್ಸಿನಲ್ಲಿಯೇ ಇಂತೆಂದು ಅನೇಕ ಆಲೋಚನೆಗಳನ್ನು ಮಾಡುತ್ತ ಮನೆಗೆ ಹಿಂದಿರುಗಿ ಮಹೇಂದ್ರನೇ ಮುಂತಾದ ದೇವತೆಗಳೆಲ್ಲರನ್ನೂ ಕರೆಯಿಸಿಕೊಂಡನು.

೪೮. ನಾನೊಂದು ಯಜ್ಞವನ್ನು ಮಾಡಬೇಕೆಸಿರುವೆನು. ನೀವೆಲ್ಲರೂ ನನ್ನ ಯಜ್ಞದಲ್ಲಿ ಸಹಾಯವನ್ನು ಮಾಡುವವರಾಗಿ ಮತ್ತು ಶೀಘ್ರವಾಗಿ ಯಜ್ಞಕ್ಕೆ ಬೇಕಾದ ಸಕಲ ಸಂಭಾರಗಳನ್ನೂ ತಂದು ಅಣಿಮಾಡಿರಿ.

೪೯. ಬಳಿಕ ಶ್ವೇತದ್ವೀಪಕ್ಕೆ ಹೋಗಿ ಆತನು ಚಕ್ರಪಾಣಿಯಾದ ಮಹಾವಿಷ್ಣುವನ್ನೇ ಆ ಮಹಾಯಜ್ಞಕ್ಕೆ ಯಜ್ಞಪುರುಷನನ್ನಾಗಿಯೂ ವಿಚಾರಣೆಮಾಡುವವನನ್ನಾಗಿಯೂ ವರಿಸಿದನು.

೫೦. ಬ್ರಹ್ಮವಾದಿಗಳಾದ ಸಕಲ ಮಹರ್ಷಿಗಳೂ ಆತನಿಗೆ ಋತ್ವಿಜರಾದರು. ಇಂತು ಆ ದಕ್ಷಪ್ರಜೇಶ್ವರನ ಮಹಾಯಜ್ಞವು ವಿಜೃಂಭಣೆಯಿಂದ ಪ್ರಾರಂಭಿಸಲ್ಪಟ್ಟಿತು.

೫೧. ಬ್ರಹ್ಮದೇವನೂ ಅಲ್ಲಿಗೆ ಬಂದು ಆ ದಕ್ಷಯಜ್ಞಕ್ಕೆ ಸಕಲದೇವತೆಗಳೂ ಬಂದಿದ್ದರೂ ಮಹೇಶ್ವರನಿಲ್ಲದುದನ್ನು ಕಂಡು ಒಂದು ನೆಪವನ್ನು ಹೇಳಿ ತನ್ನ ಮನೆಗೆ ಹಿಂದಿರುಗಿದನು.

೫೨. ಬಳಿಕ ದಧೀಚಿಯು ಮೂರು ಲೋಕಗಳ ನಿವಾಸಿಗಳೆಲ್ಲರೂ ಅಲ್ಲಿಗೆ ಬಂದಿರುವುದನ್ನೂ, ದಕ್ಷನ ಯಜ್ಞಕ್ಕೆ ಸತಿಯ ಪತಿಯಾದ ಮಹಾದೇವನೊಬ್ಬನು ಮಾತ್ರ ಬಾರದಿದ್ದುದನ್ನೂ ನೋಡಿದನು.

ಪ್ರಾಪ್ತಸಂಮಾನಸಂಭಾರಾನ್ವಾಸೋಽಲಂಕೃತಿಪೂರ್ವಕಂ ।
ದಕ್ಷಸ್ಯ ಹಿ ಶುಭೋದರ್ಕಮಿಚ್ಛನ್ನ್ರೋವಾಚ ಚೇತಿ ವೈ ॥ ೫೩ ॥

ದಧೀಚಿರುವಾಚ :—

ದಕ್ಷಪ್ರಜಾಪತೇ ದಕ್ಷ ಸಾಕ್ಷಾದ್ಧಾತೃಸ್ವರೂಪಧೃಕ್ ।
ನ ಚಾಸ್ತಿ ತವ ಸಾಮರ್ಥ್ಯಂ ಕ್ವಾಪಿ ಕಸ್ಯಾಪಿ ನಿಶ್ಚಿತಂ ॥ ೫೪ ॥
ಯಾದೃಶಃ ಕ್ರತುಸಂಭಾರಸ್ತವ ಚೇಹ ಸಮೀಕ್ಷ್ಯತೇ ।
ನ ತಾದೃಙ್ನೇದಸಿ ಪ್ರಾಯಃ ಕ್ವಾಪಿ ಜ್ಞಾತೋ ಮಹಾಮತೇ ॥ ೫೫ ॥
ಕ್ರತುಸ್ತು ನೈವ ಕರ್ತವ್ಯೋ ನಾಸ್ತಿ ಕ್ರತುಸಮೋ ರಿಪುಃ ।
ಕರ್ತವ್ಯಶ್ಚೇತ್ತದಾ ಕಾರ್ಯಃ ಸ್ಯಾಚ್ಚೇತ್ಸಂಪತ್ತಿರೀದೃಶೀ ॥ ೫೬ ॥
ಸಾಕ್ಷಾದಗ್ನಿಃ ಸ್ವಯಂ ಕುಂಡೇ ಸಾಕ್ಷಾದಿಂದ್ರಾದಿದೇವತಾಃ ।
ಸಾಕ್ಷಾಚ್ಚ ಸರ್ವೇ ಮಂತ್ರಾ ವೈ ಸಾಕ್ಷಾದ್ಯಜ್ಞಪುಮಾನಸೌ ॥ ೫೭ ॥
ಆಚಾರ್ಯಪದವೀಮೇಷ ದೇವಾಚಾರ್ಯಃ ಸ್ವಯಂ ಚರೇತ್ ।
ಸಾಕ್ಷಾದ್ಬ್ರಹ್ಮಾ ಸ್ವಯಂ ಚೈಷ ಭೃಗುರ್ವೈ ಕರ್ಮಕಾಂಡವಿತ್ ।
ಅಯಂ ಪೂಷಾ ಭಗಸ್ತ್ವೇಷ ಇಯಂ ದೇವೀ ಸರಸ್ವತೀ ॥ ೫೮ ॥

೫೩. ಬಂದವರೆಲ್ಲರೂ ವಸ್ತ್ರಾಲಂಕಾರಗಳೇ ಮುಂತಾದ ಅನೇಕ ಮರ್ಯಾದೆಗಳನ್ನು ಹೊಂದುತ್ತಿರುವುದನ್ನೂ ಕಂಡು ದಕ್ಷಬ್ರಹ್ಮನಿಗೆ ಹಿತವನ್ನೇ ಕೋರುವವನಾಗಿ ಇಂತೆಂದು ಹೇಳಿದನು.

೫೪. ದಧೀಚಿಯು ಹೇಳುತ್ತಾನೆ :—" ದಕ್ಷಪ್ರಜೇಶ್ವರನೆ! ನೀನು ಕಾರ್ಯಗಳಲ್ಲಿ ಮಹಾ ದಕ್ಷನು. ನಿಜವಾಗಿಯೂ ಬ್ರಹ್ಮದೇವನ ಸ್ವರೂಪವನ್ನೇ ಧರಿಸಿರುವೆ. ಎಲ್ಲಿಯೂ ಯಾವನಿಗೂ ನಿನ್ನ ಸಾಮರ್ಥ್ಯವು ಇಲ್ಲವೆಂಬುದು ನಿಶ್ಚಯವು.

೫೫. ಇಲ್ಲಿ ನೀನು ಯಾವ ವಿಧವಾದ ಯಜ್ಞಸಂಭಾರಗಳನ್ನು ಶೇಖರಿಸಿರುವೆಯೊ, ಅವುಗಳಗೆ ಸಮಾನವಾದುದು ಪ್ರಾಯಶಃ ಈ ಕಾಲದಲ್ಲಿ ಎಲ್ಲಿಯೂ ದೊರಕಲಾರದು. ಎಲೈ ಮಹಾಪ್ರಾಜ್ಞನೆ! ನಾನಂತೂ ಎಲ್ಲಿಯೂ ಕಂಡುದಿಲ್ಲ.

೫೬. ಸಾಧಾರಣವಾಗಿ ಮಾನವನು ಮಹಾಕ್ರತುಗಳನ್ನೆಂದಿಗೂ ಮಾಡಬಾರದು. ಕ್ರತುವಿಗೆ ಸಮನಾದ ಶತ್ರುವಿಲ್ಲ. ಮಾಡಲೇಬೇಕೆಂಬ ಅಭಿಲಾಷೆಯುಳ್ಳವನು ಇಂತಹ ಸಂಪತ್ಸಮೃದ್ಧಿಯಿದ್ದರೆ ಮಾತ್ರ ಪ್ರಯತ್ನಿಸಬೇಕು.

೫೭. ಅಗ್ನಿಯೇ ಕುಂಡದಲ್ಲಿ ಸಾಕ್ಷಾತ್ತಾಗಿ ನೆಲಸಿರುವನು. ಇಂದ್ರಾದಿದೇವತೆಗಳೇ ಸಾಕ್ಷಾತ್ಕರಿಸಿ ಕುಳಿತಿರುವರು. ಸಕಲ ಮಂತ್ರಗಳೂ ಮೂರ್ತಿಮತ್ತುಗಳಾಗಿ ಪ್ರಜ್ವಲಿಸುತ್ತಿರುವುವು. ಈ ಯಜ್ಞಪುರುಷನೂ ಸಾಕ್ಷಾತ್ಕರಿಸಿರುವನು.

೫೮. ಇಲ್ಲಿ ಚತುರ್ಮುಖನೇ ಬ್ರಹ್ಮತ್ವವನ್ನು ಸ್ವೀಕರಿಸಿರುವನು. ಸಮಸ್ತ

ಏತೇ ಚ ಸರ್ವದಿಕ್ಪಾಲಾ ಯಜ್ಞರಕ್ಷಾಕೃತಃ ಸ್ವಯಂ ।
ತ್ವಂ ಚ ದೀಕ್ಷಾಂ ಶುಭಾಂ ಪ್ರಾಪ್ತೋ ದೇವ್ಯಾ ಚ ಶತರೂಪಯಾ ॥ ೫೯ ॥
ಜಾಮಾತಾ ತ್ವೇಷ ತೇ ಧರ್ಮಃ ಪತ್ನೀಭಿರ್ದಶಭಿಃ ಸಹ ।
ಸ್ವಯಮೇವ ಹಿ ಕುರ್ವೀತ ಧರ್ಮಕಾರ್ಯಂ ಪ್ರಯತ್ನತಃ ॥ ೬೦ ॥
ಓಷಧೀನಾಮಯಂ ನಾಥಸ್ತವ ಜಾಮಾತೃಷೂತ್ತಮಃ ।
ಸಪ್ತವಿಂಶತಿಭಿಃ ಸಾರ್ಧಂ ಪತ್ನೀಭಿಸ್ತವ ಕಾರ್ಯಕೃತ್ ॥ ೬೧ ॥
ಓಷಧೀಃ ಪೂರಯೇತ್ಸರ್ವಾ ದ್ವಿಜರಾಜೋ ಮಹಾಸುಧೀಃ ।
ದೀಕ್ಷಿತೋ ರಾಜಸೂಯಸ್ಯ ದತ್ತತ್ರೈಲೋಕ್ಯದಕ್ಷಿಣಃ ।
ಮಾರೀಚಃ ಕಶ್ಯಪಶ್ಚಾಸೌ ಪ್ರಜಾಪತಿಷು ಸತ್ತಮಃ ।
ತ್ರಯೋದಶಮಿತಾಭಿಶ್ಚ ಭಾರ್ಯಾಭಿಸ್ತವ ಕಾರ್ಯಕೃತ್ ॥ ೬೨ ॥
ಹವಿಃ ಕಾಮದುಘಾ ಸೂತೇ ಕಲ್ಪವೃಕ್ಷಃ ಸಮಿತ್ಕುಶಾನ್ ।
ದಾರುಪಾತ್ರಾಣಿ ಸರ್ವಾಣಿ ಶಕಟಂ ಮಂಡಪಾದಿಕಂ ॥ ೬೩ ॥

---

ಕರ್ಮಕಾಂಡದಲ್ಲಿ ನಿಷ್ಣಾತನಾದ ಭೃಗುಮುನಿಯೇ ಆಚಾರ್ಯನಾಗಿರುವನು. ಇದೊ, ಇವನೇ ಪೂಷನು. ಇವನೇ ಭಗನು. ಈಕೆಯೇ ಸರಸ್ವತೀದೇವಿಯು.

೫೯. ಈ ಸಕಲ ದಿಕ್ಪಾಲಕರೂ ತಾವೇ ಯಜ್ಞಶಾಲೆಯನ್ನು ಸಂರಕ್ಷಿಸುತ್ತಿರುವರು. ನೀನೂ ಪತ್ನಿಯಾದ ಶತರೂಪಾದೇವಿಯೊಡನೆ ಸರ್ವೋತ್ತಮವಾದ ದೀಕ್ಷೆಯನ್ನು ಕೈಗೊಂಡಿರುವೆ.

೬೦. ನಿನ್ನ ಅಳಿಯನಾದ ಧರ್ಮರಾಜನೇ ತನ್ನ ಹತ್ತು ಮಡದಿಯರೊಡಗೂಡಿ ಪ್ರಯತ್ನಪೂರ್ವಕವಾಗಿ ತಾನೇ ಸಮಸ್ತ ಧರ್ಮಕಾರ್ಯಗಳನ್ನೂ ನೆರವೇರಿಸುತ್ತಿರುವನು.

೬೧. ನಿನ್ನ ಅಳಿಯಂದಿರಲ್ಲಿ ಅತ್ಯುತ್ತಮನಾದ ಈ ಚಂದ್ರನೇ ಓಷಧಿವನಸ್ಪತಿಗಳಿಗೆ ನಾಯಕನಾಗಿರುವನು. ತನ್ನ ಇಪ್ಪತ್ತೇಳು ಹೆಂಡತಿಯರೊಡನೆ ಬಂದು ನಿನ್ನ ಕಾರ್ಯದಲ್ಲಿ ಸಹಾಯವನ್ನು ಮಾಡುತ್ತಿರುವನು.

೬೨. ಈ ನಕ್ಷತ್ರರಾಜನು ಮಹಾಪ್ರಾಜ್ಞನು. ಸಕಲ ಓಷಧಿಗಳಿಗೂ ಸತ್ವವನ್ನು ತುಂಬುವನು. ಈತನೂ ಹಿಂದೆ ರಾಜಸೂಯಯಾಗದಲ್ಲಿ ದೀಕ್ಷೆಯನ್ನು ಕೈಕೊಂಡು ಮೂರುಲೋಕಗಳನ್ನೂ ದಕ್ಷಿಣೆಯಾಗಿ ಕೊಟ್ಟಿರುವನು. ಮರೀಚಿಯ ಮಗನಾದ ಈ ಕಶ್ಯಪನು ಪ್ರಜಾಪತಿಗಳಲ್ಲಿ ಸರ್ವೋತ್ತಮನು. ತನ್ನ ಹದಿಮೂರು ಹೆಂಡತಿಯರೊಡನೆ ಬಂದು ನಿನ್ನ ಯಜ್ಞಕಾರ್ಯವನ್ನು ಸಾಂಗವಾಗಿ ನಡೆಸಿಕೊಡುತ್ತಿರುವನು.

೬೩–೬೪. ಹವಿರ್ದ್ರವ್ಯವನ್ನು ಈ ಕಾಮಧೇನುವು ಕರೆಯುತ್ತಿರುವುದು. ಕಲ್ಪವೃಕ್ಷವು ಸಮಿತ್ತುಗಳನ್ನೂ ದರ್ಭೆಗಳನ್ನೂ ಕೊಡುತ್ತಿರುವುದು. ಅನೇಕ ವಿಧಗಳಾದ ಮರದ ಕಮಂಡಲುಗಳನ್ನೂ, ವಾಹನಗಳನ್ನೂ, ಮಂಟಪಗಳನ್ನೂ,

ವಿಶ್ವಕರ್ಮಾಪ್ಯಲಂಕಾರಾನ್ಕುರುತೇಽಭ್ಯಾಗತರ್ತ್ವಿಜಾಂ ।
ವಸೂನಿ ಚಾಪಿ ವಾಸಾಂಸಿ ವಸವೋಽಷ್ಟೌ ದದತ್ಯಪಿ ॥ ೬೪ ॥
ಸ್ವಯಂ ಲಕ್ಷ್ಮೀರಲಂಕುರ್ಯಾದ್ಯಾ ವೈ ಚಾತ್ರ ಸುವಾಸಿನೀಃ ॥ ೬೫ ॥
ಸರ್ವೇ ಸುಖಾಯ ಮೇ ದಕ್ಷ ವೀಕ್ಷಮಾಣಸ್ಯ ಸರ್ವತಃ ।
ಏಕಂ ದುಃಖಾಕರೋತ್ಯೇವ ಯತ್ತ್ವಂ ವಿಸ್ಮೃತವಾನಸಿ ॥ ೬೬ ॥
ಜೀವಹೀನೋ ಯಥಾ ದೇಹೋ ಭೂಷಿತೋಽಪಿ ನ ಶೋಭತೇ ।
ತಥೇಶ್ವರಂ ವಿನಾ ಯಜ್ಞಃ ಶ್ಮಶಾನಮಿವ ಲಕ್ಷ್ಯತೇ ॥ ೬೭ ॥
ಇತ್ಥಂ ದಧೀಚಿವಚನಂ ಶ್ರುತ್ವಾ ದಕ್ಷಃ ಪ್ರಜಾಪತಿಃ ।
ಭೃಶಂ ಜಜ್ವಾಲ ಕೋಪೇನ ಹವಿಷಾ ಕೃಷ್ಣವರ್ತ್ಮವತ್ ॥ ೬೮ ॥
ಪೂರ್ವಂ ಸ್ತುತ್ಯಾತಿಸಂಹೃಷ್ಟೋ ದೃಷ್ಟೋ ಯೋಽಸೌ ದಧೀಚಿನಾ ।
ಸ ಏವ ಚಾಪಿ ಕೋಪಾಗ್ನಿಮುದ್ವಮನ್ವೀಕ್ಷಿತೋ ಮುಖಾತ್ ॥ ೬೯ ॥
ಪ್ರತ್ಯುವಾಚಾಥ ತಂ ವಿಪ್ರಂ ವೇಪಮಾನಾಂಗಯಷ್ಟಿಕಃ ।
ದಕ್ಷಃ ಪ್ರಜಾಪತೀ ರೋಷಾಜ್ಜಿಘಾಂಸುರಿವ ತಂ ದ್ವಿಜಂ ॥ ೭೦ ॥

---

ಅಭ್ಯಾಗತರಿಗೂ, ಋತ್ವಿಜರಿಗೂ ಉಚಿತಾಲಂಕಾರಗಳನ್ನೂ ವಿಶ್ವಕರ್ಮನೇ ಸ್ವಂತವಾಗಿ ಮಾಡಿಕೊಡುತ್ತಿರುವನು. ಅವರಿಗೆ ಬೇಕಾದ ಧನವನ್ನೂ ವಸ್ತ್ರಗಳನ್ನೂ ವಸುಗಳೇ ಕೊಡುತ್ತಿರುವರು.

೬೫. ಸಕಲ ಸುವಾಸಿನಿಯರನ್ನೂ ಮಹಾಲಕ್ಷ್ಮಿಯು ತಾನೇ ಅಲಂಕರಿಸುತ್ತಿರುವಳು.

೬೬. ಎಲೈ ದಕ್ಷನೆ! ಎಲ್ಲೆಲ್ಲಿ ನೋಡುತ್ತಿದ್ದರೂ ಸಹ ನನಗೆ ನಿನ್ನ ಸಕಲ ಸಂಭಾರಗಳೂ ಸುಖಸಂತೋಷಗಳನ್ನೇ ಉಂಟುಮಾಡುತ್ತಿರುವುವು. ಆದರೆ ನೀನು ಒಂದು ವಿಷಯವನ್ನು ಮಾತ್ರ ಮರೆತಿರುವಂತೆ ಕಾಣುವುದು. ಅದೊಂದು ಮಾತ್ರ ನನಗೆ ದುಖವನ್ನುಂಟುಮಾಡುತ್ತಿರುವುದು.

೬೭. ಜೀವಕಳೆಯಿಲ್ಲದ ದೇಹವು ಸರ್ವಾಲಂಕಾರಭೂಷಿತವಾಗಿದ್ದರೂ ಹೇಗೆ ಶೋಭಿಸುವುದಿಲ್ಲವೊ, ಹಾಗೆಯೇ ಮಹಾದೇವನ ಸಾನ್ನಿಧ್ಯದಿಂದ ರಹಿತವಾದ ಈ ಯಜ್ಞವಾಟವು ಶ್ಮಶಾನದಂತೆ ಕಾಣುತ್ತಿರುವುದು.''

೬೮. ಇಂತೆಂದ ದಧೀಚಿಮುನಿಯ ಮಾತುಗಳನ್ನು ಕೇಳಿ ದಕ್ಷಪ್ರಜಾಪತಿಯು ಆಹುತಿಯನ್ನು ಭಸ್ಮವಾಡುತ್ತಿರುವ ಅಗ್ನಿಯಂತೆ ಅಪರಿಮಿತವಾದ ಕೋಪದಿಂದ ಪ್ರಜ್ವಲಿಸುತ್ತಿದ್ದನು.

೬೯. ಪೂರ್ವದಲ್ಲಿ ತನ್ನ ಸ್ತೋತ್ರದಿಂದ ಸಂತುಷ್ಟಾಂತರಂಗನಾಗಿದ್ದ ಯಾವ ದಕ್ಷನನ್ನು ದಧೀಚಿಯು ನೋಡಿದನೊ, ಅವನೇ ಈಗ ಮುಖದಿಂದ ಕೋಪಾಗ್ನಿಯ ಜ್ವಾಲೆಗಳನ್ನುಗುಳುತ್ತಿರುವವನಂತೆ ಕಾಣುತ್ತಿದ್ದನು.

೭೦. ಕೋಪದಿಂದ ಮೈಯೆಲ್ಲವೂ ನಡುಗುತ್ತಿರಲು ರೋಷದಿಂದ

ದಕ್ಷ ಉವಾಚ :—

ಬ್ರಾಹ್ಮಣೋಽಸಿ ದಧೀಚೇ ತ್ವಂ ಕಿಂ ಕರೋಮಿ ತವಾತ್ರ ವೈ ।
ದೀಕ್ಷಾಮಹಮಹೋ ಪ್ರಾಪ್ತಃ ಕರ್ತುಂ ನಾಯಾತಿ ಕಿಂಚನ ॥ ೭೧ ॥
ಭವಾನ್ಕೇನ ಸಮಾಹೂತೋ ಯದತ್ರಾಗಾನ್ಮಹಾಜಡಃ ।
ಆಗತೋಽಪಿ ಹಿ ಕೇನ ತ್ವಂ ಪೃಷ್ಟಇತ್ಥಂ ಬ್ರವೀಷಿ ಯತ್ ॥ ೭೨ ॥
ಸರ್ವಮಂಗಲಮಾಂಗಲ್ಯೋ ಯತ್ರ ಶ್ರೀಮಾನಯಂ ಹರಿಃ ।
ಸ್ವಯಂ ವೈ ಯಜ್ಞಪುರುಷಃ ಸ ಮಖಃ ಕಿಂ ಶ್ಮಶಾನವತ್ ॥ ೭೩ ॥
ಯತ್ರ ವಜ್ರಧರಃ ಶಕ್ರಃ ಶತಯಜ್ಞೈಕದೀಕ್ಷಿತಃ ।
ತ್ರಯಸ್ತ್ರಿಂಶತಿಕೋಟೀನಾಮಮರಾಣಾಂ ಪತಿಃ ಸ್ವಯಂ ॥ ೭೪ ॥
ತಂ ತ್ವಂ ಚೋಪಮಿಮೀಷೇಽಮುಂ ಶ್ಮಶಾನೇನ ಮಹಾಮಖಂ ।
ಧರ್ಮರಾಟ್ ಚ ಸ್ವಯಂ ಯತ್ರ ಧರ್ಮಾಧರ್ಮೈಕಕೋವಿದಃ ॥ ೭೫ ॥
ಶ್ರೀದೋಽಸ್ತಿ ಯತ್ರ ಶ್ರೀಧಾತಾ ಸಾಕ್ಷಾದ್ಯತ್ರಾಶುಶುಕ್ಷಣಿಃ ।
ತ್ವಂ ಯಜ್ಞಮುಪಮಾಸಿ ತ್ವಮಮಂಗಲಭುವಾ ತಯಾ ॥ ೭೬ ॥

ಆ ಬ್ರಾಹ್ಮಣನನ್ನು ಕೊಲ್ಲಲಿಚ್ಛಿಸುತ್ತಿರುವವನಂತೆ ಕಾಣುತ್ತ ದಕ್ಷಪ್ರಜಾಪತಿಯು ದಧೀಚಿಮಹರ್ಷಿಯನ್ನು ಕುರಿತು ಇಂತೆಂದು ಹೇಳಿದನು.

೭೧. ದಕ್ಷನು ಹೇಳುತ್ತಾನೆ:—'' ಎಲವೊ ದಧೀಚಿಯೆ ! ನೀನು ಬ್ರಾಹ್ಮಣನಾಗಿ ಜನಿಸಿರುವೆ. ನಿನಗೇನು ಮಾಡಲಿ ? ನಾನೂ ಸಹ ಯಜ್ಞದೀಕ್ಷೆಯನ್ನು ಕೈಗೊಂಡಿರುವೆನು. ಬೇರೆ ಯಾವುದನ್ನೂ ಮಾಡುವಂತಿಲ್ಲ.

೭೨. ನೀನು ಯಾರ ಆಹ್ವಾನವನ್ನು ಸ್ವೀಕರಿಸಿ ಇಲ್ಲಿಗೆ ಬಂದಿರುವೆ ! ಮಹಾಮೂರ್ಖನಾದ ನೀನು ಬಂದದ್ದೂ ಹಾಗಿರಲಿ. ಯಾರ ಪ್ರಶ್ನೆಗೆ ಉತ್ತರವಾಗಿ ನೀನು ಈ ಮಾತುಗಳನ್ನೆಲ್ಲ ಬಡಬಡಿಸುತ್ತಿರುವೆ ?

೭೩. ಸರ್ವಮಂಗಳಗಳಿಗೂ ಮಂಗಳಭಾವವನ್ನು ಕೊಡುವ ಲಕ್ಷ್ಮೀರಮಣನಾದ ಶ್ರೀಹರಿಯೇ ಯಜ್ಞಪುರುಷನಾಗಿ ನಿಂತು ನಡೆಸುತ್ತಿರುವ ಈ ಯಜ್ಞವು ನಿನಗೆ ಸ್ಮಶಾನಸದೃಶವಾಗಿ ಕಂಡಿತೆ ?

೭೪. ಈ ಯಜ್ಞವಾಟದಲ್ಲಿ ವಜ್ರಾಯುಧಪಾಣಿಯೂ ನೂರು ಅಶ್ವಮೇಧಯಜ್ಞಗಳಲ್ಲಿ ದೀಕ್ಷೆಗೊಂಡವನೂ ಆದ ಮಹೇಂದ್ರನೇ ಮುವ್ವತ್ತುಮೂರು ಕೋಟಿ ದೇವತೆಗಳಿಗೆ ಒಡೆಯನಾಗಿ ಇಲ್ಲಿಗೆ ಬಂದಿರುವನಲ್ಲವೆ.

೭೫. ಧರ್ಮಾಧರ್ಮಗಳನ್ನು ನಿರ್ಣಯಿಸುವುದರಲ್ಲಿ ಒಬ್ಬನೇ ತಿಳಿದವನೆಂದು ಪ್ರಖ್ಯಾತನಾದ ಧರ್ಮರಾಜನು ತಾನೇ ನಿಂತು ನಡೆಸುತ್ತಿರುವ ಈ ಯಜ್ಞಶಾಲೆಯನ್ನು ನೀನು ಸ್ಮಶಾನಕ್ಕೆ ಹೋಲಿಸಿ ನುಡಿವೆಯಲ್ಲವೆ.

೭೬. ಎಲ್ಲಿ ಕುಬೇರನೇ ಐಶ್ವರ್ಯವನ್ನುಂಟುಮಾಡುತ್ತಿರುವನೊ, ಎಲ್ಲಿ

ದೇವಾಚಾರ್ಯಃ ಸ್ವಯಂ ಯತ್ರ ಕ್ರತೋರಾಚಾರ್ಯತಾಂ ಗತಃ ।
ಅಭಿಮಾನವಶಾತ್ತಂ ತ್ವಮಾಖ್ಯಾಸಿ ಪಿತೃಕಾನನಂ ॥ ೭೭ ॥
ಯತ್ರಾರ್ತ್ವಿಜ್ಯಂ ಭಜಂತೇಽಮೀ ವಶಿಷ್ಠಪ್ರಮುಖರ್ಷಯಃ ।
ತಮಧ್ವರಂ ಸಮಾಚಕ್ಷೇ ಮಂಗಲೇತರಭೂಮಿವತ್ ॥ ೭೮ ॥
ನಿಶಮ್ಯೇತಿ ಮುನಿಃ ಪ್ರಾಹ ದಧೀಚಿರ್ಜ್ಞಾನಿನಾಂ ವರಃ ।
ಸರ್ವಮಂಗಲಮಾಂಗಲ್ಯೋ ಭವೇದ್ಯಜ್ಞಪುಮಾನ್ಹರಿಃ ॥ ೭೯ ॥
ತಥಾಪಿ ಶಾಂಭವೀ ಶಕ್ತಿರ್ವೇದೇ ವಿಷ್ಣುಃ ಪ್ರಪಠ್ಯತೇ ।
ವಾಮಾಂಗಂ ಸ್ರಷ್ಟುರಾದ್ಯಸ್ಯ ಹರಿಸ್ತದಿತರದ್ವಿಧಿಃ ॥ ೮೦ ॥
ದೀಕ್ಷಿತೋ ಯೋಽಶ್ವಮೇಧಾನಾಂ ಶತಸ್ಯ ಕುಲಿಶಾಯುಧಃ ।
ದುರ್ವಾಸಸಾ ಕ್ಷಣೇನಾಽಪಿ ನೀತೋ ನಿಃಶ್ರೀಕತಾಂ ಹಿ ಸಃ ॥ ೮೧ ॥

---

ಅಗ್ನಿಯೇ ಸಾಕ್ಷಾತ್ಕರಿಸಿ ಹವಿಸ್ಸುಗಳನ್ನು ಸ್ವೀಕರಿಸುತ್ತಿರುವನೊ, ಅಂತಹ ಯಜ್ಞವಾಟವನ್ನು ನೀನು ಅಮಂಗಳವೆಂದೆಣಿಸಿ ಪ್ರಸಿದ್ಧವಾದ ಸ್ಮಶಾನಕ್ಕೆ ಹೋಲಿಸುತ್ತಿರುವೆ.

೭೭. ದೇವತೆಗಳಿಗೆ ಪುರೋಹಿತನಾದ ಬೃಹಸ್ಪತಿಯೇ ಎಲ್ಲಿ ಅಭಿಮಾನದಿಂದ ಯಜ್ಞದ ಆಚಾರ್ಯನಾಗಿ ನಿಂತಿರುವನೊ, ಅಂತಹ ಯಜ್ಞಭೂಮಿಯನ್ನು ನೀನು ಪಿತೃಕಾನನವೆಂದು ವರ್ಣಿಸುತ್ತಿರುವೆ.

೭೮. ವಸಿಷ್ಠನೇ ಮೊದಲಾದ ಮಹರ್ಷಿಗಳೇ ಋತ್ವಿಜರಾಗಿ ಅಧಿಕಾರವನ್ನು ಪಡೆದಿರುವ ಈ ಯಜ್ಞವನ್ನು ನೀನು ರುದ್ರಭೂಮಿಯಾಗಿರುವುದೆಂದು ಹೇಳುತ್ತಿರುವೆ.''

೭೯. ಇಂತೆಂದ ದಕ್ಷಪ್ರಜೇಶ್ವರನ ಮಾತುಗಳನ್ನು ಕೇಳಿ ಜ್ಞಾನಿಗಳಲ್ಲಿ ಸರ್ವೋತ್ತಮನೆನಿಸಿದ ದಧೀಚಿಮುನಿಯು ಮತ್ತೆ ಹೇಳಲುಪಕ್ರಮಿಸಿದನು. "ಯಜ್ಞಪುರುಷನಾದ ಶ್ರೀಹರಿಯು ಸಮಸ್ತಮಂಗಳದ್ರವ್ಯಗಳಿಗೂ ಮಂಗಳಪ್ರದನೆಂಬುದು ನಿಜವೇ !

೮೦. ಆದರೂ ವೇದಗಳಲ್ಲಿ ಮಹಾವಿಷ್ಣುವು ಮಹಾದೇವನ ಶಕ್ತಿರೂಪನೆಂದೇ ಹೇಳಿರುವುದು. ಆ ಆದಿಪುರುಷನು ಲೋಕಸೃಷ್ಟಿಯನ್ನು ಮಾಡಲೆಳಸಿದಾಗ ಆತನ ಎಡಭಾಗದಿಂದ ಮಹಾವಿಷ್ಣುವೂ ಬಲಭಾಗದಿಂದ ಬ್ರಹ್ಮದೇವನೂ ಜನಿಸಿದರು.

೮೧. ಇನ್ನು ವಜ್ರಾಯುಧವನ್ನು ಹಿಡಿದಿರುವ ಒಂದು ನೂರು ಅಶ್ವಮೇಧಯಜ್ಞಗಳಲ್ಲಿ ದೀಕ್ಷಿತನಾಗಿರುವ ಈ ಮಹೇಂದ್ರನಾದರೊ, ದೂರ್ವಾಸಮಹರ್ಷಿಯಿಂದ ಕ್ಷಣಮಾತ್ರದಲ್ಲಿಯೇ ಐಶ್ವರ್ಯಭ್ರಂಶವನ್ನು ಪಡೆದನಲ್ಲವೆ.

ಪುನರಾರಾಧ್ಯ ಭೂತೇಶಂ ಪ್ರಾಪ್ಯೈಕಾಮಮರಾವತೀಂ ।
ಯಸ್ತ್ವಯಾ ಧರ್ಮರಾಜೋಽತ್ರ ಕಥಿತಃ ಕ್ರತುರಕ್ಷಕಃ ॥ ೮೨ ॥
ಬಲಂ ತಸ್ಯಾಖಿಲೈರ್ಜ್ಞಾತಂ ಶ್ವೇತಂ ಪಾಶಯುತಃ ಪುರಾ ।
ಧನದಸ್ತ್ರ್ಯಂಬಕಸಖಸ್ತ್ವಚ್ಚ ಕ್ಸ್ನಿಶ್ಚಾ ಶುಶುಕ್ಷಣಿಃ ॥ ೮೩ ॥
ಪಾರ್ಷ್ಣಿಗ್ರಾಹ್ಯಭವದ್ರುದ್ರೋ ದೇವಾಚಾರ್ಯಸ್ಯ ವೈ ತದಾ ।
ಯದಾ ತಾರಾಮುಧಾರ್ಷೀತ್ಸ ದ್ವಿಜರಾಜೋಽತಿಸುಂದರೀಂ ॥ ೮೪ ॥
ತಂ ವಿದಂತಿ ವಸಿಷ್ಠಾದ್ಯಾಸ್ತವಾರ್ತ್ವಿಜ್ಯಂ ಭಜಂತಿ ಯೇ ।
ಏಕೋ ರುದ್ರೋ ನ ದ್ವಿತೀಯಃ ಸಂವಿದಾನಾ ಅಪೀತಿ ಹಿ ॥ ೮೫ ॥
ಪ್ರಾವರ್ತಂತರ್ಷಯೋಽನ್ಯೋಽಪಿ ಗೌರವಾತ್ತವ ತೇ ಕ್ರತೌ ।
ಯದಿ ಮೇ ಬ್ರಾಹ್ಮಣಸ್ಯೈಕಂ ಶೃಣೋಷಿ ವಚನಂ ಹಿತಂ ॥ ೮೬ ॥
ತದಾ ಕ್ರತುಫಲಾಧೀಶಂ ವಿಶ್ವೇಶಂ ತಂ ಸಮಾಹ್ವಯ ।
ವಿನಾ ತೇನ ಕ್ರತುರಸೌ ಕೃತೋಽಪ್ಯಕೃತ ಏವ ಹಿ ॥ ೮೭ ॥

---

೮೨–೮೩. ಮತ್ತೆ ಮಹೇಶ್ವರನನ್ನೇ ಪೂಜಿಸಿ ಇವನು ರಾಜಧಾನಿಯಾದ ಅಮರಾವತಿಯನ್ನು ಸೇರಿಕೊಂಡನು. ಈ ಧರ್ಮರಾಜನನ್ನು ನೀನು ಯಜ್ಞ ಸಂರಕ್ಷಕನೆಂದು ಕರೆದೆಯಲ್ಲವೆ. ಹಿಂದೆ ಶ್ವೇತಮಹಾರಾಜನನ್ನು ಬಂಧಿಸಲು ಹೋದಾಗ ಇವನ ಪರಾಕ್ರಮವು ಸಕಲರಿಗೂ ಪ್ರಖ್ಯಾತವಾಯಿತಷ್ಟೆ. ಈ ಕುಬೇರನೂ ಮಹೇಶ್ವರನ ಪರಮಸ್ನೇಹಿತನಾಗಿರುವನು. ಈ ಅಗ್ನಿಯಾದರೋ ಆತನ ಫಾಲನೇತ್ರದಲ್ಲಿಯೇ ನೆಲಸಿರುವನು.

೮೪. ಇನ್ನು ನಿನ್ನ ಆಚಾರ್ಯನಾದ ಬೃಹಸ್ಪತಿಯ ವಿಷಯವನ್ನು ಹೇಳುವೆನು, ಕೇಳು. ಅತ್ಯಂತಸುಂದರಿಯಾದ ತಾರೆಯೆಂಬ ಇವನ ಹೆಂಡತಿಯನ್ನು ಚಂದ್ರನು ಬಲಾತ್ಕಾರವಾಗಿ ಅಪಹರಿಸಿದ ವೇಳೆಯಲ್ಲಿ ಈ ದೇವಗುರುವಿಗೆ ಮಹಾದೇವನೇ ಸಹಾಯವನ್ನು ಮಾಡಬೇಕಾಯಿತು.

೮೫. ನಿನ್ನ ಯಜ್ಞದಲ್ಲಿ ಋತ್ವಿಜರ ಸ್ಥಾನಗಳನ್ನು ಸ್ವೀಕರಿಸಿರುವ ಈ ವಸಿಷ್ಠಾದಿ ಮಹರ್ಷಿಗಳೇ ಆತನ ಮಹಿಮೆಯನ್ನು ತಿಳಿದಿರುವರು. ರುದ್ರನು ಏಕೈಶ್ವರ್ಯಸ್ಥಿತನೆಂದೂ, ಅದ್ವಿತೀಯನೆಂದೂ ಹೇಳುವ ವೇದವಾಕ್ಯಗಳ ಗೂಢಾರ್ಥವನ್ನು ಇವರೆಲ್ಲರೂ ಚೆನ್ನಾಗಿ ತಿಳಿದೇ ಇರುವರಷ್ಟೆ.

೮೬–೮೭. ಈ ಮಹರ್ಷಿಗಳೆಲ್ಲರೂ ನಿನ್ನಲ್ಲಿರುವ ಅಭಿಮಾನದಿಂದ ನಿನ್ನ ಯಜ್ಞದಲ್ಲಿ ಭಾಗವನ್ನು ವಹಿಸಿಕೊಂಡರೇ ಹೊರತು ಬೇರೆಯಲ್ಲ. ಬ್ರಾಹ್ಮಣನಾದ ನಾನು ನಿನ್ನ ಹಿತದ ದೃಷ್ಟಿಯಿಂದಲೇ ಹೇಳುತ್ತಿರುವ ಒಂದು ಮಾತನ್ನು ಕೇಳುವೆಯಾದರೆ ಸಮಸ್ತ ಯಜ್ಞಫಲಗಳಿಗೂ ಅಧೀಶ್ವರನಾದ ವಿಶ್ವೇಶ್ವರನನ್ನು ಇಲ್ಲಿಗೆ ಕರೆಯಿಸು. ಆತನ ಸಾನ್ನಿಧ್ಯವಿಲ್ಲದ ಈ ಮಹಾಯಜ್ಞವು ನಡೆದರೂ ನಡೆಯದಂತೆಯೇ ನಿಷ್ಫಲವಾಗುವುದು.

ಸತಿ ತಸ್ಮಿನ್ಮಹಾದೇವೇ ವಿಶ್ವಕರ್ಮೈಕಸಾಕ್ಷಿಣಿ ।
ತವಾಪಿ ಚೈಷಾಂ ಸರ್ವೇಷಾಂ ಫಲಿಷ್ಯಂತಿ ಮನೋರಥಾಃ ॥ ೮೮ ॥
ಯಥಾ ಜಡಾನಿ ಬೀಜಾನಿ ನ ಫಲಂತಿ ಸ್ವಯಂ ತಥಾ ।
ಜಡಾನಿ ಸರ್ವಕರ್ಮಾಣಿ ನ ಫಲಂತೀಶ್ವರಂ ವಿನಾ ॥ ೮೯ ॥
ಅರ್ಥಹೀನಾ ಯಥಾ ವಾಣೀ ಧರ್ಮಹೀನಾ ಯಥಾ ತನುಃ ।
ಪತಿಹೀನಾ ಯಥಾ ನಾರೀ ಶಿವಹೀನಾ ತಥಾ ಕ್ರಿಯಾ ॥ ೯೦ ॥
ಗಂಗಾಹೀನಾ ಯಥಾ ದೇಶಾಃ ಪುತ್ರಹೀನಾ ಯಥಾ ಗೃಹಾಃ ।
ದಾನಹೀನಾ ಯಥಾ ಸಂಪಚ್ಛಿವಹೀನಾ ತಥಾ ಕ್ರಿಯಾ ॥ ೯೧ ॥
ಮಂತ್ರಿಹೀನಂ ಯಥಾ ರಾಜ್ಯಂ ಶೃತಿಹೀನಾ ಯಥಾ ದ್ವಿಜಾಃ ।
ಯೋಷಾಹೀನಂ ಯಥಾ ಸೌಖ್ಯಂ ಶಿವಹೀನಾ ತಥಾ ಕ್ರಿಯಾ ॥ ೯೨ ॥
ದರ್ಭಹೀನಾ ಯಥಾ ಸಂಧ್ಯಾ ತಿಲಹೀನಂ ಚ ತರ್ಪಣಂ ।
ಹವಿರ್ಹೀನೋ ಯಥಾ ಹೋಮಃ ಶಿವಹೀನಾ ತಥಾ ಕ್ರಿಯಾ ॥ ೯೩ ॥

---

೮೮. ಸಕಲ ಜೀವರ ಕರ್ಮಗಳಿಗೂ ಏಕಸಾಕ್ಷಿಯೆನಿಸಿದ ಆ ಮಹಾದೇವನೊಬ್ಬನು ಸಮ್ಮುಖದಲ್ಲಿದ್ದರೆ ನಿನಗೂ ಇಲ್ಲಿ ನೆರೆದಿರುವ ಇತರ ಸಕಲ ಜನರಿಗೂ ಸಕಲ ಮನೋರಥಗಳೂ ಕೈಗೂಡುವುವು.

೮೯. ಜಡಗಳಾದ ಬೀಜಗಳು ಹೇಗೆ ಮೊಳೆತು ಫಲಗಳನ್ನು ಕೊಡಲಾರವೊ, ಹಾಗೆಯೇ ಈಶ್ವರರಹಿತವಾಗಿ ಮಾಡಿದ ಸಮಸ್ತಕರ್ಮಗಳೂ ಜಡಗಳೇ ಆಗಿ ಪರಿಣಮಿಸುವುವಲ್ಲದೆ ಯಾವ ಫಲವನ್ನೂ ಕೊಡಲಾರವು.

೯೦. ಅರ್ಥವನ್ನು ಸ್ಪಷ್ಟವಾಗಿ ತಿಳಿಸದ ವಾಕ್ಯಸರಣಿಯಂತೆಯೂ, ಧರ್ಮಕಾರ್ಯಕ್ಕೆ ನೆರವಾಗದ ಶರೀರದಂತೆಯೂ, ಗಂಡನಿಲ್ಲದ ಸ್ತ್ರೀಯಂತೆಯೂ ಪರಮೇಶ್ವರನಿಗೆ ಅರ್ಪಿತವಲ್ಲದ ಕ್ರಿಯೆಯು ನಿಷ್ಫಲವು.

೯೧. ಗಂಗಾನದಿಯಿಂದ ಹೀನಗಳಾದ ದೇಶಗಳು ಹೇಗೆಯೊ, ಮಕ್ಕಳಿಲ್ಲದ ಮನೆಗಳು ಹೇಗೆಯೊ, ದಾನವನ್ನು ಮಾಡದವನ ಐಶ್ವರ್ಯವು ಹೇಗೆಯೊ, ಹಾಗೆಯೇ ಶಿವಹೀನಗಳಾದ ಕಾರ್ಯಗಳೂ ನಿಷ್ಪ್ರಯೋಜನಗಳು.

೯೨. ಮಂತ್ರಿರಹಿತವಾದ ರಾಜ್ಯದಂತೆಯೂ, ವೇದಾಧ್ಯಯನವಿಲ್ಲದ ಬ್ರಾಹ್ಮಣರಂತೆಯೂ, ಹೆಂಡತಿಯಿಲ್ಲದ ಸೌಖ್ಯದಂತೆಯೂ ಮಹೇಶ್ವರನಿಂದ ಹೀನವಾದ ಕ್ರಿಯೆಯು ಯಾವ ಸೌಖ್ಯವನ್ನೂ ಕೊಡಲಾರದು.

೯೩. ದರ್ಭಪವಿತ್ರವಿಲ್ಲದ ಸಂಧ್ಯೆಯು ಹೇಗೆಯೊ, ತಿಲಗಳಿಲ್ಲದ ತರ್ಪಣಕ್ರಿಯೆಯು ಹೇಗೆಯೋ, ಹವಿರ್ದ್ರವ್ಯಶುದ್ಧಿಯಿಲ್ಲದ ಹೋಮವು ಹೇಗೆಯೋ ಶಿವಹೀನವಾದ ಕಾರ್ಯವು ಹಾಗೆಯೇ ವ್ಯರ್ಥವಾಗುವುದು.''

ಇತ್ಥಂ ದಧೀಚಿನಾ ಖ್ಯಾತಂ ಜಗ್ರಾಹ ವಚನಂ ನ ತತ್ ।
ದಕ್ಷೋ ದಕ್ಷೋಽಪಿ ತತ್ರೈವ ಶಂಭೋರ್ಮಾಯಾವಿಮೋಹಿತಃ ॥ ೯೪ ॥
ಪ್ರೋವಾಚ ಚ ಭೃಶಂ ಕ್ರುದ್ಧಃ ಕಾ ಚಿಂತಾ ತವ ಮೇ ಕ್ರತೋಃ ।
ಕ್ರತುಮುಖ್ಯಾಣಿ ಸರ್ವಾಣಿ ಯಾನಿ ಕರ್ಮಾಣಿ ಸರ್ವತಃ ॥ ೯೫ ॥
ತಾನಿ ಸಿಧ್ಯಂತಿ ನಿಯತಂ ಯಥಾರ್ಥಕರಣಾದಿಹ ।
ಅಯಥಾರ್ಥವಿಧಾನೇನ ಸಿದ್ಧ್ಯೇತ್ಕರ್ಮಾಣಿ ನೇಶಿತುಃ ॥ ೯೬ ॥
ಸ್ವಕರ್ಮಸಿದ್ಧಯೇ ಚಾಥ ಸರ್ವ ಏವ ಹಿ ಚೇಶ್ವರಃ ।
ಈಶ್ವರಃ ಕರ್ಮಣಾಂ ಸಾಕ್ಷೀ ಯತ್ತ್ವಯಾಪೀತಿ ಭಾಷಿತಂ ॥ ೯೭ ॥
ತತ್ತಥಾಸ್ತು ಪರಂ ಸಾಕ್ಷೀ ನಾರ್ಥಂ ದದ್ಯಾಚ್ಚ ಕುತ್ರಚಿತ್ ॥ ೯೮ ॥
ಜಡಾನಿ ಸರ್ವಕರ್ಮಾಣಿ ನ ಫಲಂತೀಶ್ವರಂ ವಿನಾ ।
ಯದುಕ್ತಂ ಭವತಾ ತತ್ರಾಪ್ಯಹೋ ದೃಷ್ಟಾಂತಯಾಮ್ಯಹಂ ॥ ೯೯ ॥
ಜಡಾನ್ಯಪಿ ಚ ಬೀಜಾನಿ ಕಾಲಂ ಸಂಪ್ರಾಪ್ಯ ಚಾತ್ಮನಃ ।
ಅಂಕೂರಯಂತಿ ಕಾಲಾಚ್ಚ ಪುಷ್ಪ್ಯಂತಿ ಚ ಫಲಂತಿ ಚ ॥ ೧೦೦ ॥

---

೯೪. ಇಂತೆಂದ ದಧೀಚಿಮುನಿಯಾಡಿದ ಮಾತುಗಳನ್ನು ದಕ್ಷಪ್ರಜೇಶ್ವರನು ಕಾರ್ಯದಕ್ಷನಾದರೂ ಅಂಗೀಕರಿಸಲಿಲ್ಲ. ಆ ವಿಷಯದಲ್ಲಿಯೇ ಅವನು ಮಹೇಶ್ವರನ ಮಾಯೆಯಿಂದ ಮೋಹಿತನಾಗಿದ್ದನು.

೯೫–೯೬. ಅವನು ಮಹಾಕ್ರೋಧಾವಿಷ್ಟನಾಗಿ ಹೇಳುತ್ತಾನೆ:—"ನನ್ನ ಈ ಯಜ್ಞಕ್ರಮದ ವಿಚಾರವು ನಿನಗೇತಕ್ಕೆ? ಮಹಾಯಜ್ಞಗಳೇ ಮೊದಲಾದ ಯಾವ ಕಾರ್ಯಗಳಿರುವುವೊ, ಅವುಗಳೆಲ್ಲವೂ ಸರ್ವಾಂಗಸಹಿತವಾಗಿ ಮಾಡುವುದರಿಂದಲೇ ಸಿದ್ಧಿದಾಯಕಗಳಾಗುವುವು. ಇದು ನಿಶ್ಚಯವು. ಎಂತಹ ಸಮರ್ಥನು ಮಾಡಿದುದಾದರೂ ಲೋಪದೋಷಗಳಿಂದ ಕೂಡಿದ ಕರ್ಮವು ಎಂದಿಗೂ ಫಲವನ್ನು ಕೊಡಲಾರದು.

೯೭–೯೮. ತನ್ನ ತನ್ನ ಕರ್ಮವನ್ನು ಮಾಡುವುದರಲ್ಲಿ ಪ್ರತಿಯೊಬ್ಬನೂ ಸ್ವಾತಂತ್ರ್ಯವನ್ನು ಹೊಂದಿಯೇ ಇರುವನು. ಮತ್ತು ಈಶ್ವರನು ಸಮಸ್ತ ಕರ್ಮಗಳ ಸಾಕ್ಷಿಯೆಂದು ನೀನು ಹೇಳಿದೆಯಲ್ಲವೆ. ಹಾಗೆಯೇ ಆಗಲೆಂದೂ ಒಪ್ಪಿಕೊಳ್ಳೋಣ. ಆದರೂ ಸಹ ಕೇವಲ ಸಾಕ್ಷಿಯಾದವನು ಕರ್ತೃವಿಗೆ ಎಲ್ಲಿಯೂ ಕರ್ಮಫಲವನ್ನು ಕೊಡುವುದಿಲ್ಲವಷ್ಟೆ.

೯೯. ಸಕಲ ಕರ್ಮಗಳೂ ಜಡಗಳೆಂದೂ, ಈಶ್ವರನಿಲ್ಲದೆ ಅವುಗಳು ಫಲಗಳನ್ನು ಕೊಡಲಾರವೆಂದೂ ನೀನು ವಾದಿಸಿದೆಯಲ್ಲವೆ. ಅದಕ್ಕೆ ಪ್ರತಿಯಾಗಿ ದೃಷ್ಟಾಂತವನ್ನು ಹೇಳುವೆನು, ಕೇಳು.

೧೦೦. ಜಡ(ನಿರ್ಜೀವ)ಗಳೆನಿಸಿದ ಬೀಜಗಳೂ ಸಹ ತಮತಮಗೆ ಉಚಿತ

ವಿನಾಪೀಶಂ ತಥಾ ಕರ್ಮ ಸ್ವಯಂ ಕಾಲಾತ್ಫಲತ್ಯಹೋ ।
ಕಿಮೀಶ್ವರೇಣ ತೇನಾತ್ರ ಮಹಾಮಂಗಲಮೂರ್ತಿನಾ ॥ ೧೦೦ ॥

ದಧೀಚಿರುವಾಚ :—

ಯಥಾರ್ಥಕರಣಾತ್ಸಿದ್ಧಮಪಿ ಕಾರ್ಯಂ ಕದಾಚನ ।
ಈಶ್ವರಪ್ರಾತಿಕೂಲ್ಯಾಚ್ಚ ಸಿದ್ಧಮೇವಾಶು ನಶ್ಯತಿ ॥ ೧೦೨ ॥
ಈಶ್ವರೇಚ್ಛಾಬಲಾತ್ಕರ್ಮ ಕೃತಮಪ್ಯವಿಧಾನತಃ ।
ಸಂಸಿಧ್ಯೇತ್ತದಧೀನಾಶ್ಚ ಕಥಂ ಸರ್ವ ಇಹೇಶ್ವರಾಃ ॥ ೧೦೩ ॥
ಸಾಮಾನ್ಯಸಾಕ್ಷಿವನ್ನೇಶಃ ಸರ್ವೇಷಾಂ ಸರ್ವಕಾರಿಣಾಂ ।
ಸಾಕ್ಷೀ ಭವೇದಸಂದಿಗ್ಧಃ ಫಲಸ್ಯ ಪ್ರತಿಭೂರಪಿ ॥ ೧೦೪ ॥
ಭೂಜಲಾದಿಸ್ವರೂಪೇಣ ಬೀಜಮಾವಿಶ್ಯ ಸರ್ವಕೃತ್ ।
ಸ್ವಯಂ ಕಾಲಸ್ವರೂಪೇಣ ವಿದಧ್ಯಾದಂಕುರೋದಯಂ ॥ ೧೦೫ ॥
ಯತ್ತ್ವಯೋಕ್ತಂ ವಿನಾಪೀಶಂ ಕಾಲೇ ಕರ್ಮ ಫಲೇತ್ಸ್ವಯಂ ।
ಸ ಏವ ಕಾಲೋ ಭಗವಾನ್ಸರ್ವಕರ್ತಾ ಮಹೇಶಿತಾ ॥ ೧೦೬ ॥

---

ವಾದ ಕಾಲವೊದಗಲು ಆ ಕಾಲದ ಬಲದಿಂದಲೇ ಮೊಳಕೆಗಳಾಗುವುವು, ಹೂವುಗಳನ್ನೂ ಹಣ್ಣುಗಳನ್ನೂ ಕೊಡುವುವು.

೧೦೧. ಇದಕ್ಕೆ ಈಶ್ವರನ ಅಪೇಕ್ಷೆಯೇ ಇಲ್ಲವು. ಹಾಗೆಯೇ ಕರ್ಮವೂ ಕಾಲಪರಿಪಾಕದಿಂದಲೇ ಫಲವನ್ನು ಕೊಡುವುದು. ಆದುದರಿಂದ ಈ ಮಹಾಯಜ್ಞದಲ್ಲಿ ಸರ್ವಪ್ರಕಾರದಿಂದಲೂ ಅಮಂಗಳಸ್ವರೂಪನಾದ ಈಶ್ವರನಿಂದಾಗಬೇಕಾದುದೇನು?''

೧೦೨. ದಧೀಚಿಯು ಹೇಳುತ್ತಾನೆ:—"ಸಾಂಗವಾಗಿ ಮಾಡುವುದರಿಂದ ಕರ್ಮವು ಸಿದ್ಧಿಯನ್ನು ಪಡೆಯುವುದಾದರೂ ಈಶ್ವರನಿಗೆ ಪ್ರತಿಕೂಲವಾದಲ್ಲಿ ಆ ಕರ್ಮಸಿದ್ಧಿಯು ಶೀಘ್ರದಲ್ಲಿಯೇ ನಷ್ಟವಾಗುವುದು.

೧೦೩. ಆತನ ಇಚ್ಛೆಯ ಬಲದಿಂದ ವಿಧಿರಹಿತವಾಗಿ ಮಾಡಿದ ಕರ್ಮವೂ ಸಹ ಸಂಸಿದ್ಧಿಯನ್ನು ಪಡೆಯುವುದು. ಈಶ್ವರಾಧೀನರಾದ ಇವರೆಲ್ಲರೂ ಇಲ್ಲಿ ತಾವೇ ಸ್ವತಂತ್ರರಾಗಿರುವುದು ಹೇಗೆ?

೧೦೪. ಮಹೇಶ್ವರನು ಸಾಮಾನ್ಯ ಸಾಕ್ಷಿಗಳಂತೆ ಉದಾಸೀನನಲ್ಲ. ಆತನು ಸಕಲ ಜೀವರ ಸಕಲ ಕರ್ಮಗಳಿಗೂ ಸಾಕ್ಷಿಯಾಗಿರುವನು. ಇದರಲ್ಲಿ ಸಂದೇಹವಿಲ್ಲ. ಮತ್ತು ಕರ್ಮಫಲಗಳನ್ನು ಕೊಡುವಾತನೂ ಅವನೇ.

೧೦೫. ಸರ್ವಕರ್ತನಾದ ಆತನೇ ಭೂಮಿ, ಜಲಗಳೇ ಮುಂತಾದ ರೂಪಗಳಿಂದ ಬೀಜದಲ್ಲಿ ಪ್ರವೇಶಮಾಡಿದವನಾಗಿ, ತಾನೇ ಕಾಲಸ್ವರೂಪದಿಂದ ಅಂಕುರಾದಿಗಳ ಉತ್ಪತ್ತಿಯನ್ನು ಮಾಡುತ್ತಿರುವನು.

೧೦೬. ಮತ್ತು ಈಶ್ವರನಿಲ್ಲದೆಯೇ ಕಾಲಕ್ರಮದಲ್ಲಿ ಕರ್ಮವು ಸ್ವತಃ

**ಅನ್ಯಚ್ಚ ಭವತಾ ಪ್ರೋಕ್ತಂ ತದೇಕಂ ತಥ್ಯಮೇವ ತತ್ ।**
**ಕಿಮೀಶ್ವರೇಣ ತೇನಾತ್ರ ಮಹಾಮಂಗಲಮೂರ್ತಿನಾ ॥ ೧೦೭ ॥**
**ಯೇ ಮಹಾಂತೋ ಭವಂತ್ಯೇವ ಯೇ ಚ ಮಂಗಲಮೂರ್ತಯಃ ।**
**ಈಶ್ವರಾಖ್ಯಾ ಚ ಯೇಷ್ವಸ್ತಿ ಕಿಂ ತೈರತ್ರ ತವಾಂತಿಕೇ ॥ ೧೦೮ ॥**
**ಉತ್ತರಾದುತ್ತರಂ ಚೇತಿ ಪ್ರತ್ಯುತ್ತರಯತಿ ದ್ವಿಜೇ ।**
**ದಧೀಚೌ ಚುಕ್ರುಧೇಽತ್ಯಂತಂ ದಕ್ಷೋ ಗರ್ವಾತಿಸುಶ್ರಿಯಃ ॥ ೧೦೯ ॥**
**ಆದಿದೇಶ ಸಮೀಪಸ್ಥಾನಾಲೋಕ್ಯ ಪರಿತಸ್ತ್ವಿತಿ ।**
**ಬ್ರಾಹ್ಮಣಾಪಸದಂ ಚಾಮುಂ ಪರಿದೂರಯತಾಶು ವೈ ॥ ೧೧೦ ॥**
**ಅಮುಷ್ಮಾದಧ್ವರಶ್ರೇಷ್ಠಾದವರಿಷ್ಠಮನೋಗತಂ ।**
**ಇತ್ಥಂ ದಧೀಚಿರಾಕರ್ಣ್ಯ ಪ್ರೋವಾಚ ಪ್ರಹಸನ್ನಿವ ॥ ೧೧೧ ॥**
**ಕಿಂ ಮಾಂ ದೂರಯಸೇ ಮೂಢ ದೂರೀಭೂತೋ ಭವಾನಪಿ ।**
**ಸರ್ವೇಭ್ಯೋ ಮಂಗಲೇಭ್ಯಶ್ಚ ಸರ್ವೈರೇಭಿಃ ಸಮಂ ಧ್ರುವಂ ॥ ೧೧೨ ॥**

---

ಫಲವನ್ನು ಕೊಡುವುದೆಂದು ಹೇಳಿದೆಯಲ್ಲವೆ. ಸರ್ವಕ್ಕೂ ಕಾರಣನಾದ ಆ ಮಹೇಶ್ವರನೇ ಸರ್ವೈಶ್ವರ್ಯಸಮನ್ವಿತನೂ ಕಾಲಸ್ವರೂಪಿಯೂ ಆಗಿರುವನು.

೧೦೭. ನೀನು ಹೇಳುವ ಮತ್ತೊಂದು ಮಾತಂತೂ ಸರ್ವಥಾ ಯಥಾರ್ಥವಾಗಿರುವುದು. ಮಹಾಮಂಗಳಸ್ವರೂಪನಾದ ಆ ಮಹಾದೇವನಿಂದ ಈ ಯಜ್ಞಭೂಮಿಯಲ್ಲಿ ಆಗಬೇಕಾದುದಾರೂ ಏನು?

೧೦೮. ಯಾರು ಮಹಾತ್ಮರಾಗಿರುವರೊ, ಯಾರು ಮಂಗಳಮೂರ್ತಿಗಳೆನಿಸಿರುವರೊ, ಯಾರಲ್ಲಿ ಈಶ್ವರನೆಂಬ ಹೆಸರು ಸಾರ್ಥಕವಾಗಿರುವುದೊ, ಅಂತಹವರಿಗೆ ನಿನ್ನ ಸಮೀಪದಲ್ಲಿ ಕೆಲಸವೇನು?"

೧೦೯. ಇಂತು ತನ್ನ ಮಾತುಮಾತಿಗೂ ಅನೇಕ ಪ್ರತ್ಯುತ್ತರಗಳನ್ನು ಹೇಳುತ್ತಿರುವ ಬ್ರಾಹ್ಮಣನಾದ ದಧೀಚಿಯನ್ನು ಕಂಡು ಐಶ್ವರ್ಯದಿಂದ ಮತ್ತನಾದ ದಕ್ಷನು ಬಹುವಾಗಿ ಕೋಪಗೊಂಡನು.

೧೧೦. ಅವನು ತನ್ನ ಸುತ್ತಲೂ ಸುಳಿದಾಡುತ್ತಿರುವವರನ್ನು ಕುರಿತು ಇಂತೆಂದು ಅಪ್ಪಣೆಯನ್ನು ಮಾಡಿದನು. "ಈ ಬ್ರಾಹ್ಮಣಾಧಮನನ್ನು ಯಜ್ಞಶಾಲೆಯಿಂದ ದೂರಕ್ಕೆ ತಳ್ಳಿ ಬನ್ನಿರಿ.

೧೧೧. ಮಹಾ ನೀಚನಾದ ಈಶ್ವರನಲ್ಲಿ ಮನಸ್ಸನ್ನು ಇಟ್ಟಿರುವ ಇವನು ಈ [illegible]ತ್ತನು ಯಜ್ಞ ಶಾಲೆಯಲ್ಲಿರಲು ಯೋಗ್ಯನಲ್ಲ." ಈ ಮಾತುಗಳನ್ನು ಕೇಳಿ ದಧೀಚಿಯು ನಗುತ್ತಲೇ ಹೇಳತೊಡಗಿದನು.

೧೧೨. "ಮೂಢ! ಸುಮ್ಮನೆ ನನ್ನನ್ನೇಕೆ ದೂರಮಾಡುವೆ? ನೀನೇ ಇಲ್ಲಿ ನೆರೆದಿರುವ ಸಕಲ ಜನರೊಡನೆ ಸರ್ವಶ್ರೇಯಸ್ಸುಗಳಿಂದಲೂ ದೂರಗೊಂಡಿರುವೆ.

ಅಕಾಂಡೇ ಕ್ರೋಧಜೋ ದಂಡಸ್ತವ ಮೂರ್ಧ್ನಿ ಪತಿಷ್ಯತಿ ।
ಮಹೇಶಿತುಸ್ತ್ರಿಜಗತೀಪಾರಿಶಾಸ್ತುಃ ಪ್ರಜಾಪತೇ ॥ ೧೧೩ ॥
ಇತ್ಯುಕ್ತ್ವಾ ನಿರ್ಜಗಾಮಾಶು ಯಜ್ಞವಾಟಾತ್ತತೋ ದ್ವಿಜಃ ।
ತಸ್ಮಿನ್ನಿರ್ಯಾತಿ ನಿರ್ಯಾತೋ ದುರ್ವಾಸಾಶ್ಚ್ಯವನೋ ಭವಾನ್॥ ೧೧೪ ॥
ಉತ್ತಂಕ ಉಪಮನ್ಯುಶ್ಚ ಋಚೀಕೋದ್ದಾಲಕಾವಪಿ ।
ಮಾಂಡವ್ಯೋ ವಾಮದೇವಶ್ಚ ಗಾಲವೋ ಗರ್ಗಗೌತಮೌ ॥ ೧೧೫ ॥
ಶಿವತತ್ತ್ವವಿದೋಽನ್ಯೇಽಪಿ ದಕ್ಷಯಜ್ಞಾದ್ವಿನಿರ್ಯಯುಃ ।
ಗತೇ ದಧೀಚೌ ಸಾನಂದಂ ಪ್ರಾವರ್ತತ ಮಹಾಮಖಃ ॥ ೧೧೬ ॥
ಯೇ ಸ್ಥಿತಾ ಬ್ರಾಹ್ಮಣಾಸ್ತತ್ರ ತೇಭ್ಯೋ ದ್ವಿಗುಣದಕ್ಷಿಣಾಂ ।
ಪ್ರಾದಾತ್ಪ್ರಜಾಪತಿರ್ದಕ್ಷಸ್ತ್ವನ್ಯೇಭ್ಯೋಽಪ್ಯಧಿಕಂ ವಸು ॥ ೧೧೭ ॥
ಸರ್ವೇ ಜಾಮಾತರಸ್ತೇನ ತೋಷಿತಾ ಭೂರಿಶೋ ಧನೈಃ ।
ಕನ್ಯಾಶ್ಚಾಲಂಕೃತಾಃ ಸರ್ವಾ ಮಹಾವಿಭವವಿಸ್ತರೈಃ ॥ ೧೧೮ ॥

---

೧೧೩. ಪ್ರಜಾಪತಿಯೆ! ಆಕಸ್ಮಿಕವಾಗಿಯೇ ನಿನ್ನ ತಲೆಯಲ್ಲಿ ಮೂರು ಲೋಕಗಳನ್ನೂ ಶಾಸನಮಾಡುವ ಮಹೇಶ್ವರನ ಕ್ರೋಧದಿಂದ ಉದ್ಭವಿಸಿದ ದಂಡವು ಬೀಳುವುದು.''

೧೧೪–೧೧೫. ಇಂತೆಂದು ಹೇಳಿ ಆ ಬ್ರಾಹ್ಮಣೋತ್ತಮನು ಬಹು ವೇಗ ವಾಗಿ ಆ ಯಜ್ಞವಾಟವನ್ನು ಬಿಟ್ಟು ಹೊರಟುಹೋದನು. ಆತನು ಹೊರಡಲು ಆತನ ಹಿಂದೆಯೇ ದೂರ್ವಾಸಮಹರ್ಷಿಯೂ, ಚ್ಯವನನೂ, ನೀನೂ(ಅಗಸ್ತ್ಯನೂ), ಉತ್ತಂಕನೂ, ಉಪಮನ್ಯುವೂ, ಋಚೀಕನೂ, ಉದ್ದಾಲಕನೂ, ಮಾಂಡವ್ಯನೂ, ವಾಮದೇವನೂ, ಗಾಲವನೂ, ಗರ್ಗನೂ, ಗೌತಮನೂ ಯಜ್ಞಶಾಲೆಯನ್ನು ತ್ಯಜಿಸಿದಿರಿ.

೧೧೬. ಶಿವತತ್ತ್ವವನ್ನು ತಿಳಿದಿದ್ದ ಇತರರೂ ದಕ್ಷನ ಯಜ್ಞವನ್ನು ಬಿಟ್ಟು ಹೊರಟುಹೋದರು. ಇಂತು ದಧೀಚಿಯು ಹೊರಟುಹೋಗಲು ಮಹಾಯಜ್ಞವು ಪುನಃ ಮಹದಾನಂದದಿಂದ ಮುಂದುವರೆಯಿತು.

೧೧೭. ಪ್ರಜಾಪತಿಯಾದ ದಕ್ಷನು ಅಲ್ಲಿ ಉಳಿದಿದ್ದ ಬ್ರಾಹ್ಮಣರಿಗೆಲ್ಲ ಎರಡ ರಷ್ಟು ದಕ್ಷಿಣೆಗಳನ್ನು ಕೊಟ್ಟುದಲ್ಲದೆ ಇತರರಿಗೂ ಬಹು ಅಧಿಕವಾದ ಧನವನ್ನು ದಾನಮಾಡಿದನು.

೧೧೮. ಆತನ ಅಳಿಯಂದಿರೆಲ್ಲರೂ ಆತನಿಂದ ಅಪಾರವಾದ ಧನವನ್ನು ಹೊಂದಿ ಸಂತೋಷವನ್ನು ಹೊಂದಿದರು. ಹೆಣ್ಣುಮಕ್ಕಳೂ ಎಲ್ಲರೂ ಆತನ ಮಹಾವೈಭವಕ್ಕನುಸಾರವಾದ ಅಲಂಕಾರಗಳನ್ನು ಪಡೆದರು.

ಋಷಿಪತ್ನ್ಯೋऽಪಿ ಬಹುಶೋ ದೇವಪತ್ನ್ಯೋऽಪ್ಯನೇಕಶಃ ।
ತತಾಃ ಪುರಾಂಗನಾಃ ಸರ್ವಾಸ್ತೇನ ಮಾನಭುವಃ ಕೃತಾಃ ॥ ೧೧೯ ॥
ಬ್ರಹ್ಮಘೋಷೇಣ ತಾರೇಣ ವ್ಯೋಮ ಶಬ್ದಗುಣಂ ಸ್ಫುಟಂ ।
ಕಾರಿತಂ ತೇನ ದಕ್ಷೇಣ ವಿಪ್ರಾಣಾಂ ಹೃಷ್ಟಚೇತಸಾಂ ॥ ೧೨೦ ॥
ಅಗ್ನಿರ್ಮಂದಾಗ್ನಿರಭವತ್ತಸ್ಮಿನ್ಹುತ್ವತಿ ದೀಕ್ಷಿತೇ ।
ಹವಿಃಪರಿಮಲೇನೈವ ಪರಿತೃಪ್ತಾ ದಿಗಂಗನಾಃ ॥ ೧೨೧ ॥
ಸ್ವಾಹಾಕಾರೈರ್ವಷಟ್ಕಾರೈಃ ಸುರಾ ಜಾತಾಃ ಪಿಚಂಡಿಲಾಃ ।
ರಚಿತಾ ಗಿರಯಸ್ತೇನ ಸದನ್ನಾನಾಂ ಪದೇ ಪದೇ ॥ ೧೨೨ ॥
ಘೃತಕುಲ್ಯಾಃ ಕೃತಾಸ್ತೇನ ಮಧುಕುಲ್ಯಾಃ ಸಹಸ್ರಶಃ ।
ಮಹಾಸರಾಂಸಿ ಪಯಸಾಂ ದ್ರಪ್ಸಸ್ಯಾಪಿ ಮಹಾಹ್ರದಾಃ ॥ ೧೨೩ ॥
ರಾಶಯಶ್ಚ ದುಕೂಲಾನಾಂ ರತ್ನಾನಾಂ ಶಿಖರಾಣಿ ಚ ।
ಯಜ್ಞವಾಟಸ್ಯ ವಸುಧಾ ಸ್ವರ್ಣರೂಪ್ಯಮಯೀ ಕೃತಾ ॥ ೧೨೪ ॥

---

೧೧೯. ಆ ದಕ್ಷನು ಹಾಗೆಯೇ ಅಸಂಖ್ಯಾತರಾದ ಋಷಿಪತ್ನಿಯರನ್ನೂ, ಅನೇಕ ದೇವಪತ್ನಿಯರನ್ನೂ, ಪಟ್ಟಣದ ಸ್ತ್ರೀಯರನ್ನೂ ಮರ್ಯಾದೆಗಳಿಗೆ ಸತ್ಪಾತ್ರರನ್ನಾಗಿ ಮಾಡಿದನು.

೧೨೦. ಸಂತುಷ್ಟಾಂತರಂಗರಾದ ಬ್ರಾಹ್ಮಣರು ಉಚ್ಚಸ್ವರದಿಂದ ಪಠಿಸುತ್ತಿರುವ ಬ್ರಹ್ಮಘೋಷಗಳಿಂದ ಆ ದಕ್ಷಬ್ರಹ್ಮನು ಆಕಾಶವನ್ನೇ ಪ್ರತಿಧ್ವನಿಗೊಳಿಸುತ್ತ ಅದರ ಶಬ್ದಗುಣವನ್ನು ಪ್ರಕಾಶಗೊಳಿಸುತ್ತಿರುವವನಂತೆ ತೋರುತ್ತಿದ್ದನು.

೧೨೧. ಆತನು ದೀಕ್ಷಿತನಾಗಿ ಹೋಮವನ್ನು ಮಾಡುತ್ತಿರಲು ಹವಿರ್ದ್ರವ್ಯವನ್ನು ಪಚನಮಾಡಲಾರದೆ ಅಗ್ನಿಯೂ ಅಜೀರ್ಣವನ್ನನುಭವಿಸಿದನು. ಹೋಮದ್ರವ್ಯಗಳ ಸುಗಂಧಗಳಿಂದಲೇ ದಿಕ್ಪಾಲಕರ ಪತ್ನಿಯರೂ ಸಂತೋಷಗೊಂಡರು.

೧೨೨. ಆತನ ಸ್ವಾಹಾಕಾರ ವಷಟ್ಕಾರಗಳ ಆಹುತಿಗಳಿಂದ ದೇವತೆಗಳೆಲ್ಲರೂ ಡೊಳ್ಳುಹೊಟ್ಟೆಯವರಾದರು. ಉತ್ತಮಾನ್ನಗಳಿಂದ ಆತನು ಒಂದೊಂದು ನಿಮಿಷಕ್ಕೂ ಪರ್ವತಗಳನ್ನೇ ರಚಿಸುತ್ತಿದ್ದನು.

೧೨೩. ತುಪ್ಪವೂ ಜೇನುತುಪ್ಪವೂ ಸಾವಿರಾರು ಕಡೆಗಳಲ್ಲಿ ಕಾಲುವೆಗಳಾಗಿ ಹರಿಯುತ್ತಲಿದ್ದುವು. ಹಾಲು ವಿಶಾಲವಾದ ಸರೋವರಗಳಂತೆ ತೋರುತ್ತಿದ್ದಿತು. ಆ ಯಜ್ಞಶಾಲೆಯಲ್ಲಿ ಬೆಲ್ಲದ ಪಾನಕವೂ ದೊಡ್ಡ ಮಡುವುಗಳಾಗಿ ನಿಂತಿದ್ದಿತು.

೧೨೪. ವಸ್ತ್ರಗಳು ರಾಶಿಗಳಾಗಿ ಬಿದ್ದಿದ್ದುವು. ನವರತ್ನಗಳು ಕೋಡುಗಲ್ಲುಗಳಂತೆ ಸುರಿಯಲ್ಪಟ್ಟಿದ್ದುವು. ಆ ಯಜ್ಞಶಾಲೆಯ ಭೂಮಿಯೆಲ್ಲವೂ ಚಿನ್ನ ಬೆಳ್ಳಿಗಳ ತಗಡುಗಳಿಂದ ಮುಚ್ಚಲ್ಪಟ್ಟಿದ್ದುವು.

ನ ಲಭ್ಯಂತೇ ಕ್ರತೌ ತಸ್ಯ ಮಾರ್ಗಿತಾ ಅಪಿ ಮಾರ್ಗಣಾಃ ।
ಹೃಷ್ಟಾಃ ಪುಷ್ಟಾಃ ಸಮುಭವನ್ನಪಿ ತತ್ಪರಿಚಾರಕಾಃ ॥ ೧೨೪ ॥
ಧ್ವನಿರ್ಮಂಗಲಗೀತಾನಾಂ ವ್ಯಾನಶೇ ಗಗನಾಂಗಣಂ ।
ಜಹೃಷೇ ಚಾಪ್ಸರೋವೃಂದೈರ್ಗಂಧರ್ವೈರ್ಮುಮುದೇ ತರಾಂ ॥ ೧೨೫ ॥
ವಿದ್ಯಾಧರೈರ್ನನಂದೇ ಚ ವಸುಧಾ ವವೃಧೇ ಭೃಶಂ ।
ಮಹಾವಿಭವಸಂಭಾರೇ ತಸ್ಮಿನ್ದಕ್ಷೇ ಮಹಾಕ್ರತೌ ।
ಇತ್ಥಂ ಪ್ರವರ್ತ್ತೇಽಥ ಮುನಿಃ ಕೈಲಾಸಂ ನಾರದೋ ಯಯೌ ॥ ೧೨೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದಕ್ಷಯಜ್ಞವರ್ಣನಂ"
ನಾಮ ಸಪ್ತಾಶೀತಿತಮೋಽಧ್ಯಾಯಃ

---

೧೨೪. ಆ ದಕ್ಷಪ್ರಜಾಪತಿಯು ಮಾಡುವ ಯಜ್ಞದ ಬಳಿಯಲ್ಲಿ ಹುಡುಕಿದರೂ ಯಾಚಕರನ್ನು ಕಾಣುವಂತಿರಲಿಲ್ಲ. ಪರಿಚಾರಕರೆಲ್ಲರೂ ಸಂತೋಷಗೊಂಡವರೂ ಪುಷ್ಟಾಂಗರೂ ಆಗಿ ಓಡಾಡುತ್ತಿದ್ದರು.

೧೨೫. ಮಂಗಳಗೀತಗಳ ಶಬ್ದವು ಆಕಾಶದ ಅಂತರವನ್ನೆಲ್ಲ ವ್ಯಾಪಿಸಿದ್ದಿತು. ಅಪ್ಸರಸ್ತ್ರೀಯರೆಲ್ಲರೂ ಹರ್ಷಗೊಂಡಿದ್ದರು. ಗಂಧರ್ವರೂ ಅತ್ಯಂತವಾಗಿ ಸಂತೋಷಗೊಂಡು ಹಾಡುತ್ತಿದ್ದರು.

೧೨೬. ವಿದ್ಯಾಧರರೆಲ್ಲರೂ ಆನಂದಗೊಂಡಿದ್ದರು. ಸಮಸ್ತ ಭೂಮಂಡಲವೂ ಅಭಿವೃದ್ಧಿಗೊಂಡಿತು. ಇಂತು ಆ ದಕ್ಷಬ್ರಹ್ಮನ ಮಹಾಯಜ್ಞವು ಮಹಾ ವೈಭವದಿಂದ ನಡೆಯುತ್ತಿದ್ದಿತು. ಇಂತಹ ಮಹಾಕ್ರತುವನ್ನು ನೋಡಿಕೊಂಡು ನಾರದಮಹಾಮುನಿಯು ಕೈಲಾಸಪರ್ವತಕ್ಕೆ ಬಂದು ಸೇರಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ದಕ್ಷಯಜ್ಞವರ್ಣನ"ವೆಂಬ
ಎಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಽಷ್ಟಾಶೀತಿತಮೋಽಧ್ಯಾಯಃ

## ಸತೀದೇಹವಿಸರ್ಜನವರ್ಣನಂ

**ಅಗಸ್ತ್ಯ ಉವಾಚ :—**

**ಶಿವಲೋಕಂ ಸಮಾಸಾದ್ಯ ಮುನಿನಾ ಬ್ರಹ್ಮಸೂನುನಾ ।**
**ಕಿಂ ಚಕ್ರೇ ಬ್ರೂಹಿ ಷಡ್ವಕ್ತ್ರ ಕಥಾಂ ಕೌತುಕಶಾಲಿನೀಂ ॥ ೧ ॥**

**ಸ್ಕಂದ ಉವಾಚ :—**

**ಶೃಣು ಕುಂಭಜ ವಕ್ಷ್ಯಾಮಿ ನಾರದೇನ ಮಹಾತ್ಮನಾ ।**
**ಯತ್ಕೃತಂ ತತ್ರ ಗತ್ವಾಶು ಕೈಲಾಸಂ ಶಂಕರಾಲಯಂ ॥ ೨ ॥**
**ಮುನಿರ್ಗಗನಮಾರ್ಗೇಣ ಪ್ರಾಪ್ಯ ತದ್ಧಾಮ ಶಾಂಭವಂ ।**
**ದೃಷ್ಟ್ವಾ ಶಿವೌ ಪ್ರಣಮ್ಯಾಥ ಶಿವೇನ ವಿಹಿತಾದರಃ ॥ ೩ ॥**
**ತದುದ್ದಿಷ್ಟಾಸನಂ ಭೇಜೇ ಪಶ್ಯಂಸ್ತತ್ಕ್ರೀಡನಂ ಪರಂ ।**
**ಕ್ರೀಡಂತೌ ತೌ ತು ಚಾಕ್ಷಾಭ್ಯಾಂ ಯದಾ ನ ಚ ವಿರೇಮತುಃ ।**
**ತದೌತ್ಸುಕ್ಯೇನ ಸ ಮುನಿಃ ಪ್ರೇರ್ಯಮಾಣ ಉವಾಚ ಹ ॥ ೪ ॥**

---

## ಕನ್ನಡದ ಅನುವಾದ

### ಸತೀದೇಹವಿಸರ್ಜನವರ್ಣನ

೧. ಅಗಸ್ತ್ಯನು ಹೇಳುತ್ತಾನೆ :—ಷಡಾನನನೆ! ಬ್ರಹ್ಮಮಾನಸಪುತ್ರನಾದ ನಾರದನು ಶಿವಲೋಕವನ್ನು ಸೇರಿ ಏನನ್ನು ಮಾಡಿದನು ? ಮಹಾಕೌತುಕಾನ್ವಿತವಾದ ಈ ಕಥೆಯನ್ನು ನನಗೆ ಹೇಳುವವನಾಗು.

೨. ಸ್ಕಂದನು ಹೇಳುತ್ತಾನೆ :—ಎಲೈ ಅಗಸ್ತ್ಯನೆ! ಶಂಕರನಿಗೆ ನಿವಾಸವಾದ ಕೈಲಾಸಕ್ಕೆ ಹೋಗಿ ಮಹಾತ್ಮನಾದ ನಾರದ ಮುನಿಯು ಏನು ಮಾಡಿದನೆಂಬುದನ್ನು ಹೇಳುವೆನು. ಸಾವಧಾನಮನಸ್ಸಿನಿಂದ ಕೇಳು.

೩. ಆ ಮುನಿವರ್ಯನು ಆಕಾಶಮಾರ್ಗದಿಂದಲೇ ಮಹೇಶ್ವರಾವಾಸವಾದ ಕೈಲಾಸವನ್ನು ಸೇರಿದನು. ಆಗ ಪಾರ್ವತೀಪರಮೇಶ್ವರರು ಸುಖದಿಂದಿರುವುದನ್ನು ಕಂಡು ನಮಸ್ಕರಿಸಲು ಪರಮಶಿವನು ಆತನನ್ನು ಆದರದಿಂದ ಬರಮಾಡಿಕೊಂಡನು.

೪. ಆತನು ತೋರಿಸಿದ ಆಸನವನ್ನು ಸ್ವೀಕರಿಸಿ ಕುಳಿತುಕೊಂಡು ಆ ದಂಪತಿಗಳು ಆಡುತ್ತಿದ್ದ ಆಟವನ್ನೇ ನೋಡುತ್ತಿದ್ದನು. ಅವರಿಬ್ಬರೂ ದಾಳಗಳಿಂದ ಪಗಡೆಯಾಟವನ್ನಾಡುತ್ತ ಬಹಳ ಹೊತ್ತಾದರೂ ಕೊನೆಗಾಣಿಸಲಿಲ್ಲ. ಅದನ್ನು ಕಂಡು ಕುತೂಹಲದಿಂದ ಪ್ರೇರಿತನಾಗಿ ನಾರದನು ಹೇಳತೊಡಗಿದನು.

ನಾರದ ಉವಾಚ:—
ದೇವದೇವ ತವ ಕ್ರೀಡಾಖಿಲಂ ಬ್ರಹ್ಮಾಂಡಗೋಲಕಂ ।
ಮಾಸಾ ದ್ವಾದಶ ಯೇ ನಾಥ ತೇ ಸಾರಿಫಲಕೇ ಗೃಹಾಃ ॥ ೫ ॥
ಕೃಷ್ಣಾಃ ಕೃಷ್ಣೇತರಾ ಯಾ ವೈ ತಿಥಯಸ್ತಾಶ್ಚ ಸಾರಿಕಾಃ ।
ದ್ವಿಪಂಚದಶ ಮಾಸೇ ಯಾಸ್ತ್ವಕ್ಷಯುಗ್ಮಂ ತಥಾಯನೇ ॥ ೬ ॥
ಸೃಷ್ಟಿಪ್ರಲಯಸಂಜ್ಞೌ ದ್ವೌ ಗ್ಲಹೌ ಜಯಪರಾಜಯೌ ।
ದೇವೀಜಯೇ ಭವೇತ್ಸೃಷ್ಟಿರಸೃಷ್ಟಿರ್ಧೂರ್ಜಟೇರ್ಜಯೇ ॥ ೭ ॥
ಭವತೋಃ ಖೇಲಸಮಯೋ ಯಃ ಸಾ ಸ್ಥಿತಿರುದಾಹೃತಾ ।
ಇತ್ಥಂ ಕ್ರೀಡೈವ ಸಕಲಮೇತದ್ಬ್ರಹ್ಮಾಂಡಮಿಾಶಯೋಃ ॥ ೮ ॥
ನ ದೇವೀ ಜೇಷ್ಯತಿ ಪತಿಂ ನೇಶಃ ಶಕ್ತಿಂ ವಿಜೇಷ್ಯತಿ ।
ಕಿಂಚಿದ್ವಿಜ್ಞಪ್ತುಕಾಮೋಽಸ್ಮಿ ತನ್ಮಾತರವಧಾರ್ಯತಾಂ ॥ ೯ ॥
ದೇವಃ ಸರ್ವಜ್ಞನಾಥೋಽಪಿ ಸ ಕಿಂಚಿದವಬುಧ್ಯತಿ ।
ಮಾನಾಪಮಾನಯೋರ್ಯಸ್ಮಾದಸೌ ದೂರೇ ವ್ಯವಸ್ಥಿತಃ ॥ ೧೦ ॥

---

೫. ನಾರದನು ಹೇಳುತ್ತಾನೆ:—ದೇವದೇವನೆ! ಈ ಸಮಸ್ತ ಬ್ರಹ್ಮಾಂಡ ಗೋಳವೂ ನಿನ್ನ ಕ್ರೀಡಾರಂಗವೇ ಆಗಿರುವುದು. ಸ್ವಾಮಿಯೆ! ವರ್ಷದಲ್ಲಿ ಯಾವ ಹನ್ನೆರಡು ಮಾಸಗಳಿರುವುವೊ, ಅವುಗಳೇ ಹಾಸಿನ ಮನೆಗಳಾಗಿರುವುವು.

೬. ಹದಿನೈದು ಹದಿನೈದು ದಿವಸಗಳನ್ನೊಳಕೊಂಡು ಮಾಸದಲ್ಲಿರುವ ಕೃಷ್ಣ ಮತ್ತು ಶುಕ್ಲಪಕ್ಷಗಳೇ ನಿಮಗೆ ಪಗಡೆಯಕಾಯಿಗಳು. ಉತ್ತರಾಯಣ ದಕ್ಷಿಣಾಯನಗಳೇ ದಾಳದ ಕಾಯಿಗಳು ಎನಿಸಿರುವುವು.

೭. ಬ್ರಹ್ಮಾಂಡದ ಸೃಷ್ಟಿ ಮತ್ತು ಪ್ರಳಯಗಳೇ ಜಯಪರಾಜಯರೂಪಗಳಾದ ಎರಡು ಪಣಗಳಾಗಿರುವುವು. ದೇವಿಯು ಜಯಶೀಲಳಾದ ಕಾಲದಲ್ಲಿ ಲೋಕಸೃಷ್ಟಿಯುಂಟಾಗುವುದು. ಮಹೇಶ್ವರನಿಗೆ ಜಯವುಂಟಾದಾಗ ಪ್ರಳಯವು ಸಂಭವಿಸುವುದು.

೮. ನೀವಿಬ್ಬರೂ ಆಟವಾಡುತ್ತಿರುವ ಸಮಯವೇ ಪ್ರಪಂಚಕ್ಕೆ ಸ್ಥಿತಿಕಾಲವೆನ್ನಿಸುವುದು. ಇಂತು ಸಮಸ್ತವಾದ ಈ ಬ್ರಹ್ಮಾಂಡವೂ ಸರ್ವಶಕ್ತರಾದ ನಿಮ್ಮಿಬ್ಬರ ಕ್ರೀಡೆಯೇ ಆಗಿರುವುದು.

೯. ಇಷ್ಟು ಹೊತ್ತಾದರೂ ದೇವಿಯು ಗಂಡನನ್ನು ಸೋಲಿಸಲಿಲ್ಲ. ಪರಮೇಶ್ವರನೂ ಶಕ್ತಿಯನ್ನು ಜಯಿಸಲಿಲ್ಲ. ಎಲೌ ಜಗನ್ಮಾತೆಯೆ! ನಿನ್ನಲ್ಲಿ ಒಂದು ವಿಷಯವನ್ನು ವಿಜ್ಞಾಪಿಸಿಕೊಳ್ಳಲು ಇಚ್ಛೆಯುಳ್ಳವನಾಗಿರುವೆನು. ಅದನ್ನು ಲಾಲಿಸು.

೧೦. ಮಹಾದೇವನು ಸರ್ವಜ್ಞನೂ ಲೋಕೇಶ್ವರನೂ ಆಗಿದ್ದರೂ ತನಗೆ

ಲೀಲಾತ್ಮಾ ಗುಣವಾನೇಷ ವಿಚಾರಾದತಿನಿರ್ಗುಣಃ ।
ಕುರ್ವನ್ನಪಿ ಹಿ ಕರ್ಮಾಣಿ ಬಾಧ್ಯತೇ ನೈವ ಕರ್ಮಭಿಃ ॥ ೧೧ ॥
ಮಧ್ಯಸ್ಥೋಽಪಿ ಹಿ ಸರ್ವಸ್ಯ ಮಾಧ್ಯಸ್ಥ್ಯಮವಲಂಬತೇ ।
ಸರ್ವತ್ರಾಯಂ ಮಹೇಶಾನೋ ಮಿತ್ರಾಮಿತ್ರಸಮಾನದೃಕ್ ॥ ೧೨ ॥
ತ್ವಂ ಶಕ್ತಿರಸ್ಯ ದೇವಸ್ಯ ಸರ್ವೇಷಾಂ ಮಾನ್ಯಭೂಃ ಪರಾ ।
ದಕ್ಷಸ್ಯಾಪಿ ತ್ವಯಾ ಮಾನೋ ದತ್ತೋಽಪತ್ಯನಿಮಿತ್ತಕಃ ॥ ೧೩ ॥
ಪರಂ ತ್ವಂ ಸರ್ವಜಗತಾಂ ಜನಯಿತ್ರ್ಯೇಕಿಕಾ ಧ್ರುವಂ ।
ತ್ವತ್ತ ಆವಿರ್ಭವಂತ್ಯೇವ ಧಾತೃಕೇಶವವಾಸವಾಃ ॥ ೧೪ ॥
ತ್ವಮಾತ್ಮಾನಂ ನ ಜಾನಾಸಿ ತ್ರ್ಯಕ್ಷಮಾಯಾವಿಮೋಹಿತಾ ।
ಅತ ಏವ ಹಿ ಮೇ ಚಿತ್ತಂ ದುನೋತ್ಯತಿತರಾಂ ಸತಿ ॥ ೧೫ ॥
ಅನ್ಯಾ ಅಪಿ ಹಿ ಯಾಃ ಸತ್ಯಃ ಪಾತಿವ್ರತ್ಯಪರಾಯಣಾಃ ।
ತಾ ಭರ್ತೃಚರಣೌ ಹಿತ್ವಾ ಕಿಂಚಿದನ್ಯನ್ನ ಮನ್ವತೇ ॥ ೧೬ ॥

---

ಆಗುವ ಮಾನಾಪಮಾನಗಳನ್ನು ತಿಳಿಯಲಾರನು. ಈತನು ಆ ದ್ವಂದ್ವಗಳಿಗೆ ದೂರನೂ ಅತೀತನೂ ಆಗಿರುವನಲ್ಲವೆ.

೧೧. ಮಾಯೆಯೆಂಬ ಉಪಾಧಿಯಿಂದ ಕೂಡಿ ಬ್ರಹ್ಮಾಂಡದ ಲೀಲೆಯನ್ನು ಹೊರಗೆಡಹುತ್ತ ಗುಣವಂತನೆಂದು ತೋರುತ್ತಿದ್ದರೂ ವಿಚಾರಿಸಿನೋಡಲು ಕೇವಲ ನಿರ್ಗುಣನೇ ಆಗಿರುವನು. ಸೃಷ್ಟಿಸ್ಥಿತಿಲಯಗಳೆಂಬ ಕರ್ಮಗಳನ್ನು ಮಾಡುತ್ತಿದ್ದರೂ ಆತನು ಆ ಕರ್ಮಗಳಿಂದ ಬದ್ಧನಾಗುವುದಿಲ್ಲ.

೧೨. ಉದಾಸೀನನಾಗಿದ್ದರೂ ಈತನು ಸಮಸ್ತದಲ್ಲಿಯೂ ಅಂತರ್ಯಾಮಿಯಾಗಿರುವನು. ಎಲ್ಲೆಲ್ಲಿಯೂ ಈ ಮಹೇಶ್ವರನು ಮಿತ್ರರಲ್ಲಿಯೂ ಶತ್ರುಗಳಲ್ಲಿಯೂ ಸಮಾನದೃಷ್ಟಿಯುಳ್ಳವನಾಗಿರುವನು.

೧೩. ನೀನೇ ಈ ಮಹಾದೇವನ ಶಕ್ತಿಯಾಗಿರುವೆ. ಸಕಲರ ಮನ್ನಣೆಗೆ ಪಾತ್ರಳಾಗಿರುವೆ. ಪರಾತ್ಪರಳಾಗಿರುವೆ. ದಕ್ಷಬ್ರಹ್ಮನ ಮಗಳಾಗಿ ಹುಟ್ಟಿ ನೀನು ಆತನಿಗೂ ಸಹ ಬಹಳವಾದ ಗೌರವವನ್ನು ಸಂಪಾದಿಸಿಕೊಟ್ಟಿರುವೆ.

೧೪. ಆದರೂ ನೀನು ಸಕಲ ಲೋಕಗಳಿಗೂ ಮುಖ್ಯಳಾದ ಜನನಿಯೆಂಬುದು ನಿಜವು. ನಿನ್ನಿಂದಲೇ ಚತುರ್ಮುಖ, ಮಹಾವಿಷ್ಣು, ಮಹೇಂದ್ರ ಇವರೇ ಮುಂತಾದವರೂ ಜನ್ಮಗಳನ್ನು ತಾಳುತ್ತಿರುವರು.

೧೫. ಈ ತ್ರಿಲೋಚನನ ಮಾಯೆಯು ಮೋದಕ್ಕೊಳಗಾಗಿ ನೀನೂ ಸಹ ನಿನ್ನ ನಿಜಸ್ವರೂಪವನ್ನು ತಿಳಿಯದವಳಾಗಿರುವೆ. ಓ ಸತೀದೇವಿಯೇ ! ಆದುದರಿಂದಲೇ ನಿನ್ನ ವಿಷಯದಲ್ಲಿ ನನ್ನ ಮನಸ್ಸು ಬಹಳವಾಗಿ ದುಗುಡಗೊಳ್ಳುತ್ತಿರುವುದು.

೧೬. ಯಾವ ಇತರಸತಿಯರೂ ಪತಿವ್ರತಪರಾಯಣೆಯರಾಗಿರುವರೊ,

ಅಧುನಾಸ್ತಾಮಿಯಂ ವಾರ್ತಾ ಪ್ರಸ್ತುತಂ ಪ್ರಬ್ರವೀಮ್ಯಹಂ ।
ಅದ್ಯ ನೀಲಗಿರೇಸ್ತಸ್ಮಾದ್ಧರಿದ್ವಾರಸಮಾಪತಃ ॥ ೧೭ ॥
ಅಪೂರ್ವಮಿವ ಸಂವೀಕ್ಷ್ಯ ಪರಿಪ್ರಾಪ್ತಸ್ತವಾಂತಿಕಂ ।
ಅತ್ಯಾಶ್ಚರ್ಯವಿಷಾದಾಭ್ಯಾಂ ಕಿಂಚಿದ್ವಕ್ತುಮಿಹೋತ್ಸುಕಃ ॥ ೧೮ ॥
ಆಶ್ಚರ್ಯಹೇತುರೇವಾಯಂ ಯತ್ಸಂಜಾತಂ ತ್ರಯೀತಲೇ ।
ತದ್ದೃಷ್ಟಂ ಸಕಲತ್ರಂ ಚ ದಕ್ಷಸ್ಯಾಧ್ವರಮಂಡಪೇ ॥ ೧೯ ॥
ಸಾಲಂಕಾರಂ ಸಮಾನಂ ಚ ಸಾನಂದಮುಖಪಂಕಜಂ ।
ವಿಸ್ಮೃತಾಖಿಲಕಾರ್ಯಂ ಚ ದಕ್ಷಯಜ್ಞಪ್ರವರ್ತಕಂ ॥ ೨೦ ॥
ವಿಷಾದೇ ಕಾರಣಂ ಚೈತದ್ಯತೋ ಜಾತಮಿದಂ ಜಗತ್ ।
ಯಸ್ಮಿನ್ಪ್ರವರ್ತತೇ ಯತ್ರ ಲಯಮೇಷ್ಯತಿ ಚ ಧ್ರುವಂ ॥ ೨೧ ॥
ತದೇವ ತತ್ರ ನೋ ದೃಷ್ಟಂ ಭವದ್ದ್ವಂದ್ವಂ ಭವಾಪಹಂ ।
ಪ್ರಾಯೋ ವಿಷಾದಜನಕಂ ಭವತೋರ್ಯದದರ್ಶನಂ ॥ ೨೨ ॥

---

ಅವರೂ ಪತಿಯ ಪಾದಗಳನ್ನುಳಿದು ಮತ್ತೇನನ್ನೂ ಹೆಚ್ಚಿನದೆಂದು ತಿಳಿದಿರುವುದಿಲ್ಲ.

೧೭–೧೮. ಈ ಸಮಾಚಾರವು ಒತ್ತಟ್ಟಿಗಿರಲಿ. ಪ್ರಸ್ತುತದ ಕಾರ್ಯವನ್ನು ಕುರಿತು ಮಾತನಾಡುವೆನು. ಈಗ ತಾನೇ ನೀಲಾಚಲದ ಸಮೀಪದಿಂದ ಬರುತ್ತ ಹರಿದ್ವಾರದ ಬಳಿಯಲ್ಲಿ ಒಂದು ಅಪೂರ್ವವಾದ ವಿಷಯವನ್ನು ಕಂಡು ಅತಿಯಾದ ಆಶ್ಚರ್ಯ ಮತ್ತು ವಿಷಾದಗಳಿಂದ ಕೂಡಿದವನಾಗಿ ಅದನ್ನು ತಿಳಿಸಬೇಕೆಂಬ ಕುತೂಹಲದಿಂದಲೇ ಈಗ ನಿನ್ನ ಬಳಿಗೆ ಬಂದಿರುವೆನು.

೧೯. ನನ್ನ ಆಶ್ಚರ್ಯಕ್ಕೆ ಕಾರಣವೇನೆಂದರೆ ಮೂರು ಲೋಕಗಳಲ್ಲಿಯೂ ಯಾವ ಪುರುಷ ಪ್ರಾಣಿಗಳಿರುವುವೋ, ಅವುಗಳೆಲ್ಲವೂ ತಮ್ಮ ಪತ್ನಿಯರೊಡನೆ ದಕ್ಷಪ್ರಜೇಶ್ವರನ ಯಜ್ಞಮಂಟಪದಲ್ಲಿ ನೆರೆದಿದ್ದುವು.

೨೦. ಆ ಜನಸಮುದಾಯವೆಲ್ಲವೂ ಅಲಂಕಾರಗಳಿಂದಲೂ, ಬಹುಮಾನಗಳಿಂದಲೂ, ಆನಂದದಿಂದರಳಿದ ಮುಖಕಮಲಗಳಿಂದಲೂ ಕೂಡಿದುದಾಗಿ ಸಮಸ್ತ ಕಾರ್ಯಗಳನ್ನೂ ಮರೆತು ಆ ದಕ್ಷಯಜ್ಞದಲ್ಲಿ ಸಹಾಯಕವಾಗಿದ್ದಿತು.

೨೧–೨೨. ಇನ್ನು ನನ್ನ ವಿಷಾದಕ್ಕೆ ಕಾರಣವನ್ನು ತಿಳಿಸುವೆನು. ಈ ಬ್ರಹ್ಮಾಂಡವೆಲ್ಲವೂ ಯಾರಿಂದ ಉದ್ಭವಿಸಿರುವುದೋ, ಯಾರಲ್ಲಿ ನಡೆದು ಬರುತ್ತಿರುವುದೋ, ಕೊನೆಯಲ್ಲಿ ನಿಜವಾಗಿಯೂ ಯಾರಲ್ಲಿ ಲಯವನ್ನು ಹೊಂದುವುದೋ, ಅಂತಹ ಸಂಸಾರಮೋಚಕರಾದ ನಿಮ್ಮಿಬ್ಬರನ್ನೇ ಅಲ್ಲಿ ನಾನು ನೋಡಲಿಲ್ಲ. ಪ್ರಾಯಿಕವಾಗಿ ದಂಪತಿಗಳಾದ ನಿಮ್ಮಿಬ್ಬರನ್ನು ನೋಡದೆ ಇರುವುದೇ ನನ್ನ ವಿಷಾದಕ್ಕೆ ಕಾರಣವಾಗಿರುವುದು.

ತದೇವ ನಾಭವತ್ತತ್ರ ಸಮಭೂದನ್ಯದೇವ ಹಿ ।
ತಚ್ಚ ವಕ್ತುಂ ನ ಶಕ್ಯೇತ ತದ್ವಕ್ತಾ ದಕ್ಷ ಏವ ಸಃ ॥ ೨೩ ॥
ತಾನಿ ವಾಕ್ಯಾನಿ ಚಾಕರ್ಣ್ಯ ದ್ರುಹಿಣೇನ ಯಯೌ ತತಃ ।
ಮಹರ್ಷಿಣಾ ದಧೀಚೇನ ಧಿಕ್ಕೃತೋ ನಿತರಾಂ ಹಿ ಸಃ ॥ ೨೪ ॥
ಶಪ್ತಶ್ಚ ವೀಕ್ಷಮಾಣಾನಾಂ ದೇವರ್ಷೀಣಾಂ ಪ್ರಜಾಪತಿಃ ।
ಮಯಾ ಚ ಕರ್ಣೌ ಪಿಹಿತೌ ಶ್ರುತ್ವಾ ತದ್ಗರ್ಹಣಾ ಗಿರಃ ॥ ೨೫ ॥
ದಧೀಚಿನಾ ಸಮಂ ಕೇಚಿದ್ದುರ್ವಾಸಃಪ್ರಮುಖಾ ದ್ವಿಜಾಃ ।
ಭವನಿಂದಾಂ ಸಮಾಕರ್ಣ್ಯ ಕಿಯಂತೋಽಪಿ ವಿನಿರ್ಯಯುಃ ॥ ೨೬ ॥
ಪ್ರಾವರ್ತತ ಮಹಾಯಾಗೋ ಹೃಷ್ಟಪುಷ್ಟಮಹಾಜನಃ ।
ತಥಾ ದ್ರಷ್ಟುಂ ನ ಶಕ್ನೋಮಿ ತತ ಆಗತವಾನಿಹ ॥ ೨೭ ॥
ಭಗಿನ್ಯೋಽಪಿ ಚ ಯಾ ದೇವಿ ತವ ತತ್ರ ಸಭರ್ತೃಕಾಃ ।
ತಾಸಾಂ ಗೌರವಮಾಲೋಕ್ಯ ನ ಕಿಂಚಿದ್ವಕ್ತುಮುತ್ಸಹೇ ॥ ೨೮ ॥

---

೨೩. ಅಂತಹ ನಿಮ್ಮ ದರ್ಶನವೇ ಅಲ್ಲಿ ದೊರೆಯಲಿಲ್ಲ. ಮಿಕ್ಕುದೆಲ್ಲವೂ ಸಾಂಗವಾಗಿಯೇ ಇದ್ದಿತು. ಆದರೆ ನಿಮ್ಮ ವಿಷಯದಲ್ಲಿ ಆ ದಕ್ಷಪ್ರಜಾಪತಿ ಯಾಡಿದ ಮಾತುಗಳನ್ನು ನಿಮ್ಮ ಮುಂದೆ ಹೇಳಲು ನಾನು ಶಕ್ತನಲ್ಲ.

೨೪. ಆ ಮಾತುಗಳನ್ನು ಕೇಳಿ ಬ್ರಹ್ಮದೇವನೂ ಆ ಸ್ಥಳವನ್ನು ಬಿಟ್ಟು ಹೊರಟುಹೋದನು. ಆ ದಕ್ಷನು ಮಹರ್ಷಿಯಾದ ದಧೀಚಿಯಿಂದ ಅನೇಕ ಧಿಕ್ಕಾರಗಳನ್ನೂ ಕೇಳಿದನು.

೨೫. ಸಕಲ ದೇವತೆಗಳೂ, ಮಹರ್ಷಿಗಳೂ ನೋಡುತ್ತಿದ್ದಂತೆಯೇ ದಕ್ಷನು ಶಾಪವನ್ನೂ ಹೊಂದಿದನು. ಆತನು ನಿಮ್ಮನ್ನು ನಿಂದಿಸಿದ ವಾಕ್ಯಗಳನ್ನು ಕೇಳಿ ನಾನೂ ಕಿವಿಗಳನ್ನು ಮುಚ್ಚಿಕೊಂಡೆನು.

೨೬. ದಧೀಚಿಯ ಸಂಗಡಲೇ ದೂರ್ವಾಸನಾದಿಯಾದ ಹಲಕೆಲವು ಬ್ರಾಹ್ಮಣೋತ್ತಮರೂ ಸಹ ಮಹೇಶ್ವರನ ನಿಂದೆಯಮಾತುಗಳನ್ನು ಕೇಳಲಾರದೆ ಯಜ್ಞಶಾಲೆಯನ್ನು ಬಿಟ್ಟು ಹೊರಟುಬಂದರು.

೨೭. ಉಳಿದ ಮಹಾಜನರೆಲ್ಲರೂ ಹೃಷ್ಟಪುಷ್ಟರಾಗಿರಲು ಮಹಾಯಜ್ಞವು ಎಂದಿನಂತೆಯೇ ಮುಂದುವರೆಯಿತು. ಈ ನಡೆವಳಿಕೆಯನ್ನು ನೋಡಲು ನಾನು ಶಕ್ತನಾಗಲಿಲ್ಲ. ಆದುರಿಂದಲೇ ಇಲ್ಲಿಗೆ ಬಂದೆನು.

೨೮. ಎಲೈ ದೇವಿಯೆ ! ನಿನ್ನ ಸಹೋದರಿಯರೆಲ್ಲರೂ ಅಲ್ಲಿ ತಮ್ಮ ಗಂಡಂದಿ ರೊಡನೆ ಸೇರಿದ್ದರು. ಅವರಿಗಾದ ಮರ್ಯಾದೆಗಳನ್ನು ನೋಡಿದ ನಾನು ಆ ವಿಷಯದಲ್ಲಿ ಏನನ್ನೂ ಹೇಳಲಿಚ್ಛಿಸುವುದಿಲ್ಲ.

ಇತಿ ದೇವೀ ಸಮಾಕರ್ಣ್ಯ ಸತೀ ದಕ್ಷಕುಮಾರಿಕಾ ।
ಕರಾದಕ್ಷೌ ಸಮುತ್ಸೃಜ್ಯ ದಧ್ಯೌ ಕಿಂಚಿತ್ಕ್ಷಣಂ ಹೃದಿ ॥ ೨೯ ॥
ಉವಾಚ ಚ ಭವತ್ವೇವಂ ಶರಣಂ ಭವ ಏವ ಮೇ ।
ಸಂಪ್ರಧಾರ್ಯೇತಿ ಮನಸಿ ಸತೀ ದಾಕ್ಷಾಯಣೀ ತತಃ ॥ ೩೦ ॥
ಧೃತಮೇವ ಸಮುತ್ತಸ್ಥೌ ಪ್ರಣನಾಮ ಚ ಶಂಕರಂ ।
ಮೌಲಾವಂಜಲಿಮಾಧಾಯ ದೇವೀ ದೇವಂ ವ್ಯಜಿಜ್ಞಪತ್ ॥ ೩೧ ॥

ದೇವ್ಯುವಾಚ :—

ವಿಜಯಸ್ವಾಂಧಕಧ್ವಂಸಿಂಸ್ತ್ರ್ಯಂಬಕ ತ್ರಿಪುರಾಂತಕ ।
ಚರಣೌ ಶರಣಂ ತೇ ಮೇ ದೇಹ್ಯನುಜ್ಞಾಂ ಸದಾಶಿವ ॥ ೩೨ ॥
ಮಾನಿಷೇಧೀಃ ಪ್ರಾರ್ಥಯಾಮಿ ಯಾಸ್ಯಾಮಿ ಪಿತುರಂತಿಕಂ ।
ಉಕ್ತ್ವೇತಿ ಮೌಲಿಮುದಧಾದಂಧಕಾರಿಪದಾಂಬುಜೇ ॥ ೩೩ ॥
ಅಥೋಕ್ತಾ ಶಂಭುನಾ ದೇವೀ ಮೃಡಾನ್ಯುತ್ತಿಷ್ಠ ಭಾಮಿನಿ ।
ಕಿಮಪೂರ್ಣಂ ತವಾಸ್ತ್ಯತ್ರ ವದ ಸೌಭಾಗ್ಯಸುಂದರಿ ॥ ೩೪ ॥

---

೨೯. ದಕ್ಷಕುಮಾರಿಯಾದ ಸತೀದೇವಿಯು ಈ ವೃತ್ತಾಂತವನ್ನು ಕೇಳಿ ತನ್ನ ಕೈಯಲ್ಲಿದ್ದ ದಾಳಗಳನ್ನು ಬಿಸುಟು ಇದನ್ನೇ ಕುರಿತು ಒಂದು ಕ್ಷಣದಕಾಲ ಮನಸ್ಸಿನಲ್ಲಿ ಧ್ಯಾನಮಾಡುತ್ತಿದ್ದಳು.

೩೦–೩೧. ಬಳಿಕ, "ಒಳ್ಳೆಯದು. ಹಾಗೆಯೇ ಆಗಲಿ, ನನಗೆ ಮಾತ್ರ ಮಹಾದೇವನೇ ಶರಣ್ಯನಾಗಿರುವನು" ಎಂದು ಮನಸ್ಸಿನಲ್ಲಿಯೇ ನಿಶ್ಚಯವನ್ನು ಮಾಡಿಕೊಂಡು ದಕ್ಷಪುತ್ರಿಯಾದ ಆ ಸತೀದೇವಿಯು ಸಂಭ್ರಮದಿಂದ ಎದ್ದು ಶಂಕರನಿಗೆ ನಮಸ್ಕಾರವನ್ನುಮಾಡಿದಳು. ಬಳಿಕ ತಲೆಯಲ್ಲಿ ಅಂಜಲಿಬಂಧವನ್ನು ಮಾಡಿಕೊಂಡು ದೇವಿಯು ತನ್ನ ಪತಿಗೆ ವಿಜ್ಞಾಪನೆಯನ್ನು ಮಾಡಿಕೊಂಡಳು.

೩೨. ದೇವಿಯು ಹೇಳುತ್ತಾಳೆ:—"ಅಂಧಕಾರಾತಿಯೆ! ತ್ರಿಲೋಚನನೆ! ತ್ರಿಪುರಾಂತಕನೆ! ಸದಾಶಿವನೆ! ನಿನಗೆ ಮಂಗಳವಾಗಲಿ. ನಿನ್ನ ಪಾದಗಳೇ ನನಗೆ ಶರಣಸ್ಥಾನವಾಗಿರುವುವು. ನನಗೆ ಅಪ್ಪಣೆಯನ್ನು ಕೊಡು.

೩೩. ನನ್ನನ್ನು ತಡೆಯಬೇಡವೆಂದು ನಿನ್ನನ್ನು ಬೇಡುತ್ತಿರುವೆನು. ನನ್ನ ತಂದೆಯ ಬಳಿಗೆ ಹೋಗಿಬರುವೆನು." ಇಂತೆಂದು ಆಕೆಯು ತನ್ನ ತಲೆಯನ್ನು ಮಹಾದೇವನ ಪಾದಕಮಲಗಳಲ್ಲಿಟ್ಟಳು.

೩೪. ಆಗ ಶಂಭುವು ಮೃಡಾಣಿಯನ್ನು ಕುರಿತು ಇಂತೆಂದನು. "ಪ್ರಿಯಳೆ! ಸೌಭಾಗ್ಯಸುಂದರಿಯೆ! ಮೇಲಕ್ಕೇಳು. ಇಲ್ಲಿ ನಿನಗೆ ಸಿಕ್ಕಲಾರದುದೇನಾದರೂ ಇರುವುದೆ? ಯಾವುದಕ್ಕಾದರೂ ಕಡಿಮೆಯಾಗಿರುವುದೆ? ತಿಳಿಸುವವಳಾಗು.

ಲಕ್ಷ್ಮ್ಯೈ ಅಪಿ ಚ ಸೌಭಾಗ್ಯಂ ಬ್ರಹ್ಮಾಣ್ಯೈ ಕಾಂತಿರುತ್ತಮಾ ।
ಶಚ್ಯೈ ನಿತ್ಯನವೀನತ್ವಂ ಭವತ್ಯಾ ದತ್ತಮೀಶ್ವರಿ ॥ ೩೫ ॥
ತ್ವಯಾ ಚ ಶಕ್ತಿಮಾನಸ್ಮಿ ಮಹದೈಶ್ವರ್ಯರಕ್ಷಣೇ ।
ತ್ವಾಂ ಚ ಶಕ್ತಿಂ ಸಮಾಸಾದ್ಯ ಸ್ವಲೀಲಾರೂಪಧಾರಿಣೀಂ ॥ ೩೬ ॥
ಏತತ್ಸೃಜಾಮಿ ಪಾಮ್ಯದ್ಮಿ ತ್ವಲ್ಲೀಲಾಪ್ರೇರಿತೋಽಂಗನೇ ।
ಕುತೋ ಮಾಂ ಹಾತುಮಿಚ್ಛೇಸ್ತ್ವಂ ಮಮ ವಾಮಾರ್ಧಧಾರಿಣಿ ॥ ೩೭ ॥
ಶಿವಾ ಶಿವೋದಿತಂ ಚೇತಿ ಶ್ರುತ್ವಾಸ್ಯಾಹ ಮಹೇಶ್ವರಂ ।
ಜೀವಿತೇಶ ವಿಹಾಯ ತ್ವಾಂ ನ ಕ್ವಾಪಿ ಪರಿಯಾಮ್ಯಹಂ ॥ ೩೮ ॥
ಮನೋ ಮೇ ಚರಣದ್ವಂದ್ವೇ ತವ ಸ್ಥಾಸ್ಯತಿ ನಿಶ್ಚಲಂ ।
ಕ್ರತುಂ ದ್ರಷ್ಟುಂ ಪಿತುರ್ಯಾಮಿ ನೈಕ್ಷಿ ಯಜ್ಞೋ ಮಯಾ ಕ್ವಚಿತ್ ॥
ಶಂಭುಃ ಕಾತ್ಯಾಯನೀವಾಕ್ಯಮಿತಿ ಶ್ರುತ್ವಾ ತದಾಬ್ರವೀತ್ ।
ಕ್ರತುಸ್ತ್ವಯಾ ನೇಕ್ಷಿತಶ್ಚೇದಾಹರಾಮಿ ತತಃ ಕ್ರತುಂ ॥ ೪೦ ॥

---

೩೫. ಮಹೇಶ್ವರಿಯೆ! ಮಹಾಲಕ್ಷ್ಮಿಗೂ ನೀನೇ ಐಶ್ವರ್ಯವನ್ನು ಕೊಟ್ಟವಳು, ಸರಸ್ವತೀದೇವಿಗೆ ಉತ್ತಮ ಕಾಂತಿಯನ್ನು ಕೊಟ್ಟಿರುವೆ. ಶಚೀ ದೇವಿಗೂ ನೀನೇ ನಿತ್ಯ ಯೌವನವನ್ನು ಅನುಗ್ರಹಿಸಿರುವೆಯಲ್ಲವೆ.

೩೬–೩೭. ನಿನ್ನ ಸಹವಾಸದಿಂದಲೇ ನಾನು ನನ್ನ ಮಹದೈಶ್ವರ್ಯವನ್ನು ಕಾಪಾಡಿಕೊಳ್ಳಲು ಶಕ್ತನಾಗಿರುವೆನು. ನನ್ನ ಲೀಲೆಯೇ ನಿನ್ನ ಸ್ವರೂಪವಾಗಿರುವುದು. ಶಕ್ತಿರೂಪಳಾದ ನಿನ್ನ ಮೂಲಕವೇ ನಾನು ಈ ಬ್ರಹ್ಮಾಂಡವನ್ನು ಸೃಷ್ಟಿಮಾಡುತ್ತಿರುವೆನು. ಪಾಲಿಸುತ್ತಿರುವೆನು. ಲಯಗೊಳಿಸುತ್ತಿರುವೆನು. ಪ್ರಿಯಳೆ! ನಿನ್ನಲೀಲೆಯೇ ಈ ಕಾರ್ಯಕ್ಕೆಲ್ಲಕ್ಕೂ ನನ್ನನ್ನುಪ್ರೇರಿಸುತ್ತಿರುವುದು. ನನ್ನ (ಎಡಭಾಗದ) ಅರ್ಧಶರೀರವನ್ನೇ ಸೂರೆಗೊಂಡಿರುವ ನೀನು ನನ್ನನ್ನೇತಕ್ಕೆ ಬಿಟ್ಟುಹೋಗುವೆ?

೩೮. ಮಹೇಶ್ವರನ ಈ ಮಾತುಗಳನ್ನು ಕೇಳಿ ಆ ಶಿವೆಯು ಆತನಿಗಿಂತೆಂದು ಹೇಳಿದಳು. "ಪ್ರಾಣೇಶ್ವರನೆ! ನಿನ್ನನ್ನು ಬಿಟ್ಟು ನಾನು ಬೇರೆಲ್ಲಿಯೂ ಹೊರಟುಹೋಗುವುದಿಲ್ಲ. ಇದು ನಿಶ್ಚಯವು.

೩೯. ನನ್ನ ಮನಸ್ಸೆಲ್ಲವೂ ನಿಶ್ಚಲವಾಗಿ ಯಾವಾಗಲೂ ನಿನ್ನ ಪಾದಯುಗಳದಲ್ಲಿಯೇ ನೆಲಸಿರುವುದು. ಈಗ ನಾನು ತಂದೆಯು ಮಾಡುತ್ತಿರುವ ಯಜ್ಞವನ್ನು ನೋಡುವುದಕ್ಕೆ ಹೋಗಿ ಬರುವೆನು. ನಾನು ಎಂದೂ ಯಜ್ಞವನ್ನು ನೋಡಿದವಳಲ್ಲ.

೪೦. ಸತೀದೇವಿಯ ಈ ಮಾತನ್ನು ಕೇಳಿ ಶಂಕರನು ಪುನಃ ಇಂತೆಂದನು. "ನೀನು ಯಾವ ಯಜ್ಞವನ್ನೂ ನೋಡಿಲ್ಲವೆಂದು ಹೇಳಿದೆಯಲ್ಲವೆ. ಆದುದರಿಂದ ನಿನ್ನ ಸಂತೋಷಕ್ಕಾಗಿ ನಾನೊಂದು ಮಹಾಯಜ್ಞವನ್ನು ಮಾಡುವೆನು.

ಮಚ್ಛಕ್ತಿಧಾರಿಣೀ ತ್ವಂ ವಾ ಸೃಜ್ಯೈವಾನ್ಯಾಂ ಕ್ರತುಕ್ರಿಯಾಂ ।
ಅನ್ಯೋ ಯಜ್ಞಪುಮಾನಸ್ತು ಸಂತ್ವನ್ಯೇ ಲೋಕಪಾಲಕಾಃ ॥ ೪೧ ॥
ಅನ್ಯಾನಾಶು ವಿಧೇಹಿ ತ್ವಮೃಷೀಣಾತ್ವಿರ್ಜ್ಯಕರ್ಮಣಿ ।
ಪುನರ್ಜಗಾದ ದೇವೇತಿ ಶ್ರುತ್ವಾ ಶಂಭೋರುದೀರಿತಂ ॥ ೪೨ ॥
ಪಿತುರ್ಯಜ್ಞೋತ್ಸವೋ ನಾಥ ದ್ರಷ್ಟವ್ಯೋಽತ್ರ ಮಯಾ ಧ್ರುವಂ ।
ದೇಹ್ಯನುಜ್ಞಾಂ ಗಮಿಷ್ಯಾಮಿ ಮಾ ಮೇ ಕಾರ್ಷೀರ್ವಚೋಽನ್ಯಥಾ॥ ೪೩ ॥
ಕಃ ಪ್ರತೀಪಯಿತುಂ ಶಕ್ತಶ್ಚೇತೋ ವಾ ಜಲಮೇವ ವಾ ।
ನಿಮ್ನಾಯಾಭ್ಯುದ್ಯತಂ ನಾಥ ಮಾದ್ಯ ಮಾಂ ಪ್ರತಿಷೇಧಯ ॥ ೪೪ ॥
ನಿಶಮ್ಯೇತಿ ಪುನಃ ಪ್ರಾಹ ಸರ್ವಜ್ಞೋ ಭೂತನಾಯಕಃ ।
ಮಾ ಯಾಹಿ ದೇವಿ ಮಾಂ ಹಿತ್ವಾ ಗತಾ ಚ ನ ಮಿಲಿಷ್ಯಸಿ ॥ ೪೫ ॥
ಅದ್ಯ ಪ್ರಾಚೀಂ ಯಿಯಾಸುಂ ತ್ವಾಂ ವಾರಯೇತ್ಪಂಗುವಾಸರಃ ।
ನಕ್ಷತ್ರಂ ಚ ತಥಾ ಜ್ಯೇಷ್ಠಾ ತಿಥಿಶ್ಚ ನವಮೀ ಪ್ರಿಯೇ ॥ ೪೬ ॥

---

೪೧. ಅಥವಾ ನೀನೂ ನನ್ನ ಶಕ್ತಿಯನ್ನೇ ಧರಿಸಿರುವೆಯಲ್ಲವೆ. ನೀನೇ ಬೇರೊಂದು ಯಜ್ಞವನ್ನು ಪ್ರಾರಂಭಿಸು. ಅದಕ್ಕೆ ಬೇರೆ ಯಜ್ಞಪುರುಷನಿರಲಿ. ಲೋಕಪಾಲಕರೂ ಬೇರೆಯವರೇ ಆಗಿರಲಿ.

೪೨. ಇತರ ಮಹರ್ಷಿಗಳನ್ನೇ ನೀನು ಶೀಘ್ರವಾಗಿ ಋತ್ವಿಜರ ಕೆಲಸಗಳಲ್ಲಿ ನಿಯಮಿಸು.'' ಇಂತೆಂದ ಮಹೇಶ್ವರನ ಅಪ್ಪಣೆಯನ್ನು ಕೇಳಿ ಲೋಕಮಾತೆಯು ಆತನಿಗೆ ಪುನಃ ಹೇಳತೊಡಗಿದಳು.

೪೩. '' ನಾಥಾ! ನನ್ನ ತಂದೆಯು ಮಾಡುವ ಮಹಾಕ್ರತುವನ್ನು ನಾನು ಖಂಡಿತವಾಗಿಯೂ ನೋಡಲೇಬೇಕು. ಆದುದರಿಂದ ನನಗೆ ಅಲ್ಲಿಗೆ ಹೋಗಲು ಅನುಜ್ಞೆಯನ್ನು ಕೊಡು. ನನ್ನ ಅಭಿಲಾಷೆಯನ್ನು ವ್ಯರ್ಥಗೊಳಿಸಬೇಡ.

೪೪. ಸ್ವಾಮಿಯೆ! ಹಳ್ಳಕ್ಕೆ ಹರಿಯುವ ನೀರನ್ನಾಗಲಿ ಮನಸ್ಸಿನ ಓಟವನ್ನಾಗಲಿ ತಡೆಗಟ್ಟಲು ಯಾರಿಗೆ ತಾನೆ ಶಕ್ತಿಯಿವುದು? ಆದುದರಿಂದ ಇಂದು ನನ್ನನ್ನು ನಿಷೇಧಿಸಬೇಡ.''

೪೫. ಇದನ್ನು ಕೇಳಿ ಮಹೇಶ್ವರನು ಪುನಃ ಆಕೆಯನ್ನು ಕುರಿತು ಹೇಳಿದನು. '' ಎಲೌ ದೇವಿಯೆ! ನನ್ನನ್ನು ಬಿಟ್ಟು ಹೋಗಬೇಡ. ಇಂದು ನನ್ನನ್ನಗಲಿ ಹೋದರೆ ಪುನಃ ನೀನು ನನ್ನನ್ನು ನೋಡಲಾರೆ.

೪೬. ಶನಿವಾರವಾಗಿರುವ ಈ ದಿವಸವು ಪೂರ್ವದಿಕ್ಕಿಗೆ ಹೊರಡಲಿಚ್ಛಿಸುತ್ತಿರುವ ನಿನ್ನನ್ನು ಪ್ರತಿಷೇಧಿಸುತ್ತಿರುವುದು. ಪ್ರಿಯಳೆ! ಇಂದಿನ ನಕ್ಷತ್ರವೂ ಜ್ಯೇಷ್ಠೆಯಾಗಿರುವುದು. ತಿಥಿಯು ನವಮಿಯು.

ಅದ್ಯ ಸಪ್ತದಶೋ ಯೋಗೋ ವಿಯೋಗೋಽದ್ಯತನೋಽಶುಭಃ ।
ಧನಿಷ್ಠಾರ್ಧಸಮುತ್ಪನ್ನೇ ತವ ತಾರಾದ್ಯ ಪಂಚಮೀ ॥ ೪೭ ॥
ಮಾ ಗಾ ದೇವೀ ಗತಾದ್ಯ ತ್ವಂ ನ ಹಿ ದ್ರಕ್ಷ್ಯಸಿ ಮಾಂ ಪುನಃ ।
ಪುನರ್ದೇವೀ ಬಭಾಷೇ ಸಾ ಯದಿ ನಾಮ್ನಾಸ್ಮ್ಯಹಂ ಸತೀ ॥ ೪೮ ॥
ತದಾ ತನ್ವಂತರೇಣಾಪಿ ಕರಿಷ್ಯೇ ತವ ದಾಸತಾಂ ।
ತತೋ ಭವಃ ಪುನಃ ಪ್ರಾಹ ಕೋ ವಾ ವಾರಯಿತುಂ ಪ್ರಭುಃ ॥ ೪೯ ॥
ಪರಿಕ್ಷುಬ್ಧಮನೋವೃತ್ತಿಂ ಸ್ತ್ರಿಯಂ ವಾ ಪುರುಷಂ ತು ವಾ ।
ಪುನರ್ನ ದರ್ಶನಂ ದೇವಿ ಮಯಾ ಸತ್ಯಂ ಬ್ರವೀಮ್ಯಹಂ ॥ ೫೦ ॥
ಪರಂ ಸ ದೇವಿ ಗಂತವ್ಯಂ ಮಹಾಮಾನಧನೇಚ್ಛುಭಿಃ ।
ಅನಾಹೂತತಯಾ ಕಾಂತೇ ಮಾತಾಪಿತೃಗೃಹಾನಪಿ ॥ ೫೧ ॥
ಯಥಾ ಸಿಂಧುಗತಾ ಸಿಂಧುರ್ನ ಪುನಃ ಪರಿವರ್ತತೇ ।
ತಥಾದ್ಯ ಗಂತ್ರ್ಯಾ ನೋ ಜಾತು ತವಾಗಮನಮಿಷ್ಯತೇ ॥ ೫೨ ॥

೪೭. ಅಲ್ಲದೆ ಇಂದಿನ ಯೋಗವೂ ಹದಿನೇಳನೆಯದಾದ ವ್ಯತೀಪಾತವು. ಇದೂ ಅಮಂಗಳವಾಗಿ ವಿಯೋಗಕಾರಕವಾಗಿರುವುದು. ನೀನು ಧನಿಷ್ಠಾ ನಕ್ಷತ್ರದಲ್ಲಿ ಜನಿಸಿದವಳಾದುದರಿಂದ ಇಂದಿನ ನಕ್ಷತ್ರಕ್ಕೆ ನಿನ್ನ ಜನ್ಮನಕ್ಷತ್ರವು ಐದನೆಯದು.

೪೮–೫೦. ಆದುದರಿಂದ ಇಂದು ಹೊರಡಬೇಡ. ಹಠದಿಂದ ಹೊರಡುವೆಯಾದರೆ ಪುನಃ ನನ್ನನ್ನು ನೋಡಲಾರೆ.'' ಆಗ ದೇವಿಯು ಪುನಃ ಹೇಳಿದಳು. '' ನನ್ನ ಹೆಸರಿನಂತೆ ನಾನು ನಿಜವಾಗಿಯೂ ಸತಿಯೇ ಆಗಿದ್ದರೆ, ಬೇರೆ ಶರೀರದಿಂದಲಾದರೂ ನಿನ್ನ ಪರಿಚಾರಿಕೆಯನ್ನು ಮಾಡುವೆನು.'' ಮಹಾದೇವನು ಮತ್ತೆ ಹೇಳಿದನು. ಪ್ರಕ್ಷುಬ್ಧವಾದ ಮನಸ್ಸುಳ್ಳ ಸ್ತ್ರೀಯನ್ನಾಗಲಿ ಪುರುಷನನ್ನಾಗಲಿ ತಡೆಯಲು ಯಾವನು ತಾನೆ ಶಕ್ತನಾದಾನು? ದೇವೀ! ನಿನಗೆ ಪುನಃ ನನ್ನ ದರ್ಶನವು ಲಭಿಸುವುದಿಲ್ಲ. ನಾನು ಸತ್ಯವನ್ನೇ ಹೇಳುತ್ತಿರುವೆನು.

೫೧. ಅಲ್ಲದೆ ನಿನಗೆ ಮತ್ತೊಂದು ವಿಷಯವನ್ನು ಹೇಳುವೆನು. ಎಲೌ ಕಾಂತೆಯೆ! ಮರ್ಯಾದೆಯೆಂಬ ಧನವನ್ನು ಗಳಿಸುವ ಸ್ತ್ರೀಯರು ಕರೆಯಲ್ಪಡದೆ ತಾಯಿತಂದೆಗಳ ಮನೆಗಳಿಗೂ ಹೋಗಬಾರದು.

೫೨. ಸಮುದ್ರದಲ್ಲಿ ಒಂದಾದ ನದಿಯ ನೀರು ಪುನಃ ಕೈಗೆ ಸಿಕ್ಕುವುದು ಹೇಗೆ ದುರ್ಲಭವೋ, ಹಾಗೆಯೇ ಇಂದು ತಾಯಿಯ ಮನೆಗೆ ಹೋಗುತ್ತಿರುವ ನೀನು ಹಿಂದಿರುಗಿ ಬರುವ ನಂಬಿಕೆಯು ನನಗಿಲ್ಲ.

ದೇವ್ಯುವಾಚ :—
ಅವಶ್ಯಂ ಯದ್ಯಹಂ ರಕ್ತಾ ತವ ಪಾದಾಂಬುಜದ್ವಯೇ ।
ತಥಾ ತ್ವಮೇವ ಮೇ ನಾಥೋ ಭವಿಷ್ಯಸಿ ಭವಾಂತರೇ ॥ ೫೩ ॥
ಇತ್ಯುಕ್ತ್ವಾ ನಿರ್ಯಯೌ ದೇವೀ ಕೋಪಾಂಧೀಕೃತಲೋಚನಾ ।
ಯಿಯಾಸುಭಿಶ್ಚ ಕಾರ್ಯಾರ್ಥಂ ಯತ್ಕರ್ತವ್ಯಂ ನ ತತ್ಕೃತಂ ॥ ೫೪ ॥
ನ ನನಾಮ ಮಹಾದೇವಂ ನ ಚ ಚಕ್ರೇ ಪ್ರದಕ್ಷಿಣಂ ।
ಅತ ಏವ ಹಿ ಸಾ ದೇವೀ ನ ಗತಾ ಪುನರಾಗತಾ ॥ ೫೫ ॥
ಅಪ್ರಣಮ್ಯ ಮಹೇಶಾನಮಕೃತ್ವಾಪಿ ಪ್ರದಕ್ಷಿಣಂ ।
ಅದ್ಯಾಪಿ ನ ನಿವರ್ತಂತೇ ಗತಾಃ ಪ್ರಾಗ್ವಾಸರಾ ಇವ ॥ ೫೬ ॥
ತಯಾ ಚರಣಚಾರಿಣ್ಯಾ ರಾಜ್ಞ್ಯಾ ತ್ರಿಭುವನೇಶಿತುಃ ।
ಅಪಿ ತತ್ಪಾವನಂ ವರ್ತ್ಮ ಮೇನೇಽತಿಕಠಿನಂ ಬಹು ॥ ೫೭ ॥
ದೇವೋಽಪಿ ತಾಂ ಸತೀಂ ಯಾಂತೀಂ ದೃಷ್ಟ್ವಾ ಚರಣಚಾರಿಣೀಂ ।
ಅತೀವ ವಿವ್ಯಥೇ ಚಿತ್ತೇ ಗಣಾಂಶ್ಚಾಥ ಸಮಾಹ್ವಯತ್ ॥ ೫೮ ॥

---

೫೩. ದೇವಿಯು ಹೇಳುತ್ತಾಳೆ:—"ನನ್ನ ಮನೋನಿಶ್ಚಯವನ್ನು ಕೇಳು. ನಾನು ನಿಜವಾಗಿಯೂ ನಿನ್ನ ಪಾದಕಮಲಗಳಲ್ಲಿಯೇ ಅನುರಕ್ತಳಾಗಿರುವವಳಾದರೆ ಜನ್ಮಾಂತರದಲ್ಲಿಯೂ ನೀನೇ ನನಗೆ ಪತಿಯಾಗುವೆ."

೫೪. ಇಂತೆಂದು ಕೋಪದಿಂದ ಕಣ್ಣುಕಾಣದವಳಾಗಿ ಆ ದೇವಿಯು ತಂದೆಯ ಯಜ್ಞಶಾಲೆಗೆ ಹೊರಡಲನುವಾದಳು. ಪ್ರಯಾಣ ಮಾಡುವವರು ಕಾರ್ಯಸಿದ್ಧಿಗಾಗಿ ಮಾಡಬೇಕಾದ ಮಂಗಳಕಾರ್ಯಗಳನ್ನೂ ಮಾಡಲಿಲ್ಲ.

೫೫. ಆಕೆಯು ಮಹಾದೇವನಿಗೆ ನಮಸ್ಕಾರವನ್ನಾಗಲಿ ಪ್ರದಕ್ಷಿಣೆಯನ್ನಾಗಲಿ ಮಾಡಲಿಲ್ಲ. ಆದುದರಿಂದಲೇ ಅಂದು ಹೊರಟ ದೇವಿಯು ಪುನಃ ಗಂಡನ ಮನೆಗೆ ಹಿಂದಿರುಗಲಿಲ್ಲ.

೫೬. ಮಹೇಶ್ವರನಿಗೆ ಪ್ರಣಾಮವನ್ನೂ, ಪ್ರದಕ್ಷಿಣೆಯನ್ನೂ ಮಾಡದೆ ಯಾವನು ಹೊರಕ್ಕೆ ಹೋಗುವನೊ, ಅವನು ಇಂದಿಗೂ ಸಹ ಕಳೆದುಹೋದ ದಿವಸಗಳಂತೆ ಪುನಃ ಹಿಂದಿರುಗಲಾರನು.

೫೭. ದಾರಿಯು ಪವಿತ್ರವಾಗಿ ಸುಗಮವಾಗಿದ್ದರೂ ತ್ರಿಲೋಕೇಶ್ವರನ ರಾಣಿಯಾದ ಆಕೆಯ ಕಾಲುನಡಿಗೆಗೆ ಅದು ಮಹಾಕಠಿನವೂ ಬಹುದೂರವೂ ಆಗಿರುವಂತೆ ತೋರುತ್ತಿದ್ದಿತು.

೫೮. ಮಹಾದೇವನೂ ಸಹ ಪಾದಚಾರಿಯಾಗಿಯೇ ಹೊರಡುತ್ತಿರುವ ದೇವಿಯನ್ನು ಕಂಡು ಬಹಳ ಖಿನ್ನನಾಗಿ ತನ್ನ ಗಣಗಳನ್ನೆಲ್ಲ ಕರೆದು, ಅವರಿಗೆ ಅಪ್ಪಣೆಯನ್ನು ಮಾಡಿದನು.

ಗಣಾ ವಿಮಾನಂ ನಯತ ಮನಃಪವನಚಕ್ರಿಣಂ ।
ಪಂಚಾಸ್ಯಾಯುತಸಂಯುಕ್ತಂ ರತ್ನಸಾನುಧ್ವಜೋಚ್ಛ್ರಿತಂ ॥ ೫೯ ॥
ಮಹಾವಾತಪತಾಕಂ ಚ ಮಹಾಬುದ್ಧ್ಯಕ್ಷಲಕ್ಷಿತಂ ।
ನರ್ಮದಾಲಕನಂದಾ ಚ ಯತ್ರೇಷಾದಂಡತಾಂ ಗತೇ ॥ ೬೦ ॥
ಛತ್ರೀಭೂತೌ ಚ ಯತ್ರ ಸ್ತಃ ಸೂರ್ಯಚಂದ್ರಮಸಾವಪಿ ।
ಯಸ್ಮಿನ್ಮಕರತುಂಡಂ ಚ ವಾರಾಹೀ ಶಕ್ತಿರುತ್ತಮಾ ॥ ೬೧ ॥
ಧೂಃ ಸ್ವಯಂ ಚಾಪಿ ಗಾಯತ್ರೀ ರಜ್ಜವಸ್ತಕ್ಷಕಾದಯಃ ।
ಸಾರಥಿಃ ಪ್ರಣವೋ ಯತ್ರ ಕ್ರೇಂಕಾರಃ ಪ್ರಣವಧ್ವನಿಃ ॥ ೬೨ ॥
ಅಂಗಾನಿ ರಕ್ಷಕಾ ಯತ್ರ ವರೂಥಶ್ಛಂದಸಾಂಗಣಃ ।
ಇತ್ಯಾಜ್ಞಪ್ತಾ ಗಣಾಸ್ತೂರ್ಣಂ ರಥಂ ನಿನ್ಯುರ್ಹರಾಜ್ಞಯಾ ॥ ೬೩ ॥
ದೇವ್ಯಾ ಸನಾಥಂ ತಂ ಕೃತ್ವಾ ವಿಮಾನಂ ಪಾರ್ಷದಾ ದಿವಿ ।
ಅನುಜಗ್ಮುರ್ಮಹಾದೇವೀಂ ದಿವ್ಯಾಂ ತೇಜೋವಿಜೃಂಭಿಣೀಂ ॥ ೬೪ ॥
ಸಾ ಕ್ಷಣಂ ತ್ರ್ಯಕ್ಷರಮಣೀ ವೀಕ್ಷ್ಯ ದಕ್ಷಸಭಾಂಗಣಂ ।
ನಭೋಽಂಗಣಾದ್ವಿಮಾನಸ್ಥಾ ತತೋ ವೇಗಾದವಾತರತ್ ॥ ೬೫ ॥

---

೫೯. "ಗಣಗಳಿರಾ! ಮನಸ್ಸು ಮತ್ತು ವಾಯುಗಳ ವೇಗವುಳ್ಳ ಉತ್ತಮ ವಿಮಾನವೊಂದನ್ನು ತನ್ನಿರಿ. ಅದಕ್ಕೆ ಹತ್ತುಸಾವಿರ ಸಿಂಹಗಳನ್ನು ಹೂಡಿರಬೇಕು. ಮೇರುಪರ್ವತವೇ ಉನ್ನತವಾದ ಧ್ವಜದ ದಂಡವಾಗಿರಬೇಕು.

೬೦. ಮಹಾವಾತವೇ ಪತಾಕೆಯಾಗಿರಲಿ. ಬುದ್ಧಿಯ ರೂಪವಾದ ಮಹತ್ತತ್ತ್ವವೇ ಚಕ್ರಗಳ ಅಚ್ಚಾಗಿರಬೇಕು. ನರ್ಮದಾ ಮತ್ತು ಅಲಕನಂದಾ ನದಿಗಳೇ ವಿಮಾನದ ಮೂಕಿಯ ಮರಗಳಾಗಿರಲಿ.

೬೧. ಮೇಲೆ ಸಂಚರಿಸುತ್ತಿರುವ ಸೂರ್ಯಚಂದ್ರರೇ ಶ್ವೇತಚ್ಛತ್ರಗಳಾಗಿರಲಿ. ವಾರಾಹಿಯೆಂಬ ಶಕ್ತಿಯೇ ವಿಮಾನದ ಮಕರತೋರಣವಾಗಿರಲಿ.

೬೨. ಗಾಯಿತ್ರೀದೇವಿಯೇ ಬಂಡಿಯ ನೊಗವಾಗಲಿ. ತಕ್ಷಕನೇ ಮೊದಲಾದ ಸರ್ಪಶ್ರೇಷ್ಠರು ಕಡಿವಾಣಗಳಾಗಿರಲಿ. ಪ್ರಣವವೇ ಅದಕ್ಕೆ ಸಾರಥಿಯು. ಪ್ರಣವನಾದವೆಂಬುದೇ ರಥದ ಕ್ರೇಂಕಾರಧ್ವನಿಯು.

೬೩. ಷಡಂಗಗಳೇ ರಕ್ಷಕರಾಗಿರಲಿ. ವೇದಸಮೂಹವೇ ರಥದ ಒಳಭಾಗವಾಗಿರಲಿ." ಇಂತೆಂದು ಹೇಳಲು ಆ ಮಹಾದೇವನ ಅಪ್ಪಣೆಯಂತೆಯೇ ಸಜ್ಜುಗೊಳಿಸಿದ ರಥವನ್ನು ಗಣನಾಯಕರು ತಂದು ನಿಲ್ಲಿಸಿದರು.

೬೪. ಬಳಿಕ ಆ ದೇವಿಯನ್ನು ವಿಮಾನದಲ್ಲಿ ಕುಳ್ಳಿರಿಸಿ ದಿವ್ಯಸುಂದರಿಯೂ, ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವವಳೂ ಆದ ಆಕೆಯನ್ನು ಆಕಾಶಮಾರ್ಗದಲ್ಲಿಯೇ ಪಾರ್ಷದರೆಲ್ಲರೂ ಹಿಂಬಾಲಿಸಿ ಬರುತ್ತಿದ್ದರು.

೬೫. ತ್ರಿಲೋಚನನ ಪತ್ನಿಯಾದ ಆ ಸತೀದೇವಿಯು ಒಂದು ಕ್ಷಣದವರೆಗೂ

ಅವಿಶದ್ಯಜ್ಞವಾಟಂ ಚ ಚಕಿತಂ ರಕ್ಷಿವೀಕ್ಷಿತಾ ।
ಕೃತಮಂಗಲನೇಪಥ್ಯಾಂ ಪ್ರಸೂಂ ದೃಷ್ಟ್ವಾ ಕಿರೀಟಿನೀಂ ॥ ೬೬ ॥
ಸ ಭರ್ತೃಕಾಶ್ಚ ಭಗಿನೀರ್ನವಾಲಂಕೃತಿಶಾಲಿನೀಃ ।
ಸಾಶ್ಚರ್ಯಾಶ್ಚ ಸಗರ್ವಾಶ್ಚ ಸಾನಂದಾಶ್ಚ ಸಸಾಧ್ವಸಾಃ ॥ ೬೭ ॥
ಅಚಿಂತಿತಾ ತ್ವನಾಹೂತಾ ವಿಮಾನಾದ್ಧರವಲ್ಲಭಾ ।
ಕಥಮೇಷಾ ಪರಿಪ್ರಾಪ್ತಾ ಕ್ಷಣಮಿತ್ಥಂ ಪ್ರಪಶ್ಯತೀಃ ॥ ೬೮ ॥
ಅಸಂಭಾಷ್ಯಾಪಿ ತಾಃ ಸರ್ವಾ ಗತಾ ದಕ್ಷಾಂತಿಕಂ ಸತೀ ।
ಪಿತ್ರಾ ಪೃಷ್ಟಾ ತು ಮಾತ್ರಾಪಿ ಭದ್ರಂ ಜಾತಂ ತ್ವದಾಗಮೇ ॥ ೬೯ ॥

ಸತ್ಯುವಾಚ :—

ಯದಿ ಭದ್ರಂ ಜನೇತರ್ಮೇ ಸಮಾಗಮನತೋ ಭವೇತ್ ।
ಕಥಂ ನಾಹಂ ಸಮಾಹೂತಾ ಯಥೈತಾ ಮೇ ಸಹೋದರಾಃ ॥ ೭೦ ॥

---

ದಕ್ಷಪ್ರಜೇಶ್ವರನ ಯಜ್ಞಮಂಪಟವನ್ನೇ ಕುತೂಹಲದಿಂದ ನೋಡಿ ಆಕಾಶದಲ್ಲಿಯೇ ವಿಮಾನವನ್ನು ತ್ಯಜಿಸಿ ಭೂಮಿಗಿಳಿದು ಬಂದಳು.

೬೬. ಯಜ್ಞವಾಟವನ್ನು ಪ್ರವೇಶಿಸುತ್ತಿದ್ದ ಆಕೆಯನ್ನು ದ್ವಾರಪಾಲಕರು ಭಯಾಶ್ಚರ್ಯಗಳಿಂದ ಚಕಿತರಾಗಿ ನೋಡುತ್ತಿದ್ದರು. ಸತಿಯು ಮುಂದಕ್ಕೆ ಬರುತ್ತ ಮಂಗಳಸ್ನಾನವನ್ನು ಮಾಡಿ ಸರ್ವಾಲಂಕಾರಭೂಷಿತೆಯಾಗಿ ಕಿರೀಟವನ್ನು ಧರಿಸಿದ್ದ ತನ್ನ ತಾಯಿಯನ್ನು ನೋಡಿದಳು.

೬೭. ಗಂಡಂದಿರೊಡಗೂಡಿದ ತನ್ನ ಸಹೋದರಿಯರೆಲ್ಲರೂ ನೂತನಗಳಾದ ಆಭರಣಗಳಿಂದಲಂಕೃತರಾಗಿ ಓಡಾಡುತ್ತಿದ್ದರು. ಎಲ್ಲರೂ ಆಕೆಯನ್ನು ಕಂಡು ಆಶ್ಚರ್ಯವನ್ನೂ, ಗರ್ವವನ್ನೂ, ಆನಂದವನ್ನೂ, ಸಂಭ್ರಮವನ್ನೂ ವ್ಯಕ್ತಗೊಳಿಸುತ್ತಿದ್ದರು.

೬೮. "ಅಚಿಂತಿತವಾಗಿಯೂ, ಕರೆಯಲ್ಪಡದೆಯೂ ಈ ಮಹೇಶ್ವರಿಯು ಉತ್ತಮವಾದ ವಿಮಾನದಲ್ಲಿ ಇಲ್ಲಿಗೆ ಹೇಗೆ ಬಂದಳು ?" ಎಂಬುದಾಗಿ ಎಲ್ಲರೂ ನಿಮಿಷಮಾತ್ರದವರೆಗೂ ಅವಳನ್ನೇ ನೋಡುತ್ತಿದ್ದರು.

೬೯. ಅವರನ್ನೆಲ್ಲ ಮಾತನಾಡಿಸದೆಯೇ ಸತೀದೇವಿಯು ದಕ್ಷಪ್ರಜಾಪತಿಯ ಸಮೀಪವನ್ನು ಸೇರಿದಳು. ಅವಳನ್ನು ಕಂಡು ತಂದೆಯು "ನೀನು ಬಂದುದು ಬಹಳ ಒಳ್ಳೆಯದಾಯಿತು" ಎಂದು ಸ್ವಾಗತಿಸಿದನು.

೭೦. ಸತಿಯು ಹೇಳುತ್ತಾಳೆ:—ತಂದೆಯೆ ! ನನ್ನ ಸಮಾಗಮನದಿಂದ ಮಂಗಳವೇ ಉಂಟಾಗುವುದಾದರೆ ಈ ನನ್ನ ಸಹೋದರಿಯರೆಲ್ಲರೂ ಯಜ್ಞಕ್ಕೆ ಆಹ್ವಾನಿತರಾದಂತೆಯೇ ನಾನೂ ಏಕೆ ಆಹ್ವಾನಿತಳಾಗಲಿಲ್ಲ ?

ದಕ್ಷ ಉವಾಚ :—
ಅಯಿ ಕನ್ಯೇ ಮಹಾಧನ್ಯೇ ಹ್ಯನನ್ಯೇ ಸರ್ವಮಂಗಲೇ ।
ಅಯಂ ತೇ ನ ಮನಾಗ್ದೋಷೋ ದೋಷ ಏಷ ಮಮೈವ ಹಿ ॥ ೭೧ ॥
ತಾದೃಗ್ವಿಧಾಯ ಯತ್ತತ್ಸೈ ಮಯಾ ದತ್ತಾಜ್ಞಬುದ್ಧಿನಾ ।
ಯದಹಂ ತಂ ಸಮಾಜ್ಞಾಸ್ಯಮೀಶ್ವರೋಽಸೌ ನಿರೀಶ್ವರಃ ॥ ೭೨ ॥
ತದಾ ಕಥಮದಾಸ್ಯಂ ತ್ವಾಂ ತಸ್ಮೈ ಮಾಯಾಸ್ವರೂಪಿಣೇ ।
ಅಹಂ ಶಿವಾಖ್ಯಯಾ ತುಷ್ಟೋ ನ ಜಾನೇಽಶಿವರೂಪಿಣಂ ॥ ೭೩ ॥
ಪಿತಾಮಹೇನ ಬಹುಧಾ ವರ್ಣಿತೋಽಸೌ ಮಮಾಗ್ರತಃ ।
ಶಂಕರೋಽಯಮಯಂ ಶಂಭುರಸೌ ಪಶುಪತಿಃ ಶಿವಃ ॥ ೭೪ ॥
ಶ್ರೀಕಂಠೋಽಸೌ ಮಹೇಶೋಽಸೌ ಸರ್ವಜ್ಞೋಽಸೌ ವೃಷಧ್ವಜಃ ।
ಅಸ್ಮೈ ಕನ್ಯಾಂ ಪ್ರಯಚ್ಛ ತ್ವಂ ಮಹಾದೇವಾಯ ಧನ್ವಿನೇ ॥ ೭೫ ॥
ವಾಕ್ಯಾಚ್ಛತಧೃತೇಸ್ತಸ್ಮಾತ್ತಸ್ಮೈ ದತ್ತಾ ಮಹಾನಘೇ ।
ನ ಜಾನೇ ತಂ ವಿರೂಪಾಕ್ಷಮುಕ್ಷಗಂ ವಿಷಭಕ್ಷಿಣಂ ॥ ೭೬ ॥

---

೭೧. ದಕ್ಷನು ಹೇಳುತ್ತಾನೆ:—ಮಗಳೆ! ನೀನು ಮಹಾಧನ್ಯಳು. ಅದ್ವಿತೀಯಳು. ಸರ್ವಮಂಗಳೆಯು. ಇದರಲ್ಲಿ ನಿನ್ನ ದೋಷವು ಸ್ವಲ್ಪವೂ ಇಲ್ಲ. ಈ ದೋಷವೆಲ್ಲವೂ ನನ್ನದೇ ಆಗಿರುವುದು.

೭೨. ಮೂಢಬುದ್ಧಿಯಾದ ನಾನೇ ನಿನ್ನನ್ನು ಆ ವಿಧವಾದ ವರನಿಗೆ ಮದುವೆ ಮಾಡಿಕೊಟ್ಟೆನು. ಆಗ ಆತನನ್ನು ಸರ್ವೇಶ್ವರನೆಂದೂ ಆತನಿಗೆ ಮತ್ತೊಬ್ಬ ನಾಯಕನಿಲ್ಲವೆಂದೂ ತಿಳಿದುಕೊಂಡಿದ್ದೆನು.

೭೩. ಇಲ್ಲದಿದ್ದಲ್ಲಿ ನಿನ್ನನ್ನು ಅಂತಹ ಮಾಯಾಸ್ವರೂಪಿಯಾದವನಿಗೆ ಕೊಡಲು ಹೇಗೆ ಒಡಂಬಡುತ್ತಿದ್ದೆ? ಶಿವನೆಂಬ ಅವನ ಹೆಸರನ್ನು ಕೇಳಿ ಸಂತೋಷಗೊಂಡೆನೇ ಹೊರತು ಅವನು ಕೇವಲ ಅಮಂಗಳಸ್ವರೂಪನೆಂಬುದನ್ನು ತಿಳಿಯಲಿಲ್ಲ.

೭೪. ಬ್ರಹ್ಮದೇವನು ಅವನನ್ನು ನನ್ನ ಸಮ್ಮುಖದಲ್ಲಿ ಅನೇಕವಿಧವಾಗಿ ವರ್ಣಿಸಿದನು. "ಈತನು ಸುಖಪ್ರದನು. ಅನಾದಿನಿಧನನು. ಸಕಲ ಜೀವರಿಗೂ ಸ್ವಾಮಿಯು. ಮಂಗಳ ಸ್ವರೂಪವುಳ್ಳವನು.

೭೫. ವಿಷಪಾನವನ್ನು ಮಾಡಿದ ನೀಲಕಂಠನು ಈತನೇ. ಮಹೇಶ್ವರನೂ, ಸರ್ವಜ್ಞನೂ, ವೃಷಭವಾಹನನೂ ಈತನೇ ಆಗಿರುವನು. ಮಹಾದೇವನೂ ಪಿನಾಕಪಾಣಿಯೂ ಆದ ಈತನಿಗೇ ನೀನು ಮಗಳನ್ನು ಕೊಟ್ಟುಬಿಡು."

೭೬. ಎಲೌ ನಿಷ್ಕಳಂಕಳೆ! ಬ್ರಹ್ಮದೇವನ ಈ ವಾಕ್ಯದ ಗೌರವದಿಂದಲೇ ನಾನು ಅವನಿಗೆ ನಿನ್ನನ್ನು ಮದುವೆಮಾಡಿಕೊಟ್ಟೆನು. ಅವನು ವಿಕಾರನೇತ್ರನೆಂದೂ,

ಪಿತೃಕಾನನಸಂವಾಸಂ ಶೂಲಿನಂ ಚ ಕಪಾಲಿನಂ ।
ದ್ವಿಜಿಹ್ವಸಂಗಸುಭಗಂ ಜಲಾಧಾರಂ ಕಪರ್ದಿನಂ ॥ ೭೭ ॥
ಕಲಂಕೀಕೃತಮೌಲಿಂ ಚ ಧೂಲಿಧೂಸರಚರ್ಚಿತಂ ।
ಕ್ವಚಿತ್ಕೌಪೀನವಸನಂ ನಗ್ನಂ ವಾತೂಲವತ್ಕ್ವಚಿತ್ ॥ ೭೮ ॥
ಕ್ವಚಿಚ್ಚ ಚರ್ಮವಸನಂ ಕಿಂಚಿದ್ಭಿಕ್ಷಾಟನಪ್ರಿಯಂ ।
ಪಿಟಂಕಭೂತಾನುಚರಂ ಸ್ಥಾಣುಮುಗ್ರಂ ತಮೋಗುಣಂ ॥ ೭೯ ॥
ರುದ್ರಂ ರೌದ್ರಪರೀವಾರಂ ಮಹಾಕಾಲವಪುರ್ಧರಂ ।
ನೃಕರೋಟೀಪರಿಕರಂ ಜಾತಿಗೋತ್ರವಿವರ್ಜಿತಂ ॥ ೮೦ ॥
ನ ಸಮ್ಯಗ್ವೇತ್ತಿ ತಂ ಕಶ್ಚಿಜ್ಜ್ಞಾನಾನೋಽಪಿ ಪ್ರತಾರಿತಃ ।
ಕಿಂ ಬಹೂಕ್ತೇನ ತನಯೇ ಸಮಸ್ತನಯಶಾಲಿನಿ ॥ ೮೧ ॥

---

ಮಾಡಿಯತ್ತಿರುವವನೆಂದೂ, ವಿಷವನ್ನು ಭಕ್ಷಿಸುವವನೆಂದೂ ಆಗ ತಿಳಿಯಲಿಲ್ಲ.

೭೭. ಅವನು ಸ್ಮಶಾನಭೂಮಿಗಳಲ್ಲಿಯೇ ವಾಸಮಾಡುವವನು. ತ್ರಿಶೂಲ ಧಾರಿಯು. ತಲೆಯ ಕಪಾಲವನ್ನು ಹಿಡಿದು ತಿರುಗುವವನು. ಹಾವುಗಳ ಸಹವಾಸದಲ್ಲಿಯೇ ಅಭಿಲಾಷೆಯುಳ್ಳವನು. ಗಂಗೆಯ ಜಲವನ್ನು ತಲೆಯಲ್ಲಿ ಧರಿಸಿರುವನು. ತಲೆಗೂದಲುಗಳನ್ನು ಜಡೆಗಳನ್ನಾಗಿ ಮಾಡಿ ಕಿರೀಟದಂತೆ ತಾಳಿರುವನು.

೭೮. ಕಳಂಕಸಹಿತನಾದ ಚಂದ್ರನನ್ನು ಮೌಳಿಯಲ್ಲಿ ಸಿಕ್ಕಿಸಿರುವನು. ವಿಭೂತಿಯ ಲೇಪನವುಳ್ಳ ದೇಹವುಳ್ಳವನು. ಒಮ್ಮೆ ಕೌಪೀನವನ್ನು ಮಾತ್ರ ಧರಿಸಿರುವನು. ಒಮ್ಮೆ ಹುಚ್ಚನಂತೆ ದಿಗಂಬರನಾಗಿಯೇ ತಿರುಗುತ್ತಿರುವನು.

೭೯. ಕೆಲವು ವೇಳೆ ಆನೆಯ ಚರ್ಮವನ್ನು ಸುತ್ತಿಕೊಂಡಿರುವನು. ಕೆಲವು ಸಮಯಗಳಲ್ಲಿ ಭಿಕ್ಷಾಟನೆಯಲ್ಲಿಯೇ ಆಸಕ್ತನಾಗಿರುವನು. ವಿರೂಪರಾದ ಭೂತಗಣಗಳಿಂದ ಪರಿವಾರಿತನಾಗಿರುವನು. ಸ್ಥಾಣುವು ಮಹಾಕೋಪಿಷ್ಠನು. ಕೇವಲ ತಮೋಗುಣಪ್ರಚುರವಾದ ಸ್ವಭಾವವುಳ್ಳವನು.

೮೦. ರುದ್ರನು, ಅವನ ಪರಿವಾರದವರೂ ಅವನಂತೆಯೇ ಭಯಂಕರರಾಗಿ ರುವರು. ಅವನ ದೇಹವೂ ಬಹಳ ಕಪ್ಪುಬಣ್ಣದ್ದಾಗಿರುವುದು. ಅವನ ಆಭರಣ ಗಳೆಲ್ಲವೂ ಮನುಷ್ಯರ ಮೂಳೆಗಳಿಂದ ಮಾಡಲ್ಪಟ್ಟಿರುವುವು. ಇವನ ಜಾತಿ ಗೋತ್ರಾದಿಗಳನ್ನು ಯಾರೂ ತಿಳಿಯರು.

೮೧. ಅವನನ್ನು ಯಾವನೂ ಚೆನ್ನಾಗಿ ತಿಳಿದಿಲ್ಲ. ಅಲ್ಪಸ್ವಲ್ಪವಾಗಿ ತಿಳಿದಿರುವೆನೆಂಬ ಮಾನವನೂ ಸಹ ವಂಚಿತನಾಗುವನು. ಮಗಳೆ! ನೀನು ಸಕಲ ಶಾಸ್ತ್ರಗಳನ್ನೂ ನೀತಿಗಳನ್ನೂ ತಿಳಿದಿರುವೆ. ನಿನ್ನಲ್ಲಿ ಹೆಚ್ಚಾಗಿ ಹೇಳ ಬೇಕಾದುದೇನು?

**ಕ್ವ ಪಾಂಸುಲಪಟಚ್ಛನ್ನೋ ಮಹಾಶಂಖವಿಭೂಷಣಃ ।**
**ಪ್ರಬದ್ಧಸರ್ಪಕೇಯೂರಃ ಪ್ರಲಂಬಿತಜಟಾಸಟಃ ॥ ೮೨ ॥**
**ಡಮಡ್ಡಮರುಕವ್ಯಗ್ರಹಸ್ತಾಗ್ರಃ ಖಂಡಚಂದ್ರಭೃತ್ ।**
**ತಾಂಡವಾಡಂಬರರುಚಿಃ ಸರ್ವಾಮಂಗಲಚೇಷ್ಟಿತಃ ॥ ೮೩ ॥**
**ಮೃಡಾನಿ ಸ ಹರಃ ಕ್ವಾಯಮಧ್ವರೋ ಮಂಗಲಾಲಯಃ ।**
**ಅತ ಏವ ಸಮಾಹೂತಾ ನೇಹ ತ್ವಂ ಸರ್ವಮಂಗಲೇ ॥ ೮೪ ॥**
**ದುಕೂಲಾನ್ಯನುಕೂಲಾನಿ ರತ್ನಾಲಂಕೃತಯಃ ಶುಭಾಃ ।**
**ಪ್ರಾಗೇವ ಧಾರಿತಾಸ್ತೇಽತ್ರ ಪಶ್ಚಾಗತ್ಯ ಗೃಹಾಣ ಚ ॥ ೮೫ ॥**
**ಇಹ ಮಂಗಲದೇಶೇಷು ದೇವೇಂದ್ರೇಷು ಸ ಶೂಲಧೃಕ್ ।**
**ಕಥಮರ್ಹೋ ಭವೇಚ್ಚೇತಿ ಮಂಗಲೇ ವಿಷಮೇಕ್ಷಣಃ ॥ ೮೬ ॥**
**ಇತ್ಯಾಕರ್ಣ್ಯ ಸತೀ ಸಾಧ್ವೀ ಜನೇತುರುದಿತಂ ತದಾ ।**
**ಅತ್ಯಂತದೂನಹೃದಯಾ ವಕ್ತುಂ ಸಮುಪಚಕ್ರಮೇ ॥ ೮೭ ॥**

---

೮೨. ನಿನ್ನ ಪತಿಯು ಭಸ್ಮೋದ್ಧೂಳಿತವಾದ ವಸ್ತ್ರವನ್ನು ಧರಿಸಿದವನು. ಅಮಂಗಳಗಳಾದ ಎಲುಬುಗಳನ್ನೇ ಅಲಂಕರಿಸಿಕೊಂಡಿರುವನು. ವಿಷಮಯುಗಳಾದ ಸರ್ಪಗಳನ್ನೇ ಕಡಗಗಳಾಗಿ ಕಟ್ಟಿಕೊಂಡಿರುವನು. ಉದ್ದವಾಗಿ ಜೋಲಾಡುತ್ತಿರುವ ಜಡೆಗಳಿಂದ ಕೂಡಿದ ತಲೆಯುಳ್ಳವನು.

೮೩. ಡಮರುಕವನ್ನು ಬಾಜಿಸುವುದರಲ್ಲಿಯೇ ನಿರತವಾದ ಕೈಯುಳ್ಳವನು. ಮೌಳಿಯಲ್ಲಿ ಅಷ್ಟಮಿಯಾಚಂದ್ರನನ್ನು ಧರಿಸಿರುವನು. ಉನ್ಮತ್ತನಂತೆ ಕುಣಿಯುವ ಆಡಂಬರದಲ್ಲಿಯೇ ಆಸಕ್ತಿಯುಳ್ಳವನು. ಇಂತು ಅವನ ಸಕಲ ವ್ಯಾಪಾರಗಳೂ ಕೇವಲ ಅಮಂಗಳಗಳಿಂದ ಕೂಡಿದುವೇ ಆಗಿರುವುವು.

೮೪. ಮೃಡಾನಿಯೆ ! ಇಂತಹ ಅಮಂಗಳನಾದ ಶಿವನೆಲ್ಲಿ? ಸಕಲ ಮಂಗಳಗಳಿಗೂ ನಿವಾಸವಾದ ಈ ಯಜ್ಞಭೂಮಿಯೆಲ್ಲಿ? ಸರ್ವಮಂಗಳೆಯೆ ! ಈ ಕಾರಣ ಎಂದಲೇ ನಿನ್ನನ್ನು ಈ ಯಜ್ಞಕಾರ್ಯಕ್ಕೆ ನಾನು ಕರೆಯಲಿಲ್ಲ.

೮೫. ನೀನು ಹಿಂದೆ ಧರಿಸುತ್ತಿದ್ದ ಅನುಕೂಲಗಳಾದ ವಸ್ತ್ರಗಳೂ, ಮಂಗಳಕರಗಳಾದ ನವರತ್ನಗಳ ಆಭರಣಗಳೂ ನಿನ್ನವಾಗಿಯೇ ತೆಗೆದಿರಿಸಲ್ಪಟ್ಟಿರುವುವು. ಅಲ್ಲಿಗೆ ಹೋಗಿ ಅವುಗಳೆಲ್ಲವನ್ನೂ ತೆಗೆದು ಧರಿಸಿಕೊ.

೮೬. ಮಂಗಳೆಯೆ ! ಸರ್ವಮಂಗಳವೇಷಭೂಷಣಗಳಿಂದ ಅಲಂಕೃತರಾಗಿರುವ ದೇವತೆಗಳ ಸಭೆಯಲ್ಲಿ ತ್ರಿಶೂಲಪಾಣಿಯೂ ವಿಷಮನೇತ್ರನೂ ಆದ ನಿನ್ನ ಪತಿಯು ಹೇಗೆ ಮನ್ನಣೆ ಹೊಂದುವನೆಂಬುದನ್ನು ನಾನು ತಿಳಿಯಲಿಲ್ಲ.''

೮೭. ಇಂತೆಂದ ತಂದೆಯ ಮಾತುಗಳನ್ನು ಕೇಳಿ ಪತಿವ್ರತಾಶಿರೋಮಣಿಯಾದ ಸತೀದೇವಿಯು ಅತ್ಯಂತವಾಗಿ ಕಳವಳಗೊಂಡ ಮನಸ್ಸುಳ್ಳವಳಾಗಿ ಮಾತನಾಡಲುಪಕ್ರಮಿಸಿದಳು.

ಸತ್ಯುವಾಚ :—

ನಾಕರ್ಣಿತಂ ಮಯಾ ಕಿಂಚಿತ್ತ್ವಯಿ ಪ್ರಬ್ರುವತಿ ಪ್ರಭೋ ।
ಪದದ್ವಯಿಮಾಂ ಸಮಾಕರ್ಣ್ಯ ತಾಂ ಚ ತೇ ಕಥಯಾಮ್ಯಹಂ ॥ ೮೮ ॥
ನ ಸಂಯಗ್ವೇತ್ತಿ ತಂ ಕಶ್ಚಿಜ್ಜಾನಾನೋಽಪಿ ಪ್ರತಾರಿತಃ ।
ಏತತ್ಸಂಯುಕ್ತವಾಖ್ಯಾಯಿ ಕಸ್ತಂ ವೇತ್ತಿ ಸದಾಶಿವಂ ॥ ೮೯ ॥
ತ್ವಂ ತುಃ ಪ್ರತಾರಿತಃ ಪೂರ್ವಮಧುನಾಪಿ ಪ್ರತಾರಿತಃ ।
ಕೃತ್ವಾ ತೇನ ಚ ಸಂಬಂಧಮಸಂಬದ್ಧಪ್ರಲಾಪಭಾಕ್ ॥ ೯೦ ॥
ಯಾದೃಶಂ ವಕ್ಷಿ ತಂ ಶಂಭುಂ ತಾದೃಶಂ ಯದ್ಯಮುನ್ಯಥಾಃ ।
ಕುತೋ ಮಾಮದದಾಸ್ತಸ್ಮೈ ಯಂ ಚ ಕಶ್ಚನ ವೇದ ನ ॥ ೯೧ ॥
ಅಥವಾ ತೇನ ಸಂಬಂಧೇ ನ ಹೇತುರ್ಭವತೋ ಮತಿಃ ।
ತತ್ರ ಹೇತುರಭೂತ್ತಾತ ಮಮ ಪುಣ್ಯೈಕಗೌರವಂ ॥ ೯೨ ॥
ಅಥೋಕ್ತ್ವೈವಂ ಬಹುತರಂ ತ್ವಂ ಜನೇತಾಸ್ಯ ವರ್ಷ್ಮಣಃ ।
ಶ್ರುತಾನೇನ ಚ ದೇಹೇನ ಪತ್ಯುಃ ಪರಿವಿಗರ್ಹಣಾ ॥ ೯೩ ॥

---

೮೮. ಸತಿಯು ಹೇಳುತ್ತಾಳೆ:—ತಂದೆಯೆ! ನೀನು ಹೇಳಿದ ಎಲ್ಲಮಾತುಗಳನ್ನೂ ನಾನು ಕಿವಿಗೊಟ್ಟು ಕೇಳಲಿಲ್ಲ. ಆದರೆ ಎರಡು ಮಾತುಗಳನ್ನು ಮಾತ್ರ ಕೇಳಿದೆನು. ಅದನ್ನು ನಿನಗೆ ಹೇಳುವೆನು.

೮೯. "ಆತನನ್ನು ಯಾವನೂ ಚೆನ್ನಾಗಿ ಬಲ್ಲವನಿಲ್ಲ. ಬಲ್ಲೆನೆಂಬುವರೂ ಸಹ ಆತನ ಮಾಯೆಗೊಳಗಾಗಿರುವರು." ಈ ಮಾತುಗಳನ್ನು ನೀನು ಯಥಾರ್ಥವಾಗಿ ನುಡಿದೆ. ಸದಾಶಿವನನ್ನು ಯಾವನು ತಾನೆ ಯಥಾರ್ಥವಾಗಿ ಬಲ್ಲೆನೆಂದು ಹೇಳಬಹುದು?

೯೦. ನೀನು ಹಿಂದೆ ಮೋಸಹೋದ ವಿಷಯವಂತಿರಲಿ. ಈಗಲೂ ಸಹ ಆತನೊಡನೆ ಬಾಂಧವ್ಯವನ್ನು ಮಾಡಿಕೊಂಡ ಮೇಲೆಯೂ ಅಸಂಬದ್ಧಪ್ರಲಾಪಗಳನ್ನು ಮಾಡುತ್ತಿರುವ ನೀನು ಮೋಹಿತನಾಗಿಯೇ ಕಾಣುತ್ತಿರುವೆ.

೯೧. ನೀನು ವಿವರಿಸಿದಂತೆಯೇ ಮಹಾದೇವನು ಅಮಂಗಳಸ್ವರೂಪನೆಂದು ತಿಳಿದಿದ್ದೆಯಾದರೆ ಯಾರೂ ತಿಳಿಯದಂತಹ ವ್ಯವಹಾರವುಳ್ಳ ಆತನಿಗೆ ನನ್ನನ್ನೇಕೆ ಪಾಣಿಗ್ರಹಣ ಮಾಡಿಕೊಟ್ಟೆ?

೯೨. ಅಥವಾ ಆತನೊಡನೆ ಸಂಬಂಧವನ್ನು ಬೆಳೆಸಲು ನಿನ್ನ ಬುದ್ಧಿಯೂ ಕಾರಣವಾಗಿರಲಾರದು. ತಂದೆಯೆ! ಅದರಲ್ಲಿ ನನ್ನ ಪೂರ್ವಪುಣ್ಯದ ಹಿರಿಮೆಯೊಂದೇ ಕಾರಣವೆಂದು ತಿಳಿಯುವೆನು."

೯೩. ಇಂತೆಂದು ಆ ಸತಿಯು ಬಹುವಿಧವಾಗಿ ಹೇಳಿ ಕಡೆಯಲ್ಲಿ ಮಾತನಾಡಿದಳು. "ನೀನೇ ಈ ನನ್ನ ಶರೀರಕ್ಕೆ ಕಾರಣನಾಗಿರುವೆ. ಈ ದೇಹದಿಂದಲೇ ನಾನು ಗಂಡನ ಹಲವು ತೆರದ ನಿಂದೆಯ ನುಡಿಗಳನ್ನು ಕೇಳಿರುವೆನು.

ಪುರಶ್ಚರಣಮೇವೈತದ್ಯದಸ್ಯೈವ ವಿಸರ್ಜನಂ ।
ಸುಶ್ಲಾಘ್ಯಜನ್ಮಯಾ ತಾವತ್ತ್ಯಾಜಿತವ್ಯಂ ಸುಯೋಷಿತಾ ।
ಯಾವಜ್ಜೀವಿತನಾಥಸ್ಯಾಶ್ರವಣೀಯಾ ವಿಗರ್ಹಣಾ ॥ ೯೪ ॥
ಇತ್ಯುಕ್ತ್ವಾ ಕ್ರೋಧದೀಪ್ತಾಗ್ನೌ ಮಹಾದೇವಸ್ವರೂಪಿಣಿ ।
ಜುಹಾವ ದೇಹಸನಿಧಂ ಪ್ರಾಣರೋಧವಿಧಾನತಃ ॥ ೯೫ ॥
ತತೋ ವಿವರ್ಣತಾಂ ಪ್ರಾಪ್ತಾಃ ಸರ್ವೇ ದೇವಾಃ ಸವಾಸವಾಃ ।
ನಾಗ್ನಿರ್ಜಜ್ವಾಲ ಚ ತಥಾ ಯಥಾಜ್ಯಾಹುತಿಭಿಃ ಪುರಾ ॥ ೯೬ ॥
ಮಂತ್ರಾಃ ಕುಂಠಿತಸಾಮರ್ಥ್ಯಾಸ್ತತ್ಕ್ಷಣಾದೇವ ಚಾಭವನ್ ।
ಅಹೋ ಮಹಾನಿಷ್ಟತರಂ ಕಿಮೇತತ್ಸಮುಪಸ್ಥಿತಂ ॥ ೯೭ ॥
ಕೇಚಿದೂಚುರ್ದ್ವಿಜವರಾ ಮಿಥಃ ಪರಿಯಿಯಾಸವಃ ।
ಮಹಾಝಾಝಾನಿಲಃ ಪ್ರಾಪ್ತಃ ಪರ್ವತಾನೋಲನಕ್ಷಮಃ ॥ ೯೮ ॥
ಮಖಮಂಡಪಭೂಸ್ತೇನ ಕ್ಷಣತಃ ಸ್ಥಪುಟೀ ಕೃತಾ ।
ಅಕಾಂಡಂ ತಡಿದಾಪಾತೋ ಜಾತೋಽಭೂದ್ಭೂಪ್ರಕಂಪನಃ ॥ ೯೯ ॥

---

೯೪. ಇದಕ್ಕೆ ತಕ್ಕ ಪ್ರಾಯಶ್ಚಿತ್ತವೆಂದರೆ ಈ ದೇಹದ ವಿಸರ್ಜನೆಯೊಂದೇ ಆಗಿರುವುದು. ಉತ್ತಮ ಜನ್ಮದಲ್ಲಿ ಹುಟ್ಟಿದ ಸ್ತ್ರೀಯು ನಾಥನು ಬದುಕಿರುವಂತೆಯೇ ಆತನ ನಿಂದೆಯನ್ನು ಕೇಳುವುದಕ್ಕೆ ಮುಂಚೆಯೇ ಪ್ರಾಣಗಳನ್ನು ತ್ಯಜಿಸಬೇಕು.''

೯೫. ಇಂತೆಂದು ನುಡಿದು ಆ ಸತಿಯು ತನ್ನ ಕ್ರೋಧದಿಂದಲೇ ಬೆಂಕಿಯನ್ನುಂಟುಮಾಡಿ ಪ್ರಾಣನಿರೋಧವನ್ನು ಮಾಡಿಕೊಂಡು ಮಹಾದೇವಸ್ವರೂಪವಾದ ಅದರಲ್ಲಿ ತನ್ನ ದೇಹವೆಂಬ ಕಾಷ್ಠವನ್ನು ಆಹುತಿಯಾಗಿ ಅರ್ಪಿಸಿದಳು.

೯೬. ಆಗ ಮಹೇಂದ್ರನೇ ಮೊದಲಾದ ಸಕಲ ದೇವತೆಗಳೂ ವಿವರ್ಣವಾದ ಮುಖಗಳುಳ್ಳವರಾದರು. ಹೋಮಕುಂಡದ ಅಗ್ನಿಯೂ ಮುನ್ನಿನಂತೆ ತುಪ್ಪದ ಆಹುತಿಗಳಿಂದ ಪ್ರಜ್ವಲಿತನಾಗಲಿಲ್ಲ.

೯೭–೯೮. ಋತ್ವಿಜರು ಹೇಳುತ್ತಿದ್ದ ಮಂತ್ರಗಳೆಲ್ಲವೂ ಆ ಕ್ಷಣದಿಂದಲೇ ಸಾಮರ್ಥ್ಯಹೀನಗಳಾಗಿ ಪರಿಣಮಿಸಿದುವು. ''ಆಹಾ! ಯಜ್ಞಮಧ್ಯದಲ್ಲಿ ಎಂತಹ ಮಹತ್ತರವಾದ ಅನಿಷ್ಟವು ಸಂಭವಿಸಿತು?'' ಎಂಬುದಾಗಿ ಕೆಲವು ಬ್ರಾಹ್ಮಣೋತ್ತಮರು ತಮ್ಮತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತ ಓಡಿಹೋಗುವ ಯೋಚನೆಯನ್ನು ಮಾಡುತ್ತಿದ್ದರು. ಆ ಸಮಯದಲ್ಲಿಯೇ ಪರ್ವತಗಳನ್ನೂ ಅಲ್ಲಾಡಿಸುವ ಬಲವುಳ್ಳ ಭಯಂಕರವಾದ ಬಿರುಗಾಳಿಯೂ ಬೀಸತೊಡಗಿತು.

೯೯. ಆ ಗಾಳಿಯಿಂದ ನಿಮಿಷಮಾತ್ರದಲ್ಲಿಯೇ ಯಜ್ಞಮಂಟಪವೆಲ್ಲವೂ ಕಸದಿಂದ ತುಂಬಿಹೋಯಿತು. ಮೇಘಗಳಿಲ್ಲದೆಯೇ ಭಯಂಕರವಾದ ಸಿಡಿಲು ಬಡಿದು ಭೂಮಿಯು ನಡುಗಿತು.

ದಿವಶ್ಚೋಲ್ಕಾಃ ಪ್ರಪತಿತಾಃ ಪಿಶಾಚಾ ನೃತ್ಯಮಾದಧುಃ ।
ಅತಾಪಿ ಗೃಧ್ರೈರುಪರಿ ಗಗನೇ ಮಂಡಲಾಯಿತಂ ॥ ೧೦೦ ॥
ರವೇರಧಸ್ತಾದಶಿವಂ ಶಿವಾಸ್ತತ್ರಾಪ್ಯರಾರಿಷುಃ ।
ಮೇಘಾ ರುಧಿರವಿಪ್ರುಡ್ಭಿಸ್ತತ್ರ ವೃಷ್ಟಿಂ ವ್ಯಧುಃ ಪರಾಂ ॥ ೧೦೧ ॥
ನಿರ್ಘಾತನಿಃಸ್ವನೋ ಭೂಮೇರುತ್ಥಿತೋ ಹೃತ್ಪ್ರಕಂಪನಃ ।
ದಿವ್ಯಾಯುಧಾನಿ ಚ ಮಿಥೋ ಯುಧ್ಯಂತಿ ಸ್ಮಾತಿಭೀಷಣಂ ॥ ೧೦೨ ॥
ಹವನೀಯಂ ಮಹಾದ್ರವ್ಯಂ ದೂಷಿತಂ ಕ್ರೋಷ್ಟುಭಿಃ ಶ್ವಭಿಃ ।
ಚಕೋರಾಃ ಕರಟಾಸ್ತತ್ರ ವಿಚೇರುರ್ಯಜ್ಞಮಂಡಪೇ ॥ ೧೦೩ ॥
ಶ್ಮಶಾನವಾಟವಜ್ಜಾತೋ ಯಜ್ಞವಾಟಃ ಸ ವೈ ಕ್ಷಣಾತ್ ।
ಯದ್ಯತ್ರಾವಸ್ಥಿತಂ ಸರ್ವಂ ತತ್ತತ್ರೈವ ಪರಿಸ್ಥಿತಂ ॥ ೧೦೪ ॥
ಚಿತ್ರನ್ಯಸ್ತಮಿವಾಸೀಚ್ಚ ವಸ್ತುಜಾತಮಶೋಭಿ ಚ ।
ಸ್ಥಗಿತಾ ಇವ ಸಂವೃತ್ತಾಸ್ತತ್ರ ಚಕ್ರಧರಾದಯಃ ॥ ೧೦೫ ॥

---

೧೦೦. ಆಕಾಶದಿಂದ ನಕ್ಷತ್ರಗಳು ಮುರಿದುವು. ಯಜ್ಞಶಾಲೆಯಲ್ಲಿ ಪಿಶಾಚಗಳು ತಾಂಡವಗಳನ್ನು ಮಾಡಿದುವು. ರಣಹದ್ದುಗಳು ಅದರ ಮೇಲೆ ಆಕಾಶದಲ್ಲಿ ಅಪಸವ್ಯವಾಗಿ ಮಂಡಲಗಳನ್ನು ಮಾಡುತ್ತಿದ್ದುವು.

೧೦೧. ನರಿಗಳೂ ಸೂರ್ಯನ ಕೆಳಗೆ ನಿಂತು ಆತನನ್ನೇ ನೋಡುತ್ತ ಅಶುಭವನ್ನು ಸೂಚಿಸುತ್ತ ಕೂಗಿದುವು. ಮೇಘಗಳು ರಕ್ತಬಿಂದುಗಳಿಂದ ಕೂಡಿದ ಕ್ರೂರವಾದ ವೃಷ್ಟಿಯನ್ನು ಕರೆದುವು.

೧೦೨. ನೆರೆದಿದ್ದವರ ಹೃದಯಗಳನ್ನು ಭೇದಿಸುವಂತಹ ಸಿಡಿಲಿನ ಶಬ್ದವು ಭೂಮಿಯೊಳಗಿನಿಂದ ಹೊರಟಿತು. ಯೋಧರ ಉತ್ತಮಾಯುಧಗಳು ತಮ್ಮ ತಮ್ಮಲ್ಲಿಯೇ ಭೀಷಣವಾಗಿ ಹೋರಾಡತೊಡಗಿದುವು.

೧೦೩. ಹೋಮಕ್ಕೆ ಸಿದ್ಧಗೊಳಿಸಿದ್ದ ಉತ್ತಮವಾದ ಚರುದ್ರವ್ಯವನ್ನು ನರಿಗಳೂ ನಾಯಿಗಳೂ ಕೆಡಿಸಿದುವು. ಕಾಡಿನಲ್ಲಿ ಓಡಾಡುವಂತೆ ಚಕೋರಗಳೂ ಕಾಗೆಗಳೂ ಯಜ್ಞಮಂಟಪದಲ್ಲಿ ಸ್ವೇಚ್ಛೆಯಾಗಿ ಓಡಾಡುತ್ತಿದ್ದುವು.

೧೦೪. ಆ ಯಜ್ಞವಾಟವು ನಿಮಿಷಮಾತ್ರದಲ್ಲಿಯೇ ಸ್ಮಶಾನಭೂಮಿಯಾಗಿ ಕಾಣತೊಡಗಿತು. ಯಾವ ಯಾವ ಪದಾರ್ಥವು ಎಲ್ಲೆಲ್ಲಿದ್ದಿತೊ, ಅದು ಅಲ್ಲಲ್ಲಿಯೇ ಭೂಮಿಗೆ ಕಚ್ಚಿಕೊಂಡು ಚಿತ್ರಿತವಾದಂತೆ ನಿಂತಿತು.

೧೦೫. ಯಜ್ಞದ ಸಕಲ ಸಂಭಾರಗಳೂ ಕಾಂತಿಹೀನಗಳಾಗಿ ಚಿತ್ರಗಳಲ್ಲಿ ಬರೆದವುಗಳಂತಿದ್ದುವು. ಮಹಾವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ದಿಗ್ಭ್ರಮೆಗೊಂಡವರಂತೆ ನಿಶ್ಚೇಷ್ಟರಾಗಿ ನಿಂತುಬಿಟ್ಟರು.

**ದಕ್ಷೋಽಪಿ ವದನಂ ಮ್ಲಾನಿಮವಾಪ್ಯ ಸಪರಿಚ್ಛದಃ ।**
**ಪುನರ್ಯಥಾ ಕಥಂಚಿಚ್ಚ ಯಜ್ಞಂ ಪ್ರಾವರ್ತಯದ್ದ್ವಿಜಾಃ ॥ ೧೦೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಸತೀದೇಹವಿಸರ್ಜನವರ್ಣನಂ" ನಾಮಾಷ್ಟಾಶೀತಿತಮೋಽಧ್ಯಾಯಃ**

---

೧೦೬. ಅಯ್ಯಾ ಶೌನಕಾದಿ ಬ್ರಾಹ್ಮಣರಿರಾ ! ಇದೆಲ್ಲವನ್ನೂ ಕಂಡು ದಕ್ಷ ಪ್ರಜೇಶ್ವರನೂ ಸಹ ತನ್ನ ಪರಿವಾರದೊಡನೆ ಕಳೆಗುಂದಿದ ಮುಖವುಳ್ಳವನಾಗಿ ಪುನಃ ಹೇಗೆಹೇಗೆಯೋ ಪ್ರಯತ್ನಪಟ್ಟು ಯಜ್ಞಕಾರ್ಯವನ್ನು ಮುಂದುವರೆಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಸತೀದೇಹವಿಸರ್ಜನವರ್ಣನ"ವೆಂಬ ಎಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಾಶೀತಿತಮೋಽಧ್ಯಾಯಃ

### ದಕ್ಷೇಶ್ವರಪ್ರಾದುರ್ಭಾವವರ್ಣನಂ

ಸ್ಕಂದ ಉವಾಚ :—

ಪುನಃ ಸ ನಾರದೋಽಗಸ್ತ್ಯ ದೇವ್ಯಾಃ ಪ್ರಾಕ್ಸಮುಪಾಗತಃ ।
ತದ್ವೃತ್ತಾಂತಮಶೇಷಂ ಚ ಹರಾಯಾವೇದಿತುಂ ಯಯೌ ॥ ೧ ॥
ದೃಷ್ಟ್ವಾ ಸ ನಾರದಃ ಶಂಭುಂ ನಂದಿನಾ ಸಹ ಸಂಕಥಾಂ ।
ಕಾಂಚಿತ್ತರ್ಜನಿವಿನ್ಯಾಸಪೂರ್ವಂ ಕುರ್ವಂತಮಾನಮತ್ ॥ ೨ ॥
ಉಪಾವಿಶಚ್ಚ ಶೈಲಾದಿ ವಿಸೃಷ್ಟಾಸನಮುತ್ತಮಂ ।
ವೈಲಕ್ಷ್ಯಂ ನಾಟಯನ್ಕಿಂಚಿತ್ಕ್ಷಣಂ ಜೋಷಂ ಸಮಾಸ್ಥಿತಃ ॥ ೩ ॥
ಆಕಾರೇಣೈವ ಸರ್ವಜ್ಞಸ್ತದ್ವೃತ್ತಾಂತಂ ವಿವೇದ ಹ ।
ಅವಾದೀಚ್ಚ ಮುನಿಂ ಶಂಭುಃ ಕುತೋ ಮೌನಾವಲಂಬನಂ ॥ ೪ ॥
ಶರೀರಿಣಾಂ ಸ್ಥಿತಿರಿಯಮುತ್ಪತ್ತಿಪ್ರಲಯಾತ್ಮಿಕಾ ।
ದಿವ್ಯಾನ್ಯಪಿ ಶರೀರಾಣಿ ಕಾಲಾದ್ಯಾಂತ್ಯೇವಮೇವ ಹಿ ॥ ೫ ॥

---

## ಕನ್ನಡದ ಅನುವಾದ

### ದಕ್ಷೇಶ್ವರಪ್ರಾದುರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ನಾರದನೂ ಸತೀದೇವಿಗೆ ಮೊದಲೇ ದಕ್ಷನ ಯಜ್ಞಮಂಟಪಕ್ಕೆ ಬಂದಿದ್ದವನು ಅಲ್ಲಿ ನಡೆದ ಸಮಸ್ತ ವೃತ್ತಾಂತವನ್ನೂ ಪರಮೇಶ್ವರನಿಗೆ ತಿಳಿಸಲು ಕೈಲಾಸಕ್ಕೆ ಹೊರಟನು.

೨. ಆಗ ಮಹೇಶ್ವರನು ನಂದಿಯೊಡನೆ ಕೂಡಿ ಮುಂಬೆರಳಿನಿಂದ ಏನನ್ನೋ ತೋರಿಸುತ್ತ ಮಾತನಾಡುತ್ತಿದ್ದನು. ನಾರದನು ಅದನ್ನು ಕಂಡು ಆತನಿಗೆ ನಮಸ್ಕಾರವನ್ನು ಮಾಡಿದನು.

೩. ನಾರದನನ್ನು ಕಂಡು ನಂದಿಯು ತನ್ನ ಉತ್ತಮಾಸನದಿಂದ ಎದ್ದನು. ಮುಖದಲ್ಲಿ ಸ್ವಲ್ಪ ವಿಲಕ್ಷಣಭಾವವನ್ನು ತೋರಿಸುತ್ತ ನಾರದಮುನಿಯು ಆ ಆಸನದಲ್ಲಿಯೇ ಕುಳಿತು ಒಂದು ಕ್ಷಣಮಾತ್ರದವರೆಗೂ ಮೌನವನ್ನು ತಾಳಿದನು.

೪. ಆತನ ಅಂಗಚೇಷ್ಟೆಗಳಿಂದಲೇ ಪರಮಶಿವನು ಸಕಲ ವೃತ್ತಾಂತವನ್ನೂ ತಿಳಿದುಕೊಂಡನು. ಆ ಮುನಿವರ್ಯನನ್ನು ಕುರಿತು ಸರ್ವಜ್ಞನಾದ ಶಿವನು ಹೇಳತೊಡಗಿದನು. "ನೀನೇಕೆ ಮೌನವನ್ನವಲಂಬಿಸಿರುವೆ?

೫. ಉತ್ಪತ್ತಿನಾಶಗಳಿಂದೊಡಗೂಡಿರುವುದೇ ದೇಹಗಳ ಧರ್ಮವಾಗಿರುವುದು. ದಿವ್ಯ ಶರೀರಗಳೇ ಆದರೂ ಕಾಲದ ಪರಿಣಾಮವಾಗಿ ಹೀಗೆಯೇ ನಾಶವನ್ನು ಹೊಂದುತ್ತಿರುವುವಲ್ಲವೆ.

ದೃಶ್ಯಂ ವಿನಶ್ವರಂ ಸರ್ವಂ ವಿಶೇಷಾದ್ಯದನೀಶ್ವರಂ ।
ತತೋಽತ್ರ ಚಿತ್ರಂ ಕಿಂ ಬ್ರಹ್ಮನ್ಕಂ ಕಾಲಃ ಕಾಲಯೇನ್ನ ವೈ ॥ ೬ ॥
ಅಭಾವಿನೋ ಹಿ ಭಾವಸ್ಯ ಭಾವಃ ಕ್ವಾಪಿ ನ ಸಂಭವೇತ್ ।
ಭಾವಿನೋಽಪಿ ಹಿ ನಾಭಾವಸ್ತತೋ ಮುಹ್ಯಂತಿ ನೋ ಬುಧಾಃ ॥ ೭ ॥
ಶಂಭೂದೀರಿತಮಾಕರ್ಣ್ಯ ಸ ಇತ್ಥಂ ಮುನಿಪುಂಗವಃ ।
ಪ್ರೋಕ್ತವಾನ್ಸತ್ಯಮೇವೈತದ್ಯದ್ದೇವೇನ ಪ್ರಭಾಷಿತಂ ॥ ೮ ॥
ಅವಶ್ಯಮೇವ ಯದ್ಭಾವ್ಯಂ ತದ್ಭೂತಂ ನಾತ್ರ ಸಂಶಯಃ ।
ಪರಂ ಮಾಂ ಬಾಧತೇಽತ್ಯಂತಂ ಚಿಂತೈಕಾ ಚಿತ್ತಮಾಥಿನೀ ॥ ೯ ॥
ನಾಪಚೀಯೇತ ತೇ ಕಿಂಚಿನ್ನೋಪಚೀಯೇತ ತತ್ತ್ವತಃ ।
ಅವ್ಯಯತ್ವಾಚ್ಚ ಪೂರ್ಣತ್ವಾದ್ಧಾನಿವೃದ್ಧೀ ಕುತಸ್ತ್ವಯಿ ॥ ೧೦ ॥
ಅಹೋ ವರಾಕಃ ಸಂಸಾರಃ ಕ್ವ ಭವಿಷ್ಯತ್ಯನೀಶ್ವರಃ ।
ಆರಭ್ಯಾದ್ಯದಿನಂ ನ ತ್ವಾಮರ್ಚಯಿಷ್ಯಂತಿ ಕೇಽಪಿ ಯತ್ ॥ ೧೧ ॥

---

೬. ಯಾವುದು ದೃಶ್ಯವೊ ಅದೆಲ್ಲವೂ ಪ್ರಾಯಿಕವಾಗಿ ಪರತಂತ್ರಕ್ಕೊಳಪಟ್ಟಿರುವುದು. ಆದುದರಿಂದಲೇ ನಶ್ವರವಾಗಿರುವುದು. ಬ್ರಾಹ್ಮಣೋತ್ತಮನೆ! ಆದುದರಿಂದ ಈಗ ನಡೆದಿರುವುದರಲ್ಲಿ ವಿಚಿತ್ರವೇನು? ಯಾರನ್ನು ತಾನೆ ಕಾಲವು ಕೊನೆಗಾಣಿಸುವುದಿಲ್ಲ?

೭. ಅಸದಾತ್ಮಕವಾದ ಪದಾರ್ಥಕ್ಕೆ ಎಂದಿಗೂ ಸತ್ತ್ವವುಂಟಾಗಲಾರದು. ಸತ್ಪದಾರ್ಥಕ್ಕೆ ಅಭಾವವೂ ಸಂಭವಿಸುವುದಿಲ್ಲ. ಈ ನಿಶ್ಚಯಜ್ಞಾನವನ್ನು ಪಡೆದ ಬುಧರು ಎಂದಿಗೂ ಮೋಹಗೊಳ್ಳುವುದಿಲ್ಲ.''

೮. ಇಂತೆಂದ ಮಹಾದೇವನ ಮಾತನ್ನು ಕೇಳಿ ಮುನಿಶ್ರೇಷ್ಠನಾದ ನಾರದನು ಹೇಳತೊಡಗಿದನು. ''ದೇವೇಶ್ವರನಾದ ನೀನು ಹೇಳಿದ ಸಂದೇಶವು ಯಥಾರ್ಥವಾಗಿಯೇ ಇರುವುದು ಸಂದೇಹವಿಲ್ಲ.

೯. ಯಾವುದು ಭವಿತವ್ಯತೆಯಲ್ಲಿದ್ದಿತೊ, ಅದೇ ನಡೆದುಹೋಯಿತು, ಸಂಶಯವಿಲ್ಲ. ಆದರೆ ಒಂದು ಚಿಂತೆಯು ಮಾತ್ರ ನನ್ನ ಮನಸ್ಸನ್ನು ಅಲ್ಲಕಲ್ಲೋಲಗೊಳಿಸಿ ನನ್ನನ್ನು ಬಾಧಿಸುತ್ತಿರುವುದು.

೧೦. ಶಶ್ವದೇಕಪ್ರಕಾರನಾದ ನಿನಗೆ ಯಾವುದರಿಂದಲೂ ತತ್ತ್ವದ ದೃಷ್ಟಿಯಿಂದ ಅಪಕರ್ಷವಾಗುವುದಿಲ್ಲ. ಉತ್ಕರ್ಷವೂ ಆಗಲಾರದು. ನಾಶರಹಿತನೂ ಪರಿಪೂರ್ಣನೂ ಆದ ನಿನಗೆ ಹಾನಿವೃದ್ಧಿಗಳೆಲ್ಲಿಯವು?

೧೧. ಆದರೆ ಆ ದಿವಸ ಮೊದಲುಗೊಂಡು ಯಾವ ಮನುಷ್ಯನೂ ನಿನ್ನ ಪೂಜೆಯನ್ನು ಮಾಡುವುದಿಲ್ಲ. ಸ್ವಭಾವದಿಂದಲೇ ನೀಚವೂ ಸ್ವಾತಂತ್ರ್ಯರಹಿತವೂ ಆದ ಸಂಸಾರವು ಮತ್ತಷ್ಟು ದುಃಖಪ್ರದವಾಗಿ ಕೇವಲ ನಿಷ್ಪ್ರಯೋಜನವೆನಿಸುವುದು.

ಯತಃ ಪ್ರಜಾಪತಿರ್ದಕ್ಷೋ ನ ತ್ವಾಮಾಹೂತವಾನ್ಕ್ರತೌ ।
ತೇನಾದ್ಯ ರೀಢಿತಂ ದೃಷ್ಟ್ವಾ ದೇವರ್ಷಿಮನುಜಾ ಅಪಿ ॥ ೧೨ ॥
ತವ ರೀಢಾಂ ಕರಿಷ್ಯಂತಿ ಕಿಮೈಶ್ವರ್ಯೇಣ ರೀಢಿನಾಂ ।
ಪ್ರಾಪ್ತಾವಹೇಳನಾ ಲೋಕೇ ಜಿತಕಾಲಭಯಾ ಅಪಿ ।
ಅಷ್ಟೈಶ್ವರ್ಯೇಣ ಸಂಪನ್ನಾಃ ಪ್ರತಿಷ್ಠಾಭಾಜನಂ ಕಿಮು ॥ ೧೩ ॥
ಮಹೀಯಸಾಯುಷಾ ತೇಷಾಂ ವಸುಭಿರ್ಭೂರಿಭಿಶ್ಚ ಕಿಂ ।
ಯೇಽಭಿಮಾನಧನಾ ನೇಹ ಲಬ್ಧರೀಢಾಃ ಪದೇ ಪದೇ ॥ ೧೪ ॥
ಅಚೇತನಾಶ್ಚ ಸಾವಜ್ಞಾ ಜೀವಂತೋಽಪಿ ನ ಕೀರ್ತಯೇ ।
ಅಭಿಮಾನಧನಾ ಧನ್ಯಾ ಸರ್ವಯೋಷಿತ್ಸು ಸಾ ಸತೀ ॥ ೧೫ ॥
ಯಾ ತ್ವದ್ವಿನಿಂದಾಶ್ರವಣಾತ್ತೃಣೀಚಕ್ರೇ ಸ್ವಜೀವಿತಂ ।
ಇತ್ಯಾಕರ್ಣ್ಯ ಮಹಾಕಾಲಃ ಸಂಯಕ್ ಜ್ಞಾತ್ವಾ ಸತೀವ್ಯಯಂ ॥ ೧೬ ॥
ಸತ್ಯಂ ಮುನೇ ಸತೀದೇವೀ ತೃಣೀಚಕ್ರೇ ಸ್ವಜೀವಿತಂ ।
ಜೋಷಂ ಸ್ಥಿತೇ ಮುನೌ ತತ್ರ ತನ್ಮಹಾಕಾಲಸಾಧ್ವಸಾತ್ ॥ ೧೭ ॥

---

೧೨–೧೩. ಪ್ರಜೇಶ್ವರನಾದ ದಕ್ಷನೇ ಯಜ್ಞಕ್ಕೆ ನಿನ್ನನ್ನು ಕರೆಯಲಿಲ್ಲವೆಂಬ ಸಂಗತಿಯು ಪ್ರಖ್ಯಾತವಾಗಲು ನಿನ್ನ ಅವಮಾನವನ್ನು ಕಂಡು ದೇವತೆಗಳೂ, ಮಹರ್ಷಿಗಳೂ, ಮನುಷ್ಯರೂ ಸಹ ನಿನ್ನಲ್ಲಿ ಉದಾಸೀನಭಾವವನ್ನು ತಾಳುವರು. ಅವಮಾನಿತರಾದವರಿಗೆ ಎಷ್ಟು ಐಶ್ವರ್ಯವಿದ್ದರೇನು? ಯಮಭಯವನ್ನು ಜಯಿಸಿದವರೂ ಅಷ್ಟೈಶ್ವರ್ಯಸಂಪನ್ನರಾದವರೂ ಆಗಿದ್ದರೂ ಲೋಕದಲ್ಲಿ ಅವಮಾನವನ್ನು ಪಡೆದರೆ ಅವರೆಂದಿಗಾದರೂ ಗೌರವಕ್ಕೆ ಭಾಜನರಾಗುವುದುಂಟೆ?

೧೪. ಅಡಿಗಡಿಗೂ ಅವಮಾನಗಳನ್ನು ಸಹಿಸಿಕೊಳ್ಳುತ್ತ ಅಭಿಮಾನವೆಂಬ ಧನವನ್ನು ಕಳೆದುಕೊಂಡಿರುವವರು ಸಂಪಾದಿಸಿದ ಅಪಾರವಾದ ಆಯುಷ್ಯದಿಂದಾಗಲಿ ಅನಂತವಾದ ಐಶ್ವರ್ಯದಿಂದಾಗಲಿ ಪ್ರಯೋಜನವೇನು?

೧೫. ಯಾರು ಜೀವಂತರಾಗಿದ್ದರೂ ಕೀರ್ತಿಯನ್ನು ಪಡೆಯದೆ ಎಲ್ಲರ ಅವಜ್ಞೆಗೆ ಪಾತ್ರರಾಗಿರುವರೊ, ಅವರನ್ನು ಅಚೇತನಪದಾರ್ಥಗಳೆಂದೇ ಕರೆಯಬಹುದು. ಸಕಲ ಸ್ತ್ರೀಯರಲ್ಲಿಯೂ ಆ ಸತೀದೇವಿಯೇ ಅಭಿಮಾನಸಹಿತಳಾಗಿದ್ದುದರಿಂದ ಧನ್ಯಳು. ಅವಳೇ ಸರ್ವೋತ್ತಮಳು.

೧೬. ನಿನ್ನ ನಿಂದೆಯನ್ನು ಕೇಳಿದ ಮಾತ್ರದಿಂದಲೇ ಆಕೆಯು ತನ್ನ ಪ್ರಾಣವನ್ನೇ ತೃಣಪ್ರಾಯವಾಗಿ ಎಣಿಸಿದಳಲ್ಲವೆ.'' ಈ ಮಾತುಗಳನ್ನು ಕೇಳಿ ಮಹಾದೇವನು ಸತಿಯು ದೇಹವನ್ನು ತ್ಯಜಿಸಿದಳೆಂಬುದನ್ನು ನಿಶ್ಚಯವಾಗಿ ತಿಳಿದುಕೊಂಡನು.

೧೭–೧೮. ಆತನು, ''ಅಯ್ಯಾ ಮುನಿವರ್ಯನೆ! ನಿಜವು. ಸತೀದೇವಿಯು

**ರುದ್ರಸ್ಯಾತೀವ ರುದ್ರೋऽಭೂದ್ಬಹುಕೋಪಾಗ್ನಿದೀಪಿತಃ ।**
**ತತಸ್ತತ್ಕೋಪಜಾದ್ವಹ್ನೇರಾವಿರಾಸೀನ್ಮಹಾದ್ಯುತಿಃ ॥ ೧೮ ॥**
**ಪ್ರತ್ಯಕ್ಷಃ ಪ್ರತಿಮಾಕಾರಃ ಕಾಲಮೃತ್ಯುಪ್ರಕಂಪನಃ ।**
**ಉವಾಚ ಚ ಪ್ರಣಮ್ಯೇಶಂ ಭುಶುಂಡೀಂ ಮಹತೀಂ ದಧತ್ ॥ ೧೯ ॥**
**ಆಜ್ಞಾಂ ದೇಹಿ ಪಿತಃ ಕಿಂ ತೇ ಕರವೈ ದಾಸ್ಯಮುತ್ತಮಂ ।**
**ಬ್ರಹ್ಮಾಂಡಮೇಕಕವಲಂ ಕರವಾಣಿ ತ್ವದಾಜ್ಞಯಾ ॥ ೨೦ ॥**
**ಪಿಬಾಮಿ ಚಾರ್ಣವಾನ್ಸಪ್ತಾಪ್ಯೇಕೇನ ಚುಲುಕೇನ ವೈ ।**
**ರಸಾತಲಂ ವಾ ಪಾತಾಲಂ ಪಾತಾಲಂ ವಾ ರಸಾತಲಂ ॥ ೨೧ ॥**
**ತ್ವದಾಜ್ಞಯಾ ನಯಾಮೀಶ ವಿನಿಮಯ್ಯ ಸ್ವಹೇಲಯಾ ।**
**ಸಲೋಕಪಾಲಮಿಂದ್ರಂ ವಾ ಧೃತ್ವಾ ಕೇಶೈರಿಹಾನಯೇ ॥ ೨೨ ॥**
**ಅಪಿ ವೈಕುಂಠನಾಥಶ್ಚೇತ್ತತ್ಸಾಹಾಯ್ಯಂ ಕರಿಷ್ಯತಿ ।**
**ತದಾ ತಂ ಕುಂಠಿತಾಸ್ತ್ರಂ ಚ ಕರಿಷ್ಯಾಮಿ ತ್ವದಾಜ್ಞಯಾ ॥ ೨೩ ॥**

---

ತನ್ನ ಪ್ರಾಣವನ್ನು ತೃಣಸಮಾನವೆಂದೆಣಿಸಿದಳು'' ಎಂದನು. ಮುನಿಪುಂಗವನೂ ಮರುಮಾತಾಡದೆ ಕುಳಿತಿದ್ದನು. ಆಗ ಮಹಾದೇವನು ಮಹಾಯಜ್ಞಕಾಲದಲ್ಲಿ ನಡೆದ ಈ ವೈಪರೀತ್ಯವನ್ನು ಸ್ಮರಿಸಿಕೊಂಡು ಅಪಾರವಾದ ಕೋಪವೆಂಬ ಬೆಂಕಿಯಿಂದ ಪ್ರಜ್ವಲಿಸುತ್ತ ಭಯಂಕರರೂಪವನ್ನು ತಾಳಿದನು. ಆಗ ಆತನ ಕೋಪದಿಂದುಂಟಾದ ಬೆಂಕಿಯಲ್ಲಿ ಮಹಾತೇಜೋವಂತನಾದ ಪುರುಷನೊಬ್ಬನುದಯಿಸಿದನು.

೧೯. ಆತನು ಪರ್ವತಾಕಾರನಾಗಿ ಕಾಲಮೃತ್ಯುದೇವತೆಯನ್ನೂ ನಡುಗಿಸುವವನಂತೆ ತೋರುತ್ತಿದ್ದನು. ಮಹತ್ತರವಾದ ಭುಶುಂಡಿಯೆಂಬ ಆಯುಧವನ್ನು ಹಿಡಿದು ಆತನು ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ ಇಂತೆಂದನು.

೨೦. ತಂದೆಯೆ! ನನಗೆ ಅಪ್ಪಣೆಯನ್ನು ಕೊಡು. ನಿನ್ನ ದಾಸ್ಯವನ್ನು ಉತ್ತಮರೀತಿಯಿಂದ ಯಾವ ಕೆಲಸದಲ್ಲಿ ಮಾಡಲಿ? ನಿನ್ನ ಅನುಜ್ಞೆಯಾದ ಸಕಲ ಬ್ರಹ್ಮಾಂಡವನ್ನೂ ಒಂದೇ ಕಬಳವನ್ನಾಗಿ ನುಂಗಿಬಿಡುವೆನು.

೨೧–೨೨. ಏಳು ಸಮುದ್ರಗಳನ್ನೂ ಒಂದೇ ಆಪೋಶನದಲ್ಲಿ ಧರಿಸಿ ಮುಗಿಸಿಬಿಡುತ್ತೇನೆ. ರಸಾತಲವನ್ನು ಪಾತಾಲಕ್ಕೂ, ಪಾತಾಲವನ್ನು ರಸಾತಲ ಲೋಕಕ್ಕೂ ಅನಾಯಾಸವಾಗಿಯೇ ನಿನ್ನ ಅಪ್ಪಣೆಯ ಬಲದಿಂದ ವಿನಿಮಯ ಮಾಡುವೆನು. ಸಮಸ್ತ ಲೋಕಪಾಲಕರೊಡಗೂಡಿದ ಮಹೇಂದ್ರನನ್ನೆ ಬೇಕಾದರೂ ಕೂದಲನ್ನು ಹಿಡಿದು ನೀನಿರುವಲ್ಲಿಗೆ ಸೆಳೆದು ತರುವೆನು.

೨೩. ವೈಕುಂಠನಿಲಯನಾದ ಮಹಾವಿಷ್ಣುವೇ ಆತನಿಗೆ ಸಹಾಯವನ್ನು ಮಾಡಲು ಪ್ರಾಪ್ತನಾದರೂ ನಿನ್ನ ಅನುಜ್ಞೆಯಿದ್ದರೆ ಆತನನ್ನೂ ಶಸ್ತ್ರರಹಿತನನ್ನಾಗಿ ಮಾಡಿಬಿಡುವೆನು.

ದನುಜಾ ದಿತಿಜಾಃ ಕೇ ವೈ ವರಾಕಾ ರಣದುರ್ಬಲಾಃ ।
ತೇಷು ಚೋತ್ಕಟತಾಂ ಕೋಽಪಿ ಧತ್ತೇ ತಂ ಪ್ರಣಿಹನ್ಮ್ಯಹಂ ॥ ೨೪ ॥
ಕಾಲಂ ಬಧ್ನಾಮಿ ವಾ ಸಂಖ್ಯೇ ಮೃತ್ಯೋರ್ವಾ ಮೃತ್ಯುಮರ್ಥಯೇ ।
ಸ್ಥಾವರೇಷು ಚರೇಷ್ವತ್ರ ಮಯಿ ಕ್ರುದ್ಧೇ ರಣಾಂಗಣೇ ॥ ೨೫ ॥
ತ್ವದ್ಬಲೇನ ಮಹೇಶಾನ ನ ಕೋಽಪಿ ಸ್ಥೈರ್ಯಮೇಷ್ಯತಿ ।
ಮಮ ಪಾದತಲಾಘಾತಾದೇತದ್ವೈ ಕ್ಷೋಣಿಮಂಡಲಂ ॥ ೨೬ ॥
ಕದಲೀದಲವದ್ವಾತಾದ್ವೇಪತೇ ಸರಸಾತಲಂ ।
ಚೂರ್ಣೀಕರೋಮಿ ದೋರ್ದಂಡಘಾತಾಚ್ಚೈತಾನ್ಕುಲಾಚಲಾನ್ ॥ ೨೭ ॥
ಕಿಂ ಬಹೂಕ್ತೇನ ದೇಹ್ಯಾಜ್ಞಾಂ ಮಮಾಸಾಧ್ಯಂ ನ ಕಿಂಚನ ।
ತ್ವತ್ಪಾದಬಲಮಾಸಾದ್ಯ ಕೃತಂ ವಿದ್ಧ್ಯದ್ಯ ಚಿಂತಿತಂ ॥ ೨೮ ॥
ಇತಿ ಪ್ರತಿಜ್ಞಾಂ ತಸ್ಯೇಶಃ ಶ್ರುತ್ವಾ ಕೃತಮಮನ್ಯತ ।
ಕೃತಕೃತ್ಯಮಿವಾತ್ಯಂತಂ ತಂ ಮುದಾ ಪ್ರತ್ಯುವಾಚ ಚ ॥ ೨೯ ॥

---

೨೪. ಯುದ್ಧದಲ್ಲಿ ದುರ್ಬಲರಾದ ದನುಜರು, ರಾಕ್ಷಸರೇ ಮುಂತಾದ ನೀಚರಲ್ಲಿ ಯಾವನಾದರೂ ಉದ್ಧಟತನವನ್ನು ತೋರಿಸಿದ್ದರೆ ಅವನನ್ನು ಬಲಾತ್ಕಾರದಿಂದ ನಾಶಮಾಡಿ ಬರುತ್ತೇನೆ.

೨೫–೨೭. ಕಾಲನೊಡನೆ ಸಂಗ್ರಾಮವನ್ನುಮಾಡಿ ಅವನನ್ನು ಕಟ್ಟಿಹಾಕುವೆನು. ಮೃತ್ಯುದೇವತೆಗೂ ಮೃತ್ಯುವನ್ನು ತೋರಿಸಿಕೊಡುವೆನು. ಮಹೇಶ್ವರಾ! ನಿನ್ನ ಬಲವೊಂದಿದ್ದರೆ ಕೋಪಗೊಂಡ ನನ್ನ ಮುಂದೆ ಸ್ಥಾವರಜಂಗಮಗಳಲ್ಲಿ ಯಾವುದೂ ಯುದ್ಧರಂಗದಲ್ಲಿ ಸ್ಥಿರವಾಗಿ ನಿಲ್ಲಲಾರದು. ನನ್ನ ಪಾದತಲಗಳ ಆಘಾತದಿಂದ ರಸಾತಲದವರೆಗಿನ ಸಕಲ ಬ್ರಹ್ಮಾಂಡಮಂಡಲವೂ ಬಿರುಗಾಳಿಗೆ ಸಿಕ್ಕಿದ ಬಾಳೆಯೆಲೆಯಂತೆ ನಡುಗುವುದು. ದೀರ್ಘಗಳಾದ ನನ್ನ ಬಾಹುಗಳ ಹೊಡೆತದಿಂದ ಏಳು ಕುಲಪರ್ವತಗಳನ್ನೂ ನಿಮಿಷಮಾತ್ರದಲ್ಲಿ ಚೂರ್ಣಗೊಳಿಸುವೆನು.

೨೮. ಅನೇಕ ಮಾತುಗಳಿಂದೇನು? ನನಗೆ ಅಪ್ಪಣೆಯನ್ನು ಮಾತ್ರ ಕೊಡು. ನಿನ್ನ ಪಾದವಂದನೆಯ ಬಲವನ್ನಾಶ್ರಯಿಸಿರುವ ನನಗೆ ಅಸಾಧ್ಯವಾದ ಕೆಲಸವೇ ಇಲ್ಲವು. ಇಂದು ನೀನು ಚಿಂತಿಸಿದ ಕಾರ್ಯವು ನೆರವೇರಿತೆಂದೇ ತಿಳಿ.''

೨೯. ಇಂತೆಂದ ಅವನ ಪ್ರತಿಜ್ಞೆಯನ್ನು ಕೇಳಿ ಮಹೇಶ್ವರನು ತನ್ನ ಕೆಲಸವು ನಡೆಯಿತೆಂದೇ ತಿಳಿದುಕೊಂಡನು. ಆ ಕೆಲಸವನ್ನು ಪೂರೈಸಿದವನೆಂದೇ ಭಾವಿಸಿ ಸಂತೋಷದಿಂದ ಆತನಿಗೆ ಪ್ರತ್ಯುತ್ತರವನ್ನು ಹೇಳಿದನು.

ಮಹಾವೀರೋಽಸಿ ರೇ ಭದ್ರ ಮಮ ಸರ್ವಗಣೇಷ್ವಿಹ ।
ವೀರಭದ್ರಾಖ್ಯಯಾ ತ್ವಂ ಹಿ ಪ್ರಥಿತಂ ಪರಮಾಂ ವ್ರಜ ।
ಕುರು ಮೇ ಸತ್ವರಂ ಕಾರ್ಯಂ ದಕ್ಷಯಜ್ಞಂ ಕ್ಷಯಂ ನಯ ॥ ೩೦ ॥
ಯೇ ತ್ವಾಂ ತತ್ರಾವಮನ್ಯಂತೇ ತತ್ಸಹಾಯ್ಯವಿಧಾಯಿನಃ ।
ತೇ ತ್ವಯಾಪ್ಯವಮಂತವ್ಯಾ ವ್ರಜ ಪುತ್ರ ಶುಭೋದಯ ॥ ೩೧ ॥
ಇತ್ಯಾಜ್ಞಾಂ ಮೂರ್ಧ್ನಿ ಚಾಧಾಯ ಸ ತತಃ ಪರಮೇಶ್ವರೀಂ ।
ಹರಂ ಪ್ರದಕ್ಷಿಣೀಕೃತ್ಯ ಜಗ್ಮಿವಾನತಿರಂಹಸಾ ॥ ೩೨ ॥
ತತಸ್ತದನುಗಾನ್ಶಂಭುಃ ಸ್ವನಿಃಶ್ವಾಸಸಮುದ್ಗತಾನ್ ।
ಶತಕೋಟಿಮಿತಾನುಗ್ರಾನ್ಗಣಾನನ್ಯಾನವಾಸೃಜತ್ ॥ ೩೩ ॥
ತೇ ಗಣಾ ವೀರಭದ್ರಂ ತಂ ಯಾಂತಂ ಕೇಚಿತ್ಪುರೋಗತಾಃ ।
ಕೇಚಿತ್ತದನುಗಾ ಜಾತಾಃ ಕೇಚಿತ್ತತ್ಪಾರ್ಶ್ವಗಾ ಯಯುಃ ॥ ೩೪ ॥
ಅಂಬರಂ ತೈಃ ಸಮಾಕ್ರಾಂತಂ ತೇಜೋವಿಜಿತಭಾಸ್ಕರೈಃ ।
ಶೃಂಗಾಗ್ರಾಣಿ ಗಿರೀಣಾಂ ಚ ಕೈಶ್ಚಿದುತ್ಪಾಟಿತಾನಿ ವೈ ॥ ೩೫ ॥

---

೩೦. "ಚಿರಂಜೀವಿಯೆ! ಇಲ್ಲಿ ನೆರೆದಿರುವ ನನ್ನ ಸಮಸ್ತ ಗಣಗಳಲ್ಲಿಯೂ ನೀನೇ ಮಹಾವೀರನಾಗಿರುವೆ. ಆದುದರಿಂದ ನೀನು ಲೋಕದಲ್ಲಿ ವೀರಭದ್ರ ನೆಂಬ ಹೆಸರಿನಿಂದಲೇ ಪ್ರಖ್ಯಾತನಾಗುವೆ. ಈಗ ನನಗಾಗಿ ತ್ವರೆಯಿಂದ ಕಾರ್ಯ ವೊಂದನ್ನು ಮಾಡು. ದಕ್ಷಪ್ರಜಾಪತಿಯು ಮಾಡುತ್ತಿರುವ ಯಜ್ಞವನ್ನು ನಾಶಗೊಳಿಸು.

೩೧. ಆತನಿಗೆ ಸಹಾಯವನ್ನು ಮಾಡುವವರಾಗಿ ಯಾರು ನಿನ್ನನ್ನು ಕೀಳಾಗಿ ಎಣಿಸುವರೊ, ಅವರಿಗೆ ನೀನೂ ಸಹ ಸರಿಯಾದ ಪರಾಭವವನ್ನುಂಟುಮಾಡು. ಮಂಗಳರೂಪವಾದ ಎಲೈ ಪುತ್ರನೆ! ಇನ್ನು ಹೊರಡು."

೩೨. ಈ ವಿಧವಾದ ಪರಮೇಶ್ವರನ ಉತ್ತಮಾಜ್ಞೆಯನ್ನು ತಲೆಯಲ್ಲಿ ಹೊತ್ತು ಆ ವೀರಭದ್ರನು ತಂದೆಗೆ ಪ್ರದಕ್ಷಿಣೆಯನ್ನುಮಾಡಿ ನಮಸ್ಕರಿಸಿ ಮಹಾ ವೇಗದಿಂದ ಹೊರಡಲನುವಾದನು.

೩೩. ಆಗ ಆತನ ಸಹಾಯಕ್ಕಾಗಿ ಅತ್ಯುಗ್ರರಾದ ಒಂದು ನೂರುಕೋಟಿ ಗಣಗಳನ್ನು ತನ್ನ ನಿಟ್ಟುಸಿರಿನಿಂದಲೇ ಸೃಷ್ಟಿಮಾಡಿ ಮಹಾದೇವನು ವೀರಭದ್ರನ ಪರಿವಾರಕ್ಕಾಗಿ ಕಳುಹಿಸಿಕೊಟ್ಟನು.

೩೪. ಆ ಗಣಗಳೆಲ್ಲರೂ ಆತನೊಡನೆ ಹೊರಟು ಕೆಲವರು ಆತನ ಮುಂದೆಯೇ ಹೋದರು. ಕೆಲವರು ಆತನನ್ನು ಹಿಂಬಾಲಿಸಿದರು. ಮತ್ತೆ ಕೆಲವರು ಆತನ ಎರಡು ಪಾರ್ಶ್ವಗಳಲ್ಲಿಯೂ ಕಿಕ್ಕಿರಿದರು.

೩೫. ತಮ್ಮ ತೇಜಸ್ಸಿನಿಂದ ಸೂರ್ಯನನ್ನೂ ಜಯಿಸುತ್ತಿದ್ದ ಕೆಲವರಿಂದ

ಆಚೂಡಮಾಲಾಃ ಕೈಶ್ಚಿಚ್ಚ ವಿಧೃತಾ ವೈ ಶಿಲೋಚ್ಚಯಾಃ ।
ಉತ್ಪಾಟ್ಯ ಮಹತೋ ವೃಕ್ಷಾನ್ಕೇಚಿತ್ಪ್ರಾಪ್ತಾ ಮಖಾಂಗಣಂ ॥ ೩೬ ॥
ಕೈಶ್ಚಿದುತ್ಪಾಟಿತಾ ಯೂಪಾಃ ಕೇಚಿತ್ಕುಂಡಾನ್ಯಪೂಪುರನ್ ।
ಮಂಡಪಂ ಧ್ವಂಸಯಾಮಾಸುಃ ಕೇಚಿತ್ಕ್ರೋಧೋದ್ಧುರಾ ಗಣಾಃ ॥೩೭॥
ಅಚೀಖನನ್ವೈ ವೇದೀಶ್ಚ ಕೇಚಿದ್ವೈ ಶೂಲಪಾಣಯಃ ।
ಅಭಕ್ಷಯನ್ಹವೀಂಷ್ಯನ್ಯೇ ಪೃಷದಾಜ್ಯಂ ಪಪುಃ ಪರೇ ॥ ೩೮ ॥
ದಧ್ವಂಸುರನ್ನರಾಶೀಂಶ್ಚ ಕೇಚಿತ್ಪರ್ವತಸನ್ನಿಭಾನ್ ।
ಕೇಚಿದ್ವೈ ಪಾಯಸಾಹಾರಾಃ ಕೇಚಿದ್ವೈ ಕ್ಷೀರಪಾಯಿನಃ ॥ ೩೯ ॥
ಕೇಚಿತ್ಪಕ್ವಾನ್ನಹೃಷ್ಟಾಂಗಾ ಯಜ್ಞಪಾತ್ರಾಣ್ಯಚೂರ್ಣಯನ್ ।
ಅಮೋಟಯನ್ಸ್ರುಚಾಂ ದಂಡಾನ್ಕೇಚಿದ್ದೋರ್ದಂಡಶಾಲಿನಃ ॥ ೪೦ ॥
ವ್ಯಭಂಜನ್ಶಕಟಾನ್ಕೇಚಿತ್ಪಶೂನ್ಕೇಚಿದಜೀಗಿಲನ್ ।
ಅಗ್ನಿಂ ನಿರ್ವಾಪಯಾಮಾಸುಃ ಕೇಚಿದತ್ಯಗ್ನಿತೇಜಸಃ ॥ ೪೧ ॥

---

ಆಕಾಶವೆಲ್ಲವೂ ತುಂಬಿಹೋಯಿತು. ಹೋಗುವ ದಾರಿಯಲ್ಲಿ ಕೆಲವರು ಪರ್ವತಗಳ ಕೋಡುಗಲ್ಲುಗಳನ್ನೇ ಕಿತ್ತುಕೊಂಡು ಬರುತ್ತಿದ್ದರು.

೩೬. ಮತ್ತೆ ಕೆಲವರು ಆಮೂಲಾಗ್ರವಾಗಿ ದೊಡ್ಡ ಬಂಡೆಗಳನ್ನೇ ಹೊತ್ತುಕೊಂಡು ನಡೆದರು. ಹಲವರು ಉನ್ನತಗಳಾದ ಮಹಾವೃಕ್ಷಗಳನ್ನೇ ಬೇರುಸಹಿತವಾಗಿ ಕಿತ್ತು ಯಜ್ಞಶಾಲೆಯನ್ನು ಪ್ರವೇಶಿಸಿದರು.

೩೭. ಕೆಲವರು ಯೂಪಸ್ತಂಭಗಳನ್ನು ಕಿತ್ತೆಸೆದರು. ಕೆಲವರು ಹೋಮಕುಂಡಗಳಲ್ಲಿ ಪುರೀಷೋತ್ಸರ್ಗವನ್ನುಮಾಡಿದರು. ಕೆಲವು ಗಣನಾಯಕರು ಕೋಪಗೊಂಡು ಮಂಟಪವನ್ನೆಲ್ಲ ಧ್ವಂಸಗೊಳಿಸಿದರು.

೩೮. ಕೆಲವರು ತ್ರಿಶೂಲಗಳನ್ನು ಕೈಗಳಲ್ಲಿ ಹಿಡಿದು ವೇದಿಕೆಗಳೆಲ್ಲವನ್ನೂ ಅಗೆದುಹಾಕಿದರು. ಇತರರು ಹವಿರ್ದ್ರವ್ಯವನ್ನೆಲ್ಲ ತಿಂದುಹಾಕಿದರು. ಮತ್ತೆ ಕೆಲವರು ಹವಿಸ್ಸಿನ ಆಜ್ಯವನ್ನು ಕುಡಿದುಬಿಟ್ಟರು.

೩೯. ಕೆಲವರು ಪರ್ವತೋಪಮಗಳಾದ ಅನ್ನರಾಶಿಗಳೆಲ್ಲವನ್ನೂ ಧ್ವಂಸಮಾಡಿದರು. ಕೆಲವರು ಪಾಯಸಗಳನ್ನೂ, ಮತ್ತೆ ಹಲವರು ಹಾಲು ಮೊಸರುಗಳನ್ನೂ ಕುಡಿದು ಮುಗಿಸಿದರು.

೪೦. ಕೆಲವರು ಪಕ್ವಾನ್ನಗಳನ್ನು ತಿಂದು ಮೈಯುಬ್ಬಿಸಿಕೊಂಡರು. ಯಜ್ಞೋಪಕರಣಗಳಾದ ಪಾತ್ರೆಗಳನ್ನು ಚೂರ್ಣಗೊಳಿಸಿದರು. ಬಲಿಷ್ಠಬಾಹುಗಳುಳ್ಳ ಬೇರೆಯವರು ಸ್ರುಕ್ಸ್ರುವಾದಿಗಳ ದಂಡಗಳನ್ನು ಮುರಿದುಹಾಕಿದರು.

೪೧. ಹಲವರು ಗಾಡಿಗಳನ್ನು ಮುರಿದರು. ಕೆಲವರು ಯಜ್ಞಪಶುಗಳನ್ನೇ ನುಂಗಿಬಿಟ್ಟರು. ಅಗ್ನಿಗೂ ಮಿಗಿಲಾದ ತೇಜಸ್ಸುಳ್ಳ ಕೆಲವರು ಯಜ್ಞಶಾಲೆಯ ಅಗ್ನಿಯನ್ನೇ ಕೊನೆಗಾಣಿಸಿದರು.

ಸ್ವಯಂ ಪರಿದಧುಶ್ಚಾನ್ಯೇ ದುಕೂಲಾನಿ ಮುದಾ ಯುತಾಃ ।
ಜಗೃಹುಃ ಕೇಚನ ಪುರಾ ರತ್ನಾನಾಂ ಪರ್ವತಂ ಕೃತಂ ॥ ೪೨ ॥
ಏಕೇನ ಚ ಭಗೋ ದೇವಃ ಪಶ್ಯಂಶ್ಚಕ್ರೇಽವಿಲೋಚನಃ ।
ಪೂಷ್ಣೋ ದಂತಾವಲೀಮನ್ಯಃ ಪಾತಯಾಮಾಸ ಕೋಪಿತಃ ॥ ೪೩ ॥
ಯಜ್ಞಃ ಪಲಾಯಿತೋ ದೃಷ್ಟಃ ಕೇನಚಿನ್ಮೃಗರೂಪಧೃಕ್ ।
ಶಿರೋವಿರಹಿತಶ್ಚಕ್ರೇ ತೇನ ಚಕ್ರೇಣ ದೂರತಃ ॥ ೪೪ ॥
ಏಕಃ ಸರಸ್ವತೀಂ ಯಾಂತೀಂ ದೃಷ್ಟ್ವಾ ನಿರ್ನಾಸಿಕಾಂ ವ್ಯಧಾತ್ ।
ಅದಿತೇರೋಷ್ಠಪುಟಕೌ ಛಿನ್ನಾವನ್ಯೇನ ಕೋಪಿನಾ ॥ ೪೫ ॥
ಅರ್ಯಮ್ಣೋ ಬಾಹುಯುಗಲಂ ತಥೋತ್ಪಾಟಿತವಾನ್ಪರಃ ।
ಅಗ್ನೇರುತ್ಪಾಟಯಾಮಾಸ ಕಶ್ಚಿಜ್ಜಿಹ್ವಾಂ ಪ್ರಸಹ್ಯ ಚ ॥ ೪೬ ॥
ಚಿಚ್ಛೇದ ವಾಯೋರ್ವೃಷಣಂ ಪಾರ್ಷದೋಽನ್ಯಃ ಪ್ರತಾಪವಾನ್ ।
ಪಾಶಯಿತ್ವಾ ಯಮಂ ಕಶ್ಚಿತ್ಪ್ರೋಕ್ತೇ ಧರ್ಮ ಇತಿ ಪೃಷ್ಟವಾನ್ ।
ಯತ್ರ ಧರ್ಮೋ ಮಹೇಶೋ ನ ಪ್ರಥಮಂ ಪರಿಪೂಜ್ಯತೇ ॥ ೪೭ ॥

---

೪೨. ಕೆಲವರು ಸಂತೋಷಗೊಂಡು ಅಲ್ಲಿದ್ದ ಉತ್ತಮವಸ್ತ್ರಗಳನ್ನು ತಾವೇ ಧರಿಸಿಕೊಳ್ಳುತ್ತಿದ್ದರು. ಇತರರು ಪೂರ್ವದಲ್ಲಿ ಪರ್ವತಗಳಾಗಿ ಒಡ್ಡಿದ್ದ ರತ್ನಗಳನ್ನು ಬೇಕಾದಂತೆ ಸುಲಿದುಕೊಂಡು ಹೋದರು.

೪೩. ಭಗನೆಂಬ ದೇವನು ಒಬ್ಬನ ಕಣ್ಣಿಗೆ ಬಿದ್ದಕೂಡಲೆ ತನ್ನ ಕಣ್ಣುಗಳನ್ನು ಕಳೆದುಕೊಂಡನು. ಮತ್ತೊಬ್ಬ ಗಣೇಶ್ವರನು ಕೋಪದಿಂದ ಪೂಷನ ಹಲ್ಲಿನ ಸಾಲನ್ನೇ ಉದುರಿಸಿದನು.

೪೪. ಯಜ್ಞದ ಅಧಿದೇವತೆಯು ಜಿಂಕೆಯ ರೂಪವನ್ನು ಧರಿಸಿ ಓಡಿ ಹೋಗುತ್ತಿದ್ದುದನ್ನು ಮತ್ತೊಬ್ಬನು ಕಂಡು ದೂರದಿಂದಲೇ ತನ್ನ ಚಕ್ರವನ್ನು ಬೀಸಿ ಅವನನ್ನು ತಲೆಯಿಲ್ಲದವನನ್ನಾಗಿ ಮಾಡಿದನು.

೪೫. ಒಬ್ಬನು ಹೊರಟುಹೋಗುತ್ತಿರುವ ಸರಸ್ವತಿಯನ್ನು ಕಂಡು ಮೂಗನ್ನು ಕತ್ತರಿಸಿದನು. ಕೋಪಗೊಂಡ ಮತ್ತೊಬ್ಬನು ಅದಿತಿದೇವಿಯ ತುಟಿಗಳೆರಡನ್ನೂ ಕಡಿದುಹಾಕಿದನು.

೪೬. ಮತ್ತೊಬ್ಬನು ಅರ್ಯಮನ ಎರಡು ಕೈಗಳನ್ನೂ ಬಲತ್ಕಾರವಾಗಿ ಕಿತ್ತುಹಾಕಿದನು. ಬೇರೊಬ್ಬನು ಪರಾಕ್ರಮದಿಂದ ಅಗ್ನಿದೇವನ ನಾಲಿಗೆಯನ್ನೇ ಕಿತ್ತನು.

೪೭. ಪ್ರತಾಪವಂತನಾದ ಮತ್ತೊಬ್ಬ ಪಾರ್ಷದನು ವಾಯುದೇವನ ವೃಷಣಗಳನ್ನು ಛೇದಿಸಿದನು. ಇನ್ನೊಬ್ಬನು ಯಮಧರ್ಮರಾಜನನ್ನೇ ಪಾಶಗಳಿಂದ ಬಿಗಿದುಹಾಕಿ "ಅಯ್ಯಾ! ಧರ್ಮವೆಂದರೇನು? ಯಾವ ಕರ್ಮದಲ್ಲಿ

ನೈರ್ಋತಂ ಸಂಗೃಹೀತ್ವಾನ್ಯಃ ಕೇಶೇಷ್ವಾತೋಲ್ಯ ಚಾಸಕೃತ್ ।
ಅನೀಶ್ವರಂ ಹವಿರ್ಭುಕ್ತಂ ತ್ವಯೇತ್ಯಾತಾಡಯತ್ಪದಾ ॥ ೪೮ ॥
ಕುಬೇರಮುಪರೋ ಧೃತ್ವಾ ಪಾದಯೋರಧುನೋದ್ಬಲಾತ್ ।
ವಾಮಯಾಮಾಸ ಬಹುಶೋ ಭಕ್ಷಿತಾ ಹ್ಯಧ್ವರಾಹುತೀಃ ॥ ೪೯ ॥
ಏಕಾದಶಾಽಪಿ ಯೇ ರುದ್ರಾ ಲೋಕಪಾಲೈಕಪಂಕ್ತಯಃ ।
ರುದ್ರಾಖ್ಯಾಧಾರಣವಶಾತ್ಪ್ರಮಥೈಸ್ತೇಽವಹೇಲಿತಾಃ ॥ ೫೦ ॥
ವರುಣೋದರಮಾಪೀಡ್ಯ ಪ್ರಮಥೋಽನ್ಯೋ ಬಲೇನ ಹಿ ।
ಬಹಿರುದ್ಗಿರಯಾಮಾಸ ಯದ್ದತ್ತಂ ಚೇಶವರ್ಜಿತಂ ॥ ೫೧ ॥
ಮಾಯೂರೀಂ ತನುಮಾಸಾದ್ಯ ಸಹಸ್ರಾಕ್ಷೋ ಮಹಾಮತಿಃ ।
ಉಡ್ಡೀಯ ಗಿರಿಮಾಶ್ರಿತ್ಯ ಚ್ಛನ್ನಃ ಕೌತುಕಮೈಕ್ಷತ ॥ ೫೨ ॥
ಬ್ರಾಹ್ಮಣಾನ್ಪ್ರಮಥಾ ನತ್ವಾ ಯಾತ ಯಾತೇತಿ ಚಾಬ್ರುವನ್ ।
ಪ್ರಮಥಾಃ ಕಾಲಯಾಮಾಸುರನ್ಯಾನಪಿ ಚ ಯಾಚಕಾನ್ ॥ ೫೩ ॥

---

ಮೊದಲು ಮಹೇಶ್ವರನ ಪೂಜೆಯು ನಡೆಯುವುದಿಲ್ಲವೊ, ಅದನ್ನು ಧರ್ಮಕಾರ್ಯವೆಂದು ಕರೆಯಬಹುದೆ?'' ಎಂದು ಪ್ರಶ್ನೆಮಾಡುತ್ತಿದ್ದನು.

೪೮. ಇನ್ನೊಬ್ಬನು ನಿರ್ಋತಿಯನ್ನು ನಿಲ್ಲಿಸಿ ತಲೆಗೂದಲನ್ನು ಹಿಡಿದು ಪುನಃಪುನಃ ಎಳೆದಾಡುತ್ತ ''ಈಶ್ವರನಿಗರ್ಪಿತವಲ್ಲದ ಹವಿಸ್ಸನ್ನು ಸ್ವೀಕರಿಸಿದೆಯಾ?'' ಎಂಬುದಾಗಿ ಕಾಲಿನಲ್ಲಿ ಒದೆಯುತ್ತಿದ್ದನು.

೪೯. ಬೇರೊಬ್ಬನು ಕುಬೇರನನ್ನು ಸೆಳೆದುಕೊಂಡು ಕಾಲುಗಳನ್ನು ಹಿಡಿದು ನೆಲಕ್ಕೆ ಬಡಿಯಲು ಅವನು ಸೇವಿಸಿದ್ದ ಅನೇಕ ಆಹುತಿದ್ರವ್ಯಗಳನ್ನೂ ಕಾರಿಕೊಂಡು ಸಂಕಟಪಡುತ್ತಿದ್ದನು.

೫೦. ಲೋಕಪಾಲಕರೊಡನೆ ಸಹಪಙ್ಕ್ತಿಯೊಳಗಿದ್ದ ಏಕಾದಶರುದ್ರರಾದರೊ, ರುದ್ರರೆಂಬ ಹೆಸರನ್ನು ತಾಳಿದ್ದುದರಿಂದಲೇ ಜೀವಂತರಾಗಿ ಬಿಡಲ್ಪಟ್ಟು ಪ್ರಮಥಗಣಗಳಿಂದ ಬಹುವಾಗಿ ಅವಮಾನಗೊಳಿಸಲ್ಪಟ್ಟರು.

೫೧. ಮತ್ತೊಬ್ಬನು ವರುಣನನ್ನು ಹಿಡಿದುಕೊಂಡು ಬಲಾತ್ಕಾರವಾಗಿ ಆತನ ಹೊಟ್ಟೆಯನ್ನು ಹಿಸುಕಿ ಈಶ್ವರನಿಗರ್ಪಿಸದೆ ಆತನು ತಿಂದಿದ್ದುದನ್ನೆಲ್ಲ ಹೊರಕ್ಕೆ ವಮನಮಾಡಿಸಿದನು.

೫೨. ಇಷ್ಟರಲ್ಲಿ ಮಹಾಪ್ರಾಜ್ಞನಾದ ಮಹೇಂದ್ರನು ನವಿಲಿನ ರೂಪವನ್ನು ತಾಳಿಕೊಂಡು ಯಜ್ಞವಾಟದಿಂದ ಮೇಲಕ್ಕೆ ಹಾರಿಹೋಗಿ ಹತ್ತಿರದಲ್ಲಿದ್ದ ಒಂದು ಪರ್ವತದಲ್ಲಿ ಕುಳಿತುಕೊಂಡು ಮರೆಯಿಂದಲೇ ಈ ಕೌತುಕವನ್ನು ನೋಡುತ್ತಿದ್ದನು.

೫೩. ಅಲ್ಲಿ ನೆರೆದಿದ್ದ ಬ್ರಾಹ್ಮಣರಿಗೆ ಮಾತ್ರ ಪ್ರಮಥರು ನಮಸ್ಕಾರಗಳನ್ನು

ಇತ್ಥಂ ಪ್ರಮಥಿತೇ ಯಾಗೇ ಪ್ರಮಥೈಃ ಪ್ರಥಮಾಗತೈಃ ।
ವೀರಭದ್ರಃ ಸ್ವತಃ ಪ್ರಾಪ್ತಃ ಪ್ರಮಥಾನೀಕನೀವೃತಃ ॥ ೫೪ ॥
ಯಜ್ಞವಾಟಂ ಶ್ಮಶಾನಾಭಂ ದೃಷ್ಟ್ವಾ ತೈಃ ಪ್ರಮಥೈಃ ಪುರಾ ।
ಅತಿಶೋಚ್ಯಾಂ ದಶಾಂ ನೀತಂ ವೀರಭದ್ರಸ್ತತೋ ಜಗೌ ॥ ೫೫ ॥
ಗಣಾಃ ಪಶ್ಯತ ದುರ್ವೃತ್ತೈಃ ಪ್ರಾರಬ್ಧಾನಾಂ ಚ ಕರ್ಮಣಾಂ ।
ಅನೀಶ್ವರೈರವಸ್ಥೇಯಂ ಕುತೋ ದ್ವೇಷೋ ಮಹೇಶ್ವರೇ ॥ ೫೬ ॥
ಯೇ ದ್ವಿಷಂತಿ ಮಹಾದೇವಂ ಸರ್ವಕರ್ಮೈಕಸಾಕ್ಷಿಣಂ ।
ಧರ್ಮಕಾರ್ಯೇ ಪ್ರವೃತ್ತಾಸ್ತು ತೇ ಪ್ರಾಪ್ಸ್ಯಂತೀದೃಶೀಂ ದಶಾಂ ॥ ೫೭ ॥
ಕ್ವ ಸ ದಕ್ಷೋ ದುರಾಚಾರಃ ಕ್ವ ಚ ಯಜ್ಞಭುಜಃ ಸುರಾಃ ।
ಧೃತ್ವಾ ಸರ್ವಾನಾನಯತ ಯಾತು ದ್ರುತತರಂ ಗಣಾಃ ॥ ೫೮ ॥
ಇತ್ಯಾಜ್ಞಾಂ ವೀರಭದ್ರಸ್ಯ ಪ್ರಾಪ್ಯ ತೇ ಪ್ರಮಥಾ ದ್ರುತಂ ।
ಯಾವದ್ಯಾಂತ್ಯಗ್ರತಸ್ತಾವದ್ದೃಷ್ಟಃ ಕ್ರುದ್ಧೋ ಗದಾಧರಃ ॥ ೫೯ ॥

ಮಾಡಿ “ಇಲ್ಲಿಂದ ಹೊರಟುಹೋಗಿರಿ” ಎಂದು ಹೇಳುತ್ತಿದ್ದರು. ಅವರೊಬ್ಬರನ್ನುಳಿದು ಇತರ ಯಾಚಕರನ್ನೂ ಸಹ ನಾಶಮಾಡುತ್ತಿದ್ದರು.

೫೪. ಮೊದಲನೆಯ ತಂಡವಾದ ಪ್ರಮಥರೇ ಇಂತು ಯಾಗಭೂಮಿಯನ್ನೆಲ್ಲ ಅಲ್ಲಕಲ್ಲೋಲಮಾಡಿಬಿಟ್ಟರು. ಬಳಿಕ ಪ್ರಮಥಸೈನ್ಯವನ್ನು ಕಟ್ಟಿಕೊಂಡು ವೀರಭದ್ರನು ತಾನೇ ಪ್ರಾಪ್ತನಾದನು.

೫೫. ತನ್ನ ಪ್ರಮಥಗಣಗಳು ಮೊದಲೇ ಯಜ್ಞವಾಟವನ್ನು ಸ್ಮಶಾನಸಮಾನವಾಗಿ ಮಾಡಿರುವುದನ್ನು ನೋಡಿ ಅತ್ಯಂತ ಶೋಚನೀಯವಾದ ಸ್ಥಿತಿಯಲ್ಲಿರುವ ಅದನ್ನು ಕುರಿತು ವೀರಭದ್ರನು ಹೇಳತೊಡಗಿದನು.

೫೬. “ಗಣಗಳಿರಾ! ದುರಾಚಾರನಿರತರೂ ಈಶ್ವರನಿಂದಕರೂ ಆದವರು ಪ್ರಾರಂಭಿಸುವ ಸಕಲ ಕಾರ್ಯಗಳೂ ಯಾವ ಅವಸ್ಥೆಯನ್ನು ಹೊಂದುವುವೆಂಬುದನ್ನು ತಿಳಿಯಿರಿ. ಇವರಿಗೆ ಮಹೇಶ್ವರನಲ್ಲಿ ಇಷ್ಟೊಂದು ದ್ವೇಷವೇತಕ್ಕೆ?

೫೭. ಸಕಲ ಕರ್ಮಗಳಿಗೂ ಸಾಕ್ಷಿಭೂತನಾಗಿರುವ ಮಹಾದೇವನನ್ನು ಯಾರು ದ್ವೇಷಮಾಡುವರೊ, ಅವರು ಧರ್ಮಕಾರ್ಯಗಳಲ್ಲಿ ಪ್ರವರ್ತಿಸಿದರೂ ಇಂತಹ ಅವಸ್ಥೆಯನ್ನೇ ಪಡೆಯುವರು.

೫೮. ದುರಾಚಾರನಿರತನಾದ ಆ ದಕ್ಷನೆಲ್ಲಿರುವನು? ಈ ಯಜ್ಞದಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸಿದ ದೇವತೆಗಳೆಲ್ಲರೂ ಎಲ್ಲಿ? ಎಲೈ ಗಣಗಳಿರಾ! ಅವರೆಲ್ಲರನ್ನೂ ಹಿಡಿದು ಶೀಘ್ರವಾಗಿ ಇಲ್ಲಿಗೆ ಎಳೆದು ತನ್ನಿರಿ.”

೫೯. ಇಂತೆಂಬ ವೀರಭದ್ರನ ಅಪ್ಪಣೆಯನ್ನು ತಳೆದು ಆ ಪ್ರಮಥರು ವೇಗವಾಗಿ ಹೊರಡುತ್ತಿರಲು ಅಷ್ಟರಲ್ಲಿಯೇ ಅವರೆದುರಿನಲ್ಲಿ ಕೋಪದಿಂದುರಿಯುತ್ತಿದ್ದ ಮಹಾ ವಿಷ್ಣುವು ಕಾಣಿಸಿಕೊಂಡನು.

ತೇನ ತೇ ಪ್ರಮಥಾಃ ಸರ್ವೇ ಮಹಾಬಲಪರಾಕ್ರಮಾಃ ।
ಶುಷ್ಕಪರ್ಣತೃಣಾವಸ್ಥಾಂ ಪ್ರಾಪಿತಾ ನಾತ್ಯಯೇವ ಹಿ ॥ ೬೦ ॥
ಅಥ ನಷ್ಟೇಷು ಸರ್ವೇಷು ಪ್ರಮಥೇಷು ಹರೇರ್ಭಯಾತ್ ।
ಚುಕೋಪ ವೀರಭದ್ರಃ ಸ ಪ್ರಲಯಾನಲಸಂನಿಭಃ ॥ ೬೧ ॥
ದದರ್ಶ ಶಾಙ್ಗಿಣಂ ಚಾಗ್ರೇ ಸ್ವಗಣೈಶ್ಚ ಪರಿಷ್ಕೃತಂ ।
ಚತುರ್ಭುಜೈರಸಂಖ್ಯಾತೈರ್ಜಿತದೈತ್ಯಮಹಾಬಲೈಃ ॥ ೬೨ ॥
ಚಕ್ರಿಭಿರ್ಗದಿಭಿರ್ಘೃಷ್ಟಂ ಖಡ್ಗಿಭಿಶ್ಚಾಪಿ ಶಾಙ್ಗಿಭಿಃ ।
ವೀರಭದ್ರಸ್ತತಃ ಪ್ರಾಹ ದೃಷ್ಟ್ವಾ ತಂ ದೈತ್ಯಸೂದನಂ ॥ ೬೩ ॥
ತ್ವಂ ತು ಯಜ್ಞಪುಮಾನತ್ರ ಮಹಾಯಜ್ಞಪ್ರವರ್ತಕಃ ।
ರಕ್ಷಿತಾ ನಿಜವೀರ್ಯೇಣ ದಕ್ಷಸ್ಯ ತ್ರ್ಯಕ್ಷವೈರಿಣಃ ॥ ೬೪ ॥
ಕಿಂ ವಾ ದಕ್ಷಂ ಸಮಾನೀಯ ದೇಹಿ ಯುಧ್ಯಸ್ವ ವಾ ಮಯಾ ।
ನ ದಾಸ್ಯಸಿ ಚ ಚೇದ್ದಕ್ಷಂ ತತಸ್ತಂ ರಕ್ಷ ಯತ್ನತಃ ॥ ೬೫ ॥

---

೬೦. ಮಹಾಬಲಶಾಲಿಗಳೂ ಪರಾಕ್ರಮಿಗಳೂ ಎನಿಸಿದ ಸಕಲ ಪ್ರಮಥ ಗಣಗಳೂ ಆತನ ಇದಿರಿನಲ್ಲಿ ಬಿರುಗಾಳಿಗೆ ಸಿಕ್ಕಿದ ತರಗೆಲೆಗಳ ಅವಸ್ಥೆಯನ್ನು ಹೊಂದಿ ದಿಕ್ಕಾಪಾಲಾಗಿ ಚೆದರಿಹೋದುವು.

೬೧. ಇಂತು ಮಹಾವಿಷ್ಣುವಿಗೆ ಭಯಗೊಂಡು ಸಮಸ್ತ ಪ್ರಮಥರೂ ನಷ್ಟರಾಗಲು, ವೀರಭದ್ರನು ಇದನ್ನು ಕಂಡು ಪ್ರಲಯಕಾಲದ ಬೆಂಕಿಯನ್ನು ಹೋಲುತ್ತ ಅಪರಿಮಿತವಾದ ಕೋಪವನ್ನು ತಾಳಿದನು.

೬೨. ಮಹಾವಿಷ್ಣುವು ತನ್ನ ಪರಿವಾರದವರಿಂದ ಸ್ತೋತ್ರಮಾಡಲ್ಪಡುತ್ತಿದ್ದುದನ್ನು ಎದುರಿನಲ್ಲಿ ಕಂಡನು. ಆತನ ಸೇವಕರೆಲ್ಲರೂ ನಾಲ್ಕು ಭುಜಗಳಿಂದೊಪ್ಪುವವರೂ, ಮಹಾಪರಾಕ್ರಮದಿಂದ ದೈತ್ಯರನ್ನು ಗೆದ್ದವರೂ, ಅಸಂಖ್ಯಾತರೂ ಆಗಿದ್ದರು.

೬೩. ರಾಕ್ಷಸಮರ್ದನನಾದ ವಿಷ್ಣುವು ಚಕ್ರ, ಗದಾ, ಖಡ್ಗ, ಚಾಪಗಳೇ ಮುಂತಾದ ಆಯುಧಗಳನ್ನು ತಳೆದ ಪರಿವಾರದಿಂದ ಕೂಡಿದ್ದನು. ಆತನನ್ನು ಕಂಡು ವೀರಭದ್ರನು ಇಂತೆಂದು ಹೇಳತೊಡಗಿದನು.

೬೪. "ನೀನೇ ಇಲ್ಲಿ ಯಜ್ಞಪುರುಷನು. ಈ ಮಹಾಯಜ್ಞಕ್ಕೆ ಪ್ರವರ್ತಕನೂ ನೀನೇ. ತ್ರಿಲೋಚನನಿಗೆ ವೈರಿಯಾದವರೂ ದಕ್ಷನನ್ನು ನಿನ್ನ ಪರಾಕ್ರಮದಿಂದ ರಕ್ಷಿಸುವ ಪ್ರಯತ್ನವನ್ನು ಮಾಡಿರುವೆ.

೬೫. ಈಗ ಆ ದಕ್ಷನನ್ನು ಕರೆದು ತಂದು ನನಗೆ ಒಪ್ಪಿಸು. ಅಥವಾ ನನ್ನೊಡನೆ ಯುದ್ಧವನ್ನು ಮಾಡಲು ಸಿದ್ಧನಾಗು. ದಕ್ಷಪ್ರಜೇಶ್ವರನನ್ನು ನನ್ನ ವಶಕ್ಕೆ ಕೊಡದಿದ್ದರೆ ಅವನನ್ನು ನಿನ್ನ ಬಲದಿಂದ ಸಂರಕ್ಷಿಸಿಕೊ.

ಪ್ರಾಯಶಃ ಶಂಭುಭಕ್ತೇಷು ಯತಸ್ತ್ವಂ ಪ್ರೋಚ್ಯತೇಽಗ್ರಣೀಃ ।
ಏಕೋನೇಽಬ್ಜಸಹಸ್ರೇ ಪ್ರಾಗ್ದದೌ ನೇತ್ರಾಂಬುಜಂ ಭವಾನ್ ॥ ೬೬ ॥
ತುಷ್ಟೇನ ಶಂಭುನಾ ದತ್ತಂ ತುಭ್ಯಂ ಚಕ್ರಂ ಸುದರ್ಶನಂ ।
ಯತ್ಸಾಹಾಯ್ಯಮವಾಪ್ಯಾಜೌ ತ್ವಂ ಜಯೇರ್ದನುಜಾಧಿಪಾನ್ ॥ ೬೭ ॥
ಇತ್ಯಾಕರ್ಣ್ಯ ವಚಸ್ತಸ್ಯ ವೀರಭದ್ರಸ್ಯ ಚೋರ್ಜಿತಂ ।
ಜಿಜ್ಞಾಸುಸ್ತದ್ಬಲಂ ವಿಷ್ಣುರ್ವೀರಭದ್ರಮುವಾಚ ಹ ॥ ೬೮ ॥
ತ್ವಂ ಶಂಭೋಃ ಸುತದೇಶೀಯೋ ಗಣಾನಾಂ ಪ್ರವರೋಽಸ್ಯಹೋ ।
ರಾಜಾದೇಶಮನುಪ್ರಾಪ್ಯ ತತೋಽಪ್ಯತಿಬಲೋ ಮಹಾನ್ ॥ ೬೯ ॥
ಯೋಽಸಿ ಸೋಽಸ್ಯಹಮಪ್ಯತ್ರ ದಕ್ಷರಕ್ಷಣದಕ್ಷಧೀಃ ।
ಪಶ್ಯಾಮಿ ತವ ಸಾಮರ್ಥ್ಯಂ ಕಥಂ ದಕ್ಷಂ ಹರಿಷ್ಯಸಿ ॥ ೭೦ ॥
ಇತ್ಯುಕ್ತೋ ವೀರಭದ್ರಃ ಸ ತೇನ ವೈ ಶಾರ್ಙ್ಗಧನ್ವನಾ ।
ಪ್ರಮಥಾನ್ದೃಷ್ಟಿಭಂಗ್ಯೈವ ಪ್ರೇರಯಾಮಾಸ ಸಂಗರೇ ॥ ೭೧ ॥

---

೬೬. ಪ್ರಾಯಿಕವಾಗಿ ನೀನು ಮಹೇಶ್ವರನ ಭಕ್ತರಲ್ಲಿ ಬಹಳ ಪ್ರಮುಖನೆಂದು ಹೆಸರನ್ನು ತಳೆದಿರುವೆ. ಸಹಸ್ರಕಮಲಗಳಿಂದ ಮಹಾದೇವನನ್ನು ಅರ್ಚಿಸಲುಪಕ್ರಮಿಸಿ ಒಂದು ಕಡಿಮೆಯಾಗಿರಲು ನಿನ್ನ ಒಂದು ನೇತ್ರವನ್ನೇ ಹಿಂದೆ ಅರ್ಪಿಸಿದೆಯಲ್ಲವೆ.

೬೭. ಇದರಿಂದ ಸಂತುಷ್ಟನಾದ ಶಂಭುವು ನಿನಗೆ ಚಕ್ರಾಯುಧವನ್ನು ಕೊಟ್ಟನು. ಸುದರ್ಶನವೆಂಬ ಆ ಚಕ್ರದ ಸಹಾಯದಿಂದಲೇ ನೀನು ಯುದ್ಧಗಳಲ್ಲಿ ಸಮಸ್ತ ರಾಕ್ಷಸಶ್ರೇಷ್ಠರನ್ನೂ ಜಯಿಸುವವನಾದೆ.''

೬೮. ವೀರಭದ್ರನ ಗರ್ವಸಹಿತವಾದ ಈ ಮಾತನ್ನು ಕೇಳಿ ಮಹಾವಿಷ್ಣುವು ಆತನ ಬಲವನ್ನು ತಿಳಿಯಲು ಕುತೂಹಲವುಳ್ಳವನಾಗಿ ಹೇಳತೊಡಗಿದನು.

೬೯. '' ನೀನು ಮಹೇಶ್ವರನಿಗೆ ಪುತ್ರಸ್ಥಾನದಲ್ಲಿರುವೆ. ಪ್ರಮಥಗಣಗಳಿಗೆಲ್ಲ ಅಗ್ರಗಣ್ಯನಾಗಿರುವೆ. ಅಲ್ಲದೆ ನಿನ್ನ ಒಡೆಯನ ಅಪ್ಪಣೆಯನ್ನು ಪಡೆದು ಮಹಾಬಲಶಾಲಿಯೂ ಅಧಿಕಾರಿಯೂ ಆಗಿರುವೆ.

೭೦. ನೀನು ಯಾರಾಗಿದ್ದರೇನು? ನಾನೂ ಸಹ ದಕ್ಷಬ್ರಹ್ಮನನ್ನು ಕಾಪಾಡುವುದರಲ್ಲಿ ತೀಕ್ಷ್ಣವಾದ ಬುದ್ಧಿಯುಳ್ಳವನಾಗಿರುವೆನು. ನಿನ್ನ ಸಾಮರ್ಥ್ಯವನ್ನಾದರೂ ನೋಡುವೆನು.''

೭೧. ಶಾರ್ಙ್ಗಪಾಣಿಯ ಈ ಮಾತುಗಳನ್ನು ಕೇಳಿ ವೀರಭದ್ರನು ತನ್ನ ಪರಿವಾರದವರಾದ ಪ್ರಮಥಗಣಗಳನ್ನು ಮತ್ತೆ ಸೇರಿಸಿ ಕಣ್ಣುಸನ್ನೆಗಳಿಂದಲೇ ಯುದ್ಧಮಾಡುವಂತೆ ಪ್ರೇರೇಪಿಸಿದನು.

ಅಥ ತೈಃ ಪ್ರಮಥೈರ್ವಿಷ್ಣೋರನುಗಾ ಗದಿತಾ ರಣೇ ।
ಆದದಾನಾಸ್ತೃಣಂ ವಕ್ತ್ರೇಣಾಪಿತಾಃ ಪಾಶವೀಂ ದಶಾಂ ॥ ೭೨ ॥
ತತಸ್ತಾರ್ಕ್ಷ್ಯರಥಃ ಕೃದ್ಧಸ್ತ್ವೇಕೈಕಂ ರಣಮೂರ್ಧನಿ ।
ಸಹಸ್ರೇಣ ಸಹಸ್ರೇಣ ಬಾಣಾನಾಂ ಹೃದ್ಯತಾಡಯತ್ ॥ ೭೩ ॥
ತೇ ಭಿನ್ನವಕ್ಷಸಃ ಸರ್ವೇ ಗಣಾ ರುಧಿರವರ್ಷಿಣಃ ।
ನಾಸಂತೀಂ ಕೈಂಶುಕೀಂ ಶೋಭಾಂ ಪರಿಪ್ರಾಪ್ತಾ ರಣಾಜಿರೇ ॥ ೭೪ ॥
ಕ್ಷರಂತ ಇವ ಮಾತಂಗಾಃ ಸ್ರವಂತ ಇವ ಪರ್ವತಾಃ ।
ಮದೇನ ಧಾತುರಾಗೇಣ ಮಿಶ್ರೈಃ ಶುಶುಭಿರೇ ಗಣಾಃ ॥ ೭೫ ॥
ತತಃ ಪ್ರಹಸ್ಯ ಗಣಪೋಽಬ್ರವೀದ್ವೈಕುಂಠನಾಯಕಂ ।
ಹೇ ಶಾರ್ಙ್ಗಧನ್ವನ್ ಜಾನೇ ತ್ವಾಂ ತ್ವಂ ರಣಾಂಗಣಪಂಡಿತಃ ॥ ೭೬ ॥
ಪರಂ ಯುಧ್ಯಸಿ ದೈತ್ಯೇಂದ್ರೈರ್ದಾನವೇಂದ್ರೈ ರ್ನಪಾರ್ಷದೈಃ ।
ಇತ್ಯುಕ್ತ್ವಾ ವೀರಭದ್ರೇಣ ಭುಶುಂಡೀ ಕಲಿತಾ ಕರೇ ॥ ೭೭ ॥

---

೭೨. ಆಗ ಆ ಪ್ರಮಥಗಣಗಳೊಡನೆ ಯುದ್ಧಕ್ಕೆ ನಿಂತ ವಿಷ್ಣುವಿನ ಪರಿವಾರದವರೆಲ್ಲರೂ ಪರಾಜಯವನ್ನು ಪಡೆದು ತತ್ಸೂಚಕವಾಗಿ ಬಾಯಲ್ಲಿ ಕಚ್ಚಿದ್ದ ಹುಲ್ಲುಕಡ್ಡಿಗಳಿಂದ ಪಶುಗಳ ಅವಸ್ಥೆಯನ್ನು ಹೊಂದಿದರು.

೭೩. ಅದನ್ನು ಕಂಡು ಗರುಡವಾಹನನಾದ ನಾರಾಯಣನು ಕ್ರುದ್ಧನಾಗಿ ಶತ್ರುಸಮೂಹದಲ್ಲಿ ಒಬ್ಬೊಬ್ಬನನ್ನೂ ಒಂದೊಂದು ಸಾವಿರ ಬಾಣಗಳಿಂದ ಹೃದಯ ಪ್ರದೇಶಕ್ಕೆ ಗುರಿಯಿಟ್ಟು ಹೊಡೆದನು.

೭೪. ಆಗಲಾ ಯುದ್ಧರಂಗದಲ್ಲಿ ಆ ಗಣಗಳೆಲ್ಲರೂ ಸೀಳಿದ ಹೃದಯಗಳುಳ್ಳವರಾಗಿ ರಕ್ತವರ್ಷಗಳನ್ನು ಸುರಿಸುತ್ತ ವಸಂತಕಾಲದ ಮುತ್ತುಗದ ಮರಗಳ ಕಾಂತಿಯನ್ನು ತಳೆದು ಓಡಾಡುತ್ತಿದ್ದರು.

೭೫. ಮದಧಾರೆಗಳನ್ನು ಸುರಿಸುತ್ತಿರುವ ಮದ್ದಾನೆಗಳನ್ನೂ, ಧಾತುರಸಗಳನ್ನು ಸ್ರವಿಸುತ್ತಿರುವ ಪರ್ವತಗಳನ್ನೂ ಹೋಲುತ್ತಿದ್ದ ಆ ಗಣನಾಯಕರು ಅನುಲೇಪನಗಳಿಂದಲೂ ರಕ್ತಧಾರೆಗಳಿಂದಲೂ ಶೋಭಿಸುತ್ತಿದ್ದರು.

೭೬. ಆಗ ವೀರಭದ್ರನು ವೈಕುಂಠವಾಸಿಯಾದ ನಾರಾಯಣನನ್ನು ಕುರಿತು ನಗುತ್ತ ಹೇಳಲುಪಕ್ರಮಿಸಿದನು. "ಎಲೈ ಶಾರ್ಙ್ಗಪಾಣಿಯೆ! ನೀನು ಯುದ್ಧವನ್ನು ಮಾಡುವುದರಲ್ಲಿ ಮಹಾಕುಶಲನೆಂಬುದನ್ನು ಬಲ್ಲೆನು.

೭೭. ಆದರೆ ನಿನ್ನ ಯುದ್ಧಗಳೆಲ್ಲವೂ ದೈತ್ಯಶ್ರೇಷ್ಠರೊಡನೆಯೂ ದಾನವೇಂದ್ರರೊಡನೆಯೂ ನಡೆದಿರುವುದೇ ಹೊರತು ಪಾರ್ಷದಗಣಗಳೊಡನಲ್ಲ." ಇಂತೆಂದು ವೀರಭದ್ರನು ಗುರುತರವಾದ ತನ್ನ ಭುಸುಂಡಿಯನ್ನು ಕೈಗೆ ತೆಗೆದುಕೊಂಡನು.

ಗದಿನಾಽಥ ಗದಾ ತೂರ್ಣಂ ದೈತ್ಯೇಂದ್ರಗಿರಿರೇಣುಕೃತ್ ।
ತತಃ ಪ್ರಹತವಾನ್ವೀರೋ ಭುಶುಂಡ್ಯಾ ತಂ ಗದಾಧರಂ ।
ತದಂಗಸಂಗಮಾಸಾದ್ಯ ವಿವಿದ್ರೇ ಶತಧಾ ತಯಾ ॥ ೭೮ ॥
ಕೌಮೋದಕೀಪ್ರಹಾರೇಣ ವೀರಭದ್ರಂ ಪ್ರತಾಪಿನಂ ।
ಜಘಾನ ವಾಸುದೇವೋಽಪಿ ತರಸಾಽಜ್ಞಾತವೇದನಂ ॥ ೭೯ ॥
ತತಃ ಖಟ್ವಾಂಗಮಾದಾಯ ಗದಾಹಸ್ತಂ ಗದಾಧರಂ ।
ಆಹಾಡ್ಯ ಸವ್ಯದೋರ್ದಂಡೇ ಗದಾಂ ಭೂಮಾವಪಾತಯತ್ ॥ ೮೦ ॥
ಕುಪಿತೋಽಯಂ ಮಧುದ್ವೇಷೀ ಚಕ್ರೇಣಾತಾಡಯಚ್ಚ ತಂ ।
ಸ ಚ ಚಕ್ರಂ ಸಮಾಗಚ್ಛದ್ವೀಕ್ಷ್ಯ ಸಸ್ಮಾರ ಶಂಕರಂ ॥ ೮೧ ॥
ಶಂಕರಸ್ಮರಣಾಚ್ಚಕ್ರಂ ಮನಾಗ್ವಕ್ರತ್ವಮಾಪ್ಯ ಚ ।
ಕಂಠಮಾಸಾದ್ಯ ವೀರಸ್ಯ ಸಂಯುಗ್ಮಾತಂ ಸುದರ್ಶನಂ ॥ ೮೨ ॥
ತೇನ ಚಕ್ರೇಣ ಶುಶುಭೇ ನಿತರಾಂ ಸ ಗಣೇಶ್ವರಃ ।
ವೀರಲಕ್ಷ್ಮ್ಯಾ ವೃತ ಇವ ಸಮರೇ ವಿಜಯಸ್ರಜಾ ॥ ೮೩ ॥

೭೮. ಗದಾಪಾಣಿಯೂ ಸಹ ದೈತ್ಯೇಂದ್ರರೆಂಬ ಪರ್ವತಗಳನ್ನು ಧೂಳು ಮಾಡುವ ತನ್ನ ಗದೆಯನ್ನು ತೆಗೆದುಕೊಂಡನು. ಆಗ ವೀರಭದ್ರನು ಮಹಾವಿಷ್ಣುವನ್ನು ತನ್ನ ಭುಸುಂಡಿಯಿಂದ ಬಲವಾಗಿ ಪ್ರಹಾರಮಾಡಿದನು. ಆ ಆಯುಧವು ಮಹಾವಿಷ್ಣುವಿನ ಶರೀರವನ್ನು ತಗುಲಿದ ಮಾತ್ರದಿಂದಲೇ ನೂರುಪಾಲಾಗಿ ಒಡೆದು ಹೋಯಿತು.

೭೯. ವಾಸುದೇವನೂ ಸಹ ದುಃಖಲೇಶವನ್ನೂ ತಿಳಿಯದೆ ನಿಂತಿದ್ದ ಪ್ರತಾಪಶಾಲಿಯಾದ ವೀರಭದ್ರನ ಮೇಲೆ ವೇಗವಾಗಿ ತನ್ನ ಕೌಮೋದಕಿಯೆಂಬ ಗದೆಯನ್ನು ಪ್ರಯೋಗಿಸಿದನು.

೮೦. ಅದನ್ನು ಕಂಡು ವೀರಭದ್ರನು ತನ್ನ ಖಟ್ವಾಂಗವೆಂಬ ಆಯುಧವನ್ನು ತೆಗೆದುಕೊಂಡು, ಗದಾಹಸ್ತನಾಗಿದ್ದ ಮಹಾವಿಷ್ಣುವಿನ ಬಲಕೈಗೆ ಗುರಿಯಿಟ್ಟು ಹೊಡೆದು ಗದೆಯನ್ನು ಭೂಮಿಯಲ್ಲಿ ಬೀಳಿಸಿದನು.

೮೧. ಮಧುಸೂದನನು ಅತ್ಯಂತ ಕೋಪಗೊಂಡವನಾಗಿ ತನ್ನ ಚಕ್ರಾಯುಧದಿಂದ ವೀರಭದ್ರನನ್ನು ಹೊಡೆದನು. ತನ್ನ ಮೇಲೆ ಬರುತ್ತಿರುವ ಚಕ್ರಾಯುಧವನ್ನು ಕಂಡು ವೀರಭದ್ರನು ಶಂಕರನನ್ನು ಸ್ಮರಿಸಿಕೊಂಡನು.

೮೨. ಮಹಾದೇವನ ಸ್ಮರಣದ ಫಲವಾಗಿ ಆ ಚಕ್ರವು ತತ್‌ಕ್ಷಣವಲ್ಲಿಯೇ ವಕ್ರಗತಿಯುಳ್ಳದ್ದಾಗಿ ವೀರಭದ್ರನ ಕೊರಳಿನಲ್ಲಿ ಹಾರದಂತೆ ಸುತ್ತಿಕೊಂಡು ಸಮುನನುನೋಹರವಾಗಿ ಕಾಣುತ್ತಿದ್ದಿತು.

೮೩. ಕಂಠದಲ್ಲಿ ಒಪ್ಪುತ್ತಿರುವ ಆ ಚಕ್ರದಿಂದ ಗಣನಾಯಕನಾದ ವೀರ

ತತಃ ಸುದರ್ಶನಂ ದೃಷ್ಟ್ವಾ ತತ್ಕಂಠಾಭರಣಂ ಹರಿಃ ।
ಮನಾಕ್ಸಚಕಿತಂ ಸ್ಥಿತ್ವಾ ತತೋ ಜಗ್ರಾಹ ನಂದಕಂ ॥ ೮೪ ॥
ಸನಂದಕಂ ಕರಂ ತಸ್ಯ ಪ್ರೋದ್ಯತಂ ಮಧುವಿದ್ವಿಷಃ ।
ಪಶ್ಯತಾಂ ದಿವಿ ಸಿದ್ಧಾನಾಂ ಸ್ತಂಭಯಾಮಾಸ ಹುಂಕೃತಾ ॥ ೮೫ ॥
ಅಭ್ಯಧಾವಚ್ಚ ವೇಗೇನ ಗೃಹೀತ್ವಾ ಶೂಲಮುಜ್ಜ್ವಲಂ ।
ಯಾವಜ್ಜಿಘಾಂಸತಿ ಹರಿಂ ತಾವದಾಕಾಶವಾಚಯಾ ॥ ೮೬ ॥
ವಾರಿತೋ ಗಣರಾಜಃ ಸ ಮಾಕಾರ್ಷೀಃ ಸಾಹಸಂ ತ್ವಿತಿ ।
ತತಸ್ತಮುಪಹಾಯಾಶು ವೀರಭದ್ರೋ ಗಣೋತ್ತಮಃ ।
ಪ್ರಾಪ್ಯ ದಕ್ಷಂ ವಿನದ್ಯೋಚ್ಚೈರ್ಧಿಕ್ತ್ವಾಮೀಶ್ವರನಿಂದಕಂ ॥ ೮೭ ॥
ಯಸ್ಯೇದೃಗಸ್ತಿ ಸಂಪತ್ತಿರ್ಯತ್ರ ದೇವಾಃ ಸಹಾಯಿನಃ ।
ಸ ಕಥಂ ಸೇಶ್ವರಂ ಕರ್ಮ ನ ಕುರ್ಯಾದ್ದಕ್ಷತಾಂ ದಧತ್ ॥ ೮೮ ॥

---

ಭದ್ರನು ಯುದ್ಧರಂಗದಲ್ಲಿ ವೀರಲಕ್ಷ್ಮಿಯು ವಿಜಯಮಾಲಿಕೆಯನ್ನು ಹಾಕಿ ವರಿಸಿದ ಮದವಣಿಗನಂತೆ ಕಾಣುತ್ತಿದ್ದನು.

೮೪. ತಾನು ಕಳುಹಿಸಿದ ಸುದರ್ಶನಚಕ್ರವು ಶತ್ರುವಿನ ಕಂಠಾಭರಣವಾಗಿ ಪರಿಣಮಿಸಿದುದನ್ನು ಕಂಡು ಶ್ರೀಮನ್ನಾರಾಯಣನು ಆಶ್ಚರ್ಯಚಕಿತನಾಗಿ ಒಂದು ಮುಹೂರ್ತದವರೆಗೂ ಸುಮ್ಮನಿದ್ದು ಬಳಿಕ ತನ್ನ ನಂದಕವೆಂಬ ಖಡ್ಗವನ್ನು ತೆಗೆದುಕೊಂಡನು.

೮೫. ಮಧುಸೂದನನು ತನ್ನನ್ನು ಹೊಡೆಯುವುದಕ್ಕಾಗಿ ನಂದಕವನ್ನು ಹಿಡಿದು ಕೈಯೆತ್ತಿದುದನ್ನು ಕಂಡು ವೀರಭದ್ರನು ಆಕಾಶದಲ್ಲಿ ನೆರೆದ ಸಿದ್ಧರು ನೋಡುತ್ತಿರುವಂತೆಯೇ ಹುಂಕಾರಮಾತ್ರದಿಂದ ಆತನ ಕೈಯನ್ನು ಸ್ತಂಭನಗೊಳಿಸಿದನು.

೮೬. ಅಲ್ಲದೆ ಉಜ್ಜ್ವಲವಾದ ತನ್ನ ಶೂಲವನ್ನು ಹಿಡಿದುಕೊಂಡು ಬೀಸುತ್ತ ವೇಗವಾಗಿ ಓಡಿಬಂದ ಶ್ರೀಹರಿಯನ್ನು ಕೊಲ್ಲುವ ಪ್ರಯತ್ನವನ್ನು ಮಾಡುತ್ತಿರುವಂತೆಯೇ ಆಕಾಶವಾಣಿಯು "ಅತಿಸಾಹಸವನ್ನು ಮಾಡಬೇಡ" ಎಂದು ಹೇಳಿ ವೀರಭದ್ರನನ್ನು ತಡೆಯಿತು.

೮೭. ಆಗ ಪಾರ್ಷದಶ್ರೇಷ್ಠನಾದ ವೀರಭದ್ರನು ಹರಿಯನ್ನು ಕೈಬಿಟ್ಟು ದಕ್ಷಪ್ರಜೇಶ್ವರನ ಬಳಿಗೆ ಬಂದು ಗಟ್ಟಿಯಾಗಿ ಸಿಂಹನಾದವನ್ನು ಮಾಡುತ್ತ ಇಂತೆಂದು ಹೇಳಿದನು. "ಈಶ್ವರನಿಂದಕನಾದ ನಿನಗೆ ಧಿಕ್ಕಾರವಿರಲಿ.

೮೮. ಯಾವ ನಿನಗೆ ದೇವತೆಗಳೇ ಸಹಾಯಕರಾಗಿ ಇಂತಹ ಅತುಲೈಶ್ವರ್ಯವನ್ನು ಕೊಟ್ಟಿರುವರೊ, ಅಂತಹ ದಕ್ಷನೆಂದು ಪ್ರಸಿದ್ಧನಾದ ನೀನು ಸಕಲ ಕರ್ಮವನ್ನೂ ಈಶ್ವರಾರ್ಪಣಮಾಡದಿರುವುದು ಹೇಗೆ?

ಯೇನಾಸ್ಯೇನಾ ಪವಿತ್ರೇಣ ಭವತಾ ನಿಂದಿತಃ ಶಿವಃ ।
ಚೂರ್ಣಯಾಮಿ ತದಾಸ್ಯಂ ತೇ ಚಪೇಟಾಭಿಃ ಸಮಂತತಃ ॥ ೮೯ ॥
ಇತ್ಯುಕ್ತ್ವಾ ತಸ್ಯ ದಕ್ಷಸ್ಯ ಹರಪಾರುಷ್ಯಭಾಷಿಣಃ ।
ಚಿಚ್ಛೇದ ವದನಂ ವೀರಶ್ಚಪೇಟಶತಘಾತನೈಃ ॥ ೯೦ ॥
ತತಸ್ತ್ವದಿತಿಮುಖ್ಯಾನಾಂ ಮಿಲಿತಾನಾಂ ಮಹೋತ್ಸವೇ ।
ತ್ರೋಟಯಾಮಾಸ ಕರ್ಣಾದೀನ್ಯಂಗಪ್ರತ್ಯಂಗಕಾನಿ ಚ ॥ ೯೧ ॥
ವೇಣೀದಂಡಾಶ್ಚ ಕಾಸಾಂಚಿತ್ತೇನ ಚ್ಛಿನ್ನಾ ಮಹಾರುಷಾ ।
ಕಾಸಾಂಚಿಚ್ಚ ಕರಾ ಚ್ಛಿನ್ನಾಃ ಕಾಸಾಂಚಿತ್ಕರ್ತಿತಾಃ ಸ್ತನಾಃ ॥ ೯೨ ॥
ನಾಸಾಪುಟಾಂಸ್ತಥಾನ್ಯಾಸಾಂ ಪಾಟಯಾಮಾಸ ಪಾರ್ಷದಃ ।
ಚಿಚ್ಛೇದ ಚಾಂಗುಲೀಶ್ಚಾಪಿ ತಥಾನ್ಯಾಸಾಂ ಶಿವಪ್ರಿಯಃ ॥ ೯೩ ॥
ಯೇ ಯೇ ನಿನಿಂದುರ್ದೇವೇಶಂ ಯೇ ಯೇ ಚ ಶುಶ್ರುವುಸ್ತದಾ ।
ತೇಷಾಂ ಜಿಹ್ವಾಃ ಶ್ರುತೀಃ ಕೋಪಾದಚ್ಛಿನಚ್ಚಾಕರೋದ್ದ್ವಿಧಾ ॥ ೯೪ ॥
ಕೇಚಿದುಲ್ಲಂಬಿತಾ ಯೂಪೇ ಪಾಶಯಿತ್ವಾ ದೃಢಂ ಗಲೇ ।
ಅಧೋಮುಖಾ ಯೈರ್ದೇವೇಶಂ ವಿಹಾಯಾತ್ತಂ ಮಹಾಹವಿಃ ॥ ೯೫ ॥

---

೮೯. ಯಾವ ಅಪವಿತ್ರವಾದ ಮುಖದಿಂದ ನೀನು ಮಹಾದೇವನ ನಿಂದೆಯನ್ನು ಮಾಡಿದೆಯೊ, ಅದನ್ನೆಲ್ಲ ನನ್ನ ಹಸ್ತಗಳ ತಾಡನಗಳಿಂದ ನಿಮಿಷಮಾತ್ರದಲ್ಲಿಯೇ ಚೂರ್ಣವನ್ನಾಗಿ ಮಾಡಿಬಿಡುವೆನು.''

೯೦–೯೧. ಇಂತೆಂದು ಮಹೇಶ್ವರನಿಗೆ ವಿಪ್ರಿಯವನ್ನಾಡಿದ ಆ ದಕ್ಷಬ್ರಹ್ಮನ ಮುಖವನ್ನು ನೂರಾರು ಕಪಾಳತಾಡನಗಳಿಂದ ವೀರಭದ್ರನು ಛಿನ್ನಭಿನ್ನವಾಗಿ ಮಾಡಿದನು. ಬಳಿಕ ಆ ಯಜ್ಞಮಹೋತ್ಸವದಲ್ಲಿ ನೆರೆದಿದ್ದ ಅದಿತಿದೇವಿಯೇ ಮೊದಲಾದ ಸ್ತ್ರೀಯರ ಕಿವಿಗಳೇ ಮುಂತಾದ ಅಂಗಾಂಗಗಳನ್ನೂ ಕತ್ತರಿಸಿಹಾಕಿದನು.

೯೨. ಮಹಾಕೋಪದಿಂದ ಕೆಲವು ಸ್ತ್ರೀಯರ ನಿಡುಜಡೆಗಳನ್ನು ಕತ್ತರಿಸಿದನು. ಕೆಲವರ ಕೈಗಳು ಕತ್ತರಿಸಲ್ಪಟ್ಟುವು. ಮತ್ತೆ ಹಲವರ ಸ್ತನಗಳು ಛಿನ್ನಗಳಾದುವು.

೯೩. ಆ ಪಾರ್ಷದೋತ್ತಮನು ಮತ್ತೆ ಕೆಲವರ ಮೂಗುಗಳನ್ನೇ ಕಡಿದುಹಾಕಿದನು. ಪರಮೇಶ್ವರನಿಗೆ ಆಪ್ತನಾದ ಆತನು ಕೆಲವು ಸ್ತ್ರೀಯರ ಬೆರಳುಗಳನ್ನೂ ಕತ್ತರಿಸಿದನು.

೯೪. ಯಾರು ಯಾರು ಪರಮಶಿವನನ್ನು ನಿಂದಿಸಿದ್ದರೊ, ಅವರ ನಾಲಿಗೆಗಳನ್ನೂ ಆ ನಿಂದೆಗಳನ್ನು ಕೇಳುತ್ತಿದ್ದವರ ಕಿವಿಗಳನ್ನೂ ವೀರಭದ್ರನು ಇಬ್ಭಾಗವಾಗಿ ಸೀಳಿಹಾಕುತ್ತಿದ್ದನು.

೯೫. ಕೆಲವರ ಕೊರಳುಗಳಿಗೆ ಹಗ್ಗಗಳನ್ನು ಬಿಗಿದು ಯೂಪಸ್ತಂಭಗಳಿಂ

ದ್ವಿಜರಾಜಶ್ಚ ಧರ್ಮಶ್ಚ ಭೃಗುಮಾರೀಚಿಮುಖ್ಯಕಾಃ ।
ಅತ್ಯಂತಮುಪಮಾನಸ್ಯ ಭಾಜನಂ ತೇನ ಕಾರಿತಾಃ ॥ ೯೬ ॥
ಏತೇ ಜಾಮಾತರಸ್ತಸ್ಯ ಯತೋ ದಕ್ಷಸ್ಯ ದುರ್ಧಿಯಃ ।
ಹಿತ್ವಾ ಮಹೇಶ್ವರಮಮೂನ್ಸೋಽಪಶ್ಯದಧಿಕಾನ್ ಶಿವಾತ್ ॥ ೯೭ ॥
ತಾನಿ ಕುಂಡಾನಿ ತೇ ಯೂಪಾಸ್ತೇ ಸ್ತಂಭಾಃ ಸ ಚ ಮಂಡಪಃ ।
ತಾ ವೇದ್ಯಸ್ತಾನಿ ಪಾತ್ರಾಣಿ ತಾನಿ ಹವ್ಯಾನ್ಯನೇಕಧಾ ॥ ೯೮ ॥
ತೇ ಚ ವೈ ಯಜ್ಞಸಂಭಾರಾಸ್ತೇ ತೇ ಯಜ್ಞಪ್ರವರ್ತಕಾಃ ।
ತೇ ರಕ್ಷಪಾಲಾಸ್ತೇ ಮಂತ್ರಾ ವಿನೇಶುರ್ಹೇಲಯಾಽಖಿಲಾಃ ॥ ೯೯ ॥
ಸ್ತೋಕೇನೈವ ಹಿ ಕಾಲೇನ ಯಥಾರ್ಥಾಃ ಪರವಂಚನಾತ್ ।
ಅರ್ಜಿತಾ ನಶ್ಯತಿ ಕ್ಷಿಪ್ರಂ ದಕ್ಷಸಂಪದ್ಗತಾಽಶಿವಾ ॥ ೧೦೦ ॥
ನೀತೇ ಮಹಾಕ್ರತೌ ತೇನ ಸಗಣೇನೇದೃಶೀಂ ದಶಾಂ ।
ವಿಧಿರ್ವಿಧಿವಿಲೋಪಾಚ್ಚ ಹರಂ ವಿಜ್ಞಾಪ್ಯ ಚಾನಯತ್ ॥ ೧೦೧ ॥

---

ವಲೇ ಜೋಲಾಡಬಿಟ್ಟನು. ಯಾವ ದೇವತೆಗಳು ಮಹಾದೇವನನ್ನು ಗಣನೆಗೆ ತಾರದೆ ಹವಿಸ್ಸುಗಳನ್ನು ಸ್ವೀಕರಿಸಿದ್ದರೊ, ಅವರನ್ನೆಲ್ಲ ತಲೆಕೆಳಗಾಗಿ ತೂಗು ಹಾಕಿದನು.

೯೬–೯೭. ಚಂದ್ರನೂ, ಯಮಧರ್ಮರಾಜನೂ, ಭೃಗುಮರೀಚಿಗಳೇ ಮುಂತಾದವರೂ ಆತನ ಕೈಯಲ್ಲಿ ಸಿಕ್ಕಿ ಅತ್ಯಂತವಾದ ಅವಮಾನವನ್ನು ಪಡೆದವ ರಾದರು. ಇವರೆಲ್ಲರೂ ದುರ್ಬುದ್ಧಿಯಾದ ಆ ದಕ್ಷನ ಅಳಿಯಂದಿರಾದವರು. ಮಹೇಶ್ವರನಿಲ್ಲದ ವೇಳೆಯಲ್ಲಿ ಇವರೆಲ್ಲರೂ ತಾವೇ ಶಿವನಿಗಿಂತಲೂ ಅಧಿಕರಾದವ ರೆಂದು ಮೆರೆಯುತ್ತಿದ್ದರು.

೯೮–೯೯. ಇಂತು ಆ ಯಜ್ಞಮಂಟಪದ ಕುಂಡಗಳೂ, ಯೂಪಸ್ತಂಭ ಗಳೂ, ಆ ಮಂಟಪವೂ, ಆ ವೇದಿಕೆಗಳೂ, ಪಾತ್ರೆಗಳೂ, ಬಹುವಿಧಗಳಾದ ಆ ಹವಿರ್ದ್ರವ್ಯಗಳೂ ಇತರ ಸಮಸ್ತಯಜ್ಞಸಂಭಾರಗಳೂ, ಯಜ್ಞದಲ್ಲಿ ಭಾಗ ವನ್ನು ವಹಿಸಿದ್ದ ಋತ್ವಿಜರೂ, ಮಂಟಪದ ಕಾವಲುಗಾರರೂ, ಮಂತ್ರಾಧಿ ದೇವತೆಗಳೂ—ಸಕಲವೂ ಅವಲೀಲೆಯಾಗಿ ವೀರಭದ್ರನಿಂದ ವಿನಾಶವನ್ನು ಹೊಂದಿತು.

೧೦೦. ಇತರರನ್ನು ಮೋಸಗೊಳಿಸಿ ಸಂಪಾದಿಸಿದ ಐಶ್ವರ್ಯವು ಅತ್ಯಲ್ಪ ಕಾಲದಲ್ಲಿಯೇ ಹೇಗೆ ನಾಶವನ್ನು ಹೊಂದುವುದೊ, ಹಾಗೆಯೇ ಶಿವಾರ್ಪಿತವಲ್ಲದ ದಕ್ಷನ ಸಂಪತ್ತೆಲ್ಲವೂ ನಿಮಿಷಮಾತ್ರದಲ್ಲಿ ಕಾಣದಂತಾಯಿತು.

೧೦೧. ಇಂತು ವೀರಭದ್ರನು ತನ್ನ ಪರಿವಾರಸಮೇತನಾಗಿ ಮಹಾ ಯಜ್ಞಕ್ಕೆ ಇಂತಹ ಗತಿಯನ್ನು ಕಾಣಿಸಲು ಬ್ರಹ್ಮದೇವನು ಯಜ್ಞವಿಧಿಯ

ತತ್ರ ಯತ್ರ ಮಖಃ ಸೋಽಭೂದೀದೃಶಃ ಶಿವವರ್ಜಿತಃ ।
ಆಯಾತೋಽಥ ಮಹಾದೇವೋ ವೀರಭದ್ರೋಽತಿಲಜ್ಜಿತಃ ॥ ೧೦೨ ॥
ನತ್ವಾ ನ ಕಿಂಚಿದವದದ್ದೇವಃ ಸರ್ವಮವೈತ್ಸ್ವಯಂ ।
ಪ್ರಸಾದ್ಯ ದೇವದೇವೇಶಂ ಸುರಜ್ಯೇಷ್ಠೋಽಬ್ರವೀತ್ಪುನಃ ॥ ೧೦೩ ॥
ಅಪರಾಧ್ಯಪ್ಯಯಂ ದಕ್ಷಃ ಸಂಪ್ರಸಾಧ್ಯಃ ಕೃಪಾನಿಧೇ ।
ಯಥಾಪೂರ್ವಂ ಪುನರಮೂನ್ಸರ್ವಾನ್ಕಾರಯ ಶಂಕರ ॥ ೧೦೪ ॥
ಯಥಾ ವಿಧಿಃ ಪ್ರವರ್ತೇತ ವೈದಿಕಃ ಪುನರೇವ ಹಿ ।
ತಥಾಜ್ಞಾ ದೀಯತಾಂ ಶಂಭೋ ಕರ್ಮ ಸಿದ್ಧ್ಯತಿ ಸೇಶ್ವರಂ ॥ ೧೦೫ ॥
ಅನೀಶ್ವರಾಸು ಸರ್ವಾಸು ಕ್ರಿಯಾಸು ಪರಮೇಶ್ವರ ।
ಏವಮೇವ ಭವಂತ್ಯೇವ ವಿಘ್ನಜಾತಾಃ ಸಹಸ್ರಶಃ ॥ ೧೦೬ ॥
ವಿಚಾರತೋ ವರಾಕೋಽಯಂ ದಕ್ಷೋ ಭಕ್ತತರಸ್ತವ ।
ಕುರ್ವನ್ನೋಽನೀಶ್ವರಂ ಕರ್ಮ ಪರದೃಷ್ಟಾಂತತಾಂ ಗತಃ ॥ ೧೦೭ ॥

---

ಲೋಪಕ್ಕೆ ಭಯಗೊಂಡು ಸಕಲವೃತ್ತಾಂತವನ್ನೂ ಮಹಾದೇವನಿಗೆ ಬಿನ್ನವಿಸಿ ಆತನನ್ನು ಕರೆದುಕೊಂಡು ಬಂದನು.

೧೦೨. ಶಿವವರ್ಜಿತವಾದ ಮಹಾಕ್ರತುವು ಇಂತಹ ದುರವಸ್ಥೆಯನ್ನು ಹೊಂದಿದ್ದ ಸ್ಥಳಕ್ಕೆ ಮಹೇಶ್ವರನು ಬ್ರಹ್ಮನೊಡನೆ ಪ್ರಾಪ್ತನಾಗಲು ವೀರಭದ್ರನು ತನ್ನ ಕೆಲಸಕ್ಕೆ ತಾನೇ ನಾಚಿಕೆಗೊಂಡನು.

೧೦೩. ಅವನು ತಂದೆಗೆ ನಮಸ್ಕಾರವನ್ನು ಮಾಡಿ ಏನನ್ನೂ ಹೇಳದೆ ನಿಂತುಕೊಂಡಿದ್ದನು. ಮಹಾದೇವನೂ ಎಲ್ಲವನ್ನೂ ತಾನೇ ತಿಳಿದುಕೊಂಡನು. ಆಗ ಬ್ರಹ್ಮನು ಆತನನ್ನು ಪ್ರಸನ್ನೀಕರಿಸಿಕೊಂಡು ಪುನಃ ಹೇಳತೊಡಗಿದನು.

೧೦೪. "ಕರುಣಾಸಮುದ್ರನೆ! ಈ ದಕ್ಷನು ಮಹಾಪರಾಧವನ್ನು ಮಾಡಿದವನಾದರೂ ಇವನಲ್ಲಿ ನೀನು ಪ್ರಸನ್ನನಾಗಬೇಕು. ಶಂಕರನೆ! ಈ ಯಜ್ಞಶಾಲೆಯಲ್ಲಿ ಎಲ್ಲವನ್ನೂ ಹಿಂದಿದ್ದಂತೆಯೇ ಮಾಡುವವನಾಗು.

೧೦೫. ವೇದೋಕ್ತವಾದ ಈ ಕರ್ಮವು ಪುನಃ ಸಾಂಗವಾಗಿ ನೆರವೇರುವಂತೆಯೂ, ಈಶ್ವರಸಹಿತವಾದ ಕರ್ಮವು ಫಲವನ್ನು ಕೊಡುವಂತೆಯೂ ಸರ್ವೇಶ್ವರನಾದ ನೀನು ಅಪ್ಪಣೆಯನ್ನು ಮಾಡು.

೧೦೬. ಪರಮೇಶ್ವರನೆ! ಈಶ್ವರನಲ್ಲಿ ಭಕ್ತಿಶ್ರದ್ಧೆಗಳಿಲ್ಲದೆ ಮಾಡಲೆಳಸಿದ ಸಕಲ ಕಾರ್ಯಗಳಲ್ಲಿಯೂ ಈ ಪ್ರಕಾರವಾಗಿಯೇ ಸಾವಿರಾರು ವಿಘ್ನಗಳುಂಟಾಗುತ್ತಿರುವುದು ಸಹಜವೇ ಆಗಿರುವುದು.

೧೦೭. ಒಂದು ದೃಷ್ಟಿಯಿಂದ ನೋಡಲು ನೀಚನಾದ ಈ ದಕ್ಷನೂ ನಿನ್ನ ಉತ್ತಮ ಭಕ್ತನೇ ಆಗಿರುವನು. ಈಶ್ವರಾರ್ಪಿತವಲ್ಲದ ಕರ್ಮವನ್ನು ಮಾಡಿ ಲೋಕಕ್ಕೆಲ್ಲ ದೃಷ್ಟಾಂತಪ್ರಾಯನಾಗಿರುವನು.

ಅನ್ಯೋಽಪಿ ಯೋ ಮಹೇಶಾನಂ ಹಿತ್ವಾ ಕರ್ಮ ಕರಿಷ್ಯತಿ ।
ತಸ್ಯ ತತ್ಕರ್ಮಸಂಸಿದ್ಧಿರ್ದಕ್ಷಸ್ಯೇವ ಭವಿಷ್ಯತಿ ॥ ೧೦೮ ॥
ಅತೋ ನ ಕಶ್ಚಿತ್ಕಿಂಚಿಚ್ಚ ಕ್ವಚಿತ್ಕರ್ಮ ವಿನಾ ಶಿವಂ ।
ವಿಧಾಸ್ಯತಿ ನಿಶಮ್ಯಾಸ್ಯ ದಕ್ಷಸ್ಯೇದೃಷ್ಟಚೇಷ್ಟಿತಂ ॥ ೧೦೯ ॥
ವಿಧೀರಿತಮಿತಿ ಶ್ರುತ್ವಾ ಸ್ಮಿತ್ವಾ ದೇವೋ ಮಹೇಶ್ವರಃ ।
ವೀರಮಾಜ್ಞಾಪಯಾಮಾಸ ಯಥಾ ಪೂರ್ವಂ ಪ್ರಕಲ್ಪಯ ॥ ೧೧೦ ॥
ವೀರಭದ್ರೋಽಪಿ ತತ್ಸರ್ವಂ ಶರ್ವಾಜ್ಞಾಂ ಪ್ರತಿಪದ್ಯ ಚ ।
ವಿನಾ ದಕ್ಷಸ್ಯ ವದನಂ ಯಥಾಪೂರ್ವಮಕಲ್ಪಯತ್ ॥ ೧೧೧ ॥
ಈಶ್ವರಂ ಯೇ ವಿನಿಂದಂತಿ ತೇ ಮೂಕಾಃ ಪಶವೋ ಧ್ರುವಂ ।
ತತೋ ಮೇಷಮುಖಂ ದಕ್ಷಂ ವೀರಭದ್ರೋ ಗಣೋ ವ್ಯಧಾತ್॥ ೧೧೨ ॥
ದೇವೋ ಬ್ರಾಹ್ಮಣಮಾಪೃಚ್ಛ್ಯ ಧರ್ಮಾದ್ಗಾರ್ಹಸ್ಥ್ಯತಶ್ಚ್ಯುತಃ ।
ಸ ಪಾರ್ಷದೋ ಹಿಮಪ್ರಸ್ಥಂ ಜಗಾಮ ತಪಸೇ ತತಃ ॥ ೧೧೩ ॥

---

೧೦೮. ಬೇರೆ ಯಾವನೇ ಆಗಲಿ ಮಹೇಶ್ವರನನ್ನು ಳಿದು ಕರ್ಮವನ್ನು ಮಾಡುವನೊ, ಅವನ ಕರ್ಮದ ಪರಿಪಾಕವೂ ಸಹ ದಕ್ಷಪ್ರಜೇಶ್ವರನು ಮಾಡಿದ ಯಜ್ಞದ ಸಿದ್ಧಿಯಂತೆಯೇ ಆಗುವುದು.

೧೦೯. ಆದುದರಿಂದ ದಕ್ಷನು ಮಾಡಿದ ಈ ಯಜ್ಞದ ವಿಚಾರವನ್ನು ಕೇಳಿ ಇನ್ನುಮೇಲೆ ಎಲ್ಲಿಯೂ ಯಾವನೂ ಯಾವ ಕರ್ಮವನ್ನೂ ಶಿವರಹಿತವಾಗಿ ಮಾಡುವುದಿಲ್ಲ.''

೧೧೦. ಬ್ರಹ್ಮದೇವನ ಮಾತುಗಳನ್ನು ಕೇಳಿ ಮಹಾದೇವನು ಮುಗುಳ್ನಗೆಯನ್ನು ಬೀರುತ್ತ ವೀರಭದ್ರನನ್ನು ಕುರಿತು ''ಎಲ್ಲವನ್ನೂ ಮೊದಲಿದ್ದಂತೆಯೇ ಸರಿಪಡಿಸು'' ಎಂದು ಅಪ್ಪಣೆಯನ್ನು ಮಾಡಿದನು.

೧೧೧. ತಂದೆಯಾದ ಪರಮಶಿವನ ಅಪ್ಪಣೆಯನ್ನು ಶಿರಸಾವಹಿಸಿ ವೀರಭದ್ರನು ಸುಚ್ಚುನೂರಾಗಿದ್ದ ದಕ್ಷನ ಮುಖವೊಂದನ್ನುಳಿದು ಮಿಕ್ಕೆಲ್ಲವನ್ನೂ ಮುನ್ನಿನಂತೆಯೇ ಸಜ್ಜುಗೊಳಿಸಿದನು.

೧೧೨. ''ಮಹೇಶ್ವರನನ್ನು ಯಾರು ನಿಂದಿಸುವರೊ, ಅವರು ಮೂಗರೂ ಪಶುಸಮಾನರೂ ಆಗುವುದೇ ನಿಶ್ಚಯವು'' ಎಂದು ಹೇಳುತ್ತ ಗಣನಾಯಕನಾದ ವೀರಭದ್ರನು ದಕ್ಷನಿಗೆ ಮೇಕೆಯ ಮುಖವೊಂದನ್ನು ಜೋಡಿಸಿದನು.

೧೧೩. ಬಳಿಕ ಮಹಾದೇವನು ಬ್ರಹ್ಮನ ಅನುಜ್ಞೆಯನ್ನು ಪಡೆದು ಪತ್ನೀವಿಯೋಗದಿಂದ ಗೃಹಸ್ಥಾಶ್ರಮವನ್ನು ಕಳೆದುಕೊಂಡು ತಪಸ್ಸನ್ನು ಮಾಡಲು ತನ್ನ ಪಾರ್ಷದಗಣಗಳೊಡನೆ ಹಿಮಾಚಲವನ್ನು ಕುರಿತು ಹೊರಟುಹೋದನು.

ಅನಾಶ್ರಮವತಾ ಪುಂಸಾ ಯತಃ ಕಾಲೋ ಮನಾಗಪಿ ।
ಮುಧಾ ಕಲಯಿತವ್ಯೋ ನ ತಸ್ಮಾಚ್ಛ್ರೇಯಃ ಸದಾಶ್ರಮಃ ॥ ೧೧೪ ॥
ಅತಃ ಸ ಸರ್ವತಪಸಾಂ ಫಲದಾತಾ ಮಹೇಶ್ವರಃ ।
ತಪಶ್ಚಚಾರ ಸಗಣೋ ಬ್ರಹ್ಮಾ ದಕ್ಷಂ ತ್ವಶಿಕ್ಷಯತ್ ॥ ೧೧೫ ॥
ಹರನಿಂದಾಸಮುದ್ಭೂತಪಾಪಪಂಕಂ ಸುದುಸ್ತ್ಯಜಂ ।
ಯದಿ ಕ್ಷಾಲಯಿತುಂ ಕಾಂಕ್ಷಾ ತದಾ ವಾರಾಣಸೀಂ ವ್ರಜ ॥ ೧೧೬ ॥
ಪ್ರಾಪ್ಯ ವಾರಾಣಸೀಂ ಪುಣ್ಯಾಂ ಮಹಾಪಾಪೌಘಹಾರಿಣೀಂ ।
ಕುರು ಲಿಂಗಪ್ರತಿಷ್ಠಾಂ ತ್ವಂ ತೇನ ಶಂಭುಃ ಸ ತುಷ್ಯತಿ ॥ ೧೧೭ ॥
ತುಷ್ಟೇ ಮಹೇಶ್ವರೇ ತುಷ್ಟಂ ಜಗದೇತಚ್ಚರಾಚರಂ ।
ನಾನ್ಯತ್ರ ಪಾಪಂ ತೇ ಗಂತೃ ವಿನಾ ವಾರಾಣಸೀಂ ಪುರೀಂ ॥ ೧೧೮ ॥
ಬ್ರಹ್ಮಹತ್ಯಾದಿಪಾಪಾನಾಂ ಪ್ರಾಯಶ್ಚಿತ್ತಂ ಮನೀಷಿಭಿಃ ।
ಪ್ರೋಕ್ತಂ ನ ಹರನಿಂದಾಯಾಸ್ತತ್ರ ಕಾಶ್ಯೇವ ಕೇವಲಂ ॥ ೧೧೯ ॥

---

೧೧೪. ಮನುಷ್ಯನು ಅಲ್ಪಕಾಲವನ್ನೂ ಸಹ ಅನಾಶ್ರಮಿಯಾಗಿ ಕಳೆಯಬಾರದೆಂಬ ಶಾಸ್ತ್ರವಾಕ್ಯದಿಂದ ವ್ಯರ್ಥ ಕಾಲಕ್ಷೇಪಕ್ಕಿಂತಲೂ ಯಾವುದಾದರೊಂದು ಆಶ್ರಮದ ಧರ್ಮವನ್ನು ಪಾಲಿಸುವುದೇ ಶ್ರೇಯಸ್ಕರವು.

೧೧೫. ಆದುದರಿಂದಲೇ ಸಕಲ ತಪಸ್ಸುಗಳಿಗೂ ಫಲವನ್ನು ಕೊಡುವವನಾದರೂ ಈಶ್ವರನು ತಾನೇ ಗಣಸಹಿತನಾಗಿ ಹಿಮವತ್ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಇತ್ತ ಬ್ರಹ್ಮನೂ ದಕ್ಷನನ್ನು ಬಹು ವಿಧವಾಗಿ ಉಪದೇಶಗಳಿಂದ ಶಿಕ್ಷಿಸಿದನು.

೧೧೬. ದಕ್ಷನೆ! ಈಶ್ವರನಿಂದೆಯಿಂದ ಉದ್ಭವಿಸಿದ ದುಸ್ತ್ಯಜವಾದ ನಿನ್ನ ಪಾತಕವನ್ನು ತೊಳೆದುಕೊಳ್ಳಲೆಳಸುವೆಯಾದರೆ ನೀನು ಬೇಗ ವಾರಾಣಸೀ ಕ್ಷೇತ್ರಕ್ಕೆ ಪ್ರಯಾಣವನ್ನು ಮಾಡು.

೧೧೭. ಮಹಾಪಾತಕಗಳ ಸಮೂಹಗಳನ್ನೂ ಸಹ ಕಳೆಯುವ ಪುಣ್ಯಕ್ಷೇತ್ರವಾದ ವಾರಾಣಸಿಯನ್ನು ಸೇರಿದಕೂಡಲೆ ಅಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠೆಮಾಡು. ಅದರಿಂದ ಮಹಾದೇವನು ಪ್ರಸನ್ನನಾಗುವನು.

೧೧೮. ಆತನೊಬ್ಬನು ಸಂತುಷ್ಟನಾದರೆ ಚರಾಚರಾತ್ಮಕವಾದ ಈ ಸಕಲ ಬ್ರಹ್ಮಾಂಡವೂ ಸಂತುಷ್ಟವಾದಂತೆಯೇ ಸರಿ. ವಾರಾಣಸೀಪುರಿಯನ್ನು ಬಿಟ್ಟರೆ ಮತ್ತೆಲ್ಲಿಯೂ ನಿನ್ನ ಮಹಾಪಾತಕವು ನಾಶವಾಗುವುದಿಲ್ಲ.

೧೧೯. ಬ್ರಹ್ಮಹತ್ಯೆಯೇ ಮೊದಲಾದ ಪಾತಕಗಳಿಗೂ ಪ್ರಾಜ್ಞರಾದವರು ಪ್ರಾಯಶ್ಚಿತ್ತಗಳನ್ನು ಹೇಳಿರುವರು. ಆದರೆ ಈಶ್ವರನಿಂದೆಗೆ ಯಾವುದನ್ನೂ ಹೇಳಿಲ್ಲ. ಅದಕ್ಕೆ ಕಾಶೀಕ್ಷೇತ್ರದ ಸೇವೆಯೊಂದೇ ಪ್ರಾಯಶ್ಚಿತ್ತವು.

ಕಾಶ್ಯಾಂ ಲಿಂಗಪ್ರತಿಷ್ಠಾ ಯೈಃ ಕೃತಾಽತ್ರ ಸುಕೃತಾತ್ಮಭಿಃ ।
ಸರ್ವೇ ಧರ್ಮಾಃ ಕೃತಾಸ್ತೈಸ್ತು ತ ಏವ ಪುರುಷಾರ್ಥಿನಃ ॥ ೧೨೦ ॥
ಇತ್ಯಾಕರ್ಣ್ಯ ವಿಧೇರ್ವಾಕ್ಯಂ ದಕ್ಷಃ ಪ್ರಾಪ್ಯಾಥ ಸತ್ವರಂ ।
ಅವಿಮುಕ್ತಂ ಮಹಾಕ್ಷೇತ್ರಂ ತತಾಪ ಪರಮಂ ತಪಃ ॥ ೧೨೧ ॥
ಸಂಸ್ಥಾಪ್ಯ ಲಿಂಗಂ ವಿಧಿವಲ್ಲಿಂಗಾರಾಧನತತ್ಪರಃ ।
ನ ವೇತ್ತಿ ಲಿಂಗಾದಪರಂ ಸ ಕಿಂಚಿಜ್ಜಗತೀತಲೇ ॥ ೧೨೨ ॥
ದಿವಾನಿಶಂ ಮಹೇಶಾನಂ ಪರಿಷ್ಟೌತಿ ಸಮರ್ಚತಿ ।
ನಮತಿ ಧ್ಯಾಯತೀಕ್ಷೇತ ದಕ್ಷೋ ದಕ್ಷಪ್ರಜಾಪತಿಃ ॥ ೧೨೩ ॥
ಏಕಚಿತ್ತಸ್ಯ ದಕ್ಷಸ್ಯ ಧ್ಯಾಯತೋ ಲಿಂಗಮೈಶ್ವರಂ ।
ಸಮಾಃ ಸಹಸ್ರಮಗಮನ್ಮಿತಂ ದ್ವಾದಶಸಂಖ್ಯಯಾ ॥ ೧೨೪ ॥
ಮೇನಾಂ ಯಾವತ್ಸತೀ ಪ್ರಾಪ್ಯ ಹಿಮಾಚಲಪತಿವ್ರತಾಂ ।
ಉಮಾರೂಪಾತಿತಪಸಾ ಪತಿಂ ಪ್ರಾಪ ಪಿನಾಕಿನಂ ।
ತಾವತ್ಸ ದಕ್ಷಸ್ತಪಸಿ ನಿಶ್ಚಲೋ ಲಿಂಗಮರ್ಚಯತ್ ॥ ೧೨೫ ॥

---

೧೨೦. ಯಾವ ಪುಣ್ಯಾತ್ಮರು ಈ ಕಾಶೀಕ್ಷೇತ್ರದಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿರುವರೊ, ಅವರು ಸಕಲ ಧರ್ಮಗಳನ್ನೂ ಆಚರಿಸಿದವರೆಂದು ತಿಳಿಯಬೇಕು. ಅವರೇ ಪುರುಷಾರ್ಥಗಳನ್ನು ಸಾಧಿಸುವರು.

೧೨೧. ಇಂತೆಂದ ತಂದೆಯಾದ ಬ್ರಹ್ಮದೇವನ ಮಾತುಗಳನ್ನು ಕೇಳಿ ದಕ್ಷಪ್ರಜೇಶ್ವರನು ಮಹಾವೇಗದಿಂದ ಅವಿಮುಕ್ತ ಮಹಾಕ್ಷೇತ್ರವನ್ನು ಸೇರಿ ಅಲ್ಲಿ ಅತ್ಯುಗ್ರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು.

೧೨೨. ವಿಧಿಪ್ರಕಾರವಾಗಿ ಒಂದು ಲಿಂಗವನ್ನು ಸ್ಥಾಪನೆಮಾಡಿ ಆ ಶಿವಲಿಂಗದ ಆರಾಧನೆಯಲ್ಲಿಯೇ ತತ್ಪರನಾಗಿದ್ದನು. ಭೂಮಂಡಲದಲ್ಲಿ ಈ ಲಿಂಗವನ್ನುಳಿದು ಅವನು ಬೇರೆ ಯಾವುದನ್ನೂ ತಿಳಿಯದಿದ್ದನು.

೧೨೩. ಕಾರ್ಯದಕ್ಷನಾದ ದಕ್ಷಪ್ರಜಾಪತಿಯು ರಾತ್ರಿಹಗಲುಗಳಲ್ಲಿಯೂ ಪರಮೇಶ್ವರನನ್ನೇ ಸ್ತೋತ್ರಮಾಡುವನು. ಪೂಜಿಸುವನು. ನಮಸ್ಕರಿಸುವನು. ಧ್ಯಾನಮಾಡುತ್ತಿರುವನು. ನೋಡುತ್ತಿರುವನು.

೧೨೪. ಇಂತು ದಕ್ಷನು ಏಕಾಗ್ರಚಿತ್ತನಾಗಿ ಮಹೇಶ್ವರಲಿಂಗದ ಸೇವೆಯಲ್ಲಿಯೇ ಸತತವೂ ಆಸಕ್ತನಾಗಿರುತ್ತಿರಲು ಹನ್ನೆರಡುಸಾವಿರ ವರ್ಷಗಳು ಕಳೆದುಹೋದುವು.

೧೨೫. ಆಗ ಸತೀದೇವಿಯು ಹಿಮವಂತನ ಪತ್ನಿಯೂ, ಪತಿವ್ರತೆಯೂ ಆದ ಮೇನಾದೇವಿಯನ್ನು ತಾಯಿಯಾಗಿ ಸ್ವೀಕರಿಸಿ ಆಕೆಯಲ್ಲಿ ಉಮೆಯೆಂಬ ಹೆಸರಿನಿಂದ ಅವತರಿಸಿ ಮಹತ್ತರವಾದ ತಪಸ್ಸಿನಿಂದ ಪುನಃ ಆ ಮಹೇಶ್ವರನನ್ನೇ

ತತಃ ಕಾಶೀಂ ಸಮಾಸಾದ್ಯ ಸಹಭರ್ತ್ರಾ ಗಿರೀಂದ್ರಜಾ ।
ದೃಷ್ಟ್ವಾ ತಂ ನಿಶ್ಚಲಹೃದಂ ಶಿವಲಿಂಗಾರ್ಚನೇ ರತಂ ॥ ೧೨೬ ॥
ಹರಂ ವ್ಯಜಿಜ್ಞಪದ್ದೇವೀ ಕ್ಷೀಣೋಽಯಂ ತಪಸಾ ವಿಭೋ ।
ಪ್ರಸಾದಯ ಕೃಪಾಸಿಂಧೋ ವರೇಣೈನಂ ಪ್ರಜಾಪತಿಂ ॥ ೧೨೭ ॥
ಇತ್ಯುಕ್ತೋಽಪರ್ಣಯಾ ಶಂಭುಃ ಪ್ರಾಹ ತಂ ದಕ್ಷಮಾಶಿತಾ ।
ವರಂ ಬ್ರೂಹಿ ಮಹಾಭಾಗ ದಾಸ್ಯಾಮಿ ಮನಸೇಪ್ಸಿತಂ ॥ ೧೨೮ ॥
ಇತೀಶೋದಿತಮಾಕರ್ಣ್ಯ ಪ್ರಣಮ್ಯ ಬಹುಶೋ ಹರಂ ।
ಸ್ತುತ್ವಾ ನಾನಾವಿಧೈಃ ಸ್ತೋತ್ರೈಃ ಪ್ರಸನ್ನಂ ವೀಕ್ಷ್ಯ ಶಂಕರಂ ॥ ೧೨೯ ॥
ಪ್ರೋವಾಚ ದೇವದೇವೇಶಂ ಯದಿ ದೇಯೋ ವರೋ ಮಮ ।
ತತ್ತ್ವದೀಯಪದದ್ವಂದ್ವೇ ನಿರ್ದ್ವಂದ್ವಾ ಭಕ್ತಿರಸ್ತು ಮೇ ॥ ೧೩೦ ॥
ಇದಂ ಚ ತೇ ಮಹಾಲಿಂಗಂ ಯನ್ಮಯಾತ್ರ ಪ್ರತಿಷ್ಠಿತಂ ।
ಅಸ್ಮಿನ್ಲಿಂಗೇ ತ್ವಯಾ ನಾಥ ಸ್ಥಾತವ್ಯಂ ಸರ್ವದೈವ ಹಿ ॥ ೧೩೧ ॥

---

ಪತಿಯನ್ನಾಗಿ ಪಡೆದಳು. ಅಲ್ಲಿಯವರೆಗೂ ಆ ದಕ್ಷಪ್ರಜಾಪತಿಯು ನಿಶ್ಚಲವಾದ ತಪಸ್ಸಿನಿಂದ ಆ ಶಿವಲಿಂಗದ ಪೂಜೆಯನ್ನೇ ಮಾಡುತ್ತಿದ್ದನು.

೧೨೬. ಬಳಿಕ ಪತಿಯೊಡನೆ ಗಿರಿರಾಜಕನ್ಯೆಯೂ ಕಾಶಿಗೆ ಬಂದು ಏಕಾಗ್ರವಾದ ಹೃದಯದಿಂದ ಶಿವಲಿಂಗಾರ್ಚನೆಯಲ್ಲಿಯೇ ನಿರತನಾಗಿದ್ದ ಆ ದಕ್ಷಬ್ರಹ್ಮನನ್ನು ನೋಡುವವಳಾದಳು.

೧೨೭. ಆಗಲಾಕೆಯು ಮಹಾದೇವನಿಗೆ ಇಂತೆಂದು ಬಿನ್ನವಿಸಿಕೊಂಡಳು. ಎಲೈ ನಾಥನೆ! ಈತನು ಉಗ್ರತಪಸ್ಸಿನಿಂದ ಅತ್ಯಂತ ಕೃಶನಾಗಿರುವನು. ಕೃಪಾಸಮುದ್ರನಾದ ನೀನು ಈ ಪ್ರಜೇಶ್ವರನ ವಿಷಯದಲ್ಲಿ ವರವನ್ನಿತ್ತು ಪ್ರಸನ್ನನಾಗು.

೧೨೮. ಇಂತೆಂದ ಗಿರಿಜೆಯ ಮಾತುಗಳನ್ನು ಲಾಲಿಸಿ ಮಹೇಶ್ವರನು ಪ್ರತ್ಯಕ್ಷನಾಗಿ ಆ ದಕ್ಷಪ್ರಜೇಶ್ವರನನ್ನು ಕುರಿತು "ಮಹಾಭಾಗನೆ! ನಿನಗೆ ಬೇಕಾದ ವರವನ್ನು ಹೇಳು. ನಿನ್ನ ಮನಸ್ಸಿನ ಇಷ್ಟಾರ್ಥವೆಲ್ಲವನ್ನೂ ನೆರವೇರಿಸುವೆನು" ಎಂದನು.

೧೨೯. ಮಹೇಶ್ವರನಾಡಿದ ನುಡಿಗಳನ್ನು ಕೇಳಿ ದಕ್ಷನು ಆತನಿಗೆ ಅನಂತ ನಮಸ್ಕಾರಗಳನ್ನು ಮಾಡಿ ಅನೇಕ ವಿಧಗಳಾದ ಸ್ತೋತ್ರಗಳಿಂದ ಹೊಗಳಿ ಆತನನ್ನು ಪ್ರಸನ್ನನನ್ನಾಗಿ ಮಾಡಿಕೊಂಡನು.

೧೩೦. ಅವನು ದೇವದೇವೇಶ್ವರನಲ್ಲಿ ಇಂತೆಂದು ಬೇಡಿಕೊಂಡನು. ನಾನು ವರಗಳಿಗೆ ಅರ್ಹನಾಗಿರುವೆನಾದರೆ ನಿನ್ನ ಪಾದಯುಗಳದಲ್ಲಿ ಅಸದೃಶವಾದ ಭಕ್ತಿಯುಂಟಾಗುವಂತೆ ಅನುಗ್ರಹಿಸು.

೧೩೧. ಅಲ್ಲದೆ ನಾನು ಇಲ್ಲಿ ಪ್ರತಿಷ್ಠೆಮಾಡಿರುವ ಈ ಲಿಂಗವು ನಿನ್ನ

ಮಯಾಪರಾದ್ಧಂ ಯದ್ದೇವ ತತ್ಕ್ಷಂತವ್ಯಂ ಕೃಪಾನಿಧೇ ।
ಏತ ಏವ ವರಾಃ ಸಂತು ಕಿಮನ್ಯೈರುತ್ತಮೈರ್ವರೈಃ ॥ ೧೩೨ ॥
ಇತಿ ಶ್ರುತ್ವಾ ಮಹಾದೇವಃ ಪ್ರಸನ್ನೋಽತಿತರಾಂ ಭವಃ ।
ಪ್ರೋವಾಚ ಚ ಯದುಕ್ತಂ ತೇ ತತ್ತಥಾಸ್ತು ನ ಚಾನ್ಯಥಾ ॥ ೧೩೩ ॥
ಅನ್ಯಚ್ಚ ತೇ ವರಂ ದದ್ಯಾಂ ತಚ್ಛೃಣುಷ್ವ ಪ್ರಜಾಪತೇ ।
ಯತ್ತ್ವಯಾ ಸ್ಥಾಪಿತಂ ಲಿಂಗಮೇತದ್ದಕ್ಷೇಶ್ವರಾಭಿಧಂ ॥ ೧೩೪ ॥
ಅಸ್ಯ ಸಂಸೇವನಾತ್ಪುಂಸಾಮಪರಾಧಸಹಸ್ರಕಂ ।
ಕ್ಷಮಿಷ್ಯೇಽಹಂ ನ ಸಂದೇಹಸ್ತಸ್ಮಾತ್ಪೂಜ್ಯಮಿದಂ ಜನೈಃ ॥ ೧೩೫ ॥
ತ್ವಂ ತು ಲಿಂಗಾರ್ಚನಾದಸ್ಮಾತ್ಸರ್ವಮಾನ್ಯೋ ಭವಿಷ್ಯಸಿ ।
ಪರಾರ್ಧದ್ವಿತಯಪ್ರಾಂತೇ ತತೋ ಮೋಕ್ಷಮವಾಪ್ಸ್ಯಸಿ ॥ ೧೩೬ ॥
ಇತ್ಯುಕ್ತ್ವಾ ದೇವದೇವೇಶಸ್ತಸ್ಮಿನ್ಲಿಂಗೇ ಲಯಂ ಯಯೌ ।
ದಕ್ಷೋಽಪಿ ಗತವಾನ್ಗೇಹಂ ಪರಿಪ್ರಾಪ್ತಮನೋರಥಃ ॥ ೧೩೭ ॥

---

ರೂಪಾಂತರವಾಗಿರುವುದು. ಸ್ವಾಮಿಯೆ! ನೀನು ಈ ಲಿಂಗದಲ್ಲಿ ಸರ್ವ ಕಾಲಗಳಲ್ಲಿಯೂ ಸನ್ನಿಧಾನವನ್ನು ಅನುಗ್ರಹಿಸುತ್ತಿರಬೇಕು.

೧೩೨. ದೇವದೇವ! ನಾನು ಹಿಂದೆ ಮಾಡಿರುವ ಮಹಾಪರಾಧವನ್ನು ಕೃಪಾನಿಧಿಯಾದ ನೀನು ಕ್ಷಮಿಸಬೇಕು. ಇಷ್ಟು ವರಗಳನ್ನು ನೀನಿತ್ತರೆ ಸಾಕು. ಇತರ ಉತ್ತಮ ವರಗಳನ್ನು ಪಡೆಯುವುದರಿಂದೇನು?

೧೩೩. ಈ ಮಾತನ್ನು ಕೇಳಿ ಮಹಾದೇವನು ಅತ್ಯಂತವಾಗಿ ಪ್ರಸನ್ನನಾಗಿ ಮತ್ತೆ ಹೇಳತೊಡಗಿದನು. "ನೀನು ಕೇಳಿಕೊಂಡುದೆಲ್ಲವೂ ಸತ್ಯವಾಗಿ ನಡೆಯುವುದು. ಸುಳ್ಳಾಗಲಾರದು.

೧೩೪. ಪ್ರಜಾಪತಿಯೆ! ನಿನಗೆ ಬೇರೊಂದು ವರವನ್ನೂ ಕೊಡುವೆನು. ಅದನ್ನು ಕೇಳುವವನಾಗು. ನೀನು ಸ್ಥಾಪಿಸಿರುವ ಈ ಲಿಂಗವು ದಕ್ಷೇಶ್ವರ ಮಹಾಲಿಂಗವೆಂದು ಪ್ರಖ್ಯಾತಿಯನ್ನು ಪಡೆಯಲಿ.

೧೩೫. ಇದರ ಸೇವನೆಯನ್ನು ಮಾಡುವುದರಿಂದ ನಾನು ಮಾನವರ ಸಾವಿರಾರು ಅಪರಾಧಗಳನ್ನಾದರೂ ಕ್ಷಮಿಸುವೆನು. ಇದರಲ್ಲಿ ಸಂಶಯವಿಲ್ಲ. ಆದುದರಿಂದ ಮಾನವರು ಇದನ್ನು ಯಾವಾಗಲೂ ಪೂಜಿಸುತ್ತಿರಬೇಕು.

೧೩೬. ನೀನೂ ಈ ಲಿಂಗವನ್ನು ಪೂಜೆಮಾಡಿದುದರ ಫಲವಾಗಿ ಸಕಲರಲ್ಲಿಯೂ ಪೂಜ್ಯತೆಯನ್ನು ಪಡೆಯುವೆ. ಬ್ರಹ್ಮನ ಎರಡು ಪರಾರ್ಧಗಳು ಕಳೆದ ಮೇಲೆ ನೀನು ಮೋಕ್ಷವನ್ನು ಪಡೆಯುವೆ."

೧೩೭. ಇಂತೆಂದು ವರಗಳನ್ನಿತ್ತು ದೇವೇಶ್ವರನು ಆ ಲಿಂಗದಲ್ಲಿಯೇ ಅಂತರ್ಧಾನವನ್ನು ತಾಳಿದನು. ದಕ್ಷನೂ ತನ್ನ ಮನೋಭೀಷ್ಟಗಳನ್ನೆಲ್ಲ ಪಡೆದವನಾಗಿ ಮನೆಗೆ ಹಿಂದಿರುಗಿದನು.

ಸ್ಕಂದ ಉವಾಚ :—

ಇತ್ಯಗಸ್ತ್ಯ ಸಮಾಖ್ಯಾತೋ ದಕ್ಷೇಶ್ವರಸಮುದ್ಭವಃ ।
ಯಂ ಶ್ರುತ್ವಾ ಮುಚ್ಯತೇ ಜಂತುರಪರಾಧಶತೈರಪಿ ॥ ೧೩೮ ॥
ಶ್ರುತ್ವಾಖ್ಯಾನಮಿದಂ ಪುಣ್ಯಂ ದಕ್ಷೇಶ್ವರಸಮುದ್ಭವಂ ।
ನರೋ ನ ಲಿಪ್ಯತೇ ಪಾಪೈರಪರಾಧಾಲಯೋಽಪಿ ಹಿ ॥ ೧೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ದಕ್ಷೇಶ್ವರಪ್ರಾದುರ್ಭಾವವರ್ಣನಂ" ನಾಮ ನವಾಶೀತಿತಮೋಽಧ್ಯಾಯಃ

---

೧೩೮. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ದಕ್ಷೇಶ್ವರ ಮಹಾಲಿಂಗವು ಉದ್ಭವವಾದ ಪ್ರಕಾರವನ್ನು ನಿನಗೆ ತಿಳಿಸಿರುವೆನು. ಈ ಚರಿತ್ರೆಯನ್ನು ಕೇಳುವುದರಿಂದಲೇ ಮಾನವನು ನೂರಾರು ಅಪರಾಧಗಳಿಂದಲೂ ಮುಕ್ತನಾಗುವನು.

೧೩೯. ದಕ್ಷೇಶ್ವರನ ಆವಿರ್ಭಾವವನ್ನೊಳಕೊಂಡಿರುವ ಈ ಅಧ್ಯಾಯವನ್ನು ಕೇಳಿದಂತಹ ನರನು ಪಾತಕಗಳಿಗೆ ನೆಲೆಯೆನಿಸಿದ್ದರೂ ಅವುಗಳಿಂದ ಸ್ವಲ್ಪವೂ ಲೇಪಿತನಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ದಕ್ಷೇಶ್ವರಪ್ರಾದುರ್ಭಾವವರ್ಣನ"ವೆಂಬ ಎಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವತಿತಮೋಽಧ್ಯಾಯಃ

### ಪಾರ್ವತೀಶ್ವರಮಾಹಾತ್ಮ್ಯವರ್ಣನಂ

**ಅಗಸ್ತ್ಯ ಉವಾಚ :—**

**ಪಾರ್ವತೀಹೃದಯಾನಂದ ಪಾರ್ವತೀಶಸಮುದ್ಭವಂ ।**
**ಕಥಯೇಹ ಯದುದ್ದಿಷ್ಟಂ ಭವತಾ ಪ್ರಾಗಘಾಪಹಂ ॥ ೧ ॥**

**ಸ್ಕಂದ ಉವಾಚ :—**

**ಶೃಣ್ವಗಸ್ತೇ ಯದಾ ಮೇನಾ ಹಿಮಾಚಲಪತಿವ್ರತಾ ।**
**ಗಿರೀಂದ್ರಜಾಂ ಸುತಾಮಾಹ ಪುತ್ರಿ ತೇಽಸ್ಯ ಮಹೇಶಿತುಃ ॥ ೨ ॥**
**ಕಿಂ ಸ್ಥಾನಂ ವಸತಿರ್ವಾ ಕಾ ಕೋ ಬಂಧುರ್ವೇತ್ಸಿ ಕಿಂಚನ ।**
**ಪ್ರಾಯೋ ಗೃಹಂ ನ ಜಾಮಾತುರಸ್ಯ ಕೋಽಪಿ ಚ ಕುತ್ರಚಿತ್ ॥ ೩ ॥**
**ನಿಶಮ್ಯೇತಿ ವಚೋ ಮಾತುರತಿಹ್ರೀಣಾ ಗಿರೀಂದ್ರಜಾ ।**
**ಆಸಾದ್ಯಾವಸರಂ ಶಂಭುಂ ನತ್ವಾ ಗೌರೀ ವ್ಯಜಿಜ್ಞಪತ್ ॥ ೪ ॥**

---

### ಕನ್ನಡದ ಅನುವಾದ

#### ಪಾರ್ವತೀಶ್ವರಮಾಹಾತ್ಮ್ಯವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಪಾರ್ವತೀದೇವಿಯ ಹೃದಯಕ್ಕೆ ಆನಂದವನ್ನುಂಟುಮಾಡುವ ಸ್ಕಂದನೆ! ಹಿಂದೆ ನೀನು ಪಾರ್ವತೀಶ್ವರಮಹಾಲಿಂಗದ ಉದ್ಭವವನ್ನು ತಿಳಿಸುವ ಉದ್ದೇಶವನ್ನು ತೋರಿಸಿರುವೆ. ಈಗ ಸಕಲ ಪಾತಕ ಪರಿಹಾರಕವಾದ ಆ ಚರಿತ್ರೆಯನ್ನು ನನಗೆ ಕಥನಮಾಡು.

೨–೩. ಸ್ಕಂದನು ಹೇಳುತ್ತಾನೆ:–ಅಗಸ್ತ್ಯಮುನಿಯೆ! ಕೇಳು. ಹಿಮವಂತ ರಾಜನ ಪತ್ನಿಯೂ ಪತಿವ್ರತೆಯೂ ಆದ ಮೇನಾದೇವಿಯು ಪಾರ್ವತಿಯನ್ನು ಮಗಳಾಗಿ ಪಡೆದು ಪೋಷಿಸುತ್ತಿರಲು ಒಂದಾನೊಂದು ದಿನ ಆಕೆಯನ್ನು ಕುರಿತು ಇಂತೆಂದಳು. "ಮಗಳೆ! ನಿನ್ನ ಪ್ರಿಯನಾದ ಈ ಮಹೇಶ್ವರನಿಗೆ ಅಧಿಕಾರವು ಯಾವುದು? ಎಲ್ಲಿ ವಾಸಮಾಡುತ್ತಿರುವನು? ಈತನಿಗೆ ಇಷ್ಟಬಂಧುವು ಯಾವನು? ಯಾವುದನ್ನೂ ನೀನರಿಯೆ. ನನ್ನ ಅಳಿಯನ ಗೃಹವು ಯಾವುದು—ಎಲ್ಲಿರುವುದೆಂಬುದನ್ನೂ ಸಹ ತಿಳಿಯಲಾರದೆ ಇರುವೆವು."

೪. ತನ್ನ ತಾಯಿಯ ಈ ಮಾತನ್ನು ಕೇಳಿ ಗಿರಿಜೆಯು ಅತ್ಯಂತ ಲಜ್ಜೆಯಿಂದ ಕೂಡಿದವಳಾಗಿ ಸುಸಮಯವನ್ನೇ ನಿರೀಕ್ಷಿಸುತ್ತಿದ್ದು ಒಮ್ಮೆ ಪರಮೇಶ್ವರನಿಗೆ ನಮಸ್ಕಾರವನ್ನು ಮಾಡಿ ವಿಜ್ಞಾಪಿಸಿಕೊಂಡಳು.

ಮಯಾ ಶ್ವಶ್ರೂಗೃಹಂ ಕಾಂತ ಗಮ್ಯಮದ್ಯ ವಿನಿಶ್ಚಿತಂ ।
ನಾಥಾತ್ರ ನೈವ ವಸ್ತವ್ಯಂ ನಯ ಮಾಂ ಸ್ವನಿಕೇತನಂ ॥ ೫ ॥
ಗಿರೀಂದ್ರಜಾಗಿರಂ ಶ್ರುತ್ವಾ ಗಿರೀಶ ಇತಿತತ್ವವಿತ್ ।
ಹಿತ್ವಾ ಹಿಮಗಿರಿಂ ಪ್ರಾಪ್ತೋ ನಿಜಮಾನಂದಕಾನನಂ ॥ ೬ ॥
ಪ್ರಾಪ್ಯಾನಂದವನಂ ದೇವೀ ಪರಮಾನಂದಕಾರಣಂ ।
ವಿಸ್ಮೃತ್ಯ ಪಿತೃಸಂವಾಸಂ ಜಾತಾ ಚಾನಂದರೂಪಿಣೀ ॥ ೭ ॥
ಅಥ ವಿಜ್ಞಾಪಯಾಂಚಕ್ರೇ ಗೌರೀ ಗಿರಿಶಮೇಕದಾ ।
ಅಚ್ಛಿನ್ನಾನಂದಸಂದೋಹಃ ಕುತಃ ಕ್ಷೇತ್ರೇಽತ್ರ ತದ್ವದ ॥ ೮ ॥
ಇತಿ ಗೌರೀರಿತಂ ಶ್ರುತ್ವಾ ಪ್ರತ್ಯುವಾಚ ಪಿನಾಕಧೃಕ್ ॥ ೯ ॥
ಪಂಚಕ್ರೋಶಪರೀಮಾಣೇ ಕ್ಷೇತ್ರೇಽಸ್ಮಿನ್ಮುಕ್ತಿಸದ್ಮನಿ ।
ತಿಲಾಂತರಂ ನ ದೇವ್ಯಸ್ತಿ ವಿನಾ ಲಿಂಗಂ ಹಿ ಕುತ್ರಚಿತ್ ॥ ೧೦ ॥
ಏಕೈಕಂ ಪರಿತೋ ಲಿಂಗಂ ಕ್ರೋಶಂ ಕ್ರೋಶಂ ಚ ಯಾವನಿಃ ।
ಅನ್ಯತ್ರಾಪಿ ಹಿ ಸಾ ದೇವಿ ಭವೇದಾನಂದಕಾರಣಂ ॥ ೧೧ ॥

---

೫. ನಾಥನೆ! "ಇಂದು ನಾನು ಅತ್ತೆಯಮನೆಗೆ ಹೋಗಬೇಕೆಂದು ನಿಶ್ಚಯವನ್ನು ಮಾಡಿಕೊಂಡಿರುವೆನು. ಪ್ರಾಣಕಾಂತನೆ! ಇನ್ನು ನಾವು ಇಲ್ಲಿ ವಾಸಮಾಡಬಾರದು. ನನ್ನನ್ನು ನಿನ್ನ ಮನೆಗೆ ಕರೆದುಕೊಂಡುಹೋಗು."

೬. ಗಿರಿರಾಜಪುತ್ರಿಯ ಈ ಮಾತುಗಳಿಂದ ಮಹಾದೇವನು ಆಕೆಯ ಗೂಢಾಭಿಸಂಧಿಯನ್ನು ತಿಳಿದವನಾಗಿ ಹಿಮಾಚಲವನ್ನು ಬಿಟ್ಟು ತನ್ನ ಅನಾದಿ ನಿವಾಸವಾದ ಆನಂದಕಾನನಕ್ಕೆ ಬಂದನು.

೭. ಪರಮಾನಂದಕ್ಕೆ ಕಾರಣವಾದ ಆನಂದಕಾನನವನ್ನು ಸೇರಿದಕೂಡಲೆ ಪಾರ್ವತೀದೇವಿಯು ತಂದೆಯ ಮನೆಯಲ್ಲಿ ವಾಸಮಾಡಿದುದನ್ನೇ ಮರೆತು ಆನಂದಸ್ವರೂಪಳೇ ಆಗಿರುತ್ತಿದ್ದಳು.

೮. ಒಮ್ಮೆ ಗೌರಿಯು ಮಹೇಶ್ವರನನ್ನು ಕುರಿತು, "ಈ ಕ್ಷೇತ್ರದಲ್ಲಿ ನನಗೆ ನಿರಂತರವೂ, ಅಪಾರವೂ ಆದ ಆನಂದವುಂಟಾಗಿರುವುದಕ್ಕೆ ಕಾರಣವನ್ನು ತಿಳಿಸು" ಎಂಬುದಾಗಿ ವಿಜ್ಞಾಪನೆಯನ್ನು ಮಾಡಿದಳು.

೯. ಇಂತು ಗೌರಿಯು ಹೇಳಿದುದನ್ನು ಕೇಳಿ ಪಿನಾಕಪಾಣಿಯು ಪ್ರತ್ಯುತ್ತರವನ್ನು ಹೇಳತೊಡಗಿದನು.

೧೦. "ಐದು ಕ್ರೋಶಗಳ ವಿಸ್ತಾರವುಳ್ಳ ಈ ಕ್ಷೇತ್ರವೆಲ್ಲವೂ ಮೋಕ್ಷದ ನೆಲೆಮನೆಯಾಗಿರುವುದು. ಎಲೌ ದೇವಿಯೆ! ಈ ಸ್ಥಳದಲ್ಲಿ ಎಲ್ಲಿಯೂ ಶಿವಲಿಂಗವಿಲ್ಲದ ಸ್ಥಳವು ಎಳ್ಳಿನ ಮಾತ್ರವೂ ಇರುವುದಿಲ್ಲ.

೧೧. ದೇವಿಯೆ! ಇಲ್ಲಿನ ಒಂದೊಂದು ಲಿಂಗದ ಸುತ್ತಲೂ ಒಂದು

ಅತ್ರಾನಂದವನೇ ದೇವಿ ಪರಮಾನಂದಜನ್ಮನಿ ।
ಪರಮಾನಂದರೂಪಾಣಿ ಸಂತಿ ಲಿಂಗಾನ್ಯನೇಕಶಃ ॥ ೧೨ ॥
ಚತುರ್ದಶಸು ಲೋಕೇಷು ಕೃತಿನೋ ಯೇ ವಸಂತಿ ಹಿ ।
ತೈಃ ಸ್ವನಾಮ್ನೇಹ ಲಿಂಗಾನಿ ಕೃತ್ವಾಽಪಿ ಕೃತಕೃತ್ಯತಾ ॥ ೧೩ ॥
ಅತ್ರ ಯೇನ ಮಹಾದೇವಿ ಲಿಂಗಂ ಸಂಸ್ಥಾಪಿತಂ ಮಮ ।
ವೇತ್ತಿ ತಚ್ಛ್ರೇಯಸಃ ಸಂಖ್ಯಾಂ ಶೇಷೋಽಪಿ ನ ವಿಶೇಷವಿತ್ ॥ ೧೪ ॥
ಪರಿಚ್ಛೇದವ್ಯತೀತಸ್ಯಾನಂದಸ್ಯ ಪರಕಾರಣಂ ।
ಅತಸ್ತ್ವಿದಂ ಪರಂ ಕ್ಷೇತ್ರಂ ಲಿಂಗೈರ್ಭೂಯೋಭಿರದ್ರಿಜೇ ॥ ೧೫ ॥
ನಿಶಮ್ಯೇತಿ ಮಹಾದೇವೀ ಪುನಃ ಪಾದೌ ಪ್ರಣಮ್ಯ ಚ ।
ದೇಹ್ಯನುಜ್ಞಾಂ ಮಹಾದೇವ ಲಿಂಗಸಂಸ್ಥಾಪನಾಯ ಮೇ ॥ ೧೬ ॥
ಪತ್ಯುರಾಜ್ಞಾಂ ಸಮಾಸಾದ್ಯ ಯಚ್ಛೇಚ್ಛ್ರೇಯಃ ಪತಿವ್ರತಾ ।
ನ ತಸ್ಯಾಃ ಶ್ರೇಯಸೋ ಹಾನಿಃ ಸಂವರ್ತೇಽಪಿ ಕದಾಚನ ॥ ೧೭ ॥

---

ಕ್ರೋಶದವರೆಗಿನ ಯಾವ ಭೂಮಿಯಿರುವುದೊ, ಅದನ್ನು ಸೇವಿಸಲು ಆ ಸೇವೆಯೇ ಇತರ ಸ್ಥಳಗಳಲ್ಲಿ ವಾಸಮಾಡುವ ಮನುಷ್ಯರ ಆನಂದಕ್ಕೂ ಕಾರಣವಾಗಿರುವುದು.

೧೨. ಪ್ರಿಯಳೆ! ಪರಮಾನಂದಕ್ಕೆ ಜನ್ಮಭೂಮಿಯೆನಿಸಿದ ಈ ಆನಂದ ಕಾನನದಲ್ಲಿ ಪರಮಾನಂದಸ್ವರೂಪಗಳಾದ ಅಸಂಖ್ಯಾತ ಮಹಾಲಿಂಗಗಳಿರುವುವು.

೧೩. ಹದಿನಾಲ್ಕು ಲೋಕಗಳಲ್ಲಿಯೂ ಯಾರು ಕೃತಕೃತ್ಯರೆನಿಸಿ ಬಾಳುತ್ತಿರುವರೊ, ಅವರಿಗೂ ಸಹ ತಮ್ಮ ತಮ್ಮ ಹೆಸರುಗಳೊಡಗೂಡಿದ ಲಿಂಗಗಳನ್ನು ಇಲ್ಲಿ ಸ್ಥಾಪಿಸಿದುದರಿಂದಲೇ ಕೃತಾರ್ಥತೆಯು ಲಭಿಸಿರುವುದು.

೧೪. ಮಹೇಶ್ವರಿಯೆ! ಇಲ್ಲಿ ಲಿಂಗವನ್ನು ಸ್ಥಾಪಿಸಿ ಯಾವನು ನನಗೆ ಪ್ರಿಯನಾಗಿರುವನೊ, ಅವನ ಶ್ರೇಯಸ್ಸಿನ ಇಯತ್ತೆಯನ್ನು ಸರ್ವವಿಶೇಷಜ್ಞನಾದ ಆದಿಶೇಷನೂ ತಿಳಿಯಲಾರನು.

೧೫. ಪರ್ವತರಾಜಕುಮಾರಿಯೆ! ಲೆಕ್ಕವಿಲ್ಲದಷ್ಟು ಮಹಾಲಿಂಗಗಳು ಇಲ್ಲಿ ನೆಲಸಿರುವುದರಿಂದಲೇ ಈ ಪ್ರದೇಶವು ಸರ್ವೋತ್ತಮಕ್ಷೇತ್ರವೆನಿಸಿ ವಿಚ್ಛಿತ್ತಿಯಿಲ್ಲದ ಉತ್ತಮವಾದ ಆನಂದಕ್ಕೆ ಕಾರಣವಾಗಿರುವುದು.

೧೬. ಇದನ್ನು ಕೇಳಿ ಮಹಾದೇವಿಯೂ ಮತ್ತೆ ಗಂಡನ ಪಾದಗಳಿಗೆ ನಮಸ್ಕರಿಸಿ, "ದೇವದೇವನೆ! ನನಗೂ ಒಂದು ಲಿಂಗವನ್ನು ಸ್ಥಾಪಿಸಲು ಅನುಜ್ಞೆಯನ್ನು ಕೊಡು.

೧೭. ಪತಿವ್ರತೆಯಾದ ಸ್ತ್ರೀಯು ಪತಿಯ ಆಜ್ಞೆಯನ್ನು ತೆಗೆದುಕೊಂಡೇ ಶ್ರೇಯಸ್ಕಾರ್ಯಗಳನ್ನೂ ಮಾಡಬೇಕು. ಹಾಗೆ ಮಾಡಿದ ಆಕೆಯ ಶ್ರೇಯಸ್ಸಿಗೆ ಪ್ರಳಯದಲ್ಲಿಯೂ ಸಹ ನಾಶವೆಂಬುದುಂಟಾಗದು" ಎಂದು ಪ್ರಾರ್ಥಿಸಿದಳು.

ಇತಿ ಪ್ರಸಾದ್ಯ ದೇವೇಶಮಾಜ್ಞಾಂ ಪ್ರಾಪ್ಯ ಮಹೇಶಿತುಃ ।
ಲಿಂಗಂ ಸಂಸ್ಥಾಪಿತಂ ಗೌರ್ಯಾ ಮಹಾದೇವಸಮೀಪತಃ ॥ ೧೮ ॥
ತಲ್ಲಿಂಗದರ್ಶನಾತ್ಪುಂಸಾಂ ಬ್ರಹ್ಮಹತ್ಯಾದಿಪಾತಕಂ ।
ವಿಲೀಯೇತ ನ ಸಂದೇಹೋ ದೇಹಬಂಧೋಽಪಿ ನೋ ಪುನಃ ॥ ೧೯ ॥
ತತ್ರ ಲಿಂಗೇ ವರೋ ದತ್ತೋ ದೇವದೇವೇನ ಯಃ ಪುನಃ ।
ನಿಶಾಮಯ ಮುನೇ ತಂ ತು ಭಕ್ತಾನಾಂ ಹಿತಕಾಮ್ಯಯಾ ॥ ೨೦ ॥
ಲಿಂಗಂ ಯಃ ಪಾರ್ವತೀಶಾಖ್ಯಂ ಕಾಶ್ಯಾಂ ಸಂಪೂಜಯಿಷ್ಯತಿ ।
ತದ್ದೇಹಾಪಚಿತಿಂ ಪ್ರಾಪ್ಯ ಕಾಶೀಲಿಂಗಂ ಭವಿಷ್ಯತಿ ॥ ೨೧ ॥
ಕಾಶೀಲಿಂಗತ್ವಮಾಸಾದ್ಯ ಮಾಮೇವಾನುಪ್ರವೇಕ್ಷ್ಯತಿ ।
ಚೈತ್ರ ಶುಕ್ಲತೃತೀಯಾಯಾಂ ಪಾರ್ವತೀಶಸಮರ್ಚನಾತ್ ।
ಇಹ ಸೌಭಾಗ್ಯಮಾಪ್ನೋತಿ ಪರತ್ರ ಚ ಶುಭಾಂ ಗತಿಂ ॥ ೨೨ ॥
ಪಾರ್ವತೀಶ್ವರಮಾರಾಧ್ಯ ಯೋಷಿದ್ವಾ ಪುರುಷೋಽಪಿ ವಾ ।
ನ ಗರ್ಭಮಾವಿಶೇದ್ಭೂಯೋ ಭವೇತ್ಸೌಭಾಗ್ಯಭಾಜನಂ ॥ ೨೩ ॥

---

೧೮. ಇಂತೆಂದು ಮಹಾದೇವನನ್ನು ಪ್ರಸನ್ನೀಕರಿಸಿಕೊಂಡು ಆತನ ಅಪ್ಪಣೆಯನ್ನು ಪಡೆದು ಪಾರ್ವತಿಯು ಮಹಾದೇವನ ಸಮೀಪದಲ್ಲಿಯೇ ತನ್ನ ಹೆಸರಿನಿಂದ ಒಂದು ಲಿಂಗವನ್ನು ಪ್ರತಿಷ್ಠಿಸಿದಳು.

೧೯. ಆ ಪಾರ್ವತೀಶ್ವರ ಮಹಾಲಿಂಗದ ದರ್ಶನವನ್ನು ತೆಗೆದುಕೊಳ್ಳುವುದರಿಂದ ಮನುಷ್ಯರಿಗೆ ಬ್ರಹ್ಮಹತ್ಯೆಯೇ ಮೊದಲಾದ ಪಾತಕಗಳು ತೊಲಗುವುದರಲ್ಲಿ ಸಂದೇಹವೇ ಇಲ್ಲವು. ಅಲ್ಲದೆ ಪ್ರಾಕೃತಶರೀರವನ್ನು ತ್ಯಜಿಸಿದಮೇಲೆ ಪುನಃ ದೇಹಬಂಧವೂ ಪ್ರಾಪ್ತವಾಗುವುದಿಲ್ಲ.

೨೦. ಮುನಿವರ್ಯನೆ! ಆ ಲಿಂಗದ ವಿಷಯದಲ್ಲಿ ಭಕ್ತರಿಗೆ ಹಿತವನ್ನುಂಟುಮಾಡುವವನಾಗಿ ಮಹಾದೇವನು ಯಾವ ವರವನ್ನು ಕೊಟ್ಟನೆಂಬುದನ್ನು ತಿಳಿಸುವೆನು, ಕೇಳುವವನಾಗು.

೨೧. ಕಾಶಿಯಲ್ಲಿರುವ ಈ ಪಾರ್ವತೀಶ್ವರಲಿಂಗವನ್ನು ಯಾವನು ಭಕ್ತಿಯಿಂದ ಪೂಜೆಮಾಡುವನೊ, ಅವನು ತನ್ನ ದೇಹವನ್ನು ತ್ಯಜಿಸಿದ ಮೇಲೆ ಕಾಶಿಯಲ್ಲಿಯೇ ಶಿವಲಿಂಗವಾಗಿ ಪರಿಣಮಿಸುವನು.

೨೨. ಕಾಶೀಲಿಂಗದ ರೂಪವನ್ನು ತಾಳಿ ಅಂತ್ಯದಲ್ಲಿ ನನ್ನಲ್ಲಿಯೇ ಪ್ರವೇಶಿಸುವನು. ಚೈತ್ರಶುಕ್ಲತೃತೀಯೆಯ ದಿನದಲ್ಲಿ ಪಾರ್ವತೀಶ್ವರನನ್ನು ಪೂಜಿಸುವುದರಿಂದ ಈ ಲೋಕದಲ್ಲಿ ಸಕಲ ಸೌಭಾಗ್ಯಗಳನ್ನೂ ಪಡೆಯುವುದಲ್ಲದೆ ಭಕ್ತನು ಕಡೆಯಲ್ಲಿ ಉತ್ತಮಗತಿಯನ್ನೂ ಪಡೆಯುವನು.

೨೩. ಪಾರ್ವತೀಶ್ವರನ ಆರಾಧನೆಯನ್ನು ಮಾಡಿದ ಸ್ತ್ರೀಯೇ ಆಗಲಿ,

ಪಾರ್ವತೀಶಸ್ಯ ಲಿಂಗಸ್ಯ ನಾಮಾಪಿ ಪರಿಗೃಹ್ಣತಃ ।
ಅಪಿ ಜನ್ಮಸಹಸ್ರಸ್ಯ ಪಾಪಂ ಕ್ಷಯತಿ ತತ್ಕ್ಷಣಾತ್ ॥ ೨೪ ॥
ಪಾರ್ವತೀಶಸ್ಯ ಮಾಹಾತ್ಮ್ಯಂ ಯಃ ಶ್ರೋಷ್ಯತಿ ನರೋತ್ತಮಃ ।
ಐಹಿಕಾಮುಷ್ಮಿಕಾನ್ಕಾಮಾನ್ಸ ಪ್ರಾಪ್ಸ್ಯತಿ ಮಹಾಮತಿಃ ॥ ೨೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಪಾರ್ವತೀಶ್ವರಮಾಹಾತ್ಮ್ಯವರ್ಣನಂ"
ನಾಮ ನವತಿತಮೋಽಧ್ಯಾಯಃ

---

ಪುರುಷನೇ ಆಗಲಿ, ಪುನಃ ಗರ್ಭವಾಸವನ್ನು ಮಾಡುವುದಿಲ್ಲ. ಅವರು ಸಕಲ ಸೌಭಾಗ್ಯಗಳ ನಿಧಿಗಳೆನಿಸುವರು.

೨೪. ಪಾರ್ವತೀಶ್ವರ ಮಹಾಲಿಂಗದ ಹೆಸರನ್ನು ಜಪಿಸುವುದರಿಂದಲೂ ಕ್ಷಣಮಾತ್ರದಲ್ಲಿಯೇ ಸಾವಿರಾರು ಜನ್ಮಗಳಲ್ಲಿ ಮಾಡಿದ ಪಾತಕಗಳೂ ಕ್ಷಯವನ್ನು ಹೊಂದುವುವು.

೨೫. ಮಹಾಬುದ್ಧಿಯಾದ ಯಾವ ಮನುಷ್ಯಶ್ರೇಷ್ಠನು ಈ ಪಾರ್ವತೀಶ್ವರನ ಮಾಹಾತ್ಮ್ಯೆಯನ್ನು ಕೇಳುವನೊ, ಅವನು ಇಹಲೋಕ ಪರಲೋಕಗಳೆರಡರಲ್ಲಿಯೂ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಪಾರ್ವತೀಶ್ವರಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕನವತಿತಮೋಽಧ್ಯಾಯಃ

## ಗಂಗೇಶ್ವರಮಹಿಮಾಖ್ಯಾನಂ

ಸ್ಕಂದ ಉವಾಚ :—

**ಪಾರ್ವತೀಶಸ್ಯ ಮಹಿಮಾ ಕಥಿತಸ್ತೇ ಮಯಾನಘ ।**
**ಮುನೇ ನಿಶಾಮಯೇದಾನೀಂ ಗಂಗೇಶ್ವರಸಮುದ್ಭವಂ ॥ ೧ ॥**
**ಯಂ ಶ್ರುತ್ವಾ ಯತ್ರ ಕುತ್ರಾಪಿ ಗಂಗಾಸ್ನಾನಫಲಂ ಲಭೇತ್ ।**
**ಚಕ್ರಪುಷ್ಕರಿಣೀತೀರ್ಥಂ ಯದಾ ಗಂಗಾ ಸಮಾಗತಾ ॥ ೨ ॥**
**ತೇನ ದೈಲೀಪಿನಾ ಸಾರ್ಧಮಸ್ಮಿನ್ನಾನಂದಕಾನನೇ ।**
**ಕ್ಷೇತ್ರಪ್ರಭಾವಮತುಲಂ ಜ್ಞಾತ್ವಾ ಶಂಭುಪರಿಗ್ರಹಾತ್ ॥ ೩ ॥**
**ಸ್ಮೃತ್ವಾ ಲಿಂಗಪ್ರತಿಷ್ಠಾಯಾಃ ಕಾಶ್ಯಾಂ ಲೋಕೋತ್ತರಂ ಫಲಂ ।**
**ಗಂಗಯಾ ಸ್ಥಾಪಿತಂ ಲಿಂಗಂ ವಿಶ್ವೇಶಾತ್ಪೂರ್ವತಃ ಶುಭಂ ॥ ೪ ॥**

---

## ಕನ್ನಡದ ಅನುವಾದ

### ಗಂಗೇಶ್ವರಮಹಿಮಾಖ್ಯಾನ

೧. ಸ್ಕಂದನು ಹೇಳುತ್ತಾನೆ:—ಪಾಪರಹಿತನಾದ ಎಲೈ ಮುನಿಶ್ರೇಷ್ಠನೆ! ನಿನಗೆ ಪಾರ್ವತೀಶ್ವರನ ಮಾಹಾತ್ಮ್ಯವನ್ನು ತಿಳಿಸಿರುವೆನು. ಇನ್ನು ಗಂಗೇಶ್ವರನು ಉದ್ಭವಿಸಿದ ಪ್ರಕಾರವನ್ನು ಕೇಳು.

೨–೩. ಈ ಕಥೆಯನ್ನು ಕೇಳಿದವರು ಯಾವ ಸ್ಥಳದಲ್ಲಿದ್ದರೂ ಗಂಗೆಯಲ್ಲಿ ಸ್ನಾನವನ್ನು ಮಾಡಿದ ಫಲವನ್ನು ಹೊಂದುವರು. ಗಂಗಾನದಿಯು ಮೊದಲು ಭೂಲೋಕಕ್ಕೆ ಇಳಿದು ಬಂದ ವೇಳೆಯಲ್ಲಿ ಭಗೀರಥಮಹಾರಾಜನನ್ನು ಹಿಂಬಾಲಿಸಿ ಬರುತ್ತ ಚಕ್ರಪುಷ್ಕರಿಣೀತೀರ್ಥವನ್ನು ಸೇರಿದಳು. ಆನಂದಕಾನನವನ್ನು ಮಹೇಶ್ವರನು ತನ್ನ ನಿವಾಸವಾಗಿ ಸ್ವೀಕರಿಸಿಕೊಂಡಿರುವುದರಿಂದಲೇ ಈ ಕ್ಷೇತ್ರದ ಪ್ರಭಾವವು ಅಸಮಾನವಾದುದೆಂಬುದನ್ನು ಆಕೆಯು ತಿಳಿದುಕೊಂಡಳು.

೪. ಕಾಶೀಕ್ಷೇತ್ರದಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸುವುದರಿಂದ ಲಭಿಸುವ ಉತ್ತಮೋತ್ತಮವಾದ ಫಲವನ್ನು ಸ್ಮರಿಸಿಕೊಂಡು ಆ ಗಂಗಾದೇವಿಯೂ ವಿಶ್ವೇಶ್ವರನಿಗೆ ಪೂರ್ವದಿಕ್ಕಿನಲ್ಲಿ ಪವಿತ್ರವಾದ ಒಂದು ಲಿಂಗವನ್ನು ಸ್ಥಾಪಿಸಿದಳು.

ಗಂಗೇಶ್ವರಸ್ಯ ಲಿಂಗಸ್ಯ ಕಾಶ್ಯಾಂ ದೃಷ್ಟಿಃ ಸುದುರ್ಲಭಾ ।
ತಿಥೌ ದಶಾಹರಾಯಾಂ ಚ ಯೋ ಗಂಗೇಶಂ ಸಮರ್ಚಯೇತ್ ॥ ೫ ॥
ತಸ್ಯ ಜನ್ಮಸಹಸ್ರಸ್ಯ ಪಾಪಂ ಸಂಕ್ಷೀಯತೇ ಕ್ಷಣಾತ್ ।
ಕಲೌ ಗಂಗೇಶ್ವರಂ ಲಿಂಗಂ ಗುಪ್ತಪ್ರಾಯಂ ಭವಿಷ್ಯತಿ ॥ ೬ ॥
ತಸ್ಯ ಸಂದರ್ಶನಂ ಪುಂಸಾಂ ಜಾಯತೇ ಪುಣ್ಯಹೇತವೇ ।
ದೃಷ್ಟಂ ಗಂಗೇಶ್ವರಂ ಲಿಂಗಂ ಯೇನ ಕಾಶ್ಯಾಂ ಸುದುರ್ಲಭಂ ॥ ೭ ॥
ಪ್ರತ್ಯಕ್ಷರೂಪಿಣೀ ಗಂಗಾ ತೇನ ದೃಷ್ಟಂ ನ ಸಂಶಯಃ ।
ಕಲೌ ಸುದುರ್ಲಭಾ ಗಂಗಾ ಸರ್ವಕಲ್ಮಷಹಾರಿಣೀ ॥ ೮ ॥
ಭವಿಷ್ಯತಿ ನ ಸಂದೇಹೋ ಮಿತ್ರಾವರುಣನಂದನ ।
ತತೋಽಪಿ ತಿಷ್ಯೇ ಸಂಪ್ರಾಪ್ತೇ ಕಾಶ್ಯತ್ಯಂತಂ ಸುದುರ್ಲಭಾ ॥ ೯ ॥
ತತೋಽಪಿ ದುರ್ಲಭಂ ಕಾಶ್ಯಾಂ ಲಿಂಗಂ ಗಂಗೇಶ್ವರಾಭಿಧಂ ।
ಯಸ್ಯ ಸಂದರ್ಶನಂ ಪುಂಸಾಂ ಭವೇತ್ಪಾಪಕ್ಷಯಾಯ ವೈ ॥ ೧೦ ॥

---

೫–೬. ಗಂಗೇಶ್ವರಲಿಂಗದ ದರ್ಶನವು ಕಾಶಿಯಲ್ಲಿ ಅತ್ಯಂತ ದುರ್ಲಭವಾಗಿರುವುದು. ಆಶ್ವಯುಜ ಶುದ್ಧಪಕ್ಷದ ದಶಮಿಯವರೆಗಿನ ತಿಥಿಗಳಲ್ಲಿ ಯಾವನು ಗಂಗೇಶ್ವರನ ಅರ್ಚನೆಯನ್ನು ಮಾಡುವನೋ, ಅವನು ಸಹಸ್ರಜನ್ಮಗಳಲ್ಲಿ ಸಂಪಾದಿಸಿದ ಪಾತಕಗಳೂ ಕ್ಷಣಮಾತ್ರದಲ್ಲಿಯೇ ನಾಶವನ್ನು ಹೊಂದುವುವು. ಆದರೆ ಕಲಿಯುಗದಲ್ಲಿ ಈ ಗಂಗೇಶ್ವರ ಮಹಾಲಿಂಗವು ತನ್ನ ಮಹಿಮೆಯನ್ನು ಪ್ರಕಟಗೊಳಿಸದೆ ಗುಪ್ತಪ್ರಾಯವಾಗಿರುವುದು.

೭–೯. ಆ ಲಿಂಗದ ಸಂದರ್ಶನವು ಭಾವಿಕಾಲದಲ್ಲಿ ಪುಣ್ಯಕ್ಕೆ ಭಾಗಿಗಳಾಗಲಿರುವವರಿಗೆ ಮಾತ್ರ ಉಂಟಾಗುತ್ತದೆ. ಕಾಶಿಯಲ್ಲಿ ಅತ್ಯಂತ ದುರ್ಲಭವೆನಿಸಿದ ಈ ಲಿಂಗದ ದರ್ಶನವನ್ನು ಯಾವನು ತೆಗೆದುಕೊಂಡಿರುವನೋ, ಅವನು ಪ್ರತ್ಯಕ್ಷರೂಪದಿಂದ ಗಂಗೆಯನ್ನೇ ನೋಡಿರುವನೆಂಬುದರಲ್ಲಿ ಸಂದೇಹವಿಲ್ಲ. ಮಿತ್ರಾವರುಣರ ಪುತ್ರನೆ! ಕಲಿಯುಗದಲ್ಲಿ ಸಕಲ ಪಾಪಗಳನ್ನೂ ನಾಶಗೊಳಿಸುವ ಗಂಗಾನದಿಯ ಸೇವೆಯೂ ಅತ್ಯಂತ ದುರ್ಲಭವಾಗುವುದು. ಸಂಶಯವಿಲ್ಲ. ಅದರಲ್ಲಿಯೂ ನಾಲ್ಕನೆಯ ಪಾದವು ಸಂಭವಿಸಲು ಕಾಶೀಕ್ಷೇತ್ರವೇ ಪರಮ ದುರ್ಲಭವೆನಿಸುವುದು.

೧೦. ಆ ಕಾಶೀಕ್ಷೇತ್ರವನ್ನು ಸೇರಿದವರಿಗೂ ಸಹ ಗಂಗೇಶ್ವರನಾಮಕವಾದ ಮಹಾಲಿಂಗವು ಮತ್ತೂ ದುರ್ಲಭವು. ಆ ಲಿಂಗದ ಸಂದರ್ಶನವೇ ಮನುಷ್ಯರ ಪಾಪಗಳ ನಾಶಕ್ಕೆ ಕಾರಣವಾಗುವುದು.

ಶ್ರುತ್ವಾ ಗಂಗೇಶಮಾಹಾತ್ಮ್ಯಂ ನ ನರೋ ನಿರಯೀ ಭವೇತ್ ।
ಲಭೇಚ್ಚ ಪುಣ್ಯಸಂಭಾರಂ ಚಿಂತಿತಂ ಚಾಧಿಗಚ್ಛತಿ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಗಂಗೇಶ್ವರಮಹಿಮಾಖ್ಯಾನಂ"
ನಾಮೈಕನವತಿತಮೋಽಧ್ಯಾಯಃ

---

೧೧. ಈ ಗಂಗೇಶ್ವರನ ಮಾಹಾತ್ಮ್ಯೆಯನ್ನು ಕೇಳಿದ ಮನುಷ್ಯನೆಂದಿಗೂ ನರಕಭಾಜನನಾಗುವುದಿಲ್ಲ. ಪುಣ್ಯರಾಶಿಯನ್ನೇ ಸಂಪಾದಿಸಿಕೊಳ್ಳುವನು. ಮತ್ತು ಮನಸ್ಸಿನ ಅಭೀಷ್ಟಗಳೆಲ್ಲವನ್ನೂ ಕೈಗೂಡಿಸಿಕೊಳ್ಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ಗಂಗೇಶ್ವರಮಹಿಮಾಖ್ಯಾನ"ವೆಂಬ
ತೊಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿನವತಿತಮೋಽಧ್ಯಾಯಃ

### ನರ್ಮದೇಶ್ವರೋತ್ಪತ್ತಿವರ್ಣನಂ

**ಸ್ಕಂದ ಉವಾಚ :—**

**ನರ್ಮದೇಶಸ್ಯ ಮಾಹಾತ್ಮ್ಯಂ ಕಥಯಾಮಿ ಮುನೇ ತವ ।**
**ಯಸ್ಯ ಸ್ಮರಣಮಾತ್ರೇಣ ಮಹಾಪಾತಕಸಂಕ್ಷಯಃ ॥ ೧ ॥**
**ಅಸ್ಯ ವಾರಾಹಕಲ್ಪಸ್ಯ ಪ್ರವೇಶೇ ಮುನಿಪುಂಗವೈಃ ।**
**ಆಪೃಚ್ಛಿಕಾ ಸರಿಚ್ಛ್ರೇಷ್ಠಾ ವದತಾಂ ತಂ ಮೃಕಂಡುಜ ॥ ೨ ॥**

**ಮಾರ್ಕಂಡೇಯ ಉವಾಚ :—**

**ಶೃಣುಧ್ವಂ ಮುನಯಃ ಸರ್ವೇ ಸಂತಿ ನದ್ಯಃ ಪರಃ ಶತಂ ।**
**ಸರ್ವಾ ಅಪ್ಯಘಹಾರಿಣ್ಯಃ ಸರ್ವಾ ಅಪಿ ವೃಷಪ್ರದಾಃ ॥ ೩ ॥**
**ಸರ್ವಾಭ್ಯೋಽಪಿ ನದೀಭ್ಯಶ್ಚ ಶ್ರೇಷ್ಠಾಃ ಸರ್ವಾಃ ಸಮುದ್ರಗಾಃ ।**
**ತತೋಽಪಿ ಹಿ ಮಹಾಶ್ರೇಷ್ಠಾಃ ಸರಿತ್ಸು ಸರಿದುತ್ತಮಾಃ ॥ ೪ ॥**

---

### ಕನ್ನಡದ ಅನುವಾದ

#### ನರ್ಮದೇಶ್ವರೋತ್ಪತ್ತಿವರ್ಣನ

೧. ಸ್ಕಂದನು ಹೇಳುತ್ತಾನೆ:—ಮುನಿಯೆ! ನಿನಗೆ ಇನ್ನುಮೇಲೆ ನರ್ಮದೇಶ್ವರನ ಮಾಹಾತ್ಮ್ಯವನ್ನು ಹೇಳುವೆನು. ಅದನ್ನು ಸ್ಮರಿಸುವ ಮಾತ್ರದಿಂದಲೇ ಸಮಸ್ತ ಪಾತಕಗಳೂ ಸಮೂಲವಾಗಿ ನಾಶವಾಗುವುವು.

೨. ಈಗ ನಡೆಯುತ್ತಿರುವ ಶ್ವೇತವರಾಹಕಲ್ಪದ ಆದಿಯಲ್ಲಿ ಒಮ್ಮೆ ಮಹರ್ಷಿಶ್ರೇಷ್ಠರು ಮಾರ್ಕಂಡೇಯ ಮಹಾಮುನಿಯನ್ನು ಕುರಿತು "ಭೂಲೋಕದ ನದಿಗಳಲ್ಲಿ ಸರ್ವೋತ್ತಮವಾದುದು ಯಾವುದು?" ಎಂದು ಪ್ರಶ್ನೆಮಾಡಿದರು.

೩. ಮಾರ್ಕಂಡೇಯನು ಹೇಳುತ್ತಾನೆ:—ಮುನಿಗಳಿರಾ! ಎಲ್ಲರೂ ಕೇಳಿರಿ. ಭೂಲೋಕದಲ್ಲಿ ನೂರಾರು ಮಹಾನದಿಗಳಿರುವುವು. ಅವುಗಳೆಲ್ಲವೂ ಪಾಪಹಾರಿಗಳೇ ಆಗಿರುವುವು. ಎಲ್ಲವೂ ಪುಣ್ಯಪ್ರದಗಳೇ.

೪. ಎಲ್ಲ ನದಿಗಳಲ್ಲಿಯೂ ಸಮುದ್ರವನ್ನು ಸೇರುವವುಗಳು ಶ್ರೇಷ್ಠಗಳಾಗಿರುವುವು. ಅವುಗಳಲ್ಲಿಯೂ ಸಹ ಮುಂದೆ ಹೇಳುವ ಉತ್ತಮನದಿಗಳು ಸರ್ವಶ್ರೇಷ್ಠಗಳೆಂದೆಣಿಸಲ್ಪಟ್ಟಿರುವುವು.

ಗಂಗಾ ಚ ಯಮುನಾ ಚಾಥ ನರ್ಮದಾ ಚ ಸರಸ್ವತೀ ।
ಚತುಷ್ಟಯಮಿದಂ ಪುಣ್ಯಂ ಧುನೀಷು ಮುನಿಪುಂಗವಾಃ ॥ ೫ ॥
ಋಗ್ವೇದಮೂರ್ತಿರ್ಗಂಗಾ ಸ್ಯಾದ್ಯಮುನಾ ಚ ಯಜುರ್ಧ್ರುವಂ ।
ನರ್ಮದಾ ಸಾಮಮೂರ್ತಿಸ್ತು ಸ್ಯಾದಥರ್ವಾ ಸರಸ್ವತೀ ॥ ೬ ॥
ಗಂಗಾ ಸರ್ವಸರಿದ್ಯೋನಿಃ ಸಮುದ್ರಸ್ಯಾಪಿ ಪೂರಣೀ ।
ಗಂಗಾಯಾ ನ ಲಭೇತ್ಸಾಮ್ಯಂ ಕಾಚಿದತ್ರ ಸರಿದ್ವರಾ ॥ ೭ ॥
ಕಿಂ ತು ಪೂರ್ವಂ ತಪಸ್ತಪ್ತಂ ರೇವಯಾ ಬಹ್ವನೇಹಸಂ ।
ವರದಾನೋನ್ಮುಖೋ ಧಾತಾ ಪ್ರಾರ್ಥಿತಶ್ಚೇತಿ ಸತ್ತಮ ॥ ೮ ॥
ಗಂಗಾಸಾಮ್ಯಂ ವಿಧೇ ದೇಹಿ ಪ್ರಸನ್ನೋಽಸಿ ಯದಿ ಪ್ರಭೋ ।
ಬ್ರಹ್ಮಣಾಥ ತತಃ ಪ್ರೋಕ್ತಾ ನರ್ಮದಾ ಸ್ಮಿತಪೂರ್ವಕಂ ॥ ೯ ॥
ಯದಿ ತ್ರ್ಯಕ್ಷಸಮತ್ವಂ ತು ಲಭತೇಽನ್ಯೇನ ಕೇನಚಿತ್ ।
ತದಾ ಗಂಗಾಸಮತ್ವಂ ಚ ಲಭ್ಯತೇ ಸರಿತಾನ್ಯಯಾ ॥ ೧೦ ॥
ಪುರುಷೋತ್ತಮತುಲ್ಯಃ ಸ್ಯಾತ್ಪುರುಷೋಽನ್ಯೋ ಯದಿ ಕ್ವಚಿತ್ ।
ಸ್ರೋತಸ್ವಿನೀ ತದಾ ಸಾಮ್ಯಂ ಲಭತೇ ಗಂಗಯಾ ಪರಾ ॥ ೧೧ ॥

---

೫. ಗಂಗೆ, ಯಮುನೆ, ನರ್ಮದೆ ಮತ್ತು ಸರಸ್ವತಿ—ಈ ನಾಲ್ಕು ನದಿಗಳೇ ಅವುಗಳಲ್ಲಿಯೂ ಪುಣ್ಯತಮಗಳಾದುವೆಂದು ಹೇಳುವರು.

೬. ಗಂಗಾನದಿಯು ಋಗ್ವೇದಸ್ವರೂಪವಾದುದು. ಯಮುನೆಯು ಯಜುರ್ವೇದವೆಂಬುದು ನಿಜವು. ನರ್ಮದೆಯು ಸಾಮವೇದದ ಮೂರ್ತಿಯಾಗಿರುವುದು. ಸರಸ್ವತಿಯೇ ಅಥರ್ವಣವೇದರೂಪವಾಗಿರುವುದು.

೭. ಗಂಗೆಯೇ ಸಕಲ ನದಿಗಳ ಜನ್ಮಸ್ಥಾನವೆನಿಸಿರುವುದು. ಅದೇ ಸಮುದ್ರವನ್ನೂ ತನ್ನ ನೀರಿನಿಂದ ತುಂಬುತ್ತಿರುವುದು. ಬೇರೆ ಯಾವ ಉತ್ತಮ ನದಿಯೂ ಗಂಗಾನದಿಯ ಸಮಾನತೆಯನ್ನು ಹೊಂದಲಾರದು.

೮. ಬ್ರಾಹ್ಮಣೋತ್ತಮನೆ! ಆದರೆ ಪೂರ್ವದಲ್ಲಿ ನರ್ಮದೆಯು ಬಹುಕಾಲದವರೆಗೂ ತಪಸ್ಸನ್ನು ಮಾಡಿ ವರವನ್ನು ಕೊಡಲು ಪ್ರಸನ್ನನಾಗಿ ಬಂದ ಬ್ರಹ್ಮದೇವನನ್ನಿಗೆ ಇಂತೆಂದು ಬಿನ್ನವಿಸಿದಳು.

೯. "ಸ್ವಾಮಿಯೆ! ನನ್ನಲ್ಲಿ ನೀನು ಪ್ರಸನ್ನನಾಗಿರುವೆಯಾದರೆ ನನಗೆ ಗಂಗೆಯ ಮಾಹಾತ್ಮ್ಯಕ್ಕೆ ಸಮಾನವಾದ ಮಾಹಾತ್ಮ್ಯವನ್ನು ಕೊಡು." ಈ ಮಾತನ್ನು ಕೇಳಿ ಬ್ರಹ್ಮನು ಮಂದಸ್ಮಿತದಿಂದ ಕೂಡಿ ನರ್ಮದೆಗೆ ಹೇಳತೊಡಗಿದನು.

೧೦. "ಬೇರೊಬ್ಬ ಯಾವ ಮನುಷ್ಯನಾದರೂ ಮಹೇಶ್ವರನಿಗೆ ಸಮಾನನೆನಿಸುವನಾದರೆ, ಆಗ ಮಾತ್ರ ಬೇರೊಂದು ನದಿಯು ಗಂಗೆಗೆ ಸಮಾನವಾದುದೆನಿಸುವ ಕೀರ್ತಿಯನ್ನು ಪಡೆಯುವುದು.

೧೧. ಬೇರೆ ಯಾವ ಪುರುಷನಾದರೂ ಪುರುಷೋತ್ತಮನಾದ ಶ್ರೀಮನ್ನಾ

ಯದಿ ಗೌರೀಸಮಾ ನಾರೀ ಕ್ವಚಿದನ್ಯಾ ಭವೇದಿಹ ।
ಅನ್ಯಾ ಧುನೀಹ ಸ್ವರ್ಧುನ್ಯಾಸ್ತದಾ ಸಾಮ್ಯಮುಪೈಷ್ಯತಿ ॥ ೧೨ ॥
ಯದಿ ಕಾಶೀಪುರೀತುಲ್ಯಾ ಭವೇದನ್ಯಾ ಕ್ವಚಿತ್ಪುರೀ ।
ತದಾ ಸ್ವರ್ಗತರಂಗಿಣ್ಯಾ ಸಾಮ್ಯಮನ್ಯಾ ನದೀ ಲಭೇತ್ ॥ ೧೩ ॥
ನಿಶಮ್ಯೇತಿ ವಿಧೇರ್ವಾಕ್ಯಂ ನರ್ಮದಾ ಸರಿದುತ್ತಮಾ ।
ಧಾತುರ್ವರಂ ಪರಿತ್ಯಜ್ಯ ಪ್ರಾಪ್ತಾ ವಾರಾಣಸೀಂ ಪುರೀಂ ॥ ೧೪ ॥
ಸರ್ವೇಭ್ಯೋಽಪಿ ಹಿ ಪುಣ್ಯೇಭ್ಯಃ ಕಾಶ್ಯಾಂ ಲಿಂಗಪ್ರತಿಷ್ಠಿತೇಃ ।
ಅಪರಾ ನ ಸಮುದ್ದಿಷ್ಟಾ ಕೈಶ್ಚಿಚ್ಛ್ರೇಯಸ್ಕರೀ ಕ್ರಿಯಾ ॥ ೧೫ ॥
ಅಥ ಸಾ ನರ್ಮದಾ ಪುಣ್ಯಾ ವಿಧಿಪೂರ್ವಂ ಪ್ರತಿಷ್ಠಿತಂ ।
ವ್ಯಧಾತ್ಪಿಲಿಪಿಲಾತೀರ್ಥೇ ತ್ರಿವಿಷ್ಟಪಸಮೀಪತಃ ॥ ೧೬ ॥
ತತಃ ಶಂಭುಃ ಪ್ರಸನ್ನೋಽಭೂತ್ತಸ್ಯೈ ನದ್ಯೈ ಶುಭಾತ್ಮನೇ ।
ವರಂ ವೃಣೀಷ್ವ ಸುಭಗೇ ಯತ್ತುಭ್ಯಂ ರೋಚತೇಽನಘೇ ॥ ೧೭ ॥

---

ರಾಯಣನಿಗೆ ಸಮಾನನಾದರೆ, ಆಗ ಮಾತ್ರ ಬೇರೊಂದು ನದಿಯು ಗಂಗೆಯೊಡನೆ ಸಾಮ್ಯವನ್ನು ಹೊಂದಬಹುದು.

೧೨. ಮತ್ತೊಬ್ಬ ಸ್ತ್ರೀಯು ಪಾರ್ವತೀದೇವಿಗೆ ಸಮಾನಳೆನಿಸಿ ಭೂಲೋಕ ದಲ್ಲಿ ಹುಟ್ಟುವವಳಾದರೆ ಆಗ ಮಾತ್ರ ದೇವನದಿಯೆನಿಸಿದ ಗಂಗೆಯೊಡನೆ ಇತರ ನದಿಯು ಸಾಮ್ಯವನ್ನು ಹೊಂದುವುದು.

೧೩. ಬೇರೊಂದು ಪಟ್ಟಣವೆಂದಾದರೂ ಕಾಶೀಕ್ಷೇತ್ರಕ್ಕೆ ಸಮಾನವೆಂದು ಪ್ರಖ್ಯಾತಿಯನ್ನು ಪಡೆಯುವುದಾದರೆ ಆಗಮಾತ್ರ ಬೇರೊಂದು ನದಿಯು ಗಂಗಾ ನದಿಗೆ ಸಮಾನವೆನಿಸಬಹುದು.''

೧೪. ಇಂತೆಂದ ಬ್ರಹ್ಮನ ಮಾತನ್ನು ಕೇಳಿ ಉತ್ತಮನದಿಯಾದ ನರ್ಮದೆಯು ಬ್ರಹ್ಮನಲ್ಲಿ ವರವನ್ನು ಕೇಳುವುದನ್ನು ತ್ಯಜಿಸಿ ವಾರಾಣಸೀಕ್ಷೇತ್ರಕ್ಕೆ ಬರುವವ ಳಾದಳು.

೧೫. ಸಕಲ ಪುಣ್ಯಕಾರ್ಯಗಳಿಗಿಂತಲೂ ಕಾಶೀಕ್ಷೇತ್ರದಲ್ಲಿ ಶಿವಲಿಂಗ ವನ್ನು ಪ್ರತಿಷ್ಠಮಾಡುವುದಕ್ಕಿಂತಲೂ ಶ್ರೇಯಸ್ಕಾರಕವಾದ ಕಾರ್ಯವು ಬೇರೊಂದಿಲ್ಲವೆಂದು ಹೇಳಲ್ಪಟ್ಟಿರುವುದಷ್ಟೆ.

೧೬. ಆದುದರಿಂದ ನರ್ಮದೆಯು ಪಿಲಿಪಿಲಾತೀರ್ಥದಲ್ಲಿ ತ್ರಿಲೋಚ ನೇಶ್ವರನ ಸಮೀಪದಲ್ಲಿಯೇ ಉತ್ತಮವಾದ ಮತ್ತೊಂದು ಲಿಂಗವನ್ನು ವಿಧ್ಯುಕ್ತ ರೀತಿಯಿಂದ ಪ್ರತಿಷ್ಠಿಸಿದಳು.

೧೭. ಆಗ ಮಹಾದೇವನು ಶುದ್ಧಾಂತಃಕರಣಳಾದ ನರ್ಮದೆಯಲ್ಲಿ ಅತ್ಯಂತಪ್ರಸನ್ನನಾಗಿ ''ಮಂಗಳಾಂಗಿಯೆ! ನಿಷ್ಪಾಪಳೆ! ನಿನಗೆ ಇಷ್ಟಬಂದ ವರವನ್ನು ಕೇಳಿಕೊ'' ಎಂದು ಅನುಗ್ರಹವನ್ನು ಮಾಡಿದನು.

ಸರಿದ್ವರಾ ನಿಶಮ್ಯೇತಿ ರೇವಾ ಪ್ರಾಹ ಮಹೇಶ್ವರಂ ।
ಕಿಂ ವರೇಣೇಹ ದೇವೇಶ ಭೃಶಂ ತುಚ್ಛೇನ ಧೂರ್ಜಟೇ ॥ ೧೮ ॥
ನಿರ್ದ್ವಂದ್ವಾ ತ್ವತ್ಪದದ್ವಂದ್ವೇ ಭಕ್ತಿರಸ್ತು ಮಹೇಶ್ವರ ।
ಶ್ರುತ್ವೇತಿ ನಿತರಾಂ ತುಷ್ಟೋ ರೇವಾಗಿರಮನುತ್ತಮಾಂ ॥ ೧೯ ॥
ಪ್ರೋವಾಚ ಚ ಸರಿಚ್ಛ್ರೇಷ್ಠೇ ತ್ವಯೋಕ್ತಂ ಯತ್ತಥಾಸ್ತು ತತ್ ।
ಗೃಹಾಣ ಪುಣ್ಯನಿಲಯೇ ವಿತರಾಮಿ ವರಾಂತರಂ ॥ ೨೦ ॥
ಯಾವಂತೋ ದೃಷದಃ ಸಂತಿ ತವ ರೋಧಸಿ ನರ್ಮದೇ ।
ತಾವಂತೋ ಲಿಂಗರೂಪಿಣ್ಯೋ ಭವಿಷ್ಯಂತಿ ವರಾನ್ಮಮ ॥ ೨೧ ॥
ಅನ್ಯಂ ಚ ತೇ ವರಂ ದದ್ಯಾಂ ತಮಪ್ಯಾಕರ್ಣಯೋತ್ತಮಂ ।
ದುಷ್ಪ್ರಾಪಂ ಯಚ್ಚ ತಪಸಾಂ ರಾಶಿಭಿಃ ಪರಮಾರ್ಥದಃ ॥ ೨೨ ॥
ಸದ್ಯಃ ಪಾಪಹರಾ ಗಂಗಾ ಸಪ್ತಾಹೇನ ಕಲಿಂದಜಾ ।
ತ್ರ್ಯಹಾತ್ಸರಸ್ವತೀ ರೇವೇ ತ್ವಂ ತು ದರ್ಶನಮಾತ್ರತಃ ॥ ೨೩ ॥

---

೧೮. ಈ ಮಾತನ್ನು ಕೇಳಿ ಉತ್ತಮನದಿಯಾದ ನರ್ಮದೆಯು ಮಹೇಶ್ವರನಿಗೆ ಹೇಳತೊಡಗಿದಳು. "ದೇವೇಶ್ವರನೆ! ಧೂರ್ಜಟಿಯೆ! ಬೇರೆ ತುಚ್ಛವಾದ ವರದಿಂದ ನನಗಾಗಬೇಕಾದುದೇನು?

೧೯. ಮಹೇಶ್ವರನೆ! ನಿನ್ನ ಪಾದಯುಗಳದಲ್ಲಿ ನನಗೆ ಅದ್ವಿತೀಯವಾದ ಭಕ್ತಿಯುಂಟಾಗುವಂತೆ ವರವನ್ನು ಕೊಡು." ಇಂತೆಂಬ ನರ್ಮದೆಯ ಸರ್ವೋತ್ತಮವಾದ ವಾಕ್ಯವನ್ನು ಕೇಳಿ ಪರಮೇಶ್ವರನು ಅತ್ಯಂತ ಸಂತುಷ್ಟನಾದನು.

೨೦. ಸಂತುಷ್ಟನಾಗಿ ಹೇಳತೊಡಗಿದನು: "ಉತ್ತಮ ನದಿಯೆ! ನೀನು ಹೇಳಿದಂತೆಯೇ ನಡೆಯಲಿ. ಪುಣ್ಯಾತ್ಮಳೆ! ನಿನಗೆ ಮತ್ತೊಂದು ವರವನ್ನೂ ಕೊಡುವೆನು. ತೆಗೆದುಕೊಳ್ಳುವವಳಾಗು.

೨೧. ನರ್ಮದೆ! ನಿನ್ನ ಪ್ರವಾಹದ ದಡದಲ್ಲಿ ಎಷ್ಟು ಕಲ್ಲುಗಳಿರುವುವೊ, ಅವುಗಳೆಲ್ಲವೂ ನನ್ನ ವರದ ಮಹಿಮೆಯಿಂದ ಲಿಂಗರೂಪಗಳಾಗಿ ಪರಿಣಮಿಸುವುವು.

೨೨. ನಿನಗೆ ಇನ್ನೂ ಒಂದು ಉತ್ತಮವಾದ ವರವನ್ನು ಕೊಡುವೆನು. ಅದನ್ನೂ ಕೇಳು. ಅದು ನಿಜವಾಗಿಯೂ ತಪಸ್ಸುಗಳ ರಾಶಿಗಳನ್ನು ಮಾಡಿದವರಿಗೂ ಸಹ ಅತ್ಯಂತ ದುರ್ಲಭವಾಗಿರುವುದು.

೨೩. ಗಂಗೆಯು ಒಂದು ಸ್ನಾನದ ಮಾತ್ರದಿಂದಲೇ ಜನರ ಪಾತಕಗಳನ್ನು ಕಳೆಯುವುದು. ಯಮುನೆಯು ಏಳು ದಿವಸಗಳ ಸೇವೆಯಿಂದ ಮನುಷ್ಯನನ್ನು ನಿಷ್ಕಲ್ಮಷನನ್ನಾಗಿ ಮಾಡುವುದು. ಸರಸ್ವತಿಯು ಮೂರು ದಿವಸಗಳಲ್ಲಿಯೇ ಪರಿಶುದ್ಧಿಯನ್ನು ಕೊಡುವುದು. ಎಲೌ ನರ್ಮದೆಯೆ! ನೀನು ಮಾತ್ರ ದರ್ಶನದಿಂದಲೇ ಎಲ್ಲರನ್ನೂ ಪುನೀತರನ್ನಾಗಿ ಮಾಡುವೆ.

ಅಪರಂ ಚ ವರಂ ದದ್ಯಾಂ ನರ್ಮದೇ ದರ್ಶನಾಘಹೇ ।
ಭವತ್ಯಾ ಸ್ಥಾಪಿತಂ ಲಿಂಗಂ ನರ್ಮದೇಶ್ವರಸಂಜ್ಞಕಂ ॥ ೨೪ ॥
ಯತ್ತಲ್ಲಿಂಗಂ ಮಹಾಪುಣ್ಯಂ ಮುಕ್ತಿಂ ದಾಸ್ಯತಿ ಶಾಶ್ವತೀಂ ।
ಅಸ್ಯ ಲಿಂಗಸ್ಯ ಯೇ ಭಕ್ತಾಸ್ತಾನ್ದೃಷ್ಟ್ವಾ ಸೂರ್ಯನಂದನಃ ॥ ೨೫ ॥
ಪ್ರಣಮಿಷ್ಯತಿ ಯತ್ನೇನ ಮಹಾಶ್ರೇಯೋಽಭಿವೃದ್ಧಯೇ ।
ಸಂತಿ ಲಿಂಗಾನ್ಯನೇಕಾನಿ ಕಾಶ್ಯಾಂ ದೇವಿ ಪದೇ ಪದೇ ॥ ೨೬ ॥
ಪರಂ ಹಿ ನರ್ಮದೇಶಸ್ಯ ಮಹಿಮಾ ಕೋಽಪಿ ಚಾದ್ಭುತಃ ।
ಇತ್ಯುಕ್ತ್ವಾ ದೇವದೇವೇಶಸ್ತಸ್ಮಿಲ್ಲಿಂಗೇ ಲಯಂ ಯಯೌ ॥ ೨೭ ॥
ನರ್ಮದಾಪಿ ಪ್ರಹೃಷ್ಟಾಸೀತ್ಪಾವಿತ್ರ್ಯಂ ಪ್ರಾಪ್ಯ ಚಾದ್ಭುತಂ ।
ಸ್ವದೇಶಂ ಚ ಪರಿಪ್ರಾಪ್ತಾ ಹೃಷ್ಟಮಾತ್ರಾಘಹಾರಿಣೀ ॥ ೨೮ ॥
ವಾಕ್ಯಂ ಮೃಕುಂಡಜಮುನೇಸ್ತೇಽಪಿ ಶ್ರುತ್ವಾ ಮುನೀಶ್ವರಾಃ ।
ಪ್ರಹೃಷ್ಟಚೇತಸೋ ಜಾತಾಶ್ಚಕ್ರುಃ ಸ್ವಂ ಸ್ವಂ ತತೋ ಹಿತಂ ॥ ೨೯ ॥

---

೨೪. ದರ್ಶನಮಾತ್ರದಿಂದ ಪಾಪಗಳನ್ನು ನಾಶಗೊಳಿಸುವವಳಾದ ಓ ನರ್ಮದೆಯೆ! ನಿನಗೆ ಇನ್ನೂ ಒಂದು ವರವನ್ನು ಕೊಡುವೆನು. ನಿನ್ನಿಂದ ಸ್ಥಾಪಿತವಾದ ಈ ಲಿಂಗವು ನರ್ಮದೇಶ್ವರನೆಂದು ಪ್ರಸಿದ್ಧವಾಗಿರುವುದು.

೨೫–೨೬. ಈ ಲಿಂಗವು ಸೇವಿಸುತ್ತಿರುವ ಭಕ್ತರಿಗೆ ಮಹಾಪುಣ್ಯಪ್ರದವೆನಿಸಿ ಶಾಶ್ವತವಾದ ಮೋಕ್ಷವನ್ನೇ ಕೊಡುತ್ತಿರುವುದು. ಈ ಲಿಂಗಕ್ಕೆ ಯಾರು ಭಕ್ತರಾಗಿರುವರೊ, ಅವರನ್ನು ಕಂಡು ಸೂರ್ಯಪುತ್ರನಾದ ಯಮಧರ್ಮರಾಜನೂ ಪ್ರಯತ್ನಪೂರ್ವಕವಾಗಿ ನಮಸ್ಕಾರವನ್ನು ಮಾಡುವನಲ್ಲದೆ ಮಹಾಶ್ರೇಯಸ್ಸನ್ನೂ ಅಭಿವೃದ್ಧಿಗೊಳಿಸುವನು. ನರ್ಮದೆಯೆ! ಕಾಶಿಯಲ್ಲಿ ಹೆಜ್ಜೆ ಹೆಜ್ಜೆಗೂ ಅಸಂಖ್ಯಾತಗಳಾದ ಲಿಂಗಗಳು ನೆಲಸಿರುವುವು.

೨೭. ಆದರೆ ನರ್ಮದೇಶ್ವರ ಮಹಾಲಿಂಗದ ಮಹಿಮೆಯು ಅತ್ಯದ್ಭುತವಾಗಿರುವುದು.'' ಇಂತೆಂದು ವರಗಳನ್ನು ಕೊಟ್ಟು ಆ ದೇವದೇವೋತ್ತಮನು ಆ ಲಿಂಗದಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೨೮. ನರ್ಮದೆಯೂ ಅದ್ಭುತವಾದ ಪರಿಶುದ್ಧತೆಯನ್ನು ಪಡೆದು ಪರಮಸಂತೋಷವನ್ನು ತಾಳಿದಳು. ಆಕೆಯು ತನ್ನ ದೇಶಕ್ಕೆ ಹಿಂದಿರುಗಿ ಬಂದು ಅಂದು ಮೊದಲಾಗಿ ದರ್ಶನಮಾತ್ರದಿಂದಲೇ ಜನರ ಪಾತಕಗಳನ್ನು ಕಳೆಯುತ್ತಿರುವಳು.

೨೯. ಆ ಮುನೀಶ್ವರರೆಲ್ಲರೂ ಮಾರ್ಕಂಡೇಯಮುನಿಯ ಮಾತುಗಳನ್ನು ಕೇಳಿ ಸಂತುಷ್ಟಾಂತರಂಗರಾಗಿ ಆತನಿಗೆ ತಮ್ಮ ತಮ್ಮ ಯೋಗ್ಯತೆಯನ್ನನುಸರಿಸಿ ಉಪಾಯನಗಳನ್ನರ್ಪಿಸಿದರು.

ಸ್ಕಂದ ಉವಾಚ :—

ನರ್ಮದೇಶಸ್ಯ ಮಾಹಾತ್ಮ್ಯಂ ಶ್ರುತ್ವಾ ಭಕ್ತಿಯುತೋ ನರಃ ।
ಪಾಪಕಂಚುಕಮುತ್ಸೃಜ್ಯ ಪ್ರಾಪ್ಸ್ಯತಿ ಜ್ಞಾನಮುತ್ತಮಂ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ನರ್ಮದೇಶ್ವರಾಖ್ಯಾನಂ" ನಾಮ ದ್ವಿನವತಿತಮೋಽಧ್ಯಾಯಃ

---

೩೦. ಸ್ಕಂದನು ಹೇಳುತ್ತಾನೆ:— ಈ ನರ್ಮದೇಶ್ವರ ಮಾಹಾತ್ಮ್ಯದ ಕಥೆಯನ್ನು ಭಕ್ತಿಯುಕ್ತನಾಗಿ ಕೇಳಿದ ಮನುಷ್ಯನು ಪಾಪವೆಂಬ ಆಚ್ಛಾದನೆಯನ್ನು ಕಳೆದುಕೊಂಡು ಉತ್ತಮವಾದ ಜ್ಞಾನವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ನರ್ಮದೇಶ್ವರಾಖ್ಯಾನ"ವೆಂಬ ತೊಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಣವತಿತಮೋಽಧ್ಯಾಯಃ

### ಸತೀಶ್ವರಪ್ರಾದುರ್ಭಾವವರ್ಣನಂ

ಅಗಸ್ತ್ಯ ಉವಾಚ :—

ನರ್ಮದೇಶಸ್ಯ ಮಾಹಾತ್ಮ್ಯಂ ಶ್ರುತ್ವಾ ಕಲ್ಮಷನಾಶನಂ ।
ಇದಾನೀಂ ಕಥಯ ಸ್ಕಂದ ಸತೀಶ್ವರಸಮುದ್ಭವಂ ॥ ೧ ॥

ಸ್ಕಂದ ಉವಾಚ :—

ಮಿತ್ರಾವರುಣಸಂಭೂತ ಕಥಯಾಮಿ ಕಥಾಂ ಶೃಣು ।
ಯಥಾ ಸತೀಶ್ವರಂ ಲಿಂಗಂ ಕಾಶ್ಯಾಮಾವಿರ್ಬಭೂವ ಹ ॥ ೨ ॥
ಪುರಾ ತತಾಪ ಸುಮಹತ್ತಪಃ ಶತಧೃತಿರ್ಮುನೇ ।
ತಪಸಾ ತೇನ ದೇವೇಶಃ ಸಂತುಷ್ಟೋ ವರದೋಽಭವತ್ ॥ ೩ ॥
ಉವಾಚ ಚಾಪಿ ಬ್ರಹ್ಮಾಣಂ ನಿತರಾಂ ಬ್ರಾಹ್ಮಣಪ್ರಿಯಃ ।
ಸರ್ವಜ್ಞನಾಥೋ ಲೋಕಾತ್ಮಾ ವರಂ ವರಯ ಲೋಕಕೃತ್ ॥ ೪ ॥

ಬ್ರಹ್ಮೋವಾಚ :—

ಯದಿ ಪ್ರಸನ್ನೋ ದೇವೇಶ ವರಂ ದಾಸ್ಯತಿ ವಾಂಛಿತಂ ।
ತದಾ ತ್ವಂ ಮೇ ಭವ ಸುತೋ ದೇವೀ ದಕ್ಷಸುತಾಽಸ್ತು ಚ ॥ ೫ ॥

---

### ಕನ್ನಡದ ಅನುವಾದ

#### ಸತೀಶ್ವರಪ್ರಾದುರ್ಭಾವವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಎಲೈ ಸ್ಕಂದನೆ! ಸಕಲ ಕಲ್ಮಷನಾಶಕವಾದ ನರ್ಮದೇಶ್ವರಲಿಂಗದ ಮಾಹಾತ್ಮ್ಯವನ್ನು ಯಥಾವತ್ತಾಗಿ ಕೇಳಿರುವೆನು. ಇನ್ನು ಸತೀಶ್ವರನು ಉದ್ಭವಿಸಿದ ಪ್ರಕಾರವನ್ನು ಹೇಳುವವನಾಗು.

೨. ಸ್ಕಂದನು ಹೇಳುತ್ತಾನೆ:—ಮಿತ್ರಾವರುಣಮುನಿಯ ಪುತ್ರನೆ! ಸತೀಶ್ವರ ಮಹಾಲಿಂಗವು ಕಾಶಿಯಲ್ಲಿ ಹೇಗೆ ಆವಿರ್ಭಾವವನ್ನು ಹೊಂದಿತೆಂಬುದನ್ನು ಹೇಳುವೆನು. ಆ ಕಥೆಯನ್ನು ಕೇಳು.

೩. ಮಹಾಮುನಿಯೆ! ಪೂರ್ವಕಾಲದಲ್ಲಿ ಒಮ್ಮೆ ಚತುರ್ಮುಖನು ಅತ್ಯಂತ ಮಹತ್ತರವಾದ ತಪಸ್ಸನ್ನು ಆಚರಿಸಿದನು. ಆತನ ತಪಸ್ಸಿನಿಂದ ಸಂತೋಷಗೊಂಡ ಮಹಾದೇವನು ವರವನ್ನು ಕೊಡಲು ಪ್ರತ್ಯಕ್ಷನಾದನು.

೪. ನಿರಂತರವೂ ಬ್ರಾಹ್ಮಣರಲ್ಲಿಯೇ ಅಭಿಮಾನವುಳ್ಳ ಆ ದೇವದೇವನು ಸರ್ವಜ್ಞರಿಗೊಡೆಯನೂ, ಸಕಲಬ್ರಹ್ಮಾಂಡದ ಅಂತರ್ಯಾಮಿಯೂ ಆದ ಸ್ವಾಮಿಯು. "ಸೃಷ್ಟಿಕರ್ತೃವೆ! ಬೇಕಾದ ವರವನ್ನು ಕೇಳಿಕೊ" ಎಂದನು.

೫. ಬ್ರಹ್ಮನು ಹೇಳುತ್ತಾನೆ:—ದೇವೇಶ್ವರಾ! ನೀನು ನನ್ನಲ್ಲಿ ಪ್ರಸನ್ನ

ಇತಿ ಶ್ರುತ್ವಾ ಮಹಾದೇವಃ ಸರ್ವದೋ ಬ್ರಹ್ಮಣೋ ವರಂ ।
ಸ್ಮೃತ್ವಾ ದೇವೀಮುಖಂ ವೀಕ್ಷ್ಯ ಪ್ರೋವಾಚ ಚತುರಾನನಂ ॥ ೬ ॥
ಬ್ರಹ್ಮಂಸ್ತದ್ವಾಂಛಿತಂ ಭೂಯಾತ್ಕಿಮದೇಯಂ ಪಿತಾಮಹ ।
ಇತ್ಯುಕ್ತ್ವಾ ಬ್ರಹ್ಮಣೋ ಭಾಲಾದಾವಿರಾಸೀಚ್ಛಶಾಂಕಭೃತ್ ॥ ೭ ॥
ರುದನ್ಸ ಉತ್ತಾನಶಯೋ ಬ್ರಹ್ಮಣೋ ಮುಖಮೈಕ್ಷತ ।
ತತೋ ಬ್ರಹ್ಮಾಪಿ ತಂ ಬಾಲಂ ರುದಂತಂ ಪ್ರವಿಲೋಕ್ಯ ಚ ॥ ೮ ॥
ಕಿಂ ಮಾಂ ಜನಕಮಾಪ್ಯಾಪಿ ತ್ವಂ ರೋದಿಷಿ ಮುಹುರ್ಮುಹುಃ ।
ಶ್ರುತ್ವೇತಿ ಪೃಥುಕಃ ಪ್ರಾಹ ಯಥೋಕ್ತಂ ಪರಮೇಷ್ಠಿನಾ ॥ ೯ ॥
ನಾಮ್ನೇ ರೋದಿಮಿ ಮೇ ಸ್ರಷ್ಟರ್ನಾಮ ದೇಹಿ ಪಿತಾಮಹ ।
ರೋದನಾದ್ರುದ್ರ ಇತ್ಯಾಖ್ಯಾಂ ಸ ಮಾಯಾಡಿಂಭಕೋಽಲಭತ್ ॥ ೧೦ ॥

ಅಗಸ್ತ್ಯ ಉವಾಚ :—

ಅರ್ಭಕ ತ್ವಂ ಗತೋಽಪೀಶಃ ಕಿಂ ರುರೋದ ಷಡಾನನ ।
ಯದಿ ವೇತ್ಸಿ ತದಾಚಕ್ಷ್ವ ಮಹತ್ಕೌತೂಹಲಂ ಹಿ ಮೇ ॥ ೧೧ ॥

---

ನಾಗಿರುವೆಯಾದರೆ ನನ್ನ ಈ ವಾಂಛಿತವನ್ನು ನೆರವೇರಿಸಿಕೊಡು. ನೀನು ನನ್ನ ಮಗನಾಗಿ ಜನಿಸಬೇಕು. ಭಗವತಿಯು ದಕ್ಷಬ್ರಹ್ಮನಿಗೆ ಮಗಳಾಗಿ ಅವತರಿಸಲಿ.

೬. ಸರ್ವಪ್ರದನಾದ ಮಹಾದೇವನು ಈ ಮಾತನ್ನು ಕೇಳಿ ಮುಗುಳ್ನಗೆಯಿಂದಲೇ ದೇವಿಯ ಮುಖವನ್ನು ನೋಡುತ್ತ ಚತುರ್ಮುಖನನ್ನು ಕುರಿತು ಹೇಳತೊಡಗಿದನು.

೭. "ಲೋಕಪಿತಾಮಹನೆ! ನಿನ್ನ ಇಚ್ಛೆಯಂತೆಯೇ ನಡೆಯಲಿ. ನಿನಗೆ ನಾನು ಕೊಡಬಾರದುದು ಯಾವುದೂ ಇಲ್ಲವು." ಇಂತೆಂದು ಆ ಚಂದ್ರಶೇಖರನು ಶಿಶುವಿನ ರೂಪವನ್ನು ತಾಳಿ ಚತುರ್ಮುಖನ ಹಣೆಯನ್ನು ಭೇದಿಸಿಕೊಂಡು ಆವಿರ್ಭವಿಸಿದನು.

೮. ಆ ಶಿಶುವು ಅಳುತ್ತಲೇ ಬ್ರಹ್ಮದೇವನ ಮುಖವನ್ನು ನೋಡುತ್ತಿದ್ದಿತು. ಆಗ ಬ್ರಹ್ಮನೂ ಅಳುತ್ತಿದ್ದ ಆ ಮಗುವನ್ನು ನೋಡಿದವನಾದನು.

೯. "ತಂದೆಯಾದ ನನ್ನ ಸಮೀಪದಲ್ಲಿದ್ದರೂ ನೀನು ಮತ್ತೆ ಮತ್ತೆ ಏತಕ್ಕೆ ಅಳುತ್ತಿರುವೆ?" ಎಂದು ಬ್ರಹ್ಮನು ಕೇಳಿದ ಪ್ರಶ್ನೆಯನ್ನು ಕೇಳಿ ಆ ಮಗುವು ಉತ್ತರವನ್ನು ಹೇಳಿತು.

೧೦. "ತಂದೆಯೆ! ಪಿತಾಮಹನೆ! ಹೆಸರಿಗಾಗಿ ಅಳುತ್ತಿರುವೆನು. ನನಗೆ ಯಾವುದಾದರೂ ಒಂದು ಹೆಸರನ್ನು ಕೊಡು." ಆಗ ರೋದನಮಾಡುತ್ತಿದ್ದ ಆ ಮಾಯಾ ಶಿಶುವು ರುದ್ರನೆಂಬ ಹೆಸರನ್ನೇ ಪಡೆಯಿತು.

೧೧. ಅಗಸ್ತ್ಯನು ಹೇಳುತ್ತಾನೆ:—"ಷಣ್ಮುಖನೆ! ಬಾಲತ್ವವನ್ನು ಹೊಂದಿ

ಸ್ಕಂದ ಉವಾಚ :—

ಸರ್ವಜ್ಞಸ್ಯ ಕುಮಾರತ್ವಾತ್ಕಿಂಚಿತ್ಕಿಂಚಿದವೈಮ್ಯಹಂ ।
ರೋದನೇ ಕಾರಣಂ ವಚ್ಮಿ ಶೃಣು ಕುಂಭಸಮುದ್ಭವ ॥ ೧೨ ॥
ಮನಸೀತಿ ವಿಚಾರೋಽಭೂದ್ದೇವಸ್ಯ ಪರಮಾತ್ಮನಃ ।
ಬುದ್ಧಿವೈಭವಮಸ್ಯಾಹೋ ವೀಕ್ಷಿತುಂ ಪರಮೇಷ್ಠಿನಃ ॥ ೧೩ ॥
ಸತ್ಯಲೋಕಾಧಿನಾಥಸ್ಯ ಚತುರಾಸ್ಯಸ್ಯ ವೇಧಸಃ ।
ಇತ್ಯಾನಂದಾತ್ಸಮುದ್ಭೂತೋ ಬಾಷ್ಪಪೂರೋ ಮಹೇಶಿತುಃ ॥ ೧೪ ॥

ಅಗಸ್ತ್ಯ ಉವಾಚ :—

ಕಿಂ ಬುದ್ಧಿವೈಭವಂ ಧಾತುಃ ಶಂಭುನಾ ಮನಸೀಕ್ಷಿತಂ ।
ಯೇನಾನಂದಾಶ್ರುಸಂಭಾರೋ ಬಾಲ್ಯೇಽಪ್ಯಭವದೀಶಿತುಃ ॥ ೧೫ ॥
ಏತತ್ಕಥಯ ಮೇ ಪ್ರಾಜ್ಞ ಸರ್ವಜ್ಞಾನಂದವರ್ಧನ ।
ಶ್ರುತ್ವಾಗಸ್ತ್ಯುದಿತಂ ವಾಕ್ಯಂ ತಾರಕಾರಿರುವಾಚ ಹ ॥ ೧೬ ॥
ದೇವೇನ ಮನಸಿ ಧ್ಯಾತಮಿತಿ ಕುಂಭಜನೇ ಮುನೇ ।
ವಿನಾಪತ್ಯಂ ಜನೇತಾರಂ ಕ ಉದ್ಧರ್ತುಮಿಹಪ್ರಭುಃ ॥ ೧೭ ॥

---

ದರೂ ಮಹೇಶ್ವರನು ಏತಕ್ಕೆ ರೋದನಮಾಡಿದನು ? ಇದನ್ನು ತಿಳಿಯಲು ನನಗೆ ಮಹತ್ತರವಾದ ಕುತೂಹಲವುಂಟಾಗಿರುವುದು. ನಿನಗೆ ತಿಳಿದಿರುವುದಾದರೆ ನನಗೆ ವಿವರಿಸುವವನಾಗು.''

೧೨. ಸ್ಕಂದನು ಹೇಳುತ್ತಾನೆ:— ''ಸರ್ವಜ್ಞನಾದ ಮಹಾದೇವನ ಪುತ್ರನಾದ ದೆಸೆಯಿಂದ ಮಗುವು ರೋದನಮಾಡಿದುದಕ್ಕೆ ಕಾರಣವನ್ನು ಅಲ್ಪಸ್ವಲ್ಪವಾಗಿ ತಿಳಿದಿರುವೆನು. ಕುಂಭೋದ್ಭವನೆ! ಹೇಳುವೆನು, ಕೇಳು.

೧೩–೧೪. ದೇವದೇವನಾದ ಪರಮಾತ್ಮನಿಗೆ ಮನಸ್ಸಿನಲ್ಲಿ ವಿಚಾರವೊಂದು ಮೂಡಿತು. 'ಪರಮೇಷ್ಠಿಯೂ, ಸತ್ಯಲೋಕದೊಡೆಯನೂ, ಚತುರ್ಮುಖನೂ, ಸೃಷ್ಟಿಕರ್ತನೂ ಆದ ಬ್ರಹ್ಮನ ಬುದ್ಧಿವೈಭವವು ನೋಡಲು ಎಷ್ಟು ಅಗಾಧವಾಗಿರುವುದು!' ಎಂಬ ಯೋಚನೆಯ ಆನಂದದಿಂದಲೇ ಆ ಬಾಲಕನಾದ ಮಹೇಶ್ವರನ ಕಣ್ಣುಗಳು ನೀರಿನಿಂದ ತುಂಬಿಕೊಂಡುವು.''

೧೫. ಅಗಸ್ತ್ಯನು ಹೇಳುತ್ತಾನೆ:— ''ಬಾಲ್ಯದಲ್ಲಿಯೂ ಮಹೇಶ್ವರನಿಗೆ ಆನಂದಾಶ್ರುಗಳಿಂದ ಕಣ್ಣುಗಳು ತುಂಬಿದುವೆಂದು ಹೇಳಿದೆಯಲ್ಲವೆ. ಬ್ರಹ್ಮನಲ್ಲಿ ಆತನು ಅಂತಹ ಯಾವ ಬುದ್ಧಿವೈಭವವನ್ನು ಕಂಡನು ?

೧೬. ಸರ್ವಜ್ಞನ ಆನಂದವನ್ನಭಿವರ್ಧಿಸುವ ಬುದ್ಧಿಶಾಲಿಯೆ! ಈ ವಿಷಯವನ್ನು ನನಗೆ ತಿಳಿಸು.'' ಅಗಸ್ತ್ಯನಾಡಿದ ಈ ಮಾತನ್ನು ಕೇಳಿ ತಾರಕವೈರಿಯಾದ ಷಡಾನನನು ಹೇಳಲುಪಕ್ರಮಿಸಿದನು.

೧೭. ''ಕುಂಭಸಂಭವಮುನಿಯೆ! ಬ್ರಹ್ಮದೇವನು ತನ್ನ ಮನಸ್ಸಿನಲ್ಲಿ

ಏಕೋ ಮನೋರಥಶ್ಚಾಯಂ ದ್ವಿತೀಯೋಽಯಂ ಸುನಿಶ್ಚಿತಂ ।
ಅಪತ್ಯತ್ವಂ ಗತೇ ಚಾಸ್ಮಿನ್ಸ್ಮರ್ತುರ್ಗರುತ್ಪತ್ತಿಹಾರಿಣಿ ॥ ೧೮ ॥
ಕ್ಷಣಂ ಕ್ಷಣಂ ಸಮಾಲೋಕ್ಯಮಂಗಸ್ಪರ್ಶೇ ಕ್ಷಣಂ ಕ್ಷಣಂ ।
ಏಕಶಯ್ಯಾಸನಾಹಾರಂ ಲಪ್ಸ್ಯೇಽನೇನ ಕ್ಷಣೇ ಕ್ಷಣೇ ॥ ೧೯ ॥
ಯೋಽಯಂ ನ ಗೋಚರಃ ಕ್ವಾಪಿ ವಾಣೀಮನಸಯೋರಪಿ ।
ಸ ಮೇಽಪತ್ಯತ್ವಮಾಸಾದ್ಯ ಕಿಂ ನ ದಾಸ್ಯತಿ ಚಿಂತಿತಂ ॥ ೨೦ ॥
ಯೋಽಮುಂ ಕೃತೀ ಸ್ಪೃಶೇಜ್ಜಂತುರ್ಯೋಽಮುಂ ಪಶ್ಯೇತ್ಸಕೃನ್ಮುದಾ ।
ನ ಸ ಭೂಯೋಽಭಿಜಾಯೇತ ಭವೇಚ್ಚಾನಂದಮೇದುರಃ ॥ ೨೧ ॥
ಗೃಹಕ್ರೀಡನಕಂ ಮೇಽಸೌ ಯದಿ ಭೂಯಾತ್ಕಥಂಚನ ।
ತದಾ ಪರಸ್ಯ ಸೌಖ್ಯಸ್ಯ ನಿಧಾನಂ ಸ್ಯಾಮಸಂಶಯಂ ॥ ೨೨ ॥
ವಿಧೇಃ ಸಮೀಹಿತಂ ಚೇತಿ ನೂನಂ ಜ್ಞಾತ್ವಾ ಸ ಸರ್ವವಿತ್ ।
ಆನಂದಬಾಷ್ಪಕಲಿತಂ ಚಕ್ಷುಸ್ತ್ರಯಮುದೀಧರತ್ ॥ ೨೩ ॥

---

ಇಂತೆಂದು ಚಿಂತಿಸಿದನು. ಮಕ್ಕಳಿಲ್ಲದ ಮನುಷ್ಯನನ್ನು ಯಾವನು ತಾನೆ ಉದ್ಧಾರಮಾಡಲು ಸಮರ್ಥನಾಗಿರುವನು?

೧೮–೧೯. ಇದೇ ಮೊದಲನೆಯ ಮನೋರಥವು. ಮುಂದೆ ಹೇಳುವುದೇ ಎರಡನೆಯದೆಂದು ನನಗೆ ನಿಶ್ಚಯವಾಗಿರುವುದು. 'ಸ್ಮರಣಮಾಡುವವರ ಸಂಸಾರಬಂಧವನ್ನೇ ಕಳೆಯುವ ಈತನು ನನಗೆ ಮಗುವಾಗಿ ಜನಿಸಿದರೆ ನಿಮಿಷ ನಿಮಿಷಕ್ಕೂ ಆತನನ್ನು ನೋಡುತ್ತಿರಬಹುದು. ಪ್ರತಿಕ್ಷಣದಲ್ಲಿಯೂ ಆತನ ಸ್ಪರ್ಶಲಾಭವೂ ಉಂಟಾಗುತ್ತಿರುವುದು. ಹೊತ್ತು ಹೊತ್ತಿಗೂ ಮಗುವಿನೊಡನೆ ಒಂದೇ ಹಾಸಿಗೆ, ಆಸನ ಮತ್ತು ತಿಂಡಿಗಳನ್ನು ಅನುಭವಿಸುತ್ತಿರುವೆನು.

೨೦. ಯಾವ ಸರ್ವೇಶ್ವರನು ನಮ್ಮ ಮಾತುಗಳಿಗೂ ಮನಸ್ಸಿಗೂ ಗೋಚರನಾಗದಿರುವನೊ, ಆತನೇ ನನ್ನ ಮಗುವಾದರೆ ಮನಸ್ಸಿನ ಯಾವ ಬಯಕೆಯನ್ನು ಕೈಗೂಡಿಸುವುದಿಲ್ಲ?

೨೧. ಯಾವ ಮಾನವನು ಈತನನ್ನು ಒಮ್ಮೆಯಾದರೂ ಮುಟ್ಟುವನೊ, ಸಂತೋಷದಿಂದ ನೋಡುವನೊ, ಅವನು ಪುನಃ ಜನ್ಮವನ್ನು ಪಡೆಯುವುದಿಲ್ಲ. ಪರಮಾನಂದಭರಿತನೇ ಆಗುವನು.

೨೨. ಈ ಮಹಾಮಹಿಮನೇ ಯಾವ ರೀತಿಯಿಂದಲಾದಲೂ ನನ್ನ ಮನೆಯಲ್ಲಿ ಆಟವಾಡುವ ಮಗುವಾದರೆ ಆಗ ನಾನು ನಿಜವಾಗಿಯೂ ಅಪಾರವಾದ ಆನಂದಕ್ಕೆ ನೆಲೆಯಾಗಿರುವೆನು.'

೨೩. ಸರ್ವಜ್ಞನಾದ ಮಹಾದೇವನು ಇದೇ ಬ್ರಹ್ಮದೇವನ ಅಂತರಂಗದ ನಿಜವಾದ ಅಭಿಪ್ರಾಯವೆಂಬುದನ್ನು ತಿಳಿದುಕೊಂಡು ತನ್ನ ಮೂರು ಕಣ್ಣುಗಳಲ್ಲಿಯೂ ಆನಂದಬಾಷ್ಪಗಳನ್ನು ಸುರಿಸಿದನು.''

ಶೃತ್ವೇತ್ಯಗಸ್ತಿಃ ಸ್ಕಂದಸ್ಯ ಭಾಷಿತಂ ಪರ್ಯಮೂಮುದತ್ ।
ನನಾಮ ಚಾಂಘ್ರೀ ಪ್ರೋವಾಚ ಜಯ ಸರ್ವಜ್ಞನಂದನ ॥ ೨೪ ॥
ವಿಧೇರಪಿ ಮನೋ ಜ್ಞಾತಂ ಶಂಭೋರಪಿ ಮನೋಗತಂ ।
ಸಮ್ಯಕ್ಚಿತ್ತಂ ತ್ವಯಾ ಜ್ಞಾನಂ ನಮಸ್ತುಭ್ಯಂ ಚಿದಾತ್ಮನೇ ॥ ೨೫ ॥
ಸ್ಕಂದೋಽಪಿ ನಿತರಾಂ ತುಷ್ಟಃ ಶ್ರೋತುರಾನಂದದರ್ಶನಾತ್ ।
ಧನ್ಯೋಽಸ್ಯಗಸ್ತ್ಯ ಧನ್ಯೋಽಸಿ ಶ್ರೋತುಂ ಜಾನಾಸಿ ತತ್ತ್ವತಃ ॥ ೨೬ ॥
ನ ಮೇ ಶ್ರಮೋ ವೃಥಾ ಜಾತೋ ಬ್ರುವತಸ್ತೇ ಪುರಃ ಕಥಾಂ ।
ಇತ್ಯಗಸ್ತಿಂ ಸಮಾಭಾಷ್ಯ ಪುನಃ ಪ್ರಾಹ ಷಡಾನನಃ ॥ ೨೭ ॥
ದೇವೇ ರುದ್ರತ್ವಮಾಪನ್ನೇ ದೇವೀ ದಕ್ಷಸುತಾಭವತ್ ।
ಸಾಪಿ ತಪ್ತ್ವಾ ತಪಸ್ತೀವ್ರಂ ಸತೀ ಕಾಶ್ಯಾಂ ವರಾರ್ಥಿನೀ ॥ ೨೮ ॥
ದದರ್ಶ ಲಿಂಗರೂಪೇಣ ಪ್ರಾದುರ್ಭೂತಂ ಹರಂ ಪುರಃ ।
ಅಲಂ ತಪ್ತ್ವಾ ಮಹಾದೇವಿ ಪ್ರೋಕ್ತವಂತಮಿತಿ ಸ್ಫುಟಂ ॥ ೨೯ ॥

---

೨೪. ಇಂತೆಂದ ಸ್ಕಂದನ ಮಾತುಗಳನ್ನು ಕೇಳಿ ಅಗಸ್ತ್ಯನು ಬಹುವಾಗಿ ಸಂತೋಷವನ್ನು ಹೊಂದಿದನು. ಆತನ ಪಾದಕಮಲಗಳಿಗೆ ನಮಸ್ಕರಿಸಿ ಹೀಗೆ ಹೇಳಿದನು. "ಮಹೇಶ್ವರನ ಮಗನಾದ ನಿನಗೆ ಜಯವಾಗಲಿ.

೨೫. ಬ್ರಹ್ಮದೇವನ ಮನಸ್ಸಿನ ಅಭಿಪ್ರಾಯವನ್ನೂ ತಿಳಿದುಕೊಂಡೆನು. ಮಹಾದೇವನ ಮನೋಗತವೂ ನನಗೆ ತಿಳಿಯಿತು. ಅವರಿಬ್ಬರ ಅಂತರಂಗವನ್ನೂ ಚೆನ್ನಾಗಿ ತಿಳಿದಿರುವ ಚಿದಾತ್ಮನಾದ ನಿನಗೆ ನಮಸ್ಕರಿಸುವೆನು."

೨೬. ಸ್ಕಂದನೂ ಸಹ ಕೇಳುತ್ತಿದ್ದ ಅವನ ಆನಂದವನ್ನು ಕಂಡು ಬಹುವಾಗಿ ಸಂತೋಷಗೊಂಡು ಹೇಳಿದನು. "ಅಗಸ್ತ್ಯನೆ! ನೀನೇ ಪರಮಧನ್ಯನು. ತತ್ತ್ವಾರ್ಥಗಳನ್ನು ಸಮಗ್ರವಾಗಿ ಕೇಳಿ ತಿಳಿಯುವುದನ್ನು ಕಲಿತಿರುವೆ.

೨೭. ನಿನ್ನ ಮುಂದೆ ಈ ಚರಿತ್ರೆಯನ್ನು ನಿರೂಪಿಸುತ್ತಿರುವ ನನ್ನ ಶ್ರಮವು ವ್ಯರ್ಥವಾಗಲಿಲ್ಲ." ಇಂತೆಂದು ಅಗಸ್ತ್ಯಮುನಿಯನ್ನು ಹೊಗಳಿ ಷಣ್ಮುಖಸ್ವಾಮಿಯು ಪುನಃ ಹೇಳತೊಡಗಿದನು.

೨೮. "ಮಹೇಶ್ವರನಿಂತು ರುದ್ರನಾಗಿ ಅವತರಿಸಲು ದೇವಿಯೂ ಸಹ ದಕ್ಷಪ್ರಜೇಶ್ವರನಿಗೆ ಮಗಳಾಗಿ ಜನಿಸಿದಳು. ಆಕೆಯೂ ಸತಿಯೆಂಬ ಹೆಸರುಳ್ಳವಳಾಗಿ ಯೋಗ್ಯನಾದ ವರನನ್ನು ಪಡೆಯುವ ಆಶೆಯಿಂದ ಕಾಶಿಯಲ್ಲಿ ತೀವ್ರವಾದ ತಪಸ್ಸನ್ನಾಚರಿಸಿದಳು.

೨೯. ತನ್ನ ಮುಂದೆಯೇ ಲಿಂಗದ ರೂಪವನ್ನು ಸ್ವೀಕರಿಸಿ ನಿಂತಿರುವ ಈಶ್ವರನನ್ನು ಕಂಡಳು. ಆತನು "ಮಹೇಶ್ವರಿಯೆ! ಇನ್ನು ನಿನ್ನ ತಪಸ್ಸನ್ನು ಸಾಕುಮಾಡು" ಎಂದು ಸ್ಪಷ್ಟವಾಗಿ ಹೇಳಿ ಮತ್ತಿಂತೆಂದನು.

**ಇದಂ ಸತೀಶ್ವರಂ ಲಿಂಗಂ ತವ ನಾಮ್ನಾ ಭವಿಷ್ಯತಿ ।**
**ಯಥಾ ಮನೋರಥಸ್ತೇಽತ್ರ ಫಲಿತೋ ದಕ್ಷಕನ್ಯಕೇ ॥ ೩೦ ॥**
**ತಥೈತಲ್ಲಿಂಗಮಾರಾಧ್ಯಾನ್ಯಸ್ಯಾಪಿ ಹಿ ಫಲಿಷ್ಯತಿ ।**
**ಕುಮಾರೀ ಪ್ರಾಪ್ಸ್ಯತಿ ಪತಿಂ ಮನಸೋಽಪಿ ಸಮುಚ್ಛ್ರಿತಂ ॥ ೩೧ ॥**
**ಏತಲ್ಲಿಂಗಂ ಸಮಾರಾಧ್ಯ ಕುಮಾರೋಽಪಿ ವರಾಂಗನಾಂ ॥ ೩೨ ॥**
**ಯಸ್ಯ ಯಸ್ಯ ಹಿ ಯತ್ಕಾಮಸ್ತಸ್ಯ ತಸ್ಯ ಹಿ ಸ ಧ್ರುವಂ ।**
**ಭವಿಷ್ಯತಿ ನ ಸಂದೇಹಃ ಸತೀಶ್ವರಸಮರ್ಚನಾತ್ ॥ ೩೩ ॥**
**ಸತೀಶ್ವರಂ ಸಮಭ್ಯರ್ಚ್ಯ ಯೋ ಯೋ ಯಂ ಯಂ ಸಮೀಹತೇ ।**
**ತಸ್ಯ ತಸ್ಯ ಸ ಸ ಕ್ಷಿಪ್ರಂ ಭವಿಷ್ಯತಿ ಮನೋರಥಃ ॥ ೩೪ ॥**
**ಇತೋಽಷ್ಟಮೇ ಚ ದಿವಸೇ ತ್ವಜ್ಜನೇತಾ ಪ್ರಜಾಪತಿಃ ।**
**ಮಹ್ಯಂ ದಾಸ್ಯತಿ ಕನ್ಯಾಂ ತ್ವಾಂ ಸಫಲಸ್ತೇ ಮನೋರಥಃ ।**
**ಇತ್ಯುಕ್ತ್ವಾ ದೇವದೇವೇಶಸ್ತತ್ರೈವಾಂತರ್ಹಿತೋಽಭವತ್ ॥ ೩೫ ॥**

---

೩೦–೩೧. ಈ ಲಿಂಗವು ನಿನ್ನ ಹೆಸರಿನಿಂದಲೇ ಸತೀಶ್ವರಲಿಂಗವೆಂದು ಕರೆಯಲ್ಪಡುವುದು. ಎಲೌ ದಕ್ಷಪುತ್ರಿಯೆ ! ನಿನ್ನ ಮನೋರಥವು ಇಲ್ಲಿ ಹೇಗೆ ಸಫಲವಾಯಿತೊ, ಹಾಗೆಯೇ ಬೇರೊಬ್ಬನು ಈ ಮಹಾಲಿಂಗವನ್ನು ಅರ್ಚಿಸಿದರೂ ತನ್ನ ಮನೋಭೀಷ್ಟಗಳ ಸಾಫಲ್ಯವನ್ನು ಪಡೆಯುವನು. ಕನ್ಯೆಯು ಈ ಲಿಂಗದ ಪೂಜೆಯ ಫಲವಾಗಿ ತಾನು ಬಯಸುವುದಕ್ಕಿಂತಲೂ ಉನ್ನತ ಪದವಿಯುಳ್ಳ ಗಂಡನನ್ನು ಪಡೆಯುವಳು.

೩೨. ಈ ಲಿಂಗವನ್ನು ಪೂಜಿಸಿದ ಯುವಕನೂ ಉತ್ತಮಕನ್ಯೆಯನ್ನೇ ವಿವಾಹವಾಗುವನು.

೩೩. ಸತೀಶ್ವರನನ್ನು ಅರ್ಚನೆಮಾಡುವುದರಿಂದ ಯಾವ ಯಾವ ಮನುಷ್ಯನಿಗೆ ಯಾವ ಯಾವ ಅಭಿಲಾಷೆಯಿರುವುದೊ, ಅದು ನಿಜವಾಗಿಯೂ ಅವನಿಗೆ ಕೂಡಿಬರುವುದರಲ್ಲಿ ಸಂದೇಹವಿಲ್ಲ.

೩೪. ಸತೀಶ್ವರಮಹಾಲಿಂಗದ ಪೂಜೆಯನ್ನುಮಾಡಿ ಯಾವನು ಯಾವುದನ್ನು ಅಪೇಕ್ಷಿಸುವನೊ, ಅವನಿಗೆ ಅತಿಕ್ಷಿಪ್ರವಾಗಿಯೇ ಆ ತನ್ನ ಮನೋರಥದ ಸಿದ್ಧಿಯು ಲಭಿಸುವುದು.

೩೫. ಇಂದಿಗೆ ಎಂಟನೆಯ ದಿನದಲ್ಲಿ ನಿನ್ನ ತಂದೆಯಾದ ದಕ್ಷಪ್ರಜಾಪತಿಯು ಕನ್ಯೆಯಾದ ನಿನ್ನನ್ನು ನನಗೇ ಕೊಡುವನು. ಇಂತು ನಿನ್ನ ಅಭೀಷ್ಟವು ಸಫಲವಾಗುವುದು.'' ಇಂತೆಂದು ವರವನ್ನು ಕೊಟ್ಟು ದೇವದೇವನಾದ ಮಹಾದೇವನು ಆ ಲಿಂಗದಲ್ಲಿಯೇ ಅಂತರ್ಧಾನವನ್ನು ಹೊಂದಿದನು.

ಸಾಪಿ ಸ್ವಭವನಂ ಯಾತಾ ಸತೀ ದಾಕ್ಷಾಯಣೀ ಮುದಾ ।
ಪಿತಾಪಿ ತಸ್ಮೈ ಪ್ರಾದಾತ್ತಾಂ ರುದ್ರಾಯ ದಿವಸೇಽಷ್ಟಮೇ ॥ ೩೬ ॥
ಸ್ಕಂದ ಉವಾಚ:—
ಇತ್ಥಂ ಸತೀಶ್ವರಂ ಲಿಂಗಂ ಕಾಶ್ಯಾಂ ಆವಿರಭೂನ್ಮುನೇ ।
ಸ್ಮರಣಾದಪಿ ಲಿಂಗಂ ಚ ದದ್ಯಾತ್ಸತ್ವಗುಣಂ ಪರಂ ॥ ೩೭ ॥
ರತ್ನೇಶಾತ್ಪೂರ್ವತೋ ಭಾಗೇ ದೃಷ್ಟ್ವಾ ಲಿಂಗಂ ಸತೀಶ್ವರಂ ।
ಮುಚ್ಯತೇ ಪಾತಕೈಃ ಸದ್ಯಃ ಕ್ರಮಾಜ್ಜ್ಞಾನಂ ಚ ವಿಂದಂತಿ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಸತೀಶ್ವರಪ್ರಾದುರ್ಭಾವವರ್ಣನಂ" ನಾಮ ತ್ರಿಣವತಿತಮೋಽಧ್ಯಾಯಃ

---

೩೬. ದಕ್ಷಕನ್ಯೆಯಾದ ಸತಿಯೂ ಸಂತೋಷದಿಂದ ತನ್ನ ಮನೆಗೆ ತೆರಳಿದಳು. ಆಕೆಯ ತಂದೆಯೂ ಅಲ್ಲಿಗೆ ಎಂಟನೆಯ ದಿವಸದಲ್ಲಿಯೇ ಆಕೆಯನ್ನು ಮಹಾದೇವನಿಗೇ ಮದುವೆ ಮಾಡಿಕೊಟ್ಟನು.

೩೭. ಸ್ಕಂದನು ಹೇಳುತ್ತಾನೆ:—ಅಯ್ಯಾ ಮುನಿಶ್ರೇಷ್ಠನೆ! ಈ ರೀತಿಯಿಂದ ಕಾಶಿಯಲ್ಲಿ ಸತೀಶ್ವರಲಿಂಗದ ಪ್ರಾದುರ್ಭಾವವುಂಟಾಯಿತು. ಸ್ಮರಿಸುವ ಮಾತ್ರದಿಂದಲೇ ಆ ಲಿಂಗವು ಉತ್ತಮವಾದ ಸತ್ತ್ವಗುಣವನ್ನು ಅಭಿವೃದ್ಧಿಗೊಳಿಸುವುದು.

೩೮. ರತ್ನೇಶ್ವರನಿಗೆ ಪೂರ್ವದಿಕ್ಕಿನಲ್ಲಿರುವ ಈ ಸತೀಶ್ವರಲಿಂಗವನ್ನು ನೋಡಿದ ಮನುಷ್ಯನು ಕ್ಷಣಮಾತ್ರದಲ್ಲಿಯೇ ತನ್ನ ಪಾಪಗಳನ್ನು ಕಳೆದುಕೊಂಡು ಕ್ರಮವಾಗಿ ಜ್ಞಾನವನ್ನೂ ಮೋಕ್ಷವನ್ನೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಸತೀಶ್ವರಪ್ರಾದುರ್ಭಾವವರ್ಣನ"ವೆಂಬ ತೊಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಣವತಿತಮೋಽಧ್ಯಾಯಃ

### ಅಮೃತೇಶ್ವರಾದಿ ಲಿಂಗಪ್ರಾದುರ್ಭಾವವರ್ಣನಂ

ಸ್ಕಂದ ಉವಾಚ :—

ಅನ್ಯಾನ್ಯಪಿ ಚ ಲಿಂಗಾನಿ ಕಥಯಾಮಿ ಮಹಾಮುನೇ ।
ಅಮೃತೇಶಮುಖಾದೀನಿ ಯನ್ನಾಮಾಪ್ಯಮೃತಪ್ರದಂ ॥ ೧ ॥
ಪುರಾ ಸನಾರುನಾಮಾಸೀನ್ಮುನಿರತ್ರ ಗೃಹಾಶ್ರಮೀ ।
ಬ್ರಹ್ಮಯಜ್ಞರತೋ ನಿತ್ಯಂ ನಿತ್ಯಂ ಚಾತಿಥಿದೈವತಃ ॥ ೨ ॥
ಲಿಂಗಪೂಜಾರತೋ ನಿತ್ಯಂ ನಿತ್ಯಂ ತೀರ್ಥಾಪರಿಗ್ರಹೀ ।
ತಸ್ಯರ್ಷೇರಭವತ್ಪುತ್ರಃ ಸನಾರೋರುಪಜಂಘನಿಃ ॥ ೩ ॥
ಸ ಕದಾಚಿದ್ಗತೋಽರಣ್ಯಂ ತತ್ರ ದಷ್ಟಃ ಪೃದಾಕುನಾ ।
ಅಥ ತತ್ಸವಯೋಭಿಶ್ಚ ಸ ಆನೀತಃ ಸ್ವಮಾಶ್ರಮಂ ॥ ೪ ॥
ಸನಾರುಣಾ ಸಮುಚ್ಛ್ವಸ್ಯ ನೀತಃ ಸ ಉಪಜಂಘನಿಃ ।
ಮಹಾಶ್ಮಶಾನಭೂಭಾಗಂ ಸ್ವರ್ಗದ್ವಾರಸಮೀಪತಃ ॥ ೫ ॥

---

## ಕನ್ನಡದ ಅನುವಾದ

### ಅಮೃತೇಶ್ವರಾದಿ ಲಿಂಗಪ್ರಾದುರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ :—ಮಹಾಮುನಿವರ್ಯನೆ! ಈಗ ಅಮೃತೇಶ್ವರನೇ ಮೊದಲಾದ ಇತರ ಲಿಂಗಗಳ ಚರಿತ್ರೆಗಳನ್ನೂ ಹೇಳುವೆನು. ಅವುಗಳ ನಾಮಸಂಕೀರ್ತನೆಯೇ ಅಮೃತತ್ವದಾಯಕವಾಗಿರುವುದು.

೨. ಹಿಂದೆ ಈ ಕ್ಷೇತ್ರದಲ್ಲಿಯೇ ಪರಮಾತ್ಮಚಿಂತನಪರನೂ, ಗೃಹಸ್ಥಾಶ್ರಮಿಯೂ ಆದ ಸನಾರುವೆಂಬ ಮಹಾಮುನಿಯೊಬ್ಬನು ವಾಸಿಸುತ್ತಿದ್ದನು. ಆತನು ನಿತ್ಯವೂ ಬ್ರಹ್ಮಯಜ್ಞದಲ್ಲಿ ನಿರತನಾಗಿ ಅತಿಥಿಗಳನ್ನು ಪರದೈವವೆಂಬ ಬುದ್ಧಿಯಿಂದ ಪೂಜಿಸುತ್ತಿದ್ದನು.

೩. ನಿತ್ಯವೂ ಶಿವಲಿಂಗಪೂಜೆಯಲ್ಲಿಯೇ ಆಸಕ್ತಿಯನ್ನು ತೋರಿಸುತ್ತ ಈ ಪುಣ್ಯಕ್ಷೇತ್ರದಲ್ಲಿ ಯಾರಿಂದಲೂ ದಾನಗಳನ್ನು ತೆಗೆದುಕೊಳ್ಳುತ್ತಿರಲಿಲ್ಲ. ಆ ಸನಾರುಮಹರ್ಷಿಗೆ ಉಪಜಂಘನಿಯೆಂಬ ಮಗನೊಬ್ಬನು ಹುಟ್ಟಿದನು.

೪. ಆತನು ಒಮ್ಮೆ ಕಾಡಿಗೆ ಹೋಗಿರಲು ಕಾಲಧರ್ಮಸಂಯೋಗದಿಂದ ಒಂದು ಸರ್ಪವು ಆತನನ್ನು ಕಚ್ಚಿತು. ಆತನನ್ನು ಸಹವಾಸಿಗಳೆಲ್ಲರೂ ಆಶ್ರಮಕ್ಕೆ ಕರೆದುಕೊಂಡು ಬಂದರು.

೫. ಆ ಸನಾರುವೂ ದುಃಖದಿಂದ ನಿಟ್ಟುಸಿರುಗಳನ್ನು ಬಿಡುತ್ತ ಉಪ

ತತ್ರಾಸೀಚ್ಛ್ರೀಫಲಾಕಾರಂ ಲಿಂಗಮೇಕಂ ಸುಗುಪ್ತವತ್ ।
ನಿಧಾಯ ತತ್ರ ತಂ ಯಾವಚ್ಛವಂ ಸಂಚಿಂತಯೇತ್ಸುಧೀಃ ॥ ೬ ॥
ಸರ್ಪದಷ್ಟಸ್ಯ ಸಂಸ್ಕಾರಃ ಕಥಂ ಭವತಿ ಚೇತಿ ವೈ ।
ತಾವತ್ಸ ಜೀವನ್ನುತ್ತಸ್ಥೌ ಸುಪ್ತವಚ್ಚೋಪಜಂಘನಿಃ ॥ ೭ ॥
ಅಥ ತಂ ವೀಕ್ಷ್ಯ ಸ ಮುನಿಃ ಸನಾರುರುಪಜಂಘನಿಂ ।
ಪುನಃ ಪ್ರಾಣಿತಸಂಪನ್ನಂ ವಿಸ್ಮಯಂ ಪ್ರಾಪ್ತವಾನ್ಪರಂ ॥ ೮ ॥
ಪ್ರಾಣಿತವ್ಯೇಽತ್ರ ಕೋ ಹೇತುರ್ಮಚ್ಛಿಶೋರುಪಜಂಘನೇಃ ।
ಕ್ಷೇತ್ರಾದ್ಬಹಿರಹಿರ್ಯಂ ಹಿ ದಷ್ಟ್ವಾ ನಾಸೀತ್ಪರಾಸುತಾಂ ॥ ೯ ॥
ಇತಿ ಯಾವತ್ಸ ಸಂಧತ್ತೇ ಧಿಯಂ ತಜ್ಜೀವಿತೈಕಿಕಾಂ ।
ತಾವತ್ಪಿಪೀಲಿಕಾ ತ್ವೇಕಾ ಮೃತಂ ಕ್ವಾಪಿ ಪಿಪೀಲಿಕಂ ॥ ೧೦ ॥
ಆನಿನಾಯ ಚ ತತ್ರೈವ ಸೋಽಪ್ಯನನ್ನಿರ್ಗತಸ್ತತಃ ।
ಅಥ ವಿಜ್ಞಾಯ ಸ ಮುನಿಸ್ತತ್ತ್ವಂ ಜೀವಿತಸೂಚಿತಂ ॥ ೧೧ ॥

---

ಜಂಘನಿಯನ್ನು ಸ್ವರ್ಗದ್ವಾರದ ಸಮೀಪದಲ್ಲಿರುವ ಮಹಾರುದ್ರಭೂಮಿಗೆ ತೆಗೆದು ಕೊಂಡು ಹೋದನು.

೬–೭. ಅಲ್ಲಿ ಒಂದು ಲಿಂಗವು ಬಿಲ್ವಫಲದ ಆಕಾರವುಳ್ಳದ್ದಾಗಿ ಭೂಮಿಯಲ್ಲಿ ಕಂಡೂ ಕಾಣದಂತೆ ಗುಪ್ತಪ್ರಾಯವಾಗಿದ್ದಿತು. ಆ ಬ್ರಾಹ್ಮಣೋತ್ತಮನು ಮಗನ ಶವವನ್ನು ಅದರ ಮೇಲೆಯೇ ಮಲಗಿಸಿ "ಸರ್ಪದಂಶನದಿಂದ ಸತ್ತವನಿಗೆ ಸಂಸ್ಕಾರವನ್ನು ಹೇಗೆ ಮಾಡಬೇಕು?" ಎಂದು ಬಹುವಾಗಿ ಚಿಂತಿಸುತ್ತಿದ್ದನು. ಅಷ್ಟರಲ್ಲಿಯೇ ಆ ಉಪಜಂಘನಿಯು ನಿದ್ದೆಗೊಂಡು ಎಚ್ಚತ್ತವನಂತೆ ಜೀವಂತನಾಗಿ ಮೇಲಕ್ಕೆ ಎದ್ದು ನಿಂತನು.

೮. ಆಗ ಸನಾರುಮುನಿಯು ಪುನಃ ಪ್ರಾಣಗಳನ್ನು ಧರಿಸಿದ ಉಪಜಂಘನಿಯನ್ನು ಕಂಡು ಅತಿಯಾದ ವಿಸ್ಮಯವನ್ನು ಹೊಂದಿದನು.

೯. "ಕ್ಷೇತ್ರದ ಪರಿಮಿತಿಯ ಹೊರಗೆ ಹೋಗಿ ನನ್ನ ಪುತ್ರನು ಸರ್ಪದಷ್ಟನಾಗಿ ಪ್ರೇತಭಾವವನ್ನು ಹೊಂದಿದನಲ್ಲವೆ. ಅಂತಹ ಉಪಜಂಘನಿಯು ಇಲ್ಲಿ ಪುನಃ ಪ್ರಾಣಸಹಿತನಾಗಿ ಎದ್ದುಬರಲು ಕಾರಣವೇನಿರಬಹುದು?"

೧೦–೧೨. ಇಂತೆಂದು ಪುತ್ರನ ಸಂಜೀವನವನ್ನೇ ಕುರಿತು ಮನಸ್ಸಿನಲ್ಲಿ ಸನಾರುವು ಯೋಚಿಸುತ್ತಿದ್ದನು. ಅಷ್ಟರಲ್ಲಿಯೇ ಒಂದು ಹೆಣ್ಣುಕೀಟವು ಮೃತವಾದ ಮತ್ತೊಂದು ಪಿಪೀಲಿಕೆಯನ್ನು ತೆಗೆದುಕೊಂಡುಬಂದು ಆ ಸ್ಥಳದಲ್ಲಿಯೇ ಬಿಟ್ಟುಹೋಯಿತು. ಆ ಪಿಪೀಲಿಕೆಯೂ ತತ್ಕ್ಷಣದಲ್ಲಿಯೇ ಪ್ರಾಣಸಹಿತವಾಗಿ ಹೊರಟುಹೋಯಿತು. ಅದನ್ನು ಕಂಡು ಆ ಮುನಿವರ್ಯನು ಮೃತಪ್ರಾಣಿಗಳನ್ನು ಉಜ್ಜೀವನಗೊಳಿಸುವ ಮಹಿಮೆಯುಳ್ಳ ಯಾವುದೋ ಒಂದು ಪದಾರ್ಥವು

ಮೃದುಹಸ್ತತಲೇನೈವ ಯಾವತ್ಖನತಿ ವೈ ಮುನಿಃ ।
ತಾವಚ್ಛ್ರೀಫಲಮಾತ್ರಂ ಹಿ ಲಿಂಗಂ ತೇನ ಸಮೀಕ್ಷಿತಂ ॥ ೧೨ ॥
ಸಮಾರುಣಾಥ ತಲ್ಲಿಂಗಂ ತೇನ ತತ್ರ ಸಮರ್ಚಿತಂ ।
ಚಿರಕಾಲೀನಲಿಂಗಸ್ಯ ಕೃತಂ ನಾಮಾಪಿ ಸಾನ್ವಯಂ ॥ ೧೩ ॥
ಅಮೃತೇಶ್ವರನಾಮೇದಂ ಲಿಂಗಮಾನಂದಕಾನನೇ ।
ಏತಲ್ಲಿಂಗಸ್ಯ ಸಂಸ್ಪರ್ಶಾದಮೃತತ್ವಂ ಲಭೇದ್ಧ್ರುವಂ ॥ ೧೪ ॥
ಅಮೃತೇಶಂ ಸಮಭ್ಯರ್ಚ್ಯ ಜೀವತ್ಪುತ್ರಃ ಸ ವೈ ಮುನಿಃ ।
ಸ್ವಾಸ್ಪದಂ ಸಮನುಪ್ರಾಪ್ತೋ ದೃಷ್ಟ ಆಶ್ಚರ್ಯವಜ್ಜನೈಃ ॥ ೧೫ ॥
ತದಾಪ್ರಭೃತಿ ತಲ್ಲಿಂಗಮಮೃತೇಶಂ ಮುನೀಶ್ವರ ।
ಕಾಶ್ಯಾಂ ಸಿದ್ಧಿಪ್ರದಂ ನೄಣಾಂ ಕಲೌ ಗುಪ್ತಂ ಭವೇತ್ಪುನಃ ॥ ೧೬ ॥
ಅಮೃತೇಶ್ವರಸಂಸ್ಪರ್ಶಾನ್ಮೃತಾ ಜೀವಂತಿ ತತ್ಕ್ಷಣಾತ್ ।
ಅಮೃತತ್ವಂ ಭಜಂತೇಽತ್ರ ಜೀವಂತಃ ಸ್ಪರ್ಶಮಾತ್ರತಃ ॥ ೧೭ ॥

---

ಇಲ್ಲಿರಬೇಕೆಂದು ಊಹಿಸಿದವನಾಗಿ ತನ್ನ ಮೃದುಹಸ್ತಗಳಿಂದಲೇ ಅಲ್ಲಿ ಭೂಮಿಯನ್ನು ಬಗೆದನು. ಸ್ವಲ್ಪಕಾಲದಲ್ಲಿಯೇ ಆತನಿಗೆ ಬಿಲ್ವಫಲದ ಪ್ರಮಾಣವೂ ಆಕಾರವೂ ಉಳ್ಳ ಒಂದು ಶಿವಲಿಂಗವು ಗೋಚರವಾಯಿತು.

೧೩. ಆ ಮುನಿಯು ಅಲ್ಲಿಯೇ ಆ ಲಿಂಗಕ್ಕೆ ಮಹಾಪೂಜೆಯನ್ನು ಮಾಡಿದನು. ಅನಾದಿಕಾಲದಿಂದಲೂ ನೆಲಸಿದ್ದ ಅದಕ್ಕೆ ಸಾರ್ಥಕವಾದ ಒಂದು ಹೆಸರನ್ನೂ ಆತನೇ ಕೊಟ್ಟನು.

೧೪. ಆನಂದಕಾನನದಲ್ಲಿರುವ ಈ ಮಹಾಲಿಂಗವು ಅಮೃತೇಶ್ವರನೆಂಬ ಹೆಸರನ್ನು ಹೊಂದಿರುವುದು. ಈ ಲಿಂಗವನ್ನು ಸ್ಪರ್ಶಮಾಡುವುದರಿಂದ ಮನುಷ್ಯನು ಖಂಡಿತವಾಗಿಯೂ ಅಮೃತಭಾವವನ್ನೇ ಪಡೆಯುವನು.

೧೫. ತರುವಾಯ ಆ ಮುನಿವರ್ಯನು ಪುನರ್ಜೀವಿತನಾದ ಪುತ್ರನೊಡನೆ ಅಮೃತೇಶ್ವರನ ಪೂಜೆಯನ್ನು ಮಾಡಿಕೊಂಡು ತನ್ನ ಮನೆಗೆ ಹಿಂದಿರುಗಲು ಸಮಸ್ತ ಜನರೂ ಆತನನ್ನು ಕಂಡು ಆಶ್ಚರ್ಯಚಕಿತರಾದರು.

೧೬. ಅಗಸ್ತ್ಯಮುನೀಶ್ವರನೆ! ಅಂದು ಮೊದಲಾಗಿ ಕಾಶೀಕ್ಷೇತ್ರದೊಳಗಿರುವ ಆ ಅಮೃತೇಶ್ವರಲಿಂಗವು ಮನುಷ್ಯರಿಗೆ ಸಕಲಸಿದ್ಧಿಗಳನ್ನೂ ಕೊಡುವುದಾಗಿರುವುದು. ಪುನಃ ಕಲಿಯುಗವು ಪ್ರಾಪ್ತವಾಗಲು ಅದು ಗುಪ್ತವೈಭವವುಳ್ಳದ್ದಾಗುವುದು.

೧೭. ಅಮೃತೇಶ್ವರಮಹಾಲಿಂಗದ ಸ್ಪರ್ಶಮಾತ್ರದಿಂದಲೇ ಕ್ಷಣಮಾತ್ರದಲ್ಲಿ ಮೃತರೂ ಸಜೀವರಾಗುವರು. ಜೀವದಿಂದಿರುವವರೂ ಸಹ ಅದನ್ನು ಸ್ಪರ್ಶಮಾಡುವ ಮಾತ್ರದಿಂದ ಅಮೃತತ್ವವನ್ನು ಪಡೆಯುವರು.

ಅಮೃತೇಶಸಮಂ ಲಿಂಗಂ ನಾಸ್ತಿ ಕ್ವಾಪಿ ಮಹೀತಲೇ ।
ತಲ್ಲಿಂಗಂ ಶಂಭುನಾ ತಿಷ್ಯೇ ಕೃತಂ ಗುಪ್ತಂ ಪ್ರಯತ್ನತಃ ॥ ೧೮ ॥
ಅಮೃತೇಶ್ವರನಾಮಾಪಿ ಯೇ ಕಾಶ್ಯಾಂ ಪರಿಗೃಹ್ಣತೇ ।
ನ ತೇಷಾಮುಪಸರ್ಗೋತ್ಥಂ ಭಯಂ ಕ್ವಾಪಿ ಭವಿಷ್ಯತಿ ॥ ೧೯ ॥
ಮುನೇಽನ್ಯಚ್ಚ ಮಹಾಲಿಂಗಂ ಕರುಣೇಶ್ವರಸಂಜ್ಞಿತಂ ।
ಮೋಕ್ಷದ್ವಾರಸಮೀಪೇ ತು ಮೋಕ್ಷದ್ವಾರೇಶ್ವರಾಗ್ರತಃ ॥ ೨೦ ॥
ದರ್ಶನಾತ್ತಸ್ಯ ಲಿಂಗಸ್ಯ ಮಹಾಕಾರುಣಿಕಸ್ಯ ವೈ ।
ನ ಕ್ಷೇತ್ರಾನ್ನಿರ್ಗಮೋ ಜಾತು ಬಹಿರ್ಭವತಿ ಕಸ್ಯಚಿತ್ ॥ ೨೧ ॥
ಸ್ನಾತವ್ಯಂ ಮಣಿಕರ್ಣ್ಯಾಂ ಚ ದ್ರಷ್ಟವ್ಯಃ ಕರುಣೇಶ್ವರಃ ।
ಕ್ಷೇತ್ರೋಪಸರ್ಗಜಾ ಭೀತಿರ್ಹಾತವ್ಯಾ ಪರಯಾ ಮುದಾ ॥ ೨೨ ॥
ಸೋಮವಾಸರಮಾಸಾದ್ಯ ಏಕಭಕ್ತವ್ರತಂ ಚರೇತ್ ।
ಯಷ್ಟವ್ಯಃ ಕರುಣಾಪುಷ್ಪೈರ್ವ್ರತಿನಾ ಕರುಣೇಶ್ವರಃ ॥ ೨೩ ॥

---

೧೮. ಸಮಸ್ತ ಭೂಮಂಡಲದಲ್ಲಿಯೂ ಅಮೃತೇಶ್ವರನಿಗೆ ಸಮಾನವಾದ ಬೇರೊಂದು ಲಿಂಗವಿರುವುದಿಲ್ಲ. ಆದುದರಿಂದಲೇ ಪರಮೇಶ್ವರನು ಉದ್ದೇಶ ಪೂರ್ವಕವಾಗಿ ಅದನ್ನು ಕಲಿಯುಗದಲ್ಲಿ ಗೋಪನಮಾಡಿರುವನು.

೧೯. ಕಾಶಿಯಲ್ಲಿ ಈ ಅಮೃತೇಶ್ವರನ ಹೆಸರನ್ನು ಯಾರು ಜಪಿಸುತ್ತಿರುವರೋ, ಅವರಿಗೂ ವಿಘ್ನಗಳಿಂದುಂಟಾಗುವ ಭಯವು ಎಲ್ಲಿಯೂ ಸಂಭವಿಸಲಾರದು.

೨೦. ಮುನಿಯೆ ! ಮೋಕ್ಷದ್ವಾರದ ಸಮೀಪದಲ್ಲಿಯೇ ಮೋಕ್ಷದ್ವಾರೇಶ್ವರನಿಗೆ ಇದಿರಾಗಿ ಕರುಣೇಶ್ವರನೆಂಬ ಹೆಸರಿನ ಮತ್ತೊಂದು ಮಹಾಲಿಂಗವಿರುವುದು.

೨೧. ಮಹಾಕರುಣಾಮೂರ್ತಿಯೆನಿಸಿದ ಆ ಲಿಂಗದ ದರ್ಶನದಿಂದ ಯಾವನಿಗೂ ಎಂದಿಗೂ ಕಾಶೀಕ್ಷೇತ್ರವನ್ನು ಬಿಟ್ಟು ಹೊರಗೆ ಹೋಗಲು ಅಭಿಲಾಷೆಯುಂಟಾಗುವುದಿಲ್ಲ.

೨೨. ಮಣಿಕರ್ಣಿಕಾತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ಕರುಣೇಶ್ವರನ ದರ್ಶನವನ್ನು ತೆಗೆದುಕೊಳ್ಳಬೇಕು. ಈ ಎರಡು ಕೆಲಸಗಳಿಂದ ಅತ್ಯಂತ ಸಂತೋಷಗೊಂಡು ಮನುಷ್ಯನು ಆ ಕ್ಷೇತ್ರದಲ್ಲಿ ಉಂಟಾಗಬಹುದಾದ ವಿಘ್ನಗಳ ಭಯವನ್ನು ಬಿಟ್ಟುಬಿಡಬೇಕು.

೨೩. ಸೋಮವಾರದ ದಿವಸದಲ್ಲಿ ಏಕಭೋಜನವನ್ನು ಮಾಡಿ ಮನುಷ್ಯನು ನಿಯಮಸಹಿತನಾಗಿ ಕರುಣೇಶ್ವರನನ್ನು ಕರುಣಾ (ಕರ್ಣಿಕಾರ) ಪುಷ್ಪಗಳಿಂದ ಪೂಜಿಸಬೇಕು.

ತೇನ ವ್ರತೇನ ಸಂತುಷ್ಟಃ ಕರುಣೇಶಃ ಕದಾಚನ ।
ನ ತಂ ಕ್ಷೇತ್ರಾದ್ಬಹಿಃ ಕುರ್ಯಾತ್ತಸ್ಮಾತ್ಕಾರ್ಯಂ ವ್ರತಂ ತ್ವಿದಂ ॥ ೨೪ ॥
ತತ್ಪತ್ರೈಸ್ತತ್ಫಲೈರ್ವಾಪಿ ಸಂಪೂಜ್ಯಃ ಕರುಣೇಶ್ವರಃ ।
ಯೋ ನ ಜಾನಾತಿ ತಲ್ಲಿಂಗಂ ಸಂಯಗ್ಜ್ಞಾನವಿವರ್ಜಿತಃ ॥ ೨೫ ॥
ತೇನಾರ್ಚ್ಯಃ ಕರುಣಾವೃಕ್ಷೋ ದೇವೇಶಃ ಪ್ರೀಯತಾಮಿತಿ ।
ಯೋ ವರ್ಷಂ ಸೋಮವಾರಸ್ಯ ವ್ರತಂ ಕುರ್ಯಾದಿತಿ ದ್ವಿಜಃ ॥ ೨೬ ॥
ಪ್ರಸನ್ನಃ ಕರುಣೇಶೋಽತ್ರ ತಸ್ಯ ದಾಸ್ಯತಿ ವಾಂಛಿತಂ ।
ದ್ರಷ್ಟವ್ಯಃ ಕರುಣೇಶೋಽತ್ರ ಕಾಶ್ಯಾಂ ಯತ್ನೇನ ಮಾನವೈಃ ॥ ೨೭ ॥
ಇತಿ ತೇ ಕರುಣೇಶಸ್ಯ ಮಹಿಮೋಕ್ತೋ ಮಹತ್ತರಃ ।
ಯಂ ಶ್ರುತ್ವಾ ನೋಪಸರ್ಗೋತ್ಥಂ ಭಯಂ ಕಾಶ್ಯಾಂ ಭವಿಷ್ಯತಿ ॥ ೨೮ ॥
ಮೋಕ್ಷದ್ವಾರೇಶ್ವರಂ ಚೈವ ಸ್ವರ್ಗದ್ವಾರೇಶ್ವರಂ ತಥಾ ।
ಉಭೌ ಕಾಶ್ಯಾಂ ನರೋ ದೃಷ್ಟ್ವಾ ಸ್ವರ್ಗಂ ಮೋಕ್ಷಂ ಚ ವಿಂದತಿ॥ ೨೯ ॥

---

೨೪. ಈ ವ್ರತದ ಆಚರಣೆಯಿಂದ ಸಂತುಷ್ಟನಾದ ಕರುಣೇಶ್ವರನು ಭಕ್ತನನ್ನು ಎಂದಿಗೂ ಕಾಶೀಕ್ಷೇತ್ರದಿಂದ ಹೊರಕ್ಕೆ ಕಳುಹಿಸುವುದಿಲ್ಲ. ಆದುದರಿಂದ ಈ ವ್ರತವು ಪ್ರತಿಯೊಬ್ಬನಿಗೂ ಕರ್ತವ್ಯವಾಗಿರುವುದು.

೨೫-೨೭. ಪುಷ್ಪಗಳು ಲಭಿಸದಿದ್ದರೆ ಆ ವೃಕ್ಷದ ಎಲೆಗಳಿಂದಾಗಲಿ ಫಲಗಳಿಂದಾಗಲಿ ಕರುಣೇಶ್ವರನ ಪೂಜೆಯನ್ನು ಮಾಡಬೇಕು. ಯಾವನು ಆ ಲಿಂಗವನ್ನು ತಿಳಿಯದಿರುವನೊ, ಅವನು ಮೋಕ್ಷಪ್ರದವಾದ ಜ್ಞಾನವಿಲ್ಲದವನೆಂದು ತಿಳಿಯಬೇಕು. ಅಂತಹನು ಕರ್ಣಿಕಾರವೃಕ್ಷದ ಬಳಿಗೆ ಹೋಗಿ, "ಕರುಣೇಶ್ವರನು ನನ್ನ ಪೂಜೆಯಿಂದ ಸುಪ್ರೀತನಾಗಲಿ" ಎಂದು ಹೇಳಿಕೊಳ್ಳುತ್ತ ಆ ವೃಕ್ಷವನ್ನೇ ಪೂಜಿಸಬೇಕು. ಯಾವ ಬ್ರಾಹ್ಮಣೋತ್ತಮನು ಈ ಪ್ರಕಾರದಿಂದ ಒಂದು ವರ್ಷದವರೆಗೂ ಸೋಮವಾರದ ವ್ರತವನ್ನು ಆಚರಿಸುವನೊ, ಅವನಲ್ಲಿ ಕರುಣೇಶ್ವರನು ಪ್ರಸನ್ನನಾಗಿ ಅವನ ಇಷ್ಟಾರ್ಥವನ್ನು ನೆರವೇರಿಸಿಕೊಡುವನು. ಆದುದರಿಂದ ಸಕಲ ಮನುಷ್ಯರೂ ಕಾಶೀಕ್ಷೇತ್ರದಲ್ಲಿರುವ ಕರುಣೇಶ್ವರ ಮಹಾಲಿಂಗವನ್ನು ಅವಶ್ಯಕವಾಗಿ ನೋಡಲೇಬೇಕು.

೨೮. ಇಂತು ಕರುಣೇಶ್ವರನ ಮಹತ್ತರವಾದ ಮಹಿಮೆಯನ್ನು ನಿನಗೆ ವಿವರಿಸಿರುವೆನು. ಈ ಚರಿತ್ರೆಯನ್ನು ಕೇಳಲು ಕಾಶಿಯಲ್ಲಿ ಪ್ರತಿಕೂಲಗಳ ಭಯವು ಯಾತ್ರಿಕನಿಗೆ ಸಂಭವಿಸುವುದಿಲ್ಲ.

೨೯. ಕಾಶಿಯಲ್ಲಿ ಮೋಕ್ಷದ್ವಾರೇಶ್ವರನನ್ನೂ, ಸ್ವರ್ಗದ್ವಾರೇಶ್ವರನನ್ನೂ ನೋಡಿದ ಮಾನವನು ಮೋಕ್ಷವನ್ನೂ, ಸ್ವರ್ಗಲೋಕವಾಸವನ್ನೂ ಅನಾಯಾಸವಾಗಿಯೇ ಪಡೆಯುವನು.

ಜ್ಯೋತೀರೂಪೇಶ್ವರಂ ಲಿಂಗಂ ಕಾಶ್ಯಾಮನ್ಯತ್ಪ್ರಕಾಶತೇ ।
ತಸ್ಯ ಸಂಪೂಜನಾದ್ಭಕ್ತಾ ಜ್ಯೋತೀರೂಪಾ ಭವಂತಿ ಹಿ ॥ ೩೦ ॥
ಚಕ್ರಪುಷ್ಕರಿಣೀತೀರೇ ಜ್ಯೋತೀರೂಪೇಶ್ವರಂ ಪರಂ ।
ಸಮಭ್ಯರ್ಚ್ಯ ನರೋ ಯಾತಿ ಜ್ಯೋತೀರೂಪಂ ನ ಸಂಶಯಃ ॥ ೩೧ ॥
ಯದಾ ಭಾಗೀರಥೀ ಗಂಗಾ ತತ್ರ ಪ್ರಾಪ್ತಾ ಸರಿದ್ವರಾ ।
ತದಾರಭ್ಯಾರ್ಚಯೇನ್ನಿತ್ಯಂ ತಲ್ಲಿಂಗಂ ಸ್ವರ್ಧುನೀ ಮುದಾ ॥ ೩೨ ॥
ಪುರಾ ವಿಷ್ಣೌ ತಪತ್ಯತ್ರ ತಲ್ಲಿಂಗಂ ಸ್ವಯಮೇವ ಹಿ ।
ತತ್ರಾವಿರಾಸೀತ್ತೇಜಸ್ವಿ ತೇನ ಕ್ಷೇತ್ರಮಿದಂ ಶುಭಂ ॥ ೩೩ ॥
ಚಕ್ರಪುಷ್ಕರಿಣೀತೀರೇ ಜ್ಯೋತೀರೂಪೇಶ್ವರಂ ತದಾ ।
ದೂರಸ್ಥೋಽಪೀಹ ಯೋ ಧ್ಯಾಯೇತ್ತಸ್ಯ ಸಿದ್ಧಿರದೂರತಃ ॥ ೩೪ ॥
ಏತೇಷ್ವಪಿ ಚ ಲಿಂಗೇಷು ಚತುರ್ದಶಸು ಸತ್ತಮ ।
ಲಿಂಗಾಷ್ಟಕಂ ಮಹಾವೀರ್ಯಂ ಕರ್ಮಬೀಜದವಾನಲಂ ॥ ೩೫ ॥

---

೩೦. ವಾರಾಣಸೀಕ್ಷೇತ್ರದಲ್ಲಿ ಜ್ಯೋತೀರೂಪೇಶ್ವರವೆಂಬ ಮತ್ತೊಂದು ಲಿಂಗವು ಪ್ರಕಾಶಿಸುತ್ತಿರುವುದು. ಅದನ್ನು ಪೂಜಿಸುವುದರಿಂದ ಭಕ್ತರು ಜ್ಯೋತಿ ಸ್ವರೂಪರೇ ಆಗುವರು.

೩೧. ಈ ಜ್ಯೋತೀರೂಪೇಶ್ವರವೆಂಬ ಉತ್ತಮಲಿಂಗವು ಚಕ್ರಪುಷ್ಕರಿಣಿಯ ತೀರದಲ್ಲಿರುವುದು. ಇದನ್ನು ಪೂಜಿಸಲು ಮನುಷ್ಯನು ನಿಸ್ಸಂದೇಹವಾಗಿಯೂ ಜ್ಯೋತಿರ್ಮಯನೇ ಆಗುವನು.

೩೨. ಭಗೀರಥನ ಪ್ರಯತ್ನದ ಫಲವಾಗಿ ನದಿಗಳಲ್ಲಿ ಉತ್ತಮಳಾದ ಗಂಗೆಯು ಆ ಚಕ್ರಪುಷ್ಕರಿಣಿಗೆ ಯಾವಾಗ ಪ್ರಾಪ್ತಳಾದಳೊ, ಅಂದು ಮೊದಲಾಗಿ ಆಕೆಯು ಸಂತೋಷದಿಂದ ಆ ಲಿಂಗದ ಪೂಜೆಯನ್ನು ನಿತ್ಯವೂ ಮಾಡುತ್ತಿರುವಳು.

೩೩. ಪೂರ್ವದಲ್ಲಿ ಮಹಾವಿಷ್ಣುವು ಇಲ್ಲಿ ತಪಸ್ಸನ್ನಾಚರಿಸುತ್ತಿರಲು ಈ ಲಿಂಗವು ತಾನೇ ಆತನ ಸಮ್ಮುಖದಲ್ಲಿ ಅಮಿತಪ್ರಭೆಯಿಂದ ಕೂಡಿದುದಾಗಿ ಆವಿರ್ಭವಿಸಿತು. ಆದುದರಿಂದ ಆ ಕ್ಷೇತ್ರವು ಪವಿತ್ರವಾಗಿರುವುದು.

೩೪. ಚಕ್ರಪುಷ್ಕರಿಣೀತೀರ್ಥದ ತೀರದಲ್ಲಿರುವ ಜ್ಯೋತೀರೂಪೇಶ್ವರನನ್ನು ದೂರದಲ್ಲಿರುವಾಗಲೂ ಯಾವನು ಧ್ಯಾನಿಸುವನೊ, ಅವನ ಕಾರ್ಯವು ಕ್ಷಿಪ್ರದಲ್ಲಿಯೇ ಸಿದ್ಧಿಸುವುದು.

೩೫. ಅಯ್ಯಾ ಮುನಿಶ್ರೇಷ್ಠನೆ! ಮೇಲೆ ಹೇಳಿದ ಹದಿನಾಲ್ಕು ಲಿಂಗಗಳಲ್ಲಿಯೂ ಅಮೃತೇಶ್ವರ, ತಾರಕೇಶ್ವರ, ಜ್ಞಾನೇಶ್ವರ, ಮೋಕ್ಷದ್ವಾರೇಶ್ವರ, ಸ್ವರ್ಗದ್ವಾರೇಶ್ವರ, ಬ್ರಹ್ಮೇಶ್ವರ, ಲಾಂಗಲೀಶ್ವರ, ಕರುಣೇಶ್ವರರೆಂಬ ಎಂಟು ಲಿಂಗಗಳ ಸನ್ನಿಧಿಯೇ ಮಹಾಫಲದಾಯಕವೂ ಸಂಸಾರಕ್ಕೆ ಕಾರಣವಾದ ಕರ್ಮಬೀಜಕ್ಕೆ ದಾವಾಗ್ನಿಸದೃಶವೂ ಆಗಿರುವುದು.

ಓಂಕಾರಾದೀನಿ ಲಿಂಗಾನಿ ಯಾನ್ಯುಕ್ತಾನಿ ಚತುರ್ದಶ ।
ತಥಾ ದಕ್ಷೇಶ್ವರಾದೀನಿ ಲಿಂಗಾನ್ಯಷ್ಟೌ ಮಹಾಂತಿ ಚ ॥ ೩೬ ॥
ಶೈಲೇಶಾದೀನಿ ಲಿಂಗಾನಿ ತಥಾ ಯಾನಿ ಚತುರ್ದಶ ।
ಪುನಃ ಷಟ್‌ತ್ರಿಂಶದೇತಾನಿ ಕ್ಷೇತ್ರಸಂಸಿದ್ಧಿಹೇತವೇ ॥ ೩೭ ॥
ಷಟ್‌ತ್ರಿಂಶತ್ತತ್ವರೂಪೋಽಸೌ ಲಿಂಗೇಷ್ವೇಷು ಸದಾಶಿವಃ ।
ಅಸ್ಮಿನ್ಕ್ಷೇತ್ರೇ ವಸೇನ್ನಿತ್ಯಂ ತಾರಕಂ ಜ್ಞಾನಮಾದಿಶೇತ್ ॥ ೩೮ ॥
ಕ್ಷೇತ್ರಸ್ಯ ತತ್ವಮೇತದ್ಧಿ ಷಟ್ತ್ರಿಂಶಲ್ಲಿಂಗರೂಪ್ಯಹೋ ।
ಏತೇಷಾಂ ಭಜನಾತ್ಪುಂಸಾಂ ನ ಭವೇದ್ದುರ್ಗತಿಃ ಕ್ವಚಿತ್ ॥ ೩೯ ॥
ಮುನೇ ರಹಸ್ಯಭೂತಾನಿ ಲಿಂಗಾನ್ಯೇತಾನಿ ನಿಶ್ಚಿತಂ ।
ಏತಲ್ಲಿಂಗಪ್ರಭಾವಾಚ್ಚ ಮುಕ್ತಿರತ್ರ ಸುನಿಶ್ಚಿತಾ ॥ ೪೦ ॥
ಮೋಕ್ಷಕ್ಷೇತ್ರಮಿದಂ ಕಾಶೀ ಲಿಂಗೈರೇತೈರ್ಮಹಾಮತೇ ।
ಏತಾನ್ಯನ್ಯಾನಿ ಸಿದ್ಧಾನಿ ಸಂಭವಂತಿ ಯುಗೇ ಯುಗೇ ॥ ೪೧ ॥

---

೩೬. ಈ ಪ್ರಕಾರವಾಗಿ ನಿನಗೆ ಓಂಕಾರೇಶ್ವರನೇ ಮೊದಲಾದ ಹದಿನಾಲ್ಕು ಲಿಂಗಗಳನ್ನು ನಿರೂಪಿಸಿದೆನು. ಬಳಿಕ ಮಹಾಮಹಿಮೋಪೇತಗಳಾದ ದಕ್ಷೇಶ್ವರನೇ ಮೊದಲಾದ ಎಂಟು ಲಿಂಗಗಳನ್ನು ಹೇಳಿದೆನಷ್ಟೆ.

೩೭. ಪುನಃ ಶೈಲೇಶ್ವರನೇ ಮೊದಲಾಗಿ ಬೇರೆ ಹದಿನಾಲ್ಕು ಲಿಂಗಗಳನ್ನೂ ಕಥನಮಾಡಿರುವೆನು. ಈ ಮುವ್ವತ್ತಾರು ಮಹಾಲಿಂಗಗಳೂ ಈ ಕ್ಷೇತ್ರವನ್ನು ಸೇವಿಸುವವರ ಕಾರ್ಯಸಿದ್ಧಿಗಳಿಗೆ ಕಾರಣಗಳಾಗಿರುವುವು.

೩೮. ಸದಾಶಿವನು ಈ ಮುವ್ವತ್ತಾರು ಲಿಂಗಗಳಲ್ಲಿಯೂ ಮುವ್ವತ್ತಾರು ತತ್ತ್ವಗಳ ರೂಪಗಳಿಂದಿರುವನು. ಈ ಕ್ಷೇತ್ರದಲ್ಲಿ ಸರ್ವಕಾಲದಲ್ಲಿಯೂ ವಾಸ ಮಾಡುತ್ತ ಭಕ್ತರಿಗೆ ತಾರಕಜ್ಞಾನವನ್ನು ಉಪದೇಶಮಾಡುತ್ತಿರುವನು.

೩೯. ಪರಮೇಶ್ವರನು ಮುವ್ವತ್ತಾರು ತತ್ತ್ವಗಳ ರೂಪವನ್ನು ಧರಿಸಿ ನೆಲಸಿರುವುದೇ ಈ ಕ್ಷೇತ್ರದ ಗೂಢವಾದ ತತ್ತ್ವಾರ್ಥವೂ ಸ್ವರೂಪವೂ ಆಗಿರುವುದು. ಇವುಗಳನ್ನು ಸೇವಿಸುವುದರಿಂದ ಮನುಷ್ಯರಿಗೆಂದಿಗೂ ದುರ್ಗತಿ ದಾರಿದ್ರ್ಯಗಳುಂಟಾಗುವುದಿಲ್ಲ.

೪೦. ಮುನಿಯೆ! ನಿಶ್ಚಯವಾಗಿಯೂ ಈ ಲಿಂಗಗಳು ರಹಸ್ಯಭೂತಗಳಾಗಿರುವುವು. ಈ ಮಹಾಲಿಂಗಗಳ ಪ್ರಭಾವದಿಂದಲೇ ಇಲ್ಲಿ ಎಲ್ಲರಿಗೂ ಮೋಕ್ಷಪ್ರಾಪ್ತಿಯು ನಿಸ್ಸಂದೇಹವಾಗಿರುವುದು.

೪೧. ಮಹಾಪ್ರಾಜ್ಞನೆ! ಈ ಲಿಂಗಗಳ ಸಾನ್ನಿಧ್ಯದಿಂದಲೇ ಈ ಕಾಶೀ ಕ್ಷೇತ್ರವು ಮೋಕ್ಷಕ್ಷೇತ್ರವೆಂದು ಪ್ರಸಿದ್ಧವಾಗಿರುವುದು. ಪ್ರತಿಯೊಂದು ಯುಗದಲ್ಲಿಯೂ ಇವುಗಳೂ, ಇತರ ಲಿಂಗಗಳೂ ಪ್ರಸಿದ್ಧಿಯನ್ನು ಪಡೆಯುತ್ತಿರುವುವು.

ಆನಂದಕಾನನಂ ಶಂಭೋಃ ಕ್ಷೇತ್ರಮೇತದನಾದಿಮತ್ ।
ಅತ್ರ ಸಂಸ್ಥಿತಿಮಾಪನ್ನಾಃ ಮುಕ್ತಾ ಏವ ನ ಸಂಶಯಃ ॥ ೪೨ ॥
ಯೋಗಸಿದ್ಧಿರಿಹಾಸ್ತ್ಯೇವ ತಪಃಸಿದ್ಧಿರಿಹೈವ ಹಿ ।
ವ್ರತಸಿದ್ಧಿರ್ಮಂತ್ರಸಿದ್ಧಿಸ್ತೀರ್ಥಸಿದ್ಧಿಃ ಸುನಿಶ್ಚಿತಂ ॥ ೪೩ ॥
ಸಿದ್ಧ್ಯಷ್ಟಕಂ ಹಿ ಯತ್ಪ್ರೋಕ್ತಮಣಿಮಾದಿ ಮಹತ್ತರಂ ।
ತಜ್ಜನ್ಮಭೂಮಿರೇಷೈವ ಶಂಭೋರಾನಂದವಾಟಿಕಾ ॥ ೪೪ ॥
ನಿರ್ವಾಣಲಕ್ಷ್ಮ್ಯಾಃ ಸದನಮೇತದಾನಂದಕಾನನಂ ।
ಏತತ್ಪ್ರಾಪ್ಯ ನ ಮೋಕ್ತವ್ಯಂ ಪುಣ್ಯೈಃ ಸಂಸಾರಭೀರುಭಿಃ ॥ ೪೫ ॥
ಅಯಮೇವ ಮಹಾಲಾಭ ಇದಮೇವ ಪರಂ ತಪಃ ।
ಏತದೇವ ಮಹತ್ಪುಣ್ಯಂ ಲಬ್ಧಾ ವಾರಾಣಸೀಹ ಯತ್ ॥ ೪೬ ॥
ಅವಶ್ಯಂ ಜನ್ಮಿನೋ ಮೃತ್ಯುರ್ಯತ್ರ ಕುತ್ರ ಭವಿಷ್ಯತಿ ।
ಕರ್ಮಾನುಸಾರಿಣೀ ಲಭ್ಯಾ ಗತಿಃ ಪಶ್ಚಾಚ್ಛುಭಾಶುಭಾ ॥ ೪೭ ॥

---

೪೨. ಈ ಆನಂದಕಾನನವು ಮಹೇಶ್ವರನಿಗೆ ಅನಾದಿಕಾಲದಿಂದಲೂ ಕ್ಷೇತ್ರವಾಗಿರುವುದು. ಇಲ್ಲಿ ವಾಸವನ್ನೂ, ಮರಣವನ್ನೂ ಪಡೆಯುವವರು ಮುಕ್ತರಾಗುವುದರಲ್ಲಿ ಸಂದೇಹವೇ ಇಲ್ಲವು.

೪೩. ಯೋಗಾಭ್ಯಾಸದ ಸಿದ್ಧಿಯೂ ಇಲ್ಲಿಯೇ ಆಗುವುದು. ತಪಸ್ಸಿದ್ಧಿಯೂ, ವ್ರತಸಿದ್ಧಿಯೂ, ಮಂತ್ರಸಿದ್ಧಿಯೂ, ತೀರ್ಥಸಿದ್ಧಿಯೂ ಈ ಕ್ಷೇತ್ರದಲ್ಲಿಯೇ ಸುಲಭವಾಗಿ ಕೈಗೂಡುವುದು ನಿಶ್ಚಯವು.

೪೪. ಶಾಸ್ತ್ರದಲ್ಲಿ ಮಹತ್ತರಗಳಾದ ಅಣಿಮಾದಿ ಅಷ್ಟೈಶ್ವರ್ಯಗಳನ್ನೂ ನಿರೂಪಣೆಮಾಡಿರುವರಲ್ಲವೆ. ಅವುಗಳೆಲ್ಲಕ್ಕೂ ಪರಮೇಶ್ವರನ ಈ ಆನಂದವನವೇ ಜನ್ಮಭೂಮಿಯಾಗಿರುವುದು.

೪೫. ಈ ಆನಂದಕಾನನವೇ ಮೋಕ್ಷಲಕ್ಷ್ಮಿಗೆ ನೆಲೆಮನೆಯಾಗಿರುವುದು. ಸಂಸಾರದ ದೆಸೆಯಿಂದ ಭಯಗೊಂಡಿರುವ ಪುಣ್ಯಪುರುಷರು ಈ ಕ್ಷೇತ್ರವನ್ನು ಒಮ್ಮೆ ಸೇರಿದ ಮೇಲೆ ಎಂದಿಗೂ ಬಿಟ್ಟು ಹೋಗಬಾರದು.

೪೬. ಈ ಜನ್ಮದಲ್ಲಿ ಯಾವನಿಗೆ ವಾರಾಣಸೀಕ್ಷೇತ್ರದ ಸೇವೆಯು ಲಭಿಸಿರುವುದೊ, ಅವನಿಗೆ ಅದೇ ಮಹತ್ತರವಾದ ಲಾಭವು. ಅದೇ ಮಹತ್ತರವಾದ ತಪಶ್ಚರಣೆಯು. ಅದೇ ಮಹಾಪುಣ್ಯವು.

೪೭. ಜನ್ಮವನ್ನು ತಳೆದವನಿಗೆ ಅವಶ್ಯಕವಾಗಿಯೂ ಎಲ್ಲಿಯೋ ಒಂದೆಡೆಯಲ್ಲಿ ಮರಣವು ಸಂಭವಿಸುವುದು. ಬಳಿಕ ಪ್ರತಿಯೊಬ್ಬನಿಗೂ ಅವನವನ ಕರ್ಮಕ್ಕೆ ಅನುಗುಣವಾಗಿ ಶುಭಾಶುಭಗತಿಗಳೂ ಲಭಿಸುವುವು.

ಮೃತ್ಯುಂ ವಿಜ್ಞಾಯ ನಿಯತಂ ಗತಂ ಕರ್ಮಾನುಸಾರಿಣೀಂ ।
ಅವಶ್ಯಂ ಕಾಶಿಕಾ ಸೇವ್ಯಾ ಸರ್ವಕರ್ಮನಿವಾರಿಣೀ ॥ ೪೮ ॥
ಮಾನುಷ್ಯಂ ಪ್ರಾಪ್ಯ ಯೇ ಮೂಢಾ ನಿಮೇಷಮಿತಿಜೀವಿತಂ ।
ನ ಸೇವಂತೇ ಪುರೀಂ ಕಾಶೀಂ ತೇ ಮುಷ್ಟಾ ಮಂದಬುದ್ಧಯಃ ॥ ೪೯ ॥
ದುರ್ಲಭಂ ಜನ್ಮ ಮಾನುಷ್ಯಂ ದುರ್ಲಭಾ ಕಾಶಿಕಾ ಪುರೀ ।
ಉಭಯೋಃ ಸಂಗಮಾಸಾದ್ಯ ಮುಕ್ತಾ ಏವ ನ ಸಂಶಯಃ ॥ ೫೦ ॥
ಕ್ವ ಚ ತಾದೃಕ್ತಪಾಂಸೀಹ ಕ್ವ ತಾದೃಗ್ಯೋಗ ಉತ್ತಮಃ ।
ಯಾದೃಗ್ಭಿಃ ಪ್ರಾಪ್ಯತೇ ಮುಕ್ತಿಃ ಕಾಶ್ಯಾಂ ಮೋಕ್ಷೋತ್ತಮೋತ್ತಮಃ ॥
ಸತ್ಯಂ ಸತ್ಯಂ ಪುನಃ ಸತ್ಯಂ ಸತ್ಯಪೂರ್ವಂ ಪುನಃ ಪುನಃ ।
ನ ಕಾಶೀಸದೃಶೀ ಮುಕ್ತ್ಯೈ ಭೂಮಿರನ್ಯಾ ಮಹೀತಲೇ ॥ ೫೨ ॥
ವಿಶ್ವೇಶೋ ಮುಕ್ತಿದೋ ನಿತ್ಯಂ ಮುಕ್ತ್ಯೈ ಚೋತ್ತರವಾಹಿನೀ ।
ಆನಂದಕಾನನೇ ಮುಕ್ತಿರ್ಮುಕ್ತಿರ್ನಾನ್ಯತ್ರ ಕುತ್ರಚಿತ್ ॥ ೫೩ ॥

---

೪೮. ಆದುದರಿಂದ ಮೃತ್ಯುವು ಖಂಡಿತವೆಂಬುದನ್ನೂ, ಕರ್ಮಕ್ಕನುಸಾರ ಗತಿಯೊದಗುವುದನ್ನೂ ತಿಳಿದುಕೊಂಡು ಪ್ರತಿಯೊಬ್ಬನೂ ಸಕಲ ಕರ್ಮಬೀಜಗಳನ್ನು ನಾಶಗೊಳಿಸುವ ಕಾಶೀಕ್ಷೇತ್ರವನ್ನು ಸೇವಿಸಬೇಕು.

೪೯. ಕ್ಷಣಮಾತ್ರದಲ್ಲಿಯೇ ನಷ್ಟವಾಗುವ ಮನುಷ್ಯಜನ್ಮವನ್ನು ತಳೆದಿದ್ದರೂ ಯಾವ ಮೂಢರು ತಮ್ಮ ಜೀವನದಲ್ಲಿ ಕಾಶೀಪುರಿಯನ್ನು ಸೇವಿಸುವುದಿಲ್ಲವೊ, ಅವರೇ ಮೋಸಗೊಂಡವರು; ಅವರೇ ಮಂದಬುದ್ಧಿಯುಳ್ಳವರು.

೫೦. ಮನುಷ್ಯಜನ್ಮವೇ ದುರ್ಲಭವು. ಅದರಲ್ಲಿಯೂ ಕಾಶೀಕ್ಷೇತ್ರದ ಸೇವೆಯು ಅತ್ಯಂತ ದುರ್ಲಭವು. ಈ ಎರಡು ಅನುಕೂಲಗಳನ್ನೂ ಪಡೆದವರು ಮುಕ್ತರೇ ಎಂಬುದರಲ್ಲಿ ಸಂದೇಹವೇ ಇಲ್ಲವು.

೫೧–೫೨. ಸರ್ವೋತ್ತಮವಾದ ಸಾಯುಜ್ಯರೂಪಮೋಕ್ಷವು ಕಾಶಿಯಲ್ಲಿ ಯಾವುದರಿಂದ ಲಭಿಸುವುದೊ, ಅದಕ್ಕೆ ಸಮಾನಗಳಾದ ಇತರ ತಪಸ್ಸುಗಳು ಭೂಮಿಯಲ್ಲಿ ಯಾವುವಿರುವುವು? ಅಂತಹ ಉತ್ತಮಯೋಗವಾದರೂ ಯಾವುದಿರುವುದು? ಈ ಮಾತು ಸತ್ಯವು. ಪುನಃ ಪುನಃ ಸತ್ಯವೆಂದು ಶಪಥಪೂರ್ವಕವಾಗಿ ಹೇಳುತ್ತಿರುವೆನು. ಭೂಲೋಕದಲ್ಲಿ ಮನುಷ್ಯರಿಗೆ ಮೋಕ್ಷವನ್ನು ಕೊಡಲು ಕಾಶಿಗೆ ಸಮಾನವಾದ ಪ್ರದೇಶವು ಮತ್ತೆ ಯಾವುದೂ ಇಲ್ಲವು.

೫೩. ವಿಶ್ವೇಶ್ವರನೇ ನಿತ್ಯಮುಕ್ತಿಪ್ರದನಾಗಿರುವನು. ಉತ್ತರವಾಹಿನಿಯಾದ ಗಂಗೆಯೂ ಮಾನವರ ಮೋಕ್ಷಕ್ಕಾಗಿಯೇ ಅವತರಿಸಿರುವಳು. ಆದುದರಿಂದ ಆನಂದಕಾನನವೆಂದರಲ್ಲಿ ಮೋಕ್ಷವು ಮನುಷ್ಯರಿಗೆ ಲಭಿಸುವುದಲ್ಲದೆ ಬೇರೆಲ್ಲಿಯೂ ಲಭಿಸದು.

ಏಕ ಏವ ಹಿ ವಿಶ್ವೇಶೋ ಮುಕ್ತಿದೋ ನಾನ್ಯ ಏವ ಹಿ ।
ಸ ಏವ ಕಾಶೀಂ ಪ್ರಾಪಯ್ಯ ಮುಕ್ತಿಂ ಯಚ್ಛತಿ ನಾನ್ಯತಃ ॥ ೫೪ ॥
ಸಾಯುಜ್ಯಮುಕ್ತಿರತ್ರೈವ ಸಾನ್ನಿಧ್ಯಾದಿರಥಾನ್ಯತಃ ।
ಸುಲಭಾ ಸಾಪಿ ನೋ ನೂನಂ ಕಾಶ್ಯಾಂ ಮೋಕ್ಷೋಽಸ್ತಿ ಹೇಲಯಾ॥ ೫೫॥

ಸ್ಕಂದ ಉವಾಚ :—

ಶೃಣ್ವಗಸ್ತ್ಯ ಮಹಾಭಾಗ ಭವಿಷ್ಯಂ ಕಥಯಾಮ್ಯಹಂ ।
ಕೃಷ್ಣದ್ವೈಪಾಯನೋ ವ್ಯಾಸೋಽಕಥಯದ್ಯನ್ಮಹಧ್ವಜಃ ।
ನಿಶ್ಚಿತ್ಯೈಕಮನಾಃ ಪಶ್ಚಾದ್ಯತ್ಕರಿಷ್ಯತಿ ತಚ್ಛೃಣು ॥ ೫೬ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಅಮೃತೇಶ್ವರಾದಿ ಲಿಂಗಪ್ರಾದುರ್ಭಾವ ವರ್ಣನಂ" ನಾಮ ಚತುರ್ಣವತಿತಮೋಽಧ್ಯಾಯಃ**

---

೫೪. ಮುಕ್ತಿದಾತನಾದವನು ವಿಶ್ವೇಶ್ವರನೊಬ್ಬನಲ್ಲದೆ ಮತ್ತೊಬ್ಬನಿಲ್ಲ. ಆತನೇ ಭಕ್ತನನ್ನು ಕಾಶಿಗೆ ಕರೆಯಿಸಿಕೊಂಡು ಮೋಕ್ಷವನ್ನು ಕೊಡುವನು. ಬೇರೆ ಸ್ಥಳಗಳಲ್ಲಿ ಕೊಡುವುದಿಲ್ಲ.

೫೫. ಪರಮೇಶ್ವರನ ಸಾಯುಜ್ಯರೂಪವಾದ ಮೋಕ್ಷವು ಇಲ್ಲಿ ಮಾತ್ರ ಲಭಿಸುವುದು. ಇತರ ಕ್ಷೇತ್ರಗಳಲ್ಲಿ ಸಾನ್ನಿಧ್ಯ, ಸಾರೂಪ್ಯ, ಸಾಲೋಕ್ಯಗಳೆಂಬ ಮೋಕ್ಷಗಳು ಸಿಕ್ಕುವುವು. ಅವುಗಳೂ ಸಹ ಸುಲಭಸಾಧ್ಯಗಳಲ್ಲ. ಕಾಶಿಯಲ್ಲಾದರೊ, ಮಾನವರೆಲ್ಲರಿಗೂ ಲೀಲೆಯಿಂದಲೇ ಮೋಕ್ಷವು ಕರಗತವಾಗುವುದು.

೫೬. ಸ್ಕಂದನು ಹೇಳುತ್ತಾನೆ:—ಮಹಾಯಶನಾದ ಅಗಸ್ತ್ಯನೆ! ಇನ್ನು ಮೇಲೆ ನಡೆಯುವ ಭವಿಷ್ಯವೊಂದನ್ನು ಹೇಳುವೆನು, ಕೇಳು. ಕೃಷ್ಣದ್ವೈಪಾಯನನಾದ ವ್ಯಾಸನು ಯಾವ ಮಹಾವಚನವನ್ನು ಕಥನಮಾಡಿರುವನೊ, ಪರಮಾರ್ಥ ತತ್ತ್ವವನ್ನು ನಿಶ್ಚಯಿಸುವ ಮನಸ್ಸುಳ್ಳವನಾಗಿ ಮುಂದೆ ಏನನ್ನು ಮಾಡುವನೊ, ಅದನ್ನು ಕೇಳುವವನಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಅಮೃತೇಶ್ವರಾದಿ ಲಿಂಗಪ್ರಾದುರ್ಭಾವವರ್ಣನ"ವೆಂಬ ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚನವತಿತಮೋಽಧ್ಯಾಯಃ

## ವ್ಯಾಸಭುಜಸ್ತಂಭನವರ್ಣನಂ

ವ್ಯಾಸ ಉವಾಚ :—

ಶೃಣು ಸೂತ ಮಹಾಬುದ್ಧೇ ಯಥಾ ಸ್ಕಂದೇನ ಭಾಷಿತಂ ।
ಭವಿಷ್ಯಂ ಮಮ ತಸ್ಯಾಗ್ರೇ ಕುಂಭಯೋನೇರ್ಮಹಾಮತೇ ॥ ೧ ॥

ಸ್ಕಂದ ಉವಾಚ :—

ನಿಶಾಮಯ ಮಹಾಭಾಗ ತ್ವಂ ಮೈತ್ರಾವರುಣೇ ಮುನೇ ।
ಪಾರಾಶರ್ಯೋ ಮುನಿವರೋ ಯಥಾ ಮೋಹಮುಪೈಷ್ಯತಿ ॥ ೨ ॥
ವ್ಯಸ್ಯ ವೇದಾನ್ಮಹಾಬುದ್ಧಿರ್ನಾನಾಶಾಖಾಪ್ರಭೇದತಃ ।
ಅಷ್ಟಾದಶಪುರಾಣಾನಿ ಸೂತಾದೀನ್ಪರಿಪಾಠ್ಯ ಚ ॥ ೩ ॥
ಶೃತಿಸ್ಮೃತಿಪುರಾಣಾನಾಂ ರಹಸ್ಯಂ ಯಸ್ತ್ವಚೀಕರತ್ ।
ಮಹಾಭಾರತಸಂಜ್ಞಂ ಚ ಸರ್ವಲೋಕಮನೋಹರಂ ॥ ೪ ॥
ಸರ್ವಪಾಪಪ್ರಶಮನಂ ಸರ್ವಶಾಂತಿಕರಂ ಪರಂ ।
ಯಸ್ಯ ಶ್ರವಣಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ ॥ ೫ ॥

---

## ಕನ್ನಡದ ಅನುವಾದ

### ವ್ಯಾಸಭುಜಸ್ತಂಭನವರ್ಣನ

೧. ವ್ಯಾಸನು ಹೇಳುತ್ತಾನೆ :–ಮಹಾಬುದ್ಧಿಶಾಲಿಯಾದ ಸೂತನೆ! ನನಗೆ ಭವಿಷ್ಯದಲ್ಲಿ ಆಗಬೇಕಾಗಿರುವ ವಿಚಾರವನ್ನು ಸ್ಕಂದನು ಮಹಾಮತಿಯಾದ ಕುಂಭಸಂಭವನಿಗೆ ವಿವರಿಸಿದ ಕ್ರಮವನ್ನು ಹೇಳುವೆನು ; ಕೇಳು.

೨. ಸ್ಕಂದನು ಹೇಳುತ್ತಾನೆ :—ಮಿತ್ರಾವರುಣಪುತ್ರನಾದ ಓ ಮಹಾತ್ಮನೆ! ಪರಾಶರಮುನಿಯ ಮಗನೂ ಮುನಿಶ್ರೇಷ್ಠನೂ ಆದ ವ್ಯಾಸನು ಹೇಗೆ ಬುದ್ಧಿ ಭ್ರಮಣೆಯನ್ನು ಹೊಂದುವನೆಂಬುದನ್ನು ಕೇಳು.

೩. ಮಹಾಬುದ್ಧಿಯಾದ ಆತನು ಅನೇಕ ಶಾಖಾಭೇದಗಳನ್ನನುಸರಿಸಿ ನಾಲ್ಕು ವೇದಗಳನ್ನೂ ವಿಭಜನೆಮಾಡಿದನು. ಹದಿನೆಂಟು ಪುರಾಣಗಳನ್ನೂ ಬರೆದು ಸೂತನೇ ಮುಂತಾದವರಿಗೆ ಪಾಠಮಾಡಿಸಿದನು.

೪. ವೇದಗಳು, ಸ್ಮೃತಿಗಳು, ಪುರಾಣಗಳು–ಇವುಗಳಲ್ಲಿರುವ ರಹಸ್ಯಾರ್ಥ ವನ್ನು ಕ್ರೋಡೀಕರಿಸಿ, ಸಕಲಲೋಕಮನೋಹರವೆನಿಸಿದ ಮಹಾಭಾರತವೆಂಬ ಇತಿಹಾಸವನ್ನು ರಚಿಸಿದನು.

೫. ಆ ಗ್ರಂಥವು ಸಕಲ ಪಾತಕಗಳನ್ನೂ ನಾಶಗೊಳಿಸಿ ಮನಶ್ಶಾಂತಿ

ಏಕದಾ ಸ ಮುನಿಃ ಶ್ರೀಮಾನ್ಪರ್ಯಟನ್ಪೃಥಿವೀತಲೇ ।
ಸಂಪ್ರಾಪ್ತೋ ನೈಮಿಷಾರಣ್ಯಂ ಯತ್ರ ಸಂತಿ ಮುನೀಶ್ವರಾಃ ॥ ೬ ॥
ಅಷ್ಟಾಶೀತಿ ಸಹಸ್ರಾಣಿ ಶೌನಕಾದ್ಯಾಸ್ತಪೋಧನಾಃ ।
ತ್ರಿಪುಂಡ್ರಿತಮಹಾಭಾಲಾ ಲಸದ್ರುದ್ರಾಕ್ಷಮಾಲಿನಃ ॥ ೭ ॥
ವಿಭೂತಿಧಾರಿಣೋ ಭಕ್ತ್ಯಾ ರುದ್ರಸೂಕ್ತಜಪಪ್ರಿಯಾನ್ ।
ಲಿಂಗಾರಾಧನಸಂಸಕ್ತಾನ್ ಶಿವನಾಮಕೃತಾದರಾನ್ ॥ ೮ ॥
ಏಕ ಏವ ಹಿ ವಿಶ್ವೇಶೋ ಮುಕ್ತಿದೋ ನಾನ್ಯ ಏವ ಹಿ ।
ಇತಿ ಬ್ರುವಾಣಾನ್ಸತತಂ ಪರಿನಿಶ್ಚಿತಮಾನಸಾನ್ ॥ ೯ ॥
ವಿಲೋಕ್ಯ ಸ ಮುನಿರ್ವ್ಯಾಸಸ್ತಾನ್ಸರ್ವಾನ್ಗಿರಿಶಾತ್ಮನಃ ।
ಉತ್ಕ್ಷಿಪ್ಯ ತರ್ಜನೀಮುಚ್ಚೈಃ ಪ್ರೋವಾಚೇದಂ ವಚಃ ಪುನಃ ॥ ೧೦ ॥
ಪರಿನಿರ್ಮಥ್ಯ ವಾಗ್ಜಾಲಂ ಸುನಿಶ್ಚಿತ್ಯಾಸಕೃದ್ಬಹು ।
ಇದಮೇಕಂ ಪರಿಜ್ಞಾತಂ ಸೇವ್ಯಃ ಸರ್ವೇಶ್ವರೋ ಹರಿಃ ॥ ೧೧ ॥

---

ಯನ್ನುಂಟುಮಾಡುವ ಉತ್ತಮ ಚರಿತ್ರೆಯಾಗಿರುವುದು. ಅದನ್ನು ಕೇಳುವ ಮಾತ್ರದಿಂದಲೇ ಬ್ರಹ್ಮಹತ್ಯೆಯೂ ನಾಶವನ್ನು ಹೊಂದುವುದು.

೬. ಒಮ್ಮೆ ಸರ್ವಜ್ಞನಾದ ಆ ಮಹಾಮುನಿಯು ಭೂಮಿಯೆಲ್ಲವನ್ನೂ ಸುತ್ತುತ್ತ ಸಮಸ್ತಮುನಿವರ್ಯರೂ ನೆರೆದಿದ್ದ ನೈಮಿಷಾರಣ್ಯವನ್ನು ಪ್ರವೇಶಿಸಿದನು.

೭. ಶೌನಕನೇ ಮುಂತಾದ ಎಂಬತ್ತೆಂಟು ಸಾವಿರ ಮಂದಿ ಮುನೀಶ್ವರರು ಅಲ್ಲಿ ನೆರೆದಿದ್ದರು. ಎಲ್ಲರೂ ತಮ್ಮ ವಿಶಾಲಗಳಾದ ಹಣೆಗಳಲ್ಲಿ ತ್ರಿಪುಂಡ್ರಗಳನ್ನು ಧರಿಸಿಕೊಂಡು ಬೆಳಗುತ್ತಿರುವ ರುದ್ರಾಕ್ಷಮಾಲೆಗಳಿಂದಲಂಕೃತರಾಗಿದ್ದರು.

೮. ವಿಭೂತಿಯನ್ನು ಧರಿಸಿ ಭಕ್ತಿಭಾವದಿಂದ ರುದ್ರಸೂಕ್ತಗಳನ್ನು ಜಪಿಸುವುದರಲ್ಲಿಯೇ ಪ್ರೀತಿಯುಳ್ಳವರಾಗಿದ್ದರು. ಎಲ್ಲರೂ ಶಿವಲಿಂಗಗಳ ಆರಾಧನೆಯಲ್ಲಿಯೇ ವ್ಯಗ್ರಚಿತ್ತರಾಗಿದ್ದರು. ಶಿವನಾಮಗಳ ಜಪದಲ್ಲಿಯೇ ಆದರವನ್ನು ತೋರಿಸುತ್ತಿದ್ದರು.

೯. ವಿಶ್ವೇಶ್ವರನೊಬ್ಬನೇ ಮುಕ್ತಿಪ್ರದನು. ಬೇರೊಬ್ಬನಿಲ್ಲ. ಎಂದು ಅವರೆಲ್ಲರೂ ನಿರಂತರವಾಗಿ ಹೇಳುತ್ತ ಆ ತತ್ತ್ವಾರ್ಥದಲ್ಲಿಯೇ ನಿಸ್ಸಂಶಯವಾದ ಅಭಿಪ್ರಾಯವುಳ್ಳವರಾಗಿದ್ದರು.

೧೦. ಆ ಮುನಿವರ್ಯನು ಮಹೇಶ್ವರನಲ್ಲಿಯೇ ನೆಟ್ಟ ಮನಸ್ಸುಳ್ಳ ಆ ಋಷಿಗಳನ್ನು ಕಂಡು ತನ್ನ ಮುಂಬೆರಳನ್ನೆತ್ತಿ ಹಿಡಿದು ಮತ್ತೆ ಮತ್ತೆ ಮುಂದೆ ಹೇಳುವ ಮಾತನ್ನು ಉಚ್ಚಸ್ವರದಿಂದ ಕೂಗಿ ಹೇಳಿದನು.

೧೧. "ಸಕಲ ವಾಗ್ಜಾಲವನ್ನೂ ಆಲೋಚನೆಮಾಡಿ ಪುನಃಪುನಃ ಅನೇಕ

ವೇದೇ ರಾಮಾಯಣೇ ಚೈವ ಪುರಾಣೇಷು ಚ ಭಾರತೇ ।
ಆದಿಮಧ್ಯಾವಸಾನೇಷು ಹರಿರೇಕೋಽತ್ರ ನಾಪರಃ ॥ ೧೨ ॥
ಸತ್ಯಂ ಸತ್ಯಂ ತ್ರಿಸತ್ಯಂ ಪುನಃ ಸತ್ಯಂ ನ ಮೃಷಾ ಪುನಃ ।
ನ ವೇದಾದಪರಂ ಶಾಸ್ತ್ರಂ ನ ದೇವೋಽಚ್ಯುತತಃ ಪರಃ ॥ ೧೩ ॥
ಲಕ್ಷ್ಮೀಶಃ ಸರ್ವದೋ ನಾನ್ಯೋ ಲಕ್ಷ್ಮೀಶೋಽಪ್ಯಪವರ್ಗತಃ ।
ಏಕ ಏವ ಹಿ ಲಕ್ಷ್ಮೀಶಸ್ತತೋ ಧ್ಯೇಯೋ ನ ಚಾಪರಃ ॥ ೧೪ ॥
ಭುಕ್ತೇರ್ಮುಕ್ತೇರಿಹಾನ್ಯತ್ರ ನಾನ್ಯೋ ದಾತಾ ಜನಾರ್ದನಾತ್ ।
ತಸ್ಮಾಚ್ಚತುರ್ಭುಜೋ ನಿತ್ಯಂ ಸೇವನೀಯಃ ಸುಖೇಪ್ಸುಭಿಃ ॥ ೧೫ ॥
ವಿಹಾಯ ಕೇಶವಾದನ್ಯಂ ಯೇ ಸೇವಂತೇಽಲ್ಪಮೇಧಸಃ ।
ಸಂಸಾರಚಕ್ರೇ ಗಹನೇ ತೇ ವಿಶಂತಿ ಪುನಃ ಪುನಃ ॥ ೧೬ ॥
ಏಕ ಏವ ಹಿ ಸರ್ವೇಶೋ ಹೃಷೀಕೇಶಃ ಪರಾತ್ಪರಃ ।
ತಂ ಸೇವಮಾನಃ ಸತತಂ ಸೇವ್ಯಸ್ತ್ರಿಜಗತಾಂ ಭವೇತ್ ॥ ೧೭ ॥

---

ವಾಗಿ ವಿಚಾರಿಸಿ ನೋಡಲು ನನಗೆ ಇದೊಂದೇ ದೃಢನಿಶ್ಚಯವಾಗಿರುವುದು. ಸರ್ವೇಶ್ವರನಾದ ಶ್ರೀಹರಿಯೇ ಸಕಲರಿಗೂ ಸೇವ್ಯನಾಗಿರುವನು.

೧೨. ವೇದಗಳಲ್ಲಿಯೂ, ರಾಮಾಯಣದಲ್ಲಿಯೂ, ಹದಿನೆಂಟು ಪುರಾಣಗಳಲ್ಲಿಯೂ, ಮಹಾಭಾರತದಲ್ಲಿಯೂ ಎಲ್ಲಿ ನೋಡಿದರೂ ಮೊದಲಿನಲ್ಲಿಯೂ, ಮಧ್ಯದಲ್ಲಿಯೂ, ಅಂತ್ಯದಲ್ಲಿಯೂ ಶ್ರೀಮನ್ನಾರಾಯಣನೊಬ್ಬನೇ ಕೀರ್ತಿಸಲ್ಪಡುತ್ತಿರುವನಲ್ಲದೆ ಬೇರೊಬ್ಬ ದೈವವಲ್ಲ.

೧೩. ಸತ್ಯವು. ಸತ್ಯವು. ಮೂರುಬಾರಿಗೂ ಈ ನನ್ನ ವಾಕ್ಯವೇ ಸತ್ಯವು. ಎಂದಿಗೂ ಸುಳ್ಳಾದುದಲ್ಲ. ವೇದರಾಶಿಗಿಂತಲೂ ಉತ್ತಮವಾದ ಶಾಸ್ತ್ರವಿಲ್ಲ. ಅಚ್ಯುತನಿಗಿಂತಲೂ ಉತ್ತಮನಾದ ದೇವರಿಲ್ಲ.

೧೪. ಲಕ್ಷ್ಮೀರಮಣನೇ ಸಕಲಾಭೀಷ್ಟಪ್ರದನು. ಲಕ್ಷ್ಮೀಶ್ವರನೇ ಮೋಕ್ಷವನ್ನೂ ಅನುಗ್ರಹಿಸುವನು. ಆದುದರಿಂದ ಆತನೊಬ್ಬನೇ ಮಾನವರ ಧ್ಯಾನಕ್ಕೆ ವಿಷಯನಾಗಬೇಕಲ್ಲದೆ ಮತ್ತೊಬ್ಬನಲ್ಲ.

೧೫. ಜನಾರ್ದನನ್ನುಳಿದು ಇಹದಲ್ಲಿ ಭೋಗಗಳನ್ನೂ, ಪರದಲ್ಲಿ ಮೋಕ್ಷವನ್ನೂ ಕೊಡುವವನು ಮತ್ತೊಬ್ಬನಿಲ್ಲ. ಆದುದರಿಂದ ಸುಖವನ್ನಪೇಕ್ಷಿಸುವವರು ನಿತ್ಯವೂ ಚತುರ್ಭುಜನಾದ ಮಹಾವಿಷ್ಣುವನ್ನೇ ಸೇವಿಸಬೇಕು.

೧೬. ಯಾವ ಮಂದಬುದ್ಧಿಗಳು ಕೇಶವನನ್ನುಳಿದು ಮತ್ತೊಬ್ಬನನ್ನು ಸೇವಿಸುವರೊ, ಅವರು ಖಂಡಿತವಾಗಿಯೂ ಮತ್ತೆ ಮತ್ತೆ ಘೋರವಾದ ಸಂಸಾರಚಕ್ರದಲ್ಲಿ ಬೀಳುತ್ತಿರುವರು.

೧೭. ಸರ್ವೇಶ್ವರನೂ, ಪರಾತ್ಪರನೂ ಆದ ಹೃಷೀಕೇಶನೊಬ್ಬನೇ ಸರ್ವೋ

**ಏಕೋ ಧರ್ಮಪ್ರದೋ ವಿಷ್ಣುಸ್ತ್ವೇಕೋ ಬಹ್ವರ್ಥದೋ ಹರಿಃ ।**
**ಏಕಃ ಕಾಮಪ್ರದಶ್ಚಕ್ರೀ ತ್ವೇಕೋ ಮೋಕ್ಷಪ್ರದೋಽಚ್ಯುತಃ ॥ ೧೮ ॥**
**ಶಾರ್ಙ್ಗಿಣಂ ಯೇ ಪರಿತ್ಯಜ್ಯ ದೇವಮನ್ಯಮುಪಾಸತೇ ।**
**ತೇ ಸದ್ಭಿಶ್ಚ ಬಹಿಷ್ಕಾರ್ಯಾ ವೇದಹೀನಾ ಯಥಾ ದ್ವಿಜಾಃ ॥ ೧೯ ॥**
**ಶ್ರುತ್ವೇತಿ ವಾಕ್ಯಂ ವ್ಯಾಸಸ್ಯ ನೈಮಿಷಾರಣ್ಯವಾಸಿನಃ ।**
**ಪ್ರವೇಪಮಾನಹೃದಯಾಃ ಪರಿಪ್ರೋಚುರಿದಂ ವಚಃ ॥ ೨೦ ॥**

**ಋಷಯ ಊಚುಃ :–**

**ಪಾರಾಶರ್ಯಮುನೇ ಮಾನ್ಯಸ್ತ್ವಮಸ್ಮಾಕಂ ಮಹಾಮತೇ ।**
**ಯತೋ ವೇದಾಸ್ತ್ವಯಾ ವ್ಯಸ್ತಾಃ ಪುರಾಣಾನ್ಯಪಿ ವೇತ್ಸಿ ಯತ್ ॥ ೨೧ ॥**
**ಯತಶ್ಚ ಕರ್ತಾ ತ್ವಮಸಿ ಮಹತೋ ಭಾರತಸ್ಯ ವೈ ।**
**ಧರ್ಮಾರ್ಥಕಾಮಮೋಕ್ಷಾಣಾಂ ವಿನಿಶ್ಚಯ ಕೃತೋ ಧ್ರುವಂ ॥ ೨೨ ॥**
**ತತ್ತ್ವಜ್ಞಃ ಕೋಽಪರಶ್ಚಾತ್ರ ತ್ವತ್ತಃ ಸತ್ಯವತೀಸುತ ॥ ೨೩ ॥**

ತ್ತಮದೈವವು. ಆತನನ್ನು ನಿತ್ಯವೂ ಸೇವಿಸುತ್ತಿರುವ ಮಾನವನು ಮೂರು ಲೋಕಗಳಿಗೂ ಸೇವ್ಯನಾಗುವನು.

೧೮. ಮಹಾವಿಷ್ಣುವೊಬ್ಬನೇ ಧರ್ಮಪ್ರದನು. ಶ್ರೀಹರಿಯೊಬ್ಬನೇ ಸರ್ವಾರ್ಥದಾಯಕನು. ಚಕ್ರಪಾಣಿಯೊಬ್ಬನೇ ಅಭಿಲಾಷೆಗಳನ್ನು ನೆರವೇರಿಸುವವನು. ಅಚ್ಯುತನಾದ ಆತನೊಬ್ಬನೇ ಮೋಕ್ಷವನ್ನು ಕೊಡುವವನು.

೧೯. ಶಾರ್ಙ್ಗಪಾಣಿಯಾದ ಆತನನ್ನು ತ್ಯಜಿಸಿ ಯಾರು ಬೇರೆ ದೈವವನ್ನು ಉಪಾಸಿಸುವರೊ, ಅವರೆಲ್ಲರೂ ವೇದಾಧ್ಯಯನಹೀನರಾದ ಬ್ರಾಹ್ಮಣರಂತೆ ಸಜ್ಜನರ ಬಹಿಷ್ಕಾರಕ್ಕೆ ಯೋಗ್ಯರಾಗಿರುವರು.''

೨೦. ವ್ಯಾಸಮಹರ್ಷಿಯ ಈ ಮಾತುಗಳನ್ನು ಕೇಳಿ ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳೆಲ್ಲರೂ ಕಂಪಿಸುವ ಹೃದಯಗಳುಳ್ಳವರಾಗಿ ಇಂತೆಂದು ಹೇಳತೊಡಗಿದರು.

೨೧. ಋಷಿಗಳು ಹೇಳುತ್ತಾರೆ :—"ಮಹಾಮತಿಯಾದ ವೇದವ್ಯಾಸನೆ! ನೀನು ನಮಗೆಲ್ಲರಿಗೂ ಮಾನ್ಯತಮನಾಗಿರುವೆ. ವೇದಗಳೆಲ್ಲವೂ ನಿನ್ನಿಂದಲೇ ವಿಭಜಿಸಲ್ಪಟ್ಟುವು. ನೀನು ಸಕಲ ಪುರಾಣಗಳನ್ನೂ ತಿಳಿದಿರುವೆ.

೨೨. ಅಲ್ಲದೆ ಮಹಾಗ್ರಂಥವಾದ ಮಹಾಭಾರತಕ್ಕೆ ಕರ್ತೃವಾಗಿರುವೆ. ಆ ಗ್ರಂಥದಿಂದಲೇ ಮನುಷ್ಯರಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ನಿಶ್ಚಯಜ್ಞಾನವುಂಟಾಗುವುದು ನಿಜವು.

೨೩. ಅಯ್ಯಾ ಸತ್ಯವತಿಯ ಪುತ್ರನೆ! ಈ ವಿಷಯದಲ್ಲಿ ನಿನಗಿಂತಲೂ ತತ್ತ್ವಜ್ಞನಾದವನು ಬೇರೆ ಯಾವನಿರುವನು?

ಭವತಾ ಯತ್ಪ್ರತಿಜ್ಞಾತಂ ನಿಶ್ಚಿತ್ಯೋತ್ಕ್ಷಿಪ್ಯ ತರ್ಜನೀಂ ।
ಅಸ್ಮಿನ್ಮಾಣವಕಾಸ್ತತ್ರ ಪರಿಶ್ರದ್ದಧತೇ ನ ಹಿ ॥ ೨೪ ॥
ಪ್ರತಿಜ್ಞಾತಸ್ಯ ವಚಸಸ್ತವ ಶ್ರದ್ಧಾ ಭವೇತ್ತದಾ ।
ಯದಾಽಽನಂದವನೇ ಶಂಭೋಃ ಪ್ರತಿಜಾನಾಸಿ ವೈ ವಚಃ ॥ ೨೫ ॥
ಗಚ್ಛ ವಾರಾಣಸೀಂ ವ್ಯಾಸ ಯತ್ರ ವಿಶ್ವೇಶ್ವರಃ ಸ್ವಯಂ ।
ನ ತತ್ರ ಯುಗಧರ್ಮೋಽಸ್ತಿ ನ ಚ ಲಗ್ನಾ ವಸುಂಧರಾ ॥ ೨೬ ॥
ಇತಿ ಶ್ರುತ್ವಾ ಮುನಿರ್ವ್ಯಾಸಃ ಕಿಂಚಿತ್ಕುಪಿತವದ್ಧೃದಿ ।
ಜಗಾಮ ತೂರ್ಣಂ ಸಹಿತಃ ಸ್ವಶಿಷ್ಯೈರಯುತೋನ್ಮಿತೈಃ ॥ ೨೭ ॥
ಪ್ರಾಪ್ಯ ವಾರಾಣಸೀಂ ವ್ಯಾಸಃ ಸ್ನಾತ್ವಾ ಪಂಚನದೇ ಹ್ರದೇ ।
ಶ್ರೀಮನ್ಮಾಧವಮಭ್ಯರ್ಚ್ಯ ಯಯೌ ಪಾದೋದಕಂ ತತಃ ॥ ೨೮ ॥
ತತ್ರ ಸ್ನಾನಾದಿಕಂ ಕೃತ್ವಾ ದೃಷ್ಟ್ವಾ ಚೈವಾದಿಕೇಶವಂ ।
ಪಂಚರಾತ್ರಂ ತತಃ ಕೃತ್ವಾ ವೈಷ್ಣವೈರಭಿನಂದಿತಃ ॥ ೨೯ ॥
ಅಗ್ರತಃ ಪೃಷ್ಠತಃ ಶಂಖೈರ್ವಾದ್ಯಮಾನೈಃ ಪ್ರಮೋದಿತಃ ।
ಜಯ ವಿಷ್ಣೋ ಹೃಷೀಕೇಶ ಗೋವಿಂದ ಮಧುಸೂದನ ॥ ೩೦ ॥

---

೨೪-೨೫. ನೀನು ಬೆರಳನ್ನೆತ್ತಿಕೊಂಡು ಯಾವ ಪ್ರತಿಜ್ಞೆಯನ್ನು ಮಾಡುತ್ತಿರುವೆಯೊ, ಆ ನಿನ್ನ ದೃಢನಿಶ್ಚಯದ ವಿಷಯದಲ್ಲಿ ಈ ನಮ್ಮ ಶಿಷ್ಯರು ಪೂರ್ಣ ಶ್ರದ್ಧೆಯುಳ್ಳವರಾಗಿರುವುದಿಲ್ಲ. ನೀನು ಮಹೇಶ್ವರನ ವಾಸಸ್ಥಾನವಾದ ಆನಂದ ಕಾನನಕ್ಕೆ ಹೋಗಿ ಅಲ್ಲಿಯೇ ಈ ಪ್ರತಿಜ್ಞೆಯನ್ನು ಮಾಡುವೆಯಾದರೆ ಆಗ ಮಾತ್ರ ಶಪಥಪೂರ್ವಕವಾದ ನಿನ್ನ ಮಾತಿನಲ್ಲಿ ಎಲ್ಲರಿಗೂ ಶ್ರದ್ಧೆಯುಂಟಾಗುವುದು.

೨೬. ವ್ಯಾಸಮಹರ್ಷಿಯೆ! ವಿಶ್ವೇಶ್ವರನು ಸಾಕ್ಷಾತ್ತಾಗಿ ನೆಲಸಿರುವ ವಾರಾಣಸೀಕ್ಷೇತ್ರಕ್ಕೆ ಹೋಗು. ಅಲ್ಲಿ ಯುಗಧರ್ಮಗಳು ನಡೆಯುವುದಿಲ್ಲ. ಭೂಲೋಕದ ಕಲ್ಮಷಗಳೂ ಅಲ್ಲಿ ಅಂಟುವುದಿಲ್ಲ.''

೨೭. ಈ ಮಾತುಗಳನ್ನು ಕೇಳಿ ವ್ಯಾಸಮುನಿಯು ಮನಸ್ಸಿನಲ್ಲಿಯೇ ಸ್ವಲ್ಪ ಕೋಪವನ್ನು ತಾಳಿದಂತೆ ಕಾಣುತ್ತ ಹತ್ತುಸಾವಿರ ಸಂಖ್ಯೆಯ ತನ್ನ ಶಿಷ್ಯರಿಂದ ಪರಿವಾರಿತನಾಗಿ ವೇಗದಿಂದ ಹೊರಟನು.

೨೮. ಆ ವ್ಯಾಸನು ವಾರಾಣಸಿಯನ್ನು ಸೇರಿ ಪಂಚನದ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡನು. ಬಳಿಕ ಮಾಧವನ ಪೂಜೆಯನ್ನು ಮಾಡಿಕೊಂಡು ಪಾದೋದಕತೀರ್ಥದ ಬಳಿಗೆ ಬಂದು ಸೇರಿದನು.

೨೯. ಆ ತೀರ್ಥದಲ್ಲಿ ಸ್ನಾನಾಹ್ನಿಕಾದಿಗಳನ್ನು ತೀರಿಸಿಕೊಂಡು ಆದಿಕೇಶವನ ದರ್ಶನವನ್ನು ತೆಗೆದುಕೊಂಡು ಪಾಂಚರಾತ್ರಾಗಮೋಕ್ತವಾದ ಕ್ರಿಯೆಯನ್ನು ಮಾಡಿ ವಿಷ್ಣುಭಕ್ತರಿಂದ ಅಭಿನಂದಿಸಲ್ಪಟ್ಟನು.

೩೦-೩೯. ಮುಂದೆಯೂ, ಹಿಂದೆಯೂ ಶಂಖಗಳು ಬಾಜಿಸಲ್ಪಡುತ್ತಿರಲು

ಅಚ್ಯುತಾನಂತ ವೈಕುಂಠ ಮಾಧವೋಪೇಂದ್ರ ಕೇಶವ ।
ತ್ರಿವಿಕ್ರಮ ಗದಾಪಾಣೇ ಶಾರ್ಙ್ಗಪಾಣೇ ಜನಾರ್ದನ ॥ ೩೧ ॥
ಶ್ರೀವತ್ಸವಕ್ಷಃ ಶ್ರೀಕಾಂತ ಪೀತಾಂಬರ ಮುರಾಂತಕ ।
ಕೈಟಭಾರೇ ಬಲಿಧ್ವಂಸಿನ್ಕಂಸಾರೇ ಕೇಶಿಸೂದನ ॥ ೩೨ ॥
ನಾರಾಯಣಾಸುರರಿಪೋ ಕೃಷ್ಣ ಶೌರೇ ಚತುರ್ಭುಜ ।
ದೇವಕೀಹೃದಯಾನಂದ ಯಶೋದಾನಂದವರ್ಧನ ॥ ೩೩ ॥
ಪುಂಡರೀಕಾಕ್ಷ ದೈತ್ಯಾರೇ ದಾಮೋದರ ಬಲಪ್ರಿಯ ।
ಬಲಾರಾತಿಸ್ತುತ ಹರೇ ವಾಸುದೇವ ವಸುಪ್ರದ ॥ ೩೪ ॥
ವಿಷ್ವಕ್ಚಮೂಸ್ತಾರ್ಕ್ಷ್ಯರಥ ವನಮಾಲಿನ್ನರೋತ್ತಮ ।
ಅಧೋಕ್ಷಜ ಕ್ಷಮಾಧಾರ ಪದ್ಮನಾಭ ಜಲೇಶಯ ॥ ೩೫ ॥
ನೃಸಿಂಹ ಯಜ್ಞವಾರಾಹ ಗೋಪಗೋಪಾಲವಲ್ಲಭ ।
ಗೋಪೀಪತೇ ಗುಣಾತೀತ ಗರುಡಧ್ವಜ ಗೋತ್ರಭೃತ್ ॥ ೩೬ ॥
ಜಯ ಚಾಣೂರಮಥನ ಜಯ ತ್ರೈಲೋಕ್ಯರಕ್ಷಣ ।
ಜಯಾನಾದ್ಯ ಜಯಾನಂದ ಜಯ ನಿಲೋತ್ಪಲದ್ಯುತೇ ॥ ೩೭ ॥

---

ಅತ್ಯಂತ ಸಂತೋಷದಿಂದ ಶ್ರೀಹರಿಯ ನಾಮಗಳನ್ನು ಕೀರ್ತಿಸುತ್ತಿದ್ದನು. "ಸರ್ವವ್ಯಾಪಿಯೆ! ಇಂದ್ರಿಯನಿಯಾಮಕನೆ! ವೇದವೇದ್ಯನೆ! ಮಧುವೈರಿಯೆ! ನಾಶರಹಿತನೆ! ವೈಕುಂಠವಾಸಿಯೆ! ಲಕ್ಷ್ಮೀರಮಣನೆ! ಇಂದ್ರಾನುಜನೆ! ಬ್ರಹ್ಮರುದ್ರರಿಗೆ ನಿಯಾಮಕನೆ! ತ್ರಿವಿಕ್ರಮನೆ! ಗದಾಪಾಣಿಯೆ! ಶಾರ್ಙ್ಗಧನುರ್ಧರನೆ! ಜನಾರ್ದನನೆ! ಶ್ರೀವತ್ಸವನ್ನು ಎದೆಯಲ್ಲಿ ತಳೆದಿರುವವನೆ! ಶ್ರೀಕಾಂತನೆ! ಪೀತಾಂಬರಧಾರಿಯೆ! ಮುರವೈರಿಯೆ! ಕೈಟಭಸಂಹಾರಿಯೆ! ಬಲಿಧ್ವಂಸಿಯೆ! ಕಂಸನಿಷೂದನನೆ! ಕೇಶಿಯನ್ನು ನಿಗ್ರಹಿಸಿದವನೆ! ನಾರಾಯಣನೆ! ರಾಕ್ಷಸಮರ್ದನನೆ! ಲೋಕಚಿತ್ತಾಕರ್ಷಕನೆ! ಶೌರಿಯೆ! ಚತುರ್ಭುಜನೆ! ದೇವಕೀದೇವಿಯ ಹೃದಯವನ್ನಾನಂದಗೊಳಿಸಿದವನೆ! ಯಶೋದೆಯ ಆನಂದವನ್ನು ಹೆಚ್ಚಿಸಿದವನೆ! ಕಮಲಾಯತನೇತ್ರನೆ! ದೈತ್ಯರಿಪುವೆ! ದಾಮೋದರನೆ! ಬಲಭದ್ರನ ತಮ್ಮನೆ! ಮಹೇಂದ್ರನಮಸ್ಕೃತನೆ! ಶ್ರೀಹರಿಯೆ! ವಸುದೇವನ ಸುತನೆ! ಐಶ್ವರ್ಯಪ್ರದನೆ! ವಿಷ್ವಕ್ಸೇನನೆ! ಗರುಡವಾಹನನೆ! ವನಮಾಲಾವಿಭೂಷಿತನೆ! ಪುರುಷೋತ್ತಮನೆ! ಅಧೋಕ್ಷಜನೆ! ಭೂಮಿಗೆ ಆಧಾರನೆ! ಪದ್ಮನಾಭನೆ! ಕ್ಷೀರಸಾಗರಶಯನನೆ! ನರಸಿಂಹನೆ! ಯಜ್ಞವರಾಹಮೂರ್ತಿಯೆ! ಗೋಪಾಲಕರ ಪ್ರಿಯನೆ! ಗೋಪೀವಲ್ಲಭನೆ! ತ್ರಿಗುಣಾತೀತನೆ! ಗರುಡಧ್ವಜನೆ! ಗೋವರ್ಧನಗಿರಿಧಾರಿಯೆ! ಚಾಣೂರಮಥನನೆ! ತ್ರಿಲೋಕಪಾಲಕನೆ! ಅನಾದಿಸಿದ್ಧನೆ! ಆನಂದಸ್ವರೂಪನೆ! ನೀಲೇಂದೀವರಸಮಾನಶರೀರನೆ! ಕೌಸ್ತುಭದಿಂದ

ಕೌಸ್ತುಭೋದ್ಭೂಷಿತೋರಸ್ಕ ಪೂತನಾಧಾತುಶೋಷಣ ।
ರಕ್ಷ ರಕ್ಷ ಜಗದ್ರಕ್ಷಾಮಣೇ ನರಕಹಾರಕ ॥ ೩೮ ॥
ಸಹಸ್ರಶೀರ್ಷಪುರುಷ ಪುರುಹೂತ ಸುಖಪ್ರದ ।
ಯದ್ಭೂತಂ ಯಚ್ಚ ಭಾವ್ಯಂ ವೈ ತತ್ರೈಕಃ ಪುರುಷೋ ಭವಾನ್ ॥ ೩೯ ॥
ಇತ್ಯಾದಿನಾಮಮಾಲಾಭಿಃ ಸಂಸ್ತುವನ್ಮನಮಾಲಿಸಂ ।
ಸ್ವಚ್ಛಂದಲೀಲಯಾ ಗಾಯನ್ನೃತ್ಯಂಶ್ಚ ಪರಯಾ ಮುದಾ ॥ ೪೦ ॥
ವ್ಯಾಸೋ ವಿಶ್ವೇಶಭವನಂ ಸಮಾಯಾತಃ ಸಹೃಷ್ಟವತ್ ।
ಜ್ಞಾನವಾಪೀ ಪುರೋಭಾಗೇ ಮಹಾಭಾಗವತೈಃ ಸಹ ॥ ೪೧ ॥
ವಿರಾಜಮಾನಸತ್ಕಂಠಸ್ತುಲಸೀವರದಾಮಭಿಃ ।
ಸ್ವಯಂ ತಾಲಧರೋ ಜಾತಃ ಸ್ವಯಂ ಜಾತಃ ಸುನರ್ತಕಃ ॥ ೪೨ ॥
ವೇಣುವಾದನ ತತ್ತ್ವಜ್ಞಃ ಸ್ವಯಂ ಶೃತಿಧರೋಽಭವತ್ ।
ನೃತ್ಯಂ ಪರಿಸಮಾಪ್ಯೇತ್ಥಂ ವ್ಯಾಸಃ ಸತ್ಯವತೀ ಸುತಃ ॥ ೪೩ ॥
ಪುನರೂರ್ಧ್ವಂ ಭುಜಂ ಕೃತ್ವಾ ದಕ್ಷಿಣಂ ಶಿಷ್ಯಮಧ್ಯಗಃ ।
ಪುನಃ ಪಪಾಠ ತಾನೇವ ಶ್ಲೋಕಾನ್ಗಾಯನ್ನಿವೋಚ್ಚಕೈಃ ॥ ೪೪ ॥

---

ಹೊಳೆಯುವ ವಕ್ಷಸ್ಥಳವುಳ್ಳವನೆ! ಪೂತನೆಯ ಪ್ರಾಣಗಳನ್ನು ಶೋಷಿಸಿದವನೆ! ಲೋಕರಕ್ಷಾಮಣಿಯೆ! ನರಕಯಾತನೆಗಳನ್ನು ಪರಿಹರಿಸುವವನೆ! ನನ್ನನ್ನು ಕಾಪಾಡು. ಅನಂತಶಿರಸ್ಕನಾದ ಓ ಪರಮಪುರುಷನೆ! ಇಂದ್ರನಿಗೆ ಸುಖವನ್ನು ಕೊಟ್ಟವನೆ! ಯಾವುದು ಉಂಟಾಗಿರುವುದೊ, ಯಾವುದು ಮುಂದೆ ಆಗಲಿರುವುದೊ ಅವೆಲ್ಲಕ್ಕೂ ನೀನೊಬ್ಬನೇ ಕಾರಣಪುರುಷನಾಗಿರುವೆಯಲ್ಲವೆ.''

೪೦–೪೧. ಇವೇ ಮೊದಲಾದ ನಾಮಾವಳಿಗಳಿಂದ ಮಹಾವಿಷ್ಣುವನ್ನು ಸ್ತೋತ್ರಮಾಡುತ್ತ ವ್ಯಾಸಮಹರ್ಷಿಯು ಸ್ವೇಚ್ಛೆಯಾಗಿ ಲೀಲೆಯಿಂದಲೂ ಅತ್ಯಂತ ಸಂತೋಷದಿಂದಲೂ ಗಾಯನವನ್ನು ಮಾಡುತ್ತ ನರ್ತಿಸುತ್ತ ಹರ್ಷಗೊಂಡವನಂತೆ ಮಹಾಭಾಗವತರೊಡನೆ ಪರಿವಾರಿತನಾಗಿ ಜ್ಞಾನವಾಪಿಯ ಸಮ್ಮುಖದಲ್ಲಿರುವ ವಿಶ್ವೇಶ್ವರನ ದೇವಾಲಯವನ್ನು ಪ್ರವೇಶಿಸಿದನು.

೪೨. ತುಲಸಿಯ ಉತ್ತಮ ಮಣಿಗಳ ಹಾರಗಳಿಂದ ಹೊಳೆಯುತ್ತಿರುವ ಕಂಠವುಳ್ಳವನಾಗಿ ಆತನು ತಾನೇ ತಾಲಗಳನ್ನು ಬಾಜಿಸುವವನೂ ಮುಖ್ಯ ನರ್ತಕನೂ ಆಗಿ ಕಾಣುತ್ತಿದ್ದನು.

೪೩. ಕೊಳಲನ್ನೂದುವ ತತ್ತ್ವವನ್ನರಿತ ಅವನು ತಾನೇ ಶ್ರುತಿಯನ್ನು ಹಾಕುತ್ತಿದ್ದನು. ಇಂತು ಸತ್ಯವತೀಪುತ್ರನಾದ ವೇದವ್ಯಾಸನು ತನ್ನ ನೃತ್ಯವನ್ನು ಪರಿಸಮಾಪ್ತಿಗೊಳಿಸಿ ಶಿವಾಲಯವನ್ನು ಹೊಕ್ಕನು.

೪೪. ಪುನಃ ಶಿಷ್ಯರ ಮಧ್ಯದಲ್ಲಿ ನಿಂತುಕೊಂಡು ತನ್ನ ಬಲಗೈಯನ್ನೇ

ಪರಿನಿರ್ಮಥ್ಯ ವಾಗ್ಜಾಲಂ ಸುನಿಶ್ಚಿತ್ಯಾಸಕೃದ್ಬಹು ।
ಇದಮೇಕಂ ಪರಿಜ್ಞಾತಂ ಸೇವ್ಯಃ ಸರ್ವೇಶ್ವರೋ ಹರಿಃ ॥ ೪೫ ॥
ಇತ್ಯಾದಿಶ್ಲೋಕಸಂಘಾತಂ ಸ್ವಪ್ರತಿಜ್ಞಾಪ್ರಬೋಧಕಂ ।
ಯಾವತ್ಪಠತಿ ಸ ವ್ಯಾಸಃ ಸವ್ಯಮುತ್ಕ್ಷಿಪ್ಯ ವೈ ಭುಜಂ ॥ ೪೬ ॥
ತಸ್ತಂಭ ತಾವತ್ತದ್ಬಾಹುಂ ಸ ಶೈಲಾದಿಃ ಸ್ವಲೀಲಯಾ ।
ವಾಕ್ಸ್ತಂಭಶ್ಚಾಪಿ ತಸ್ಯಾಸೀನ್ಮುನೇರ್ವ್ಯಾಸಸ್ಯ ಸನ್ಮುನೇಃ ॥ ೪೭ ॥
ತತೋ ಗುಪ್ತಂ ಸಮಾಗಮ್ಯ ವಿಷ್ಣುರ್ವ್ಯಾಸಮಭಾಷತ ।
ಅಪರಾದ್ಧಂ ಮಹಚ್ಚಾತ್ರ ಭವತಾ ವ್ಯಾಸ ನಿಶ್ಚಿತಂ ॥ ೪೮ ॥
ತನ್ಮೈತದಪರಾಧೇನ ಭೀತಿರ್ಮೇಽಪಿ ಮಹತ್ತರಾ ।
ಏಕ ಏವ ಹಿ ವಿಶ್ವೇಶೋ ದ್ವಿತೀಯೋ ನಾಸ್ತಿ ಕಶ್ಚನ ॥ ೪೯ ॥
ತತ್ಪ್ರಸಾದಾದಹಂ ಚಕ್ರೀ ಲಕ್ಷ್ಮೀಶಸ್ತತ್ಪ್ರಭಾವತಃ ।
ತ್ರೈಲೋಕ್ಯರಕ್ಷಾಸಾಮರ್ಥ್ಯಂ ದತ್ತಂ ತೇನೈವ ಶಂಭುನಾ ॥ ೫೦ ॥

---

ಮೇಲಕ್ಕೆತ್ತಿ ಪುನಃ ಅದೇ ಶ್ಲೋಕಗಳನ್ನೇ ಉಚ್ಚಧ್ವನಿಯಿಂದ ಗಾಯನಮಾಡು ವವನಂತೆ ರಾಗಸಹಿತವಾಗಿ ಹೇಳಲುಪಕ್ರಮಿಸಿದನು.

೪೫. "ಸಮಸ್ತ ವಾಗ್ಜಾಲವನ್ನೂ ನಿರ್ಮಥನಮಾಡಿ ಪುನಃ ಪುನಃ ವಿಚಾರ ವನ್ನು ಮಾಡುವುದರಿಂದ ಈ ವಿಷಯವೊಂದೇ ನನಗೆ ತಿಳಿದಂತಾಯಿತು. ಸರ್ವೇ ಶ್ವರನಾದ ಶ್ರೀಮನ್ನಾರಾಯಣನೇ ಸಕಲಮಾನವರಿಗೂ ಸೇವ್ಯನು."

೪೬–೪೭. ತನ್ನ ಪ್ರತಿಜ್ಞೆಯನ್ನು ಲೋಕಕ್ಕೆ ತಿಳಿಸುವ ಇದೇ ಮೊದಲಾದ ಶ್ಲೋಕಪಙ್ಕ್ತಿಗಳನ್ನು ಆ ವ್ಯಾಸನು ಬಲಗೈಯನ್ನೆತ್ತಿ ಹಿಡಿದು ಶಪಥಪೂರ್ವಕ ವಾಗಿ ಹೇಳುತ್ತಿರುವಂತೆಯೇ ನಂದಿಕೇಶ್ವರನು ಅವನ ಕೈಯನ್ನು ಅನಾಯಾಸ ವಾಗಿಯೇ ಸ್ತಂಭನಗೊಳಿಸಿದನು. ಋಷಿವರ್ಯನೆನಿಸಿದ ವ್ಯಾಸಮಹಾಮುನಿಗೆ ನಾಲಿಗೆಯೂ ಸ್ತಂಭಿತವಾಗಿ ಮಾತುಗಳೇ ಹೊರಡಲಾರದಾದುವು.

೪೮. ಆಗ ಮಹಾವಿಷ್ಣುವು ಏಕಾಂತದಲ್ಲಿ ಆತನಿಗೆ ಕಾಣಿಸಿಕೊಂಡು ಹೇಳಲುಪಕ್ರಮಿಸಿದನು. "ವ್ಯಾಸಮುನಿಯೇ ! ಇಲ್ಲಿ ನೀನು ಮಹಾಪರಾಧವನ್ನು ಮಾಡಿದೆ. ಇದು ನಿಶ್ಚಯವು.

೪೯. ನಿನ್ನ ಈ ಅಪರಾಧದಿಂದ ನನಗೂ ಅಪಾರವಾದ ಭಯವುಂಟಾ ಗಿರುವುದು. ವಿಶ್ವೇಶ್ವರನೊಬ್ಬನೇ ಸಕಲಕ್ಕೂ ನಿಯಾಮಕನಾಗಿರುವನು. ಆತನಿಗೆ ಅಧಿಕನಾಗಲಿ ಸಮಾನನಾಗಲಿ ಮತ್ತೊಬ್ಬನಿಲ್ಲ.

೫೦. ಆತನ ಅನುಗ್ರಹದಿಂದಲೇ ನಾನು ಚಕ್ರಾಯುಧಪಾಣಿಯಾಗಿರು ವೆನು. ಆದರಿಂದಲೇ ನಾನು ಮಹಾಲಕ್ಷ್ಮಿಗೆ ವಲ್ಲಭನಾಗಿರುವೆನು. ಆ ಶಂಭುವೇ ನನಗೆ ಮೂರು ಲೋಕಗಳನ್ನು ಪಾಲಿಸುವ ಸಾಮರ್ಥ್ಯವನ್ನು ಕೊಟ್ಟಿರುವನು.

ಕೌಸ್ತುಭೋದ್ಭಾಷಿತೋರಸ್ಕ ಪೂತನಾಧಾತುಶೋಷಣ ।
ರಕ್ಷ ರಕ್ಷ ಜಗದ್ರಕ್ಷಾಮಣೇ ನರಕಹಾರಕ ॥ ೩೮ ॥
ಸಹಸ್ರಶೀರ್ಷಪುರುಷ ಪುರುಹೂತ ಸುಖಪ್ರದ ।
ಯದ್ಭೂತಂ ಯಚ್ಚ ಭಾವ್ಯಂ ವೈ ತತ್ತ್ವೈಕಃ ಪುರುಷೋ ಭವಾನ್ ॥ ೩೯ ॥
ಇತ್ಯಾದಿನಾಮಮಾಲಾಭಿಃ ಸಂಸ್ತುವನ್ವನಮಾಲಿನಂ ।
ಸ್ವಚ್ಛಂದಲೀಲಯಾ ಗಾಯನ್ನೃತ್ಯಂಶ್ಚ ಪರಯಾ ಮುದಾ ॥ ೪೦ ॥
ವ್ಯಾಸೋ ವಿಶ್ವೇಶಭವನಂ ಸಮಾಯಾತಃ ಸಹೃಷ್ಟವತ್ ।
ಜ್ಞಾನವಾಪೀ ಪುರೋಭಾಗೇ ಮಹಾಭಾಗವತೈಃ ಸಹ ॥ ೪೧ ॥
ವಿರಾಜಮಾನಸತ್ಕಂಠಸ್ತುಲಸೀವರದಾಮಭಿಃ ।
ಸ್ವಯಂ ತಾಲಧರೋ ಜಾತಃ ಸ್ವಯಂ ಜಾತಃ ಸುನರ್ತಕಃ ॥ ೪೨ ॥
ವೇಣುವಾದನ ತತ್ತ್ವಜ್ಞಃ ಸ್ವಯಂ ಶೃತಿಧರೋಽಭವತ್ ।
ನೃತ್ಯಂ ಪರೀಸಮಾಪ್ಯೇತ್ಥಂ ವ್ಯಾಸಃ ಸತ್ಯವತೀ ಸುತಃ ॥ ೪೩ ॥
ಪುನರೂರ್ಧ್ವಂ ಭುಜಂ ಕೃತ್ವಾ ದಕ್ಷಿಣಂ ಶಿಷ್ಯಮಧ್ಯಗಃ ।
ಪುನಃ ಪಪಾಠ ತಾನೇವ ಶ್ಲೋಕಾನ್ಗಾಯನ್ನಿವೋಚ್ಚಕೈಃ ॥ ೪೪ ॥

---

ಹೊಳೆಯುವ ವಕ್ಷಸ್ಥಳವುಳ್ಳವನೆ! ಪೂತನೆಯ ಪ್ರಾಣಗಳನ್ನು ಶೋಷಿಸಿದವನೆ! ಲೋಕರಕ್ಷಾಮಣಿಯೆ! ನರಕಯಾತನೆಗಳನ್ನು ಪರಿಹರಿಸುವವನೆ! ನನ್ನನ್ನು ಕಾಪಾಡು. ಅನಂತಶಿರಸ್ಕನಾದ ಓ ಪರಮಪುರುಷನೆ! ಇಂದ್ರನಿಗೆ ಸುಖವನ್ನು ಕೊಟ್ಟವನೆ! ಯಾವುದು ಉಂಟಾಗಿರುವುದೊ, ಯಾವುದು ಮುಂದೆ ಆಗಲಿರುವುದೊ ಅವೆಲ್ಲಕ್ಕೂ ನೀನೊಬ್ಬನೇ ಕಾರಣಪುರುಷನಾಗಿರುವೆಯಲ್ಲವೆ.''

೪೦–೪೧. ಇವೇ ಮೊದಲಾದ ನಾಮಾವಳಿಗಳಿಂದ ಮಹಾವಿಷ್ಣುವನ್ನು ಸ್ತೋತ್ರಮಾಡುತ್ತ ವ್ಯಾಸಮಹರ್ಷಿಯು ಸ್ವೇಚ್ಛೆಯಾಗಿ ಲೀಲೆಯಿಂದಲೂ ಅತ್ಯಂತ ಸಂತೋಷದಿಂದಲೂ ಗಾಯನವನ್ನು ಮಾಡುತ್ತ ನರ್ತಿಸುತ್ತ ಹರ್ಷಗೊಂಡವನಂತೆ ಮಹಾಭಾಗವತರೊಡನೆ ಪರಿವಾರಿತನಾಗಿ ಜ್ಞಾನವಾಪಿಯ ಸಮ್ಮುಖದಲ್ಲಿರುವ ವಿಶ್ವೇಶ್ವರನ ದೇವಾಲಯವನ್ನು ಪ್ರವೇಶಿಸಿದನು.

೪೨. ತುಲಸಿಯ ಉತ್ತಮ ಮಣಿಗಳ ಹಾರಗಳಿಂದ ಹೊಳೆಯುತ್ತಿರುವ ಕಂಠವುಳ್ಳವನಾಗಿ ಆತನು ತಾನೇ ತಾಲಗಳನ್ನು ಬಾಜಿಸುವವನೂ ಮುಖ್ಯ ನರ್ತಕನೂ ಆಗಿ ಕಾಣುತ್ತಿದ್ದನು.

೪೩. ಕೊಳಲನ್ನೂದುವ ತತ್ತ್ವವನ್ನರಿತ ಅವನು ತಾನೇ ಶ್ರುತಿಯನ್ನು ಹಾಕುತ್ತಿದ್ದನು. ಇಂತು ಸತ್ಯವತೀಪುತ್ರನಾದ ವೇದವ್ಯಾಸನು ತನ್ನ ನೃತ್ಯವನ್ನು ಪರಿಸಮಾಪ್ತಿಗೊಳಿಸಿ ಶಿವಾಲಯವನ್ನು ಹೊಕ್ಕನು.

೪೪. ಪುನಃ ಶಿಷ್ಯರ ಮಧ್ಯದಲ್ಲಿ ನಿಂತುಕೊಂಡು ತನ್ನ ಬಲಗೈಯನ್ನೇ

ಪರಿನಿರ್ಮಥ್ಯ ವಾಗ್ಜಾಲಂ ಸುನಿಶ್ಚಿತ್ಯಾಸಕೃದ್ಬಹು ।
ಇದಮೇಕಂ ಪರಿಜ್ಞಾತಂ ಸೇವ್ಯಃ ಸರ್ವೇಶ್ವರೋ ಹರಿಃ ॥ ೪೫ ॥
ಇತ್ಯಾದಿಶ್ಲೋಕಸಂಘಾತಂ ಸ್ವಪ್ರತಿಜ್ಞಾಪ್ರಬೋಧಕಂ ।
ಯಾವತ್ಪಠತಿ ಸ ವ್ಯಾಸಃ ಸವ್ಯಮುತ್ಕ್ಷಿಪ್ಯ ವೈ ಭುಜಂ ॥ ೪೬ ॥
ತಸ್ತಂಭ ತಾವತ್ತದ್ಬಾಹುಂ ಸ ಶೈಲಾದಿಃ ಸ್ವಲೀಲಯಾ ।
ವಾಕ್ಸ್ತಂಭಶ್ಚಾಪಿ ತಸ್ಯಾಸೀನ್ಮುನೇರ್ವ್ಯಾಸಸ್ಯ ಸನ್ಮುನೇಃ ॥ ೪೭ ॥
ತತೋ ಗುಪ್ತಂ ಸಮಾಗಮ್ಯ ವಿಷ್ಣುರ್ವ್ಯಾಸಮಭಾಷತ ।
ಅಪರಾದ್ಧಂ ಮಹಚ್ಚಾತ್ರ ಭವತಾ ವ್ಯಾಸ ನಿಶ್ಚಿತಂ ॥ ೪೮ ॥
ತನ್ಮೈತದಪರಾಧೇನ ಭೀತಿರ್ಮೇಽಪಿ ಮಹತ್ತರಾ ।
ಏಕ ಏವ ಹಿ ವಿಶ್ವೇಶೋ ದ್ವಿತೀಯೋ ನಾಸ್ತಿ ಕಶ್ಚನ ॥ ೪೯ ॥
ತತ್ಪ್ರಸಾದಾದಹಂ ಚಕ್ರೀ ಲಕ್ಷ್ಮೀಶಸ್ತತ್ಪ್ರಭಾವತಃ ।
ತ್ರೈಲೋಕ್ಯರಕ್ಷಾಸಾಮರ್ಥ್ಯಂ ದತ್ತಂ ತೇನೈವ ಶಂಭುನಾ ॥ ೫೦ ॥

---

ಮೇಲಕ್ಕೆತ್ತಿ ಪುನಃ ಅದೇ ಶ್ಲೋಕಗಳನ್ನೇ ಉಚ್ಚಧ್ವನಿಯಿಂದ ಗಾಯನಮಾಡು ವವನಂತೆ ರಾಗಸಹಿತವಾಗಿ ಹೇಳಲುಪಕ್ರಮಿಸಿದನು.

೪೫. "ಸಮಸ್ತ ವಾಗ್ಜಾಲವನ್ನೂ ನಿರ್ಮಥನಮಾಡಿ ಪುನಃ ಪುನಃ ವಿಚಾರ ವನ್ನು ಮಾಡುವುದರಿಂದ ಈ ವಿಷಯವೊಂದೇ ನನಗೆ ತಿಳಿದಂತಾಯಿತು. ಸರ್ವೇ ಶ್ವರನಾದ ಶ್ರೀಮನ್ನಾರಾಯಣನೇ ಸಕಲಮಾನವರಿಗೂ ಸೇವ್ಯನು."

೪೬–೪೭. ತನ್ನ ಪ್ರತಿಜ್ಞೆಯನ್ನು ಲೋಕಕ್ಕೆ ತಿಳಿಸುವ ಇದೇ ಮೊದಲಾದ ಶ್ಲೋಕಪಙ್ಕ್ತಿಗಳನ್ನು ಆ ವ್ಯಾಸನು ಬಲಗೈಯನ್ನೆತ್ತಿ ಹಿಡಿದು ಶಪಥಪೂರ್ವಕ ವಾಗಿ ಹೇಳುತ್ತಿರುವಂತೆಯೇ ನಂದಿಕೇಶ್ವರನು ಅವನ ಕೈಯನ್ನು ಅನಾಯಾಸ ವಾಗಿಯೇ ಸ್ತಂಭನಗೊಳಿಸಿದನು. ಋಷಿವರ್ಯನೆನಿಸಿದ ವ್ಯಾಸಮಹಾಮುನಿಗೆ ನಾಲಿಗೆಯೂ ಸ್ತಂಭಿತವಾಗಿ ಮಾತುಗಳೇ ಹೊರಡಲಾರದಾದುವು.

೪೮. ಆಗ ಮಹಾವಿಷ್ಣುವು ಏಕಾಂತದಲ್ಲಿ ಆತನಿಗೆ ಕಾಣಿಸಿಕೊಂಡು ಹೇಳಲುಪಕ್ರಮಿಸಿದನು. "ವ್ಯಾಸಮುನಿಯೆ! ಇಲ್ಲಿ ನೀನು ಮಹಾಪರಾಧವನ್ನು ಮಾಡಿದೆ. ಇದು ನಿಶ್ಚಯವು.

೪೯. ನಿನ್ನ ಈ ಅಪರಾಧದಿಂದ ನನಗೂ ಅಪಾರವಾದ ಭಯವುಂಟಾ ಗಿರುವುದು. ವಿಶ್ವೇಶ್ವರನೊಬ್ಬನೇ ಸಕಲಕ್ಕೂ ನಿಯಾಮಕನಾಗಿರುವನು. ಆತನಿಗೆ ಅಧಿಕನಾಗಲಿ ಸಮಾನನಾಗಲಿ ಮತ್ತೊಬ್ಬನಿಲ್ಲ.

೫೦. ಆತನ ಅನುಗ್ರಹದಿಂದಲೇ ನಾನು ಚಕ್ರಾಯುಧಪಾಣಿಯಾಗಿರು ವೆನು. ಅದರಿಂದಲೇ ನಾನು ಮಹಾಲಕ್ಷ್ಮಿಗೆ ವಲ್ಲಭನಾಗಿರುವೆನು. ಆ ಶಂಭುವೇ ನನಗೆ ಮೂರು ಲೋಕಗಳನ್ನು ಪಾಲಿಸುವ ಸಾಮರ್ಥ್ಯವನ್ನು ಕೊಟ್ಟಿರುವನು.

ತದ್ಭಕ್ತ್ಯಾ ಪರಮೈಶ್ವರ್ಯಂ ಮಯಾ ಲಬ್ಧಂ ಹರಾತ್ತತಃ ।
ಇದಾನೀಂ ಸ್ತುಹಿ ತಂ ಶಂಭುಂ ಯದಿ ನೋ ಶುಭಮಿಚ್ಛಸಿ ॥ ೫೧ ॥
ಅನ್ಯದಾಪಿ ನ ವೈ ಕಾರ್ಯಾ ಭವತಾ ಶೇಮುಷೀದೃಶೀ ।
ಪಾರಾಶರ್ಯ ಇತಿ ಶ್ರುತ್ವಾ ಸಂಜ್ಞಯಾ ವ್ಯಾಜಹಾರ ಹ ॥ ೫೨ ॥
ಭುಜಸ್ತಂಭಃ ಕೃತಸ್ತೇನ ನಂದಿನಾ ದೃಷ್ಟಿಮಾತ್ರತಃ ।
ವಾಕ್ಸ್ತಂಭಸ್ತದ್ಭಯಾಜ್ಜಾತಃ ಸ್ಪೃಶ ಮೇ ಕಂಠಕಂದಲೀಂ ॥ ೫೩ ॥
ಯಥಾ ಸ್ತೋತುಂ ಭವಾನೀಶಂ ಪ್ರಭವಾಮಿ ಭವಾಂತಕಂ ।
ಸಂಸ್ಪೃಶ್ಯ ವಿಷ್ಣುಸ್ತತ್ಕಂಠಂ ಗುಪ್ತಮೇವ ಜಗಾಮ ಹ ॥ ೫೪ ॥
ತತಃ ಸತ್ಯವತೀಸೂನುಸ್ತಥಾ ಸ್ತಂಭಿತದೋರ್ಲತಃ ।
ಪ್ರಾರಬ್ಧವಾನ್ಮಹೇಶಾನಂ ಪರಿಷ್ಟೋತುಮುದಾರಧೀಃ ॥ ೫೫ ॥

ವ್ಯಾಸ ಉವಾಚ :—

ಏಕೋ ರುದ್ರೋ ನದ್ವಿತೀಯೋ ಯತಸ್ತ
ದ್ಬ್ರಹ್ಮೈವೈಕಂ ನೇಹ ನಾನಾಸ್ತಿ ಕಿಂಚಿತ್ ।
ಯದ್ಯಪ್ಯನ್ಯಃ ಕೋಽಪಿ ವಾ ಕುತ್ರಚಿದ್ವಾ
ವ್ಯಾಚಷ್ಟಾಂ ತದ್ಯಸ್ಯ ಶಕ್ತಿರ್ಮದಗ್ರೇ ॥ ೫೬ ॥

೫೧. ಆತನಲ್ಲಿ ಭಕ್ತಿಯನ್ನುಮಾಡಿ ವರವನ್ನು ಪಡೆದುದರಿಂದಲೇ ನನಗೆ ಪರಮೈಶ್ವರ್ಯವು ಲಭಿಸಿರುವುದು. ನನ್ನಿಂದ ನಿನಗೆ ಒಳ್ಳೆಯದಾಗಬೇಕೆಂಬ ಅಭಿಲಾಷೆಯಿದ್ದರೆ ಈಗ ಮಹೇಶ್ವರನನ್ನು ಕೊಂಡಾಡು.

೫೨. ಇಂತಹ ಬುದ್ಧಿಯನ್ನು ಮತ್ತೆಯಾವಾಗಲೂ ಖಂಡಿತವಾಗಿಯೂ ತಳೆಯಬೇಡ.'' ಇಂತೆಂಬ ವಿಷ್ಣುವಿನ ವಾಕ್ಯವನ್ನು ಕೇಳಿ ಪರಾಶರಪುತ್ರನಾದ ವ್ಯಾಸನು ಸನ್ನೆಗಳಿಂದಲೇ ಹೇಳಿದನು.

೫೩. ''ಆ ಮಹಾನಂದಿಯು ದೃಷ್ಟಿಮಾತ್ರದಿಂದಲೇ ನನ್ನ ಭುಜವನ್ನು ನಿಶ್ಚೇಷ್ಟವಾಗಿ ಮಾಡಿರುವನು. ಆತನನ್ನು ನೋಡಿದ ಭಯದಿಂದಲೇ ನನಗೆ ವಾಕ್ಸ್ತಂಭವೂ ಉಂಟಾಯಿತು. ಆದುದರಿಂದ ನನ್ನ ಕಂಠವನ್ನು ಅಮೃತ ಹಸ್ತದಿಂದ ಸ್ಪರ್ಶಿಸು.

೫೪. ಆ ಸ್ಪರ್ಶದಿಂದ ನಾನು ಸಂಸಾರವೈರಿಯಾದ ಭವಾನೀಪತಿಯನ್ನು ಸ್ತೋತ್ರಮಾಡಲು ಶಕ್ತನಾಗುವೆನು.'' ಬಳಿಕ ಶ್ರೀಮನ್ನಾರಾಯಣನು ಆತನ ಕಂಠವನ್ನು ಮುಟ್ಟಿ ಅಲ್ಲಿಯೇ ಅಂತರ್ಹಿತನಾದನು.

೫೫. ವಿಶಾಲಮನಸ್ಕನಾದ ಆ ಸಾತ್ಯವತೇಯನು ಮೇಲಕ್ಕೆತ್ತಿದ ಬಲಗೈಯಿಂದಲೇ ಕೂಡಿದವನಾಗಿ ಮಹಾದೇವನನ್ನು ಸೋತ್ರಮಾಡಲುಪಕ್ರಮಿಸಿದನು.

೫೬. ವ್ಯಾಸನು ಹೇಳುತ್ತಾನೆ:—''ಮಹಾರುದ್ರನೊಬ್ಬನೇ ಸಜಾತೀಯ,

ಯಃ ಕ್ಷೀರಾಬ್ಧೇರ್ಮಂದರಾಘಾತಜಾತೋ
ಜ್ವಾಲಾಮಾಲೀ ಕಾಲಕೂಟೋಽತಿಭೀಮಃ ।
ತಂ ಸೋಢುಂ ವಾ ಕೋಽಪರೋಽಭೂನ್ಮಹೇಶಾ
ದ್ಯತ್ಕೀಲಾಭಿಃ ಕೃಷ್ಣತಾಮಾಪ ವಿಷ್ಣುಃ ॥ ೫೭ ॥
ಯದ್ಬಾಣೋಽಭೂಚ್ಛ್ರೀಪತಿರ್ಯಸ್ಯ ಯಂತಾ
ಲೋಕೇಶೋ ಯತ್ಸ್ಯಂದನಂ ಭೂಃ ಸಮಸ್ತಾ ।
ವಾದ ವೇದಾ ಯಸ್ಯ ಯೇನೇಷುಪಾತಾ
ದ್ದಗ್ಧಾ ಗ್ರಾಮಾಸ್ತ್ರೈಪುರಾಸ್ತತ್ಸಮಃ ಕಃ ॥ ೫೮ ॥
ಯಂ ಕಂದರ್ಪೋ ವೀಕ್ಷಮಾಣಃ ಸಮಾನಂ
ದೇವೈರನ್ಯೈರ್ಭಸ್ಮಜಾತಃ ಸ್ವಯಂ ಹಿ ।
ಪೌಷ್ಪೈರ್ಬಾಣೈಃ ಸರ್ವವಿಶ್ವೈಕಜೇತಾ
ಕೋ ವಾ ಸ್ತುತ್ಯಃ ಕಾಮಜೇತುಸ್ತತೋಽನ್ಯಃ ॥ ೫೯ ॥

---

ವಿಜಾತೀಯ, ಸ್ವಗತಭೇದಗಳಿಲ್ಲದ ಜಗತ್ಕಾರಣನಾಗಿರುವನು. ಬೇರೊಬ್ಬನಿಲ್ಲ. ಆದುದರಿಂದ ಆತನೇ ಬ್ರಹ್ಮಪದನಿರ್ದೇಶ್ಯನಾಗಿರುವನು. ಆತನ ಸತ್ತೆಯಲ್ಲದೆ ಲೋಕದಲ್ಲಿ ನಾನಾ ಪದಾರ್ಥಗಳು ಪಾರಮಾರ್ಥಿಕವಾಗಿ ಇಲ್ಲ. ಇತರರು ಬೇರೊಬ್ಬ ದೇವನು ಸ್ವರ್ಗಾದಿ ಸ್ಥಳಗಳಲ್ಲಿರುವನೆಂದು ಹೇಳುವರು. ಆದರೆ ನಾನು ಮಾತ್ರ ಸಮ್ಮುಖದಲ್ಲಿಯೇ ಯಾವನ ಶಕ್ತಿಯು ಕಾಣುತ್ತಿರುವುದೊ, ಆತನನ್ನೇ ಪರಮಪದಾರ್ಥವೆಂದು ತಿಳಿದಿರುವೆನು.

೫೭. ಹಿಂದೆ ಕ್ಷೀರಸಮುದ್ರದಲ್ಲಿ ಮಂದರಪರ್ವತನ್ನು ಹಾಕಿ ಮಥನ ಮಾಡುವಾಗ ಜ್ವಾಲೆಗಳನ್ನು ಕಾರುತ್ತ ಅತಿಭಯಂಕರವಾದ ಕಾಲಕೂಟವಿಷ ವುದ್ಭವಿಸಿತು. ಆ ಜ್ವಾಲೆಗಳಿಂದ ಮಹಾವಿಷ್ಣುವೂ ಸಹ ಬೆಂದು ಕೃಷ್ಣಶರೀರ ವುಳ್ಳವನಾದನು. ಅಂತಹ ಮಹಾವಿಷವನ್ನು ಸಹಿಸಿಕೊಳ್ಳಲು ಮಹೇಶ್ವರ ನಲ್ಲದೆ ಬೇರಾವನು ಸಮರ್ಥನಾದನು.

೫೮. ತ್ರಿಪುರಾಸುರರ ಪಟ್ಟಣಗಳನ್ನು ಧ್ವಂಸಗೊಳಿಸಿದ ಕಾಲದಲ್ಲಿ ಯಾವ ನಿಗೆ ಶ್ರೀಮನ್ನಾರಾಯಣನೇ ಬಾಣವಾಗಿಯೂ, ಚತುರ್ಮುಖನೇ ಸಾರಥಿ ಯಾಗಿಯೂ, ಸಮಸ್ತ ಭೂಮಂಡಲವೂ ಮಹಾರಥವಾಗಿಯೂ, ನಾಲ್ಕು ವೇದಗಳೇ ಕುದುರೆಗಳಾಗಿಯೂ ಆಗಿರಲು ಒಂದು ಬಾಣದಿಂದಲೇ ಅವನನ್ನು ನಿಗ್ರಹಿಸಿದ ಮಹೇಶ್ವರನಿಗೆ ಸಮಾನನಾದವನು ಯಾರು ?

೫೯. ಪುಷ್ಪಬಾಣಗಳಿಂದ ಸಕಲ ಲೋಕಗಳನ್ನೂ ಸ್ವಾಧೀನಗೊಳಿಸಿ ಕೊಂಡಿರುವ ಮನ್ಮಥನು ಯಾವನನ್ನು ಇತರ ದೇವತೆಗಳಿಗೆ ಸಮಾನನೆಂದು ತಿಳಿದು ತಾನೇ ಬೂದಿಯಾಗಿ ಹೋದನೊ, ಅಂತಹ ಮದನಾರಿಯಲ್ಲದೆ ಬೇರೆ ಯಾರು ನನ್ನ ಸ್ತೋತ್ರಕ್ಕೆ ಅರ್ಹರಾಗಿರುವರು ?

ಯಂ ವೈ ವೇದೋ ವೇದ ನೋ ನೈವ ವಿಷ್ಣು
ರ್ನೋ ವಾ ವೇದಾ ನೋ ಮನೋ ನೈವ ವಾಣೀ ।
ತಂ ದೇವೇಶಂ ಮಾದೃಶಃ ಕೋಽಲ್ಪಮೇಧಾ
ಯಾಥಾತ್ಮ್ಯೇನ ವೇತ್ತ್ಯಹೋ ವಿಶ್ವನಾಥಂ ॥ ೬೦ ॥
ಯಸ್ಮಿನ್ಸರ್ವಂ ಯಸ್ತು ಸರ್ವತ್ರ ಸರ್ವೋ
ಯೋ ವೈ ಕರ್ತಾ ಯೋಽವಿತಾ ಯೋಽಪಹರ್ತಾ ।
ನೋ ಯಸ್ಯಾದಿರ್ಯಃ ಸಮಸ್ತಾದಿರೇಕೋ
ನೋ ಯಸ್ಯಾಂತೋ ಯೋಽಂತಕೃತ್ತಂ ನತೋಽಸ್ಮಿ॥ ೬೧ ॥
ಯಸ್ಯೈ ವಾಖ್ಯಾ ವಾಜಿಮೇಧೇನ ತುಲ್ಯಾ
ಯಸ್ಯಾ ನತ್ಯಾ ಚೈಕಯಾಲ್ಪೇಂದ್ರಲಕ್ಷ್ಮೀಃ ।
ಯಸ್ಯ ಸ್ತುತ್ಯಾ ಲಭ್ಯತೇ ಸತ್ಯಲೋಕೇ
ಯಸ್ಯಾರ್ಚಾತೋ ಮೋಕ್ಷಲಕ್ಷ್ಮೀರದೂರಾ ॥ ೬೨ ॥
ನಾನ್ಯಂ ವೇದ್ಮ್ಯಹಂ ಶ್ರೀಮಹೇಶಾ
ನ್ನಾನ್ಯಂ ದೇವಂ ಸ್ತೌಮಿ ಶಂಭೋರ್ಋತೇಽಹಂ ।
ನಾನ್ಯ ದೇವಂ ವಾ ನಮಾಮಿ ತ್ರಿನೇತ್ರಾ
ತ್ಸತ್ಯಂ ಸತ್ಯಂ ಸತ್ಯಮೇತನ್ಮೃಷಾ ನ ॥ ೬೩ ॥

---

೬೦. ಯಾವನನ್ನು ವೇದವೂ, ಮಹಾವಿಷ್ಣುವೂ, ಬ್ರಹ್ಮದೇವನೂ, ಮನಸ್ಸೂ, ವಾಣಿಯೂ ತಿಳಿಯಲಾರರೊ, ಅಂತಹ ದೇವದೇವೋತ್ತಮನಾದ ವಿಶ್ವನಾಥನನ್ನು ನನ್ನಂತಹ ಅಲ್ಪಬುದ್ಧಿಯುಳ್ಳ ಯಾವನು ತಾನೆ ಸಮಗ್ರವಾಗಿ ತಿಳಿಯಬಲ್ಲನು ?

೬೧. ಯಾವನಲ್ಲಿ ಸಕಲ ಬ್ರಹ್ಮಾಂಡವೂ ನೆಲಸಿರುವುದೊ, ಯಾವನು ಸರ್ವವ್ಯಾಪಿಯಾಗಿರುವನೊ, ಸರ್ವಸ್ವರೂಪನೇ ಆಗಿರುವನೊ, ಯಾವನು ಪ್ರಪಂಚದ ಕರ್ತೃವೂ, ಪಾಲಕನೂ, ಸಂಹಾರಕನೂ ಆಗಿರುವನೊ, ಯಾವನು ಅನಾದಿಪುರುಷನೊ, ಮತ್ತು ಸಕಲಕ್ಕೂ ಆದಿಕಾರಣನೂ, ಶಶ್ವದೇಕರೂಪನೊ, ನಾಶರಹಿತನೊ, ಸಕಲಕ್ಕೂ ಅಂತವನ್ನುಂಟುಮಾಡುವನೊ, ಅವನನ್ನೇ ನಮಸ್ಕರಿಸುವೆನು.

೬೨. ಯಾವನ ಒಂದೊಂದು ನಾಮವನ್ನುಚರಿಸುವುದು ಅಶ್ವಮೇಧಕ್ಕೆ ಸಮಾನವಾದುದೊ, ಯಾವನಿಗೆ ಮಾಡಿದ ಒಂದು ನಮಸ್ಕಾರಕ್ಕೆ ಮಹೇಂದ್ರನ ಐಶ್ವರ್ಯವೂ ಅತ್ಯಲ್ಪಫಲವೊ, ಯಾವನ ಸ್ತೋತ್ರದಿಂದ ಸತ್ಯಲೋಕವು ಲಭಿಸುವುದೊ, ಯಾವನನ್ನು ಪೂಜಿಸುವುದರಿಂದ ಮೋಕ್ಷಲಕ್ಷ್ಮಿಯೂ ಸನಿಹಸಸ್ಥಳಾಗುವಳೊ ಆತನಿಗೆ ನಮಸ್ಕಾರವು.

೬೩. ಶ್ರೀಮಹೇಶ್ವರನಲ್ಲದೆ ಬೇರೆ ದೈವವನ್ನು ನಾನರಿಯೆನು. ಆ ಶಂಭು

ಇತ್ಥಂ ಯಾವತ್ ಸ್ತೌತಿ ಶಂಭುಂ ಮಹರ್ಷಿ
ಸ್ತಾವನ್ನಂದೀ ಶಾಂಭವಾದ್ದೃಕ್ಪ್ರಸಾದಾತ್ ।
ತದ್ದೋಃಸ್ತಂಭಂ ತ್ಯಕ್ತವಾಂಶ್ಚಾಬಭಾಷೇ
ಸ್ಮಾಯಂ ಸ್ಮಾಯಂ ಬ್ರಾಹ್ಮಣೇಭ್ಯೋ ನಮೋ ವಃ ॥ ೬೪ ॥

ನಂದಿಕೇಶ್ವರ ಉವಾಚ :—

ಇದಂ ಸ್ತವಂ ಮಹಾಪುಣ್ಯಂ ವ್ಯಾಸ ತೇ ಪರಿಕೀರ್ತಿತಂ ।
ಯಃ ಪಠಿಷ್ಯತಿ ಮೇಧಾವೀ ತಸ್ಯ ತುಷ್ಯತಿ ಶಂಕರಃ ॥ ೬೫ ॥
ವ್ಯಾಸಾಷ್ಟಕಮಿದಂ ಪ್ರಾತಃ ಪಠಿತವ್ಯಂ ಪ್ರಯತ್ನತಃ ।
ದುಃಸ್ವಪ್ನಪಾಪಶಮನಂ ಶಿವಸಾನ್ನಿಧ್ಯಕಾರಕಂ ॥ ೬೬ ॥
ಮಾತೃಹಾ ಪಿತೃಹಾ ವಾಪಿ ಗೋಘ್ನೋ ಬಾಲಘ್ನ ಏವ ವಾ ।
ಸುರಾಪೀ ಸ್ವರ್ಣಹೃದ್ವಾಪಿ ನಿಷ್ಪಾಪೋಽಸ್ಯಾಃ ಸ್ತುತೇರ್ಜಪಾತ್ ॥ ೬೭ ॥

ವನ್ನುಳಿದು ಬೇರೆ ದೈವವನ್ನು ನಾನು ಸ್ತೋತ್ರಮಾಡುವುದಿಲ್ಲ. ತ್ರಿಲೋಚನನಾದ ಆತನಿಗಲ್ಲದೆ ಬೇರೆ ಯಾವ ದೇವತೆಗೂ ನಮಸ್ಕರಿಸುವುದಿಲ್ಲ. ಇದು ಮೂರು ಮೂರು ಬಾರಿಗೂ ಸತ್ಯವು. ಎಂದಿಗೂ ಸುಳ್ಳಾಗಲಾರದು.''

೬೪. ಇಂತೆಂದು ವ್ಯಾಸಮಹರ್ಷಿಯು ಪರಮಶಿವನನ್ನು ಸ್ತೋತ್ರಮಾಡುತಿದ್ದನು. ಆಗ ಮಹೇಶ್ವರನು ಪ್ರಸನ್ನದೃಷ್ಟಿಯಿಂದ ನಂದಿಯ ಕಡೆಗೆ ನೋಡಿದನು. ಆತನ ಇಂಗಿತವನ್ನರಿತು ವ್ಯಾಸನ ಭುಜಸ್ತಂಭನವನ್ನು ಕೊನೆಗಾಣಿಸಿ ಮುಗುಳ್ನಗೆಯಿಂದಲೇ ಆ ನಂದಿಯು, ''ಬ್ರಾಹ್ಮಣೋತ್ತಮರಾದ ನಿಮಗೆ ನಮಸ್ಕಾರ'' ಎಂದನು.

೬೫. ನಂದಿಕೇಶ್ವರನು ಹೇಳುತ್ತಾನೆ:—''ಎಲೈ ವ್ಯಾಸನೆ! ನೀನು ಮಾಡಿರುವ ಈ ಸ್ತೋತ್ರವು ಮಹಾಪುಣ್ಯಪ್ರದವಾದುದು. ಯಾವ ಬುದ್ಧಿಶಾಲಿಯು ಇದನ್ನು ಪಠಿಸುವನೊ, ಅವನಲ್ಲಿ ಮಹಾದೇವನು ಸಂತುಷ್ಟನಾಗುವನು.

೬೬. ಈ ಸ್ತವಕ್ಕೆ ವ್ಯಾಸಾಷ್ಟಕವೆಂದು ಹೆಸರು. ಇದನ್ನು ಪ್ರತಿಮಾನವನೂ ಪ್ರಯತ್ನಪೂರ್ವಕವಾಗಿ ಪ್ರಾತಃಕಾಲದಲ್ಲಿ ಹೇಳಬೇಕು. ಇದು ದುಸ್ಸ್ವಪ್ನಗಳ ಪಾಪಫಲವನ್ನು ಹೋಗಲಾಡಿಸಿ ಶಿವಸಾನ್ನಿಧ್ಯವನ್ನೊದಗಿಸುವುದು.

೬೭. ಮಾತೃಘಾತುಕನಾಗಲಿ, ಪಿತೃದ್ರೋಹಿಯಾಗಲಿ, ಗೋವಧೆಯನ್ನು ಮಾಡಿದವನಾಗಲಿ, ಬಾಲಘ್ನನಾಗಲಿ, ಸುರಾಪಾನನಿರತನಾಗಲಿ, ಸ್ವರ್ಣಸ್ತೇನನಾಗಲಿ, ಈ ಸ್ತೋತ್ರವನ್ನು ಜಪಿಸುವುದರಿಂದ ನಿಷ್ಕಲ್ಮಷನಾಗುವನು.

ಸ್ಕಂದ ಉವಾಚ :—

ಪಾರಾಶರ್ಯಸ್ತದಾರಭ್ಯ ಶಂಭುಭಕ್ತಿಪರೋಽಭವತ್ ।
ಲಿಂಗಂ ವ್ಯಾಸೇಶ್ವರಂ ಸ್ಥಾಪ್ಯ ಘಂಟಾಕರ್ಣಹ್ರದಾಗ್ರತಃ ॥ ೬೮ ॥
ವಿಭೂತಿಭೂಷಣೋ ನಿತ್ಯಂ ನಿತ್ಯಂ ರುದ್ರಾಕ್ಷಭೂಷಣಃ ।
ರುದ್ರಸೂಕ್ತಪರೋ ನಿತ್ಯಂ ನಿತ್ಯಂ ಲಿಂಗಾರ್ಚಕೋಽಭವತ್ ॥ ೬೯ ॥
ಸ ಕೃತ್ವಾ ಕ್ಷೇತ್ರಸಂನ್ಯಾಸಂ ತ್ಯಜೇನ್ನಾದ್ಯಾಪಿ ಕಾಶಿಕಾಂ ।
ತತ್ತ್ವಂ ಕ್ಷೇತ್ರಸ್ಯ ವಿಜ್ಞಾಯ ನಿರ್ವಾಣಪದದಾಯಿನಃ ॥ ೭೦ ॥
ಘಂಟಾಕರ್ಣಹ್ರದೇ ಸ್ನಾತ್ವಾ ದೃಷ್ಟ್ವಾ ವ್ಯಾಸೇಶ್ವರಂ ನರಃ ।
ಯತ್ರ ಕುತ್ರ ಮೃತೋ ವಾಪಿ ವಾರಾಣಸ್ಯಾಂ ಮೃತೋ ಭವೇತ್ ॥ ೭೧ ॥
ಕಾಶ್ಯಾಂ ವ್ಯಾಸೇಶ್ವರಂ ಲಿಂಗಂ ಪೂಜಯಿತ್ವಾ ನರೋತ್ತಮಃ ।
ನ ಜ್ಞಾನಾದ್ಭ್ರಶ್ಯತೇ ಕ್ವಾಪಿ ಪಾತಕೈರ್ನಾಭಿಭೂಯತೇ ॥ ೭೨ ॥
ವ್ಯಾಸೇಶ್ವರಸ್ಯ ಯೇ ಭಕ್ತಾ ನ ತೇಷಾಂ ಕಲಿಕಾಲತಃ ।
ನ ಪಾಪತೋ ಭಯಂ ಕ್ವಾಪಿ ನ ಚ ಕ್ಷೇತ್ರೋಪಸರ್ಗತಃ ॥ ೭೩ ॥

---

೬೮. ಸ್ಕಂದನು ಹೇಳುತ್ತಾನೆ:—ಆಗ ವ್ಯಾಸನು ಘಂಟಾಕರ್ಣತೀರ್ಥದ ಎದುರಿನಲ್ಲಿ ವ್ಯಾಸೇಶ್ವರನೆಂದು ಪ್ರಸಿದ್ಧವಾದ ಮಹಾಲಿಂಗವನ್ನು ಪ್ರತಿಷ್ಠಿಸಿ ಅಂದಿನಿಂದ ಮಹಾದೇವನಲ್ಲಿ ಭಕ್ತಿಯುಳ್ಳವನಾದನು.

೬೯. ನಿತ್ಯವೂ ವಿಭೂತಿಯನ್ನು ಧರಿಸಿ, ರುದ್ರಾಕ್ಷಿಗಳಿಂದಲಂಕೃತನಾಗಿ ನಿರಂತರವೂ ರುದ್ರಸೂಕ್ತದ ಮಂತ್ರಗಳನ್ನು ಜಪಿಸುತ್ತ ಶಿವಲಿಂಗದ ಅರ್ಚನೆಯಲ್ಲಿಯೇ ನಿರತನಾಗಿ ಕಾಲವನ್ನು ಕಳೆಯುತ್ತಿದ್ದನು.

೭೦. ಆತನು ಕ್ಷೇತ್ರಸನ್ನ್ಯಾಸವನ್ನೂ ಮಾಡಿದನಲ್ಲದೆ ಮೋಕ್ಷಪದವಿಯನ್ನು ಸುಲಭವಾಗಿ ಗಳಿಸಿಕೊಡುವ ಆ ಕಾಶೀಕ್ಷೇತ್ರದ ಮಾಹಾತ್ಮ್ಯವನ್ನು ತಿಳಿದು ಇಂದಿಗೂ ಅದನ್ನು ಬಿಡದೆ ಸೇವಿಸುತ್ತಿರುವನು.

೭೧. ಘಂಟಾಕರ್ಣತೀರ್ಥದಲ್ಲಿ ಸ್ನಾನಾದಿಗಳನ್ನು ಮುಗಿಸಿ ಯಾವನು ವ್ಯಾಸೇಶ್ವರನ ದರ್ಶನವನ್ನು ಮಾಡುವನೊ, ಅವನು ಯಾವ ಸ್ಥಳದಲ್ಲಿಯೇ ಸತ್ತರೂ, ವಾರಾಣಸಿಯಲ್ಲಿಯೇ ಸತ್ತವನೆಂದು ತಿಳಿಯಬೇಕು.

೭೨. ಕಾಶಿಯಲ್ಲಿ ವ್ಯಾಸೇಶ್ವರಮಹಾಲಿಂಗವನ್ನು ಭಕ್ತಿಯಿಂದ ಪೂಜಿಸಿದ ಮನುಷ್ಯೋತ್ತಮನು ಎಂದಿಗೂ ಜ್ಞಾನಹೀನನಾಗುವುದಿಲ್ಲ; ಯಾವ ಪಾತಕಗಳಿಂದಲೂ ಸಂಕಟಗೊಳ್ಳುವುದಿಲ್ಲ.

೭೩. ವ್ಯಾಸೇಶ್ವರನಿಗೆ ಯಾರು ಭಕ್ತರಾಗಿರುವರೊ, ಅವರಿಗೆ ಕಲಿಕಾಲದಿಂದಾಗಲಿ, ಪಾಪಕೋಟಿಗಳಿಂದಾಗಲಿ, ಕ್ಷೇತ್ರಗಳನ್ನು ಸೇವಿಸದಿರುವುದರಿಂದಾಗಲಿ, ಎಂದಿಗೂ ಭಯವುಂಟಾಗುವುದಿಲ್ಲ.

ವ್ಯಾಸೇಶ್ವರಃ ಪ್ರಯತ್ನೇನ ದ್ರಷ್ಟವ್ಯಃ ಕಾಶಿವಾಸಿಭಿಃ ।
ಘಂಟಾಕರ್ಣಕೃತಸ್ನಾನೈಃ ಕ್ಷೇತ್ರಪಾತಕಭೀರುಭಿಃ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವ್ಯಾಸಭುಜಸ್ತಂಭನವರ್ಣನಂ" ನಾಮ ಪಂಚನವತಿತಮೋಽಧ್ಯಾಯಃ

---

೭೪. ಆದುದರಿಂದ ಕಾಶಿಯಲ್ಲಿ ವಾಸಮಾಡುವವರು ಕ್ಷೇತ್ರಪಾತಕಗಳಿಗೆ ಭಯಗೊಂಡರೆ ಉದ್ದೇಶಪೂರ್ವಕವಾಗಿ ಘಂಟಾಕರ್ಣತೀರ್ಥದಲ್ಲಿ ಸ್ನಾನವನ್ನು ಮಾಡಿ ವ್ಯಾಸೇಶ್ವರನನ್ನು ಸಂದರ್ಶಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ವ್ಯಾಸಭುಜಸ್ತಂಭನವರ್ಣನ"ವೆಂಬ ತೊಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಣ್ಣವತಿತಮೋಽಧ್ಯಾಯಃ

## ವ್ಯಾಸಶಾಪವಿಮೋಕ್ಷಣವರ್ಣನಂ

ಅಗಸ್ತ್ಯ ಉವಾಚ: —

ಕೃಷ್ಣದ್ವೈಪಾಯನಃ ಸ್ಕಂದ ಶಂಭುಭಕ್ತಿಪರೋ ಯದಿ ।
ಯದಿ ಕ್ಷೇತ್ರರಹಸ್ಯಜ್ಞಃ ಕ್ಷೇತ್ರಸಂನ್ಯಾಸಕೃದ್ಯದಿ ॥ ೧ ॥
ತಥಾ ದೃಷ್ಟಪ್ರಭಾವಶ್ಚೇತ್ತಥಾ ಚೇಜ್ಜ್ಞಾನಿನಾಂ ವರಃ ।
ಪುರೀಂ ವಾರಾಣಸೀಂ ಶ್ರೇಷ್ಠಾಂ ಕಥಂ ಕಿಲ ಶಪಸ್ಯತಿ ॥ ೨ ॥

ಸ್ಕಂದ ಉವಾಚ :—

ಸತ್ಯಮೇತತ್ತ್ವಯಾ ಪೃಷ್ಟಂ ಕಥಯಾಮಿ ಮುನೇ ಶೃಣು ।
ತಸ್ಯ ವ್ಯಾಸಸ್ಯ ಚರಿತಂ ಭವಿಷ್ಯಂ ತ್ವಯಿ ಪೃಚ್ಛತಿ ॥ ೩ ॥
ಯದಾರಭ್ಯ ಮುನೇಸ್ತಸ್ಯ ನಂದೀ ಸ್ತಂಭಿತವಾನ್ಭುಜಂ ।
ತದಾರಭ್ಯ ಮಹೇಶಾನಂ ಸಂಸ್ತೌತಿ ಪರಮಾದೃತಃ ॥ ೪ ॥
ಕಾಶ್ಯಾಂ ತೀರ್ಥಾನ್ಯನೇಕಾನಿ ಕಾಶ್ಯಾಂ ಲಿಂಗಾನ್ಯನೇಕಶಃ ।
ತಥಾಪಿ ಸೇವ್ಯೋ ವಿಶ್ವೇಶಃ ಸ್ನಾತವ್ಯಾ ಮಣಿಕರ್ಣಿಕಾ ॥ ೫ ॥

---

## ಕನ್ನಡದ ಅನುವಾದ

### ವ್ಯಾಸಶಾಪವಿಮೋಕ್ಷಣವರ್ಣನ

೧–೨. ಅಗಸ್ತ್ಯನು ಹೇಳುತ್ತಾನೆ:—ಎಲೈ ಸ್ಕಂದನೆ! ಕೃಷ್ಣದ್ವೈಪಾಯನ ಮುನಿಯು ಪರಮೇಶ್ವರನ ಭಕ್ತನೆಂದೂ, ಕಾಶೀಕ್ಷೇತ್ರದ ರಹಸ್ಯವನ್ನರಿತವನೆಂದೂ, ಕ್ಷೇತ್ರಸನ್ನ್ಯಾಸವನ್ನು ಮಾಡಿದವನೆಂದೂ, ಮಹೇಶ್ವರನ ಪ್ರಭಾವವನ್ನು ಪ್ರತ್ಯಕ್ಷವಾಗಿ ಕಂಡವನೆಂದೂ, ಜ್ಞಾನಿಗಳಲ್ಲಿ ಅಗ್ರಗಣ್ಯನೆಂದೂ ಹೇಳಿದೆಯಲ್ಲವೆ. ಅಂತಹ ಮಹರ್ಷಿಯು ಸರ್ವಶ್ರೇಷ್ಠವಾದ ವಾರಾಣಸೀಪುರವನ್ನು ಶಪಿಸುವುದು ಹೇಗೆ?

೩. ಸ್ಕಂದನು ಹೇಳುತ್ತಾನೆ:—ಅಗಸ್ತ್ಯನೆ! ನೀನು ಕೇಳಿದ ಪ್ರಶ್ನೆಯು ಸತ್ಯಾರ್ಥದಿಂದ ಕೂಡಿರುವುದು. ನಿನ್ನ ಪ್ರಶ್ನೆಗೆ ಉತ್ತರವಾಗಿ ಆ ವ್ಯಾಸನು ಮುಂದೆ ಏನು ಮಾಡುವನೆಂಬುದನ್ನು ಹೇಳುವೆನು, ಕೇಳು.

೪. ಎಂದಿನ ದಿನದಲ್ಲಿ ನಂದಿಕೇಶ್ವರನು ಎತ್ತಿದ್ದ ತನ್ನ ಕೈಯನ್ನು ನಿಶ್ಚೇಷ್ಟಗೊಳಿಸಿದನೊ, ಅಂದಿನ ದಿನದಿಂದ ಆ ಮುನಿವರ್ಯನು ಪರಮಾದರದಿಂದ ಕೂಡಿದವನಾಗಿ ಮಹೇಶ್ವರನನ್ನು ಪೂಜಿಸಿ ಸ್ತೋತ್ರಮಾಡುತ್ತಿದ್ದನು.

೫. ಕಾಶಿಯಲ್ಲಿ ಅನೇಕ ತೀರ್ಥಗಳಿರುವುವು. ಅಸಂಖ್ಯಾತಗಳಾದ ಲಿಂಗಗಳೂ ಇರುವುವು. ಆದರೆ ಎಲ್ಲವುಗಳಿಗಿಂತಲೂ ವಿಶೇಷವಾಗಿ ಮಣಿಕರ್ಣಿಕಾತೀರ್ಥವನ್ನೂ ವಿಶ್ವೇಶ್ವರಮಹಾಲಿಂಗವನ್ನೂ ಮನುಷ್ಯರು ಸೇವಿಸಬೇಕು.

ಲಿಂಗೇಷ್ವೇಕೋ ಹಿ ವಿಶ್ವೇಶಸ್ತೀರ್ಥೇಷು ಮಣಿಕರ್ಣಿಕಾ ।
ಇತಿ ಸಂವ್ಯಾಹರನ್ವ್ಯಾಸಸ್ತದ್ದ್ವಯಂ ಬಹುಮನ್ಯತೇ ॥ ೬ ॥
ತ್ಯಕ್ತ್ವಾ ಸ ಬಹುವಾಗ್ಜಾಲಂ ಪ್ರಾತಃ ಸ್ನಾತ್ವಾ ದಿನೇ ದಿನೇ ।
ನಿರ್ವಾಣಮಂಡಪೇ ವಕ್ತಿ ಮಹಿಮಾನಂ ಮಹೇಶಿತುಃ ॥ ೭ ॥
ಶಿಷ್ಯಾಣಾಂ ಪುರತೋ ನಿತ್ಯಂ ಕ್ಷೇತ್ರಸ್ಯ ಮಹಿಮಾ ಮಹಾನ್ ।
ವ್ಯಾಖ್ಯಾಯತೇ ಮುದಾ ತೇನ ವ್ಯಾಸೇನ ಪರಮರ್ಷಿಣಾ ॥ ೮ ॥
ಅತ್ರ ಯತ್ಕ್ರಿಯತೇ ಕ್ಷೇತ್ರೇ ಶುಭಂ ವಾಽಶುಭಮೇವ ವಾ ।
ಸಂವರ್ತೇಽಪಿ ನ ತಸ್ಯಾಂತಸ್ತಸ್ಮಾಚ್ಛ್ರೇಯಃ ಸಮಾಚರೇತ್ ॥ ೯ ॥
ಕ್ಷೇತ್ರಸಿದ್ಧಿಂ ಸಮೀಹಂತೇ ಯೇ ಚಾತ್ರ ಕೃತಿನೋ ಜನಾಃ ।
ಯಾವಜ್ಜೀವಂ ನ ತೈಸ್ತ್ಯಾಜ್ಯಾ ಸುಧೀಭಿರ್ಮಣಿಕರ್ಣಿಕಾ ॥ ೧೦ ॥
ಚಕ್ರಪುಷ್ಕರಿಣೀತೀರ್ಥೇ ಸ್ನಾತವ್ಯಂ ಪ್ರತಿವಾಸರಂ ।
ಪುಷ್ಪೈಃ ಪತ್ರೈಃ ಫಲೈಸ್ತೋಯೈರರ್ಚ್ಯೋ ವಿಶ್ವೇಶ್ವರಃ ಸದಾ ॥ ೧೧ ॥

---

೬. ಲಿಂಗಗಳಲ್ಲೆಲ್ಲ ವಿಶ್ವೇಶ್ವರನೇ ಸರ್ವೋತ್ತಮನು. ತೀರ್ಥಗಳಲ್ಲಿ ಮಣಿಕರ್ಣಿಕೆಯೇ ಸರ್ವಶ್ರೇಷ್ಠವು. ಇಂತೆಂದು ಹೇಳುತ್ತ ಆ ವ್ಯಾಸನು ಆ ಎರಡನ್ನೇ ಬಹುವಾಗಿ ಅಭಿಮಾನದಿಂದ ನೋಡುತ್ತಿರುವನು.

೭. ಲೌಕಿಕಗಳಾದ ಮಾತುಗಳನ್ನು ಬಹುವಾಗಿ ಬಿಟ್ಟು ಪ್ರತಿದಿನದಲ್ಲಿಯೂ ಪ್ರಾತಃಕಾಲದ ಸ್ನಾನವನ್ನು ಮಾಡಿದಕೂಡಲೆ ನಿರ್ವಾಣಮಂಟಪದಲ್ಲಿ ಕುಳಿತು ಮಹೇಶ್ವರನ ಮಹಿಮೆಗಳನ್ನು ವರ್ಣಿಸುತ್ತಿರುವನು.

೮. ನಿತ್ಯವೂ ಪರಮರ್ಷಿಯಾದ ಆ ವ್ಯಾಸನು ತನ್ನ ಶಿಷ್ಯರ ಮುಂದೆ ವಾರಾಣಸೀಕ್ಷೇತ್ರದ ಅಪಾರವಾದ ಮಹಿಮೆಯನ್ನೂ ಸಂತೋಷದಿಂದ ವ್ಯಾಖ್ಯಾನ ರೂಪವಾಗಿ ವಿಸ್ತರಿಸಿ ಹೇಳುತ್ತಿರುವನು.

೯. ಈ ಕ್ಷೇತ್ರದಲ್ಲಿ ಎಷ್ಟೇ ಸ್ವಲ್ಪವಾದ ಶುಭವನ್ನಾಗಲಿ, ಅಶುಭವನ್ನಾಗಲಿ ಮಾಡಿದರೂ ಅದು ಪ್ರಳಯದಲ್ಲಿಯೂ ನಾಶವನ್ನು ಹೊಂದುವುದಿಲ್ಲ. ಆದುದರಿಂದ ಮನುಷ್ಯನು ಶುಭಕರ್ಮವನ್ನೇ ಮಾಡಬೇಕು.

೧೦. ಪುಣ್ಯವಂತರೂ ಬುದ್ಧಿಶಾಲಿಗಳೂ ಆದ ಯಾವ ಜನರು ಕ್ಷೇತ್ರ ವಾಸದ ಪೂರ್ಣಫಲವನ್ನು ಪಡೆಯಲೆಳಸುವರೊ, ಅವರು ಜೀವವಿರುವ ಪರ್ಯಂತರವೂ ಮಣಿಕರ್ಣಿಕಾತೀರ್ಥವನ್ನು ತ್ಯಜಿಸಬಾರದು.

೧೧. ಪ್ರತಿದಿವಸದಲ್ಲಿಯೂ ಚಕ್ರಪುಷ್ಕರಿಣೀತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ಪುಷ್ಪಗಳಿಂದಾಗಲಿ, ಪತ್ರಗಳಿಂದಾಗಲಿ, ಫಲಗಳಿಂದಾಗಲಿ, ತೀರ್ಥೋದಕದಿಂದಾಗಲಿ ಯಾವಾಗಲೂ ವಿಶ್ವೇಶ್ವರನ ಅರ್ಚನೆಯನ್ನು ಮಾಡ ಬೇಕು.

ಸ್ವವರ್ಣಾಶ್ರಮಧರ್ಮಶ್ಚ ತ್ಯಕ್ತವ್ಯೋ ನ ಮನಾಗಪಿ ।
ಪ್ರತ್ಯಹಂ ಕ್ಷೇತ್ರಮಹಿಮಾ ಶ್ರೋತವ್ಯಃ ಶ್ರದ್ಧಯಾಸಕೃತ್ ॥ ೧೨ ॥
ಯಥಾಶಕ್ತಿ ಚ ದೇಯಾನಿ ದಾನಾನ್ಯತ್ರ ಸುಗುಪ್ತವತ್ ।
ಅನ್ನಾನ್ಯಪಿ ಚ ದೇಯಾನಿ ವಿಘ್ನಾನ್ಪರಿಜಿಹೀರ್ಷುಣಾ ॥ ೧೩ ॥
ಪರೋಪಕರಣಂ ಚಾತ್ರ ಕರ್ತವ್ಯಂ ಸುಧಿಯಾ ಸದಾ ।
ಪರ್ವಸ್ವಪಿ ವಿಶೇಷೇಣ ಸ್ನಾನದಾನಾದಿಕಾಃ ಕ್ರಿಯಾಃ ॥ ೧೪ ॥
ವಿಶೇಷಪೂಜಾ ಕರ್ತವ್ಯಾ ಸುಮಹೋತ್ಸವಪೂರ್ವಕಂ ।
ಕಾರ್ಯಾಸ್ತಥಾಧಿಕಾ ಯಾತ್ರಾಃ ಸಮರ್ಚ್ಯಾಃ ಕ್ಷೇತ್ರದೇವತಾಃ ॥ ೧೫ ॥
ಅತ್ರ ಮರ್ಮ ನ ವಕ್ತವ್ಯಂ ಸುಧಿಯಾ ಕಸ್ಯಚಿತ್ಕ್ವಚಿತ್ ।
ಪರದಾರಪರದ್ರವ್ಯಪರಾಪಕರಣಂ ತ್ಯಜೇತ್ ॥ ೧೬ ॥
ಪರಾಪನೋದೋ ನೋ ವಾಚ್ಯಃ ಪರೇರ್ಷ್ಯಾಂ ನ ಚ ಕಾರಯೇತ್ ।
ಅಸತ್ಯಂ ನೈವ ವಕ್ತವ್ಯಂ ಪ್ರಾಣೈಃ ಕಂಠಗತೈರಪಿ ॥ ೧೭ ॥

---

೧೨. ತನ್ನ ವರ್ಣಾಶ್ರಮಗಳಿಗೆ ಉಚಿತವಾದ ಧರ್ಮವನ್ನು ಎಳ್ಳಿನಷ್ಟೂ ಲೋಪಗೊಳಿಸಬಾರದು. ಪ್ರತಿ ಪ್ರಾತಃಕಾಲದಲ್ಲಿಯೂ ಮತ್ತೆ ಮತ್ತೆ ಕ್ಷೇತ್ರ ಮಾಹಾತ್ಮ್ಯವನ್ನು ಕೇಳುತ್ತಿರಬೇಕು.

೧೩. ಲೋಕದ ಮೆಚ್ಚಿಗೆಯನ್ನು ಪಡೆಯಬೇಕೆಂಬ ಆಶೆಯನ್ನುಳಿದು ಗುಪ್ತವಾಗಿ ತನ್ನ ಶಕ್ತಿಗನುಸಾರವಾಗಿ ದಾನಗಳನ್ನು ಕೊಡಬೇಕು. ಅಲ್ಲದೆ ಕ್ಷೇತ್ರವಿಘ್ನಗಳನ್ನು ಕಳೆದುಕೊಳ್ಳುವುದಕ್ಕಾಗಿ ಇತರ ವಿಶೇಷ ಪದಾರ್ಥಗಳನ್ನೂ ದಾನಮಾಡಬೇಕು.

೧೪. ಸುಬುದ್ಧಿಯಾದವನು ಸರ್ವಕಾಲದಲ್ಲಿಯೂ ಈ ಕ್ಷೇತ್ರದಲ್ಲಿ ಪರೋಪಕಾರಕೃತ್ಯಗಳನ್ನೇ ಮಾಡುತ್ತಿರಬೇಕು. ವಿಶೇಷವಾಗಿ ಪರ್ವದಿವಸಗಳಲ್ಲಿ ಸ್ನಾನದಾನಾದಿ ಸತ್ಕರ್ಮಗಳನ್ನಾಚರಿಸಬೇಕು.

೧೫. ಮಹಾವೈಭವಪೂರ್ವಕವಾಗಿ ವಿಶ್ವೇಶ್ವರನಿಗೆ ವಿಶೇಷ ಪೂಜೆಯನ್ನು ಮಾಡಿಸಬೇಕು. ಅಧಿಕವಾಗಿ ಇತರ ತೀರ್ಥಕ್ಷೇತ್ರಗಳಿಗೆ ಹೋಗಿ ಯಾತ್ರೆಗಳನ್ನು ನೆರವೇರಿಸಿ ಸಕಲ ಕ್ಷೇತ್ರದೇವತೆಗಳನ್ನೂ ವಿಧ್ಯುಕ್ತರೀತಿಯಿಂದ ಪೂಜಿಸಬೇಕು.

೧೬. ಈ ಕ್ಷೇತ್ರದ ಮರ್ಮವನ್ನು ಬುದ್ಧಿವಂತನು ಯಾವನಿಗೂ ಎಂದಿಗೂ ಹೇಳಬಾರದು. ಪರಸ್ತ್ರೀಯರಲ್ಲಿಯೂ, ಪರದ್ರವ್ಯದಲ್ಲಿಯೂ ಆಶೆಯನ್ನೂ, ಪರರಿಗೆ ಅಪಕಾರವನ್ನು ಮಾಡುವುದನ್ನೂ ತ್ಯಜಿಸಬೇಕು.

೧೭. ಪರನಿಂದೆಯ ಮಾತುಗಳನ್ನಾಡಬಾರದು. ಇತರರ ಐಶ್ವರ್ಯದಲ್ಲಿ ಅಸೂಯೆಗೊಳ್ಳಲಾಗದು. ಪ್ರಾಣಗಳು ಕಂಠಗತಗಳಾಗಿದ್ದರೂ ಅಸತ್ಯಗಳಿಂದೊಡಗೂಡಿದ ಮಾತುಗಳನ್ನಾಡಬಾರದು.

ಅತ್ರತ್ಯ ಜಂತುರಕ್ಷಾರ್ಥಮಸತ್ಯಮಪಿ ಭಾಷಯೇತ್ ।
ಯೇನ ಕೇನ ಪ್ರಕಾರೇಣ ಶುಭೇನಾಪ್ಯಶುಭೇನ ವಾ ॥ ೧೮ ॥
ಅತ್ರತ್ಯಃ ಪ್ರಾಣಿಮಾತ್ರೋಽಪಿ ರಕ್ಷಣೀಯಃ ಪ್ರಯತ್ನತಃ ।
ಏಕಸ್ಮಿನ್ರಕ್ಷಿತೇ ಜಂತಾವತ್ರ ಕಾಶ್ಯಾಂ ಪ್ರಯತ್ನತಃ ।
ತ್ರೈಲೋಕ್ಯರಕ್ಷಣಾತ್ಪುಣ್ಯಂ ಯತ್ಸ್ಯಾತ್ತತ್ಸ್ಯಾನ್ನಸಂಶಯಃ ॥ ೧೯ ॥
ಯೇ ವಸಂತಿ ಸದಾ ಕಾಶ್ಯಾಂ ಕ್ಷೇತ್ರಸಂನ್ಯಾಸಕಾರಿಣಃ ।
ತ ಏವ ರುದ್ರಾ ಮಂತವ್ಯಾ ಜೀವನ್ಮುಕ್ತಾ ನ ಸಂಶಯಃ ॥ ೨೦ ॥
ತೇ ಪೂಜ್ಯಾಸ್ತೇ ನಮಸ್ಕಾರ್ಯಾಸ್ತೇ ಸಂತೋಷ್ಯಾಃ ಪ್ರಯತ್ನತಃ ।
ತೇಷು ವೈ ಪರಿತುಷ್ಟೇಷು ತುಷ್ಯೇದ್ವಿಶ್ವೇಶ್ವರಃ ಸ್ವಯಂ ॥ ೨೧ ॥
ಕಾಶ್ಯಾಂ ವಸಂತಿ ಯೇ ಮರ್ತ್ಯಾ ದೂರಸ್ಥೈರಪಿ ಸನ್ನರೈಃ ।
ಯೋಗಕ್ಷೇಮೋ ವಿಧಾತವ್ಯಸ್ತೇಷಾಂ ವಿಶ್ವೇಶಿತುರ್ಮುದೇ ॥ ೨೨ ॥
ಪ್ರಸರಸ್ತ್ವಿಂದ್ರಿಯಾಣಾಂ ಚ ನಿವಾರ್ಯೋಽತ್ರ ನಿವಾಸಿಭಿಃ ।
ಮನಸೋಽಪಿ ಹಿ ಚಾಂಚಲ್ಯಮಿಹ ವಾರ್ಯಂ ಪ್ರಯತ್ನತಃ ॥ ೨೩ ॥

---

೧೮. ಆದರೆ ಕಾಶೀನಿವಾಸಿಯಾದ ಒಂದು ಪ್ರಾಣಿಯನ್ನು ಕಾಪಾಡಲು ಅಸತ್ಯವನ್ನೂ ಆಡಬಹುದು. ಒಳ್ಳೆಯ ನಡತೆಯಿಂದಲೇ ಆಗಲಿ, ಕೆಟ್ಟದ್ದರಿಂದಲೇ ಆಗಲಿ, ಯಾವ ಪ್ರಕಾರದಿಂದಲೂ ಕಾಶಿಯಲ್ಲಿ ವಾಸಿಸುತ್ತಿರುವ ಪ್ರಾಣಿಮಾತ್ರವನ್ನು ಪ್ರಯತ್ನದಿಂದ ಸಂರಕ್ಷಿಸಬೇಕು.

೧೯. ಇಂತು ಪ್ರಯತ್ನಪೂರ್ವಕವಾಗಿ ಈ ಕಾಶಿಯಲ್ಲಿ ಒಂದು ಪ್ರಾಣಿಯನ್ನೇ ಕಾಪಾಡಿದರೂ ಮೂರು ಲೋಕಗಳ ನಿವಾಸಿಗಳನ್ನು ರಕ್ಷಿಸಿದರೆ ಯಾವ ಪುಣ್ಯವು ಲಭಿಸುವುದೊ, ಅದೇ ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ.

೨೦. ಯಾರು ಕಾಶಿಯಲ್ಲಿಯೇ ನಿತ್ಯವೂ ವಾಸಮಾಡುತ್ತಿರುವರೊ, ಯಾರು ಕ್ಷೇತ್ರಸನ್ನ್ಯಾಸವನ್ನು ಮಾಡಿರುವರೊ, ಅವರನ್ನು ಸಾಕ್ಷಾತ್ಕರಿಸಿದ ರುದ್ರರೆಂದೇ ತಿಳಿಯಬೇಕು. ಅವರು ಜೀವನ್ಮುಕ್ತರೆಂಬುದರಲ್ಲಿ ಸಂಶಯವಿಲ್ಲ.

೨೧. ಅವರೇ ಲೋಕಪೂಜ್ಯರು. ಅವರನ್ನು ಎಲ್ಲರೂ ನಮಸ್ಕರಿಸಬೇಕು. ಅವರನ್ನು ಪ್ರಯತ್ನಪೂರ್ವಕವಾಗಿ ಸಂತೋಷಗೊಳಿಸಬೇಕು. ಅವರು ಸಂತೋಷಗೊಂಡರೆ ವಿಶ್ವೇಶ್ವರನು ಸ್ವತಃ ಸಂತುಷ್ಟನಾಗುವನು.

೨೨–೨೩. ದೂರದೇಶದಲ್ಲಿರುವ ಸತ್ಪುರುಷರೂ ಸಹ ಕಾಶಿಯಲ್ಲಿ ವಾಸಿಸುವ ಸಜ್ಜನರ ಯೋಗಕ್ಷೇಮವನ್ನು ನೋಡಿಕೊಂಡಿರಲು ವಿಶ್ವೇಶ್ವರನು ಅವರಲ್ಲಿಯೂ ಸಂತೋಷಗೊಳ್ಳುವನು. ಇಲ್ಲಿಯ ನಿವಾಸಿಗಳು ಇಂದ್ರಿಯಗಳ ಚಾಪಲ್ಯವನ್ನು ಸರ್ವಥಾ ತಡೆಗಟ್ಟಬೇಕು. ಇಲ್ಲಿ ಪ್ರಯತ್ನದಿಂದ ಮನಸ್ಸಿನ ಚಾಂಚಲ್ಯವನ್ನೂ ಸಹ ಬಿಟ್ಟುಬಿಡಬೇಕು.

ಮರಣಂ ನಾಭಿಕಾಂಕ್ಷೇದ್ಧಿ ಕಾಂಕ್ಷ್ಯೋ ನೋಕ್ಷೋಽಪಿ ನೋ ಪುನಃ ।
ಶರೀರಶೋಷಣೋಪಾಯಃ ಕರ್ತವ್ಯಃ ಸುಧಿಯಾ ನ ಹಿ ॥ ೨೪ ॥
ಶರೀರಸೌಷ್ಠವಂ ಕಾಂಕ್ಷ್ಯಂ ವ್ರತಸ್ನಾನಾದಿಸಿದ್ಧಯೇ ।
ಆಯುರ್ಬಹ್ವತ್ರ ವೈ ಚಿಂತ್ಯಂ ಮಹಾಫಲಸಮೃದ್ಧಯೇ ॥ ೨೫ ॥
ಆತ್ಮರಕ್ಷಾತ್ರ ಕರ್ತವ್ಯಾ ಮಹಾಶ್ರೇಯೋಽಭಿವೃದ್ಧಯೇ ।
ಅತ್ರಾತ್ಮತ್ಯಜನೋಪಾಯಂ ಮನಸಾಪಿ ನ ಚಿಂತಯೇತ್ ॥ ೨೬ ॥
ಏಕಸ್ಮಿನ್ನಪಿ ಯಚ್ಚಾಹ್ನಿ ಕಾಶ್ಯಾಂ ಶ್ರೇಯೋಽಭಿಲಭ್ಯತೇ ।
ನ ತು ವರ್ಷಶತೇನಾಪಿ ತದನ್ಯತ್ರಾಪ್ಯತೇ ಕ್ವಚಿತ್ ॥ ೨೭ ॥
ಅನ್ಯತ್ರ ಯೋಗಾಭ್ಯಸನಾದ್ಯಾವಜ್ಜನ್ಮ ಯದರ್ಜ್ಯತೇ ।
ವಾರಾಣಸ್ಯಾಂ ತದೇಕೇನ ಪ್ರಾಣಾಯಾಮೇನ ಲಭ್ಯತೇ ॥ ೨೮ ॥
ಸರ್ವತೀರ್ಥಾವಗಾಹಾಚ್ಚ ಯಾವಜ್ಜನ್ಮ ಯದರ್ಜ್ಯತೇ ।
ತದಾನಂದವನೇ ಪ್ರಾಪ್ಯಂ ಮಣಿಕರ್ಣ್ಯೇಕಮಜ್ಜನಾತ್ ॥ ೨೯ ॥

---

೨೪. ಈ ಕ್ಷೇತ್ರದಲ್ಲಿ ವಾಸಿಸುವವನು ಮರಣವನ್ನೂ ಅಪೇಕ್ಷಿಸಬಾರದು. ಮೋಕ್ಷದ ಆಕಾಂಕ್ಷೆಯನ್ನೂ ಮಾಡಬಾರದು. ಪ್ರಾಜ್ಞನಾದವನು ಶರೀರ ಶೋಷಣವನ್ನುಂಟುಮಾಡುವ ವ್ರತನಿಯಮಗಳನ್ನೂ ಮಾಡಬಾರದು.

೨೫. ಪ್ರತ್ಯುತ ವ್ರತಸ್ನಾನಾದಿಗಳನ್ನಾಚರಿಸಲು ಶರೀರಸೌಷ್ಠವವನ್ನೇ ಅಪೇಕ್ಷಿಸಬೇಕು. ಮಹಾಫಲಗಳನ್ನು ಪಡೆಯುವಸಲುವಾಗಿ ದೀರ್ಘವಾದ ಆಯುಷ್ಯವನ್ನೂ ಕುರಿತು ಚಿಂತಿಸಬೇಕು.

೨೬. ಮಹಾಶ್ರೇಯಸ್ಸಿನ ಅಭಿವೃದ್ಧಿಯದೃಷ್ಟಿಯಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕು. ಮನಸ್ಸಿನಲ್ಲಿಯೂ ಸಹ ಪ್ರಾಣತ್ಯಾಗವನ್ನುಮಾಡುವ ಚಿಂತೆಯನ್ನು ತ್ಯಜಿಸಬೇಕು.

೨೭. ಕಾಶೀಕ್ಷೇತ್ರದಲ್ಲಿ ಒಂದೇ ಹಗಲಿನ ವಾಸದಿಂದ ಯಾವ ಪುಣ್ಯವು ಲಭಿಸುವುದೊ, ಅದನ್ನು ಇತರ ಸ್ಥಳಗಳಲ್ಲಿ ನೂರು ವರ್ಷಗಳ ಸೇವೆಯಿಂದಲೂ ಹೊಂದುವುದಕ್ಕೆ ಸಾಧ್ಯವಿಲ್ಲವು.

೨೮. ಇತರ ಕ್ಷೇತ್ರಗಳಲ್ಲಿ ಯಾವಜ್ಜೀವವೂ ಯೋಗಾಭ್ಯಾಸವನ್ನುಮಾಡುವುದರಿಂದ ಯಾವುದು ಲಭಿಸುವುದೊ, ಆ ಪುಣ್ಯವನ್ನೇ ಕಾಶಿಯಲ್ಲಿ ಮಾಡುವ ಒಂದು ಪ್ರಾಣಾಯಾಮದಿಂದಲೇ ಸಾಧಿಸಬಹುದು.

೨೯. ಜನ್ಮವಿರುವವರೆಗೂ ಭೂಮಂಡಲದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನಗಳನ್ನು ಮಾಡಲು ಯಾವ ಫಲವುಂಟೊ, ಆನಂದವನವನ್ನು ಸೇರಿ ಮಣಿಕರ್ಣಿಕಾತೀರ್ಥದಲ್ಲಿ ಒಂದೇ ಒಂದು ಸ್ನಾನವನ್ನು ಮಾಡುವುದರಿಂದಲೂ ಅದೇ ಫಲವೇ ಲಭಿಸುವುದು.

ಸರ್ವಲಿಂಗಾರ್ಚನಾತ್ಪುಣ್ಯಂ ಯಾವಜ್ಜನ್ಮ ಯದರ್ಜ್ಯತೇ ।
ಸಕೃದ್ವಿಶ್ವೇಶಮಭ್ಯರ್ಚ್ಯ ಶ್ರದ್ಧಯಾ ತದವಾಪ್ಯತೇ ॥ ೩೦ ॥
ಯಜ್ಜನ್ಮನಾಂ ಸಹಸ್ರೇಣ ನಿರ್ಮಲಂ ಪುಣ್ಯವರ್ಜಿತಂ ।
ತತ್ಪುಣ್ಯಪರಿವರ್ತೇನ ಭವೇದ್ವಿಶ್ವೇಶದರ್ಶನಂ ॥ ೩೧ ॥
ಗವಾಂ ಕೋಟಿಪ್ರದಾನೇನ ಸಂಯಗ್ದತ್ತೇನ ಯತ್ಫಲಂ ।
ತತ್ಫಲಂ ಸಂಯಗಾಪ್ಯೇತ ವಿಶ್ವೇಶ್ವರವಿಲೋಕನಾತ್ ॥ ೩೨ ॥
ಯತ್ಷೋಡಶಮಹಾದಾನೈಃ ಪುಣ್ಯಂ ಪ್ರೋಕ್ತಂ ಮಹರ್ಷಿಭಿಃ ।
ತತ್ಪುಣ್ಯಂ ಜಾಯತೇ ಪುಂಸಾಂ ವಿಶ್ವೇಶೇ ಪುಷ್ಪದಾನತಃ ॥ ೩೩ ॥
ಅಶ್ವಮೇಧಾದಿಭಿರ್ಯಜ್ಞೈರ್ಯತ್ಫಲಂ ಪ್ರಾಪ್ಯತೇಽಖಿಲೈಃ ।
ಪಂಚಾಮೃತಾನಾಂ ಸ್ನಪನಾದ್ವಿಶ್ವೇಶೇ ತದವಾಪ್ಯತೇ ॥ ೩೪ ॥
ವಾಜಪೇಯಸಹಸ್ರೇಣ ಸಂಯಗಿಷ್ಟೇನ ಯತ್ಫಲಂ ।
ಸಕೃನ್ಮಹಾರ್ಹೈರ್ನೈವೇದ್ಯೈರ್ವಿಶ್ವೇಶೇ ತಚ್ಛತಾಧಿಕಂ ॥ ೩೫ ॥

---

೩೦. ಸಮಸ್ತಲಿಂಗಗಳನ್ನೂ ಯಾವಜ್ಜೀವವೂ ಅರ್ಚಿಸುವುದರಿಂದ ಯಾವ ಪುಣ್ಯವುಂಟೊ, ಅದನ್ನೇ ವಿಶ್ವೇಶ್ವರನಿಗೆ ಮಾಡಿದ ಶ್ರದ್ಧಾಯುಕ್ತವಾದ ಒಂದು ಪೂಜೆಯಿಂದಲೇ ಪಡೆಯಬಹುದು.

೩೧. ಸಾವಿರಾರು ಜನ್ಮಗಳಲ್ಲಿ ಸಂಚಿತವಾದ ಪರಿಶುದ್ಧವಾದ ಯಾವ ಪುಣ್ಯರಾಶಿಯಿರುವುದೊ, ಅದರ ಪರಿಪಾಕದ ಫಲವಾಗಿಯೇ ವಿಶ್ವೇಶ್ವರನ ದರ್ಶನದ ಭಾಗ್ಯವು ಮನುಷ್ಯನಿಗೆ ಲಭಿಸುವುದು.

೩೨. ಒಂದುಕೋಟಿ ಗೋವುಗಳನ್ನು ಯಥಾವಿಧಿಯಾಗಿ ದಾನಮಾಡುವುದರಿಂದ ಯಾವ ಫಲವುಂಟೊ, ಆ ಉತ್ತಮಫಲವನ್ನೇ ಸಂಪೂರ್ಣವಾಗಿ ಮಾನವನು ವಿಶ್ವೇಶ್ವರನ ಸಂದರ್ಶನದಿಂದ ಪಡೆಯುವನು.

೩೩. ಷೋಡಶಮಹಾದಾನಗಳನ್ನು ಮಾಡುವುದರಿಂದ ಯಾವ ಪುಣ್ಯವುಂಟೆಂದು ಮಹರ್ಷಿಗಳು ಹೇಳಿರುವರೊ, ಅದೆಲ್ಲವನ್ನೂ ವಿಶ್ವೇಶ್ವರನಿಗೆ ಪುಷ್ಪವನ್ನರ್ಪಿಸುವುದರಿಂದಲೇ ಪಡೆಯಬಹುದು.

೩೪. ಅಶ್ವಮೇಧವೇ ಮೊದಲಾದ ಸಕಲಯಜ್ಞಗಳನ್ನೂ ಸಾಂಗವಾಗಿ ನೆರವೇರಿಸುವುದರಿಂದ ಯಾವ ಫಲವುಂಟೊ, ಅದೆಲ್ಲವನ್ನೂ ವಿಶ್ವೇಶ್ವರನಿಗೆ ಒಂದು ಪಂಚಾಮೃತಾಭಿಷೇಕವನ್ನು ಮಾಡುವುದರಿಂದಲೇ ಹೊಂದಬಹುದು.

೩೫. ಒಂದು ಸಹಸ್ರ ವಾಜಪೇಯಗಳನ್ನು ಸಾಂಗೋಪಾಂಗವಾಗಿ ಪೂರೈಸುವುದರಿಂದ ಯಾವ ಫಲವು ಕೈಗೂಡುವುದೊ, ವಿಶ್ವೇಶ್ವರನಿಗೆ ಒಮ್ಮೆ ಮಹಾರ್ಹವಾದ ನೈವೇದ್ಯವನ್ನು ಸಮರ್ಪಿಸುವುದರಿಂದ ಅದರ ನೂರರಷ್ಟು ಪುಣ್ಯವನ್ನು ಪಡೆಯಬಹುದು.

ಧ್ವಜಾತಪತ್ರಂ ಸಮರಂ ವಿಶ್ವೇಶೇ ಯಃ ಸಮರ್ಪಯೇತ್ ।
ಏಕಚ್ಛತ್ರಂ ಸ ವೈ ರಾಜ್ಯಂ ಪ್ರಾಪ್ನುಯಾದ್ವಸುಧಾತಲೇ ॥ ೩೬ ॥
ಮಹಾಪೂಜೋಪಕರಣಂ ಯೋಽರ್ಪಯೇದ್ವಿಶ್ವಭರ್ತರಿ ।
ನ ತಂ ಸಂಪತ್ತಿಸಂಭಾರಾ ವಿಮುಂಚಂತೀಹ ಕುತ್ರಚಿತ್ ॥ ೩೭ ॥
ಸರ್ವರ್ತುಕುಸುಮಾಢ್ಯಾಂ ಚ ಯಃ ಕುರ್ಯಾತ್ಪುಷ್ಪವಾಟಿಕಾಂ ।
ತದಂಗಣೇ ಕಲ್ಪವೃಕ್ಷಾಶ್ಛಾಯಾಂ ಕುರ್ವಂತಿ ಶೀತಲಂ ॥ ೩೮ ॥
ಯಃ ಕ್ಷೀರಸ್ನಪನಾರ್ಥಂ ವೈ ವಿಶ್ವೇಶೇ ಧೇನುಮರ್ಪಯೇತ್ ।
ಕ್ಷೀರಾರ್ಣವತಟೇ ತಸ್ಯ ನಿವಸೇಯುಃ ಪಿತಾಮಹಾಃ ॥ ೩೯ ॥
ವಿಶ್ವೇಶರಾಜಸದನೇ ಯಃ ಸುಧಾಂ ಚಿತ್ರಮೇವ ಚ ।
ಕಾರಯೇತ್ತಸ್ಯ ಭವನಂ ಕೈಲಾಸೇ ಚಿತ್ರಿತಂ ಭವೇತ್ ॥ ೪೦ ॥
ಬ್ರಾಹ್ಮಣಾನ್ಯತಿನೋ ವಾಪಿ ತಥೈವ ಶಿವಯೋಗಿನಃ ।
ಭೋಜಯೇದ್ಯೋಽತ್ರ ವೈ ಕಾಶ್ಯಾಮೇಕೈಕಗಣನಾಕ್ರಮಾತ್ ॥ ೪೧ ॥

---

೩೬. ಧ್ವಜ, ಶ್ವೇತಚ್ಛತ್ರ ಮತ್ತು ಚಾಮರಗಳನ್ನು ಯಾವನು ವಿಶ್ವೇಶ್ವರನಿಗೆ ಸಮರ್ಪಿಸುವನೊ, ಅವನು ಸಮಸ್ತಭೂಮಂಡಲವನ್ನೂ ತನ್ನ ರಾಜ್ಯವನ್ನಾಗಿ ಮಾಡಿಕೊಂಡು ಏಕಚ್ಛತ್ರದಿಂದ ರಾಜ್ಯಭಾರವನ್ನು ಮಾಡುತ್ತಿರುವನು.

೩೭. ಯಾವನು ವಿಶ್ವೇಶ್ವರನಿಗೆ ಮಹಾಪೂಜೆಯ ಸಂಭಾರಗಳನ್ನೊದಗಿಸಿ ಕೊಡುವನೊ ಅವನಿಗೆ ಈ ಲೋಕದಲ್ಲಿ ಎಂದಿಗೂ ಐಶ್ವರ್ಯಸಮೃದ್ಧಿಯು ಕ್ಷೀಣವಾಗುವುದಿಲ್ಲ.

೩೮. ಯಾವ ಮನುಷ್ಯನು ವಿಶ್ವೇಶ್ವರನಿಗಾಗಿ ಸಕಲಕಾಲಗಳಲ್ಲಿಯೂ ಪುಷ್ಪಗಳನ್ನೊದಗಿಸುವಂತಹ ಗಿಡಗಳ ಉದ್ಯಾನವನ್ನು ನಿರ್ಮಿಸುವನೊ, ಅವನ ಮನೆಯಲ್ಲಿ ಸ್ವರ್ಗಲೋಕದಲ್ಲಿರುವ ಕಲ್ಪವೃಕ್ಷಗಳು ತಮ್ಮ ತಣ್ಣನೆಯ ನೆರಳನ್ನುಂಟುಮಾಡುತ್ತಿರುವುವು.

೩೯. ಯಾವನು ವಿಶ್ವೇಶ್ವರನ ಕ್ಷೀರಾಭಿಷೇಕಕ್ಕಾಗಿ ಆಕಳನ್ನು ದಾನಮಾಡುವನೊ, ಅವನ ಪಿತಾಮಹರು ಕ್ಷೀರಸಮುದ್ರದ ತೀರದಲ್ಲಿ ವಾಸಮಾಡುವರು.

೪೦. ವಿಶ್ವೇಶ್ವರನ ದೇವಾಲಯವನ್ನು ಯಾವನು ಸುಣ್ಣಬಣ್ಣಗಳಿಂದಲೂ ಚಿತ್ರಲೇಖನಗಳಿಂದಲೂ ಅಲಂಕರಿಸುವನೊ, ಅವನಿಗೆ ಕೈಲಾಸದಲ್ಲಿ ವಿಚಿತ್ರವಾದ ಭವನವು ಸಿದ್ಧವಾಗಿರುವುದು.

೪೧. ಬ್ರಾಹ್ಮಣರಿಗಾಗಲಿ, ಸನ್ಯಾಸಿಗಳಿಗಾಗಲಿ, ಶಿವಯೋಗಿಗಳಿಗಾಗಲಿ ಯಾವನು ಈ ಕಾಶೀಕ್ಷೇತ್ರದಲ್ಲಿ ಭೋಜನವನ್ನು ಮಾಡಿಸುವನೊ, ಅವನಿಗೆ ಒಬ್ಬೊಬ್ಬನು ಭೋಜನಮಾಡುವುದಕ್ಕೂ ಶ್ರದ್ಧೆಯಿಂದ ಒಂದು ಕೋಟಿಜನರಿಗೆ ಮೃಷ್ಟಾನ್ನವನ್ನಿತ್ತ ಫಲವು ಲಭಿಸುವುದೆಂಬುವರಲ್ಲಿ ಸಂದೇಹವಿಲ್ಲ.

ಕೋಟಿಭೋಜ್ಯಫಲಂ ತಸ್ಯ ಶ್ರದ್ಧಯಾ ನಾತ್ರ ಸಂಶಯಃ ।
ತಪಸ್ತ್ವತ್ರ ಪ್ರಕರ್ತವ್ಯಂ ದಾನಮತ್ರ ಪ್ರದಾಪಯೇತ್ ॥ ೪೨ ॥
ವಿಶ್ವೇಶಸ್ತೋಷಣೀಯೋಽತ್ರ ಸ್ನಾನಹೋಮಜಪಾದಿಭಿಃ ।
ಅನ್ಯತ್ರ ಕೋಟಿಜಪ್ಯೇನ ಯತ್ಫಲಂ ಪ್ರಾಪ್ಯತೇ ನರೈಃ ।
ಅಷ್ಟೋತ್ತರಶತಂ ಜಪ್ತ್ವಾ ತದತ್ರ ಸಮವಾಪ್ಯತೇ ॥ ೪೩ ॥
ಕೋಟಿಹೋಮೇನ ಯತ್ಪ್ರೋಕ್ತಂ ಫಲಮನ್ಯತ್ರ ಸೂರಿಭಿಃ ।
ಅಷ್ಟೋತ್ತರಾಹುತಿಶತಾತ್ತದತ್ರಾನಂದಕಾನನೇ ॥ ೪೪ ॥
ಯೋ ಜಪೇದ್ರುದ್ರಸೂಕ್ತಾನಿ ಕಾಶ್ಯಾಂ ವಿಶ್ವೇಶಸನ್ನಿಧೌ ।
ಪಾರಾಯಣಸ್ಯ ವೇದಾನಾಂ ಸರ್ವೇಷಾಂ ಫಲಮಾಪ್ಯತೇ ॥ ೪೫ ॥
ತಸ್ಯ ಪುಣ್ಯಂ ನ ಜಾನಾಮಿ ಚಿಂತಿತೇ ಚಾಕ್ಷರೇ ಪರೇ ।
ಕಾಶ್ಯಾಂ ನಿತ್ಯಂ ಪ್ರವಸ್ತವ್ಯಂ ಸೇವ್ಯೋತ್ತರವಹಾ ಸದಾ ॥ ೪೬ ॥
ಆಪದ್ಯಪಿ ಹಿ ಘೋರಾಯಾಂ ಕಾಶೀ ತ್ಯಾಜ್ಯಾ ನ ಕುತ್ರಚಿತ್ ।
ಯತಃ ಸರ್ವಾಪದಾಂ ಹರ್ತಾ ತ್ರಾತಾ ವಿಶ್ವಪತಿಃ ಪ್ರಭುಃ ॥ ೪೭ ॥

---

೪೨. ಸಕಲರೂ ಇಲ್ಲಿಯೇ ತಪಸ್ಸನ್ನಾಚರಿಸಬೇಕು. ದಾನಗಳನ್ನೂ ಇಲ್ಲಿಯೇ ಕೊಡಬೇಕು. ತೀರ್ಥಸ್ನಾನ, ಹೋಮ, ಜಪಗಳೇ ಮುಂತಾದುವುಗಳಿಂದ ವಿಶ್ವೇಶ್ವರನನ್ನು ಸಂತೋಷಗೊಳಿಸಬೇಕು.

೪೩. ಇತರ ಸ್ಥಳಗಳಲ್ಲಿ ಒಂದುಕೋಟಿ ಜಪವನ್ನುಮಾಡುವುದರಿಂದ ಮನುಷ್ಯರಿಗೆ ಯಾವ ಫಲವು ಲಭಿಸುವುದೊ, ಅದೇ ವಿಶ್ವೇಶ್ವರನ ಸನ್ನಿಧಿಯಲ್ಲಿ ನೂರೆಂಟುಜಪಗಳಿಂದಲೇ ಪ್ರಾಪ್ತವಾಗುವುದು.

೪೪. ಇತರ ಕ್ಷೇತ್ರಗಳಲ್ಲಿ ಕೋಟಿಹೋಮಗಳಿಂದ ಯಾವ ಪುಣ್ಯವುಂಟೆಂದು ಶಾಸ್ತ್ರಜ್ಞರು ಹೇಳುವರೊ, ಈ ಆನಂದಕಾನನದಲ್ಲಿ ಅದನ್ನೇ ನೂರೆಂಟು ಆಹುತಿಗಳಿಂದ ಪಡೆಯಬಹುದು.

೪೫. ಯಾವನು ಕಾಶಿಯಲ್ಲಿ ವಿಶ್ವೇಶ್ವರನ ಸನ್ನಿಧಿಯಲ್ಲಿ ರುದ್ರಸೂಕ್ತವನ್ನು ಜಪಿಸುವನೊ, ಅವನು ಸಕಲ ವೇದಗಳನ್ನೂ ಪಾರಾಯಣಮಾಡಿದ ಫಲವನ್ನು ಹೊಂದುವನು.

೪೬. ಸರ್ವೋತ್ತಮನೂ, ನಾಶರಹಿತನೂ ಆದ ಮಹಾದೇವನನ್ನು ಕುರಿತು ಚಿಂತಿಸುವವನ ಪುಣ್ಯವನ್ನು ಎಷ್ಟೆಂದು ಹೇಳಲು ನನಗೂ ತಿಳಿಯದು. ಆದುದರಿಂದ ಮಾನವನು ನಿತ್ಯವೂ ಕಾಶಿಯಲ್ಲಿ ವಾಸಮಾಡಬೇಕು. ಉತ್ತರವಾಹಿನಿಯಾದ ಗಂಗೆಯನ್ನು ಸರ್ವಕಾಲಗಳಲ್ಲಿಯೂ ಸೇವಿಸುತ್ತಿರಬೇಕು.

೪೭. ಎಂತಹ ಘೋರವಾದ ಆಪತ್ತು ಬಂದರೂ ಕಾಶಿಯನ್ನು ಸರ್ವಥಾ ತ್ಯಜಿಸಬಾರದು. ಏಕೆಂದರೆ ಸಕಲಾಪತ್ತುಗಳಿಗೂ ಪರಿಹಾರಕವಾದ ವಿಶ್ವೇಶ್ವರನೇ ಇದಕ್ಕೆ ಕ್ಷೇತ್ರಪಾಲಕನಾಗಿರುವನು.

ಅವಂಧ್ಯಂ ದಿವಸಂ ಕುರ್ಯಾತ್ಸ್ನಾನದಾನಜಪಾದಿಭಿಃ ।
ಯತಃ ಕಾಶ್ಯಾಂ ಕೃತಂ ಕರ್ಮ ಮಹತ್ತ್ವಾಯ ಪ್ರಕಲ್ಪತೇ ॥ ೪೮ ॥
ಕೃಚ್ಛ್ರಚಾಂದ್ರಾಯಣಾದೀನಿ ಕರ್ತವ್ಯಾನಿ ಪ್ರಯತ್ನತಃ ।
ತಥೇಂದ್ರಿಯವಿಕಾರಾಶ್ಚ ನ ಬಾಧಂತೇಽತ್ರ ಕರ್ಹಿಚಿತ್ ॥ ೪೯ ॥
ಯದೀಂದ್ರಿಯಾಣಿ ಕುರ್ವಂತಿ ವಿಕ್ರಿಯಾಮಿಹ ದೇಹಿನಾಂ ।
ತದಾತ್ರ ವಾಸಸಂಸಿದ್ಧಿರ್ವಿಘ್ನೇಭ್ಯೋ ನೈವ ಲಭ್ಯತೇ ॥ ೫೦ ॥

ಅಗಸ್ತ್ಯ ಉವಾಚ :—

ಕೃಚ್ಛ್ರಚಾಂದ್ರಾಯಣಾದೀನಿ ವ್ಯಾಸೋ ವಕ್ಷ್ಯತಿ ಯಾನಿ ವೈ ।
ತೇಷಾಂ ಸ್ವರೂಪಮಾಖ್ಯಾಹಿ ಸ್ಕಂದೇಂದ್ರಿಯವಿಶುದ್ಧಯೇ ॥ ೫೧ ॥

ಸ್ಕಂದ ಉವಾಚ :—

ಕಥಯಾಮಿ ಮಹಾಬುದ್ಧೇ ಕೃಚ್ಛ್ರಾದೀನಿ ತವಾಗ್ರತಃ ।
ಯಾನಿ ಕೃತ್ವಾತ್ರ ಮನುಜೋ ದೇಹಶುದ್ಧಿಂ ಲಭೇತ್ಪರಾತ್ ॥ ೫೨ ॥
ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ।
ಉಪವಾಸೇನ ಚೈಕೇನ ಪಾದಕೃಚ್ಛ್ರಃ ಪ್ರಕೀರ್ತಿತಃ ॥ ೫೩ ॥

---

೪೮. ಒಂದೊಂದು ದಿವಸವನ್ನೂ ಸ್ನಾನ, ದಾನ, ಜಪಗಳೇ ಮುಂತಾದುವುಗಳಿಂದ ವ್ಯರ್ಥವಾಗದಂತೆ ನೋಡಿಕೊಳ್ಳಬೇಕು. ಏಕೆಂದರೆ ಕಾಶಿಯಲ್ಲಿ ಮಾಡಿದ ಪ್ರತಿಯೊಂದು ಕಾರ್ಯವೂ ಮಹತ್ತ್ವಕ್ಕೆ ಕಾರಣವಾಗುವುದು.

೪೯. ಈ ಕ್ಷೇತ್ರದಲ್ಲಿಯೇ ಕೃಚ್ಛ್ರಚಾಂದ್ರಾಯಣಾದಿಗಳನ್ನು ಪ್ರಯತ್ನದಿಂದ ಮಾಡಬೇಕು. ಇವುಗಳ ಫಲವಾಗಿ ಇಂದ್ರಿಯಗಳ ಚಾಪಲ್ಯಾದಿಗಳು ಮನುಷ್ಯನನ್ನು ಎಂದಿಗೂ ಬಾಧಿಸುವುದಿಲ್ಲ.

೫೦. ಭೂಲೋಕದಲ್ಲಿ ಯಾರಿಗೆ ಇಂದ್ರಿಯಗಳು ವೈಕ್ಲಬ್ಯವನ್ನುಂಟು ಮಾಡುವುವೊ ಅವರಿಗೆ ವಿಘ್ನಸಮೂಹಗಳು ಸಂಭವಿಸಿ ಕಾಶೀಕ್ಷೇತ್ರದ ವಾಸವು ಎಂದಿಗೂ ಲಭಿಸುವುದೇ ಇಲ್ಲವು.

೫೧. ಅಗಸ್ತ್ಯನು ಹೇಳುತ್ತಾನೆ:—ಸ್ಕಂದನೆ! ವ್ಯಾಸನು ಇಂದ್ರಿಯಗಳ ಪರಿಶುದ್ಧಿಗಾಗಿ ಯಾವ ಕೃಚ್ಛ್ರಚಾಂದ್ರಾಯಣಾದಿ ಪ್ರಾಯಶ್ಚಿತ್ತಕಾರ್ಯಗಳನ್ನು ನಿರೂಪಿಸುವನೊ, ಅವುಗಳ ಸ್ವರೂಪಗಳನ್ನು ನನಗೆ ನಿರೂಪಿಸು.

೫೨. ಸ್ಕಂದನು ಹೇಳುತ್ತಾನೆ:—ಮಹಾಪ್ರಾಜ್ಞನೆ! ನಿನ್ನೆದುರಿನಲ್ಲಿ ಕೃಚ್ಛ್ರವೇ ಮೊದಲಾದ ಕಾರ್ಯಗಳ ರೂಪವನ್ನು ತಿಳಿಸುವೆನು. ಅವುಗಳನ್ನಾಚರಿಸುವುದರಿಂದ ಮನುಷ್ಯನು ಭೂಲೋಕದಲ್ಲಿ ಸರ್ವೋತ್ಕೃಷ್ಟವಾದ ದೇಹಶುದ್ಧಿಯನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೫೩. ರಾತ್ರಿಯಲ್ಲಿ ಮಾತ್ರ ಯಾಚನೆಯಿಲ್ಲದೆ ಬಂದುದನ್ನು ಸ್ವೀಕರಿಸುತ್ತ

ವಟೋದುಂಬರರಾಜೀವಬಿಲ್ವಪತ್ರಕುಶೋದಕಂ ।
ಪ್ರತ್ಯೇಕಂ ಪ್ರತ್ಯಹಂ ಪೀತಂ ಪರ್ಣಕೃಚ್ಛ್ರಃ ಪ್ರಕೀರ್ತಿತಃ ॥ ೫೪ ॥
ಪಿಣ್ಯಾಕಘೃತತಕ್ರಾಂಬುಸಕ್ತೂನಾಂ ಪ್ರತಿವಾಸರಂ ।
ಏಕೈಕಮುಪವಾಸಶ್ಚ ಕೃಚ್ಛ್ರಃ ಸೌಮ್ಯಃ ಪ್ರಕೀರ್ತಿತಃ ॥ ೫೫ ॥
ಹವಿಷಾ ಪ್ರಾತರಶ್ನೀತ ಹವಿಷಾ ಸಾಯಮೇವ ಚ ।
ಹವಿಷಾ ಯಾಚಿತಂ ತ್ರೀಂಸ್ತು ಸೋಽಪವಾಸಸ್ತ್ರ್ಯಹಂ ವಸೇತ್ ॥ ೫೬ ॥
ಏಕೈಕಂ ಗ್ರಾಸಮಶ್ನೀಯಾದಹಾನಿ ತ್ರೀಣಿ ಪೂರ್ವವತ್ ।
ತ್ರ್ಯಹಂ ಚೋಪವಸೇದಂತ್ಯಮತಿಕೃಚ್ಛ್ರಂ ಚರನ್ದ್ವಿಜಃ ॥ ೫೭ ॥
ಕೃಚ್ಛ್ರಾತಿಕೃಚ್ಛ್ರಂ ಪಯಸಾ ದಿವಸಾನೇಕವಿಂಶತಿಃ ।
ದ್ವಾದಶಾಹೋಪವಾಸೇನ ಪರಾಕಃ ಪರಿಕೀರ್ತಿತಃ ॥ ೫೮ ॥
ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಂ ।
ತ್ರ್ಯಹಂ ಚೋಪವಸೇದಂತ್ಯಂ ಪ್ರಾಜಾಪತ್ಯಂ ಚರನ್ದ್ವಿಜಃ ॥ ೫೯ ॥

---

ಹಗಲಿನಲ್ಲಿ ಉಪವಾಸವನ್ನು ಮಾಡುವ ಪ್ರಾಯಶ್ಚಿತ್ತವು ಪಾದಕೃಚ್ಛ್ರವೆಂದು ಕರೆಯಲ್ಪಡುವುದು.

೫೪. ಆಲ, ಅತ್ತಿ, ಕಮಲ, ಬಿಲ್ವಪತ್ರೆ, ಕುಶ—ಇವುಗಳ ಎಲೆಗಳಿಂದ ಕ್ರಮವಾಗಿ ಒಂದೊಂದು ದಿವಸದಲ್ಲಿಯೂ ಒಂದೊಂದರಿಂದ ನೀರನ್ನು ಮಾತ್ರ ಸೇವಿಸುವುದಕ್ಕೆ ಪರ್ಣಕೃಚ್ಛ್ರವೆಂದು ಹೆಸರು.

೫೫. ಪಿಣ್ಯಾಕ(ಎಳ್ಳಿನ ಪದಾರ್ಥವು), ತುಪ್ಪ, ಮಜ್ಜಿಗೆ, ನೀರು, ಸಕ್ತು—ಇವುಗಳಲ್ಲಿ ಒಂದೊಂದನ್ನು ಒಂದೊಂದು ಹಗಲಿನಲ್ಲಿ ಸೇವನೆಮಾಡಿ ರಾತ್ರಿಯಲ್ಲಿ ಉಪವಾಸವನ್ನು ಮಾಡಲು ಸೌಮ್ಯಕೃಚ್ಛ್ರವೆನ್ನಿಸುವುದು.

೫೬. ಹವಿಸ್ಸನ್ನೇ ಪ್ರಾತಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಸೇವಿಸುತ್ತ ಅಯಾಚಿತವಾಗಿ ಲಭಿಸಿದ ಅದರಿಂದಲೇ ಮೂರು ದಿನಗಳನ್ನು ಕಳೆದು ಬಳಿಕ ಮೂರು ದಿವಸಗಳು ಉಪವಾಸವನ್ನು ಮಾಡಬೇಕು.

೫೭. ಮೊದಲಿನಂತೆಯೇ ಮೂರು ದಿವಸಗಳು ಎರಡು ಕಾಲಗಳಲ್ಲಿಯೂ ಒಂದೊಂದು ಗ್ರಾಸವನ್ನೇ ಊಟಮಾಡಬೇಕು. ಅದರ ಕಡೆಯಲ್ಲಿ ಮೂರು ದಿವಸಗಳು ಉಪವಾಸವನ್ನು ಮಾಡಬೇಕು. ಇದೇ ಬ್ರಾಹ್ಮಣರು ಮಾಡಬೇಕಾದ ಕೃಚ್ಛ್ರವೆಂಬ ಕರ್ಮವು.

೫೮. ಬರಿಯ ಹಾಲಿನ ಆಹಾರದಿಂದಲೇ ಇಪ್ಪತ್ತೊಂದು ದಿವಸಗಳನ್ನು ಕಳೆಯುವುದಕ್ಕೆ ಕೃಚ್ಛ್ರಾತಿಕೃಚ್ಛ್ರವೆಂದು ಹೆಸರು. ಹನ್ನೆರಡು ದಿವಸಗಳ ಅಖಂಡೋಪವಾಸವನ್ನು ಮಾಡುವುದಕ್ಕೆ ಪರಾಕವೆಂದು ಶಾಸ್ತ್ರಗಳು ಹೇಳುವುವು.

೫೯. ಇನ್ನು ಬ್ರಾಹ್ಮಣರು ಮಾಡುವ ಪ್ರಾಜಾಪತ್ಯವ್ರತವನ್ನು ಹೇಳುವೆನು.

**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।**
**ಏಕರಾತ್ರೋಪವಾಸಶ್ಚ ಕೃಚ್ಛ್ರಃ ಸಾಂತಪನಃ ಸ್ಮೃತಃ ॥ ೬೦ ॥**
**ಪೃಥಕ್ಸಾಂತಪನದ್ರವ್ಯೈಃ ಷಡಹಃ ಸೋಪವಾಸಕಃ ।**
**ಸಪ್ತಾಹೇನ ತು ಕೃಚ್ಛ್ರೋಽಯಂ ಮಹಾಸಾಂತಪನಃ ಸ್ಮೃತಃ ॥ ೬೧ ॥**
**ತಪ್ತಕೃಚ್ಛ್ರಂಚರನ್ವಿಪ್ರೋ ಜಲಕ್ಷೀರಘೃತಾನಿಲಾನ್ ।**
**ಏತಾಂಸ್ತ್ರ್ಯಹಂ ಪಿಬೇದುಷ್ಣಾನ್ಸಕೃತ್ಸ್ನಾಯೀ ಸಮಾಹಿತಃ ॥ ೬೨ ॥**
**ತ್ರ್ಯಹಮುಷ್ಣಾಃ ಪಿಬೇದಾಪಸ್ತ್ರ್ಯಹಮುಷ್ಣಂ ಪಯಃ ಪಿಬೇತ್ ।**
**ತ್ರ್ಯಹಮುಷ್ಣಂ ಘೃತಂ ಪ್ರಾಶ್ಯ ವಾಯುಭಕ್ಷೋ ದಿನತ್ರಯಂ ॥ ೬೩ ॥**
**ಪಲಮೇಕಂ ಪಯಃಪೀತ್ವಾ ಸರ್ಪಿಷಶ್ಚ ಪಲದ್ವಯಂ ।**
**ಪಲಮೇಕಂ ತು ತೋಯಸ್ಯ ತಪ್ತಕೃಚ್ಛ್ರ ಉದಾಹೃತಃ ॥ ೬೪ ॥**

---

ಮೂರು ದಿನಗಳು ಹಗಲಿನಲ್ಲೂ, ಬಳಿಕ ಮೂರು ದಿನಗಳು ರಾತ್ರಿಯಲ್ಲೂ ಮಾತ್ರ ಭೋಜನವನ್ನು ಮಾಡಿ ಆ ಮೇಲೆ ಮೂರು ದಿನಗಳು ಅಯಾಚಿತಾನ್ನವನ್ನು ಸ್ವೀಕರಿಸಬೇಕು. ಕಡೆಯ ಮೂರು ದಿನಗಳನ್ನು ಉಪವಾಸದಿಂದ ಕಳೆಯಬೇಕು.

೬೦. ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ (ಪಂಚಗವ್ಯಗಳು) ಮತ್ತು ಕುಶೋದಕವು—ಇವುಗಳನ್ನು ಪ್ರಾತಃಕಾಲದಲ್ಲಿ ಸೇವಿಸಿ ಒಂದು ರಾತ್ರಿಯ ಉಪವಾಸವನ್ನು ಮಾಡುವುದೇ ಸಾಂತಪನಕೃಚ್ಛ್ರವೆಂದು ಸ್ಮೃತವಾಗಿರುವುದು.

೬೧. ಮೇಲೆ ಹೇಳಿದ ಆರು ದ್ರವ್ಯಗಳಲ್ಲಿ ಒಂದೊಂದನ್ನು ಮಾತ್ರ ಒಂದೊಂದು ಹಗಲಿನಲ್ಲಿ ಸ್ವೀಕರಿಸಿ ಏಳನೆಯ ದಿವಸ ಪೂರ್ತಿ ಉಪವಾಸವನ್ನು ಮಾಡುವುದಕ್ಕೆ ಸ್ಮೃತಿಗಳು ಮಹಾಸಾಂತಪನವೆಂದು ಕರೆಯುವುವು.

೬೨. ತಪ್ತಕೃಚ್ಛ್ರವನ್ನು ಮಾಡಲೆಳಸುವ ಬ್ರಾಹ್ಮಣನು ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಶಾಂತಮನಸ್ಕನಾಗಿ ಬಿಸಿಮಾಡಿದ ನೀರು, ಹಾಲು, ತುಪ್ಪ, ವಾಯುಗಳಲ್ಲಿ ಒಂದೊಂದನ್ನೂ ಮೂರು ದಿವಸಗಳು ಏಕಭುಕ್ತವನ್ನು ಸ್ವೀಕರಿಸಬೇಕು.

೬೩. ಎಂದರೆ ಮೂರು ದಿವಸಗಳು ಬಿಸಿನೀರಿನಿಂದ ಪ್ರಾಣಧಾರಣಮಾಡಬೇಕು. ಮೂರು ದಿನಗಳು ಬಿಸಿಯ ಹಾಲನ್ನು ಕುಡಿಯಬೇಕು. ಮೂರು ದಿನಗಳು ಬಿಸಿಯ ತುಪ್ಪವನ್ನು ಸೇವಿಸಬೇಕು. ಮತ್ತು ಮೂರು ದಿವಸಗಳು ಕೇವಲ ವಾಯುಭಕ್ಷಕನಾಗಿರಬೇಕು.

೬೪. ಈ ಆಹಾರಗಳ ಪ್ರಮಾಣಗಳನ್ನು ಹೇಳುವೆನು. ಒಂದು ಪಲವ ತೂಕದಷ್ಟು ಹಾಲನ್ನು ಕುಡಿಯಬೇಕು. ಎರಡು ಪಲಗಳ ತುಪ್ಪವನ್ನೂ,

**ಗೋಮೂತ್ರೇಣ ಸಮಾಯುಕ್ತಂ ಯಾವಕಂ ಯಃ ಪ್ರಯೋಜಯೇತ್ ।**
**ಕೃಚ್ಛ್ರಮೇಕಾಹ್ನಿಕಂ ಪ್ರೋಕ್ತಂ ಶರೀರಸ್ಯ ವಿಶೋಧನಂ ॥ ೬೫ ॥**
**ಹಸ್ತಾವುತ್ತಾನತಃ ಕೃತ್ವಾ ದಿವಸಂ ಮಾರುತಾಶನಃ ।**
**ರಾತ್ರೌ ಜಲೇ ಸ್ಥಿತೋ ವ್ಯುಷ್ಟಃ ಪ್ರಾಜಾಪತ್ಯೇನ ತತ್ಸಮಂ ॥ ೬೬ ॥**
**ಏಕೈಕಂ ಹ್ರಾಸಯೇದ್ಗ್ರಾಸಂ ಕೃಷ್ಣೇ ಶುಕ್ಲೇ ಚ ವರ್ಧಯೇತ್ ।**
**ಉಪಸ್ಪೃಶಂಸ್ತ್ರಿಷವಣಮೇತಚ್ಚಾಂದ್ರಾಯಣಂ ಸ್ಮೃತಂ ॥ ೬೭ ॥**
**ಏಕೈಕಂ ವರ್ಧಯೇದ್ಗ್ರಾಸಂ ಶುಕ್ಲೇ ಕೃಷ್ಣೇ ಚ ಹ್ರಾಸಯೇತ್ ।**
**ಭುಂಜೀತ ದರ್ಶೇ ನೋ ಕಿಂಚಿದೇಷ ಚಾಂದ್ರಾಯಣೋ ವಿಧಿಃ ॥ ೬೮ ॥**
**ಚತುರಃ ಪ್ರಾತರಶ್ನೀಯಾತ್ಪಿಂಡಾನ್ವಿಪ್ರಃ ಸಮಾಹಿತಃ ।**
**ಚತುರೋಽಸ್ತಮಿತೇ ಸೂರ್ಯೇ ಶಿಶುಚಾಂದ್ರಾಯಣಂ ಸ್ಮೃತಂ ॥ ೬೯ ॥**

---

ಉಷ್ಣೋದಕದ ಒಂದು ಪಲವನ್ನೂ ಮಾತ್ರ ಸ್ವೀಕರಿಸಬೇಕು. ಇದನ್ನೇ ತಪ್ತಕೃಚ್ಛ್ರವೆಂದು ಕರೆಯುವರು.

೬೫. ಗೋಮೂತ್ರ ಮಿಶ್ರಿತವಾದ ಯಾವಾನ್ನವನ್ನು ಒಂದು ಹಗಲಿನಲ್ಲಿ ಮಾತ್ರ ಯಾವನು ಸೇವಿಸುವನೊ, ಅವನು ಏಕಾಹ್ನಿಕಕೃಚ್ಛ್ರವನ್ನು ಮಾಡಿದವನೆಂದು ತಿಳಿಯಬೇಕು. ಈ ಪ್ರಾಯಶ್ಚಿತ್ತವು ದೇಹಶುದ್ಧಿಯನ್ನುಂಟುಮಾಡುವುದು.

೬೬. ಕೈಗಳನ್ನು ಮೇಲಕ್ಕೆತ್ತಿಕೊಂಡು ಹಗಲಿನಲ್ಲಿ ವಾಯುಭಕ್ಷಕನಾಗಿ ರಾತ್ರಿಯಲ್ಲಿ ನೀರಿನಲ್ಲಿ ನಿಂತು ಮಾರನೆಯ ದಿನದ ಪ್ರಾತಃಕಾಲದಲ್ಲಿ ಎದ್ದು ಬಂದರೆ ಆ ಪ್ರಾಯಶ್ಚಿತ್ತವು ಪ್ರಾಜಾಪತ್ಯಕ್ಕೆ ಸಮಾನವೆನಿಸುವುದು.

೬೭. ಕೃಷ್ಣಪಕ್ಷದಲ್ಲಿ ತಿಥಿಗಳು ಕಳೆದಂತೆಲ್ಲ ಆಹಾರದಲ್ಲಿ ಒಂದೊಂದು ಕಬಳವನ್ನು ಕಡಿಮೆಮಾಡಬೇಕು. ಪುನಃ ಶುಕ್ಲಪಕ್ಷದಲ್ಲಿ ಹಾಗೆಯೇ ಹೆಚ್ಚಿಸಬೇಕು. ಪ್ರತಿದಿನದಲ್ಲಿಯೂ ತ್ರಿಸಂಧ್ಯೆಗಳಲ್ಲಿ ಸ್ನಾನಗಳನ್ನು ಮಾಡಬೇಕು. ಇದಕ್ಕೆ ಸ್ಮೃತಿಗಳಲ್ಲಿ ಚಾಂದ್ರಾಯಣವ್ರತವೆಂದು ಹೇಳಿರುವರು.

೬೮. ಶುಕ್ಲಪಕ್ಷದಲ್ಲಿ ಒಂದೊಂದು ಗ್ರಾಸವನ್ನು ದಿನದಿನಕ್ಕೂ ಹೆಚ್ಚಿಸುತ್ತ ಕೃಷ್ಣಪಕ್ಷದಲ್ಲಿ ಕಡಿಮೆಮಾಡುತ್ತ ಬರಬೇಕು. ಅಮಾವಾಸ್ಯೆಯಲ್ಲಿ ಪೂರ್ಣೋಪವಾಸವನ್ನು ಮಾಡಬೇಕು. ಚಾಂದ್ರಾಯಣವನ್ನಾಚರಿಸಲು ಇದೂ ಒಂದು ಪ್ರಕಾರವು.

೬೯. ಬ್ರಾಹ್ಮಣನು ಪ್ರಾತಃಕಾಲದಲ್ಲಿ ನಾಲ್ಕು ಕವಳಗಳನ್ನು ಭೋಜನ ಮಾಡಬೇಕು. ಸೂರ್ಯನು ಅಸ್ತಮಿಸಲು ಸಮಾಹಿತಮನಸ್ಕನಾಗಿ ಮತ್ತೆ ನಾಲ್ಕು ತುತ್ತುಗಳನ್ನು ಊಟಮಾಡಬೇಕು. ಇದು ಶಿಶುಚಾಂದ್ರಾಯಣವೆಂದು ಹೇಳಲ್ಪಟ್ಟಿರುವುದು.

ಅಷ್ಟಾವಷ್ಟೌ ಸಮಶ್ನೀಯಾತ್ಪಿಂಡಾನ್ಮಧ್ಯಂದಿನೇ ಸ್ಥಿತೇ ।
ನಿಯತಾತ್ಮಾ ಹವಿಷ್ಯಸ್ಯ ಯತಿಚಾಂದ್ರಾಯಣಂ ಸ್ಮೃತಂ ॥ ೭೦ ॥
ಯಥಾ ಕಥಂಚಿತ್ಪಿಂಡಾನಾಂ ತಿಸ್ರೋಽಶೀತೀಃ ಸಮಾಹಿತಃ ।
ಮಾಸೇನಾಶ್ನನ್ಹವಿಷ್ಯಸ್ಯ ಚಂದ್ರಸ್ಯೈತಿ ಸಲೋಕತಾಂ ॥ ೭೧ ॥
ಅದ್ಭಿರ್ಗಾತ್ರಾಣಿ ಶುಧ್ಯಂತಿ ಮನಃ ಸತ್ಯೇನ ಶುಧ್ಯತಿ ।
ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುಧ್ಯತಿ ॥ ೭೨ ॥
ತಚ್ಚ ಜ್ಞಾನಂ ಭವೇತ್ಪುಂಸಾಂ ಸಂಯುಕ್ಕಾಶೀನಿಷೇವಣಾತ್ ।
ಕಾಶೀನಿಷೇವಣೇನ ಸ್ಯಾದ್ವಿಶ್ವೇಶಕರುಣೋದಯಃ ॥ ೭೩ ॥
ತತೋ ಮಹೋದಯಾವಾಪ್ತಿಃ ಕರ್ಮನಿರ್ಮೂಲನಕ್ಷಮಾ ।
ಅತಃ ಕಾಶ್ಯಾಂ ಪ್ರಯತ್ನೇನ ಸ್ನಾನಂ ದಾನಂ ತಪೋ ಜಪಃ ॥ ೭೪ ॥
ವ್ರತಂ ಪುರಾಣಶ್ರವಣಂ ಸ್ಮೃತ್ಯುಕ್ತಾಧ್ವನಿಷೇವಣಂ ।
ಪ್ರತಿಕ್ಷಣಂ ಪ್ರತಿದಿನಂ ವಿಶ್ವೇಶಪದಚಿಂತನಂ ॥ ೭೫ ॥

---

೭೦. ಪ್ರತಿನಿತ್ಯವೂ ಮಧ್ಯಾಹ್ನವು ಪ್ರಾಪ್ತವಾಗಲು ಮಾನವನು ಸಂಯತಾತ್ಮನಾಗಿ ಹವಿಷ್ಯಾನ್ನದ ಎಂಟೆಂಟು ಕವಳಗಳನ್ನು ಭೋಜನಮಾಡಬೇಕು. ಇದಕ್ಕೆ ಯತಿಚಾಂದ್ರಾಯಣವೆಂದು ಹೆಸರು.

೭೧. ದಿವಸಕ್ಕೆ ಇಷ್ಟು ಕವಳಗಳೆಂಬ ಲೆಕ್ಕವನ್ನಿಡದೆ ಯಥಾಲಬ್ಧವಾಗಿ ಹವಿಷ್ಯಾನ್ನವನ್ನು ಭೋಜನಮಾಡುತ್ತ ಸಮಾಧಾನವುಳ್ಳ ಮನಸ್ಸಿನಿಂದ ಮುವ್ವತ್ತು ದಿವಸಗಳ ಮಾಸವೊಂದರಲ್ಲಿ ಇನ್ನೂರ ನಲವತ್ತು ಕವಳಗಳನ್ನು ಮಾತ್ರ ಗಳಿಸುವ ಮಾನವನು ಚಂದ್ರಸಾಲೋಕ್ಯವನ್ನು ಪಡೆಯುವನು.

೭೨. ನೀರಿನಿಂದ ದೇಹಗಳು ಶುದ್ಧಿಗೊಳ್ಳುವುವು. ಮನಸ್ಸು ಸತ್ಯದಿಂದ ಪರಿಶುದ್ಧವಾಗುವುದು. ಅಹಂಕಾರವು ವಿದ್ಯೆ ಮತ್ತು ತಪಸ್ಸುಗಳಿಂದ ಶುದ್ಧವಾಗುವುದು. ಬುದ್ಧಿಯು ಜ್ಞಾನದಿಂದ ನಿಷ್ಕಲ್ಮಷವೆನಿಸುವುದು.

೭೩. ಆ ಜ್ಞಾನವೂ ಸಹ ಮಾನವರಿಗೆ ಕಾಶೀಕ್ಷೇತ್ರವನ್ನು ಚೆನ್ನಾಗಿ ಸೇವಿಸುವುದರಿಂದಲೇ ಆಗುವುದು. ಕಾರಣವೇನೆಂದರೆ ಕಾಶಿಯ ಸೇವನೆಯಿಂದಲೇ ವಿಶ್ವೇಶ್ವರನಿಗೆ ಕರುಣೆಯುಂಟಾಗುವುದು.

೭೪. ಅದರಿಂದ ಸಕಲ ಕರ್ಮಗಳನ್ನೂ ನಿರ್ಮೂಲಗೊಳಿಸಲು ಸಮರ್ಥವಾದ ಮಹಾಪುಣ್ಯವುಂಟಾಗುವುದು. ಆದುದರಿಂದ ಕಾಶಿಯಲ್ಲಿ ಪ್ರಯತ್ನಪೂರ್ವಕವಾಗಿ ಸ್ನಾನ, ದಾನ, ತಪಸ್ಸು, ಜಪ ಮುಂತಾದುವುಗಳನ್ನು ಮಾಡಬೇಕು.

೭೫. ವ್ರತಾಚರಣೆ, ಪುರಾಣಶ್ರವಣ, ಸ್ಮೃತಿಗಳಲ್ಲಿ ಹೇಳಿರುವಂತೆ ತೀರ್ಥಗಳ ಸೇವೆ, ಪ್ರತಿನಿಮಿಷವೂ ಪ್ರತಿದಿವಸದಲ್ಲಿಯೂ ವಿಶ್ವೇಶ್ವರನ ಪಾದಪದ್ಮಗಳನ್ನು ಕುರಿತು ಚಿಂತಿಸುತ್ತಿರುವುದು.

ಲಿಂಗಾರ್ಚನಂ ತ್ರಿಕಾಲಂ ಚ ಲಿಂಗಸ್ಯಾಪಿ ಪ್ರತಿಷ್ಠಿತಿಃ ।
ಸಾಧುಭಿಃ ಸಹ ಸಂಲಾಪೋ ಜಲ್ಪಃ ಶಿವಶಿವೇತಿ ಚ ॥ ೭೬ ॥
ಅತಿಥೇಶ್ಚಾಪಿ ಸತ್ಕಾರೋ ಮೈತ್ರೀ ತೀರ್ಥನಿವಾಸಿಭಿಃ ।
ಆಸ್ತಿಕ್ಯಬುದ್ಧಿರ್ವಿನಯೋ ಮಾನಾಮಾನಸಮಾನಧೀಃ ॥ ೭೭ ॥
ಅಕಾಮಿತಾ ತ್ವನೌದ್ಧತ್ಯಮರಾಗಿತ್ವಮಹಿಂಸನಂ ।
ಅಪ್ರತಿಗ್ರಹವೃತ್ತಿಶ್ಚ ಮತಿಶ್ಚಾನುಗ್ರಹಾತ್ಮಿಕಾ ॥ ೭೮ ॥
ಅದಂಭಿತಾ ತ್ವಮಾತ್ಸರ್ಯಮಪ್ರಾರ್ಥಿತಧನಾಗಮಃ ।
ಅಲೋಭಿತ್ವಮನಾಲಸ್ಯಮಪಾರುಷ್ಯಮದೀನತಾ ॥ ೭೯ ॥
ಇತ್ಯಾದಿಸತ್ತ್ವವೃತ್ತಿಶ್ಚ ಕರ್ತವ್ಯಾ ಕ್ಷೇತ್ರವಾಸಿನಾ ।
ಪ್ರತ್ಯಹಂ ಚೇತಿ ಶಿಷ್ಯೇಭ್ಯಃ ಸ ಧರ್ಮಾನುಪದೇಕ್ಷ್ಯತಿ ॥ ೮೦ ॥
ನಿತ್ಯಂ ತ್ರಿಷವಣಸ್ನಾಯೀ ನಿತ್ಯಂ ಭಿಕ್ಷಾಕೃತಾಶನಃ ।
ಲಿಂಗಪೂಜಾರ್ಚಕೋ ನಿತ್ಯಮಿತ್ಥಂ ವ್ಯಾಸೋ ವಸೇತ್ಪುರಾ ॥ ೮೧ ॥

---

೭೬. ತ್ರಿಕಾಲದಲ್ಲಿಯೂ ಶಿವಲಿಂಗಗಳ ಪೂಜೆಯು, ಲಿಂಗವನ್ನು ಪ್ರತಿಷ್ಠೆ ಮಾಡುವುದು, ಸಾಧುಸಜ್ಜನರೊಡನೆ ಮಾತನಾಡುವುದು, ಶಿವನಾಮಗಳನ್ನು ಬಾಯಿಯಲ್ಲಿ ಉಚ್ಚರಿಸುತ್ತಿರುವುದು.

೭೭. ಅತಿಥಿಗಳ ಸತ್ಕಾರ, ತೀರ್ಥದಲ್ಲಿ ವಾಸಿಸುವವರೊಡನೆ ಸ್ನೇಹವನ್ನು ಬೆಳಸುತ್ತಿರುವುದು, ಆಸ್ತಿಕ್ಯಬುದ್ಧಿ, ನಮ್ರಭಾವ, ಮಾನಾವಮಾನಗಳಲ್ಲಿ ಸಮವಾದ ಬುದ್ಧಿಯಿರುವಿಕೆ.

೭೮. ಆಶಾತ್ಯಾಗ, ಉದ್ಧತತನವನ್ನು ತ್ಯಜಿಸುವುದು, ಅನುರಾಗವಿಲ್ಲದಿರುವುದು, ಅಹಿಂಸಾಕರಣ, ದಾನಗಳನ್ನು ಪ್ರತಿಗ್ರಹಿಸದೆ ಜೀವನವನ್ನು ಸಾಗಿಸುವುದು, ಜೀವರನ್ನನುಗ್ರಹಿಸಬೇಕೆಂಬ ಸದ್ಬುದ್ಧಿ.

೭೯. ದರ್ಪವಿಲ್ಲದಿರುವುದು, ಮಾತ್ಸರ್ಯವನ್ನು ದೂರಮಾಡುವುದು, ಯಾಚನೆಯಿಲ್ಲದೆ ಲಭಿಸಿದ ಧನದಿಂದ ಸಂತೋಷಗೊಳ್ಳುವುದು, ಲೋಭವನ್ನು ಬಿಡುವುದು, ಆಲಸ್ಯರಾಹಿತ್ಯ, ಪರುಷವಾಕ್ಕುಗಳನ್ನಾಡದಿರುವುದು, ದೀನತೆಯನ್ನು ಹೊಂದದಿರುವುದು.

೮೦. ಇವೇ ಮುಂತಾದ ಒಳ್ಳೆಯ ನಡತೆಗಳನ್ನು ಕ್ಷೇತ್ರವಾಸಿಯಾದವನು ಅಭ್ಯಸಿಸುತ್ತಿರಬೇಕು. ಇಂತೆಂದು ಆ ವ್ಯಾಸಮಹರ್ಷಿಯು ಪ್ರತಿನಿತ್ಯವೂ ತಮ್ಮ ಶಿಷ್ಯರಿಗೆ ಉಪದೇಶಮಾಡುತ್ತಿರುವನು.

೮೧. ನಿತ್ಯವೂ ತ್ರಿಷವಣಸ್ನಾನಗಳನ್ನು ಮಾಡಿಕೊಂಡು ಭಿಕ್ಷಾನ್ನವನ್ನೇ ಆಹಾರವಾಗಿ ತೆಗೆದುಕೊಳ್ಳುತ್ತ, ವಿಶ್ವೇಶ್ವರಲಿಂಗದ ಪೂಜೆಯಲ್ಲಿಯೇ ನಿರತನಾಗಿ ವ್ಯಾಸಮುನಿಯು ಕಾಲವನ್ನು ಕಳೆಯುತ್ತಿರುವನು.

ದ್ವಿತ್ರಾಃ ಪವಿತ್ರಚರಣಾತ್ಪ್ರಾಪ್ಯಾನುಜ್ಞಾಂ ಗುರೋರಥ ।
ಸಮಾಚಖ್ಯುಃ ಸಮಾಗಮ್ಯ ದೃಷ್ಟ್ವರ್ದ್ಧಿಂ ತತ್ಪುರೌಕಸಾಂ ॥ ೯೫ ॥

ಶಿಷ್ಯಾ ಊಚುಃ:—

ಶೃಣ್ವಂತ್ವಾರಾಧ್ಯಚರಣಾ ನೋಪಸರ್ಗೋಽತ್ರ ಕಶ್ಚನ ।
ನಾನ್ನಕ್ಷಯೋ ವಾ ಸರ್ವಸ್ಯಾಂ ನಗರ್ಯಾಮಿಹ ಕುತ್ರಚಿತ್ ॥ ೯೬ ॥
ಯತ್ರ ವಿಶ್ವೇಶ್ವರಃ ಸಾಕ್ಷಾದ್ಯತ್ರಾಽಮರಧುನೀ ಸ್ವಯಂ ।
ತ್ವಾದೃಶಾ ಯತ್ರ ಮುನಯಃ ಕ್ವ ಭೀಸ್ತತ್ರೋಪಸರ್ಗಜಾ ॥ ೯೭ ॥
ಸಮೃದ್ಧಿರ್ಯಾ ಗೃಹಸ್ಥಾನಾಮಿಹ ವಿಶ್ವೇಶಿತುಃ ಪುರಿ ।
ನ ಸರ್ದ್ಧಿರಸ್ತಿ ವೈಕುಂಠೇ ತ್ವಲ್ಪಾಸ್ತಾ ಅಲಕಾದಯಃ ॥ ೯೮ ॥
ರತ್ನಾಕರೇಷು ರತ್ನಾನಿ ನ ತಾವಂತಿ ಮಹಾಮುನೇ ।
ಯಾವಂತಿ ಸಂತಿ ವಿಶ್ವೇಶನಿರ್ಮಾಲ್ಯೋಪಭುಜಾಂ ಗೃಹೇ ॥ ೯೯ ॥
ಗೃಹೇ ಗೃಹೇಽತ್ರ ಧಾನ್ಯಾನಾಂ ರಾಶಯೋ ಯಾದೃಶಾಃ ಪುನಃ ।
ನ ತಾದೃಶಃ ಕಲ್ಪವೃಕ್ಷದತ್ತಾ ಐಂದ್ರೇ ಪುರೇ ಕ್ವಚಿತ್ ॥ ೧೦೦ ॥

---

ಮಾತ್ರದಲ್ಲಿ ದರಿದ್ರರಾಗಿಬಿಟ್ಟರೊ? ಇವುಗಳಲ್ಲಿ ಯಾವುದು ಕಾರಣವೆಂಬುದನ್ನು ತಿಳಿದು ತ್ವರೆಯಾಗಿ ನನ್ನ ಬಳಿಗೆ ಹಿಂದಿರುಗಿರಿ.

೯೫. ಅದನ್ನು ಕೇಳಿ ಇಬ್ಬರು ಮೂವರು ಶಿಷ್ಯರು ಪೂಜ್ಯಪಾದನಾದ ಆತನ ಅನುಜ್ಞೆಯನ್ನು ಪಡೆದು ಪಟ್ಟಣವನ್ನೆಲ್ಲ ಸುತ್ತಿ ಪಟ್ಟಣಿಗರ ಸಕಲ ಸಮೃದ್ಧಿಯನ್ನು ಕಂಡು ಹಿಂದಿರುಗಿ ಬಂದು ಬಿನ್ನವಿಸಿದರು.

೯೬. ಶಿಷ್ಯರು ಹೇಳುತ್ತಾರೆ:—ಪೂಜ್ಯಪಾದರೆ! ಕೇಳಿರಿ. ಈ ಕ್ಷೇತ್ರದಲ್ಲಿ ಯಾವ ಉಪಕ್ಷಯವೂ ಸಂಭವಿಸಿಲ್ಲ. ಸಕಲ ನಗರಿಯನ್ನು ನೋಡಿದರೂ ಎಲ್ಲಿಯೂ ಅನ್ನಾಭಾವವೆಂಬುದು ಕಾಣಲಿಲ್ಲ.

೯೭. ಎಲ್ಲಿ ವಿಶ್ವೇಶ್ವರನೇ ಸಾಕ್ಷಾತ್ತಾಗಿ ನೆಲಸಿರುವನೊ, ಎಲ್ಲಿ ಗಂಗೆಯು ಪ್ರವಹಿಸುತ್ತಿರುವಳೊ, ಎಲ್ಲಿ ತಮ್ಮಂತಹ ಮುನಿವರ್ಯರು ವಾಸಮಾಡುತ್ತಿರುವರೊ, ಅಲ್ಲಿ ಅನ್ನಕ್ಷಯದ ಭಯವು ಹೇಗೆ ಉಂಟಾಗುವುದು?

೯೮. ವಿಶ್ವೇಶ್ವರನ ಈ ಪುರದಲ್ಲಿ ಗೃಹಸ್ಥರಿಗೆ ಯಾವ ಐಶ್ವರ್ಯಸಮೃದ್ಧಿಯಿರುವುದೊ, ಅಂತಹ ವೈಭವವು ವೈಕುಂಠದಲ್ಲಿಯೂ ಇರುವುದಿಲ್ಲ. ಕುಬೇರನ ಅಲಕಾನಗರಿಯೇ ಮೊದಲಾದುವುಗಳಂತೂ ಅತ್ಯಲ್ಪಗಳೆಂದೇ ತೋರುವುವು.

೯೯. ಮುನಿವರ್ಯನೆ! ವಿಶ್ವೇಶ್ವರನ ನಿರ್ಮಾಲ್ಯವನ್ನೇ ಸ್ವೀಕರಿಸುತ್ತಿರುವ ಈ ಗೃಹಸ್ಥರ ಮನೆಗಳಲ್ಲಿ ಎಷ್ಟು ನವರತ್ನಗಳ ರಾಶಿಗಳಿರುವುವೊ, ಅಷ್ಟು ರತ್ನಗಳು ರತ್ನಾಕರವೆನಿಸಿದ ಸಮುದ್ರದಲ್ಲಿಯೂ ಇರಲಾರವು.

೧೦೦. ಒಂದೊಂದು ಮನೆಯಲ್ಲಿಯೂ ಧಾನ್ಯಗಳ ರಾಶಿಗಳು ಎಷ್ಟು

ಯತ್ರ ಸಾಕ್ಷಾದ್ವಿಶಾಲಾಕ್ಷೀ ಸುವಿಸ್ತಾರಫಲಪ್ರದಾ ।
ನ ತತ್ರ ಪುರಿ ಸರ್ವಸ್ಯಾಂ ನರೋ ವೈ ನಿರ್ಧನಃ ಕ್ವಚಿತ್ ॥ ೧೦೧ ॥
ನಿರ್ವಾಣಲಕ್ಷ್ಮ್ಯಾಃ ಸದನೇ ತ್ವಸ್ಮಿನ್ನಾನಂದಕಾನನೇ ।
ಮೋಕ್ಷೋಽಪಿ ಯತ್ರ ಸುಲಭಃ ಕಿಮನ್ಯತ್ತತ್ರದುರ್ಲಭಂ ॥ ೧೦೨ ॥
ಸೀಮಂತಿನ್ಯಃ ಸ್ತ್ರಿಯಃ ಸರ್ವಾಃ ಪತಿವ್ರತಪರಾಯಣಾಃ ।
ಸರ್ವಾ ಭವಾನೀರೂಪಿಣ್ಯೋ ವಿಶ್ವೇಶಾರ್ಪಿತಸತ್ಕ್ರಿಯಾಃ ॥ ೧೦೩ ॥
ಯಾವಂತಃ ಪುರುಷಾಃ ಕಾಶ್ಯಾಂ ಸರ್ವ ಏವ ಗಣಾಧಿಪಾಃ ।
ಸರ್ವ ಏವ ಕುಮಾರಾ ವೈ ಸರ್ವೇ ತಾರಕದೃಷ್ಟಯಃ ॥ ೧೦೪ ॥
ತ್ರಿಪುಂಡ್ರಾಂಕಿತಭಾಲಾ ಯೇ ತೇ ಸರ್ವೇ ಚಂದ್ರಮೌಲಯಃ ।
ಉಪಸರ್ಗಸಹಸ್ರೈಶ್ಚ ಪೀಡ್ಯಮಾನಾ ಅಪೀಹ ಯೇ ॥ ೧೦೫ ॥
ನ ತ್ಯಜಂತಿ ಸದಾ ಕಾಶೀಂ ಸರ್ವಜ್ಞಾ ಏವ ತೇಽಖಿಲಾಃ ।
ಗೃಹೇ ಗೃಹೇಽಪಿ ಬಟವೋ ಬ್ರಹ್ಮವಾದಿವಿವಾದಿನಃ ॥ ೧೦೬ ॥

---

ಪ್ರಮಾಣವುಳ್ಳವುಗಳಾಗಿರುವುವೊ, ಅಷ್ಟು ಪ್ರಮಾಣಗಳ ರಾಶಿಗಳು ಮಹೇಂದ್ರನ ಅಮರಾವತಿಯಲ್ಲಿಯೂ ಕಲ್ಪವೃಕ್ಷಗಳಿಂದ ನಿರ್ಮಿತಗಳಾಗಲಾರವು.

೧೦೧. ಎಲ್ಲಿ ಭಗವತಿಯೇ ವಿಶಾಲಾಕ್ಷಿಯ ರೂಪದಿಂದ ಸಾಕ್ಷಾತ್ಕರಿಸಿ ಅಪಾರ ಫಲಗಳನ್ನು ಕೊಡುತ್ತಿರುವಳೊ, ಅಂತಹ ಈ ನಗರದಲ್ಲೆಲ್ಲಿನೋಡಿದರೂ ನಿರ್ಧನನಾದ ಯಾವ ಮನುಷ್ಯನನ್ನೂ ಕಾಣೆವು.

೧೦೨. ನಿರ್ವಾಣಲಕ್ಷ್ಮಿಗೆ ನಿವಾಸವೆನಿಸಿದ ಈ ಆನಂದಕಾನನದಲ್ಲಿ ಮೋಕ್ಷ ಲಾಭವು ಅತ್ಯಂತ ಸುಲಭಸಾಧ್ಯವೆಂದಮೇಲೆ ಇಲ್ಲಿ ದುರ್ಲಭವಾದುದು ಯಾವುದಿರುವುದು ?

೧೦೩. ಸಕಲಸ್ತ್ರೀಯರೂ ಇಲ್ಲಿ ಸುಮಂಗಲಿಯರಾಗಿಯೂ ಪತಿವ್ರತ ಪರಾಯಣೆಯರಾಗಿಯೂ ಇರುವರು. ಎಲ್ಲರೂ ಭವಾನೀದೇವಿಯ ರೂಪಿಣಿಯರು, ಎಲ್ಲರೂ ತಮ್ಮ ಕಾರ್ಯಗಳನ್ನು ವಿಶ್ವೇಶ್ವರನಿಗೆ ಸಮರ್ಪಿಸುತ್ತಿರುವರು.

೧೦೪. ಕಾಶಿಯಲ್ಲಿ ಎಷ್ಟು ಪುರುಷರಿರುವರೊ ಅವರೆಲ್ಲರೂ ಪರಮೇಶ್ವರನ ಗಣನಾಯಕರೇ ಆಗಿರುವರು. ಎಲ್ಲರೂ ನಿತ್ಯಯೌವನವುಳ್ಳವರೇ. ಎಲ್ಲರೂ ತಾರಕಜ್ಞಾನವನ್ನು ಪಡೆದಿರುವವರೇ !

೧೦೫–೧೦೬. ಯಾರು ತ್ರಿಪುಂಡ್ರದಿಂದಲಂಕೃತವಾದ ಫಾಲಭಾಗವುಳ್ಳವರೊ ಅವರು ಚಂದ್ರಮೌಳಿಯ ಸ್ವರೂಪರೇ. ಯಾರು ಸಾವಿರಾರು ವಿಘ್ನಗಳಿಂದ ಪ್ರತಿಹತರಾದರೂ ಸದಾಕಾಶಿಯನ್ನು ತ್ಯಜಿಸುವುದಿಲ್ಲವೊ, ಅವರೆಲ್ಲರೂ

**ಸ್ವರ್ಧುನೀಧೂತಕಲುಷಾಃ ಸಂತೀಹ ಚತುರಾನನಾಃ ।**
**ನಿರ್ವಾಣಲಕ್ಷ್ಮೀಪತಯಃ ಕ್ಷೇತ್ರಸಂನ್ಯಾಸಕಾರಿಣಃ ॥ ೧೦೭ ॥**
**ಸರ್ವ ಏವ ಹೃಷೀಕೇಶಾಃ ಸರ್ವೇ ವೈ ಪುರುಷೋತ್ತಮಾಃ ।**
**ಅಚ್ಯುತಾ ಏವ ವಿಜ್ಞೇಯಾ ಏತತ್ಕ್ಷೇತ್ರಪರಿಗ್ರಹಾಃ ॥ ೧೦೮ ॥**
**ಸ್ತ್ರಿಯೋ ವಾ ಪುರುಷೋ ವಾಪಿ ಸರ್ವ ಏವ ನ ಸಂಶಯಃ ।**
**ಸರ್ವ ಏವ ತ್ರಿನಯನಾಃ ಸರ್ವ ಏವ ಚತುರ್ಭುಜಾಃ ॥ ೧೦೯ ॥**
**ಶ್ರೀಕಂಠಾಃ ಸರ್ವ ಏವಾತ್ರ ಸರ್ವೇ ಮೃತ್ಯುಂಜಯಾ ಧ್ರುವಂ ।**
**ಮೋಕ್ಷಶ್ರೀಶ್ರಿತವಷ್ಮಾಣಸ್ತ್ವರ್ಧನಾರೀಶ್ವರಾ ಯತಃ ॥ ೧೧೦ ॥**
**ಧರ್ಮರಾಶಿಃ ಪರಶ್ಚಾತ್ರ ಮಹಾಂತೋಽತ್ರಾರ್ಥರಾಶಯಃ ।**
**ಸರ್ವೇ ಕಾಮಾಃ ಫಲಂತ್ಯತ್ರ ಕೈವಲ್ಯಂ ಚಾತಿನಿರ್ಮಲಂ ॥ ೧೧೧ ॥**
**ನ ಗರ್ಭವಾಸಸಂಸರ್ಗಃ ಕಾಶೀಸಂಸ್ಥಿತಿಕಾರಿಣಾಂ ।**
**ನ ಕಲಿಶ್ಚಾತ್ರ ಬಾಧೇತ ಕಾಲೋ ನೈವ ಪ್ರಬಾಧತೇ ॥ ೧೧೨ ॥**

---

ಸರ್ವಜ್ಞರೆಂದೇ ತಿಳಿಯಬೇಕು. ಈ ಕ್ಷೇತ್ರದಲ್ಲಿ ಒಂದೊಂದು ಮನೆಯಲ್ಲಿಯೂ ಬ್ರಹ್ಮಚಾರಿಗಳು ಬ್ರಹ್ಮಮೀಮಾಂಸೆಯಲ್ಲಿಯೇ ನಿರತರಾಗಿರುವರು.

೧೦೭. ಅವರು ಗಂಗಾಸ್ನಾನಗಳಿಂದ ನಿಷ್ಪಾಪರಾಗಿ ನಿರ್ವಾಣಲಕ್ಷ್ಮಿಗೆ ನಾಯಕರೂ ಕ್ಷೇತ್ರಸನ್ನ್ಯಾಸವನ್ನು ಮಾಡಿದವರೂ ಆಗಿರುವರಲ್ಲದೆ ಚತುರಾನನರಾಗಿ (ಬ್ರಹ್ಮದೇವನನ್ನು ಹೋಲುವವರಾಗಿ ಅಥವ ವಾಕ್ಚಾತುರ್ಯವುಳ್ಳವರಾಗಿ) ಇಲ್ಲಿ ವಾಸಮಾಡುತ್ತಿರುವರು.

೧೦೮. ಎಲ್ಲರೂ ಇಂದ್ರಿಯನಿಗ್ರಹಪರರೇ. ಎಲ್ಲರೂ ಪುರುಷಶ್ರೇಷ್ಠರೇ. ಈ ಕ್ಷೇತ್ರವನ್ನು ವಾಸಸ್ಥಳವಾಗಿ ಪರಿಗ್ರಹಿಸಿರುವವರೆಲ್ಲರನ್ನೂ ಅಚ್ಯುತಸ್ವರೂಪರೆಂದೇ ತಿಳಿದುಕೊಳ್ಳಬೇಕು.

೧೦೯. ಇಲ್ಲಿ ವಾಸಿಸುವ ಸ್ತ್ರೀಯರೇ ಆಗಲಿ ಪುರುಷರೇ ಆಗಲಿ ನಿಸ್ಸಂದೇಹವಾಗಿಯೂ ತ್ರಿಲೋಚನರೇ ಮತ್ತು ಚತುರ್ಭುಜರೇ ಆಗಿರುವರು.

೧೧೦. ಈ ಕ್ಷೇತ್ರವಾಸಿಗಳೆಲ್ಲರೂ ಶ್ರೀಕಂಠರೇ ಮತ್ತು ಮೃತ್ಯುಂಜಯರೇ ಎಂಬುವುದು ದಿಟವು. ಅಲ್ಲದೆ ಅರ್ಧನಾರೀಶ್ವರ ಸ್ವರೂಪರೇ ಆಗಿ ಮೋಕ್ಷಲಕ್ಷ್ಮಿಗೆ ಆಶ್ರಯಭೂತವಾದ ದೇಹವುಳ್ಳವರಾಗಿರುವರು.

೧೧೧. ಇಲ್ಲಿಯೇ ಸರ್ವೋತ್ಕೃಷ್ಟವಾದ ಧರ್ಮರಾಶಿಯು ಸುಲಭಸಾಧ್ಯವು. ಅಪರಿಮಿತಗಳಾದ ಧನದ ರಾಶಿಗಳೂ ಗಳಿಸಲ್ಪಡುವುವು. ಇಲ್ಲಿ ಸಕಲಾಭೀಷ್ಟಗಳೂ ಫಲವನ್ನು ಹೊಂದುವುವು. ಇಲ್ಲಿಯೇ ನಿರ್ಮಲವಾದ ಕೈವಲ್ಯವೂ ಕರತಲಗತವಾಗುವುದು.

೧೧೨. ಕಾಶಿಯಲ್ಲಿ ನೆಲಸಿರುವ ಪುಣ್ಯಾತ್ಮರಿಗೆ ಗರ್ಭವಾಸದ ಸಂಸರ್ಗ

ಏನಾಂಸಿ ನಾತ್ರ ಬಾಧಂತೇ ವಿಶ್ವೇಶಶರಣಾರ್ಥಿನಃ ॥ ೧೧೩ ॥
ಯತ್ರ ವಿಶ್ವೇಶ್ವರಃ ಸಾಕ್ಷಾನ್ನಾದಬಿಂದುಕಲಾತ್ಮಕಃ ।
ಧ್ವನಿರೂಪೀ ಹಿ ತತ್ರಾಸ್ತಿ ಪ್ರಣವೋ ಮಂತ್ರವಿಗ್ರಹಃ ॥ ೧೧೪ ॥
ಅತೋ ವಿಗ್ರಹವಂತೋಽತ್ರ ಸಂತಿ ವೇದಾ ವಿನಿಶ್ಚಿತಂ ।
ಸರಸ್ವತೀ ಸರಿದ್ರೂಪಾ ಹ್ಯತಃ ಶಾಸ್ತ್ರನಿಕೇತನಂ ॥ ೧೧೫ ॥
ಆನಂದಕಾನನಂ ಸರ್ವಂ ಧರ್ಮಶಾಸ್ತ್ರಕೃತಾಲಯಂ ।
ಯಾವಂತೋ ದಿವಿ ವೈ ದೇವಾಸ್ತಾವಂತೋಽತ್ರ ನೃಷಾ ನ ಹಿ ॥ ೧೧೬ ॥
ನೀರಾಜಯಂತಿ ವಿಶ್ವೇಶಂ ರಾತ್ರೌ ರಾತ್ರೌ ಸದಾಹಯಃ ।
ಸ್ವಫಣಾಮಣಿದೀಪೈಶ್ಚ ಪ್ರಾಪ್ಯ ಕಾಶೀಂ ರಸಾತಲಾತ್ ॥ ೧೧೭ ॥
ಸಮುದ್ರಾಃ ಸರ್ವ ಏವಾತ್ರ ಕಾಮಧೇನುವ್ರಜಾನ್ವಿತಾಃ ।
ಪಂಚಪೀಯೂಷಧಾರಾಭಿರ್ವಿಶ್ವೇಶಂ ಸ್ನಪಯಂತಿ ಹಿ ॥ ೧೧೮ ॥

---

ವುಂಟಾಗುವುದಿಲ್ಲ. ಇಲ್ಲಿ ಕಲಿಯು ತನ್ನ ಬಾಧೆಗಳನ್ನು ನಡೆಸಲಾರನು. ಕಾಲಯಮನೂ ಇಲ್ಲಿ ಜನರನ್ನು ಪೀಡಿಸಲು ಶಕ್ತನಲ್ಲ.

೧೧೩. ವಿಶ್ವೇಶ್ವರನನ್ನು ಶರಣುಹೊಂದಿದವನನ್ನು ಇಲ್ಲಿ ಯಾವ ಪಾತಕಗಳೂ ಬಾಧಿಸಲಾರವು.

೧೧೪. ನಾದಬಿಂದುಕಳಾತ್ಮಕನಾದ ವಿಶ್ವೇಶ್ವರನೇ ಎಲ್ಲಿ ಸಾಕ್ಷಾತ್ಕರಿಸಿರುತ್ತಾನೆಯೊ, ಅಲ್ಲಿಯೇ ನಾದಸ್ವರೂಪವಾದ ಪ್ರಣವವು ಮಂತ್ರವೆಂಬ ಶರೀರದಿಂದ ಕೂಡಿ ನೆಲಸಿರುವುದು.

೧೧೫. ಆದುದರಿಂದ ಸಕಲ ವೇದಗಳೂ ಇಲ್ಲಿ ಶರೀರಧಾರಿಗಳಾಗಿರುವುದು ನಿಶ್ಚಯವು. ಸಕಲ ಶಾಸ್ತ್ರಗಳ ಆವಾಸವೆನಿಸಿದ ಸರಸ್ವತಿಯೇ ಇಲ್ಲಿ ನದಿಯ ರೂಪದಿಂದ ಪ್ರವಹಿಸುತ್ತಿರುವಳು.

೧೧೬. ಈ ಆನಂದಕಾನನದ ಆದ್ಯಂತವೂ ಧರ್ಮಶಾಸ್ತ್ರದ ಆಲಯವಾಗಿ ಮಾಡಲ್ಪಟ್ಟಿರುವುದು. ಸ್ವರ್ಗಲೋಕದಲ್ಲಿ ಎಷ್ಟು ದೇವತೆಗಳಿರುವರೊ, ಅಷ್ಟು ಜನರೂ ಇಲ್ಲಿಯೇ ಇರುವರೆಂಬುದು ಎಂದಿಗೂ ಸುಳ್ಳಲ್ಲ.

೧೧೭. ಪ್ರತಿದಿವಸದ ರಾತ್ರಿಯಲ್ಲಿಯೂ ಆದಿಶೇಷನೇ ಮೊದಲಾದ ನಾಗರು ರಸಾತಲಲೋಕದಿಂದ ಕಾಶಿಗೆ ಪ್ರಾಪ್ತರಾಗಿ ತಮ್ಮ ಹೆಡೆಗಳಲ್ಲಿರುವ ರತ್ನಗಳ ದೀಪಗಳಿಂದ ವಿಶ್ವೇಶ್ವರನಿಗೆ ನೀರಾಜನಗಳನ್ನು ಬೆಳಗುತ್ತಿರುವರು.

೧೧೮. ಸಕಲ ಸಮುದ್ರಗಳೂ ಕಾಮಧೇನು ಸಮೂಹದೊಡನೆ ಕೂಡಿದವುಗಳಾಗಿ ಇಲ್ಲಿ ಸನ್ನಿಹಿತಗಳಾಗಿರುವುವು. ಪಂಚಾಮೃತಗಳ ಧಾರೆಗಳಿಂದ ವಿಶ್ವೇಶ್ವರನಿಗೆ ಅಭಿಷೇಕಗಳನ್ನು ಮಾಡುತ್ತಿರುವುವು.

ಮಂದಾರಃ ಪಾರಿಜಾತಶ್ಚ ಸಂತಾನೋ ಹರಿಚಂದನಃ ।
ಕಲ್ಪದ್ರುಮಶ್ಚ ಪಂಚೈತೇ ತರುಭಿಃ ಸಹ ಸರ್ವದಾ ॥ ೧೧೯ ॥
ಸರ್ವೇ ಸುರನಿಕಾಯಾಶ್ಚ ಸರ್ವ ಏವ ಮಹರ್ಷಯಃ ।
ಯೋಗಿನಃ ಸರ್ವ ಏವಾತ್ರ ಕಾಶೀನಾಥಮುಪಾಸತೇ ॥ ೧೨೦ ॥
ವಿದ್ಯಾನಾಂ ಸದನಂ ಕಾಶೀ ಕಾಶೀ ಲಕ್ಷ್ಮ್ಯಾಃ ಪರಾಲಯಃ ।
ಮುಕ್ತಿಕ್ಷೇತ್ರಮಿದಂ ಕಾಶೀ ಕಾಶೀ ಸರ್ವಾ ತ್ರಯೀಮಯೀ ॥ ೧೨೧ ॥
ಇತಿ ಶ್ರುತ್ವಾ ಮುನಿವರಃ ಪಾರಾಶರ್ಯೋ ಮಹಾತಪಾಃ ।
ಏವಂ ಬಭಾಷೇ ತಾಂಚ್ಛಿಷ್ಯಾನ್ಪುನಃ ಶ್ಲೋಕಂ ಪಠಂತ್ವಮುಂ ॥ ೧೨೨ ॥

ಶಿಷ್ಯಾ ಊಚುಃ:—

ವಿದ್ಯಾನಾಂ ಚಾಶ್ರಯಃ ಕಾಶೀ ಕಾಶೀ ಲಕ್ಷ್ಮ್ಯಾಃ ಪರಾಲಯಃ ।
ಮುಕ್ತಿಕ್ಷೇತ್ರಮಿದಂ ಕಾಶೀ ಕಾಶೀ ಸರ್ವಾ ತ್ರಯೀಮಯೀ ॥ ೧೨೩ ॥

ಸ್ಕಂದ ಉವಾಚ:—

ನಿಶಮ್ಯೇತಿ ತದಾ ವ್ಯಾಸಃ ಕ್ರೋಧಾಂಧೀಕೃತಲೋಚನಃ ।
ಕ್ಷುತ್ತೃಶಾನುಜ್ವಲನ್ಮೂರ್ತಿಃ ಕಾಶೀಂ ಶಪ್ಸ್ಯತಿ ಕುಂಭಜ ॥ ೧೨೪ ॥

---

೧೧೯. ಮಂದಾರ, ಪಾರಿಜಾತ, ಸಂತಾನ, ಹರಿಚಂದನ ಮತ್ತು ಕಲ್ಪವೃಕ್ಷಗಳೆಂಬ ದೇವವೃಕ್ಷಗಳೂ ಯಾವಾಗಲೂ ಇತರ ಮಹಾವೃಕ್ಷಗಳೊಡನೆ ಇಲ್ಲಿ ಬಂದು ನೆಲಸಿರುವುವು.

೧೨೦. ಸಮಸ್ತದೇವತೆಗಳ ಸಮೂಹಗಳೂ, ಸಕಲರಾದ ಮಹರ್ಷಿಗಳೂ, ಸಕಲಯೋಗಿವರ್ಯರೂ ಇಲ್ಲಿಯೇ ಆವಾಸವನ್ನು ಮಾಡಿಕೊಂಡು ಕಾಶೀಶ್ವರನನ್ನು ಉಪಾಸಿಸುತ್ತಿರುವರು.

೧೨೧. ಈ ಕಾಶಿಯು ಸಕಲ ವಿದ್ಯೆಗಳ ನಿವಾಸವು. ಕಾಶಿಯೇ ಮಹಾಲಕ್ಷ್ಮಿಗೆ ಉತ್ತಮಾಲಯವು. ಇದೇ ಮುಕ್ತಿಕ್ಷೇತ್ರವೆಂದು ಪ್ರಸಿದ್ಧವಾಗಿರುವುದು. ಈ ಕ್ಷೇತ್ರದ ಆದ್ಯಂತ ಪ್ರದೇಶವೂ ವೇದಮಯವೇ ಆಗಿರುವುದು.''

೧೨೨. ಇಂತೆಂದ ತನ್ನ ಶಿಷ್ಯರ ಮಾತುಗಳನ್ನು ಕೇಳಿ ಮಹಾತಪಸ್ವಿಯಾದ ವ್ಯಾಸಮಹರ್ಷಿಯು ತನ್ನ ಶಿಷ್ಯರನ್ನು ಕುರಿತು ''ಪುನಃ ಆ ಕಡೆಯ ಶ್ಲೋಕವನ್ನು ಹೇಳಿರಿ'' ಎಂದು ಆಜ್ಞಾಪಿಸುವನು.

೧೨೩. ಶಿಷ್ಯರು ಹೇಳುತ್ತಾರೆ:—ಕಾಶಿಯು ಸಕಲ ವಿದ್ಯೆಗಳಿಗೆ ಆಶ್ರಯಸ್ಥಾನವು. ಕಾಶಿಯು ಲಕ್ಷ್ಮಿಗೆ ಸರ್ವೋತ್ತಮವಾದ ಆಲಯವು. ಈ ಕಾಶಿಯೇ ಮುಕ್ತಿಕ್ಷೇತ್ರವು. ಕಾಶಿಯೆಂಬ ಸಮಸ್ತಕ್ಷೇತ್ರವೂ ವೇದಮಯವೇ ಆಗಿರುವುದು.

೧೨೪. ಸ್ಕಂದನು ಹೇಳುತ್ತಾನೆ:—ಎಲೈ ಕುಂಭಸಂಭವನೆ! ಶಿಷ್ಯರಾಡುವ ಈ ಮಾತುಗಳನ್ನು ಕೇಳಿ ವ್ಯಾಸನು ಕೋಪದಿಂದ ಕಣ್ಣುಕಾಣದವನಾಗಿ ಹಸಿ

ವ್ಯಾಸ ಉವಾಚ:—
ಮಾಭೂತ್ತ್ರೈಪುರುಷೀ ವಿದ್ಯಾ ಮಾಭೂತ್ತ್ರೈಪುರುಷಂ ಧನಂ ।
ಮಾಭೂತ್ತ್ರೈಪುರುಷೀ ಮುಕ್ತಿಃ ಕಾಶೀಂ ವ್ಯಾಸಃ ಶಪನ್ನಿತಿ ॥ ೧೨೫ ॥
ಗರ್ವಃ ಪರೋಽತ್ರ ವಿದ್ಯಾನಾಂ ಧನಗರ್ವೋಽತ್ರ ವೈ ಮಹಾನ್ ।
ಮುಕ್ತಿಗರ್ವೇಣ ನೋ ಭಿಕ್ಷಾಂ ಪ್ರಯಚ್ಛಂತ್ಯತ್ರ ವಾಸಿನಃ ॥ ೧೨೬ ॥
ಇತಿ ಕೃತ್ವಾ ಮತಿಂ ವ್ಯಾಸಃ ಕಾಶ್ಯಾಂ ಶಾಪಮುದಾತ್ತದಾ ।
ದತ್ವಾಪಿ ಶಾಪಂ ಸಮುನಿರ್ಭಿಕ್ಷಿತುಂ ಕ್ರೋಧವಾನ್ಯಯೌ ॥ ೧೨೭ ॥
ಪ್ರತಿಗೇಹಂ ತ್ವರಾಯುಕ್ತಃ ಪ್ರವಿಶನ್ವ್ಯೋಮದತ್ತದೃಕ್ ।
ಬಭ್ರಾಮ ನಗರೀಂ ಸರ್ವಾಂ ಕ್ವಾಪಿ ಭೈಕ್ಷ್ಯಂ ನ ಲಬ್ಧವಾನ್ ॥ ೧೨೮ ॥
ಅಂಶುಮಾಲಿನಮಾವೀಕ್ಷ್ಯ ಮನಾಗ್ಲೋಹಿತಮಂಡಲಂ ।
ಭಿಕ್ಷಾಪಾತ್ರಂ ಪರಿಕ್ಷಿಪ್ಯ ನಿರ್ಯಯಾವಾಶ್ರಮಂ ಪ್ರತಿ ॥ ೧೨೯ ॥
ಅಥ ಗಚ್ಛನ್ಮಹಾದೇವ್ಯಾ ಗೃಹದ್ವಾರಿ ನಿಷಣ್ಣಯಾ ।
ಪ್ರಾಕೃತಸ್ತ್ರೀಸ್ವರೂಪಿಣ್ಯಾ ಭಿಕ್ಷಾಯೈ ಪ್ರಾರ್ಥಿತೋಽತಿಥಿಃ ॥ ೧೩೦ ॥

---

ವೆಂಬ ಬೆಂಕಿಯಿಂದ ಜ್ವಲಿಸುತ್ತಿರುವಂತೆ ದೇಹಕಾಂತಿಯಿಂದೊಡಗೂಡಿ ಕಾಶೀ ಕ್ಷೇತ್ರವನ್ನು ಕುರಿತು ಶಾಪವನ್ನು ಕೊಡುವನು.

೧೨೫. ವ್ಯಾಸನು ಹೇಳುತ್ತಾನೆ:—"ತ್ರಿಪುರುಷರಿಗೆ ಸಂಬಂಧಿಸಿದ ವಿದ್ಯೆಯೇ ಆಗಲಿ, ಧನವೇ ಆಗಲಿ, ಅವರ ಮೂಲಕವಾಗಿ ಮೋಕ್ಷವೇ ಆಗಲಿ ಈ ಕಾಶಿಯಲ್ಲಿ ಲಭಿಸದಿರಲಿ" ಎಂಬುದಾಗಿ ವ್ಯಾಸನು ಶಾಪವನ್ನೀಯುವನು.

೧೨೬. "ಇಲ್ಲಿರುವವರಿಗೆ ವಿದ್ಯೆಯ ಗರ್ವವು ಅಧಿಕವಾಗಿರುವುದು. ಐಶ್ವರ್ಯದ ಮದವು ಮಹತ್ತರವಾಗಿರುವುದು. ಇಲ್ಲಿರುವ ಜನರು ಮೋಕ್ಷವು ಸಿಕ್ಕುವುದೆಂಬ ಹೆಮ್ಮೆಯಿಂದ ಅತಿಥಿಗಳಿಗೆ ಭಿಕ್ಷೆಯನ್ನೂ ಕೊಡುವುದಿಲ್ಲ."

೧೨೭. ಇಂತೆಂಬ ಬುದ್ಧಿಯಿಂದ ಕೂಡಿದವನಾಗಿ ವ್ಯಾಸನು ಶಾಪವನ್ನು ಕಾಶಿಯಲ್ಲಿ ಕೊಟ್ಟು ಹೋದನು. ಮತ್ತು ಆ ಕ್ರೋಧದ ವೇಗದಲ್ಲಿಯೇ ಪುನಃ ಭಿಕ್ಷೆಯನ್ನು ಯಾಚಿಸಲು ಹೊರಟನು.

೧೨೮. ಆಕಾಶದಲ್ಲಿ ನೆಟ್ಟ ದೃಷ್ಟಿಯುಳ್ಳವನಾಗಿ ತ್ವರೆಯಿಂದ ಪ್ರತಿಯೊಂದು ಮನೆಯನ್ನು ಪ್ರವೇಶಿಸಿದರೂ, ಊರನ್ನೆಲ್ಲ ಸುತ್ತಿಬಂದರೂ ಎಲ್ಲಿಯೂ ಭಿಕ್ಷೆಯನ್ನು ಮಾತ್ರ ಹೊಂದಲಿಲ್ಲ.

೧೨೯. ಬಳಿಕ ಸಾಯಂಸಮಯವಾಗಲು ಸೂರ್ಯನು ಸ್ವಲ್ಪ ಕೆಂಪು ಬಣ್ಣವುಳ್ಳವನಾದುದನ್ನು ಕಂಡು ವ್ಯಾಸನು ಕೋಪದಿಂದ ತನ್ನ ಭಿಕ್ಷಾಪಾತ್ರೆಯನ್ನು ಬಿಸುಟು ಆಶ್ರಮವನ್ನು ಕುರಿತು ಹಿಂದಿರುಗಿದನು.

೧೩೦. ಬರುತ್ತ ದಾರಿಯಲ್ಲಿ ಪ್ರಾಕೃತಸ್ತ್ರೀಯ ಳರೂಪವನ್ನು ತಾಳಿ ಮಹಾ

ಗೃಹಿಣ್ಯುವಾಚ :—

ಭಗವನ್ಭಿಕ್ಷುಕಾಸ್ತಾವದದ್ಯ ದೃಷ್ಟಾ ನ ಕುತ್ರಚಿತ್ ।
ಅಸತ್ಕೃತ್ಯಾತಿಥಿಂ ನಾಥೋ ನ ಮೇ ಭೋಕ್ಷ್ಯತಿ ಕರ್ಹಿಚಿತ್ ॥ ೧೩೧ ॥
ವೈಶ್ವದೇವಾದಿಕಂ ಕರ್ಮ ಕೃತ್ವಾ ಗೃಹಪತಿರ್ಮಮ ।
ಪ್ರತೀಕ್ಷೇತಾತಿಥಿಪಥಂ ತಸ್ಮಾತ್ತ್ವಮತಿಥಿರ್ಭವ ॥ ೧೩೨ ॥
ವಿನಾತಿಥಿಂ ಗೃಹಸ್ಥೋ ಯಸ್ತ್ವನ್ನಮೇಕೋ ನಿಷೇವತೇ ।
ನಿಷೇವತೇಽಘಂ ಸ ಪರಂ ಸಹಿತಃ ಸ್ವಪಿತಾಮಹೈಃ ॥ ೧೩೩ ॥
ತಸ್ಮಾತ್ತ್ವರಿತಮಾಯಾಹಿ ಕುರು ಮೇ ಪತ್ಯುರೀಹಿತಂ ।
ಗಾರ್ಹಸ್ಥ್ಯಂ ಸಫಲಂ ಕರ್ತುಮಿಚ್ಛತೋಽತಿಥಿಪೂಜನಾತ್ ॥ ೧೩೪ ॥
ಇತಿ ಶ್ರುತ್ವಾ ಗತಾಮರ್ಷೋ ವ್ಯಾಸಸ್ತಾಮಾಹ ವಿಸ್ಮಿತಃ ।

ವ್ಯಾಸ ಉವಾಚ :—

ಭದ್ರೇ ಕಾತ್ವಂ ಕುತಃ ಪ್ರಾಪ್ತಾ ಪೂರ್ವಂ ದೃಷ್ಟಾ ನ ಕುತ್ರಚಿತ್ ॥೧೩೫॥

---

ದೇವಿಯ ಮಂದಿರದ ಬಾಗಿಲಲ್ಲಿ ಕುಳಿತಿದ್ದ ಮಹಾದೇವಿಯನ್ನು ಕಂಡನು. ಆಕೆಯೂ ಆತನನ್ನು ಭಿಕ್ಷೆಗೆ ದಯಮಾಡಿಸಬೇಕೆಂದು ಪ್ರಾರ್ಥಿಸಿದಳು.

೧೩೧. ಗೃಹಿಣಿಯು ಹೇಳುತ್ತಾಳೆ:—"ಸ್ವಾಮಿಯೆ! ಇಂದು ಎಲ್ಲಿಯೂ ಇಲ್ಲಿಯವರೆಗೂ ಒಬ್ಬ ಭಿಕ್ಷುಕನಾದರೂ ನನಗೆ ಕಾಣಲಿಲ್ಲ. ಒಬ್ಬ ಅತಿಥಿಗಾದರೂ ಸತ್ಕಾರವನ್ನು ಮಾಡದೆ ನನ್ನ ನಾಥನು ಎಂದೂ ಊಟವನ್ನು ಮಾಡುವುದಿಲ್ಲ.

೧೩೨. ನನ್ನ ಮನೆಯ ಯಜಮಾನನು ತನ್ನ ವೈಶ್ವದೇವಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಅತಿಥಿಯ ಮಾರ್ಗವನ್ನೇ ನಿರೀಕ್ಷಿಸುತ್ತಿರುವನು. ಆದುದರಿಂದ ನೀನು ಇಂದು ನಮ್ಮ ಮನೆಗೆ ಅತಿಥಿಯಾಗು.

೧೩೩. ಯಾವ ಗೃಹಸ್ಥನು ಅತಿಥಿಯನ್ನು ಸಂತೋಷಪಡಿಸದೆ ಒಬ್ಬನೇ ಅನ್ನವನ್ನು ಸೇವಿಸುವನೊ, ಅವನು ತನ್ನ ಪಿತೃಗಳೊಡನೆ ಮಹತ್ತರವಾದ ಪಾಪವನ್ನೇ ಗಳಿಸುತ್ತಿರುವನು.

೧೩೪. ಆದುದರಿಂದ ಅತಿಥಿಯನ್ನು ಪೂಜಿಸಿ ತನ್ನ ಗಾರ್ಹಸ್ಥ್ಯಧರ್ಮವನ್ನು ಸಫಲಗೊಳಿಸಲೆಳಸುವ ನನ್ನ ಸ್ವಾಮಿಯ ಮನೋಭೀಷ್ಟವನ್ನು ಪೂರ್ಣಗೊಳಿಸು. ನಮ್ಮ ಮನೆಗೆ ಬೇಗ ಬಾ."

೧೩೫. ಈ ಮಾತುಗಳನ್ನು ಕೇಳಿ ತನ್ನ ಕೋಪವನ್ನೆಲ್ಲ ಕಳೆದುಕೊಂಡು ಶಾಂತನಾಗಿದ್ದ ವ್ಯಾಸನು ಆಕೆಯನ್ನು ಕುರಿತು ವಿಸ್ಮಯಭರಿತನಾಗಿ ಹೇಳತೊಡಗಿದನು. ವ್ಯಾಸನು ಹೇಳುತ್ತಾನೆ:—"ಎಲೌ ಮಂಗಳಾಂಗಿಯೆ! ನೀನು ಯಾರು? ಎಲ್ಲಿಂದ ಬಂದಿರುವೆ? ಹಿಂದೆ ಎಲ್ಲಿಯೂ ನಿನ್ನನ್ನು ನೋಡಿದ ಜ್ಞಾಪಕವಿಲ್ಲ.

ಮನ್ಯೇ ಧರ್ಮಮಯೀ ಮೂರ್ತಿಃ ಕಾಪಿ ತ್ವಂ ಶುಚಿಮಾನಸಾ ।
ತ್ವದ್ದರ್ಶನಾತ್ಪರಾಂ ಪ್ರೀತಿಂ ಸಂಪ್ರಾಪ್ತಾನೀಂದ್ರಿಯಾಣಿ ಮೇ ॥ ೧೩೬ ॥
ತ್ವಂ ಸುಧೈವ ಭವೇಃ ಪ್ರಾಯಃ ಸರ್ವಾವಯವಸುಂದರಿ ।
ಮಂದರಾಘಾತಸಂತ್ರಾಸಾತ್ತ್ಯಕ್ತ್ವಕ್ಷೀರಾರ್ಣವಸ್ಥಿತಿಃ ॥ ೧೩೭ ॥
ಕಲಾ ಸುಧಾಕರಸ್ಯಾಥ ಕುಹೂ ರಾಹುಭಯಾರ್ದಿತಾ ।
ಸೀಮಂತಿನೀಸ್ವರೂಪೇಣ ತಿಷ್ಠೇ ಕಾಶ್ಯಾಮನಿರ್ಭಯಾ ॥ ೧೩೮ ॥
ಅಥವಾ ಕಮಲಾಸಿ ತ್ವಂ ವಿಹಾಯ ಕಮಲಾಲಯಂ ।
ನಿಶಿ ಸಂಕೋಚಿತಂ ಕಾಶ್ಯಾಂ ವಿಕಾಶಿನ್ಯಾಂ ವಸೇಃ ಸದಾ ॥ ೧೩೯ ॥
ಕಿಂ ವಾ ನು ಕರುಣಾಮೂರ್ತಿರಿಹ ಕಾಶಿನಿವಾಸಿನಾಂ ।
ಸರ್ವದುಃಖೌಘಹರಿಣೀ ಪರಾನಂದಪ್ರದಾಯಿನೀ ॥ ೧೪೦ ॥
ವಾರಾಣಸ್ಯಾಃ ಕಿಮಥವಾಽಧಿಷ್ಠಾತ್ರೀ ದೇವತಾ ತ್ವಮು ।
ಕಿಂ ವಾ ನಿರ್ವಾಣಲಕ್ಷ್ಮೀಸ್ತ್ವಂ ಯಾ ಕಾಶ್ಯಾಂ ಪರಿಗೀಯತೇ ॥ ೧೪೧ ॥

---

೧೩೬. ಶುದ್ಧಬುದ್ಧಿಯುಳ್ಳವಳಾದ ನೀನು ಕೇವಲ ಧರ್ಮಮಯವಾದ ದೇಹವನ್ನು ತಳೆದ ಯಾವಳೋ ದೇವತೆಯೆಂದು ತಿಳಿಯುವೆನು. ನಿನ್ನನ್ನು ನೋಡಿದುದರಿಂದ ನನ್ನ ಸಕಲೇಂದ್ರಿಯಗಳೂ ನಿರತಿಶಯವಾದ ಆನಂದವನ್ನು ಹೊಂದುತ್ತಿರುವುವು.

೧೩೭–೧೩೮. ಸರ್ವಾಂಗಸುಂದರಿಯಾದ ನೀನು ದೇವತೆಗಳ ಅಮೃತವೇ ಆಗಿರಬಹುದೇನು? ಮಂದರಪರ್ವತದ ಮಂಥನದ ಭಯದಿಂದ ಕ್ಷೀರಸಮುದ್ರವನ್ನು ತ್ಯಜಿಸಿ ಇಲ್ಲಿಗೆ ಬಂದಿರುವೆಯಾ? ಅಥವಾ ರಾಹುಕೇತುಗಳ ಭಯದಿಂದ ಕೂಡಿದ ಚಂದ್ರಕಲೆಯೋ ಭೂಲೋಕಕ್ಕೆ ಬಂದು ಸ್ತ್ರೀರೂಪವನ್ನು ಧರಿಸಿ ಕಾಶಿಯಲ್ಲಿ ನಿರ್ಭಯಳಾಗಿ ಸಂಚರಿಸುತ್ತಿರುವೆಯಾ?

೧೩೯. ಅಲ್ಲದೆ ನೀನು ಮಹಾಲಕ್ಷ್ಮಿಯೇ ಆಗಿರಬಹುದು. ರಾತ್ರಿಯ ಕಾಲದಲ್ಲಿ ಸಂಕೋಚವನ್ನು ಹೊಂದುವ ಕಮಲದ ನೆಲೆಯನ್ನುಳಿದು ನಿರಂತರವೂ ಗುಣ ವಿಕಾಸಗಳಿಂದ ಕೂಡಿರುವ ಕಾಶಿಯನ್ನೇ ಶಾಶ್ವತಾವಾಸವನ್ನಾಗಿ ಮಾಡಿಕೊಂಡಿರಬಹುದು.

೧೪೦. ಅಲ್ಲದಿದ್ದರೆ ನೀನು ಕಾಶೀನಿವಾಸಿಗಳಿಗೆಲ್ಲರಿಗೂ ಸಮಸ್ತದುಃಖ ಸಮೂಹಗಳನ್ನು ಕಳೆಯುವವಳೂ, ಸರ್ವೋತ್ತಮವಾದ ಆನಂದವನ್ನು ಕೊಡುವವಳೂ ಆದ ಕರುಣಾಮೂರ್ತಿಯೇ ಇಲ್ಲಿ ಪ್ರಸನ್ನಳಾಗಿರುವೆಯಾ?

೧೪೧. ಅಥವಾ ನೀನೇನಾದರೂ ವಾರಾಣಸೀಕ್ಷೇತ್ರದ ಅಧಿಷ್ಠಾನ ದೇವತೆಯೊ? ಕಾಶೀಕ್ಷೇತ್ರಮಾಹಾತ್ಮ್ಯೆಯ ಕಥೆಗಳಲ್ಲಿ ಬಹುವಿಧವಾಗಿ ಗಾನ ಮಾಡಲ್ಪಟ್ಟಿರುವ ಮೋಕ್ಷಲಕ್ಷ್ಮಿಯೇ ನೀನು.

ಶ್ವಸಾಕಂ ಯಾಯಜೂಕಂ ವಾ ಪ್ರಾಂತೇಽಲಂಕುರ್ವತೀ ಸಮಂ ।
ಮದ್ಭಾಗ್ಯಂ ವಾ ಪರಿಣತಮೇತದ್ಯೋಷಿತ್ಸ್ವರೂಪನಃ ॥ ೧೪೨ ॥
ಅಥವಾ ಸಾ ಭವೇನ್ನೂನಂ ಯಾ ಕ್ಷೇತ್ರೇ ಪರಿಗೀಯತೇ ।
ಭಕ್ತಪ್ರೋತಪ್ರದಾ ಭಕ್ತ್ಯಾ ಭವಾನೀ ಭವನಾಶಿನೀ ॥ ೧೪೩ ॥
ಸರ್ವಥೈವ ನ ನಾರೀ ತ್ವಂ ನಾಸುರೀ ನೈವ ಕಿನ್ನರೀ ।
ವಿದ್ಯಾಧರೀ ನ ನೋ ನಾಗೀ ನೋ ಗಂಧರ್ವೀ ನ ಯಕ್ಷಿಣೀ ॥ ೧೪೪ ॥
ತ್ವಮಿಷ್ಟದೇವತೈವಾಸಿ ಕಾಚಿನ್ಮೇ ಮೋಹಹಾರಿಣೀ ।
ಕೇಯಂ ಚಿಂತಾಽಥವಾ ಮೇಽತ್ರ ಕಾಚಿತ್ತ್ವಂ ಭವ ಸುಂದರಿ ॥ ೧೪೫ ॥
ಪರವಾನಸ್ಮ್ಯಹಂ ಜಾತಸ್ತವ ದರ್ಶನತೋಽಧುನಾ ।
ಅವಶ್ಯಮೇವ ಕರ್ತಾಸ್ಮಿ ತವಾದೇಶ್ಯಂ ತದಾದಿಶ ॥ ೧೪೬ ॥
ಏಕಂ ತಪೋವ್ಯಯಂ ಹಿತ್ವಾ ಕಾರಯಿಷ್ಯಸಿ ಯತ್ಪುನಃ ।
ತದೇವಾಹಂ ಕರಿಷ್ಯಾಮಿ ವಿಧೇಯಃ ಶುಭಲೋಚನೇ ॥ ೧೪೭ ॥

---

೧೪೨. ಚಂಡಾಲನನ್ನೂ, ಸೋಮಯಾಜಿಯನ್ನೂ ಸಮಬುದ್ಧಿಯಿಂದ ತೃಪ್ತಿಗೊಳಿಸುತ್ತಿರುವ ನೀನು ಹೆಂಗುಸಿನ ಆಕಾರವನ್ನು ತಳೆದುಬಂದ ನನ್ನ ಭಾಗ್ಯದೇವತೆಯೆಂದೇ ತಿಳಿಯುವೆನು.

೧೪೩. ಅಥವಾ ಭಕ್ತಿಯಿಂದ ಭಜಿಸುವವರಿಗೆ ಸಂಸಾರದಲ್ಲಿ ಹರಿಗೋಲಾಗಿ ಇಲ್ಲಿ ನೆಲಸಿರುವ ಭವನಾಶಿನಿಯಾದವಳೂ ಕ್ಷೇತ್ರ ಪುರಾಣಗಳಲ್ಲಿ ಸ್ತುತಿಸಲ್ಪಟ್ಟವಳೂ ಆದ ಭವಾನಿಯೇ ನೀನಾಗಿರುವೆಯೊ!

೧೪೪. ಹೇಗಾದರೂ ನೀನು ಖಂಡಿತವಾಗಿಯೂ ಮನುಷ್ಯಸ್ತ್ರೀಯಲ್ಲ. ರಾಕ್ಷಸಿಯೂ, ಕಿನ್ನರಿಯೂ, ವಿದ್ಯಾಧರಿಯೂ, ನಾಗಕನ್ಯೆಯೂ, ಗಂಧರ್ವಸ್ತ್ರೀಯೂ, ಯಕ್ಷಿಣಿಯೂ ಅಲ್ಲವೇ ಅಲ್ಲ.

೧೪೫. ನಿಜವಾಗಿಯೂ ನನ್ನ ಮನಸ್ಸಿನ ಮೋಹವನ್ನು ಕಳೆಯಲು ಬಂದ ಇಷ್ಟದೇವತೆಯೇ ಆಗಿರಬಹುದು. ಎಲೌ ಸುಂದರಿಯೆ! ಈ ನನ್ನ ಚಿಂತೆಯಿಂದ ನನಗಾಗಬೇಕಾದುದೇನು? ನೀನು ಯಾರಾಗಿದ್ದರೂ ಆಗಿರಲೊಲ್ಲೆಯೇಕೆ?

೧೪೬. ಈಗ ನಿನ್ನನ್ನು ನೋಡಿದುದರಿಂದ ನಾನು ನಿನಗೆ ಪರವಶನಾಗಿರುವೆನು. ಆದುದರಿಂದ ನೀನು ಹೇಳಿದಂತೆ ಅವಶ್ಯಕವಾಗಿಯೂ ನಡೆದುಕೊಳ್ಳುವೆನು. ನಾನು ಮಾಡಬೇಕಾದುದನ್ನು ನಿರೂಪಿಸು.

೧೪೭. ವಿಶಾಲನೇತ್ರೆಯೆ! ನನ್ನ ತಪಸ್ಸಿನ ವ್ಯಯವೊಂದನ್ನುಳಿದು ನೀನು ಯಾವ ಕೆಲಸವನ್ನು ಮಾಡಿಸುವೆಯಾದರೂ, ನಿನಗೆ ವಿಧೇಯನಾಗಿ ಅದನ್ನು ಸಾಂಗವಾಗಿ ನೆರವೇರಿಸುವೆನು.

ನ ವಚಸ್ತ್ವಾದೃಶೀನಾಂ ಹಿ ಮಹತ್ವಂ ಹಾಪಯೇತ್ಸತಾಂ ।
ಪರಂ ತ್ವಂ ಕಾಸಿ ಸುಭಗೇ ಸತ್ಯಂ ಬ್ರೂಹಿ ಮಮಾಗ್ರತಃ ॥ ೧೪೮ ॥
ಅಥವಾ ತವ ದೇಹೇಽಸ್ಮಿನ್ಕ್ವಾಸತ್ಯಂ ನಿರ್ಮಲೇಕ್ಷಣೇ ।
ಇತಿ ಪೃಷ್ಟ್ವಾಹ ಮುನಿನಾ ಸಾ ವಿಶ್ವಾಯುರ್ಘಟೋದ್ಭವ ॥ ೧೪೯ ॥
ಅತ್ರೈತ್ಯೈವ ಹಿ ಮುನೇ ಗೃಹಿಣೀ ಗೃಹಮೇಧಿನಃ ।
ನಿತ್ಯಂ ವೀಕ್ಷೇ ಚರಂತಂ ತ್ವಾಂ ಭಿಕ್ಷಾಂ ಶಿಷ್ಯಗಣೈರ್ವೃತಂ ॥ ೧೫೦ ॥
ತ್ವಮೇವ ಮಾಂ ನೋ ಜಾನೀಷೇ ಜಾನೇ ತ್ವಾಮಹಮೇವ ಹಿ ।
ತಪಸ್ವಿನ್ಕಿಂ ಬಹೂಕ್ತೇನ ಯಾವನ್ನಾಸ್ತಂ ಭವೇದ್ರವಿಃ ॥ ೧೫೧ ॥
ಪ್ರಾಣನಾಥಸ್ಯ ಮೇ ತಾವದಾತಿಥ್ಯಂ ಸಫಲೀಕುರು ।
ತಚ್ಛ್ರುತ್ವಾ ಸ ಮುನಿಃ ಪ್ರಾಹ ವಿನಯಾನತಕಂಧರಃ ॥ ೧೫೨ ॥

ವ್ಯಾಸ ಉವಾಚ :—

ಅಸ್ತಿ ಮೇ ನಿಯಮಃ ಕಶ್ಚಿತ್ಸ ಸಿದ್ಧಿಂಚೇದ್ವ್ರಜೇಚ್ಛುಭೇ ।
ಏಕಭಿಕ್ಷಾಂ ತದಾಹಂ ತು ಕರಿಷ್ಯೇ ನಾನ್ಯಥಾ ಪುನಃ ॥ ೧೫೩ ॥

---

೧೪೮. ನಿನ್ನಂತಹರ ಮಾತುಗಳು ಸತ್ಪುರುಷರ ಮಹತ್ತ್ವಕ್ಕೆ ಹಾನಿಯನ್ನು ತರುವಂತಹವುಗಳಾಗಲಾರವು. ಎಲೌ ಸುಭಗೆಯೆ! ಆದರೆ ನೀನು ಯಾರೆಂಬುದನ್ನು ಯಥಾರ್ಥವಾಗಿ ನನ್ನ ಮುಂದೆ ಹೇಳುವವಳಾಗು.

೧೪೯. ಓ ವಿಶಾಲನೇತ್ರೆಯೆ! ನಿನ್ನ ಈ ಶರೀರದಲ್ಲಿ ಅಸತ್ಯವೆಲ್ಲಿಯದು?" ಎಲೈ ಕುಂಭಸಂಭವನೆ! ಇಂತೆಂದ ಆ ಮುನಿಯನ್ನು ಕಂಡು ಲೋಕಜೀವನಕ್ಕೆ ಏಕಾಧಾರಳಾದ ಆ ದೇವಿಯು ಹೇಳಿದಳು.

೧೫೦. "ಮುನಿವರ್ಯನೆ! ನಾನು ಇಲ್ಲಿಯೇ ವಾಸಮಾಡುತ್ತಿರುವ ಗೃಹಸ್ಥಾಶ್ರಮಿಯೊಬ್ಬನ ಗೃಹಿಣಿಯಾಗಿರುವೆನು. ಶಿಷ್ಯ ಸಮೂಹದೊಡನೆ ಭಿಕ್ಷೆಗಾಗಿ ಸಂಚರಿಸುತ್ತಿರುವ ನಿನ್ನನ್ನು ನಿತ್ಯವೂ ನೋಡುತ್ತಿರುವೆನು.

೧೫೧–೧೫೨. ನೀನೇ ನನ್ನನ್ನು ತಿಳಿಯದಿರುವೆ. ನಾನು ಮಾತ್ರ ನಿನ್ನನ್ನು ಚೆನ್ನಾಗಿ ಬಲ್ಲೆನು. ಅಯ್ಯಾ ತಪೋನಿಷ್ಠನೆ! ಬಹಳ ಮಾತುಗಳಿಂದೇನು? ಸೂರ್ಯನು ಅಸ್ತಂಗತನಾಗುವುದಕ್ಕೆ ಮುಂಚೆಯೇ ನನ್ನ ಪತಿದೇವನ ಆತಿಥ್ಯವನ್ನು ಸ್ವೀಕರಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡು." ಈ ನುಡಿಯನ್ನು ಕೇಳಿ ಆ ವ್ಯಾಸ ಮುನಿಯು ವಿನಯದಿಂದ ತಲೆಯನ್ನು ಬಗ್ಗಿಸಿಕೊಂಡು ಹೇಳತೊಡಗಿದನು.

೧೫೩. ವ್ಯಾಸನು ಹೇಳುತ್ತಾನೆ:— "ಮಂಗಳಾಂಗೀ! ನನಗೆ ಒಂದಾನೊಂದು ನಿಯಮವಿರುವುದು. ಅದು ನಿನ್ನ ಮನೆಯಲ್ಲಿ ಸಫಲವಾಗುವಂತಿದ್ದರೆ ಮಾತ್ರ ಬಂದು ಭಿಕ್ಷೆಯನ್ನು ಮಾಡುವೆನು. ಇಲ್ಲದಿದ್ದಲ್ಲಿ ಆಗಲಾರದು."

ತಪಸ್ವ್ಯುದೀರಿತಂ ಶ್ರುತ್ವಾ ಸಾ ಪ್ರೋವಾಚ ವಚಸ್ತತಃ ।
ಅನಿಶಂಕಂ ವದ ಮುನೇ ಕಸ್ತೇಽಸ್ತಿ ನಿಯಮಃ ಸುಧೀಃ ॥ ೧೫೪ ॥
ಮಮ ಭರ್ತುಃ ಪ್ರಸಾದೇನ ಕಿಂಚಿನ್ನ್ಯೂನಂ ಯತೋಽತ್ರ ನ ।
ಇತಿ ಶ್ರುತ್ವಾ ಪ್ರಹೃಷ್ಟಾತ್ಮಾ ಸ ತಾಮಾಹ ತಪೋಧನಃ ॥ ೧೫೫ ॥
ಅಯುತಂ ಮಮ ಶಿಷ್ಯಾ ಯೇ ತೈಃ ಸಪಂಕ್ತಿಮಹಂ ವೃಣೇ ।
ಅಸ್ತಂ ಯಾವನ್ನಯಾತ್ಯರ್ಕಸ್ತಾವದ್ಭೋಕ್ಷ್ಯೇಽನ್ಯಥಾ ನ ಹಿ ॥ ೧೫೬ ॥
ನಿಶಮ್ಯೇತಿ ಪ್ರಹೃಷ್ಟಾಸ್ಯಾ ಸಾ ಪ್ರೋವಾಚ ಮುನಿಂ ತತಃ ।
ಕಿಂ ವಿಲಂಬೇನ ತದ್ಯಾಹಿ ಸರ್ವಾನ್ಶಿಷ್ಯಾನ್ಸಮಾಹ್ವಯ ॥ ೧೫೭ ॥
ಪುನಃ ಪ್ರಾಹ ಸ ತಾಂ ಸಾಧ್ವಿ ತ್ವೇತಾವತ್ಸಿದ್ಧಿರಸ್ತಿ ತೇ ।
ಯೇನ ತೃಪ್ತಿಂ ಗಮಿಷ್ಯಂತಿ ಮಚ್ಛಿಷ್ಯಾಃ ಸರ್ವ ಏವ ತೇ ॥ ೧೫೮ ॥
ಸ್ಮಿತ್ವಾಥ ಸಾಬ್ರವೀತ್ತಂ ತು ಮುನೇ ಭರ್ತುರನುಗ್ರಹಾತ್ ।
ಸಿದ್ಧಮೇವ ಸದೈವಾಸ್ತೇ ಸರ್ವಂ ತಾವನ್ಮಮಾಲಯೇ ॥ ೧೫೯ ॥

---

೧೫೪. ತಪಸ್ವಿಯು ಹೇಳಿದುದನ್ನು ಕೇಳಿ ಆಕೆಯು ಪುನಃ ಹೇಳತೊಡಗಿದಳು. "ಪ್ರಾಜ್ಞನಾದ ಮುನಿಯೆ! ನಿನ್ನ ನಿಯಮವು ಯಾವುದೆಂಬುದನ್ನು ಸಂಕೋಚವಿಲ್ಲದೆ ನನ್ನಲ್ಲಿ ಹೇಳುವವನಾಗು.

೧೫೫. ನನ್ನ ಪತಿಯ ಅನುಗ್ರಹದಿಂದ ನಮ್ಮ ಮನೆಯಲ್ಲಿ ಯಾವ ಕೊರತೆಯೂ ಇಲ್ಲವಾಗಿರುವುದು." ಇದನ್ನು ಕೇಳಿ ಆ ತಪೋಧನನು ಹೃಷ್ಟಾಂತರಂಗನಾಗಿ ಆಕೆಗೆ ಹೇಳತೊಡಗಿದನು.

೧೫೬. ನನ್ನ ಹತ್ತುಸಾವಿರ ಶಿಷ್ಯರೊಡನೆ ಸಹಪಙ್ಕ್ತಿಭೋಜನವನ್ನು ನಿನ್ನಲ್ಲಿ ಬೇಡುತ್ತಿರುವೆನು. ಅದನ್ನೂ ಸೂರ್ಯನು ಅಸ್ತಮಾನವಾಗುವುದರೊಳಗಾಗಿ ಮಾಡಿಸಬೇಕು. ಇಲ್ಲದಿದ್ದಲ್ಲಿ ನಾನು ಊಟಮಾಡುವವನಲ್ಲ."

೧೫೭. ಇದನ್ನು ಕೇಳಿ ಆಕೆಯು ಸಂತೋಷದಿಂದ ಅರಳಿದ ಮುಖವುಳ್ಳವಳಾಗಿ ಮುನಿಯನ್ನು ಕುರಿತು ಹೇಳಿದಳು. "ತಡವನ್ನೇಕೆ ಮಾಡುತ್ತಿರುವೆ? ಬೇಗ ಹೊರಟು ನಿನ್ನ ಶಿಷ್ಯರೆಲ್ಲರನ್ನೂ ಕರೆದುಕೊಂಡು ಬಾ."

೧೫೮. ಪುನಃ ಆತನು ಆಕೆಯನ್ನು ಕುರಿತು, "ಎಲೌ ಸಾಧ್ವಿಯೆ! ನನ್ನ ಸಮಸ್ತ ಶಿಷ್ಯರೂ ಭೋಜನದಿಂದ ಸಂತೃಪ್ತಿಯನ್ನು ಪಡೆಯುವಷ್ಟು ಐಶ್ವರ್ಯ ಸಮೃದ್ಧಿಯು ನಿನ್ನಲ್ಲಿರುವುದೆ?" ಎಂದು ಕೇಳಿದನು.

೧೫೯. ಆಕೆಯು ನಗುತ್ತ ಆತನಿಗೆ ಉತ್ತರವನ್ನಿತ್ತಳು. "ಎಲೈ ಮುನಿಯೆ! ನನ್ನ ಪತಿಯ ಅನುಗ್ರಹದಿಂದ ನನ್ನ ಮನೆಯಲ್ಲಿ ಯಾವಾಗಲೂ ಎಲ್ಲ ಪದಾರ್ಥಗಳೂ ಸಿದ್ಧವಾಗಿಯೇ ಇರುವುವು.

ಯಾವತಾರ್ಥಿಜನಸ್ತೃಪ್ತಿಮೇತಿ ಸರ್ವೋಽಪಿ ಸರ್ವಶಃ ।
ವಯಂ ನ ತಾದೃಙ್ಮಹಿಲಾ ಭರ್ತೃಸಂದೇಹಕಾರಿಕಾಃ ॥ ೧೬೦ ॥
ಆಯಾತೋಽರ್ಥೀ ಯದಾ ಗೇಹೇ ಸಿದ್ಧಂ ಕಾರ್ಯಂ ತದೈವ ಹಿ ।
ಪರಿಪೂರ್ಣಾ ದಿಶಃ ಸರ್ವಾಃ ಪರಿಪೂರ್ಣಾ ಮನೋರಥಾಃ ॥ ೧೬೧ ॥
ಪರಿಪೂರ್ಣಂ ಗೃಹಂ ಸರ್ವಂ ಪತ್ಯುಃ ಪಾದಪ್ರಸಾದತಃ ।
ಯಾಹಿ ತೂರ್ಣಂ ಸಮಾಯಾಹಿ ಯಾವದನ್ನಾರ್ಥಿಭಿಃ ಸಹ ॥ ೧೬೨ ॥
ಪತಿರ್ಮೇ ಬಹುಕಾಲೀನಃ ಕಾಲಂ ನ ಸಹತೇ ಚಿರಂ ।
ಪ್ರಿಯಾತಿಥಿಃ ಪ್ರಿಯತಮಸ್ತದಾತಿಥ್ಯಸಮೃದ್ಧಯೇ ॥ ೧೬೩ ॥
ಆಶು ಗತ್ವಾ ಸಮಾಗಚ್ಛ ಯಾವನ್ನಾಸ್ತಮಿತೋ ರವಿಃ ।
ಇತಿ ಪ್ರಹೃಷ್ಟಸ್ತ್ವರಿತಃ ಶಿಷ್ಯಾನಾಹೂಯ ಸರ್ವತಃ ॥ ೧೬೪ ॥
ಆಗತ್ಯ ತಾಂ ಪುನಃ ಪ್ರಾಹ ದೃಷ್ಟ್ವಾ ತನ್ಮಾರ್ಗಲೋಚನಾಂ ।
ಮಾತಃ ಸರ್ವೇ ಸಮಾಯಾತಾಸ್ತ್ವರಿತಂ ದೇಹಿ ಭೋಜನಂ ॥ ೧೬೫ ॥

---

೧೬೦. ಅನ್ನಾರ್ಥಿಗಳಾದ ಜನರು ಸಕಲರೂ ಸಕಲ ಪ್ರಕಾರದಿಂದಲೂ ತೃಪ್ತಿಯನ್ನು ಹೊಂದುವಷ್ಟು ಸಂಭಾರಗಳಿದ್ದೇ ಇರುವುವು. ಪತಿಗಳು ಅತಿಥಿ ಸತ್ಕಾರದಲ್ಲಿ ಸಂದೇಹಗೊಳ್ಳುವಂತೆ ಮಾಡುವ ಸ್ತ್ರೀಯರು ನಾವಲ್ಲ.

೧೬೧. ಅತಿಥಿಯು ಯಾವಾಗ ಮನೆಗೆ ಬಂದನೊ, ಆಗಲೇ ಸಮಸ್ತವೂ ಸಿದ್ಧವಾಯಿತೆಂದೇ ತಿಳಿ. ಸಕಲ ದಿಕ್ಕುಗಳೂ ಪರಿಪೂರ್ಣಗಳಾಗಿರುವುವು. ಸಕಲ ಮನೋರಥಗಳೂ ಕೈಗೂಡಿರುವುವು.

೧೬೨. ಪತಿದೇವನ ಪಾದಪ್ರಸಾದದಿಂದ ಮನೆಯು ಸರ್ವವಿಧದಿಂದಲೂ ಪರಿಪೂರ್ಣವಾಗಿರುವುದು. ಆದುದರಿಂದ ಹೊರಟು ಅನ್ನಾರ್ಥಿಗಳಾದ ನಿನ್ನ ಶಿಷ್ಯರೊಡನೆ ಕ್ಷಿಪ್ರವಾಗಿ ಹಿಂದಿರುಗು.

೧೬೩. ನನ್ನ ಪತಿದೇವನು ಬಹುವೃದ್ಧನು. ಬಹಳ ಕಾಲ ಹಸಿವನ್ನು ತಡೆಯಲಾರನು. ಆತನ ಆತಿಥ್ಯದ ಸಮೃದ್ಧಿಗೆ ಇಂದು ನೀನು ಬಹಳ ಇಷ್ಟನಾದ ಅತಿಥಿಯಾಗಿರುವೆ.

೧೬೪. ಆದುದರಿಂದ ಸೂರ್ಯನು ಅಸ್ತಮಿತನಾಗುವುದಕ್ಕೆ ಮುಂಚೆಯೇ ಬೇಗ ಹೋಗಿ ಎಲ್ಲರನ್ನೂ ಕರೆದುಕೊಂಡು ಬಾ.'' ಇಂತೆಂದ ಮಾತುಗಳನ್ನು ಕೇಳಿ ಹರ್ಷಗೊಂಡು ವ್ಯಾಸಮುನಿಯು ಎಲ್ಲೆಲ್ಲಿಯೂ ಭಿಕ್ಷೆಗಾಗಿ ಅಲೆಯುತ್ತಿದ್ದ ಶಿಷ್ಯರೆಲ್ಲರನ್ನೂ ಕರೆದನು.

೧೬೫. ಹಿಂದಿರುಗಿ ಬಂದು ಜಿಂಕೆಯ ಕಣ್ಣುಗಳಂತೆ ವಿಶಾಲಗಳಾದ ನೇತ್ರಗಳುಳ್ಳ ಆಕೆಯನ್ನು ಕುರಿತು ಪುನಃ ಹೇಳಿದನು. ''ತಾಯೆ! ನಾವೆಲ್ಲರೂ ಬಂದಿರುವೆವು. ಶೀಘ್ರವಾಗಿ ನಮಗೆ ಭೋಜನವನ್ನು ಕೊಡು.

ಅಸ್ತಾಚಲಂ ಹಿ ಸಮಯಾ ಸಮಾಯಾದೇಷ ಭಾಸ್ಕರಃ ।
ಇತ್ಯುಕ್ತ್ವಾ ಮಂದಿರಸ್ಯಾಂತರ್ವಿವಿಶುಸ್ತೇ ತಪೋಧನಾಃ ॥ ೧೬೬ ॥
ತನ್ಮಂಡಪಮಣಿಜ್ಯೋತಿಸ್ತ್ರ್ಯಾಹಿತದಿನಶ್ರಿಯಃ ।
ಯಾವದ್ಗಚ್ಛಂತಿ ತತ್ಸೌಧಮಧ್ಯಮಾಶು ತಪಸ್ವಿನಃ ॥ ೧೬೭ ॥
ಪಾದೌ ಪ್ರಕ್ಷಾಲ್ಯ ತಾವತ್ತೇ ಕೈಶ್ಚಿತ್ಕೈಶ್ಚಿತ್ಸಮರ್ಚ್ಯ ಚ ।
ಕತಿಚಿತ್ಪರಿವಿಷ್ಟಾನ್ನಾ ಭೋಕ್ತುಮೇವೋಪವೇಶಿತಾಃ ॥ ೧೬೮ ॥
ತದ್ದಿವ್ಯಪಾಕಸಂಭಾರಾನ್ದೃಷ್ಟ್ವಾ ತದ್ದೃಷ್ಟಯಃ ಕ್ಷಣಾತ್ ।
ಪರಾಂ ತೃಪ್ತಿಮುಪಾಗಚ್ಛನ್ಘ್ರಾಣಾನ್ಯಾಮೋದರಾಜಿಭಿಃ ॥ ೧೬೯ ॥
ಅತಿತೃಪ್ತಿಂ ಸಮಾಪನ್ನಾಸ್ತೇ ತದನ್ನನಿಷೇವಣಾತ್ ।
ಆಚಾಂತಾಶ್ಚಂದನೈಃ ಸ್ರಗ್ಭಿರಂಬರೈಃ ಪರಿಭೂಷಿತಾಃ ॥ ೧೭೦ ॥
ಅಥ ಸಾಂಧ್ಯಂ ವಿಧಿಂ ಕೃತ್ವಾ ಪ್ರೋಪವಿಶ್ಯ ತದಗ್ರತಃ ।
ಅಭಿಸಂದ್ಯ ಮಹಾಶೀರ್ಭಿರ್ಯಾವದ್ಗಂತುಂ ಪ್ರಚಕ್ರಮುಃ ॥ ೧೭೧ ॥

---

೧೬೬. ಸೂರ್ಯನು ಅಸ್ತಾಚಲದ ಸಮೀಪಕ್ಕೆ ಬರುತ್ತಿರುವನು.'' ಇಂತೆಂದು ಹೇಳುತ್ತಿದ್ದಂತೆಯೇ ಆ ತಪಸ್ವಿಗಳೆಲ್ಲರೂ ಆಕೆಯ ಮಂದಿರದೊಳಕ್ಕೆ ಪ್ರವೇಶಿಸಿದರು.

೧೬೭. ಆ ಮನೆಯಲ್ಲಿಯಾದರೊ ಸಾಲುಸಾಲಾಗಿ ಇಟ್ಟಿರುವ ಮಣಿದೀಪಗಳ ಬೆಳಕಿನ ವಿಸ್ತಾರದಿಂದ ಸರ್ವಕಾಲದಲ್ಲಿಯೂ ಹಗಲಾಗಿಯೇ ಇರುವಂತೆ ಭಾಸವಾಗುತ್ತಿದ್ದಿತು. ಇಂತಹ ಸೌಧದ ಮಧ್ಯಭಾಗವನ್ನು ಆ ತಪಸ್ವಿಗಳು ಸಂಭ್ರಮದಿಂದ ಪ್ರವೇಶಿಸಿದರು.

೧೬೮. ಅಷ್ಟರಲ್ಲಿ ಅನೇಕ ದಾಸದಾಸಿಯರು ಬಂದರು. ಕೆಲವರು ಅತಿಥಿಗಳಿಗೆ ಪಾದಗಳನ್ನು ತೊಳೆದರು. ಕೆಲವರು ಪೂಜೆಗಳನ್ನು ಮಾಡಿದರು. ಹಲವರು ಊಟದ ಮನೆಗೆ ಪ್ರವೇಶಿಸಿ ಅನ್ನಕ್ಕೆ ಪರಿವೇಷಣೆಯನ್ನು ಮಾಡುತ್ತಿದ್ದರು.

೧೬೯—೧೭೦. ಆ ದಿವ್ಯಪಾಕಗಳ ಸಂಭಾರಗಳನ್ನು ಕಂಡು ಅವುಗಳಲ್ಲಿಯೇ ನೆಟ್ಟದೃಷ್ಟಿಯುಳ್ಳವರಾಗಿ ಅತಿಥಿಗಳೆಲ್ಲರೂ ಕ್ಷಣಮಾತ್ರದಲ್ಲಿಯೇ ಮೂಗನ್ನು ಪ್ರವೇಶಿಸುತ್ತಿರುವ ಆಮೋದಗಳಿಂದಲೇ ಅತಿಶಯವಾದ ತೃಪ್ತಿಯನ್ನು ಹೊಂದಿದ್ದರು. ಆ ಅನ್ನದ ಸೇವನೆಯಿಂದಲಾದರೋ ಎಲ್ಲರೂ ಅತ್ಯಂತ ಸಂತುಷ್ಟರಾಗಿ ಉತ್ತರಾಚಮನವನ್ನು ಮಾಡಿದ ಮೇಲೆ ಗಂಧ, ಪುಷ್ಪ, ವಸ್ತ್ರ ಮುಂತಾದುವುಗಳಿಂದ ಅಲಂಕರಿಸಲ್ಪಟ್ಟರು.

೧೭೧. ಬಳಿಕ ಸಂಧ್ಯಾಕಾಲದ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಎಲ್ಲರೂ ಗೃಹಸ್ಥನ ಎದುರಿನಲ್ಲಿ ಕುಳಿತು ಆತನನ್ನು ಅನೇಕ ಆಶೀರ್ವಚನಗಳಿಂದ ಅಭಿನಂದಿಸಿ ಹೊರಡಲನುವಾದರು.

ತಾವದ್ವೃದ್ಧಗೃಹಸ್ಥೇನ ಗೃಹಿಣೀ ಸಾ ಕಟಾಕ್ಷಿತಾ ।
ಪಪ್ರಚ್ಛ ತೀರ್ಥೇ ವಸತಾಂ ಕೋ ಧರ್ಮೋ ಮುಖ್ಯ ಏವ ಹಿ ॥ ೧೭೨ ॥
ತಥಾ ತದನುಸಾರೇಣ ತೀರ್ಥೇ ವರ್ತಾಮಹೇ ವಯಂ ।
ಸರ್ವಧರ್ಮವಿದಾಂ ಶ್ರೇಷ್ಠಃ ಶ್ರುತ್ವಾ ತದ್ಗೃಹಿಣೀವಚಃ ॥ ೧೭೩ ॥
ತದಾಧರಸುಧಾಕ್ಲಿನ್ನಮಹಾನ್ನಸ್ವಾದತರ್ಪಿತಃ ।
ಪ್ರತ್ಯುವಾಚ ಮುನಿರ್ವ್ಯಾಸಃ ಸ್ಮಿತ್ವಾ ತಾಂ ಸರ್ವವಿತ್ತಮಾಂ ॥ ೧೭೪ ॥

ವ್ಯಾಸ ಉವಾಚ :—

ಸ್ವಚ್ಛಾಂತಃಕರಣೇ ಮಾತರ್ಮಹಾಮಿಷ್ಟಾನ್ನಮಾನದೇ ।
ಸ ಏಷ ಧರ್ಮೋ ನಾನ್ಯೋಽಸ್ತಿ ಯತ್ತ್ವಯಾ ಪರಿಚರ್ಯತೇ ॥ ೧೭೫ ॥
ತ್ವಮೇವ ಧರ್ಮಂ ಜಾನಾಸಿ ಪತಿಶುಶ್ರೂಷಣೇ ರತಾ ।
ಯದಿ ಪೃಚ್ಛಸಿ ಮಾಂ ಸತ್ಯಂ ತದಾ ಕಿಂ ಚ ನ ವಚ್ಮಿ ತೇ ॥ ೧೭೬ ॥
ವಕ್ತವ್ಯಮೇವ ಪೃಷ್ಟೇನ ಮನಾಗಪಿ ವಿಜಾನತಾ ।
ಸ ಏವ ಧರ್ಮಃ ಸುಭಗೇ ನಾನ್ಯೋ ಧರ್ಮೋಽಸ್ತಿ ಕಶ್ಚನ ॥ ೧೭೭ ॥

---

೧೭೨. ಆಗ ವೃದ್ಧಗೃಹಸ್ಥನು ತನ್ನ ಗೃಹಿಣಿಯನ್ನು ಕಡೆಗಣ್ಣಿನಿಂದ ನೋಡಿದನು. ಆಕೆಯು ಆತನ ಇಂಗಿತವನ್ನರಿತು ವ್ಯಾಸಮುನಿಯನ್ನು ಕುರಿತು ಕೇಳಿದಳು. "ಮಹರ್ಷಿಯೆ! ತೀರ್ಥಕ್ಷೇತ್ರಗಳಲ್ಲಿ ವಾಸಮಾಡುವವರಿಗೆ ಮುಖ್ಯವಾದ ಧರ್ಮವು ಯಾವುದು?

೧೭೩–೧೭೪. ಅದನ್ನು ನಮಗೆ ತಿಳಿಸಿದರೆ ಅದನ್ನನುಸರಿಸಿಯೇ ನಾವು ಈ ಕ್ಷೇತ್ರದಲ್ಲಿ ಜೀವನವನ್ನು ನಡೆಸಬೇಕೆಂದಿರುವೆವು." ಇಂತೆಂದ ಯಜಮಾನಿಯ ಮಾತನ್ನು ಕೇಳಿದ ವ್ಯಾಸನು ಸಕಲ ಧರ್ಮಜ್ಞರಲ್ಲಿ ಶ್ರೇಷ್ಠನೂ, ಆಕೆಯ ಆದರಾತಿಥ್ಯವೆಂಬ ಅಮೃತದಿಂದ ಸೇಚಿತವಾದ ಅನ್ನದಿಂದ ತೃಪ್ತಿಯನ್ನು ಹೊಂದಿದವನೂ ಆಗಿ ನಗುತ್ತಲೇ ಸರ್ವಜ್ಞಳಾದ ಆಕೆಯನ್ನು ಕುರಿತು ಹೇಳಿದನು.

೧೭೫. "ತಾಯೆ! ನಿರ್ಮಲವಾದ ಅಂತಃಕರಣದಿಂದ ನಮಗೆ ಅನರ್ಘವಾದ ಮೃಷ್ಟಾನ್ನವನ್ನೂ ಬಹುಮಾನವನ್ನೂ ಕೊಟ್ಟಿರುವೆಯಲ್ಲವೆ! ನೀನು ಅನುಸರಿಸುತ್ತಿರುವ ಅತಿಥಿಸತ್ಕಾರವೇ ಧರ್ಮವಾಗಿರುವುದಲ್ಲದೆ ಕ್ಷೇತ್ರಗಳಲ್ಲಿ ಮಾಡಬೇಕಾದ ಬೇರೆ ಯಾವ ಧರ್ಮವೂ ಇರುವುದಿಲ್ಲ.

೧೭೬. ಪತಿಯ ಶುಶ್ರೂಷೆಯಲ್ಲಿಯೇ ನಿರತಳಾಗಿರುವ ನೀನೇ ಸಕಲ ಧರ್ಮಗಳನ್ನೂ ತಿಳಿದಿರುವೆ. ಆದರೆ ನನ್ನಲ್ಲಿ ಸತ್ಯಾರ್ಥವನ್ನು ಪ್ರಶ್ನೆಮಾಡುತ್ತಿರುವೆಯಾದುದರಿಂದ ನಿನಗೊಂದು ಮಾತನ್ನು ಹೇಳುವೆನು.

೧೭೭–೧೭೮. ಧರ್ಮಜ್ಞನಾದವನು ಪ್ರಶ್ನಿಸಿದವನಿಗೆ ತನಗೆ ತಿಳಿದ ಅಲ್ಪವನ್ನಾದರೂ ಹೇಳಲೇಬೇಕಲ್ಲವೆ. ಓ ಸೌಭಾಗ್ಯವತಿಯೆ! ವಯೋವೃದ್ಧನಾದ

ಯೇನೈಷ ತೋಷಮಾಯಾತಿ ತವ ಭರ್ತಾ ಚಿರಂತನಃ ।
ಗೃಹಿಣ್ಯುವಾಚ :—
ಅಯಂ ಧರ್ಮೋ ಭವೇನ್ನೂನಂ ಕ್ರಿಯತೇ ಚ ಸ್ವಶಕ್ತಿತಃ ॥ ೧೭೮ ॥
ಸಾಧಾರಣಾನಿ ಧರ್ಮಾಣಿ ಸಂಪೃಚ್ಛೇ ತಾನಿ ಮೇ ವದ ।
ವ್ಯಾಸ ಉವಾಚ :—
ಅನುದ್ವೇಗಕರಂ ವಾಕ್ಯಂ ಪರೋತ್ಕರ್ಷಸಹಿಷ್ಣುತಾ ॥ ೧೭೯ ॥
ವಿಚಾರ್ಯಕಾರಿತಾ ನಿತ್ಯಂ ಸ್ವಧಿಷ್ಣ್ಯೋದಯಚಿಂತನಂ ।
ಗೃಹಸ್ಥ ಉವಾಚ :—
ಏಷು ಧರ್ಮೇಷು ಭೋ ವಿದ್ವಂಸ್ತ್ವಯಿ ಕೋಽಸ್ತೀಹ ತದ್ವದ ॥ ೧೮೦ ॥
ತತಃ ಸ್ಥಗಿತವದ್ವ್ಯಾಸಸ್ತಸ್ಥೌ ಕಿಂಚಿನ್ನ ಚೋಕ್ತವಾನ್ ।
ತತಃ ಪುನರ್ಗೃಹಸ್ಥೇನ ಸ ಹಿ ಪ್ರೋಕ್ತಸ್ತಪೋಧನಃ ॥ ೧೮೧ ॥
ಯದ್ಯೇತ ಏವ ವೈ ಧರ್ಮಾಸ್ತ್ವಯಾ ಯೇ ಪ್ರತಿಪಾದಿತಾಃ ।
ತದ್ದಾಂತತಾ ತವೈವೈಕ್ಷಿ ದಾನಂ ಶಾಪಸ್ಯ ಚೋತ್ತಮಂ ॥ ೧೮೨ ॥

---

ಈ ನಿನ್ನ ಪತಿದೇವನು ಯಾವುದರಿಂದ ಸಂತೋಷವನ್ನು ಹೊಂದುವನೊ, ಅದೇ ನಿನಗೆ ಧರ್ಮವಲ್ಲದೆ ಬೇರೆ ಯಾವ ಧರ್ಮವನ್ನೂ ನೀನು ಅನುಸರಿಸಬೇಕಾಗಿಲ್ಲ.'' ಗೃಹಿಣಿಯು ಹೇಳುತ್ತಾಳೆ:—''ಪತಿಗೆ ಸಂತೋಷವನ್ನುಂಟುಮಾಡುವುದು ಸತಿಗೆ ಧರ್ಮವೆಂಬುದು ನಿಶ್ಚಯವೇ. ಅದನ್ನು ನಾನೂ ಯಥಾಶಕ್ತಿಯಾಗಿ ಪಾಲಿಸುತ್ತಲೇ ಇರುವೆನು.

೧೭೯. ಆದರೆ ಈಗ ನಾನು ಸಾಧಾರಣ ಧರ್ಮಗಳನ್ನು ಕುರಿತು ಪ್ರಶ್ನೆ ಮಾಡುತ್ತಿರುವೆನು. ಅವುಗಳನ್ನು ನನಗೆ ವಿಸ್ತರಿಸಿ ಹೇಳು.'' ವ್ಯಾಸನು ಹೇಳುತ್ತಾನೆ:—''ಇತರರಿಗೆ ದುಃಖವನ್ನುಂಟುಮಾಡುವ ಮಾತುಗಳನ್ನಾಡದಿರುವುದು. ಇತರರ ಐಶ್ವರ್ಯವನ್ನು ಕಂಡು ಅಸೂಯೆಗೊಳ್ಳದಿರುವುದು.

೧೮೦. ನಿತ್ಯವೂ ಪೂರ್ವಾಪರಗಳನ್ನು ವಿಚಾರಿಸಿ ಕಾರ್ಯಗಳನ್ನು ಮಾಡುತ್ತಿರುವುದು. ನಿತ್ಯವೂ ವಾಸಸ್ಥಾನದ ಅಭ್ಯುದಯವನ್ನೇ ಚಿಂತಿಸುತ್ತಿರುವುದು.'' ಗೃಹಸ್ಥನು ಪ್ರಶ್ನೆಮಾಡುತ್ತಾನೆ:—''ಎಲೈ ಪ್ರಾಜ್ಞನೆ! ಈ ಧರ್ಮಗಳಲ್ಲಿ ನಿನ್ನಲ್ಲಿ ಯಾವಯಾವುವಿರುವುವೆಂಬುದನ್ನು ನಮಗೆ ತಿಳಿಸು.''

೧೮೧. ಆಗ ವ್ಯಾಸನು ಈ ಮಾತನ್ನು ಕೇಳಿ ಮರದ ಬೊಂಬೆಯಂತೆ ನಿಂತುಬಿಟ್ಟನು. ಒಂದು ಮಾತನ್ನೂ ಆಡಲಾರದಾದನು. ಆಗ ಗೃಹಸ್ಥನು ತಪೋಧನನನ್ನು ಕುರಿತು ಪುನಃ ಕೇಳತೊಡಗಿದನು.

೧೮೨. ''ನೀನು ಹಿಂದೆ ಪ್ರತಿಪಾದಿಸಿದವುಗಳೇ ನಿಜವಾಗಿ ಧರ್ಮಗಳಾಗಿದ್ದರೆ ಇಂದ್ರಿಯನಿಗ್ರಹವೂ, ಅಮೋಘವಾದ ಶಾಪವನ್ನು ಕೊಡುವ ಸಾಮರ್ಥ್ಯವೂ ನಿನ್ನಲ್ಲಿಯೇ ಕಂಡುಬರುತ್ತಿರುವುವು.

ತ್ವಯ್ಯೇವ ಹಿ ದಯಾ ಸಂಯಗ್ಧೈರ್ಯಂ ತ್ವಯ್ಯೇವ ಚೋತ್ತಮಂ ।
ತ್ವಯಿ ಸಂಭಾವನಾಸ್ತ್ಯೇವ ಕಾಮಕ್ರೋಧವಿನಿಗ್ರಹೇ ॥ ೧೮೩ ॥
ತ್ವಮೇವ ಸಂಯಗ್ಜಾನೀಷೇ ವಕ್ತುಂ ಚೋದ್ವೇಗವರ್ಜಿತಂ ।
ತ್ವಯ್ಯೇವ ಸಂಯಗ್ದೃಶ್ಯೇತ ಪರೋತ್ಕರ್ಷಸಹಿಷ್ಣುತಾ ॥ ೧೮೪ ॥
ವಿಚಾರ್ಯಕಾರಿತಾಯಾಶ್ಚ ತ್ವಮೇವ ನಿಲಯೋ ಮಹಾನ್ ।
ಸ್ವಸ್ಯ ಧಿಷ್ಣ್ಯಸ್ಯ ಚ ಭವಾಂಶ್ಚಿಂತಯೇದುದಯಂ ಧ್ರುವಂ ॥ ೧೮೫ ॥
ಮಮೈಕಂ ಬ್ರೂಹಿ ಭೋ ವಿದ್ವನ್ಛಾಪಂ ದದ್ಯಾಚ್ಚ ಯಃ ಕ್ರುಧಾ ।
ಅಲಭನ್ಸ್ವಾರ್ಥಸಂಸಿದ್ಧಿಮಭಾಗ್ಯಾತ್ತಸ್ಯ ಕಸ್ಯ ಸಃ ॥ ೧೮೬ ॥

ವ್ಯಾಸ ಉವಾಚ :—

ಯಃ ಸ್ವಾರ್ಥಸಿದ್ಧಿಮಲಭನ್ನಭಾಗ್ಯಾಚ್ಛಪತಿ ಕ್ರುಧಾ ।
ಸ ಶಾಪಃ ಪ್ರತ್ಯುತ ಭವೇಚ್ಛಪ್ತುರೇವಾವಿವೇಕಿನಃ ॥ ೧೮೭ ॥

ಗೃಹಸ್ಥ ಉವಾಚ :—

ಭವತಾ ಭ್ರಮತಾ ವಿಪ್ರ ನಾಪ್ತಾ ಭಿಕ್ಷಾ ಯದಾಪ್ಯಹೋ ।
ತದಾಪರಾದ್ಧಂ ಕಿಮಿಹ ವರಾಕೈಃ ಕ್ಷೇತ್ರವಾಸಿಭಿಃ ॥ ೧೮೮ ॥

---

೧೮೩. ಉತ್ತಮವಾದ ದಯೆಯೂ, ಒಳ್ಳೆಯ ಧೈರ್ಯವೂ, ಪರಮಪೂಜ್ಯತೆಯೂ, ಕಾಮಕ್ರೋಧಗಳ ಜಯವೂ ನಿನ್ನಲ್ಲಿಯೇ ಕಾಣುತ್ತಿರುವುವಲ್ಲವೆ.

೧೮೪. ಇತರರಿಗೆ ಉದ್ವೇಗವನ್ನುಂಟುಮಾಡದಂತೆ ಮಾತನಾಡುವುದನ್ನು ನೀನೊಬ್ಬನೇ ಚೆನ್ನಾಗಿ ಬಲ್ಲೆ. ನಿನ್ನೊಳಗೇ ಇತರರ ಐಶ್ವರ್ಯದ ಸಹಿಷ್ಣುತೆಯು ಸ್ಪಷ್ಟವಾಗಿ ಕಾಣುತ್ತಿರುವುದು.

೧೮೫. ಪೂರ್ವಾಪರ ವಿಚಾರಣೆಯೊಡನೆ ಕಾರ್ಯವನ್ನು ಮಾಡುವ ಸದ್ಗುಣಕ್ಕೆ ನೀನೇ ಮಹಾನಿಲಯಸ್ವರೂಪನಾಗಿರುವೆ. ನಿಜವಾಗಿಯೂ ನೀನೇ ನಿನ್ನ ವಾಸಸ್ಥಾನದ ಉತ್ತರಾಭಿವೃದ್ಧಿಯನ್ನು ಚಿಂತಿಸುತ್ತಿರುವೆ.

೧೮೬. ಅಯ್ಯಾ ವಿದ್ವಾಂಸನೆ! ನನಗೊಂದು ವಿಷಯವನ್ನು ಹೇಳು. ಯಾವನು ತನ್ನ ದೌರ್ಭಾಗ್ಯದ ದೆಸೆಯಿಂದ ಅಭೀಷ್ಟವನ್ನು ಪಡೆಯದೆ ಕೋಪಗೊಂಡು ಶಾಪವನ್ನು ಕೊಡುವನೊ, ಅವನ ಶಾಪವು ಯಾರಿಗೆ ಸೇರಬೇಕಾದುದು?''

೧೮೭. ವ್ಯಾಸನು ಹೇಳುತ್ತಾನೆ:— ''ಯಾವನು ನಿರ್ಭಾಗ್ಯವಂತನಾಗಿ ಸ್ವಾರ್ಥವನ್ನು ಪಡೆಯದೆ ಕೋಪದಿಂದ ಶಾಪವನ್ನೀಯುವನೊ, ಆ ಅವಿವೇಕಿಯ ಶಾಪವು ಶಾಪವನ್ನಿತ್ತವನಿಗೇ ಹಿಂದಿರುಗುವುದು ನಿಶ್ಚಯವು.''

೧೮೮. ಗೃಹಸ್ಥನು ಹೇಳುತ್ತಾನೆ:—'' ಬ್ರಾಹ್ಮಣೋತ್ತಮಾ! ಕ್ಷೇತ್ರವೆಲ್ಲವನ್ನೂ ಸುತ್ತಿದ್ದರೂ ನಿನಗೆ ಯಾವಾಗ ಭಿಕ್ಷೆಯು ಸಿಕ್ಕಲಿಲ್ಲವೊ, ಆ ವಿಷಯದಲ್ಲಿ ಅಲ್ಪರಾದ ಈ ಕ್ಷೇತ್ರವಾಸಿಗಳು ಮಾಡಿದ ಅಪರಾಧವೇನು?

ತಪಸ್ವಿನ್ಶೃಣು ಮೇ ವಾಕ್ಯಂ ರಾಜಧಾನ್ಯಾಂ ಮಮೇಹ ಯಃ ।
ಋದ್ಧಿಂ ದ್ರಷ್ಟುಂ ನ ಶಕ್ನೋತಿ ಪರಿಶಪ್ತಃ ಸ ಏವ ಹಿ ॥ ೧೮೯ ॥
ಅದ್ಯ ಪ್ರಭೃತಿ ನ ಕ್ಷೇತ್ರೇ ಮದೀಯೇ ಶಾಪವರ್ಜಿತೇ ।
ಆವಸ ಕ್ರೋಧನ ಮುನೇ ನ ವಾಸೇ ಯೋಗ್ಯತಾತ್ರ ತೇ ॥ ೧೯೦ ॥
ಇದಾನೀಮೇವ ನಿರ್ಗಚ್ಛ ಬಹಿಃ ಕ್ಷೇತ್ರಾದಿತೋ ಭವ ।
ತ್ವದ್ವಿಧಾನಾಂ ನ ಯೋಗ್ಯಂ ಮೇ ಕ್ಷೇತ್ರಂ ಮೋಕ್ಷೈಕಸಾಧನಂ ॥ ೧೯೧ ॥
ಅತ್ರಾಲ್ಪಮಪಿ ಯದ್ದೌಷ್ಟ್ಯಂ ಕೃತಂ ಮತ್ಕ್ಷೇತ್ರವಾಸಿನಾಂ ।
ತದ್ದೌಷ್ಟ್ಯಸ್ಯ ಪರೀಪಾಕೋ ರುದ್ರಪೈಶಾಚ್ಯಮೇವ ಹಿ ॥ ೧೯೨ ॥
ತಚ್ಛ್ರುತ್ವಾ ವೇಪಮಾನಃ ಸ ಪರಿಶುಷ್ಕೌಷ್ಠತಾಲುಕಃ ।
ಜಗಾಮ ಶರಣಂ ಗೌರೀಂ ಲುಠಂಸ್ತಚ್ಚರಣಾಗ್ರತಃ ॥ ೧೯೩ ॥
ಉವಾಚ ಚ ವಚೋ ಮಾತಸ್ತ್ರಾಹಿ ತ್ರಾಹೀತಿಸಂ ರುದನ್ ।
ಅನಾಥಸ್ತ್ವತ್ಸನಾಥೋಽಹಂ ಬಾಲಿಶಸ್ತವ ಬಾಲಕಃ ॥ ೧೯೪ ॥

---

೧೮೯. ತಪಸ್ವಿಯೆ ! ನನ್ನ ಮಾತನ್ನು ಕೇಳು. ಈ ರಾಜಧಾನಿಯಲ್ಲಿ ನನ್ನ ಐಶ್ವರ್ಯದ ಸಮೃದ್ಧಿಯನ್ನು ನೋಡುವುದಕ್ಕೆ ಯಾವನು ಅಶಕ್ತನೊ, ಅವನೇ ಶಾಪಕ್ಕೆ ಗುರಿಯಾದಂತಾಯಿತು.

೧೯೦. ಕ್ರೋಧಸಮನ್ವಿತನಾದ ಮುನಿಯೆ ! ಆದುದರಿಂದ ನಿನ್ನ ಶಾಪವು ನನ್ನ ನಗರಿಗೆ ಸಂಬಂಧಿಸಲಿಲ್ಲ. ಇಂದು ಮೊದಲು ನನ್ನ ಈ ಕ್ಷೇತ್ರದಲ್ಲಿ ನೀನು ವಾಸಮಾಡಬೇಡ. ಇಲ್ಲಿ ವಾಸಿಸುವ ಯೋಗ್ಯತೆಯು ನಿನಗಿಲ್ಲ.

೧೯೧. ಈಗಲೇ ಇಲ್ಲಿಂದ ಹೊರಟು ಕ್ಷೇತ್ರದ ಎಲ್ಲೆಯಾಚೆಗೆ ನಡೆ. ನಿನ್ನಂತಹ ಕ್ರೋಧಶೀಲರಾದವರಿಗೆ ಮೋಕ್ಷೈಕಸಾಧನವಾದ ಈ ನನ್ನ ಕ್ಷೇತ್ರವು ಯೋಗ್ಯವಾದ ವಾಸಸ್ಥಳವಲ್ಲ.

೧೯೨. ನನ್ನ ಕ್ಷೇತ್ರದಲ್ಲಿ ವಾಸಮಾಡುವವರಿಗೆ ಅತ್ಯಲ್ಪವಾದ ಅಪರಾಧ ವನ್ನು ಮಾಡಿದರೂ ಸಹ ಆ ದುಷ್ಕರ್ಮದ ಫಲವಾಗಿ ರುದ್ರಪಿಶಾಚದ ಜನ್ಮವನ್ನು ತಾಳಬೇಕಾಗುವುದು.''

೧೯೩. ಈ ಮಾತನ್ನು ಕೇಳಿ ವ್ಯಾಸನ ಅಂಗಾಂಗಗಳೆಲ್ಲವೂ ನಡುಗುತ್ತಿರಲು ಆತನ ತುಟಿಗಳೂ ಬಾಯಿಯೂ ಒಣಗಿ ಹೋದುವು. ಆತನು ಪಾರ್ವತಿಯ ಪಾದಕಮಲಗಳಲ್ಲಿ ಬಿದ್ದು ಹೊರಳುತ್ತ ಆಕೆಯನ್ನೇ ಶರಣುಹೊಂದುವವನಾದನು.

೧೯೪. ಇಂತೆಂದು ಪ್ರಾರ್ಥಿಸಿದನು. ''ತಾಯಿ ! ನನ್ನನ್ನು ಕಾಪಾಡು'' ಎಂಬುದಾಗಿ ಮೊರೆಯಿಡುತ್ತ ಅಳುತ್ತಿದ್ದನು. ''ಅನಾಥನಾದ ನನಗೆ ನೀನೇ ಗತಿದಾಯಕಳಾಗಿರುವೆ. ಮೂಢನಾದ ನಾನು ನಿನ್ನ ಬಾಲಕನು.

ಶರಣಾಗತಂ ಚ ಸಂತ್ರಾಹಿ ರಕ್ಷ ಮಾಂ ಶರಣಾಗತಂ ।
ಬಹೂನಾಮಾಗಸಾಂ ಗೇಹಮಸ್ಮಾಕಂ ದುಷ್ಟಮಾನಸಂ ॥ ೧೯೫ ॥
ಶಂಭುಶಾಪೋಽನ್ಯಥಾಕರ್ತುಂ ಭವತ್ಯಾಪಿ ನ ಶಕ್ಯತೇ ।
ಅಹಂ ಚ ಶರಣಾಯಾತಸ್ತದೇಕಂ ಕ್ರಿಯತಾಂ ಶಿವೇ ॥ ೧೯೬ ॥
ಪ್ರತ್ಯಷ್ಟಮಿ ಸದಾ ಕ್ಷೇತ್ರೇ ಪ್ರತಿಭೂತಂ ಚ ಪಾರ್ವತಿ ।
ದಿಶ ಪ್ರವೇಶನಾದೇಶಂ ನೇಶಸ್ತ್ವದ್ವಾಕ್ಯಲಂಘಕಃ ॥ ೧೯೭ ॥
ಇತ್ಯುಕ್ತ್ವಾ ತೇನ ಮುನಿನಾ ಭವಾನೀ ಕರುಣಾಜನಿಃ ।
ಮುಖಂ ಮಹೇಶಿತುರ್ವೀಕ್ಷ್ಯ ತಥೇತ್ಯಾಹ ತದಾಜ್ಞಯಾ ॥ ೧೯೮ ॥
ಅಥಾಂತರ್ಹಿತವಂತೌ ತೌ ಶಿವೌ ಕ್ಷೇತ್ರಶಿವಂಕರೌ ।
ವ್ಯಾಸೋಽಪಿ ನಿರ್ಯಯೌ ಕ್ಷೇತ್ರಾತ್ಸ್ವಾಪರಾಧವಶಂ ವದನ್ ॥ ೧೯೯ ॥
ಅಹೋರಾತ್ರಂ ಸ ಪಶ್ಯನ್ವೈ ಕ್ಷೇತ್ರಂ ದೃಷ್ಟೇರದೂರಗಂ ।
ಪ್ರಾಪ್ಯಾಷ್ಟಮೀಂ ಚ ಭೂತಾಂ ಚ ಮಧ್ಯೇಕ್ಷೇತ್ರಂ ಸದಾ ವಿಶೇತ್॥೨೦೦॥

---

೧೯೫. ಶರಣಾಗತನಾದ ನನ್ನನ್ನು ಕಾಪಾಡು. ಶರಣುಹೊಂದಿರುವ ನನ್ನನ್ನು ರಕ್ಷಿಸು. ನಾನು ಅನೇಕ ಅಪರಾಧಗಳಿಗೆ ನೆಲೆಮನೆಯಾಗಿರುವೆನು. ದುಷ್ಟಬುದ್ಧಿಯುಳ್ಳವನು.

೧೯೬. ಮಹೇಶ್ವರನಿತ್ತಿರುವ ಶಾಪವನ್ನು ವಿತಥವನ್ನಾಗಿ ಮಾಡಲು ನಿನಗೂ ಶಕ್ಯವಲ್ಲವೆಂಬುದನ್ನು ಬಲ್ಲೆನು. ನಾನೂ ಶರಣಾಗತನಾಗಿ ಬಂದಿರುವೆನು. ಆದುದರಿಂದ ಒಂದು ವರವನ್ನು ಕೊಡು.

೧೯೭. ಓ ಪರ್ವತರಾಜಪುತ್ರಿಯೆ ! ಪ್ರತಿಮಾಸದ ಅಷ್ಟಮಿ ಚತುರ್ದಶಿಯ ತಿಥಿಗಳಲ್ಲಿಯಾದರೂ ನನಗೆ ಈ ಕ್ಷೇತ್ರವನ್ನು ಪ್ರವೇಶಿಸುವಂತೆ ಅನುಗ್ರಹಿಸುವವಳಾಗು. ಮಹೇಶ್ವರನು ನಿನ್ನ ಮಾತಿಗೆ ಪ್ರತಿವಾಕ್ಯವನ್ನಾಡುವವನಲ್ಲ.''

೧೯೮. ಆ ಮುನಿಯು ಇಂತೆಂದು ಹೇಳಲು ಕರುಣಾಸಮುದ್ರಳಾದ ಪಾರ್ವತಿಯು ಮಹೇಶ್ವರನ ಮುಖವನ್ನು ನೋಡಿ ಆತನ ಅನುಜ್ಞೆಯನ್ನು ಪಡೆದು ಹಾಗೆಯೇ ಆಗಲೆಂದು ಅಪ್ಪಣೆಯನ್ನಿತ್ತಳು.

೧೯೯. ಬಳಿಕ ಕಾಶೀಕ್ಷೇತ್ರಕ್ಕೆ ಮಂಗಳಕಾರಕರಾದ ಪಾರ್ವತೀಪರಮೇಶ್ವರರಿಬ್ಬರೂ ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು. ವ್ಯಾಸಮಹರ್ಷಿಯೂ ಸಹ ತನ್ನ ಮಹಾಪರಾಧದ ವೃತ್ತಾಂತವನ್ನು ಹೇಳಿಕೊಳ್ಳುತ್ತ ಆ ಕ್ಷೇತ್ರದಿಂದ ಹೊರಟುಹೋದನು.

೨೦೦. ಆತನು ಕ್ಷೇತ್ರದ ಹೊರಗೆ ವಾಸಿಸುತ್ತಿದ್ದರೂ ದೃಷ್ಟಿಗೆ ಅನತಿದೂರದಲ್ಲಿರುವ ಆ ಕ್ಷೇತ್ರವನ್ನೇ ನೋಡುತ್ತ ದಿವಸಗಳನ್ನು ಕಳೆಯುವನು. ಅಷ್ಟಮಿ ಮತ್ತು ಚತುರ್ದಶಿ ತಿಥಿಗಳು ಬರಲು ಕ್ಷೇತ್ರದೊಳಗೆ ಪ್ರವೇಶಿಸುವನು.

ಲೋಲಾರ್ಕಾದಗ್ನಿದಿಗ್ಭಾಗೇ ಸ್ವರ್ಧುನೀಪೂರ್ವರೋಧಸಿ ।
ಸ್ಥಿತೋ ಹ್ಯದ್ಯಾಪಿ ಪಶ್ಯೇತ್ಸ ಕಾಶೀಪ್ರಾಸಾದರಾಜಿಕಾಂ ॥ ೨೦೧ ॥
ಸ್ಕಂದ ಉವಾಚ :—
ಇತ್ಥಂ ಕುಂಭಜ ಸ ವ್ಯಾಸಃ ಕ್ಷೇತ್ರೇ ಶಾಪಂ ಪ್ರದಾಸ್ಯತಿ ।
ಕ್ಷೇತ್ರಶಾಪಪ್ರದಾನಾಚ್ಚ ಬಹಿರ್ಯಾಸ್ಯತಿ ತತ್ಕ್ಷಣಾತ್ ॥ ೨೦೨ ॥
ಅತ ಏವ ವಿಮುಕ್ತಸ್ಯ ಕ್ಷೇತ್ರಸ್ಯ ಶುಭಶಂಸಿನಃ ।
ಭವಿಷ್ಯತಿ ಶುಭಂ ನಿತ್ಯಮನ್ಯಥಾ ತ್ವನ್ಯಥೈವ ಹಿ ॥ ೨೦೩ ॥
ಶ್ರುತ್ವಾಧ್ಯಾಯಮಿದಂ ಪುಣ್ಯಂ ವ್ಯಾಸಶಾಪವಿಮೋಕ್ಷಣಾತ್ ।
ಮಹಾದುರ್ಗೋಪಸರ್ಗೇಭ್ಯೋ ಭಯಂ ತಸ್ಯ ನ ಕುತ್ರಚಿತ್ ॥ ೨೦೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವ್ಯಾಸಶಾಪವಿಮೋಕ್ಷಣ ವರ್ಣನಂ"
ನಾಮ ಷಣ್ಣವತಿತಮೋಽಧ್ಯಾಯಃ

---

೨೦೧. ಲೋಲಾರ್ಕನಿಗೆ ಆಗ್ನೇಯಭಾಗದಲ್ಲಿ ಗಂಗಾನದಿಯ ಪೂರ್ವ ತೀರದಲ್ಲಿ ನೆಲಸಿ ಇಂದಿಗೂ ಸಹ ಕಾಶೀಕ್ಷೇತ್ರದ ಪ್ರಾಸಾದಸಮೂಹಗಳನ್ನು ನೋಡುತ್ತಿರುವನು.

೨೦೨. ಸ್ಕಂದನು ಹೇಳುತ್ತಾನೆ:—ಕುಂಭೋದ್ಭವನೆ! ಈ ವಿಧವಾಗಿ ವ್ಯಾಸನು ಕ್ಷೇತ್ರಕ್ಕೆ ಶಾಪವನ್ನು ಕೊಡುವನು. ಆ ಕ್ಷೇತ್ರವನ್ನು ಶಪಿಸುವ ಕಾರಣದಿಂದಲೇ ಆ ಕ್ಷಣದಲ್ಲಿಯೇ ಹೊರಕ್ಕೆ ಹೋಗುವನು.

೨೦೩. ಆದುದರಿಂದಲೇ ಅವಿಮುಕ್ತಕ್ಷೇತ್ರಕ್ಕೆ ಶುಭವನ್ನು ಬಯಸುವವನಿಗೆ ಶುಭವೇ ಉಂಟಾಗುವುದು. ಅಶುಭಾಕಾಂಕ್ಷಿಗೆ ಅಶುಭಗಳೇ ಬಂದೊದಗುವುವು.

೨೦೪. ವ್ಯಾಸರು ಶಾಪವನ್ನು ಕೊಟ್ಟುದನ್ನೂ, ಆಶಾಪದಿಂದ ಕ್ಷೇತ್ರವು ಬಿಡುಗಡೆಯನ್ನು ಹೊಂದಿದುದನ್ನೂ ವಿಸ್ತರಿಸಿರುವ ಈ ಅಧ್ಯಾಯವನ್ನು ಕೇಳಲು ಮನುಷ್ಯನಿಗೆಂದಿಗೂ ಮಹತ್ತರಗಳಾದ ಸಂಕಟಗಳಿಂದಾಗಲಿ ಅಡಚಣೆಗಳಿಂದಾಗಲಿ ಭಯವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ವ್ಯಾಸಶಾಪವಿಮೋಚನವರ್ಣನ"ವೆಂಬ
ತೊಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತನವತಿತಮೋಽಧ್ಯಾಯಃ

## ಕ್ಷೇತ್ರತೀರ್ಥವರ್ಣನಂ

**ಅಗಸ್ತ್ಯ ಉವಾಚ :—**

**ಏತದ್ಭವಿಷ್ಯಂ ಶ್ರುತ್ವಾಹಂ ವ್ಯಾಸಸ್ಯ ಶಿವನಂದನ ।**
**ಆಶ್ಚರ್ಯಭಾಜನಂ ಜಾತಸ್ತೀರ್ಥಾನಿ ಕಥಯಾಧುನಾ ॥ ೧ ॥**
**ಆನಂದಕಾನನೇ ಯಾನಿ ಯತ್ರ ಸಂತಿ ಷಡಾನನ ।**
**ತಾನಿ ಲಿಂಗಸ್ವರೂಪಾಣಿ ಸಮಾಚಕ್ಷ್ವ ಮಮಾಗ್ರತಃ ॥ ೨ ॥**

**ಸ್ಕಂದ ಉವಾಚ :—**

**ಅಯಮೇವ ಹಿ ವೈ ಪ್ರಶ್ನೋ ದೇವ್ಯಾ ದೇವೇನ ಭೋಸ್ತದಾ ।**
**ಯಾದೃಶಃ ಕಥಿತೋ ವಚ್ಮಿ ತಾದೃಶಂ ಶೃಣು ಕುಂಭಜ ॥ ೩ ॥**

**ದೇವ್ಯುವಾಚ :—**

**ಯಾನಿ ಯಾನಿ ಹಿ ತೀರ್ಥಾನಿ ಯತ್ರ ಯತ್ರ ಮಹೇಶ್ವರ ।**
**ತಾನಿ ತಾನೀಹ ಮೇ ಕಾಶ್ಯಾಂ ತತ್ರ ತತ್ರ ವದ ಪ್ರಭೋ ॥ ೪ ॥**

---

## ಕನ್ನಡದ ಅನುವಾದ

### ಕ್ಷೇತ್ರತೀರ್ಥವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಪರಮೇಶ್ವರಕುಮಾರನೆ! ಮುಂದೆ ನಡೆಯಲಿರುವ ವ್ಯಾಸಮಹರ್ಷಿಯ ವೃತ್ತಾಂತವನ್ನು ಕೇಳಿ ನಾನು ಅಪರಿಮಿತವಾದ ಆಶ್ಚರ್ಯಕ್ಕೆ ಭಾಜನನಾಗಿರುವೆನು. ಇನ್ನು ಈ ಕ್ಷೇತ್ರದಲ್ಲಿರುವ ತೀರ್ಥಗಳನ್ನು ನನಗೆ ವಿವರಿಸಿ ಹೇಳು.

೨. ಎಲೈ ಷಣ್ಮುಖನೆ! ಈ ಆನಂದಕಾನನದಲ್ಲಿ ಯಾವ ಯಾವ ಲಿಂಗಗಳು ಎಲ್ಲೆಲ್ಲಿ ನೆಲಸಿರುವುವೆಂಬುದನ್ನೂ ನನಗೆ ಆಮೂಲಾಗ್ರವಾಗಿ ತಿಳಿಸು.

೩. ಸ್ಕಂದನು ಹೇಳುತ್ತಾನೆ:—ಎಲೈ ಕುಂಭಸಂಭವನೆ! ಈ ವಿಷಯದಲ್ಲಿ ಪೂರ್ವದಲ್ಲಿಯೇ ಮಹಾದೇವನು ಪಾರ್ವತಿಗೆ ಹೇಗೆ ಹೇಳಿರುವನೊ, ಆ ಕ್ರಮದಿಂದಲೇ ತಿಳಿಸುವೆನು, ಕೇಳು.

೪. ದೇವಿಯು ಪ್ರಶ್ನೆಮಾಡುತ್ತಾಳೆ:—ಮಹೇಶ್ವರನೆ! ಕಾಶೀಕ್ಷೇತ್ರದಲ್ಲಿ ಯಾವ ಯಾವ ಲಿಂಗಗಳು ಎಲ್ಲೆಲ್ಲಿರುವುವೊ, ಆಯಾ ಪ್ರದೇಶಗಳನ್ನು ನನಗೆ ವಿವರಿಸು.

ದೇವದೇವ ಉವಾಚ :—

ಶೃಣು ದೇವಿ ವಿಶಾಲಾಕ್ಷಿ ತೀರ್ಥಂ ಲಿಂಗಮುದಾಹೃತಂ ।
ಜಲಾಶಯೇಽಪಿ ತೀರ್ಥಾಖ್ಯಾ ಜಾತಾ ಮೂರ್ತಿಪರಿಗ್ರಹಾತ್ ॥ ೫ ॥
ಮೂರ್ತಯೋ ಬ್ರಹ್ಮವಿಷ್ಣ್ವರ್ಕಶಿವವಿಘ್ನೇಶ್ವರಾದಿಕಾಃ ।
ಲಿಂಗಂ ಶೈವಮಿತಿಖ್ಯಾತಂ ಯತ್ರೈತತ್ತೀರ್ಥಮೇವ ತತ್ ॥ ೬ ॥
ವಾರಾಣಸ್ಯಾಂ ಮಹಾದೇವಃ ಪ್ರಥಮಂ ತೀರ್ಥಮುಚ್ಯತೇ ।
ತದುತ್ತರೇ ಮಹಾಕೂಪಃ ಸಾರಸ್ವತಪದಪ್ರದಃ ॥ ೭ ॥
ಕ್ಷೇತ್ರಪೂರ್ವೋತ್ತರೇ ಭಾಗೇ ತದ್ದೃಷ್ಟಂ ಪಶುಪಾಶಹೃತ್ ।
ತತ್ಪಶ್ಚಾದ್ವಿಗ್ರಹವತೀ ಪೂಜ್ಯಾ ವಾರಾಣಸೀ ನರೈಃ ॥ ೮ ॥
ಸಾ ಪೂಜಿತಾ ಪ್ರಯತ್ನೇನ ಸುಖವಸ್ತಿಪ್ರದಾ ಸದಾ ।
ಮಹಾದೇವಸ್ಯ ಪೂರ್ವೇಣ ಗೋಪ್ರೇಕ್ಷಂ ಲಿಂಗಮುತ್ತಮಂ ॥ ೯ ॥
ತದ್ದರ್ಶನಾದ್ಭವೇತ್ಸಂಯುಗ್ಗೋದಾನಜನಿತಂ ಫಲಂ ।
ಗೋಲೋಕಾತ್ಪ್ರೇಷಿತಾ ಗಾವಃ ಪೂರ್ವಂ ಯಚ್ಛಂಭುನಾ ಸ್ವಯಂ॥ ೧೦ ॥

---

೫. ಮಹಾದೇವನು ಹೇಳುತ್ತಾನೆ:—ವಿಶಾಲಾಕ್ಷಿಯೆ! ಕೇಳು. ತೀರ್ಥವೆಂದರೆ ಲಿಂಗಕ್ಕೆ ಹೆಸರಾಗಿರುವುದು. ಆಯಾ ಸ್ಥಳಗಳಲ್ಲಿ ಜಲಾಶಯಗಳೂ ಆರೂಪವನ್ನೇ ಧರಿಸಿರುವುದರಿಂದ ಅವುಗಳಿಗೂ ಆ ಹೆಸರೇ ಪ್ರಸಿದ್ಧವಾಗಿರುವುದು.

೬. ಬ್ರಹ್ಮ, ವಿಷ್ಣು, ಸೂರ್ಯ, ಶಿವ, ವಿಘ್ನೇಶ್ವರರೇ ಮುಂತಾದ ಎಲ್ಲ ದೇವತೆಗಳ ಮೂರ್ತಿಗಳೂ ಶಿವಲಿಂಗಗಳೇ ಆಗಿರುವುವು. ಆದುದರಿಂದ ಅವುಗಳಿರುವ ಪ್ರದೇಶಗಳೆಲ್ಲವೂ ತೀರ್ಥಗಳೇ ಆಗಿರುವುವು.

೭. ವಾರಾಣಸಿಯಲ್ಲಿ ಮಹಾದೇವನ ಸ್ಥಾನವೇ ಮುಖ್ಯತೀರ್ಥವೆಂದು ಹೇಳಲ್ಪಡುವುದು. ಅದಕ್ಕೆ ಉತ್ತರದಲ್ಲಿರುವ ಮಹಾಕೂಪವು ಸಕಲವಿದಾ ವೈಶಾರದ್ಯವನ್ನು ಕೊಡುವುದು.

೮. ಕ್ಷೇತ್ರದ ಈಶಾನ್ಯಭಾಗದಲ್ಲಿರುವ ಅದರ ದರ್ಶನವು ಜೀವನ ಸಂಸಾರ ಪಾಶಗಳನ್ನು ಬಿಡಿಸುವುದು. ಅದರ ಪಶ್ಚಿಮದಿಕ್ಕಿನಲ್ಲಿ ವಾರಾಣಸೀಕ್ಷೇತ್ರ ದೇವತೆಯೇ ಮೂರ್ತಿಗೊಂಡಿರುವಳು.

೯. ಆಕೆಯನ್ನು ಪ್ರಯತ್ನದಿಂದ ಪೂಜಿಸಲು ನಿತ್ಯವೂ ಕ್ಷೇತ್ರದಲ್ಲಿ ಸುಖವಸತಿಯನ್ನನುಗ್ರಹಿಸುವಳು. ಮಹಾದೇವನಿಗೆ ಪೂರ್ವದಲ್ಲಿ ಗೋಪ್ರೇಕ್ಷೇಶ್ವರವೆಂಬ ಉತ್ತಮಲಿಂಗವಿರುವುದು.

೧೦. ಅದರ ದರ್ಶನದಿಂದ ಗೋದಾನವನ್ನು ಮಾಡಿದ ಫಲವು ಸಂಪೂರ್ಣವಾಗಿ ಲಭಿಸುವುದು. ಪೂರ್ವದಲ್ಲಿ ಮಹಾದೇವನು ತಾನೇ ಗೋಲೋಕದಿಂದ ಗೋವುಗಳನ್ನು ಇಲ್ಲಿಗೆ ಕಳುಹಿಸಿದನಷ್ಟೆ.

ವಾರಾಣಸೀಂ ಸಮಾಯಾತಾ ಗೋಪ್ರೇಕ್ಷಂ ತತ್ತತಃ ಸ್ಮೃತಂ ।
ಗೋಪ್ರೇಕ್ಷಾದ್ದಕ್ಷಿಣೇ ಭಾಗೇ ದಧೀಚೀಶ್ವರಸಂಜ್ಞಿತಂ ॥ ೧೧ ॥
ತದ್ದರ್ಶನಾದ್ಭವೇತ್ಪುಂಸಾಂ ಫಲಂ ಯಜ್ಞಸಮುದ್ಭವಂ ।
ಅತ್ರೀಶ್ವರಂ ತು ತತ್ಪ್ರಾಚ್ಯಾಂ ಮಧುಕೈಟಭಪೂಜಿತಂ ॥ ೧೨ ॥
ಲಿಂಗಂ ದೃಷ್ಟ್ವಾ ಪ್ರಯತ್ನೇನ ವೈಷ್ಣವಂ ಪದಮೃಚ್ಛತಿ ।
ಗೋಪ್ರೇಕ್ಷಾತ್ಪೂರ್ವದಿಗ್ಭಾಗೇ ಲಿಂಗಂ ವೈ ವಿಜ್ವರಂ ಸ್ಮೃತಂ ॥ ೧೩ ॥
ತಸ್ಯ ಸಂಪೂಜನಾನ್ಮರ್ತ್ಯೋ ವಿಜ್ವರೋ ಜಾಯತೇ ಕ್ಷಣಾತ್ ।
ಪ್ರಾಚ್ಯಾಂ ವೇದೇಶ್ವರಸ್ತಸ್ಯ ಚತುರ್ವೇದಫಲಪ್ರದಃ ॥ ೧೪ ॥
ವೇದೇಶ್ವರಾದುದೀಚ್ಯಾಂ ತು ಕ್ಷೇತ್ರಜ್ಞಶ್ಚಾದಿಕೇಶವಃ ।
ದೃಷ್ಟಂ ತ್ರಿಭುವನಂ ಸರ್ವಂ ತಸ್ಯ ಸಂದರ್ಶನಾದ್ಧ್ರುವಂ ॥ ೧೫ ॥
ಸಂಗಮೇಶ್ವರಮಾಲೋಕ್ಯ ತತ್ಪ್ರಾಚ್ಯಾಂ ಜಾಯತೇಽನಘಃ ।
ಚತುರ್ಮುಖೇನ ವಿಧಿನಾ ತತ್ಪೂರ್ವೇಣ ಚತುರ್ಮುಖಂ ॥ ೧೬ ॥

---

೧೧. ಅವುಗಳು ವಾರಾಣಸಿಗೆ ಬಂದು ನಿಂತಲ್ಲಿಯೇ ಈ ಲಿಂಗವು ನೆಲಸಿರುವುದರಿಂದ ಇದನ್ನು ಗೋಪ್ರೇಕ್ಷವೆಂದು ಕರೆಯುವರು. ಗೋಪ್ರೇಕ್ಷದ ದಕ್ಷಿಣ ದಿಕ್ಕಿನಲ್ಲಿ ದಧೀಚೀಶ್ವರನಾಮಕವಾದ ಲಿಂಗವಿರುವುದು.

೧೨. ಅದನ್ನು ನೋಡುವುದರಿಂದ ಮನುಷ್ಯರಿಗೆ ಮಹಾಯಜ್ಞಗಳನ್ನು ಮಾಡುವುದರಿಂದಾಗುವ ಫಲವು ಲಭಿಸುವುದು. ಆ ಲಿಂಗದ ಪೂರ್ವಕ್ಕೆ ಮಧುಕೈಟಭರು ಪೂಜಿಸಿದ ಅತ್ರೀಶ್ವರ ಲಿಂಗವಿರುವುದು.

೧೩. ಈ ಲಿಂಗವನ್ನು ಭಕ್ತಿಯಿಂದ ದರ್ಶನಮಾಡಿದವನು ವಿಷ್ಣುಲೋಕವನ್ನು ಸೇರುವನು. ಗೋಪ್ರೇಕ್ಷೇಶ್ವರನಿಗೆ ಪೂರ್ವದಿಗ್ಭಾಗದಲ್ಲಿ ವಿಜ್ವರನಾಮಕವಾದ ಲಿಂಗವೊಂದಿರುವುದು.

೧೪. ಅದನ್ನು ಪೂಜಿಸುವುದರಿಂದ ಮಾನವನು ಕ್ಷಣಮಾತ್ರದಲ್ಲಿಯೇ ಸಕಲಜ್ವರಗಳ ಪೀಡೆಯನ್ನೂ ಕಳೆದುಕೊಳ್ಳುವನು. ಆ ವಿಜ್ವರೇಶ್ವರನಿಗೂ ಪೂರ್ವದಲ್ಲಿ ನಾಲ್ಕು ವೇದಗಳ ಅಧ್ಯಯನದ ಫಲವನ್ನು ಕೊಡುವ ವೇದೇಶ್ವರ ಮಹಾಲಿಂಗವಿರುವುದು.

೧೫. ವೇದೇಶ್ವರನಿಗೆ ಉತ್ತರದಲ್ಲಿ ಕ್ಷೇತ್ರಪಾಲಕನಾದ ಆದಿಕೇಶವನಿರುವನು. ಆತನ ಸಂದರ್ಶನದಿಂದ ಮೂರುಲೋಕಗಳ ಸಂದರ್ಶನದ ಫಲವು ಲಭಿಸುವುದೆಂಬುದು ದಿಟವು.

೧೬. ಆದಿಕೇಶವನಿಗೆ ಪೂರ್ವದಲ್ಲಿರುವ ಸಂಗಮೇಶ್ವರನ ದರ್ಶನದಿಂದ ಮನುಷ್ಯನು ಪಾಪರಹಿತನಾಗುವನು. ಅದಕ್ಕೂ ಪೂರ್ವದಲ್ಲಿ ಚತುರ್ಮುಖನಾದ ಬ್ರಹ್ಮನಿಂದ ಸ್ಥಾಪಿತನಾದ ನಾಲ್ಕು ಮುಖಗಳುಳ್ಳ ಲಿಂಗವೊಂದಿರುವುದು.

ತದ್ದಕ್ಷಿಣೇಽಟ್ಟಹಾಸಾಖ್ಯಂ ಲಿಂಗಂ ಸರ್ವಸುಖಪ್ರದಂ ।
ಪ್ರಸನ್ನವದನೇಶಾಖ್ಯಂ ಲಿಂಗಂ ತಸ್ಯೋತ್ತರೇ ಶುಭಂ ॥ ೩೦ ॥
ಪ್ರಸನ್ನವದನಸ್ತಿಷ್ಠೇದ್ಭಕ್ತಸ್ತದ್ದರ್ಶನಾಚ್ಛುಭಾತ್ ।
ತದುತ್ತರೇ ಪ್ರಸನ್ನೋದಂ ಕುಂಡಂ ನೈರ್ಮಲ್ಯದಂ ನೃಣಾಂ ॥ ೩೧ ॥
ಪ್ರತೀಚ್ಯಾಮಟ್ಟಹಾಸಸ್ಯ ಮಿತ್ರಾವರುಣನಾಮನೀ ।
ಲಿಂಗೇ ತಲ್ಲೋಕದೇ ಪೂಜ್ಯೇ ಮಹಾಪಾತಕಹಾರಿಣೀ ॥ ೩೨ ॥
ನೈಋರ್ತ್ಯಾಂ ಚಾಟ್ಟಹಾಸಸ್ಯ ವೃದ್ಧವಾಸಿಷ್ಠಸಂಜ್ಞಕಂ ।
ಲಿಂಗಂ ತತ್ಪೂಜನಾತ್ಪುಂಸಾಂ ಜ್ಞಾನಮುತ್ಪದ್ಯತೇ ಮಹತ್ ॥ ೩೩ ॥
ವಸಿಷ್ಠೇಶಸಮೀಪಸ್ಥಃ ಕೃಷ್ಣೇಶೋ ವಿಷ್ಣುಲೋಕದಃ ।
ತದ್ಯಾಮ್ಯಾಂ ಯಾಜ್ಞವಲ್ಕ್ಯೇಶೋ ಬ್ರಹ್ಮತೇಜೋವಿವರ್ಧನಃ ॥ ೩೪ ॥
ಪ್ರಹ್ಲಾದೇಶ್ವರಮಭ್ಯರ್ಚ್ಯ ತತ್ಪಶ್ಚಾದ್ಭಕ್ತಿವರ್ಧನಂ ।
ಸ್ವಯಂ ಲೀನಃ ಶಿವೋ ಯತ್ರ ಭಕ್ತಾನುಗ್ರಹಕಾಮ್ಯಯಾ ॥ ೩೫ ॥

---

೩೦. ಅದಕ್ಕೆ ದಕ್ಷಿಣದಲ್ಲಿರುವ ಅಟ್ಟಹಾಸವೆಂಬ ಹೆಸರಿನ ಲಿಂಗವು ಸಮಸ್ತ ಸೌಖ್ಯಗಳನ್ನು ಕೊಡುವುದಾಗಿರುವುದು. ಆ ಹಿರಣ್ಯಾಕ್ಷೇಶ್ವರನಿಗೆ ಉತ್ತರದಲ್ಲಿ ಪ್ರಸನ್ನವದನೇಶ್ವರವೆಂಬ ಪವಿತ್ರವಾದ ಲಿಂಗವಿರುವುದು.

೩೧. ಶುಭಪ್ರದವಾದ ಅದರ ದರ್ಶನದಿಂದ ಭಕ್ತನು ಯಾವಾಗಲೂ ಪ್ರಸನ್ನವಾದ ಮುಖವುಳ್ಳವನಾಗುವನು. ಅದಕ್ಕೆ ಉತ್ತರದಿಕ್ಕಿನಲ್ಲಿಯೇ ಮಾನವರಿಗೆ ಪಾರಿಶುದ್ಧ್ಯವನ್ನುಂಟುಮಾಡುವ ಪ್ರಸನ್ನೋದವೆಂಬ ಕೂಪ ಪೊಂದಿರುವುದು.

೩೨. ಅಟ್ಟಹಾಸೇಶ್ವರನಿಗೆ ಪಶ್ಚಿಮದಲ್ಲಿ ಮಿತ್ರಾವರುಣರ ಹೆಸರುಗಳುಳ್ಳ ಎರಡು ಲಿಂಗಗಳಿರುವುವು. ಅವುಗಳನ್ನು ಪೂಜಿಸಿದವರ ಮಹಾ ಪಾತಕಗಳನ್ನೂ ಕಳೆದು ಆ ದೇವತೆಗಳ ಲೋಕವನ್ನು ಸೇರಿಸುವುವು.

೩೩. ಅಟ್ಟಹಾಸೇಶ್ವರನಿಗೆ ನೈಋರ್ತ್ಯಮೂಲೆಯಲ್ಲಿ ವೃದ್ಧವಾಸಿಷ್ಠವೆಂಬ ಹೆಸರಿನ ಲಿಂಗವಿರುವುದು. ಅದನ್ನು ಪೂಜಿಸುವುದರಿಂದ ಮಾನವರಿಗೆ ಮಹತ್ತರವಾದ ಜ್ಞಾನವುಂಟಾಗುವುದು.

೩೪. ವಸಿಷ್ಠೇಶ್ವರನಿಗೆ ಸಮೀಪದಲ್ಲಿಯೇ ವಿಷ್ಣುಲೋಕಪ್ರದವಾದ ಕೃಷ್ಣೇಶ್ವರನಿರುವನು. ಆತನಿಗೆ ದಕ್ಷಿಣದಲ್ಲಿ ಬ್ರಹ್ಮತೇಜಸ್ಸನ್ನು ಅಭಿವೃದ್ಧಿಗೊಳಿಸುವ ಯಾಜ್ಞವಲ್ಕ್ಯೇಶ್ವರನಿರುವನು.

೩೫. ಅದಕ್ಕೆ ಹಿಂಭಾಗದಲ್ಲಿರುವ ಭಕ್ತಿವರ್ಧಕವಾದ ಪ್ರಹ್ಲಾದೇಶ್ವರನನ್ನು ಪೂಜಿಸಬೇಕು. ಭಕ್ತರಿಗೆ ಅನುಗ್ರಹವನ್ನು ಮಾಡುವ ಇಚ್ಛೆಯಿಂದ ಪರಮಶಿವನು ತಾನೇ ಬಂದು ಆ ಲಿಂಗದಲ್ಲಿ ಲೀನನಾಗಿರುವನು.

ಅತಃ ಸ್ವಲೀನಂ ತತ್ಪೂರ್ವೇ ಲಿಂಗಂ ಪೂಜ್ಯಂ ಪ್ರಯತ್ನತಃ ।
ಸದೈವ ಜ್ಞಾನನಿಷ್ಠಾನಾಂ ಪರಮಾನಂದಮಿಚ್ಛತಾಂ ।
ಯಾ ಗತಿರ್ವಿಹಿತಾ ತೇಷಾಂ ಸ್ವಲೀನೇ ಸಾ ತನುತ್ಯಜಾಂ ॥ ೩೬ ॥
ವೈರೋಚನೇಶ್ವರಂ ಲಿಂಗಂ ಸ್ವಲೀನಾತ್ಪುರತಃ ಸ್ಥಿತಂ ।
ತದುತ್ತರೇ ಬಲೀಶಂ ಚ ಮಹಾಬಲವಿವರ್ಧನಂ ॥ ೩೭ ॥
ತತ್ರೈವ ಲಿಂಗಂ ಬಾಣೇಶಂ ಪೂಜಿತಂ ಸರ್ವಕಾಮದಂ ।
ಚಂದ್ರೇಶ್ವರಸ್ಯ ಪೂರ್ವೇಣ ಲಿಂಗಂ ವಿದ್ಯೇಶ್ವರಾಭಿಧಂ ॥ ೩೮ ॥
ಸರ್ವಾ ವಿದ್ಯಾಃ ಪ್ರಸನ್ನಾಃ ಸ್ಯುಸ್ತಸ್ಯ ಲಿಂಗಸ್ಯ ಸೇವನಾತ್ ।
ತದ್ದಕ್ಷಿಣೇ ತು ವೀರೇಶೋ ಮಹಾಸಿದ್ಧಿವಿಧಾಯಕಃ ॥ ೩೯ ॥
ತತ್ರೈವ ವಿಕಟಾ ದೇವೀ ಸರ್ವದುಃಖೌಘಮೋಚಿನೀ ।
ಪಂಚಮುದ್ರಂ ಮಹಾಪೀಠಂ ತಜ್ಜ್ಞೇಯಂ ಸರ್ವಸಿದ್ಧಿದಂ ॥ ೪೦ ॥
ತತ್ರ ಜಪ್ತಾ ಮಹಾಮಂತ್ರಾಃ ಕ್ಷಿಪ್ರಂ ಸಿಧ್ಯಂತಿ ನಾನ್ಯಥಾ ।
ತತ್ಪೀಠೇ ವಾಯುಕೋಣೇ ತು ಸಂಪೂಜ್ಯಃ ಸಗರೇಶ್ವರಃ ॥ ೪೧ ॥

---

೩೬. ಆ ಲಿಂಗವು ಪ್ರಹ್ಲಾದೇಶ್ವರನಿಗೆ ಪೂರ್ವದಲ್ಲಿ ಸ್ವಲೀನೇಶ್ವರವೆಂದೇ ಪ್ರಸಿದ್ಧವಾಗಿರುವುದು. ಅದನ್ನು ಸಕಲರೂ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಯಾವಾಗಲೂ ಜ್ಞಾನನಿಷ್ಠೆಯಲ್ಲಿಯೇ ತತ್ಪರರಾಗಿ ಪರಮಾನಂದವನ್ನೇ ಬಯಸುತ್ತಿರುವವರಿಗೆ ಯಾವ ಸದ್ಗತಿಯು ಹೇಳಲ್ಪಟ್ಟಿರುವುದೊ, ಆ ಗತಿಯೇ ಸ್ವಲೀನೇಶ್ವರನ ಸನ್ನಿಧಿಯಲ್ಲಿ ದೇಹವನ್ನು ತ್ಯಜಿಸಿದವರಿಗೆ ಲಭಿಸುವುದು.

೩೭. ವೈರೋಚನೇಶ್ವರಲಿಂಗವು ಆ ಸ್ವಲೀನೇಶ್ವರನಿಗೆ ಇದಿರಾಗಿಯೇ ನೆಲಸಿರುವುದು. ಅದಕ್ಕೆ ಉತ್ತರದಲ್ಲಿ ಮಹಾಬಲವನ್ನು ಕೈಗೂಡಿಸುವ ಬಲೀಶ್ವರ ಲಿಂಗವಿರುವುದು.

೩೮. ಅಲ್ಲಿಯೇ ಇರುವ ಬಾಣೇಶ್ವರಲಿಂಗವನ್ನು ಪೂಜಿಸಲು ಸಕಲ ಮನೋಭೀಷ್ಟಗಳೂ ಸಿದ್ಧಿಸುವುವು. ಚಂದ್ರೇಶ್ವರನಿಗೆ ಪೂರ್ವದಲ್ಲಿ ವಿದ್ಯೇಶ್ವರನೆಂಬ ಹೆಸರಿನ ಲಿಂಗವೊಂದಿರುವುದು.

೩೯. ಆ ಲಿಂಗವನ್ನು ಸೇವಿಸುವುದರಿಂದ ಸಕಲ ವಿದ್ಯೆಗಳೂ ಕರಗತಗಳಾಗುವುವು. ಅದಕ್ಕೆ ದಕ್ಷಿಣದಲ್ಲಿರುವ ವೀರೇಶ್ವರನು ಸಕಲಕಾರ್ಯಗಳಲ್ಲಿಯೂ ಸಿದ್ಧಿಯನ್ನುಂಟುಮಾಡುವನು.

೪೦. ಸಮೀಪದಲ್ಲಿಯೇ ಸಮಸ್ತ ದುಃಖಸಮೂಹಗಳಿಂದ ಬಿಡಿಸುವ ವಿಕಟಾದೇವಿಯಿರುವಳು. ಆಕೆಯ ಮಹಾಪೀಠವು ಪಂಚಮುದ್ರವೆಂದು ಪ್ರಸಿದ್ಧವಾಗಿರುವುದು. ಅದು ಸಕಲ ಸಿದ್ಧಿಗಳನ್ನೂ ಕೊಡುವುದು.

೪೧. ಅಲ್ಲಿ ಯಾವ ಮಂತ್ರಗಳನ್ನು ಜಪಿಸಿದರೂ ಕ್ಷಿಪ್ರದಲ್ಲಿಯೇ ಸಿದ್ಧಿಸು

ತದ್ದಕ್ಷಿಣೇಽಟ್ಟಹಾಸಾಖ್ಯಂ ಲಿಂಗಂ ಸರ್ವಸುಖಪ್ರದಂ ।
ಪ್ರಸನ್ನವದನೇಶಾಖ್ಯಂ ಲಿಂಗಂ ತಸ್ಯೋತ್ತರೇ ಶುಭಂ ॥ ೩೦ ॥
ಪ್ರಸನ್ನವದನಸ್ತಿಷ್ಠೇದ್ಭಕ್ತಸ್ತದ್ದರ್ಶನಾಚ್ಛುಭಾತ್ ।
ತದುತ್ತರೇ ಪ್ರಸನ್ನೋದಂ ಕುಂಡಂ ನೈರ್ಮಲ್ಯದಂ ನೃಣಾಂ ॥ ೩೧ ॥
ಪ್ರತೀಚ್ಯಾಮಟ್ಟಹಾಸಸ್ಯ ಮಿತ್ರಾವರುಣನಾಮನೀ ।
ಲಿಂಗೇ ತಲ್ಲೋಕದೇ ಪೂಜ್ಯೇ ಮಹಾಪಾತಕಹಾರಿಣೀ ॥ ೩೨ ॥
ನೈಋರ್ತ್ಯಾಂ ಚಾಟ್ಟಹಾಸಸ್ಯ ವೃದ್ಧವಾಸಿಷ್ಠಸಂಜ್ಞಕಂ ।
ಲಿಂಗಂ ತತ್ಪೂಜನಾತ್ಪುಂಸಾಂ ಜ್ಞಾನಮುತ್ಪದ್ಯತೇ ಮಹತ್ ॥ ೩೩ ॥
ವಸಿಷ್ಠೇಶಸಮೀಪಸ್ಥಃ ಕೃಷ್ಣೇಶೋ ವಿಷ್ಣುಲೋಕದಃ ।
ತದ್ಯಾಮ್ಯಾಂ ಯಾಜ್ಞವಲ್ಕ್ಯೇಶೋ ಬ್ರಹ್ಮತೇಜೋವಿವರ್ಧನಃ ॥ ೩೪ ॥
ಪ್ರಹ್ಲಾದೇಶ್ವರಮಭ್ಯರ್ಚ್ಯ ತತ್ಪಶ್ಚಾದ್ಭಕ್ತಿವರ್ಧನಂ ।
ಸ್ವಯಂ ಲೀನಃ ಶಿವೋ ಯತ್ರ ಭಕ್ತಾನುಗ್ರಹಕಾಮ್ಯಯಾ ॥ ೩೫ ॥

---

೩೦. ಅದಕ್ಕೆ ದಕ್ಷಿಣದಲ್ಲಿರುವ ಅಟ್ಟಹಾಸವೆಂಬ ಹೆಸರಿನ ಲಿಂಗವು ಸಮಸ್ತ ಸೌಖ್ಯಗಳನ್ನು ಕೊಡುವುದಾಗಿರುವುದು. ಆ ಹಿರಣ್ಯಾಕ್ಷೇಶ್ವರನಿಗೆ ಉತ್ತರದಲ್ಲಿ ಪ್ರಸನ್ನವದನೇಶ್ವರವೆಂಬ ಪವಿತ್ರವಾದ ಲಿಂಗವಿರುವುದು.

೩೧. ಶುಭಪ್ರದವಾದ ಅದರ ದರ್ಶನದಿಂದ ಭಕ್ತನು ಯಾವಾಗಲೂ ಪ್ರಸನ್ನವಾದ ಮುಖವುಳ್ಳವನಾಗುವನು. ಅದಕ್ಕೆ ಉತ್ತರದಿಕ್ಕಿನಲ್ಲಿಯೇ ಮಾನವರಿಗೆ ಪಾರಿಶುದ್ಧ್ಯವನ್ನುಂಟುಮಾಡುವ ಪ್ರಸನ್ನೋದವೆಂಬ ಕೂಪ ವೊಂದಿರುವುದು.

೩೨. ಅಟ್ಟಹಾಸೇಶ್ವರನಿಗೆ ಪಶ್ಚಿಮದಲ್ಲಿ ಮಿತ್ರಾವರುಣರ ಹೆಸರುಗಳುಳ್ಳ ಎರಡು ಲಿಂಗಗಳಿರುವುವು. ಅವುಗಳನ್ನು ಪೂಜಿಸಿದವರ ಮಹಾ ಪಾತಕಗಳನ್ನೂ ಕಳೆದು ಆ ದೇವತೆಗಳ ಲೋಕವನ್ನು ಸೇರಿಸುವುವು.

೩೩. ಅಟ್ಟಹಾಸೇಶ್ವರನಿಗೆ ನೈಋರ್ತ್ಯಮೂಲೆಯಲ್ಲಿ ವೃದ್ಧವಾಸಿಷ್ಠವೆಂಬ ಹೆಸರಿನ ಲಿಂಗವಿರುವುದು. ಅದನ್ನು ಪೂಜಿಸುವುದರಿಂದ ಮಾನವರಿಗೆ ಮಹತ್ತರ ವಾದ ಜ್ಞಾನವುಂಟಾಗುವುದು.

೩೪. ವಸಿಷ್ಠೇಶ್ವರನಿಗೆ ಸಮೀಪದಲ್ಲಿಯೇ ವಿಷ್ಣುಲೋಕಪ್ರದವಾದ ಕೃಷ್ಣೇಶ್ವರನಿರುವನು. ಆತನಿಗೆ ದಕ್ಷಿಣದಲ್ಲಿ ಬ್ರಹ್ಮತೇಜಸ್ಸನ್ನು ಅಭಿವೃದ್ಧಿ ಗೊಳಿಸುವ ಯಾಜ್ಞವಲ್ಕ್ಯೇಶ್ವರನಿರುವನು.

೩೫. ಅದಕ್ಕೆ ಹಿಂಭಾಗದಲ್ಲಿರುವ ಭಕ್ತಿವರ್ಧಕವಾದ ಪ್ರಹ್ಲಾದೇಶ್ವರನನ್ನು ಪೂಜಿಸಬೇಕು. ಭಕ್ತರಿಗೆ ಅನುಗ್ರಹವನ್ನು ಮಾಡುವ ಇಚ್ಛೆಯಿಂದ ಪರಮ ಶಿವನು ತಾನೇ ಬಂದು ಆ ಲಿಂಗದಲ್ಲಿ ಲೀನನಾಗಿರುವನು.

ಅತಃ ಸ್ವಲೀನಂ ತತ್ಪೂರ್ವೇ ಲಿಂಗಂ ಪೂಜ್ಯಂ ಪ್ರಯತ್ನತಃ ।
ಸದೈವ ಜ್ಞಾನನಿಷ್ಠಾನಾಂ ಪರಮಾನಂದಮಿಚ್ಛತಾಂ ।
ಯಾ ಗತಿರ್ವಿಹಿತಾ ತೇಷಾಂ ಸ್ವಲೀನೇ ಸಾ ತನುತ್ಯಜಾಂ ॥ ೩೬ ॥
ವೈರೋಚನೇಶ್ವರಂ ಲಿಂಗಂ ಸ್ವಲೀನಾತ್ಪುರತಃ ಸ್ಥಿತಂ ।
ತದುತ್ತರೇ ಬಲೀಶಂ ಚ ಮಹಾಬಲವಿವರ್ಧನಂ ॥ ೩೭ ॥
ತತ್ರೈವ ಲಿಂಗಂ ಬಾಣೇಶಂ ಪೂಜಿತಂ ಸರ್ವಕಾಮದಂ ।
ಚಂದ್ರೇಶ್ವರಸ್ಯ ಪೂರ್ವೇಣ ಲಿಂಗಂ ವಿದ್ಯೇಶ್ವರಾಭಿಧಂ ॥ ೩೮ ॥
ಸರ್ವಾ ವಿದ್ಯಾಃ ಪ್ರಸನ್ನಾಃ ಸ್ಯುಸ್ತಸ್ಯ ಲಿಂಗಸ್ಯ ಸೇವನಾತ್ ।
ತದ್ದಕ್ಷಿಣೇ ತು ವೀರೇಶೋ ಮಹಾಸಿದ್ಧಿವಿಧಾಯಕಃ ॥ ೩೯ ॥
ತತ್ರೈವ ವಿಕಟಾ ದೇವೀ ಸರ್ವದುಃಖೌಘಮೋಚಿನೀ ।
ಪಂಚಮುದ್ರಂ ಮಹಾಪೀಠಂ ತಜ್ಜ್ಞೇಯಂ ಸರ್ವಸಿದ್ಧಿದಂ ॥ ೪೦ ॥
ತತ್ರ ಜಪ್ತಾ ಮಹಾಮಂತ್ರಾಃ ಕ್ಷಿಪ್ರಂ ಸಿಧ್ಯಂತಿ ನಾನ್ಯಥಾ ।
ತತ್ಪೀಠೇ ವಾಯುಕೋಣೇ ತು ಸಂಪೂಜ್ಯಃ ಸಗರೇಶ್ವರಃ ॥ ೪೧ ॥

---

೩೬. ಆ ಲಿಂಗವು ಪ್ರಹ್ಲಾದೇಶ್ವರನಿಗೆ ಪೂರ್ವದಲ್ಲಿ ಸ್ವಲೀನೇಶ್ವರವೆಂದೇ ಪ್ರಸಿದ್ಧವಾಗಿರುವುದು. ಅದನ್ನು ಸಕಲರೂ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಯಾವಾಗಲೂ ಜ್ಞಾನನಿಷ್ಠೆಯಲ್ಲಿಯೇ ತತ್ಪರರಾಗಿ ಪರಮಾನಂದವನ್ನೇ ಬಯಸುತ್ತಿರುವವರಿಗೆ ಯಾವ ಸದ್ಗತಿಯು ಹೇಳಲ್ಪಟ್ಟಿರುವುದೊ, ಆ ಗತಿಯೇ ಸ್ವಲೀನೇಶ್ವರನ ಸನ್ನಿಧಿಯಲ್ಲಿ ದೇಹವನ್ನು ತ್ಯಜಿಸಿದವರಿಗೆ ಲಭಿಸುವುದು.

೩೭. ವೈರೋಚನೇಶ್ವರಲಿಂಗವು ಆ ಸ್ವಲೀನೇಶ್ವರನಿಗೆ ಇದಿರಾಗಿಯೇ ನೆಲಸಿರುವುದು. ಅದಕ್ಕೆ ಉತ್ತರದಲ್ಲಿ ಮಹಾಬಲವನ್ನು ಕೈಗೂಡಿಸುವ ಬಲೀಶ್ವರ ಲಿಂಗವಿರುವುದು.

೩೮. ಅಲ್ಲಿಯೇ ಇರುವ ಬಾಣೇಶ್ವರಲಿಂಗವನ್ನು ಪೂಜಿಸಲು ಸಕಲ ಮನೋಭೀಷ್ಟಗಳೂ ಸಿದ್ಧಿಸುವುವು. ಚಂದ್ರೇಶ್ವರನಿಗೆ ಪೂರ್ವದಲ್ಲಿ ವಿದ್ಯೇಶ್ವರನೆಂಬ ಹೆಸರಿನ ಲಿಂಗವೊಂದಿರುವುದು.

೩೯. ಆ ಲಿಂಗವನ್ನು ಸೇವಿಸುವುದರಿಂದ ಸಕಲ ವಿದ್ಯೆಗಳೂ ಕರಗತಗಳಾಗುವುವು. ಅದಕ್ಕೆ ದಕ್ಷಿಣದಲ್ಲಿರುವ ವೀರೇಶ್ವರನು ಸಕಲಕಾರ್ಯಗಳಲ್ಲಿಯೂ ಸಿದ್ಧಿಯನ್ನುಂಟುಮಾಡುವನು.

೪೦. ಸಮೀಪದಲ್ಲಿಯೇ ಸಮಸ್ತ ದುಃಖಸಮೂಹಗಳಿಂದ ಬಿಡಿಸುವ ವಿಕಟಾದೇವಿಯಿರುವಳು. ಆಕೆಯ ಮಹಾಪೀಠವು ಪಂಚಮುದ್ರವೆಂದು ಪ್ರಸಿದ್ಧವಾಗಿರುವುದು. ಅದು ಸಕಲ ಸಿದ್ಧಿಗಳನ್ನೂ ಕೊಡುವುದು.

೪೧. ಅಲ್ಲಿ ಯಾವ ಮಂತ್ರಗಳನ್ನು ಜಪಿಸಿದರೂ ಕ್ಷಿಪ್ರದಲ್ಲಿಯೇ ಸಿದ್ಧಿಸು

ತದ್ದರ್ಶನಾದಶ್ವಮೇಧಫಲಂ ತ್ವವಿಕಲಂ ಭವೇತ್ ।
ತದೀಶಾನೇ ಚ ವಾಲೀಶಸ್ತಿರ್ಯಗ್ಯೋನಿನಿವಾರಕಃ ॥ ೪೨ ॥
ಮಹಾಪಾಪೌಘವಿಧ್ವಂಸೀ ಸುಗ್ರೀವೇಶಸ್ತದುತ್ತರೇ ।
ಹನೂಮದೀಶ್ವರಸ್ತತ್ರ ಬ್ರಹ್ಮಚರ್ಯಫಲಪ್ರದಃ ॥ ೪೩ ॥
ಮಹಾಬುದ್ಧಿಪ್ರದಸ್ತತ್ರ ಪೂಜ್ಯೋ ಜಾಂಬವತೀಶ್ವರಃ ।
ಆಶ್ವಿನೇಯೇಶ್ವರೌ ಪೂಜ್ಯೌ ಗಂಗಾಯಾಃ ಪಶ್ಚಿಮೇ ತಟೇ ॥ ೪೪ ॥
ತದುತ್ತರೇ ಭದ್ರಹ್ರದೋ ಗವಾಂ ಕ್ಷೀರೇಣ ಪೂರಿತಃ ।
ಕಪಿಲಾನಾಂ ಸಹಸ್ರೇಣ ಸಂಯಗ್ದತ್ತೇನ ಯತ್ಫಲಂ ।
ತತ್ಫಲಂ ಲಭತೇ ಮರ್ತ್ಯಃ ಸ್ನಾತೋ ಭದ್ರಹ್ರದೇ ಧ್ರುವಂ ॥ ೪೫ ॥
ಪೂರ್ವಾಭಾದ್ರಪದಾಯುಕ್ತಾ ಪೌರ್ಣಮಾಸೀ ಯದಾ ಭವೇತ್ ।
ತದಾ ಪುಣ್ಯತಮಃ ಕಾಲೋ ವಾಜಿಮೇಧಫಲಪ್ರದಃ ॥ ೪೬ ॥
ಹ್ರದಪಶ್ಚಿಮತೀರೇ ತು ಭದ್ರೇಶ್ವರವಿಲೋಕನಾತ್ ।
ಗೋಲೋಕಂ ಪ್ರಾಪ್ನುಯಾತ್ತಸ್ಮಾತ್ಪುಣ್ಯಾನ್ನೈವಾತ್ರ ಸಂಶಯಃ ॥ ೪೭ ॥

---

ವುವಲ್ಲದೆ ವ್ಯರ್ಥವಾಗಲಾರವು. ಆ ಪೀಠಕ್ಕೆ ವಾಯವ್ಯಮೂಲೆಯಲ್ಲಿಯೇ ಸಗರೇಶ್ವರನಿರುವನು. ಆತನನ್ನು ಎಲ್ಲರೂ ಪೂಜಿಸಬೇಕು.

೪೨. ಆ ಲಿಂಗದ ಪೂಜೆಯಿಂದ ಸಮಗ್ರವಾದ ಅಶ್ವಮೇಧದ ಫಲವು ಲಭಿಸುವುದು. ಅದಕ್ಕೆ ಈಶಾನ್ಯದಲ್ಲಿರುವ ವಾಲೀಶ್ವರನು ಸೇವಕರಿಗೆ ತಿರ್ಯಗ್ಯೋನಿಗಳಲ್ಲಿ ಜನ್ಮವಿಲ್ಲದಂತೆ ಮಾಡುವನು.

೪೩. ವಾಲೀಶ್ವರನಿಗೆ ಉತ್ತರದಲ್ಲಿ ಮಹಾಪಾತಕಕೋಟಿಗಳನ್ನೂ ನಾಶ ಗೊಳಿಸುವ ಸುಗ್ರೀವೇಶ್ವರನಿರುವನು. ಅಲ್ಲಿಯೇ ನೆಲಸಿರುವ ಹನುಮದೀಶ್ವರನು ಬ್ರಹ್ಮಚರ್ಯದ ಫಲವನ್ನು ಕೊಡುವನು.

೪೪. ಅಲ್ಲಿ ನೆಲಸಿರುವ ಜಾಂಬವತೀಶ್ವರನು ಮಹಾಬುದ್ಧಿಪ್ರದಾಯಕ ನಾಗಿರುವನು. ಆತನನ್ನು ಎಲ್ಲರೂ ಪೂಜಿಸಬೇಕು. ಗಂಗಾನದಿಯ ಪಶ್ಚಿಮ ತೀರದಲ್ಲಿರುವ ಎರಡು ಆಶ್ವಿನೇಯೇಶ್ವರಲಿಂಗಗಳನ್ನೂ ಪೂಜಿಸಬೇಕು.

೪೫. ಅವರಿಗೆ ಉತ್ತರದಲ್ಲಿ ಗೋಕ್ಷೀರಭರಿತವಾದ ಭದ್ರಹ್ರದವಿರುವುದು. ಆ ಭದ್ರಹ್ರದದಲ್ಲಿ ಸ್ನಾನವನ್ನು ಮಾಡಿದವನು ಒಂದು ಸಾವಿರ ಕಪಿಲೆ ಗೋವು ಗಳನ್ನು ಸತ್ಪಾತ್ರಗಳಲ್ಲಿ ದಾನಮಾಡಿದ ಫಲವನ್ನು ಪಡೆಯುವುದು ನಿಶ್ಚಯವು.

೪೬. ಪೂರ್ವಾಭಾದ್ರಪದಾನಕ್ಷತ್ರದೊಡಗೂಡಿದ ಹುಣ್ಣಿಮೆಯು ಪ್ರಾಪ್ತ ವಾಗಲು ಈ ಹ್ರದದಲ್ಲಿ ಸ್ನಾನವನ್ನು ಮಾಡುವುದಕ್ಕೆ ಪರಮಪುಣ್ಯಕಾಲವಾಗಿ ಅಶ್ವಮೇಧಯಜ್ಞದ ಫಲವನ್ನು ಕೊಡುವುದು.

೪೭. ತೀರ್ಥದ ಪಶ್ಚಿಮತೀರದಲ್ಲಿ ನೆಲಸಿರುವ ಭದ್ರೇಶ್ವರನನ್ನು ದರ್ಶನ

ಭದ್ರೇಶ್ವರಾದ್ಯಾತುಧಾನ್ಯಾಮುಪಶಾಂತಶಿವೋ ಮುನೇ ।
ತಸ್ಯ ಲಿಂಗಸ್ಯ ಸಂಸ್ಪರ್ಶಾತ್ಪರಾಂ ಶಾಂತಿಂ ಸಮೃಚ್ಛತಿ ॥ ೪೮ ॥
ಉಪಶಾಂತಶಿವಂ ಲಿಂಗಂ ದೃಷ್ಟ್ವಾ ಜನ್ಮಶತಾರ್ಜಿತಂ ।
ತ್ಯಜೇದಶ್ರೇಯಸೋ ರಾಶಿಂ ಶ್ರೇಯೋರಾಶಿಂ ಚ ವಿಂದತಿ ॥ ೪೯ ॥
ತದುತ್ತರೇ ಚ ಚಕ್ರೇಶೋ ಯೋನಿಚಕ್ರನಿವಾರಕಃ ।
ತದುತ್ತರೇ ಚಕ್ರಹ್ರದೋ ಮಹಾಪುಣ್ಯವಿವರ್ಧನಃ ॥ ೫೦ ॥
ಸ್ನಾತ್ವಾ ಚಕ್ರಹ್ರದೇ ಮರ್ತ್ಯಶ್ಚಕ್ರೇಶಂ ಪರಿಪೂಜ್ಯ ಚ ।
ಶಿವಲೋಕಮವಾಪ್ನೋತಿ ಭಾವಿತೇನಾಂತರಾತ್ಮನಾ ॥ ೫೧ ॥
ತನ್ನೈಋತೇ ಚ ಶೂಲೇಶೋ ದ್ರಷ್ಟವ್ಯಶ್ಚ ಪ್ರಯತ್ನತಃ ।
ಶೂಲಂ ತತ್ರ ಪುರಾ ನ್ಯಸ್ತಂ ಸ್ನಾನಾರ್ಥಂ ವರವರ್ಣಿನಿ ॥ ೫೨ ॥
ಹ್ರದಸ್ತತ್ರ ಸಮುತ್ಪನ್ನಃ ಶೂಲೇಶಸ್ಯಾಗ್ರತೋ ಮಹಾನ್ ॥ ೫೩ ॥

---

ಮಾಡುವುದರಿಂದ ಮಾನವನು ಪುಣ್ಯವಂತನಾಗಿ ಗೋಲೋಕವನ್ನು ಸೇರುವನೆಂಬುದರಲ್ಲಿ ಸಂದೇಹವೇ ಇಲ್ಲವು.

೪೮. ಮಹರ್ಷಿಯೆ! ಭದ್ರೇಶ್ವರನಿಗೆ ನೈಋತ್ಯಮೂಲೆಯಲ್ಲಿ ಉಪಶಾಂತ ಶಿವನಾಮಕವಾದ ಲಿಂಗವಿರುವುದು. ಆ ಲಿಂಗದ ಸ್ಪರ್ಶ, ಸೇವೆಗಳಿಂದ ಮಾನವನು ಸರ್ವೋತ್ತಮವಾದ ಮನಶ್ಶಾಂತಿಯನ್ನು ಪಡೆಯುವನು.

೪೯. ಉಪಶಾಂತಶಿವಮಹಾಲಿಂಗವನ್ನು ನೋಡಲು ಭಕ್ತನು ನೂರು ಜನ್ಮಗಳಲ್ಲಿ ಸಂಪಾದಿಸಿರುವ ಪಾಪಗಳ ರಾಶಿಯನ್ನು ದೂರಗೊಳಿಸಿಕೊಳ್ಳುವನಲ್ಲದೆ, ವಿಪುಲವಾದ ಶ್ರೇಯಸ್ಸನ್ನೂ ಸಂಪಾದಿಸುವನು.

೫೦. ಅದಕ್ಕೆ ಉತ್ತರದಲ್ಲಿರುವ ಚಕ್ರೇಶ್ವರನು ಭಗವದ್ಭಕ್ತರ ಸಂಸಾರ ಪರಂಪರೆಯನ್ನು ನಿವಾರಿಸುವನು. ಆ ಲಿಂಗಕ್ಕೆ ಉತ್ತರದಲ್ಲಿಯೇ ಮಹಾ ಪುಣ್ಯ ಪುಂಜವನ್ನು ಹೆಚ್ಚಿಸುವ ಚಕ್ರಹ್ರದವಿರುವುದು.

೫೧. ಯಾವ ಮಾನವನೇ ಆದರೂ ಚಕ್ರಹ್ರದದಲ್ಲಿ ಸ್ನಾನವನ್ನು ಮಾಡಿ ಚಕ್ರೇಶ್ವರನನ್ನು ಚೆನ್ನಾಗಿ ಪೂಜಿಸಲು ಪರಿಶುದ್ಧವಾದ ಮನಸ್ಸುಳ್ಳವನಾಗಿ ಶಿವ ಲೋಕವನ್ನು ಸೇರುವನು.

೫೨. ಆ ಚಕ್ರೇಶ್ವರನಿಗೆ ನೈಋತ್ಯದಲ್ಲಿರುವ ಶೂಲೇಶ್ವರನನ್ನು ಪ್ರತಿ ಮಾನವನೂ ಪ್ರಯತ್ನಪೂರ್ವಕವಾಗಿ ನೋಡಬೇಕು. ಎಲೌ ಪಾರ್ವತಿಯೆ! ಹಿಂದೆ ನಾನು ಸ್ನಾನಮಾಡಲು ಹೋಗಿದ್ದಾಗ ಅಲ್ಲಿ ನನ್ನ ಶೂಲವನ್ನು ನೆಟ್ಟಿದ್ದೆನು.

೫೩. ಆಗಲೇ ಶೂಲೇಶ್ವರನ ಸಮ್ಮುಖದಲ್ಲಿ ವಿಶಾಲವಾದ ಹ್ರದವು ಉತ್ಪನ್ನ ವಾಯಿತು.

ಸ್ನಾನಂ ಕೃತ್ವಾ ಹ್ರದೇ ತತ್ರ ದೃಷ್ಟ್ವಾ ಶೂಲೇಶ್ವರಂ ವಿಭುಂ ।
ರುದ್ರಲೋಕಂ ನರಾ ಯಾಂತಿ ತ್ಯಕ್ತ್ವಾ ಸಂಸಾರಗಹ್ವರಂ ॥ ೫೪ ॥
ತತ್ಪೂರ್ವತೋ ನಾರದೇನ ತಪಸ್ತಪ್ತಂ ಮಹತ್ತರಂ ।
ಲಿಂಗಂ ಚ ಸ್ಥಾಪಿತಂ ಶ್ರೇಷ್ಠಂ ಕುಂಡಂ ಚಾಪಿ ಶುಭಂ ಕೃತಂ ॥ ೫೫ ॥
ತತ್ರ ಕುಂಡೇ ನರಃ ಸ್ನಾತ್ವಾ ದೃಷ್ಟ್ವಾ ವೈ ನಾರದೇಶ್ವರಂ ।
ಸಂಸಾರಾಬ್ಧಿಂ ಮಹಾಘೋರಂ ಸಂತರೇನ್ನಾತ್ರ ಸಂಶಯಃ ॥ ೫೬ ॥
ನಾರದೇಶ್ವರಪೂರ್ವೇಣ ದೃಷ್ಟ್ವಾಽವಭ್ರಾತಕೇಶ್ವರಂ ।
ನಿರ್ಮಲಾಂ ಗತಿಮಾಪ್ನೋತಿ ಪಾಪೌಘಂ ಚ ವಿಮುಂಚತಿ ॥ ೫೭ ॥
ತದಗ್ರೇ ತಾಮ್ರಕುಂಡಂ ಚ ತತ್ರ ಸ್ನಾತೋ ನ ಗರ್ಭಭಾಕ್ ।
ವಿಘ್ನಹರ್ತಾ ಗಣಾಧ್ಯಕ್ಷಸ್ತದ್ವಾಯವ್ಯೇ ಸುವಿಘ್ನಹೃತ್ ॥ ೫೮ ॥
ತತ್ರ ವಿಘ್ನಹರಂ ಕುಂಡಂ ತತ್ರ ಸ್ನಾತೋ ನ ವಿಘ್ನಭಾಕ್ ।
ಅನಾರಕೇಶ್ವರಂ ಲಿಂಗಂ ತದುದಗ್ದಿಶಿ ಚೋತ್ತಮಂ ॥ ೫೯ ॥

---

೫೪. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಲೋಕೇಶ್ವರನಾದ ಶೂಲೇಶ್ವರನನ್ನು ನೋಡಲು ಮನುಷ್ಯರು ಅಜ್ಞಾನವೆಂಬ ಗುಹೆಯಿಂದ ಹೊರಕ್ಕೆ ಬಂದು ರುದ್ರಲೋಕಕ್ಕೆ ತೆರಳುವರು.

೫೫. ಅದಕ್ಕೆ ಪೂರ್ವದಲ್ಲಿ ನಾರದಮುನಿಯು ಮಹತ್ತರವಾದ ತಪಸ್ಸನ್ನು ಆಚರಿಸಿದ ಪ್ರದೇಶವಿರುವುದು. ಅಲ್ಲಿ ಆತನು ಉತ್ತಮವಾದ ಲಿಂಗವೊಂದನ್ನು ಪ್ರತಿಷ್ಠಿಸಿ ಪುಣ್ಯಪ್ರದವಾದ ತೀರ್ಥವನ್ನೂ ನಿರ್ಮಿಸಿದನು.

೫೬. ಆ ಕುಂಡದಲ್ಲಿ ಸ್ನಾನವನ್ನು ಮಾಡಿ ನಾರದೇಶ್ವರಲಿಂಗದ ದರ್ಶನವನ್ನು ತೆಗೆದುಕೊಂಡರೆ ಮಾನವನು ಮಹಾಘೋರವಾದ ಸಂಸಾರವೆಂಬ ಸಮುದ್ರವನ್ನು ಕಡೆಹಾಯುವುದರಲ್ಲಿ ಸಂಶಯವೇ ಇಲ್ಲವು.

೫೭. ನಾರದೇಶ್ವರನಿಗೆ ಪೂರ್ವದಿಕ್ಕಿನಲ್ಲಿ ಅವಭ್ರಾತಕೇಶ್ವರನಿರುವನು. ಆತನನ್ನು ನೋಡಿದವನು ಉತ್ತಮವಾದ ಗತಿಯನ್ನು ಪಡೆಯುವನಲ್ಲದೆ ಪಾಪಸಮೂಹವನ್ನೂ ಕಳೆದುಕೊಳ್ಳುವನು.

೫೮. ಅದರ ಇದಿರಾಗಿಯೇ ತಾಮ್ರಕುಂಡವಿರುವುದು. ಅದರಲ್ಲಿ ಸ್ನಾನವನ್ನು ಮಾಡಿದವನು ಪುನಃ ಗರ್ಭವಾಸಕ್ಕೆ ಭಾಗಿಯಾಗುವುದಿಲ್ಲ. ಆ ತಾಮ್ರಕುಂಡಕ್ಕೆ ವಾಯವ್ಯದಲ್ಲಿ ಭಕ್ತರ ಮಹಾ ವಿಘ್ನಗಳನ್ನೂ ನಾಶಮಾಡುವ ವಿಘ್ನಹರ್ತೃವೆಂಬ ಗಣಾಧ್ಯಕ್ಷನಿರುವರು.

೫೯. ಈತನ ಸನ್ನಿಧಿಯಲ್ಲಿರುವ ವಿಘ್ನಹರವೆಂಬ ಕುಂಡದಲ್ಲಿ ಸ್ನಾನವನ್ನು ಮಾಡಿದವನಿಗೆಂದಿಗೂ ವಿಘ್ನಗಳುಂಟಾಗಲಾರವು. ಅದಕ್ಕೆ ಉತ್ತರದಿಕ್ಕಿನಲ್ಲಿ ಉತ್ತಮವಾದ ಅನಾರಕೇಶ್ವರವೆಂಬ ಲಿಂಗವಿರುವುದು.

ಕುಂಡಂ ಚಾನಾರಕಾಖ್ಯಂ ವೈ ತತ್ರ ಸ್ನಾತೋ ನ ನಾರಕೀ ।
ವರಣಾಯಾಸ್ತಟೇ ರಮ್ಯೇ ವರಣೇಶಸ್ತದುತ್ತರೇ ॥ ೬೦ ॥
ತತ್ರ ಪಾಶುಪತಃ ಸಿದ್ಧಸ್ತ್ವಕ್ಷಪಾದೋ ಮಹಾಮುನೇ ।
ಅನೇನೈವ ಶರೀರೇಣ ಶಾಶ್ವತಂ ಸಿದ್ಧಿಮಾಗತಃ ॥ ೬೧ ॥
ತತ್ಪಶ್ಚಿಮೇ ಚ ಶೈಲೇಶಃ ಪರನಿರ್ವಾಣಕಾಮದಃ ।
ಕೋಟೀಶ್ವರಂ ತು ತದ್ಯಾಮ್ಯಾಂ ಲಿಂಗಂ ಶಾಶ್ವತಸಿದ್ಧಿದಂ ॥ ೬೨ ॥
ಕೋಟಿತೀರ್ಥೇ ಹ್ರದೇ ಸ್ನಾತ್ವಾ ಕೋಟೀಶಂ ಪರಿಪೂಜ್ಯ ಚ ।
ಗವಾಂ ಕೋಟಿಪ್ರದಾನಸ್ಯ ಫಲಮಾಪ್ನೋತಿ ಮಾನವಃ ॥ ೬೩ ॥
ಮಹಾಶ್ಮಶಾನಸ್ತಂಭೋಽಸ್ತಿ ಕೋಟೀಶಾದ್ವಹ್ನಿದಿಕ್ಸ್ಥಿತಃ ।
ತಸ್ಮಿನ್ಸ್ತಂಭೇ ಮಹಾರುದ್ರಸ್ತಿಷ್ಠತೇ ಚೋಮಯಾ ಸಹ ॥ ೬೪ ॥
ತಂ ಸ್ತಂಭಂ ಸಮಲಂಕೃತ್ಯ ನರಸ್ತತ್ಪದಮಾಪ್ನುಯಾತ್ ।
ತತ್ರೈವ ತೀರ್ಥಂ ಪರಮಂ ಕಪಾಲೇಶಸಮೀಪತಃ ॥ ೬೫ ॥

---

೬೦. ಅನಾರಕವೆಂಬ ಕುಂಡವೂ ಅಲ್ಲಿಯೇ ಇರುವುದು. ಅದರಲ್ಲಿ ಸ್ನಾನವನ್ನು ಮಾಡಲು ಮಾನವನು ನರಕಭಾಜನನಾಗುವುದಿಲ್ಲ. ಅದಕ್ಕೂ ಉತ್ತರಕ್ಕೆ ವರಣಾನದಿಯ ತೀರದಲ್ಲಿ ವರಣೇಶ್ವರಲಿಂಗವಿರುವುದು.

೬೧. ಮಹರ್ಷಿಯೆ! ಅಲ್ಲಿಯೇ ಶೈವದೀಕ್ಷೆಯನ್ನು ಕೈಕೊಂಡ ಅಕ್ಷಪಾದನು ಸಿದ್ಧಿಯನ್ನು ಹೊಂದಿದನು. ಅವನು ಪಾರ್ಥಿವದೇಹದೊಡನೆಯೇ ಶಾಶ್ವತವಾದ ಪದವಿಯನ್ನು ಪಡೆದನು.

೬೨. ಆ ಸನ್ನಿಧಿಗೆ ಪಶ್ಚಿಮದಲ್ಲಿ ನಿರ್ವಾಣವನ್ನೂ, ಅಭೀಷ್ಟಗಳನ್ನೂ ಕೊಡುವ ಶೈಲೇಶ್ವರನಿರುವನು. ಆತನಿಗೆ ದಕ್ಷಿಣದಲ್ಲಿ ಶಾಶ್ವತೈಶ್ವರ್ಯಪ್ರದವಾದ ಕೋಟೀಶ್ವರಮಹಾಲಿಂಗವಿರುವುದು.

೬೩. ಕೋಟಿತೀರ್ಥದಲ್ಲಿ ಸ್ನಾನವನ್ನು ಮಾಡಿ ಕೋಟೀಶ್ವರನನ್ನು ಭಕ್ತಿಯಿಂದ ಪೂಜಿಸಿದ ಮಾನವನು ಒಂದು ಕೋಟಿ ಗೋವುಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುವನು.

೬೪. ಕೋಟೀಶ್ವರನಿಗೆ ಆಗ್ನೇಯದಲ್ಲಿ ಮಹಾಶ್ಮಶಾನಸ್ತಂಭವಿರುವುದು. ಆ ಸ್ತಂಭದಲ್ಲಿ ಮಹಾದೇವನೇ ಪಾರ್ವತೀದೇವಿಯೊಡನೆ ಸನ್ನಿಹಿತನಾಗಿರುವನು. ಆ ಸ್ತಂಭಕ್ಕೆ ಅಲಂಕಾರಗಳನ್ನು ಮಾಡಿದ ಮನುಜನು ಕೈಲಾಸಪದವನ್ನೇ ಪಡೆಯುವನು.

೬೫. ಅಲ್ಲಿಯೇ ಕಪಾಲೇಶ್ವರನ ಸಮೀಪದಲ್ಲಿ ಸರ್ವೋತ್ತಮವಾದ ತೀರ್ಥವೊಂದಿರುವುದು. ಅದಕ್ಕೆ ಕಪಾಲಮೋಚನವೆಂದು ಹೆಸರು. ಅಲ್ಲಿ ಸ್ನಾನಮಾಡಿದವನು ಅಶ್ವಮೇಧಯಜ್ಞವನ್ನು ಮಾಡಿದ ಪುಣ್ಯಕ್ಕೆ ಭಾಗಿಯಾಗುವನು.

ಕಪಾಲಮೋಚನಂ ನಾಮ ತತ್ರ ಸ್ನಾತೋಽಶ್ವಮೇಧಭಾಕ್ ।
ಋಣಮೋಚನತೀರ್ಥಂ ತು ತದುದಗ್ದಿಶಿ ಶೋಭನಂ ॥ ೬೬ ॥
ತತ್ರ ತೀರ್ಥೇ ನರಃ ಸ್ನಾತ್ವಾ ಮುಕ್ತೋ ಭವತಿ ಚರ್ಣತಃ ।
ತತ್ರೈವಾಂಗಾರಕಂ ತೀರ್ಥಂ ಕುಂಡಂ ಚಾಂಗಾರನಿರ್ಮಲಂ ॥ ೬೭ ॥
ಸ್ನಾತ್ವಾಂಗಾರಕತೀರ್ಥೇ ತು ಭವೇದ್ಭೂಯೋ ನ ಗರ್ಭಭಾಕ್ ।
ಅಂಗಾರವಾರಯುಕ್ತಾಯಾಂ ಚತುರ್ಥ್ಯಾಂ ಸ್ನಾತಿ ಯೋ ನರಃ ।
ವ್ಯಾಧಿಭಿರ್ನಾಭಿಭೂಯೇತ ನ ಚ ದುಃಖೀ ಕದಾಚನ ॥ ೬೮ ॥
ವಿಶ್ವಕರ್ಮೇಶ್ವರಂ ಲಿಂಗಂ ಜ್ಞಾನದಂ ಚ ತದುತ್ತರೇ ।
ಮಹಾಮುಂಡೇಶ್ವರಂ ಲಿಂಗಂ ತಸ್ಯ ದಕ್ಷಿಣತಃ ಶುಭಂ ॥ ೬೯ ॥
ಕೂಪಃ ಶುಭೋದನಾಮಾಪಿ ಸ್ನಾತವ್ಯಂ ತತ್ರ ನಿಶ್ಚಿತಂ ।
ತತ್ರ ಮುಂಡಮಯೀ ಮಾಲಾ ಮಯಾ ಕ್ಷಿಪ್ತಾತಿಶೋಭನಾ ॥ ೭೦ ॥
ಮಹಾಮುಂಡಾ ತತೋ ದೇವೀ ಸಮುತ್ಪನ್ನಾಘಹಾರಿಣೀ ।
ಖಟ್ವಾಂಗಂ ಚ ಧೃತಂ ತತ್ರ ಖಟ್ವಾಂಗೇಶಸ್ತತೋಽಭವತ್ ॥ ೭೧ ॥

---

೬೬. ಅದಕ್ಕೆ ಉತ್ತರದಲ್ಲಿ ಪರಮಪವಿತ್ರವಾದ ಋಣಮೋಚನತೀರ್ಥವಿರುವುದು. ಆ ತೀರ್ಥದಲ್ಲಿ ನರನು ಸ್ನಾನವನ್ನು ಮಾಡಲು ಸಕಲ ಋಣಗಳಿಂದಲೂ ಕ್ಷಿಪ್ರದಲ್ಲಿಯೇ ಮುಕ್ತನಾಗುವನು.

೬೭. ಅದರ ಸಮೀಪದಲ್ಲಿಯೇ ಬೆಂಕಿಯಂತೆ ನಿರ್ಮಲವಾದ ಅಂಗಾರಕತೀರ್ಥವೆಂಬ ಕುಂಡವಿರುವುದು. ಈ ಅಂಗಾರಕ ತೀರ್ಥದಲ್ಲಿ ಸ್ನಾನಮಾಡಿದವನು ಪುನಃ ಗರ್ಭವಾಸವನ್ನನುಭವಿಸುವುದಿಲ್ಲ.

೬೮. ಯಾವ ಮಾನವನು ಚತುರ್ಥೀತಿಥಿಯೊಡಗೂಡಿದ ಮಂಗಳವಾರದ ದಿವಸ ಅದರಲ್ಲಿ ಸ್ನಾನವನ್ನು ಮಾಡುವನೊ, ಅವನಿಗೆಂದಿಗೂ ರೋಗಗಳು ಸಂಭವಿಸುವುದಿಲ್ಲ. ಅವನು ದುಃಖಕ್ಕೆ ಭಾಗಿಯಾಗಲಾರನು.

೬೯. ಆ ತೀರ್ಥಕ್ಕೆ ಉತ್ತರದಲ್ಲಿ ಜ್ಞಾನದಾಯಕವೆನಿಸಿದ ವಿಶ್ವಕರ್ಮೇಶ್ವರವೆಂಬ ಲಿಂಗವಿರುವುದು. ದಕ್ಷಿಣಕ್ಕೆ ಪವಿತ್ರವಾದ ಮಹಾಮುಂಡೇಶ್ವರಲಿಂಗವು ನೆಲಸಿರುವುದು.

೭೦. ಆ ಲಿಂಗದ ಸಮೀಪದಲ್ಲಿ ಶುಭೋದಕವೆಂಬ ಹೆಸರಿನ ಕೂಪವಿರುವುದು. ಅಲ್ಲಿ ನಿಶ್ಚಯವಾಗಿಯೂ ಮೀಯಬೇಕು. ಎಲೌ ಪಾರ್ವತಿಯೆ! ಅಲ್ಲಿಯೇ ನಾನೊಮ್ಮೆ ನನ್ನ ಆಭರಣೋತ್ತಮವಾದ ಮುಂಡಮಾಲೆಯನ್ನು ಬಿಸುಟೆನು.

೭೧. ದೇವಿಯೆ! ಅದರಿಂದಲೇ ಪಾಪಪರಿಹಾರಕಳಾದ ಮಹಾ ಮುಂಡಾದೇವಿಯು ಉದ್ಭವಿಸಿದಳು. ನಾನು ಖಟ್ವಾಂಗವೆಂಬ ಆಯುಧವನ್ನು ಅಲ್ಲಿ ಧರಿಸಿದುದರಿಂದ ಅಲ್ಲಿರುವ ಲಿಂಗಕ್ಕೆ ಖಟ್ವಾಂಗೇಶ್ವರವೆಂಬುದಾಗಿ ಹೆಸರಾಯಿತು

ನಿಷ್ಪಾಪೋ ಜಾಯತೇ ಮರ್ತ್ಯಃ ಖಟ್ವಾಂಗೇಶವಿಲೋಕನಾತ್ ।
ಭುವನೇಶಸ್ತತೋ ಯಾಮ್ಯಾಂ ಕುಂಡಂ ಚ ಭುವನೇಶ್ವರಂ ॥ ೭೨ ॥
ತತ್ರ ಕುಂಡೇ ನರಃ ಸ್ನಾತೋ ಭುವನೇಶೋ ಭವೇನ್ನರಃ ।
ತದ್ಯಾಮ್ಯಾಂ ವಿಮಲೇಶಶ್ಚ ಕುಂಡಂ ಚ ವಿಮಲೋದಕಂ ॥ ೭೩ ॥
ತತ್ರ ಸ್ನಾತ್ವಾ ವಿಲೋಕ್ಯೇಶಂ ವಿಮಲೋ ಜಾಯತೇ ನರಃ ।
ತತ್ರ ಪಾಶುಪತಃ ಸಿದ್ಧಸ್ತ್ರ್ಯಂಬಕೋ ನಾಮ ನಾಮತಃ ॥ ೭೪ ॥
ಅನೇನೈವ ಶರೀರೇಣ ರುದ್ರಲೋಕಮವಾಪ್ತವಾನ್ ।
ಭೃಗೋರಾಯತನಂ ತಸ್ಯ ಪಶ್ಚಿಮೇಽತೀವ ಪುಣ್ಯದಂ ॥ ೭೫ ॥
ವಿಧಿಪೂರ್ವಂ ತದಭ್ಯರ್ಚ್ಯ ಪ್ರಾಪ್ನುಯಾಚ್ಛಿವಮಂದಿರಂ ।
ಶುಭೇಶ್ವರಶ್ಚ ತದ್ಯಾಮ್ಯಾಂ ಮಹಾಶುಭಫಲಪ್ರದಃ ॥ ೭೬ ॥
ತತ್ರ ಸಿದ್ಧಃ ಪಾಶುಪತಃ ಕಪಿಲರ್ಷಿರ್ಮಹಾತಪಾಃ ।
ತತ್ರಾಸ್ತಿ ಹಿ ಗುಹಾ ರಮ್ಯಾ ಕಪಿಲೇಶ್ವರಸಂನಿಧೌ ॥ ೭೭ ॥

---

೭೨. ಖಟ್ವಾಂಗೇಶ್ವರನ ದರ್ಶನಮಾತ್ರದಿಂದ ಮನುಷ್ಯನು ಪಾಪಲೇಪ ರಹಿತನಾಗುವನು. ಅದಕ್ಕೆ ದಕ್ಷಿಣದಲ್ಲಿ ಭುವನೇಶ್ವರಲಿಂಗವೂ ಭುವನೇಶ್ವರ ಕುಂಡವೂ ನೆಲಸಿರುವುವು.

೭೩. ಆ ಕುಂಡದಲ್ಲಿ ಸ್ನಾನವನ್ನು ಮಾಡಿದ ನರನು ಲೋಕೇಶ್ವರನಾಗುವನು. ಅದಕ್ಕೂ ದಕ್ಷಿಣದಲ್ಲಿ ವಿಮಲೇಶ್ವರಲಿಂಗವೂ ವಿಮಲೋದಕವೆಂಬ ಕುಂಡವೂ ಇರುವುವು.

೭೪. ಅದರಲ್ಲಿ ಸ್ನಾನವನ್ನು ಮಾಡಿ ವಿಮಲೇಶ್ವರನನ್ನು ನೋಡಿದವನು ನಿಷ್ಕಲ್ಮಷನಾಗುವನು. ಅಲ್ಲಿ ಮಹೇಶ್ವರದೀಕ್ಷೆಯನ್ನು ಕೈಗೊಂಡ ತ್ರ್ಯಂಬಕನೆಂಬುವನು ತಪಸ್ಸಿದ್ಧಿಯನ್ನು ಪಡೆದನು.

೭೫. ಅಲ್ಲದೆ ಅವನು ಈ ಪಾಂಚಭೌತಿಕದೇಹದೊಡನೆಯೇ ರುದ್ರಲೋಕಕ್ಕೆ ಹೋಗಿ ಸೇರಿದನು. ಆ ವಿಮಲೇಶ್ವರನಿಗೆ ಪಶ್ಚಿಮದಲ್ಲಿ ಅತ್ಯಂತ ಪುಣ್ಯಪ್ರದವಾದ ಭೃಗ್ವಾಶ್ರಮವಿರುವುದು.

೭೬. ಅಲ್ಲಿರುವ ಭೃಗ್ವೀಶ್ವರ ಮಹಾ ಲಿಂಗವನ್ನು ವಿಧ್ಯುಕ್ತವಿಧಾನಗಳಿಂದ ಪೂಜಿಸಿದ ಮಾನವನು ಶಿವನ ಅರಮನೆಯನ್ನು ಸೇರುವನು. ಆ ಲಿಂಗಕ್ಕೆ ದಕ್ಷಿಣದಲ್ಲಿ ಸಮಸ್ತ ಶುಭಫಲಗಳನ್ನು ಕೊಡುವವನಾದ ಶುಭೇಶ್ವರನಿರುವನು.

೭೭. ಅಲ್ಲಿಯೇ ಮಹಾಶೈವನೂ, ಮಹಾತಪಸ್ವಿಯೂ ಆದ ಕಪಿಲ ಮಹರ್ಷಿಯು ತಪಸ್ಸಿದ್ಧಿಯನ್ನು ಪಡೆದನು. ಆ ಕಪಿಲೇಶ್ವರನ ಸನ್ನಿಧಿಯಲ್ಲಿ ಮನೋಹರವಾದ ಗುಹೆಯೊಂದಿರುವುದು.

ತಾಂ ಗುಹಾಂ ಪ್ರವಿಶೇದ್ಯೋ ವೈ ನ ಸ ಗರ್ಭೇ ವಿಶೇತ್ಕ್ವಚಿತ್ ।
ತತ್ರ ಯಜ್ಞೋದಕೂಪೋಽಸ್ತಿ ವಾಜಿಮೇಧಫಲಪ್ರದಃ ॥ ೭೮ ॥
ಓಂಕಾರ ಏಷ ಏವಾಸೌ ವಾರಿವರ್ಣಮಯಾತ್ಮಕಃ ।
ಮತ್ಸ್ಯೋದರ್ಯುತ್ತರೇ ಕೂಲೇ ನಾದೇಶಸ್ತ್ವಹಮೇವ ಚ ॥ ೭೯ ॥
ನಾದೇಶಃ ಪರಮಂ ಬ್ರಹ್ಮ ನಾದೇಶಃ ಪರಮಾ ಗತಿಃ ।
ನಾದೇಶಃ ಪರಮಂ ಸ್ಥಾನಂ ದುಃಖ ಸಂಸಾರಮೋಚನಂ ॥ ೮೦ ॥
ಕದಾಚಿತ್ತಸ್ಯ ದೇವಸ್ಯ ದರ್ಶನೇ ಯಾತಿ ಜಾಹ್ನವೀ ।
ಮತ್ಸ್ಯೋದರೀ ಸಾ ಕಥಿತಾ ಸ್ನಾನಂ ಪುಣ್ಯೈರವಾಪ್ಯತೇ ॥ ೮೧ ॥
ಮತ್ಸ್ಯೋದರೀ ಯದಾ ಗಂಗಾ ಪಶ್ಚಿಮೇ ಕಪಿಲೇಶ್ವರಂ ।
ಸಮಾಯಾತಿ ಮಹಾದೇವಿ ತದಾ ಯೋಗಃ ಸುದುರ್ಲಭಃ ॥ ೮೨ ॥
ಉದ್ದಾಲಕೇಶ್ವರಂ ಲಿಂಗಮುದೀಚ್ಯಾಂ ಕಪಿಲೇಶ್ವರಾತ್ ।
ತದ್ದರ್ಶನೇನ ಸಂಸಿದ್ಧಿಃ ಪರಾ ಸರ್ವೈರವಾಪ್ಯತೇ ॥ ೮೩ ॥

---

೭೮. ಆ ಗುಹೆಯನ್ನು ಪ್ರವೇಶಿಸಿದವನು ಪುನಃ ಎಂದಿಗೂ ಗರ್ಭವನ್ನು ಪ್ರವೇಶಿಸುವುದಿಲ್ಲ. ಅಲ್ಲಿಯೇ ಅಶ್ವಮೇಧಯಜ್ಞದ ಫಲವನ್ನು ಕೊಡುವ ಯಜ್ಞೋದನಾಮಕವಾದ ಕೂಪವೂ ಇರುವುದು.

೭೯. ಈ ಕೂಪವೇ ಅಕಾರ, ಉಕಾರ, ಮಕಾರಗಳಿಂದ ಕೂಡಿದ ಪ್ರಣವದ ಸ್ವರೂಪವುಳ್ಳದ್ದಾಗಿರುವುದು. ಮತ್ಸ್ಯೋದರಿಯ ಉತ್ತರತೀರದಲ್ಲಿ ನಾನೇ ನಾದೇಶ್ವರನಾಗಿ ನೆಲಸಿರುವೆನು.

೮೦. ನಾದೇಶ್ವರನೇ ಪ್ರರಬ್ರಹ್ಮವು; ಆತನೇ ಉತ್ತಮಗತಿಯು; ಆತನೇ ಪರಮಪ್ರಾಪ್ಯವಾದ ಸ್ಥಾನವು; ದುಃಖಮಯವಾದ ಸಂಸಾರದಿಂದ ಬಿಡಿಸುವವನೂ ಅವನೇ ಆಗಿರುವನು.

೮೧. ಒಮ್ಮೊಮ್ಮೆ ಗಂಗೆಯೂ ಸಹ ಆ ದೇವದೇವನ ದರ್ಶನವನ್ನು ಮಾಡಲು ಬರುವಳು. ಆಗ ಆಕೆಗೆ ಮತ್ಸ್ಯೋದರಿಯೆಂದು ಹೆಸರು. ಆ ಸಮಯದಲ್ಲಿ ಗಂಗಾಸ್ನಾನವು ಪುಣ್ಯವಂತರಿಗೆ ಮಾತ್ರ ಲಭಿಸುವುದು.

೮೨. ಎಲೌ ಪಾರ್ವತಿಯೆ! ಗಂಗೆಯು ಯಾವಾಗ ತನಗೆ ಪಶ್ಚಿಮದಿಕ್ಕಿನಲ್ಲಿರುವ ಕಪಿಲೇಶ್ವರನನ್ನು ಸಮೀಪಿಸಿ ಮತ್ಸ್ಯೋದರಿಯೆನಿಸುವುದೊ, ಆ ಸಮಯವು ಅತ್ಯಂತ ದುರ್ಲಭವಾದುದು.

೮೩. ಕಪಿಲೇಶ್ವರನಿಗೆ ಉತ್ತರದಿಕ್ಕಿನಲ್ಲಿ ಉದ್ದಾಲಕೇಶ್ವರಲಿಂಗವಿರುವುದು. ಆದರ ದರ್ಶನಮಾತ್ರದಿಂದ ಸಮಸ್ತಜನರೂ ಸಕಲಸಿದ್ಧಿಗಳನ್ನೂ ಉತ್ತಮರೀತಿಯಿಂದ ಪಡೆಯುವರು.

ತದುತ್ತರೇ ಬಾಷ್ಕುಲೀಶಂ ಲಿಂಗಂ ಸರ್ವಾರ್ಥಸಿದ್ಧಿದಂ ।
ಬಾಷ್ಕುಲೀಶಾದ್ದಕ್ಷಿಣತೋ ಲಿಂಗಂ ವೈ ಕೌಸ್ತುಭೇಶ್ವರಂ ॥ ೮೪ ॥
ತಸ್ಯಾರ್ಚನೇನ ರತ್ನೌಘೈರ್ನ ವಿಯುಜ್ಯೇತ ಕರ್ಹಿಚಿತ್ ।
ಶಂಕುಕರ್ಣೇಶ್ವರಂ ಲಿಂಗಂ ಕೌಸ್ತುಭೇಶ್ವರದಕ್ಷಿಣೇ ॥ ೮೫ ॥
ಸಂಸೇವ್ಯ ಪರಮಂ ಜ್ಞಾನಂ ಲಭೇದದ್ಯಾಪಿ ಸಾಧಕಃ ।
ಅಘೋರೇಶೋ ಗುಹಾದ್ವಾರಿ ಕೂಪಸ್ತಸ್ಯೋತ್ತರೇ ಶುಭಃ ॥ ೮೬ ॥
ಅಘೋರೋದ ಇತಿ ಖ್ಯಾತೋ ವಾಜಿಮೇಧಫಲಪ್ರದಃ ।
ಗರ್ಗೇಶೋ ದಮನೇಶಶ್ಚ ತತ್ರ ಲಿಂಗದ್ವಯಂ ಶುಭಂ ॥ ೮೭ ॥
ಅನೇನೈವೇಹ ದೇಹೇನ ಯತ್ರ ತೌ ಸಿದ್ಧಿಮಾಪತುಃ ।
ತಲ್ಲಿಂಗಯೋಃ ಸಮರ್ಚಾತಃ ಸಿದ್ಧಿರ್ಭವತಿ ವಾಂಛಿತಾ ॥ ೮೮ ॥
ತದ್ದಕ್ಷಿಣೇ ಮಹಾಕುಂಡಂ ರುದ್ರಾವಾಸ ಇತಿ ಸ್ಮೃತಂ ।
ತತ್ರ ರುದ್ರೇಶಮಭ್ಯರ್ಚ್ಯ ಕೋಟಿರುದ್ರಫಲಂ ಲಭೇತ್ ॥ ೮೯ ॥

---

೮೪. ಅದಕ್ಕೆ ಉತ್ತರದಲ್ಲಿ ಸಕಲಾಭೀಷ್ಟಪ್ರದವಾದ ಬಾಷ್ಕುಲೀಶ್ವರ ನಾಮಕವಾದ ಲಿಂಗವಿರುವುದು. ಆ ಬಾಷ್ಕುಲೀಶ್ವರನ ದಕ್ಷಿಣಕ್ಕೆ ಕೌಸ್ತುಭೇಶ್ವರವೆಂಬ ಲಿಂಗವಿರುವುದು.

೮೫. ಆ ಲಿಂಗವನ್ನು ಪೂಜಿಸುವುದರಿಂದ ಮಾನವನು ಎಂದಿಗೂ ನವರತ್ನಮಯವಾದ ಐಶ್ವರ್ಯದಿಂದ ವಿಹೀನನಾಗುವುದಿಲ್ಲ. ಕೌಸ್ತುಭೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ಶಂಕುಕರ್ಣೇಶ್ವರಲಿಂಗವಿರುವುದು.

೮೬. ಇಂದಿಗೂ ಸಹ ಆ ಶಂಕುಕರ್ಣೇಶ್ವರನನ್ನು ಸೇವಿಸಿದ ಸಾಧಕನು ಪರಮಜ್ಞಾನವನ್ನು ಪಡೆಯುವನು. ಗುಹಾದ್ವಾರದಲ್ಲಿ ಅಘೋರೇಶ್ವರನೂ ಆತನಿಗೆ ಉತ್ತರದಲ್ಲಿ ಶುಭಪ್ರದವಾದ ಕೂಪವೂ ಇರುವುವು.

೮೭. ಆ ಕೂಪಕ್ಕೆ ಅಘೋರೋದವೆಂದು ಪ್ರಖ್ಯಾತವಾದ ಹೆಸರಿರುವುದು. ಅದರಲ್ಲಿ ಮಾಡಿದ ಸ್ನಾನವು ಅಶ್ವಮೇಧಯಜ್ಞದ ಫಲವನ್ನು ಕೊಡುವುದು. ಅಲ್ಲಿಯೇ ಗರ್ಗೇಶ್ವರ, ದಮನೇಶ್ವರರೆಂಬ ಹೆಸರುಗಳಿಂದ ಪವಿತ್ರವಾದ ಲಿಂಗ ದ್ವಯವು ನೆಲಸಿರುವುದು.

೮೮. ಅಲ್ಲಿಯೇ ಗರ್ಗ ಮತ್ತು ದಮನರೆಂಬೀರ್ವರೂ ಪಾರ್ಥಿವದೇಹ ಗಳಿಂದಲೇ ಸಿದ್ಧಿಯನ್ನು ಪಡೆದರು. ಆ ಎರಡು ಲಿಂಗಗಳನ್ನು ಪೂಜಿಸುವುದರಿಂದ ಅಪೇಕ್ಷಿಸಿದ ಸಿದ್ಧಿಗಳೆಲ್ಲವೂ ಕೈಗೂಡುವುವು.

೮೯. ಅವುಗಳಿಗೆ ದಕ್ಷಿಣದಲ್ಲಿ ರುದ್ರಾವಾಸವೆಂದು ಕರೆಯಲ್ಪಡುವ ಮಹಾ ಕುಂಡವೊಂದಿರುವುದು. ಅಲ್ಲಿರುವ ರುದ್ರೇಶ್ವರನನ್ನು ಚೆನ್ನಾಗಿ ಪೂಜಿಸಿದವನು ಒಂದುಕೋಟಿಸಲ ಮಹಾರುದ್ರವನ್ನು ಜಪಿಸಿದ ಫಲವನ್ನು ಪಡೆಯುವನು.

ಚತುರ್ದಶೀ ಯದಾ ಪರ್ಣೇ ರುದ್ರನಕ್ಷತ್ರಸಂಯುತಾ ।
ತದಾ ಪುಣ್ಯತಮಃ ಕಾಲಸ್ತಸ್ಮಿನ್ಕುಂಡೇ ಮಹಾಫಲಃ ॥ ೯೦ ॥
ರುದ್ರಕುಂಡೇ ನರಃ ಸ್ನಾತ್ವಾ ದೃಷ್ಟ್ವಾ ರುದ್ರೇಶ್ವರಂ ವಿಭುಂ ।
ಯತ್ರ ತತ್ರ ಮೃತೋ ವಾಪಿ ರುದ್ರಲೋಕಮವಾಪ್ನುಯಾತ್ ॥ ೯೧ ॥
ರುದ್ರಸ್ಯ ನೈರ್ಋತೇ ಭಾಗೇ ಕುಂಡಂ ತತ್ರ ಮಹಾಲಯಂ ।
ತದಗ್ರೇ ಪಿತೃಕೂಪೋಽಸ್ತಿ ಪಿತೄಣಾಮಾಲಯಃ ಪರಃ ॥ ೯೨ ॥
ತತ್ರ ಶ್ರಾದ್ಧಂ ನರಃ ಕೃತ್ವಾ ಪಿಂಡಾನ್ಕೂಪೇ ಪರಿಕ್ಷಿಪೇತ್ ।
ಏಕವಿಂಶಕುಲೋಪೇತಃ ಶ್ರಾದ್ಧಕೃದ್ರುದ್ರಲೋಕಭಾಕ್ ॥ ೯೩ ॥
ತತ್ರ ವೈತರಣೀ ನಾಮ ದೀರ್ಘಿಕಾ ಪಶ್ಚಿಮಾನನಾ ।
ತಸ್ಯಾಂ ಸ್ನಾತೋ ನರೋ ದೇವಿ ನರಕಂ ನೈವ ಗಚ್ಛತಿ ॥ ೯೪ ॥
ಬೃಹಸ್ಪತೀಶ್ವರಂ ಲಿಂಗಂ ರುದ್ರಕುಂಡಾಚ್ಚ ಪಶ್ಚಿಮೇ ।
ಗುರುಪುಷ್ಯಸಮಾಯೋಗೇ ದೃಷ್ಟ್ವಾ ದಿವ್ಯಾಂ ಲಭೇದ್ಗಿರಂ ॥ ೯೫ ॥

---

೯೦. ಎಲೌ ಗಿರಿಜೆಯೆ ! ರುದ್ರತಾರೆಯಾದ ಆರ್ದ್ರಾನಕ್ಷತ್ರದಿಂದ ಕೂಡಿದ ಚತುರ್ದಶೀತಿಥಿಯು ಪ್ರಾಪ್ತವಾಗುವುದೇ ಪರಮಪುಣ್ಯಪ್ರದವಾದ ಸಮಯವು. ಆ ಸಮಯದಲ್ಲಿ ಆ ರುದ್ರೋದಕುಂಡದ ಸ್ನಾನವು ಮಹತ್ತರವಾದ ಫಲವನ್ನು ಕೊಡುವುದು.

೯೧. ರುದ್ರಕುಂಡದಲ್ಲಿ ಸ್ನಾನವನ್ನುಮಾಡಿ ಯಾವ ಮಾನವನು ಲೋಕೇಶ್ವರನಾದ ರುದ್ರೇಶ್ವರನನ್ನು ನೋಡುವನೊ, ಅವನು ಎಲ್ಲಿಯೇ ಮರಣವನ್ನು ಹೊಂದುವವನಾದರೂ ರುದ್ರಲೋಕವನ್ನೇ ಸೇರುವನು.

೯೨. ಆ ರುದ್ರೇಶ್ವರನ ನೈರ್ಋತ್ಯಭಾಗದಲ್ಲಿ ಮಹಾಲಯವೆಂಬ ಹೆಸರಿನ ಲಿಂಗವಿರುವುದು. ಅದರ ಸಮ್ಮುಖದಲ್ಲಿ ಪಿತೃದೇವತೆಗಳಿಗೆ ಪ್ರಿಯಾವಾಸವಾದ ಪಿತೃಕೂಪವಿರುವುದು.

೯೩. ಆ ಸ್ಥಳದಲ್ಲಿ ಮಾನವನು ಪಿತೃಶ್ರಾದ್ಧವನ್ನುಮಾಡಿ ಪಿಂಡಗಳನ್ನು ಆ ಕೂಪದಲ್ಲಿ ಪ್ರಕ್ಷೇಪಿಸಬೇಕು. ಅಂತಹನು ಇಪ್ಪತ್ತೊಂದು ಕುಲಗಳವರಿಗೂ ಶ್ರಾದ್ಧಗಳನ್ನು ಮಾಡಿದವನಾಗಿ ರುದ್ರಲೋಕದ ನಿವಾಸಕ್ಕೆ ಭಾಗಿಯಾಗುವನು.

೯೪. ಅಲ್ಲಿಯೇ ಪಶ್ಚಿಮಾಭಿಮುಖವಾಗಿ ಹರಿಯುತ್ತಿರುವ ವೈತರಣಿಯೆಂಬ ನದಿಯಿರುವುದು. ದೇವಿಯೆ ! ಅದರಲ್ಲಿ ಸ್ನಾನವನ್ನು ಮಾಡಿದ ನರನು ಎಂದಿಗೂ ನರಕಗಳನ್ನು ನೋಡುವುದಿಲ್ಲ.

೯೫. ರುದ್ರಕೂಪಕ್ಕೆ ಪಶ್ಚಿಮದಲ್ಲಿ ಬೃಹಸ್ಪತೀಶ್ವರಲಿಂಗವು ನೆಲಸಿರುವುದು. ಪುಷ್ಯನಕ್ಷತ್ರದೊಡಗೂಡಿದ ಗುರುವಾರದಲ್ಲಿ ಆ ಲಿಂಗವನ್ನು ನೋಡುವುದರಿಂದ ಅಮೋಘವಾದ ವಾಗ್ವೈಖರಿಯು ಲಭಿಸುವುದು.

ರುದ್ರಾವಾಸಾದ್ದಕ್ಷಿಣತಃ ಕಾಮೇಶಂ ಲಿಂಗಮುತ್ತಮಂ ।
ತದ್ದಕ್ಷಿಣೇ ಮಹಾಕುಂಡಂ ಸ್ನಾನಾಚ್ಚಿಂತಿತಕಾಮದಂ ॥ ೯೬ ॥
ಚೈತ್ರಶುಕ್ಲತ್ರಯೋದಶ್ಯಾಂ ತತ್ರ ಯಾತ್ರಾ ಚ ಕಾಮದಾ ।
ನಲಕೂಬರಲಿಂಗಂ ಚ ಪ್ರಾಚ್ಯಾಂ ಕಾಮೇಶ್ವರಾಚ್ಛುಭಂ ॥ ೯೭ ॥
ತದಗ್ರೇ ಪಾವನಃ ಕೂಪೋ ಧನಧಾನ್ಯಸಮೃದ್ಧಿದಃ ।
ನಲಕೂಬರಪೂರ್ವೇಣ ಸೂರ್ಯಾಚಂದ್ರಮಸೇಶ್ವರೌ ॥ ೯೮ ॥
ಅಜ್ಞಾನಧ್ವಾಂತಪಟಲೀಂ ಹರತಸ್ತೌ ಸಮರ್ಚಿತೌ ।
ತದ್ದಕ್ಷಿಣೇಽಧ್ವಕೇಶಶ್ಚ ದೃಷ್ಟೋ ಮೋಹವಿನಾಶನಃ ॥ ೯೯ ॥
ತತ್ರ ಸಿದ್ಧೀಶ್ವರಂ ಲಿಂಗಂ ಮಹಾಸಿದ್ಧಿಸಮರ್ಪಕಂ ।
ತತ್ರೈವ ಮಂಡಲೇಶಶ್ಚ ಮಂಡಲೇಶಫಲಪ್ರದಃ ॥ ೧೦೦ ॥
ಕಾಮಕುಂಡಸ್ಯ ಪೂರ್ವೇಣ ಚ್ಯವನೇಶಃ ಸಮೃದ್ಧಿದಃ ।
ತತ್ರೈವ ಸನಕೇಶಶ್ಚ ರಾಜಸೂಯಫಲಪ್ರದಃ ॥ ೧೦೧ ॥

---

೯೬. ರುದ್ರೇಶ್ವರನ ಆಲಯಕ್ಕೆ ದಕ್ಷಿಣದಲ್ಲಿ ಉತ್ತಮವಾದ ಕಾಮೇಶ್ವರ ಲಿಂಗವಿರುವುದು. ಅದಕ್ಕೆ ದಕ್ಷಿಣದಲ್ಲಿರುವ ಮಹಾಕುಂಡವು ಸ್ನಾನಮಾತ್ರ ದಿಂದಲೇ ಮನೋಭೀಷ್ಟಗಳೆಲ್ಲವನ್ನೂ ಕೈಗೂಡಿಸುವುದು.

೯೭. ಚೈತ್ರಮಾಸದ ಶುಕ್ಲ ತ್ರಯೋದಶಿಯಲ್ಲಿ ಅಲ್ಲಿ ಮಾಡುವ ಯಾತ್ರೆಯು ಇಷ್ಟಾರ್ಥದಾಯಕವೆನಿಸುವುದು. ಕಾಮೇಶ್ವರನಿಗೆ ಪೂರ್ವದಿಗ್ಭಾಗದಲ್ಲಿ ನಳಕೂಬರೇಶ್ವರಲಿಂಗವಿರುವುದು.

೯೮. ಅದರ ಇದಿರಿನಲ್ಲಿಯೇ ಧನಧಾನ್ಯಗಳ ಸಮೃದ್ಧಿಯನ್ನುಂಟುಮಾಡುವ ಪವಿತ್ರವಾದ ಕೂಪವೊಂದಿರುವುದು. ನಲಕೂಬರೇಶ್ವರನಿಗೆ ಪೂರ್ವದಲ್ಲಿ ಸೂರ್ಯೇಶ್ವರ, ಚಂದ್ರೇಶ್ವರರಿರುವರು.

೯೯. ಭಕ್ತಿಯಿಂದ ಪೂಜೆಗೊಂಡ ಅವರು ಮನುಷ್ಯರ ಅಜ್ಞಾನವೆಂಬ ಕಗ್ಗತ್ತಲೆಯೊತ್ತನ್ನು ನಾಶಗೊಳಿಸುವರು. ಆ ಎರಡು ಲಿಂಗಗಳಿಗೆ ದಕ್ಷಿಣದಲ್ಲಿ ಅಧ್ವಕೇಶ್ವರನಿರುವನು. ಅವನ ಸಂದರ್ಶನಮಾತ್ರದಿಂದಲೇ ಮೋಹವು ಕೊನೆಗಾಣುವುದು.

೧೦೦. ಅಲ್ಲಿ ಮಹಾಸಿದ್ಧಿಗಳನ್ನು ಕೈಗೂಡಿಸುವ ಸಿದ್ಧೀಶ್ವರಲಿಂಗವಿರುವುದು. ಅಲ್ಲಿಯೇ ಚಕ್ರವರ್ತಿಪದವಿಯನ್ನು ಅನುಗ್ರಹಿಸುವ ಮಹಿಮೆಯುಳ್ಳ ಮಂಡಲೇಶ್ವರನೂ ಇರುವನು.

೧೦೧. ಕಾಮಕುಂಡಕ್ಕೆ ಪೂರ್ವದಲ್ಲಿರುವ ಚ್ಯವನೇಶ್ವರನು ಸಂಪತ್ಸಮೃದ್ಧಿಯನ್ನು ಕೊಡುವವನಾಗಿರುವನು. ಅಲ್ಲಿಯೇ ದರ್ಶನದಿಂದಲೇ ರಾಜಸೂಯ ಮಹಾಯಾಗದ ಪುಣ್ಯವನ್ನು ದೊರಕಿಸಿಕೊಡುವ ಸನಕೇಶ್ವರನೂ ಇರುವನು.

ಸನತ್ಕುಮಾರಲಿಂಗಂ ಚ ತತ್ಪಶ್ಚಾದ್ಯೋಗಸಿದ್ಧಿಕೃತ್ ।
ತದುತ್ತರೇ ಸನಂದೇಶೋ ಮಹಾಜ್ಞಾನಸಮರ್ಥಕಃ ॥ ೧೦೨ ॥
ತದ್ಯಾಮ್ಯಾಮಾಹುತೀಶಶ್ಚ ದೃಷ್ಟೋ ಹೋಮಫಲಪ್ರದಃ ।
ತದ್ಯಾಮ್ಯಾಂ ಪುಣ್ಯಜನಕಂ ಲಿಂಗಂ ಪಂಚಶಿಖೇಶ್ವರಂ ॥ ೧೦೩ ॥
ಮಾರ್ಕಂಡೇಯಹ್ರದಸ್ತಸ್ಯ ಪಶ್ಚಿಮೇ ಪುಣ್ಯವರ್ಧನಃ ।
ತಸ್ಮಿನ್ಹ್ರದೇ ನರಃ ಸ್ನಾತ್ವಾ ಕಿಂ ಭೂಯಃ ಪರಿಶೋಚತಿ ॥ ೧೦೪ ॥
ತತ್ರ ಸ್ನಾನಂ ಚ ದಾನಂ ಚ ಭವೇದಕ್ಷಯಪುಣ್ಯದಂ ।
ತದುತ್ತರೇ ಚ ಕುಂಡೇಶಃ ಸರ್ವಸಿದ್ಧೈರ್ನಮಸ್ಕೃತಃ ॥ ೧೦೫ ॥
ದೀಕ್ಷಾಂ ಪಾಶುಪತೀಂ ಲಬ್ಧ್ವಾ ದ್ವಾದಶಾಬ್ದೇನ ಯತ್ಫಲಂ ।
ತತ್ಫಲಂ ಲಭತೇ ವಿಪ್ರ ಮರ್ತ್ಯಃ ಕುಂಡೇಶದರ್ಶನಾತ್ ॥ ೧೦೬ ॥
ಮಾರ್ಕಂಡೇಯಹ್ರದಾತ್ಪೂರ್ವಂ ಶಾಂಡಿಲ್ಯೇಶಃ ಸುಪುಣ್ಯದಃ ।
ತತ್ಪಶ್ಚಿಮೇ ಚ ಚಂಡೇಶಶ್ಚಂಡಾಂಶುಗ್ರಹಣಾಘಹೃತ್ ॥ ೧೦೭ ॥

---

೧೦೨. ಆ ಲಿಂಗಗಳಿಗೆ ಹಿಂಭಾಗದಲ್ಲಿ ಯೋಗಸಿದ್ಧಿಕಾರಕನಾದ ಸನತ್ಕುಮಾರೇಶ್ವರನಿರುವನು. ಆತನಿಗೆ ಉತ್ತರದಲ್ಲಿ ಮಹಾಜ್ಞಾನವನ್ನು ದೃಢಗೊಳಿಸುವ ಸನಂದೇಶ್ವರನು ನೆಲಸಿರುವನು.

೧೦೩. ಆತನಿಗೆ ದಕ್ಷಿಣದಲ್ಲಿ ಆಹುತೀಶ್ವರನಿರುವನು. ಆತನ ದರ್ಶನದಿಂದ ಹೋಮಫಲವು ಲಭಿಸುವುದು. ಆ ಲಿಂಗಕ್ಕೂ ದಕ್ಷಿಣದಲ್ಲಿ ಪಂಚಶಿಖೇಶ್ವರವೆಂಬ ಪುಣ್ಯಪ್ರಾಪಕವಾದ ಲಿಂಗವಿರುವುದು.

೧೦೪. ಆ ಲಿಂಗದ ಪಶ್ಚಿಮದಿಕ್ಕಿನಲ್ಲಿ ಪುಣ್ಯವರ್ಧಕವಾದ ಮಾರ್ಕಂಡೇಯಹ್ರದವಿರುವುದು. ಆ ಹ್ರದದಲ್ಲಿ ಸ್ನಾನವನ್ನು ಮಾಡಿದ ಮಾನವನು ಮತ್ತೆ ಏಕೆ ಶೋಕಗೊಳ್ಳಬೇಕು ?

೧೦೫. ಅಲ್ಲಿ ಮಾಡಿದ ಸ್ನಾನವೂ, ದಾನವೂ ಅಕ್ಷಯಗುಣಿತವಾದ ಫಲವನ್ನು ಕೊಡುವುವು. ಆ ಹ್ರದದ ಉತ್ತರದಲ್ಲಿ ಸಮಸ್ತ ಸಿದ್ಧರಿಂದಲೂ ನಮಸ್ಕರಿಸಲ್ಪಡುವ ಕುಂಡೇಶ್ವರನಿರುವನು.

೧೦೬. ಎಲೈ ಬ್ರಾಹ್ಮಣೋತ್ತಮನೆ! ಹನ್ನೆರಡು ವರ್ಷದ ಉಗ್ರವಾದ ಪಾಶುಪತದೀಕ್ಷೆಯನ್ನು ಕೈಕೊಳ್ಳುವುದರಿಂದ ಯಾವ ಫಲವುಂಟೊ, ಅದನ್ನೇ ಮನುಷ್ಯನು ಕುಂಡೇಶ್ವರನ ದರ್ಶನದಿಂದ ಪಡೆಯುವನು.

೧೦೭. ಮಾರ್ಕಂಡೇಯ ತೀರ್ಥದ ಪೂರ್ವಕ್ಕೆ ಪುಣ್ಯಪ್ರದವಾದ ಶಾಂಡಿಲ್ಯೇಶ್ವರನಿರುವನು. ಆತನಿಗೆ ಪಶ್ಚಿಮದಲ್ಲಿ ಚಂಡೇಶ್ವರನು ನೆಲಸಿ ನೋಡುವವರ ಪಾತಕಗಳನ್ನು ಪರಿಹರಿಸುವುದರಲ್ಲಿ ಸೂರ್ಯಗ್ರಹಣಸಮಯಕ್ಕೆ ಸಮಾನನೆನಿಸಿರುವನು.

ದಕ್ಷಿಣೇ ಚ ಕಪಾಲೇಶಾತ್ಕುಂಡಂ ಶ್ರೀಕಂಠಸಂಜ್ಞಿತಂ ।
ತತ್ರ ಕುಂಡೇ ನರಃ ಸ್ನಾತ್ವಾ ದಾತಾ ಸ್ಯಾಚ್ಛ್ರೀಪ್ರಭಾವತಃ ॥ ೧೦೮ ॥
ಮಹಾಲಕ್ಷ್ಮೀಶ್ವರಂ ಲಿಂಗಂ ತಸ್ಯ ಕುಂಡಸ್ಯ ಸನ್ನಿಧೌ ।
ಮಹಾಲಕ್ಷ್ಮೀಂ ಸಮಭ್ಯರ್ಚ್ಯ ಸ್ನಾತಸ್ತತ್ಕುಂಡವಾರಿಷು ॥ ೧೦೯ ॥
ಚಾಮರಾಸಕ್ತಹಸ್ತಾಭಿರ್ದಿವ್ಯಸ್ತ್ರೀಭಿಶ್ಚ ವೀಜ್ಯತೇ ।
ಯದಾ ಮತ್ಸ್ಯೋದರೀಂ ಯಾಂತಿ ಸ್ವರ್ಗಲೋಕಾದ್ದಿವೌಕಸಃ ।
ತದಾ ತೇನೈವ ಮಾರ್ಗೇಣ ಯಾಂತಿ ಸ್ತ್ರೀಭಿರ್ವೃತಾಃ ಸುಖಂ ॥ ೧೧೦ ॥
ಸ್ವರ್ಗದ್ವಾರಮಥ ಖ್ಯಾತಂ ತತ್ಸ್ಥಾನಂ ಮುನಿಸತ್ತಮ ।
ತತ್ಕುಂಡ ದಕ್ಷಿಣೇ ಭಾಗೇ ಲಿಂಗಂ ಬ್ರಹ್ಮಪದಪ್ರದಂ ॥ ೧೧೧ ॥
ಗಾಯತ್ರೀಶ್ವರಸಾವಿತ್ರೀಶ್ವರೌ ಪೂಜ್ಯೌ ಪ್ರಯತ್ನತಃ ।
ಮತ್ಸ್ಯೋದರ್ಯಾಸ್ತಟೇ ರಮ್ಯೇ ಲಿಂಗಂ ಸತ್ಯವತೀಶ್ವರಂ ॥ ೧೧೨ ॥
ತಯೋಃ ಪೂರ್ವೇಣ ಸಂಪೂಜ್ಯಂ ತಪಃಶ್ರೀಪರಿವರ್ಧನಂ ।
ಉಗ್ರೇಶ್ವರಂ ಮಹಾಲಿಂಗಂ ಲಕ್ಷ್ಮೀಶಾತ್ಪೂರ್ವದಿಕ್ಸ್ಥಿತಂ ॥ ೧೧೩ ॥

---

೧೦೮. ಕಪಾಲೇಶ್ವರನಿಗೆ ದಕ್ಷಿಣದಲ್ಲಿ ಶ್ರೀಕಂಠನಾಮಕವಾದ ಕುಂಡವಿರುವುದು. ಆ ಕುಂಡದಲ್ಲಿ ಸ್ನಾನವನ್ನು ಮಾಡಿದ ಮಾನವನು ಮಹದೈಶ್ವರ್ಯ ಪ್ರಭಾವದಿಂದ ದಾನಿಯೆನಿಸುವನು.

೧೦೯. ಆ ಕುಂಡದ ಸಮ್ಮುಖದಲ್ಲಿಯೇ ಮಹಾಲಕ್ಷ್ಮೀಶ್ವರವೆಂಬ ಲಿಂಗವಿರುವುದು. ಆ ಕುಂಡದ ನೀರಿನಲ್ಲಿ ಮಿಂದು ಮಹಾಲಕ್ಷ್ಮೀಶ್ವರನನ್ನು ಪೂಜಿಸಲು ಮಾನವನು ಚಾಮರಹಸ್ತೆಯರಾದ ದಿವ್ಯಸ್ತ್ರೀಯರಿಂದ ವ್ಯಜನಸೇವೆಯನ್ನು ಪಡೆಯುವನು.

೧೧೦. ಸ್ವರ್ಗಲೋಕದಿಂದ ದೇವತೆಗಳು ಮತ್ಸ್ಯೋದರಿಯನ್ನು ಸೇವಿಸಲು ಬರುವಾಗ ತಮ್ಮ ಸ್ತ್ರೀಯರೊಡಗೂಡಿದವರಾಗಿ ಸಂತೋಷದಿಂದ ಈ ಮಾರ್ಗವಾಗಿಯೇ ಬಂದು ಹೋಗುವರು.

೧೧೧. ಮುನಿವರ್ಯನೆ! ಆದುದರಿಂದಲೇ ಆ ಸ್ಥಾನಕ್ಕೆ ಸ್ವರ್ಗದ್ವಾರವೆಂಬ ಹೆಸರು ಪ್ರಖ್ಯಾತವಾಗಿರುವುದು. ಆ ಕುಂಡಕ್ಕೆ ದಕ್ಷಿಣದಿಕ್ಕಿನಲ್ಲಿ ಬ್ರಹ್ಮಪದವಿಯನ್ನು ಹೊಂದಿಸುವ ಲಿಂಗವೊಂದಿರುವುದು.

೧೧೨. ಅಲ್ಲಿರುವ ಗಾಯತ್ರೀಶ್ವರ, ಸಾವಿತ್ರೀಶ್ವರರಿಬ್ಬರನ್ನೂ ಜನರು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಮತ್ಸ್ಯೋದರಿಯ ಮನೋಹರವಾದ ದಡದಲ್ಲಿಯೇ ಸತ್ಯವತೀಶ್ವರವೆಂಬ ಲಿಂಗವಿರುವುದು.

೧೧೩. ಗಾಯತ್ರೀಶ್ವರ, ಸಾವಿತ್ರೀಶ್ವರ ಲಿಂಗಗಳಿಗೆ ಪೂರ್ವದಲ್ಲಿ ತಪಸ್ಸಂಪತ್ತನ್ನು ಅಭಿವೃದ್ಧಿಗೊಳಿಸುವ ಒಂದು ಲಿಂಗವಿರುವುದು. ಉಗ್ರೇಶ್ವರವೆಂಬ ಈ ಮಹಾಲಿಂಗವು ಲಕ್ಷ್ಮೀಶ್ವರನಿಗೂ ಪೂರ್ವದಲ್ಲಿರುವುದು.

ಜಾತಿಸ್ಮರೋ ಭವೇನ್ಮರ್ತ್ಯಸ್ತಲ್ಲಿಂಗಸ್ಯ ಸಮರ್ಚನಾತ್ ।
ತದ್ದಕ್ಷಿಣೇ ಚೋಗ್ರಕುಂಡಂ ಸ್ನಾನಾತ್ಕನಖಲಾಧಿಕಂ ॥ ೧೧೪ ॥
ಕರವೀರೇಶ್ವರಂ ಲಿಂಗಂ ತಸ್ಯ ಕುಂಡಸ್ಯ ಪಶ್ಚಿಮೇ ।
ತಸ್ಯ ದರ್ಶನತಃ ಪುಂಸಾಂ ಜಾಯತೇ ರೋಗಸಂಕ್ಷಯಃ ॥ ೧೧೫ ॥
ತದ್ವಾಯವ್ಯೇ ಮರೀಚೀಶಂ ಕುಂಡಂ ಚಾಘೌಘನಾಶನಂ ।
ತತ್ಪಶ್ಚಾಚ್ಚೇಂದ್ರಕುಂಡಂ ಚ ಲಿಂಗಂ ಚೇಂದ್ರೇಶ್ವರಂ ಮುನೇ ॥ ೧೧೬ ॥
ಇಂದ್ರೇಶಾದ್ದಕ್ಷಿಣೇ ಭಾಗೇ ಶುಭಾ ಕರ್ಕೋಟವಾಪಿಕಾ ।
ತತ್ರ ವಾಪೀಜಲೇ ಸ್ನಾತ್ವಾ ದೃಷ್ಟ್ವಾ ಕರ್ಕೋಟಕೇಶ್ವರಂ ॥ ೧೧೭ ॥
ನಾಗಾನಾಮಾಧಿಪತ್ಯಂ ತು ಜಾಯತೇ ನಾತ್ರ ಸಂಶಯಃ ।
ತತ್ಪಶ್ಚಾದ್ದ್ರುಮಿಚಂಡೇಶೋ ಬ್ರಹ್ಮಹತ್ಯಾಹರೋ ಹರಃ ॥ ೧೧೮ ॥
ತದ್ದಕ್ಷಿಣೇ ಮಹಾಕುಂಡಂ ರುದ್ರಲೋಕಫಲಪ್ರದಂ ।
ತತ್ಪಶ್ಚಿಮೇ ಮಹಾಲಿಂಗಮಗ್ನೀಶ ಇತಿ ವಿಶ್ರುತಂ ॥ ೧೧೯ ॥

---

೧೧೪. ಆ ಲಿಂಗದ ಪೂಜೆಯನ್ನು ಮಾಡುವುದರಿಂದ ಮನುಷ್ಯನಿಗೆ ಪೂರ್ವಜನ್ಮಗಳ ಸ್ಮರಣೆಯುಂ ಲಭಿಸುವುದು. ಅದಕ್ಕೆ ದಕ್ಷಿಣದಲ್ಲಿ ಉಗ್ರಕುಂಡವಿರುವುದು. ಸ್ನಾನದಿಂದಲೇ ಪುಣ್ಯವನ್ನು ಪಡೆಯುವ ದೃಷ್ಟಿಯಿಂದ ಈ ಕುಂಡವು ಕನಖಲಕ್ಕಿಂತಲೂ ಹೆಚ್ಚಿನದಾಗಿರುವುದು.

೧೧೫. ಆ ಕುಂಡದ ಪಶ್ಚಿಮದಲ್ಲಿ ಕರವೀರೇಶ್ವರವೆಂಬ ಲಿಂಗವಿರುವುದು. ಅದನ್ನು ದರ್ಶನಮಾಡುವುದರಿಂದಲೇ ಮಾನವರಿಗೆ ಆಧಿವ್ಯಾಧಿಗಳ ನಾಶವುಂಟಾಗುವುದು.

೧೧೬. ಆ ಲಿಂಗದ ವಾಯುವ್ಯ ಮೂಲೆಯಲ್ಲಿ ಮರೀಚೇಶ್ವರ ಮಹಾಲಿಂಗವೂ ಪಾಪಕೋಟಿಗಳನ್ನು ನಿರ್ಮೂಲಗೊಳಿಸುವ ಮರೀಚಿಕುಂಡವೂ ಇರುವುವು. ಎಲೈ ಮುನೀಂದ್ರನೆ! ಅವುಗಳಿಗೆ ಹಿಂದುಗಡೆಯಲ್ಲಿ ಇಂದ್ರಕುಂಡವೂ ಇಂದ್ರೇಶ್ವರಲಿಂಗವೂ ಇರುವುವು.

೧೧೭–೧೧೮. ಇಂದ್ರೇಶ್ವರನಿಗೆ ದಕ್ಷಿಣದಲ್ಲಿ ಕರ್ಕೋಟವಾಪಿಯೆಂಬ ಪವಿತ್ರತೀರ್ಥವಿರುವುದು. ಆ ತೀರ್ಥದ ಜಲದಲ್ಲಿ ಸ್ನಾನವನ್ನು ಮಾಡಿ ಕರ್ಕೋಟಕೇಶ್ವರನ ದರ್ಶನವನ್ನು ಮಾಡಿದವನಿಗೆ ಸಮಸ್ತ ಸರ್ಪಗಳ ಮೇಲೆಯೂ ಅಧಿಕಾರವು ಲಭಿಸುವುದು. ಇದರಲ್ಲಿ ಸಂದೇಹವಿಲ್ಲ. ಆ ಲಿಂಗಕ್ಕೆ ಪಶ್ಚಿಮದಲ್ಲಿಯೇ ಬ್ರಹ್ಮಹತ್ಯೆಯನ್ನೂ ಹೋಗಲಾಡಿಸುವ ಮಹಿಮೆಯುಳ್ಳ ದ್ರುಮಿಚಂಡೇಶ್ವರನಿರುವನು.

೧೧೯. ಆ ಲಿಂಗದ ದಕ್ಷಿಣದಿಕ್ಕಿನಲ್ಲಿ ರುದ್ರಲೋಕವಾಸದ ಫಲವನ್ನು ಕೊಡುವ ಮಹಾಕುಂಡವೊಂದಿರುವುದು. ಅದಕ್ಕೂ ಪಶ್ಚಿಮದಲ್ಲಿ ಅಗ್ನೀಶ್ವರನೆಂದು ಪ್ರಖ್ಯಾತವಾದ ಮಹಾಲಿಂಗವಿರುವುದು.

ಆಗ್ನೇಯಂ ನಾಮ ಕುಂಡಂ ಚ ತತ್ಪೂರ್ವೇಽಗ್ನಿಸಲೋಕದಂ ।
ಆಗ್ನೇಯೇಶ್ವರತಃ ಪ್ರಾಚ್ಯಾಂ ಕುಂಡಂ ತದ್ದಕ್ಷಿಣೇ ಶುಭಂ ॥ ೧೨೦ ॥
ತತ್ರ ಕುಂಡೇ ನರಃ ಸ್ನಾತ್ವಾ ಸ್ವರ್ಗೇ ವಸತಿ ಪೂರ್ವಜೈಃ ।
ತತ್ಪ್ರಾಚ್ಯಾಂ ಬಾಲಚಂದ್ರೇಶಶ್ಚಂದ್ರಲೋಕಗತಿಪ್ರದಃ ॥ ೧೨೧ ॥
ಪರಿತೋ ಬಾಲಚಂದ್ರೇಶಂ ಗಣಲಿಂಗಾನ್ಯನೇಕಶಃ ।
ವಿಲೋಕ್ಯ ತಾನಿ ಲಿಂಗಾನಿ ಗಾಣಾಪತ್ಯಂ ಪದಂ ಲಭೇತ್ ॥ ೧೨೨ ॥
ಬಾಲಚಂದ್ರಸಮೀಪೇ ತು ಕೂಪಃ ಪಿತೃಗಣಪ್ರಿಯಃ ।
ತತ್ರ ಶ್ರಾದ್ಧಪ್ರದಃ ಸ್ನಾತ್ವಾ ಪಿತೄನ್ಸಪ್ತಾಽತ್ರ ತಾರಯೇತ್ ॥ ೧೨೩ ॥
ತದಂಧೋಃ ಪೂರ್ವತೋ ಲಿಂಗಂ ಪುಣ್ಯಂ ವಿಶ್ವೇಶ್ವರಾಹ್ವಯಂ ।
ವಿಶ್ವೇಶ್ವರಸ್ಯ ಪೂರ್ವೇಣ ವೃದ್ಧಕಾಲೇಶ್ವರೋ ಹರಃ ॥ ೧೨೪ ॥
ಕಾಲೋದೋ ನಾಮ ಕೂಪೋಽಸ್ತಿ ತದಗ್ರೇ ಸರ್ವರೋಗಹೃತ್ ।
ಯೈಸ್ತು ತತ್ರೋದಕಂ ಪೀತಂ ಸ್ತ್ರೀಭಿಃ ಪುಂಭಿಃ ಸ್ವಕರ್ಮಭಿಃ ॥ ೧೨೫ ॥

---

೧೨೦. ಅದಕ್ಕೆ ಪೂರ್ವದಲ್ಲಿ ಅಗ್ನಿಲೋಕಪ್ರಾಪಕವಾದ ಆಗ್ನೇಯ ಕುಂಡ ವಿರುವುದು. ಆಗ್ನೇಯೇಶ್ವರನಿಗೆ ಪೂರ್ವದಲ್ಲಿರುವ ಈ ಕುಂಡಕ್ಕೆ ದಕ್ಷಿಣದಲ್ಲಿ ಮತ್ತೊಂದು ಶುಭಕುಂಡವಿರುವುದು.

೧೨೧. ಅದರಲ್ಲಿ ಸ್ನಾನವನ್ನು ಮಾಡಿದ ನರನು ಪೂರ್ವಪಿತಾಮಹರೊಡನೆ ಸ್ವರ್ಗಲೋಕದಲ್ಲಿ ವಾಸಮಾಡುವನು. ಆ ಕುಂಡದ ಪೂರ್ವದಲ್ಲಿ ಚಂದ್ರಲೋಕ ಪ್ರಾಪ್ತಿಯನ್ನು ಅನುಗ್ರಹಿಸುವ ಬಾಲಚಂದೇಶ್ವರನಿರುವನು.

೧೨೨. ಈ ಬಾಲಚಂದೇಶ್ವರನ ಸುತ್ತಲೂ ಅಸಂಖ್ಯಾತಗಳಾದ ಅನೇಕ ಗಣಾಧಿಪರಿಂದ ಪ್ರತಿಷ್ಠಿತಗಳಾದ ಲಿಂಗಗಳಿರುವುವು. ಆ ಲಿಂಗಗಳ ದರ್ಶನ ವನ್ನು ಮಾಡುವುದರಿಂದ ರುದ್ರಗಣಗಳಲ್ಲಿ ಸ್ಥಾನವು ಲಭಿಸುವುದು.

೧೨೩. ಬಾಲಚಂದ್ರನ ಸಮೀಪದಲ್ಲಿ ಪಿತೃದೇವತೆಗಳಿಗೆ ಪ್ರಿಯವಾದ ಕೂಪ ವೊಂದಿರುವುದು. ಅಲ್ಲಿ ಸ್ನಾನವನ್ನು ಮಾಡಿ ಶ್ರಾದ್ಧಗಳನ್ನು ಮಾಡಿದವನು ಏಳು ತಲೆಗಳ ಪಿತೃಗಳನ್ನುದ್ಧರಿಸುವನು.

೧೨೪. ಆ ಕೂಪಕ್ಕೆ ಪೂರ್ವದಲ್ಲಿಯೇ ವಿಶ್ವೇಶ್ವರನೆಂದು ಪ್ರಸಿದ್ಧವಾದ ಪುಣ್ಯಲಿಂಗವಿರುವುದು. ವಿಶ್ವೇಶ್ವರನಿಗೆ ಪೂರ್ವದಲ್ಲಿ ವೃದ್ಧಕಾಲೇಶ್ವರನೆಂಬ ಹೆಸರಿನ ಲಿಂಗವಿರುವುದು.

೧೨೫–೧೨೬. ಆ ಲಿಂಗದ ಸಮ್ಮುಖದಲ್ಲಿ ಕಾಲೋದವೆಂಬ ಹೆಸರಿನ ಕೂಪವು ಸ್ನಾನಮಾಡುವವರ ಸಮಸ್ತ ರೋಗಗಳನ್ನೂ ಪರಿಹರಿಸುವುದು. ಸ್ತ್ರೀಯರಾಗಲಿ, ಪುರುಷರಾಗಲಿ—ತಮ್ಮ ಪೂರ್ವಾರ್ಜಿತಪುಣ್ಯದಿಂದ ಯಾರು ಆ ಕೂಪದ ನೀರನ್ನು ಕುಡಿಯುವರೊ, ಅವರಿಗೆ ನೂರು ಕೋಟಿಕಲ್ಪಗಳಾದರೂ

ನ ತೇಷಾಂ ಪರಿವರ್ತೋಽತ್ರ ಕಲ್ಪಕೋಟಿಶತೈರಪಿ ।
ತತ್ಪೀತ್ವಾ ಜನ್ಮಬಂಧೋತ್ಥಾದ್ಭಯಾನ್ಮುಚ್ಯೇತ ಮಾನವಃ ॥ ೧೨೬ ॥
ತತ್ರ ಕೂಪೇ ತು ಯದ್ದತ್ತಂ ದಾನಂ ಶಿವರತಾತ್ಮನಾಂ ।
ಸಂವರ್ತೇಽಪಿ ನ ತಸ್ಯಾಸ್ತಿ ನಾಶಃ ಕಲಶಸಂಭವ ॥ ೧೨೭ ॥
ಖಂಡಸ್ಫುಟಿಕಸಂಸ್ಕಾರಂ ತತ್ರ ಕುರ್ವಂತಿ ಯೇ ನರಃ ।
ತೇ ರುದ್ರಲೋಕಮಾಸಾದ್ಯ ಮೋದಂತೇ ಸುಖಿನಃ ಸದಾ ॥ ೧೨೮ ॥
ಕಾಲೇಶಾದ್ದಕ್ಷಿಣೇ ಭಾಗೇ ಮೃತ್ಯೇಶಸ್ತ್ವಪಮೃತ್ಯುಹೃತ್ ।
ಲಿಂಗಂ ದಕ್ಷೇಶ್ವರಾಹ್ವಂ ಚ ತತಃ ಕೂಪಾದುದಗ್ದಿಶಿ ॥ ೧೨೯ ॥
ಅಪರಾಧಸಹಸ್ರಂ ತು ನಶ್ಯೇತ್ತಸ್ಯ ಸಮರ್ಚನಾತ್ ॥ ೧೩೦ ॥
ಮಹಾಕಾಲೇಶಲಿಂಗಂ ಚ ದಕ್ಷೇಶಾತ್ಪೂರ್ವತೋ ಮಹತ್ ।
ಮಹಾಕುಂಡೇ ನರಃ ಸ್ನಾತ್ವಾ ಮಹಾಕಾಲಂ ತು ಯೋಽರ್ಚಯೇತ್ ॥
ಅರ್ಚಿತಂ ತೇನ ವೈ ತತ್ರ ಜಗದೇತಚ್ಚರಾಚರಂ ।
ಅಂತಕೇಶ್ವರಮಾಲೋಕ್ಯ ತದ್ಯಾಮ್ಯಾಂ ನಾಂತಕಸ್ಯ ಭೀಃ ॥ ೧೩೨ ॥

---

ಈ ಲೋಕದಲ್ಲಿ ಪುನರ್ಜನ್ಮವಿಲ್ಲ. ಆ ನೀರಿನ ಪಾನದಿಂದ ಮಾನವನು ಜನನ ಮರಣರೂಪವಾದ ಸಂಸಾರದ ಬಂಧನದ ಭಯದಿಂದ ಮುಕ್ತನಾಗುವನು.

೧೨೭. ಆ ಕೂಪದಲ್ಲಿ ಶಿವೈಕಮನಸ್ಕರಾದವರಿಗೆ ಯಾವ ದಾನವು ಕೊಡಲ್ಪಡುವುದೊ, ಆ ದಾನದ ಫಲವು ಮಹಾಪ್ರಳಯಕಾಲದಲ್ಲಿಯೂ ನಾಶವನ್ನು ಹೊಂದುವುದಿಲ್ಲವು.

೧೨೮. ಶಸ್ತ್ರಾಸ್ತ್ರಗಳಿಂದ ಮರಣವನ್ನು ಹೊಂದಿದವರಿಗೆ ಯಾವ ನರರು ಇಲ್ಲಿ ಉಚಿತ ಸಂಸ್ಕಾರಗಳನ್ನು ಮಾಡುವರೊ, ಅವರು ರುದ್ರಲೋಕವನ್ನು ಸೇರಿ ನಿರಂತರವಾದ ಸುಖವನ್ನನುಭವಿಸುತ್ತಿರುವರು.

೧೨೯. ಕಾಲೇಶ್ವರನ ದಕ್ಷಿಣಭಾಗದಲ್ಲಿ ಅಪಮೃತ್ಯುನಿವಾರಕನಾದ ಮೃತ್ಯ್ವೀಶ್ವರನಿರುವನು. ಆ ಕಾಲೋದಕೂಪದ ಉತ್ತರಕ್ಕೆ ದಕ್ಷೇಶ್ವರನಾಮಕವಾದ ಲಿಂಗವಿರುವುದು.

೧೩೦. ಆ ಲಿಂಗವನ್ನು ಪೂಜಿಸುವುದರಿಂದ ಮನುಷ್ಯನು ಮಾಡಿದ ಸಾವಿರಾರು ಅಪರಾಧಗಳೂ ನಾಶವಾಗುವುವು.

೧೩೧–೧೩೨. ದಕ್ಷೇಶ್ವರನಿಗೆ ಪೂರ್ವದಲ್ಲಿ ಮಹಾಮಹಿಮಾನ್ವಿತವಾದ ಮಹಾಕಾಲೇಶ್ವರಲಿಂಗವಿರುವುದು. ಆ ಲಿಂಗದ ಸಮ್ಮುಖದಲ್ಲಿರುವ ಮಹಾಕುಂಡದಲ್ಲಿ ಸ್ನಾನವನ್ನು ಮಾಡಿ ಯಾವ ಮಾನವನು ಮಹಾಕಾಲನನ್ನು ಪೂಜಿಸುವನೊ, ಅವನು ಒಂದೆಡೆಯಲ್ಲಿಯೇ ಚರಾಚರಾತ್ಮಕವಾದ ಈ ಬ್ರಹ್ಮಾಂಡವೆಲ್ಲ

ಹಸ್ತಿಪಾಲೇಶ್ವರಂ ಲಿಂಗಂ ತಸ್ಯ ದಕ್ಷಿಣತೋ ಮುನೇ ।
ತಸ್ಯ ಪೂಜನತೋ ಯಾತಿ ಪುಣ್ಯಂ ವೈ ಹಸ್ತಿದಾನಜಂ ॥ ೧೩೩ ॥
ತತ್ರೈರಾವತಕುಂಡಂ ಚ ಲಿಂಗಮೈರಾವತೇಶ್ವರಂ ।
ತಲ್ಲಿಂಗಮರ್ಚಯನ್ಮರ್ತ್ಯೋ ಧನಧಾನ್ಯಸಮೃದ್ಧಿಭಾಕ್ ॥ ೧೩೪ ॥
ತದ್ದಕ್ಷಿಣೇ ಶ್ರೇಯಸೇ ಚ ಲಿಂಗಂ ಸ್ಯಾನ್ಮಾಲತೀಶ್ವರಂ ।
ಹಸ್ತೀಶ್ವರಾದುತ್ತರೇ ತು ಜಯಂತೇಶೋ ಜಯಪ್ರದಃ ॥ ೧೩೫ ॥
ಬಂದೀಶ್ವರೋ ಮಹಾಕಾಲಕುಂಡಾದುತ್ತರತಃ ಶುಭಃ ।
ಬಂದಿಕುಂಡಂ ಚ ವಿಖ್ಯಾತಂ ವಾರಾಣಸ್ಯಾಂ ಮಹಾಘಹೃತ್ ॥ ೧೩೬ ॥
ತತ್ರ ಸ್ನಾನೇನ ದಾನೇನ ಶ್ರಾದ್ಧೇನಾಕ್ಷಯಮಶ್ನುತೇ ।
ಧನ್ವಂತರೀಶ್ವರಂ ಲಿಂಗಂ ಕುಂಡಂ ತನ್ನಾಮ ಚೈವ ಹಿ ॥ ೧೩೭ ॥
ತಸ್ಯ ಲಿಂಗಸ್ಯ ನಾಮಾನ್ಯತ್ಕುಂಡನಾಮಾನ್ಯದೇವ ಹಿ ।
ತುಂಗೇಶ್ವರಂ ಲಿಂಗನಾಮ ಕುಂಡಂ ವೈದ್ಯೇಶ್ವರಾಭಿಧಂ ॥ ೧೩೮ ॥

---

ವನ್ನೂ ಪೂಜಿಸಿದವನೆಂದು ತಿಳಿಯಬೇಕು. ಆ ಮಹಾಕಾಲೇಶ್ವರನಿಗೆ ದಕ್ಷಿಣದಲ್ಲಿ ನೆಲಸಿಗುವ ಅಂತಕೇಶ್ವರನನ್ನು ನೋಡಿದವರಿಗೆ ಯಮನ ಭಯವಿಲ್ಲ.

೧೩೩. ಅಗಸ್ತ್ಯಮುನಿಯೆ ! ಅಂತಕೇಶ್ವರನ ದಕ್ಷಿಣದಲ್ಲಿ ಹಸ್ತಿಪಾಲೇಶ್ವರ ಲಿಂಗವಿರುವುದು. ಅದನ್ನು ಪೂಜಿಸುವುದರಿಂದ ಗಜದಾನವನ್ನು ಮಾಡಿದ ಪುಣ್ಯವು ಲಭಿಸುವುದು.

೧೩೪. ಅಲ್ಲಿಯೇ ಐರಾವತಕುಂಡವೂ, ಐರಾವತೇಶ್ವರಲಿಂಗವೂ ಇರುವುವು. ಆ ಲಿಂಗವನ್ನು ಅರ್ಚಿಸಿದ ಮನುಷ್ಯನು ಧನಧಾನ್ಯಸಮೃದ್ಧಿಯುಳ್ಳವನಾಗುವನು.

೧೩೫. ಅವುಗಳಿಗೆ ದಕ್ಷಿಣದಲ್ಲಿ ಶ್ರೇಯಸ್ಕಾರಕವಾದ ಮಾಲತೀಶ್ವರ ಲಿಂಗವಿರುವುದು. ಹಸ್ತೀಶ್ವರನಿಗೆ ಉತ್ತರಭಾಗದಲ್ಲಿ ಕಾರ್ಯಜಯವನ್ನು ಕೊಡುವ ಜಯಂತೇಶ್ವರನಿರುವನು.

೧೩೬. ಮಹಾಕಾಲಕುಂಡಕ್ಕೆ ಉತ್ತರದಲ್ಲಿ ಶುಭಪ್ರದನಾದ ಬಂದೀಶ್ವರನಿರುವನು. ಅಲ್ಲಿಯೇ ಇಡೀ ಕಾಶಿಯಲ್ಲಿ ಪ್ರಸಿದ್ಧಿಯನ್ನು ಪಡೆದು ಮಹಾಪಾತಕಗಳನ್ನು ಕಳೆಯುತ್ತಿರುವ ಬಂದಿಕುಂಡವೂ ಇರುವುದು.

೧೩೭. ಅಲ್ಲಿ ಮಾಡಿದ ಸ್ನಾನವೂ, ದಾನವೂ, ಪಿತೃಶ್ರಾದ್ಧವೂ ಅನಂತ ಫಲದಾಯಕಗಳಾಗುವುವು. ಅಲ್ಲಿಯೇ ಧನ್ವಂತರೀಶ್ವರನೆಂಬ ಲಿಂಗವೂ ಅದೇ ಹೆಸರಿನ ಕುಂಡವೂ ಇರುವುವು.

೧೩೮. ಆ ಲಿಂಗಕ್ಕೂ ಆ ಕುಂಡಕ್ಕೂ ಬೇರೆ ಹೆಸರುಗಳೂ ಪ್ರಖ್ಯಾತಗಳಾಗಿರುವುವು. ಲಿಂಗಕ್ಕೆ ತುಂಗೇಶ್ವರವೆಂಬ ನಾಮವಿರುವುದು. ಕುಂಡವನ್ನು ವೈದ್ಯೇಶ್ವರಕುಂಡವೆಂದು ಕರೆಯುವರು.

ಸುಧಾಮಯ್ಯೋ ಮಹೌಷಧ್ಯಃ ಕ್ಷಿಪ್ತಾಸ್ತತ್ರ ಮಹಾಧಿಯಃ ।
ತತ್ಕುಂಡಸ್ನಾನತಸ್ತಸ್ಮಾತ್ತಲ್ಲಿಂಗಪರಿವೀಕ್ಷಣಾತ್ ।
ನಶ್ಯಂತಿ ವ್ಯಾಧಯಃ ಸರ್ವೇ ಸಹ ಪಾಪೈಃ ಸುದಾರುಣೈಃ ॥ ೧೩೯ ॥
ತದುತ್ತರೇ ಹಲೀಶೇಶಃ ಸರ್ವವ್ಯಾಧಿನಿಷೂದನಃ ।
ಶಿವೇಶ್ವರಃ ಶಿವಕರಸ್ತುಂಗನಾಮ್ನಶ್ಚ ದಕ್ಷಿಣೇ ॥ ೧೪೦ ॥
ಜಮದಗ್ನೀಶ್ವರಂ ಲಿಂಗಂ ಶಿವೇಶಾದ್ದಕ್ಷಿಣೇ ಶುಭಂ ।
ತತ್ಪಶ್ಚಿಮೇ ಭೈರವೇಶಃ ಕೂಪಸ್ತಸ್ಯೋತ್ತರೇ ಶುಭಃ ॥ ೧೪೧ ॥
ತದುದಸ್ಪರ್ಶಮಾತ್ರೇಣ ಸರ್ವಯಜ್ಞಫಲಂ ಲಭೇತ್ ।
ತತ್ಕೂಪಪಶ್ಚಿಮೇ ಭಾಗೇ ಸುಕೇಶೋ ಯೋಗಸಿದ್ಧಿದಃ ॥ ೧೪೨ ॥
ತನ್ನೈಋರ್ತ್ಯಾಂ ಚ ವ್ಯಾಸೇಶಃ ಕೂಪಶ್ಚ ವಿಮಲೋದಕಃ ।
ವ್ಯಾಸಕೂಪೇ ನರಃ ಸ್ನಾತ್ವಾ ತರ್ಪಯಿತ್ವಾ ಸುರಾನ್ಪಿತೄನ್ ॥ ೧೪೩ ॥
ಅಕ್ಷಯಂ ಲಭತೇ ಲೋಕಂ ಯತ್ರ ಕುತ್ರಾಭಿಕಾಂಕ್ಷಿತಂ ।
ವ್ಯಾಸತೀರ್ಥಾತ್ಪಶ್ಚಿಮತೋ ಘಂಟಾಕರ್ಣೋ ಹ್ರದೋ ಮಹಾನ್॥೧೪೪॥

---

೧೩೯. ಅಮೃತಮಯಗಳೂ, ಆರೋಗ್ಯಪ್ರದಗಳೂ ಆದ ಅನೇಕ ಮಹೌಷಧಿಗಳು ಅಲ್ಲಿ ಹಿಂದೆ ಹಾಕಲ್ಪಟ್ಟುವು. ಆದುದರಿಂದ ಆ ಕುಂಡದಲ್ಲಿ ಸ್ನಾನವನ್ನು ಮಾಡುವುದರಿಂದಲೂ ಆ ಲಿಂಗವನ್ನು ನೋಡುವುದರಿಂದಲೂ ಸಕಲ ವ್ಯಾಧಿಗಳೂ, ಅತಿದಾರುಣಗಳಾದ ಪಾತಕಗಳೂ ಸಹ ನಾಶವಾಗುವುವು.

೧೪೦–೧೪೧. ತುಂಗೇಶ್ವರಲಿಂಗದ ಉತ್ತರಕ್ಕೆ ಹಲೀಶೇಶ್ವರನು ಸಕಲರೋಗನಿವಾರಕನಾಗಿರುವನು. ಆತನ ದಕ್ಷಿಣದಲ್ಲಿಯೇ ಕಲ್ಯಾಣಪ್ರದನಾದ ಶಿವೇಶ್ವರನಿರುವನು. ಶಿವೇಶ್ವರನಿಗೆ ದಕ್ಷಿಣದಲ್ಲಿ ಶುಭಕರವಾದ ಜಮದಗ್ನೀಶ್ವರ ಮಹಾಲಿಂಗವಿರುವುದು. ಅದಕ್ಕೆ ಪಶ್ಚಿಮದಲ್ಲಿ ಭೈರವೇಶ್ವರನೂ ಭೈರವೇಶ್ವರನ ಉತ್ತರದಲ್ಲಿ ನಿರ್ಮಲವಾದ ಕೂಪವೂ ಇರುವುವು.

೧೪೨. ಆ ಕೂಪದ ಸ್ಪರ್ಶಮಾತ್ರದಿಂದಲೇ ಸಕಲ ಯಜ್ಞಗಳನ್ನು ಮಾಡಿದ ಫಲವೂ ಲಭಿಸುವುದು. ಆ ಕೂಪದ ಪಶ್ಚಿಮಭಾಗದಲ್ಲಿ ಯೋಗಸಿದ್ಧಿಪ್ರದಾಯಕನಾದ ಸುಕೇಶೇಶ್ವರನಿರುವನು.

೧೪೩–೧೪೪. ಆ ಲಿಂಗಕ್ಕೆ ನೈಋರ್ತ್ಯದಲ್ಲಿ ವ್ಯಾಸೇಶ್ವರಲಿಂಗವೂ, ನಿರ್ಮಲಜಲಭರಿತವಾದ ವ್ಯಾಸಕೂಪವೂ ಇರುವುವು. ಈ ವ್ಯಾಸಕೂಪದಲ್ಲಿ ಸ್ನಾನವನ್ನು ಮಾಡಿ ದೇವತೆಗಳಿಗೂ, ಪಿತೃಗಳಿಗೂ ತರ್ಪಣಗಳನ್ನು ಕೊಡುವವನು ಎಲ್ಲಿ ವಾಸಮಾಡುತ್ತಿದ್ದರೂ ತನಗೆ ಅಪೇಕ್ಷಿತವಾದ ಲೋಕದಲ್ಲಿ ಅಕ್ಷಯವಾದ ಸ್ಥಾನವನ್ನು ಪಡೆಯುವನು. ವ್ಯಾಸತೀರ್ಥಕ್ಕೆ ಪಶ್ಚಿಮದಲ್ಲಿ ವಿಶಾಲವಾದ ಘಂಟಾಕರ್ಣಹ್ರದವಿರುವುದು.

ಘಂಟಾಕರ್ಣಹ್ರದೇ ಸ್ನಾತ್ವಾ ವ್ಯಾಸೇಶಪರಿದರ್ಶನಾತ್ ।
ಯತ್ರ ತತ್ರ ಮೃತೋ ವಾಪಿ ವಾರಾಣಸ್ಯಾಂ ಮೃತೋ ಭವೇತ್॥ ೧೪೫ ॥
ಘಂಟಾಕರ್ಣಸಮೀಪೇ ತು ಪಂಚಚೂಡಾಪ್ಸರಃ ಸರಃ ।
ಪಂಚಚೂಡಾಜಲೇ ಸ್ನಾತ್ವಾ ದೃಷ್ಟ್ವಾ ದೇವಂ ತಮೀಶ್ವರಂ ॥ ೧೪೬ ॥
ಸ್ವರ್ಗಲೋಕಂ ನರೋ ಯಾತಿ ಪಂಚಚೂಡಾಪ್ರಿಯೋ ಭವೇತ್ ।
ಗೌರೀಕೂಪಸ್ತತೋಽವಾಚ್ಯಾಂ ಸರ್ವಜಾಡ್ಯವಿನಾಶನಃ ॥ ೧೪೭ ॥
ಪಂಚಚೂಡೋತ್ತರೇ ಭಾಗೇ ತೀರ್ಥಂ ಚಾಶೋಕಸಂಜ್ಞಿತಂ ।
ಮಂದಾಕಿನೀ ಮಹಾತೀರ್ಥಂ ತದುದೀಚ್ಯಾಂ ಮಹಾಘಹೃತ್ ॥ ೧೪೮ ॥
ಸ್ವರ್ಗಲೋಕೇಽಪಿ ಸಾ ಪುಣ್ಯಾ ಕಿಂ ಪುನರ್ಮಾನವೇ ಮುನೇ ।
ತದುತ್ತರೇ ಮಧ್ಯಮೇಶೋ ಮಧ್ಯೇಕ್ಷೇತ್ರಂ ಸ್ವಪಿತ್ಯಹೋ ॥ ೧೪೯ ॥
ತತ್ರ ಜಾಗರಣಂ ಕೃತ್ವಾಽಶೋಕಾಷ್ಟಮ್ಯಾಂ ಮಧೌ ನರಃ ।
ಸ ಜಾತು ಶೋಕಂ ಲಭತೇ ಸದಾನಂದಮಯೋ ಭವೇತ್ ॥ ೧೫೦ ॥

---

೧೪೫. ಘಂಟಾಕರ್ಣಹ್ರದದಲ್ಲಿ ಸ್ನಾನವನ್ನು ಮಾಡಿ ವ್ಯಾಸೇಶ್ವರನ ದರ್ಶನವನ್ನು ತೆಗೆದುಕೊಳ್ಳುವುದರಿಂದ ಎಲ್ಲಿಯೇ ಮರಣವನ್ನು ಪಡೆದರೂ ಕಾಶೀಕ್ಷೇತ್ರದಲ್ಲಿ ದೇಹವನ್ನು ಬಿಟ್ಟ ಪುಣ್ಯವನ್ನು ಪಡೆಯುವವನಾಗುವನು.

೧೪೬–೧೪೭. ಘಂಟಾಕರ್ಣೇಶ್ವರತೀರ್ಥದ ಸಮೀಪದಲ್ಲಿಯೇ ಪಂಚಚೂಡಾಪ್ಸರಸ್ಸರೋವರವಿರುವುದು. ಪಂಚಚೂಡಾಜಲದಲ್ಲಿ ಮಿಂದು ಅಲ್ಲಿಯೇ ನೆಲಸಿರುವ ಪಂಚಚೂಡೇಶ್ವರನನ್ನು ನೋಡಿದವನು ಸ್ವರ್ಗಲೋಕವನ್ನು ಸೇರುವನಲ್ಲದೆ ಪಂಚಚೂಡಾದೇವಿಯ ಪ್ರಿಯನೂ ಆಗುವನು. ಅವುಗಳಿಗೆ ಕೆಳಗಡೆ ಸಮಸ್ತಜಾಡ್ಯಗಳನ್ನು ನಿರ್ಮೂಲಗೊಳಿಸುವ ಗೌರೀಕೂಪವಿರುವುದು.

೧೪೮. ಪಂಚಚೂಡೇಶ್ವರನಿಗೆ ಉತ್ತರದಲ್ಲಿ ಅಶೋಕವೆಂಬ ಹೆಸರುಳ್ಳ ತೀರ್ಥವೊಂದಿರುವುದು. ಅದಕ್ಕೂ ಉತ್ತರದಲ್ಲಿ ಮಹಾಪಾತಕಗಳನ್ನೂ ಕಳೆಯುವ ಮಂದಾಕಿನೀ ಮಹಾತೀರ್ಥವಿರುವುದು.

೧೪೯. ಮುನಿಶ್ರೇಷ್ಠನೆ! ಈ ತೀರ್ಥವು ಸ್ವರ್ಗಲೋಕದವರಿಗೂ ಪುಣ್ಯಪ್ರದವೆಂದಮೇಲೆ ಮಾನವಲೋಕದ ವಿಷಯವನ್ನು ಹೇಳಲೇಕೆ? ಅದಕ್ಕೆ ಉತ್ತರದಲ್ಲಿ ಮಧ್ಯಮೇಶ್ವರನಿರುವನು. ಈ ಲಿಂಗವೇ ಸಮಸ್ತ ಕಾಶೀಕ್ಷೇತ್ರಕ್ಕೂ ಮಧ್ಯಭಾಗದಲ್ಲಿರುವುದು.

೧೫೦. ಚೈತ್ರಮಾಸದಲ್ಲಿ ಅಶೋಕಾಷ್ಟಮಿಯ ರಾತ್ರಿಯಲ್ಲಿ ಅಲ್ಲಿ ಯಾವ ಮನುಷ್ಯನು ಜಾಗರಣವನ್ನು ನಡೆಸುವನೊ, ಅವನಿಗೆಂದಿಗೂ ದುಃಖಗಳೊದಗುಲಾರವು. ನಿತ್ಯವೂ ಅವನು ಆನಂದಮಯನಾಗಿಯೇ ಬಾಳುವನು.

ಮುಕ್ತಿಕ್ಷೇತ್ರಪ್ರಮಾಣಂ ಚ ಕ್ರೋಶಂ ಕ್ರೋಶಂ ಚ ಸರ್ವತಃ ।
ಆರಭ್ಯ ಲಿಂಗಾದಸ್ಮಾಚ್ಚ ಪುಣ್ಯದಾನ್ಮಧ್ಯಮೇಶ್ವರಾತ್ ॥ ೧೫೧ ॥
ಏತದೇವ ಸದಾ ಪ್ರಾಹುಃ ಸರ್ವೇ ವೈ ಪ್ರಪಿತಾಮಹಾಃ ।
ಕಶ್ಚಿದಸ್ಮತ್ಕುಲೇ ಜಾತೋ ಮಂದಾಕಿನ್ಯಾ ಜಲಾಪ್ಲುತಃ ॥ ೧೫೨ ॥
ಭೋಜಯೇತ್ಪ್ರಯತೋ ವಿಪ್ರಾನ್ಯತೀನ್ಪಾಶುಪತಾನಪಿ ।
ಮಂದಾಕಿನ್ಯಾಂ ನರಃ ಸ್ನಾತ್ವಾ ದೃಷ್ಟ್ವಾ ವೈ ಮಧ್ಯಮೇಶ್ವರಂ ॥ ೧೫೩ ॥
ಏಕವಿಂಶತ್ಕುಲೋಪೇತೋ ರುದ್ರಲೋಕೇ ವಸೇಚ್ಚಿರಂ ।
ಮಧ್ಯಮೇಶಾದವಾಚ್ಯಾಂ ಚ ವಿಶ್ವೇದೇವೇಶ್ವರಃ ಶುಭಃ ॥ ೧೫೪ ॥
ತದರ್ಚನಾದರ್ಚಿತಾಃ ಸ್ಯುರ್ವಿಶ್ವೇದೇವಾಸ್ತ್ರಯೋದಶ ।
ತತ್ಪೂರ್ವೇ ವೀರಭದ್ರೇಶೋ ಮಹಾವೀರಪದಪ್ರದಃ ॥ ೧೫೫ ॥
ಭದ್ರದಾ ಭದ್ರಕಾಲೀ ಚ ತಸ್ಯ ದಕ್ಷಿಣತಃ ಶುಭಾ ।
ಭದ್ರಕಾಲಹ್ರದೋ ನಾಮ ತತ್ರಾತೀವ ಶುಭಪ್ರದಃ ॥ ೧೫೬ ॥

---

೧೫೧. ಪುಣ್ಯವರ್ಧಕವಾದ ಈ ಮಧ್ಯಮೇಶ್ವರ ಲಿಂಗವನ್ನು ಮೊದಲು ಮಾಡಿಕೊಂಡೇ ಸಮಸ್ತ ದಿಕ್ಕುಗಳಲ್ಲಿಯೂ ಒಂದು ಕ್ರೋಶದವರೆಗೂ ಮುಕ್ತಿ ಕ್ಷೇತ್ರವು ಪ್ರಸರಿಸಿರುವುದು. ಇದನ್ನೇ ಸಕಲ ಪಿತೃದೇವತೆಗಳೂ ನಿತ್ಯವೂ ಈ ಪ್ರಕಾರವಾಗಿ ಶ್ಲಾಘಿಸುತ್ತಿರುವರು.

೧೫೨. "ಯಾವನಾದರೊಬ್ಬನು ನಮ್ಮ ಕುಲದಲ್ಲಿ ಹುಟ್ಟಿ ಗಂಗಾನದಿಯಲ್ಲಿ ಮಿಂದು ಪ್ರಯತ್ನದಿಂದ ಇಲ್ಲಿ ಬ್ರಾಹ್ಮಣೋತ್ತಮರಿಗೂ, ಸನ್ಯಾಸಿಗಳಿಗೂ, ಮಾಹೇಶ್ವರರಿಗೂ ಭೋಜನವನ್ನು ಮಾಡಿಸಬಹುದು."

೧೫೩. ಯಾವ ಮನುಷ್ಯನೇ ಆಗಲಿ, ಗಂಗೆಯಲ್ಲಿ ಸ್ನಾನವನ್ನು ಮಾಡಿ ಮಧ್ಯಮೇಶ್ವರನ ದರ್ಶನವನ್ನು ಮಾಡಲು ಇಪ್ಪತ್ತೊಂದು ಕುಲದವರೊಡಗೂಡಿ ರುದ್ರಲೋಕದಲ್ಲಿ ಬಹುಕಾಲದವರೆಗೂ ವಾಸಮಾಡುತ್ತಿರುವನು.

೧೫೪. ಮಧ್ಯಮೇಶ್ವರನಿಗೆ ಕೆಳಗಡೆಯಲ್ಲಿ ಶುಭಪ್ರದನಾದ ವಿಶ್ವೇದೇವೇಶ್ವರ ನಿರುವನು. ಆ ಲಿಂಗವನ್ನು ಪೂಜಿಸುವುದರಿಂದ ಹದಿಮೂರು ವಿಶ್ವೇದೇವತೆ ಗಳನ್ನೂ ಪೂಜಿಸಿದಂತಾಗುವುದು.

೧೫೫. ಅದಕ್ಕೆ ಪೂರ್ವದಲ್ಲಿರುವ ವೀರಭದ್ರೇಶ್ವರನು ಮಹಾವೀರರಿಗೆ ಮಾತ್ರ ಲಭ್ಯವಾದ ಪದವಿಯನ್ನು ಕೊಡುವನು. ಅವನ ದಕ್ಷಿಣದಲ್ಲಿ ಮಂಗಳ ರೂಪಿಣಿಯೂ ಮಂಗಳಪ್ರದೆಯೂ ಆದ ಭದ್ರಕಾಳೀದೇವಿಯಿರುವಳು.

೧೫೬. ಅಲ್ಲಿಯೇ ಅತ್ಯಂತ ಪುಣ್ಯಪ್ರಾಪಕವಾದ ಭದ್ರಕಾಳವೆಂಬ ಪುಣ್ಯ ತೀರ್ಥವೂ ಇರುವುದು. ಅದಕ್ಕೆ ಪೂರ್ವದಿಕ್ಕಿನಲ್ಲಿ ಉತ್ತಮವೂ ಜ್ಞಾನಪ್ರದವೂ ಆದ ಅಪಸ್ತಂಬೇಶ್ವರಲಿಂಗವಿರುವುದು.

ಆಪಸ್ತಂಬೇಶ್ವರಂ ಲಿಂಗಂ ತತ್ಪ್ರಾಚ್ಯಾಂ ಜ್ಞಾನದಂ ಪರಂ ।
ತದುತ್ತರೇ ಪುಣ್ಯಕೂಪಸ್ತತ್ಪಶ್ಚಾಚ್ಛೌನಕೋ ಹ್ರದಃ ॥ ೧೫೭ ॥
ಹ್ರದಪಶ್ಚಿಮತೋ ಲಿಂಗಂ ಶೌನಕೇಶಂ ಸುಧೀಪ್ರದಂ ।
ಹ್ರದೇ ತತ್ರ ನರೋ ಸ್ನಾತ್ವಾ ದೃಷ್ಟ್ವಾ ವೈ ಶೌನಕೇಶ್ವರಂ ॥ ೧೫೮ ॥
ಜ್ಞಾನಂ ತತ್ಸಂಲಭೇದ್ದಿವ್ಯಂ ಯೇನ ಮೃತ್ಯುಂ ತರತ್ಯಸೌ ।
ತದ್ದಕ್ಷಿಣೇ ಜಂಬುಕೇಶಸ್ತಿರ್ಯಗ್ಯೋನಿನಿವಾರಕಃ ॥ ೧೫೯ ॥
ತದುತ್ತರೇ ಮತಂಗೇಶೋ ಗಾನವಿದ್ಯಾಪ್ರಬೋಧಕಃ ।
ಮತಂಗೇಶಸ್ಯ ವಾಯವ್ಯೇ ನಾನಾಲಿಂಗಾನಿ ಸರ್ವತಃ ॥ ೧೬೦ ॥
ಮುನಿಭಿಃ ಸ್ಥಾಪಿತಾನೀಹ ಸರ್ವಸಿದ್ಧಿಪ್ರದಾನಿ ಚ ।
ಬ್ರಹ್ಮರಾತೇಶ್ವರಂ ಲಿಂಗಂ ಮತಂಗೇಶಾಚ್ಚ ದಕ್ಷಿಣೇ ॥ ೧೬೧ ॥
ತಲ್ಲಿಂಗದರ್ಶನಾದಾಯುರ್ನಾಂತರಾ ಚ್ಛಿದ್ಯತೇ ಕ್ವಚಿತ್ ।
ತತ್ರಾಜ್ಯಪೇಶ್ವರಂ ಲಿಂಗಂ ಪಿತೃಲಿಂಗಾನ್ಯನೇಕಶಃ ।
ತಲ್ಲಿಂಗಸೇವಯಾ ಸರ್ವೇ ತುಷ್ಯಂತಿ ಪ್ರಪಿತಾಮಹಾಃ ॥ ೧೬೨ ॥

---

೧೫೭. ಅದಕ್ಕೆ ಉತ್ತರದಲ್ಲಿ ಪುಣ್ಯಕೂಪವೂ, ಅದರ ಹಿಂದುಗಡೆಗೆ ಶೌನಕ ಹ್ರದವೂ ಇರುವುವು. ಆ ಹ್ರದದ ಪಶ್ಚಿಮದಲ್ಲಿ ಸಮ್ಯಜ್ಞಾನಪ್ರದವಾದ ಶೌನಕೇಶ್ವರಲಿಂಗವಿರುವುದು.

೧೫೮. ಆ ಹ್ರದದಲ್ಲಿ ಸ್ನಾತನಾಗಿ ಶೌನಕೇಶ್ವರನ ದರ್ಶನವನ್ನು ಮಾಡಿದ ನರನು ದಿವ್ಯಜ್ಞಾನವನ್ನು ಪಡೆಯುವನಲ್ಲದೆ ಮೃತ್ಯುವನ್ನೂ ಅತಿಕ್ರಮಿಸುವನು.

೧೫೯. ಶೌನಕೇಶ್ವರನಿಗೆ ದಕ್ಷಿಣದಲ್ಲಿ ತಿರ್ಯಗ್ಜನ್ಮಗಳನ್ನು ಕಳೆಯುವ ಜಂಬುಕೇಶ್ವರಲಿಂಗವಿರುವುದು. ಅದಕ್ಕೆ ಉತ್ತರದಲ್ಲಿಯೇ ಸಂಗೀತವಿದ್ಯೆಯನ್ನು ಪ್ರಬೋಧಗೊಳಿಸುವ ಮತಂಗೇಶ್ವರನಿರುವನು.

೧೬೦. ಮತಂಗೇಶ್ವರನಿಗೆ ವಾಯವ್ಯದಲ್ಲಿ ಅನೇಕ ಮಹರ್ಷಿಗಳು ಸಕಲ ಸಿದ್ಧಿಪ್ರದಗಳಾದ ಅನೇಕ ಲಿಂಗಗಳನ್ನು ವಿಸ್ತಾರವಾದ ಪ್ರದೇಶದಲ್ಲಿ ಸ್ಥಾಪಿಸಿರುವರು.

೧೬೧. ಮತಂಗೇಶ್ವರನ ದಕ್ಷಿಣದಲ್ಲಿ ಬ್ರಹ್ಮರಾತೇಶ್ವರವೆಂಬ ಲಿಂಗವಿರುವುದು. ಆ ಲಿಂಗವನ್ನು ದರ್ಶನಮಾಡಿದವರಿಗೆಂದಿಗೂ ಅಲ್ಪಾಯುಷ್ಯದಲ್ಲಿ ಮರಣವು ಸಂಭವಿಸುವುದಿಲ್ಲ.

೧೬೨. ಅಲ್ಲಿಯೇ ಆಜ್ಯಪೇಶ್ವರಲಿಂಗವೂ, ಅನೇಕಗಳಾದ ಪಿತೃಲಿಂಗಗಳೂ ನೆಲಸಿರುವುವು. ಅವುಗಳನ್ನು ಸೇವಿಸುವುದರಿಂದ ಸಮಸ್ತ ಪಿತೃದೇವತೆಗಳೂ ಪರಿತುಷ್ಟರಾಗುವರು.

**ತದ್ದಕ್ಷಿಣೇ ಸಿದ್ಧಕೂಪಃ ಸಿದ್ಧಾಃ ಸಂತಿ ಸಹಸ್ರಶಃ ।**
**ವಾಯುರೂಪಾಸ್ತು ಯೇ ಸಿದ್ಧಾಃ ಯೇ ಸಿದ್ಧಾಃ ಭಾನುರಶ್ಮಿಗಾಃ॥ ೧೬೩ ॥**
**ತೈಃ ಸ್ಥಾಪಿತಂ ತು ಯಲ್ಲಿಂಗಂ ತತ್ಸಿದ್ಧೇಶ್ವರಮೀರಿತಂ ।**
**ತಸ್ಯ ಸಂದರ್ಶನಾದೇವ ಸರ್ವಾಃ ಸ್ಯುಃ ಸಿದ್ಧಯೋಽಮಲಾಃ ॥ ೧೬೪ ॥**
**ತತ್ಪಶ್ಚಿಮೇ ಸಿದ್ಧವಾಪೀ ಪೀತಾ ಸ್ನಾತಾ ಚ ಸಿದ್ಧಿದಾಃ ।**
**ಪ್ರಾಚ್ಯಾಂ ಚ ಸಿದ್ಧಕೂಪಾದ್ವೈ ಲಿಂಗಂ ವ್ಯಾಘ್ರೇಶ್ವರಾಭಿಧಂ ॥ ೧೬೫ ॥**
**ತಲ್ಲಿಂಗದರ್ಶನಾನ್ನೃಣಾಂ ನ ಭಯಂ ವ್ಯಾಘ್ರಚೋರಜಂ ।**
**ಜ್ಯೇಷ್ಠೇಶ್ವರಂ ಚ ತದ್ಯಾಮ್ಯಾಂ ಜ್ಯೇಷ್ಠಸ್ಥಾನೇಽತಿಸಿದ್ಧಿದಂ ॥ ೧೬೬ ॥**
**ತದ್ದಕ್ಷಿಣೇ ಮುದಾಂ ಧಾಮ ಲಿಂಗಂ ಪ್ರಹಸಿತೇಶ್ವರಂ ।**
**ತದುತ್ತರೇ ನಿವಾಸೇಶಃ ಕಾಶೀವಾಸಫಲಪ್ರದಃ ॥ ೧೬೭ ॥**
**ಚತುಃಸಮುದ್ರಕೂಪೋಽಸ್ತಿ ತತ್ರಾಬ್ಧಿಸ್ನಾನಪುಣ್ಯದಃ ।**
**ಜ್ಯೇಷ್ಠಾದೇವೀ ತು ತತ್ರಾಸ್ತಿ ನತಾ ಜ್ಯೇಷ್ಠಪದಪ್ರದಾ ॥ ೧೬೮ ॥**

---

೧೬೩. ಆ ಪ್ರದೇಶಕ್ಕೆ ದಕ್ಷಿಣದಲ್ಲಿ ಸಿದ್ಧಕೂಪವಿರುವುದು. ವಾಯುರೂಪರಾಗಿಯೂ ಸೂರ್ಯರಶ್ಮಿಗತರಾಗಿಯೂ ಇರುವ ಅಸಂಖ್ಯಾತರಾದ ಸಿದ್ಧರು ಅಲ್ಲಿ ವಾಸಮಾಡುತ್ತಿರುವರು.

೧೬೪. ಅವರಿಂದ ಸ್ಥಾಪಿಸಲ್ಪಟ್ಟ ಲಿಂಗವೊಂದು ಅಲ್ಲಿಯೇ ಸಿದ್ಧೇಶ್ವರವೆಂದು ಕರೆಯಲ್ಪಡುತ್ತಿರುವುದು. ಅದನ್ನು ದರ್ಶನಮಾಡುವುದರಿಂದಲೇ ಅನಂತಸಿದ್ಧಿಗಳೂ ಕರಗತಗಳಾಗುವುವು.

೧೬೫–೧೬೬. ಅದಕ್ಕೆ ಪಶ್ಚಿಮದಲ್ಲಿ ಸಿದ್ಧವಾಪಿಯೆಂಬ ತೀರ್ಥವಿರುವುದು. ಅದರ ಜಲವನ್ನು ಕುಡಿದರೂ ಅದರಲ್ಲಿ ಸ್ನಾನವನ್ನುಮಾಡಿದರೂ ಸಿದ್ಧಿಗಳು ಲಭಿಸುವುವು. ಸಿದ್ಧಕೂಪಕ್ಕೆ ಪೂರ್ವದಲ್ಲಿ ವ್ಯಾಘ್ರೇಶ್ವರನಾಮಕವಾದ ಲಿಂಗವಿರುವುದು. ಆ ಲಿಂಗದ ದರ್ಶನವನ್ನುಮಾಡಿದ ಮಾನವರಿಗೆ ವ್ಯಾಘ್ರಾದಿ ಹಿಂಸ್ರಮೃಗಗಳಿಂದಾಗಲಿ, ಚೋರರಿಂದಾಗಲಿ ಭಯವಿಲ್ಲ. ಅದರ ದಕ್ಷಿಣದಲ್ಲಿ ಜ್ಯೇಷ್ಠೇಶ್ವರಲಿಂಗವಿರುವುದು. ಜ್ಯೇಷ್ಠಸ್ಥಾನದಲ್ಲಿರುವ ಆ ಲಿಂಗವು ಅತ್ಯಂತ ಸಿದ್ಧಿಪ್ರದವಾದುದು.

೧೬೭. ಅದಕ್ಕೂ ದಕ್ಷಿಣದಲ್ಲಿ ಸಂತೋಷದ ನೆಲೆಮನೆಯೆನಿಸಿದ ಪ್ರಹಸಿತೇಶ್ವರಲಿಂಗವಿರುವುದು. ಅದಕ್ಕೆ ಉತ್ತರದಲ್ಲಿ ನಿವಾಸೇಶ್ವರನಿರುವನು. ಆತನನ್ನು ಸೇವಿಸಲು ಕಾಶೀಕ್ಷೇತ್ರದಲ್ಲಿ ವಾಸಮಾಡಿದ ಫಲವು ಪೂರ್ಣವಾಗಿ ಲಭಿಸುವುದು.

೧೬೮. ಅಲ್ಲಿಯೇ ನಾಲ್ಕು ಸಮುದ್ರಗಳ ಸ್ನಾನದ ಫಲವನ್ನು ಕೊಡುವ ಚತುಸ್ಸಮುದ್ರಕೂಪವಿರುವುದು. ನಮಸ್ಕಾರಮಾತ್ರದಿಂದ ಉತ್ತಮ ಪದವಿಯನ್ನು ಕೊಡುವ ಜ್ಯೇಷ್ಠಾದೇವಿಯೂ ಅಲ್ಲಿಯೇ ಇರುವಳು.

ಅವಾಚ್ಯಾಂ ವ್ಯಾಘ್ರಲಿಂಗಾಚ್ಚ ಲಿಂಗಂ ಚಂಡೀಶ್ವರಾಭಿಧಂ ।
ತದುತ್ತರೇ ದಂಡಖಾತಂ ಸರಃ ಪಿತೃಮುದಾವಹಂ ॥ ೧೬೯ ॥
ಗ್ರಹಣಾನಂತರೇ ಸ್ನಾನಂ ದಂಡಖಾತೇಽತಿಪುಣ್ಯದಂ ।
ಜೈಗೀಷವ್ಯಗುಹಾ ತತ್ರ ತತ್ರ ಲಿಂಗಂ ತದಾಹ್ವಯಂ ॥ ೧೭೦ ॥
ತ್ರಿರಾತ್ರೋಪೋಷಿತಸ್ತತ್ರ ಜ್ಞಾನಂ ಲಭ್ಯೇತ ನಿರ್ಮಲಂ ।
ಮಹಾಪುಣ್ಯಪ್ರದಂ ಲಿಂಗಂ ತತ್ಪಶ್ಚಾದ್ದೇವಲೇಶ್ವರಂ ॥ ೧೭೧ ॥
ಶತಕಾಲಸ್ತತ್ಸಮೀಪೇ ಶತಂ ಕಾಲಮುಮಾಪತಿಃ ।
ತಲ್ಲಿಂಗಾವಿರ್ಭವೇ ಕಾಶ್ಯಾಂ ಕಾಲಯಾಮಾಸ ಕುಂಭಜ ॥ ೧೭೨ ॥
ತಲ್ಲಿಂಗದರ್ಶನಾದಾಯುಃ ಶತವರ್ಷಾಣ್ಯಖಂಡಿತಂ ।
ಶತಾತಪೇಶಸ್ತದ್ಯಾಮ್ಯಾಂ ಮಹಾಜಪಫಲಪ್ರದಃ ॥ ೧೭೩ ॥
ತತ್ಪಶ್ಚಿಮೇ ಹೇತುಕೇಶೋ ಹೇತುಭೂತೋ ಮಹಾಫಲೇ ।
ತದ್ದಕ್ಷಿಣೇಽಕ್ಷಪಾದೇಶೋ ಮಹಾಜ್ಞಾನಪ್ರವರ್ತಕಃ ॥ ೧೭೪ ॥

---

೧೬೯. ವ್ಯಾಘ್ರೇಶ್ವರಲಿಂಗದ ದಕ್ಷಿಣದಲ್ಲಿ ಚಂಡೀಶ್ವರವೆಂಬ ಲಿಂಗವಿರುವುದು. ಅದರ ಉತ್ತರದಲ್ಲಿ ಪಿತೃದೇವತೆಗಳಿಗೆ ಆನಂದವನ್ನುಂಟುಮಾಡುವ ದಂಡಖಾತವೆಂಬ ಸರೋವರವಿರುವುದು.

೧೭೦. ಸೂರ್ಯಚಂದ್ರರ ಗ್ರಹಣಗಳ ಅನಂತರದಲ್ಲಿ ಆ ಸರೋವರದಲ್ಲಿ ಮಾಡಿದ ಸ್ನಾನವು ಅತ್ಯಂತ ಪುಣ್ಯಪ್ರದವು. ಅಲ್ಲಿಯೇ ಜೈಗೀಷವ್ಯಗುಹೆಯೂ, ಅದೇ ಹೆಸರಿನ ಲಿಂಗವೂ ಇರುವುವು.

೧೭೧. ಆ ಲಿಂಗದ ಸನ್ನಿಧಿಯಲ್ಲಿ ಮೂರು ರಾತ್ರಿಗಳ ಉಪವಾಸವನ್ನು ಮಾಡಲು ನಿರ್ಮಲವಾದ ಜ್ಞಾನವು ಲಭಿಸುವುದು. ಅದರ ಹಿಂದುಗಡೆ ದೇವಲೇಶ್ವರನೆಂಬ ಮಹಾಪುಣ್ಯಪ್ರದವಾದ ಲಿಂಗವಿರುವುದು.

೧೭೨. ಅದರ ಸಮೀಪದಲ್ಲಿಯೇ ಶತಕಾಲೇಶ್ವರಲಿಂಗವಿರುವುದು. ಎಲೈ ಅಗಸ್ತ್ಯನೆ! ಕಾಶಿಯಲ್ಲಿರುವ ಆ ಲಿಂಗವನ್ನು ರೂಪುಗೊಳಿಸಲು ಮಹಾದೇವನು ಒಂದುನೂರುವರ್ಷಗಳ ಕಾಲವನ್ನು ತೆಗೆದುಕೊಂಡನು.

೧೭೩. ಆ ಲಿಂಗದ ದರ್ಶನದಿಂದ ಒಂದುನೂರುವರ್ಷಗಳ ಸಂಪೂರ್ಣವಾದ ಆಯುಷ್ಯವು ಲಭಿಸುವುದು. ಅದರ ದಕ್ಷಿಣದಲ್ಲಿ ಮಹಾಮಂತ್ರಜಪಗಳಿಗೆ ಸಿದ್ಧಿಯನ್ನು ಕೊಡುವ ಶಾತಾತಪೇಶ್ವರನಿರುವನು.

೧೭೪. ಆ ಲಿಂಗಕ್ಕೆ ಪಶ್ಚಿಮದಲ್ಲಿ ಮಹಾಫಲಪ್ರಾಪ್ತಿಗೆ ಹೇತುಭೂತನಾದ ಹೇತುಕೇಶ್ವರನಿರುವನು. ಮಹತ್ತರವಾದ ಜ್ಞಾನವನ್ನು ಕೊಡುವ ಅಕ್ಷಪಾದೇಶ್ವರನು ಹೇತುಕೇಶ್ವರನ ದಕ್ಷಿಣ ದಿಕ್ಕಿನಲ್ಲಿರುವನು.

ತದಗ್ರೇ ಚ ಕಣಾದೇಶಸ್ತತ್ರ ಪುಣ್ಯೋದಕಃ ಪ್ರಹಿಃ ।
ಸ್ನಾತ್ವಾ ಕಣಾದಕೂಪೇ ಯಃ ಕಣಾದೇಶಂ ಸಮರ್ಚಯೇತ್ ॥ ೧೭೫ ॥
ನ ಧನೇನ ನ ಧಾನ್ಯೇನ ತ್ಯಜ್ಯತೇ ಸ ಕದಾಚನ ।
ತಸ್ಯ ದಕ್ಷಿಣತೋ ದೃಶ್ಯೋ ಭೂತೀಶೋ ಭೂತಿಕೃತ್ಸತಾಂ ॥ ೧೭೬ ॥
ತತ್ಪಶ್ಚಿಮೇಽಘಸಂಹರ್ತ್ರ್ಯ ಆಷಾಢೀಶ್ವರಸಂಜ್ಞಿತಂ ।
ದುರ್ವಾಸೇಶಶ್ಚ ತತ್ಪೂರ್ವೇ ಸರ್ವಕಾಮಸಮೃದ್ಧಿಕೃತ್ ॥ ೧೭೭ ॥
ತದ್ಯಾಮ್ಯಾಂ ಭಾರಭೂತೇಶಃ ಪಾಪಭಾರಾಪಹಾರಕಃ ।
ವ್ಯಾಸೇಶ್ವರಸ್ಯ ಪೂರ್ವೇಣ ದ್ವೌ ಶಂಖಲಿಖಿತೇಶ್ವರೌ ।
ತೌ ದೃಶ್ಯೌ ಯತ್ನತಃ ಕಾಶ್ಯಾಂ ಮಹಾಜ್ಞಾನಪ್ರವರ್ತಕೌ ॥ ೧೭೮ ॥
ಯತ್ಸಮಾಪ್ಯಾಽಪ್ಯತೇ ಪುಣ್ಯಂ ನಿಷ್ಠಾ ಪಾಶುಪತವ್ರತಂ ।
ತದಾಪ್ಯತೇಽತ್ರ ವಿಶ್ವೇಶಸಕೃದೀಕ್ಷಣತಃ ಕ್ಷಣಾತ್ ॥ ೧೭೯ ॥
ತದೀಶಾನೇಽವಧೂತೇಶೋ ಯೋಗಜ್ಞಾನಪ್ರವರ್ತಕಃ ।
ತೀರ್ಥಂ ಚೈವಾವಧೂತೇಶಂ ಸರ್ವಕಲ್ಮಷನಾಶಕೃತ್ ॥ ೧೮೦ ॥

---

೧೭೫–೧೭೬. ಆ ಲಿಂಗದ ಇದಿರಿನಲ್ಲಿಯೇ ಕಣಾದೇಶ್ವರಲಿಂಗವೂ ಪುಣ್ಯ ಜಲಭರಿತವಾದ ಕಣಾದಕೂಪವೂ ಇರುವುವು. ಯಾವನು ಕಣಾದಕೂಪದಲ್ಲಿ ಸ್ನಾನವನ್ನು ಮಾಡಿ ಕಣಾದೇಶ್ವರನ ಪೂಜೆಯನ್ನು ಮಾಡುವನೊ, ಅವನು ಯಾವಜ್ಜೀವವೂ ಧನದಿಂದಾಗಲಿ ಧಾನ್ಯದಿಂದಾಗಲಿ ವಿಹೀನನಾಗುವುದಿಲ್ಲ. ಆ ಲಿಂಗಕ್ಕೆ ದಕ್ಷಿಣದಲ್ಲಿ ಸತ್ಪುರುಷರಿಗೆ ಅಷ್ಟೈಶ್ವರ್ಯಪ್ರದನಾದ ಭೂತೇಶ್ವರನನ್ನು ಕಾಣಬಹುದು.

೧೭೭. ಅದರ ಪಶ್ಚಿಮದಲ್ಲಿ ಪಾಪಾಪನೋದಕವಾದ ಆಷಾಢೀಶ್ವರವೆಂಬ ಲಿಂಗವಿರುವುದು. ಅದಕ್ಕೆ ಪೂರ್ವದಲ್ಲಿ ಸಕಲೇಷ್ಟಾರ್ಥಗಳನ್ನು ಕೈಗೂಡಿಸುವ ದೂರ್ವಾಸೇಶ್ವರನಿರುವನು.

೧೭೮. ದೂರ್ವಾಸೇಶ್ವರನ ದಕ್ಷಿಣದಲ್ಲಿ ಪಾಪರಾಶಿಯ ಭಾರವನ್ನು ಕಳೆಯುವ ಭಾರಭೂತೇಶ್ವರನಿರುವನು. ವ್ಯಾಸೇಶ್ವರನಿಗೆ ಪೂರ್ವದಲ್ಲಿ ಶಂಖೇಶ್ವರ ಲಿಖಿತೇಶ್ವರರೆಂಬ ಲಿಂಗದ್ವಯವಿರುವುದು. ಅವು ಉತ್ತಮ ಜ್ಞಾನವನ್ನು ಕೊಡುವುವಾದುದರಿಂದ ಕಾಶಿಯಲ್ಲಿ ಅವುಗಳನ್ನು ಪ್ರಯತ್ನಪೂರ್ವಕವಾಗಿ ಪ್ರತಿಯೊಬ್ಬನೂ ನೋಡಲೇಬೇಕು.

೧೭೯. ನಿಯಮಸಹಿತವಾಗಿ ಮಹಾದೇವವ್ರತವನ್ನು ಸಮಾಪ್ತಿಗೊಳಿಸಿದವರಿಗೆ ಯಾವ ಪುಣ್ಯವು ಲಭಿಸುವುದೊ, ಅದೇ ಈ ಎರಡು ಲಿಂಗಗಳನ್ನು ಒಂದು ಕ್ಷಣಮಾತ್ರ ದರ್ಶನಮಾಡುವುದರಿಂದ ಪ್ರಾಪ್ತವಾಗುವುದು.

೧೮೦. ಆ ಲಿಂಗಯುಗ್ಮಕ್ಕೆ ಈಶಾನ್ಯದಲ್ಲಿ ಯೋಗ ಜ್ಞಾನವನ್ನುಂಟು

ಅವಧೂತೇಶ್ವರಾತ್ಪೂರ್ವೇ ಲಿಂಗಂ ಪಶುಪತೀಶ್ವರಂ ।
ತಲ್ಲಿಂಗಸೇವಯಾ ಪುಂಸಾಂ ಪಶುಪಾಶವಿಮೋಕ್ಷಣಂ ॥ ೧೮೧ ॥
ತದ್ದಕ್ಷಿಣೇ ಗೋಭಿಲೇಶೋ ಮಹಾಭಿಲಷಿತಪ್ರದಃ ।
ಜೀಮೂತವಾಹನೇಶಶ್ಚ ತತ್ಪಶ್ಚಾಲ್ಲಿಂಗಮುತ್ತಮಂ ॥ ೧೮೨ ॥
ವಿದ್ಯಾಧರಪದಪ್ರಾಪ್ತಿಸ್ತಲ್ಲಿಂಗಪರಿಸೇವನಾತ್ ।
ಮಯೂಖಾರ್ಕಃ ಪಂಚನದೇ ಗಭಸ್ತೀಶಶ್ಚ ತತ್ರ ವೈ ॥ ೧೮೩ ॥
ದಧಿಕಲ್ಪಹ್ರದೋ ನಾಮ ತದುದೀಚ್ಯಾಂ ಮಹಾಪ್ರಹಿಃ ।
ದುರ್ಲಭಂ ತತ್ರ ಹಿ ಸ್ನಾನಂ ದುರ್ಲಭಂ ಚ ತದೀಕ್ಷಣಂ ॥ ೧೮೪ ॥
ಗಭಸ್ತೀಶೋತ್ತರೇ ಭಾಗೇ ದಧಿಕಲ್ಪೇಶ್ವರೋ ಹರಃ ।
ನರಸ್ತಮಾಶು ಸಂವೀಕ್ಷ್ಯ ಕಲ್ಪಂ ತ್ರ್ಯಕ್ಷಪುರೇ ವಸೇತ್ ॥ ೧೮೫ ॥
ಗಭಸ್ತೀಶಾದ್ದಕ್ಷಿಣೇ ತು ಮಂಗಲಾ ಮಂಗಲಾಲಯಾ ।
ಉದ್ದಿಶ್ಯ ಮಂಗಲಾಂ ಗೌರೀಂ ಭೋಜಯೇದ್ದ್ವಿಜದಂಪತೀ ॥ ೧೮೬ ॥

---

ಮಾಡುವ ಅವಧೂತೇಶ್ವರನಿರುವನು. ಅಲ್ಲದೆ ಸಕಲ ಕಲ್ಮಷನಾಶಕವಾದ ಅವಧೂತೇಶ್ವರತೀರ್ಥವೂ ಅಲ್ಲಿಯೆ ಇರುವುದು.

೧೮೧–೧೮೨. ಆ ಲಿಂಗಕ್ಕೆ ಪೂರ್ವದಲ್ಲಿ ಪಶುಪತೀಶ್ವರಲಿಂಗವಿರುವುದು. ಆ ಲಿಂಗದ ಸೇವನೆಯಿಂದ ಜನರಿಗೆ ಜನನಮರಣರೂಪವಾದ ಪಶುಪಾಶಗಳ ಬಿಡುಗಡೆಯಾಗುವುದು. ಅದಕ್ಕೆ ದಕ್ಷಿಣದಲ್ಲಿ ಮಹಾಭಿಲಾಷೆಗಳನ್ನು ಈಡೇರಿಸುವ ಗೋಭಿಲೇಶ್ವರನಿರುವನು. ಅದರ ಪಶ್ಚಿಮದಲ್ಲಿ ಉತ್ತಮವಾದ ಜೀಮೂತ ವಾಹನಲಿಂಗವಿರುವುದು.

೧೮೩. ಆ ಲಿಂಗದ ಪರಿಚರ್ಯೆಯನ್ನು ಮಾಡುವುದರಿಂದ ವಿದ್ಯಾಧರ ಪದವಿಯು ಲಭಿಸುವುದು. ಪಂಚನದಕ್ಷೇತ್ರದಲ್ಲಿ ಮಯೂಖಾರ್ಕನೂ ಗಭಸ್ತೀಶ್ವರನೂ ಇರುವರು.

೧೮೪. ಆ ಲಿಂಗಗಳ ಉತ್ತರದಲ್ಲಿ ದಧಿಕಲ್ಪಹ್ರದವೆಂಬ ಹೆಸರುಳ್ಳ ವಿಶಾಲ ವಾದ ಕೂಪವಿರುವುದು. ಆ ತೀರ್ಥದ ಸ್ನಾನವೂ ನೋಟವೂ ಮನುಷ್ಯರಿಗೆ ಅತ್ಯಂತ ದುರ್ಲಭವು.

೧೮೫. ಗಭಸ್ತೀಶ್ವರನಿಗೆ ಉತ್ತರದಿಕ್ಕಿನಲ್ಲಿ ದಧಿಕಲ್ಪೇಶ್ವರಲಿಂಗವಿರುವುದು. ಆ ಲಿಂಗವನ್ನೊಮ್ಮೆ ಸಂದರ್ಶಿಸಿದ ಮನುಜನು ಒಂದು ಕಲ್ಪದವರೆಗೂ ಕೈಲಾಸ ದಲ್ಲಿ ವಾಸಮಾಡುವನು.

೧೮೬. ಗಭಸ್ತೀಶ್ವರನಿಗೆ ದಕ್ಷಿಣದಲ್ಲಿ ಸರ್ವಮಂಗಳಗಳಿಗೂ ನಿವಾಸಭೂತೆ ಯಾದ ಮಂಗಳಾದೇವಿಯಿರುವಳು. ಆ ಸನ್ನಿಧಿಯಲ್ಲಿ ಮಂಗಳಾದೇವಿಯ ಪ್ರೀತಿಗಾಗಿ ಬ್ರಾಹ್ಮಣದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು.

ಅಲಂಕೃತ್ಯ ಯಥಾಶಕ್ತಿ ತತ್ಪುಣ್ಯಾಂತೋ ನ ಕರ್ಹಿಚಿತ್ ।
ಕ್ಷಿತಿಪ್ರದಕ್ಷಿಣಫಲಾ ಮಂಗಲೈಕಾ ಪ್ರದಕ್ಷಿಣಾ ॥ ೧೮೭ ॥
ವದನಪ್ರೇಕ್ಷಣಾದೇವೀ ಮುಖಪ್ರೇಕ್ಷೇಶ್ವರೋತ್ತರೇ ।
ಮಂಗಲಾಯಾಃ ಸಮೀಪೇ ತು ಸರ್ವಸಿದ್ಧಿಕರೀ ಶಿವಾ ॥ ೧೮೮ ॥
ಲಿಂಗೇ ತ್ವಷ್ಟ್ರೀಶವೃತ್ತೇಶೌ ಮುಖಪ್ರೇಕ್ಷ್ಯೋತ್ತರೇ ಶುಭೇ ।
ಸಹೇಮಭೂಮಿದಾನಸ್ಯ ಫಲಂ ದರ್ಶನತಸ್ತಯೋಃ ॥ ೧೮೯ ॥
ತದುತ್ತರೇ ಚರ್ಚಿಕಾಯಾ ದೇವ್ಯಾಃ ಸಂದರ್ಶನಂ ಶುಭಂ ।
ರೇವತೇಶ್ವರಲಿಂಗಂ ಚ ಚರ್ಚಿಕಾಗ್ರೇಣ ಶಾಂತಿಕೃತ್ ॥ ೧೯೦ ॥
ಮಹಾಶುಭಾಯ ತಸ್ಯಾಗ್ರೇ ಲಿಂಗಂ ಪಂಚನದೇಶ್ವರಂ ।
ಮಂಗಲೋದೋ ಮಹಾಕೂಪೋ ಮಂಗಲಾಪಶ್ಚಿಮೇ ಶುಭಃ ॥ ೧೯೧ ॥
ಉಪಮನ್ಯೋರ್ಮಹಾಲಿಂಗಂ ಮಂಗಲಾಪಶ್ಚಿಮೇ ಶುಭಂ ।
ವ್ಯಾಘ್ರಪಾದೇಶ್ವರಂ ಲಿಂಗಂ ತತ್ಪಶ್ಚಾದ್ವ್ಯಾಘ್ರಭೀತಿಹೃತ್ ॥ ೧೯೨ ॥

---

೧೮೭. ಅವರನ್ನು ತನ್ನ ಶಕ್ತ್ಯನುಸಾರವಾಗಿ ವಸ್ತ್ರಾಭರಣಾದಿಗಳಿಂದ ಅಲಂಕರಿಸಬೇಕು. ಆ ಪುಣ್ಯಕ್ಕೆಂದಿಗೂ ಕೊನೆಯಿಲ್ಲವು. ಮಂಗಳಾದೇವಿಗೆ ಮಾಡಿದ ಒಂದೊಂದು ಪ್ರದಕ್ಷಿಣೆಯೂ ಭೂಪ್ರದಕ್ಷಿಣೆಯ ಫಲವನ್ನು ಕೊಡುವುದು.

೧೮೮. ಮುಖಪ್ರೇಕ್ಷೇಶ್ವರನ ಉತ್ತರದಲ್ಲಿ ವದನಪ್ರೇಕ್ಷಣೆಯೆಂಬ ದೇವಿಯಿರುವಳು. ಮಂಗಳಾದೇವಿಯ ಸಮೀಪದಲ್ಲಿರುವ ಈ ದೇವಿಯು ಸಕಲ ಕಾರ್ಯಸಿದ್ಧಿಯನ್ನು ಕೊಡುವವಳೂ, ಮಂಗಳಪ್ರದೆಯೂ ಆಗಿರುವಳು.

೧೮೯. ಮುಖಪ್ರೇಕ್ಷೇಶ್ವರನಿಗೆ ಉತ್ತರದಲ್ಲಿ ತ್ವಷ್ಟ್ರೀಶ್ವರ, ವೃತ್ತೇಶ್ವರಗಳೆಂಬ ಎರಡು ಶುಭಲಿಂಗಗಳಿರುವುವು. ಆ ಎರಡು ಲಿಂಗಗಳ ದರ್ಶನದಿಂದ ಚಿನ್ನದ ದಕ್ಷಿಣೆಯೊಡಗೂಡಿದ ಭೂಮಿಯನ್ನು ದಾನಮಾಡಿದ ಪುಣ್ಯವು ಲಭಿಸುವುದು.

೧೯೦. ಅವುಗಳ ಉತ್ತರದಲ್ಲಿರುವ ಚರ್ಚಿಕಾದೇವಿಯ ಸಂದರ್ಶನವು ಮಂಗಳಕರವು. ಆ ದೇವಿಯ ಸಮ್ಮುಖದಲ್ಲಿ ಮನಶ್ಶಾಂತಿಯನ್ನುಂಟುಮಾಡುವ ರೇವತೇಶ್ವರಲಿಂಗವಿರುವುದು.

೧೯೧. ಅದರ ಸಮ್ಮುಖದಲ್ಲಿಯೇ ಸರ್ವಶುಭಕರವಾದ ಪಂಚನದೇಶ್ವರ ಲಿಂಗವಿರುವುದು. ಮಂಗಳಾದೇವಿಯ ಪಶ್ಚಿಮದಿಕ್ಕಿನಲ್ಲಿಯೇ ಶುಭಪ್ರದವಾದ ಮಂಗಳೋದವೆಂಬ ಮಹಾಕೂಪವಿರುವುದು.

೧೯೨. ಇನ್ನೂ ಪಶ್ಚಿಮಕ್ಕೆ ಉಪಮನ್ಯುವಿನ ಮಹಾಲಿಂಗವು ಕಾಣುತ್ತಿರುವುದು. ಅದಕ್ಕೂ ಪಶ್ಚಿಮಕ್ಕೆ ನೆಲಸಿರುವ ವ್ಯಾಘ್ರಪಾದೇಶ್ವರಲಿಂಗವು ವ್ಯಾಘ್ರಭಯವನ್ನು ಪರಿಹರಿಸುವುದು.

ನೈಋರ್ತ್ಯಾಂ ಚ ಗಭಸ್ತೀಶಾಚ್ಛಶಾಂಕೇಶೋಽಘಸಂಘಹೃತ್ ।
ತತ್ಪಶ್ಚಿಮೇ ಚೈತ್ರರಥಂ ಲಿಂಗಂ ದಿವ್ಯಗತಿಪ್ರದಂ ॥ ೧೯೩ ॥
ರೇವತೇಶಾತ್ಪಶ್ಚಿಮತೋ ಜೈಮಿನೀಶೋ ಮಹಾಘಹೃತ್ ।
ತತ್ರ ಲಿಂಗಾನ್ಯನೇಕಾನಿ ಋಷೀಣಾಮೃಷಿಸತ್ತಮ ॥ ೧೯೪ ॥
ಜೈಮಿನೀಶಾಚ್ಚ ವಾಯವ್ಯೇ ಲಿಂಗಂ ವೈ ರಾವಣೇಶ್ವರಂ ।
ನ ತದ್ದರ್ಶನತಃ ಪುಂಸಾಂ ರಾಕ್ಷಸಾನಾಂ ಮಹಾಭಯಂ ॥ ೧೯೫ ॥
ತದ್ದಕ್ಷಿಣೇ ವರಾಹೇಶೋ ಮಾಂಡವ್ಯೇಶಸ್ತತೋ ಯಮೇ ।
ತದ್ದಕ್ಷಿಣೇ ಪ್ರಚಂಡೇಶೋ ಯೋಗೇಶೋ ದಕ್ಷಿಣೇ ತತಃ ॥ ೧೯೬ ॥
ತದ್ದಕ್ಷಿಣೇ ಚ ಧಾತೇಶಃ ಸೋಮೇಶಶ್ಚ ತದಗ್ರತಃ ।
ತನ್ನೈಋರ್ತ್ಯಾಂ ಕನಕೇಶೋ ಮಹಾಕನಕದಃ ಸತಾಂ ॥ ೧೯೭ ॥
ತದುತ್ತರೇ ಪಾಂಡವಾನಾಂ ಪಂಚಲಿಂಗಾನಿ ಸನ್ಮುದೇ ।
ಸಂವರ್ತೇಶಸ್ತದಗ್ರೇ ಚ ಶ್ವೇತೇಶಸ್ತಸ್ಯ ಪಶ್ಚಿಮೇ ॥ ೧೯೮ ॥
ತತ್ಪಶ್ಚಾತ್ಕಲಶೇಶಶ್ಚ ಲಿಂಗಂ ಕಾಲಭಯಪ್ರದಂ ।
ಕಾಲೇನ ಪಾಶಿತೇ ಶ್ವೇತೇ ಮುನೇ ಕುಂಭಾತ್ಸಮುತ್ಥಿತಂ ॥ ೧೯೯ ॥

---

೧೯೩. ಗಭಸ್ತೀಶ್ವರನಿಗೆ ನೈಋರ್ತ್ಯದಲ್ಲಿ ಪಾಪಗಳನ್ನು ಕಳೆಯುವ ಶಶಾಂಕೇಶ್ವರನಿರುವನು. ಆತನಿಗೆ ಪಶ್ಚಿಮದಲ್ಲಿ ಉತ್ತಮಗತಿಯನ್ನು ಕೊಡುವ ಚೈತ್ರರಥಲಿಂಗವಿರುವುದು.

೧೯೪. ರೇವತೇಶ್ವರನ ಪಶ್ಚಿಮಕ್ಕೆ ಮಹಾಪಾತಕಗಳನ್ನು ಹರಿಸುವ ಜೈಮಿನೀಶ್ವರನಿರುವನು. ಎಲೈ ಮುನಿಸತ್ತಮನೆ! ಅಲ್ಲಿ ಅನೇಕ ಲಿಂಗಗಳಿರುವುವು.

೧೯೫. ಆ ಜೈಮಿನೀಶ್ವರನಿಗೆ ವಾಯುವ್ಯದಲ್ಲಿ ರಾವಣೇಶ್ವರ ಮಹಾಲಿಂಗ ವಿರುವುದು. ಅದರ ದರ್ಶನದಿಂದ ರಾಕ್ಷಸರಿಂದ ಭಯವು ಸಂಭವಿಸುವುದಿಲ್ಲ.

೧೯೬. ಅದರ ದಕ್ಷಿಣದಲ್ಲಿ ವರಾಹೇಶ್ವರಲಿಂಗವೂ ಅದಕ್ಕೂ ದಕ್ಷಿಣದಲ್ಲಿ ಮಾಂಡವ್ಯೇಶ್ವರಲಿಂಗವೂ ಇರುವುವು. ಅದರ ದಕ್ಷಿಣಕ್ಕೆ ಪ್ರಚಂಡೇಶ್ವರನೂ ಆತನ ದಕ್ಷಿಣಕ್ಕೆ ಯೋಗೇಶ್ವರನೂ ಇರುವರು.

೧೯೭. ಯೋಗೇಶ್ವರನ ದಕ್ಷಿಣದಲ್ಲಿ ಧಾತೇಶ್ವರನೂ, ಧಾತೇಶ್ವರನ ಇದಿರಿನಲ್ಲಿ ಸೋಮೇಶ್ವರನೂ, ಆತನಿಗೆ ನೈಋರ್ತ್ಯದಲ್ಲಿ ಸತ್ಪುರುಷರಿಗೆ ಅತುಲೈಶ್ವರ್ಯ ಪ್ರದನಾದ ಕನಕೇಶ್ವರನೂ ಇರುವರು.

೧೯೮. ಉತ್ತರದಲ್ಲಿ ಪಾಂಡವರು ಸ್ಥಾಪಿಸಿದ ಐದು ಲಿಂಗಗಳು ಸತ್ಪುರುಷರಿಗೆ ಸಂತೋಷವನ್ನುಂಟುಮಾಡುತ್ತಿರುವುವು. ಅದರ ಇದಿರಿನಲ್ಲಿ ಸಂವರ್ತೇಶ್ವರನೂ, ಪಶ್ಚಿಮಕ್ಕೆ ಶ್ವೇತೇಶ್ವರನೂ ಇರುವನು.

೧೯೯. ಶ್ವೇತೇಶ್ವರನಿಗೆ ಪಶ್ಚಿಮದಲ್ಲಿ ಕಾಲನ ದೆಸೆಯಿಂದ ಅಭಯವನ್ನು

ನಾಗಗಂಧರ್ವಯಕ್ಷಾಣಾಂ ಕಿನ್ನರಾಪ್ಸರಸಾಮಪಿ ।
ದೇವರ್ಷಿಗಣವೃಂದಾನಾಂ ನಾನಾಸಿದ್ಧಿಕರಾಣ್ಯಪಿ ॥ ೨೧೨ ॥
ಶಕ್ರೇಶಾದ್ದಕ್ಷಿಣೇ ಭಾಗೇ ಫಾಲ್ಗುನೇಶೋ ಮಹಾಘಹೃತ್ ।
ಮಹಾಪಾಶುಪತೇಶಶ್ಚ ತದ್ಯಾಮ್ಯಾಂ ಶುಭಕೃತ್ಪರಃ ॥ ೨೧೩ ॥
ತತ್ಪಶ್ಚಿಮೇ ಸಮುದ್ರೇಶ ಈಶಾನೇಶಸ್ತದುತ್ತರೇ ।
ತತ್ಪೂರ್ವೇ ಲಾಂಗಲೀಶಶ್ಚ ಸರ್ವಸಿದ್ಧಿಸಮರ್ಪಕಃ ॥ ೨೧೪ ॥
ರಾಗದ್ವೇಷವಿನಿರ್ಮುಕ್ತಾಃ ಸಿದ್ಧಿಂ ಯಾಂತಿ ಚ ಪೂಜಕಾಃ ।
ತೇಷಾಂ ಮೋಕ್ಷೋ ಮಯಾ ಖ್ಯಾತೋ ನ ತು ತೇ ದೇವಿ ಮಾನವಾಃ ॥
ಮಧುಪಿಂಗಶ್ವೇತಕೇತೂ ಲಾಂಗಲೀಶೇ ತಪಸ್ವಿನೌ ।
ಅನೇನೈವ ಶರೀರೇಣ ಜಗ್ಮತುಃ ಸಿದ್ಧಿಮುತ್ತಮಾಂ ॥ ೨೧೬ ॥
ತತ್ರೈವ ನಕುಲೀಶಶ್ಚ ಕಪಿಲೇಶಶ್ಚ ತತ್ರ ವೈ ।
ರಹಸ್ಯಂ ಪರಮಂ ಚೋಭೌ ಮಮ ವ್ರತನಿಷೇವಿಣೌ ॥ ೨೧೭ ॥

---

೨೧೨. ಅವುಗಳು ನಾಗರು, ಗಂಧರ್ವರು, ಯಕ್ಷರು, ಕಿನ್ನರರು, ಅಪ್ಸರರು, ದೇವತೆಗಳು, ಮಹರ್ಷಿಗಳು, ಗಣಗಳು ಮುಂತಾದ ಸಮೂಹಗಳಿಗೆ ಬಹುವಿಧ ಗಳಾದ ಸಿದ್ಧಿಗಳನ್ನು ಕೈಗೂಡಿಸುತ್ತಿರುವುವು.

೨೧೩. ಶಕ್ರೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ಮಹಾಪಾತಕಗಳನ್ನು ಪರಿಹರಿಸುವ ಫಾಲ್ಗುನೇಶ್ವರನೂ, ಆತನ ದಕ್ಷಿಣಕ್ಕೆ ಮಂಗಳಕಾರಕನೂ, ಶ್ರೇಷ್ಠನೂ ಆದ ಮಹಾಪಾಶುಪತೇಶ್ವರನೂ ಇರುವರು.

೨೧೪. ಅದಕ್ಕೆ ಪಶ್ಚಿಮದಲ್ಲಿ ಸಮುದ್ರೇಶ್ವರನೂ, ಆತನಿಗೆ ಉತ್ತರದಲ್ಲಿ ಈಶಾನೇಶ್ವರನೂ ಇರುವರು. ಈಶಾನೇಶ್ವರನಿಗೆ ಪೂರ್ವದಲ್ಲಿ ಸರ್ವಕಾಲ ಗಳಲ್ಲಿಯೂ ಸಿದ್ಧಿಯನ್ನುಂಟುಮಾಡುವ ಲಾಂಗಲೀಶ್ವರನಿರುವನು.

೨೧೫. ಎಲೌ ದೇವಿಯೆ! ಯಾವ ಅರ್ಚಕರು ರಾಗದ್ವೇಷಗಳಿಂದ ಮುಕ್ತ ರಾಗಿರುವರೊ, ಅವರೇ ಮೋಕ್ಷಕ್ಕೆ ಭಾಗಿಗಳಾಗಿರುವರು. ಅಷ್ಟಸಿದ್ಧಿಗಳನ್ನು ಪಡೆದ ಅವರನ್ನು ಕೇವಲ ಮಾನವರೆಂದು ತಿಳಿಯಬಾರದು.

೨೧೬. ಪೂರ್ವದಲ್ಲಿ ಉತ್ತಮತಪಸ್ವಿಗಳಾದ ಮಧುಪಿಂಗ ಮತ್ತು ಶ್ವೇತ ಕೇತುಗಳೆಂಬ ಈರ್ವರು ಈ ಲಾಂಗಲೀಶ್ವರನ ಸಮೀಪದಲ್ಲಿಯೇ ತಪಸ್ಸನ್ನಾಚರಿಸು ತ್ತಿದ್ದು ಪಾಂಚಭೌತಿಕದೇಹಗಳಿಂದಲೇ ಉತ್ತಮಸದ್ಗತಿಯನ್ನು ಪಡೆದರು.

೨೧೭. ಅಲ್ಲಿಯೇ ನಕುಲೀಶ್ವರನೂ, ಕಪಿಲೇಶ್ವರನೂ ಇರುವರು. ಈ ನಕುಲ ಮತ್ತು ಕಪಿಲರು ನನ್ನ ವ್ರತವನ್ನೇ ಸೇವಿಸುತ್ತಿದ್ದರೆಂಬ ವಿಷಯವು ಪರಮರಹಸ್ಯವಾದುದು.

ತತ್ಸನ್ನಿಧೌ ಪ್ರೀತಿಕೇಶಸ್ತತ್ರ ಪ್ರೀತಿರ್ಮಮ ಪ್ರಿಯೇ ।
ತತ್ರೋಪವಾಸಾದೇಕಸ್ಮಾತ್ಫಲಮಬ್ದಶತಾಧಿಕಂ ॥ ೨೧೮ ॥
ಏಕಂ ಜಾಗರಣಂ ಕೃತ್ವಾ ಪ್ರೀತಿಕೇಶ ಉಪೋಷಿತಃ ।
ಗಣತ್ವಪದವೀ ತಸ್ಯ ನಿಶ್ಚಿತಾ ಮಮ ಪರ್ವಣಿ ॥ ೨೧೯ ॥
ದೇವಸ್ಯ ದಕ್ಷಿಣೇ ಭಾಗೇ ತತ್ರ ವಾಪೀ ಶುಭೋದಕಾ ।
ತದಂಬುಸ್ಪ್ರಾಶನಂ ನೄಣಾಮಪುನರ್ಭವಹೇತವೇ ॥ ೨೨೦ ॥
ತಜ್ಜಲಾತ್ಪಶ್ಚಿಮೇ ಭಾಗೇ ದಂಡಪಾಣಿಃ ಸದಾವತಿ ।
ತತ್ಪ್ರಾಚ್ಯಾವಾಚ್ಯುತ್ತರಸ್ಯಾಂ ತಾರಃ ಕಾಲಃ ಶಿಲಾದಜಃ ॥ ೨೨೧ ॥
ಲಿಂಗತ್ರಯಮಿಂ ಹೃದಬ್ಜೇ ಯಚ್ಛ್ರದ್ಧಯಾ ಪ್ರೀತಮರ್ಚಯೇತ್ ।
ಯೈಸ್ತತ್ರ ತಜ್ಜಲಂ ಪೀತಂ ಕೃತಾರ್ಥಾಸ್ತೇ ನರೋತ್ತಮಾಃ ॥ ೨೨೨ ॥
ಅವಿಮುಕ್ತಸಮೀಪೇಽಚ್ಯೋಃ ಮೋಕ್ಷೇಶೋ ಮೋಕ್ಷಬುದ್ಧಿದಃ ।
ಕರುಣೇಶೋ ದಯಾಧಾಮ ತದುದೀಚ್ಯಾಂ ಸಮರ್ಚಯೇತ್ ॥ ೨೨೩ ॥

---

೨೧೮. ಎಲೌ ಪ್ರಿಯಳೆ! ಆ ಲಿಂಗಗಳ ಸನ್ನಿಧಿಯಲ್ಲಿರುವ ಪ್ರೀತಿಕೇಶ್ವರ ಲಿಂಗದಲ್ಲಿ ನನಗೆ ಅಪಾರವಾದ ಅಭಿಮಾನವಿರುವುದು. ಅಲ್ಲಿ ಒಂದು ಉಪವಾಸ ವನ್ನು ಮಾಡಿದರೂ ನೂರುವರ್ಷಗಳ ಉಪವಾಸವ್ರತಕ್ಕೂ ಅಧಿಕವಾದ ಫಲವು ದೊರಕುವುದು.

೨೧೯. ನನ್ನ ಪರ್ವದಿವಸವಾದ ಶಿವರಾತ್ರಿಯ ದಿನದಲ್ಲಿ ಉಪವಾಸದೊಡನೆ ಒಂದು ರಾತ್ರಿಯ ಜಾಗರಣೆಯನ್ನು ಪ್ರೀತಿಕೇಶನ ಸನ್ನಿಧಿಯಲ್ಲಿ ಮಾಡಲು ಆ ಭಕ್ತನಿಗೆ ಗಣತ್ವಪದವಿಯು ಖಂಡಿತವಾಗಿಯೂ ಲಭಿಸುವುದು.

೨೨೦. ಈ ಮಹಾಲಿಂಗದ ದಕ್ಷಿಣದಲ್ಲಿ ಶುಭಜಲಾನ್ವಿತವಾದ ಕೊಳ ವೊಂದಿರುವುದು. ಅದರ ನೀರನ್ನು ಕುಡಿಯುವ ಮಾತ್ರದಿಂದಲೇ ಮನುಜರು ಪುನರಾವೃತ್ತಿರಹಿತವಾದ ಪದವನ್ನು ಪಡೆಯುವರು.

೨೨೧. ಆ ಕೊಳದ ಪಶ್ಚಿಮಭಾಗದಲ್ಲಿ ದಂಡಪಾಣಿಯು ನಿಂತು ನಿತ್ಯವೂ ಕ್ಷೇತ್ರವನ್ನು ಕಾಪಾಡುತ್ತಿರುವನು. ಆತನಿಗೆ ಪೂರ್ವದಲ್ಲಿ ತಾರಕೇಶ್ವರನೂ, ಪಶ್ಚಿಮದಲ್ಲಿ ಕಾಲೇಶ್ವರನೂ, ಉತ್ತರದಲ್ಲಿ ನಂದಿಕೇಶೇಶ್ವರನೂ ಇರುವರು.

೨೨೨. ಯಾವನು ಶ್ರದ್ಧಾನ್ವಿತವಾಗಿ ತನ್ನ ಹೃದಯಕಮಲದಲ್ಲಿ ಈ ಲಿಂಗ ತ್ರಯವನ್ನು ಪೂಜಿಸುವನೊ, ಯಾರು ಆ ಕೊಳದ ಜಲವನ್ನು ಪಾನಮಾಡು ವರೊ, ಆ ಮನುಜಶ್ರೇಷ್ಠರೇ ಕೃತಕೃತ್ಯರು.

೨೨೩. ಅವಿಮುಕ್ತಕ್ಷೇತ್ರದ ಸಮೀಪದಲ್ಲಿರುವ ಮೋಕ್ಷಾಭಿಲಾಷೆ ಯನ್ನುಂಟುಮಾಡುವ ಮೋಕ್ಷೇಶ್ವರನು ಜಗತ್ಪೂಜ್ಯನು. ಆತನ ಉತ್ತರದಲ್ಲಿರುವ ದಯಾಸಮುದ್ರನಾದ ಕರುಣೇಶ್ವರನನ್ನು ಸಕಲಜನರೂ ಪೂಜಿಸಬೇಕು.

ಸ್ವರ್ಣಾಕ್ಷೇಶಸ್ತು ತತ್ಪ್ರಾಚ್ಯಾಂ ಜ್ಞಾನದಸ್ತಸ್ಯ ಚೋತ್ತರೇ ।
ಸೌಭಾಗ್ಯಗೌರೀ ಸಂಪೂಜ್ಯಾ ಬಹುಸೌಭಾಗ್ಯಸಂಪದೇ ॥ ೨೨೪ ॥
ವಿಶ್ವೇಶಾದ್ದಕ್ಷಿಣೇ ಭಾಗೇ ನಿಕುಂಭೇಶಃ ಪ್ರಯತ್ನತಃ ।
ಕ್ಷೇತ್ರಕ್ಷೇಮಕರಃ ಪೂಜ್ಯಸ್ತತ್ಪಶ್ಚಾದ್ವಿಘ್ನನಾಯಕಃ ॥ ೨೨೫ ॥
ಸರ್ವವಿಘ್ನಚ್ಛಿದಭ್ಯರ್ಚ್ಯಶ್ಚತುರ್ಥ್ಯಾಂ ತು ವಿಶೇಷತಃ ।
ವಿರೂಪಾಕ್ಷೋ ನಿಕುಂಭೇಶಾದ್ವಹ್ನೌ ಪೂಜ್ಯಃ ಸುಸಿದ್ಧಿದಃ ॥ ೨೨೬ ॥
ತದ್ದಕ್ಷಿಣೇ ಚ ಶುಕ್ರೇಶಃ ಪುತ್ರಪೌತ್ರಪ್ರವರ್ಧನಃ ।
ತದುದೀಚ್ಯಾಂ ಮಹಾಲಿಂಗಂ ದೇವಯಾನೀಶ್ವರಾಭಿಧಂ ॥ ೨೨೭ ॥
ಶುಕ್ರೇಶಾದಗ್ರತಃ ಪೂಜ್ಯಃ ಕಚೇಶ ಇತಿ ಸಂಜ್ಞಿತಃ ।
ಶುಕ್ರಕೂಪಮುಪಸ್ಪೃಶ್ಯ ಶುಕ್ರೇಶಾತ್ಪೂರ್ವದಿಕ್ಸ್ಥಿತಃ ॥ ೨೨೮ ॥
ಭವಾನೀಶೌ ನಮಸ್ಯೌ ಚ ಶುಕ್ರೇಶಾತ್ಪಶ್ಚಿಮೇ ಶುಭೌ ।
ಭಕ್ತಪೋತಪ್ರದೌ ತೌ ತು ನಿಜಭಕ್ತಸ್ಯ ಸರ್ವದಾ ॥ ೨೨೯ ॥

---

೨೨೪. ಆ ಲಿಂಗದ ಪೂರ್ವಕ್ಕೆ ಸ್ವರ್ಣಾಕ್ಷೇಶ್ವರನೂ, ಉತ್ತರಕ್ಕೆ ಜ್ಞಾನದೇಶ್ವರನೂ, ಇರುವರು. ಅನೇಕ ಸೌಭಾಗ್ಯಸಂಪತ್ತುಗಳನ್ನು ಅಪೇಕ್ಷಿಸುವವರು ಅಲ್ಲಿರುವ ಸೌಭಾಗ್ಯಗೌರಿಯನ್ನು ಚೆನ್ನಾಗಿ ಪೂಜಿಸಬೇಕು.

೨೨೫. ವಿಶ್ವೇಶ್ವರನಿಗೆ ದಕ್ಷಿಣದಲ್ಲಿ ನೆಲಸಿ ಕ್ಷೇತ್ರದಲ್ಲಿ ಸಕಲಕ್ಷೇಮಗಳನ್ನೂ ಕೊಡುವ ನಿಕುಂಭೇಶ್ವರನನ್ನೂ, ಆತನ ಪಶ್ಚಿಮಕ್ಕಿರುವ ವಿಘ್ನೇಶ್ವರನನ್ನೂ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

೨೨೬. ಸಕಲವಿಘ್ನಹರನಾದ ವಿಘ್ನೇಶ್ವರನನ್ನು ಚತುರ್ಥಿಯ ತಿಥಿಯಲ್ಲಿ ವಿಶೇಷವಾಗಿ ಪೂಜಿಸಬೇಕು. ನಿಕುಂಭೇಶ್ವರನಿಗೆ ಆಗ್ನೇಯ ಕೋಣದಲ್ಲಿರುವ ವಿರೂಪಾಕ್ಷನನ್ನು ಪೂಜಿಸಲು ಕಾರ್ಯಸಿದ್ಧಿಯಾಗುವುದು.

೨೨೭. ಆತನ ದಕ್ಷಿಣಕ್ಕೆ ಪುತ್ರಪೌತ್ರಸಂತಾನವನ್ನು ಅನುಗ್ರಹಿಸುವ ಶುಕ್ರೇಶ್ವರನಿರುವನು. ಅದರ ಉತ್ತರದಲ್ಲಿಯೇ ದೇವಯಾನೀಶ್ವರನಾಮಕವಾದ ಮಹಾಲಿಂಗವಿರುವುದು.

೨೨೮. ಶುಕ್ರೇಶ್ವರನಿಗೆ ಎದರಾಗಿರುವ ಕಚೇಶ್ವರಲಿಂಗವೂ ಲೋಕಪೂಜ್ಯವಾಗಿರುವುದು. ಶುಕ್ರೇಶ್ವರಕೂಪದ ಜಲವನ್ನು ಸ್ಪರ್ಶಮಾಡಲು ಅಶ್ವಮೇಧವನ್ನು ಮಾಡಿದ ಫಲವು ಲಭಿಸುವುದು.

೨೨೯. ಶುಕ್ರೇಶ್ವರನಿಗೆ ಪಶ್ಚಿಮದಲ್ಲಿ ಶುಭಕರಗಳಾದ ಭವಾನೀಶ್ವರರೆಂಬ ಹೆಸರಿನ ಎರಡು ಲಿಂಗಗಳನ್ನು ನಮಸ್ಕರಿಸಬೇಕು. ಆ ಎರಡು ಲಿಂಗಗಳೂ ಭಕ್ತರನ್ನು ಸಂಸಾರಸಾಗರದಲ್ಲಿ ಕಡೆಹಾಯಿಸುವ ನಾವೆಗಳಂತಿರುವುವು.

ಅಲರ್ಕೇಶಃ ಸಮಭ್ಯರ್ಚ್ಯಃ ಶುಕ್ರೇಶಾತ್ಪೂರ್ವದಿಕ್ಸ್ಥಿತಃ ।
ಮದಾಲಸೇಶ್ವರಸ್ತತ್ರ ತತ್ಪೂರ್ವೇ ಸರ್ವವಿಘ್ನಹೃತ್ ॥ ೨೩೦ ॥
ಗಣೇಶ್ವರೇಶ್ವರಂ ಲಿಂಗಂ ಸರ್ವಸಿದ್ಧಿಕರಂ ಪರಂ ।
ಹತ್ವಾ ಲಂಕೇಶ್ವರಂ ವಿಪ್ರ ರಘುನಾಥಪ್ರತಿಷ್ಠಿತಂ ॥ ೨೩೧ ॥
ತಲ್ಲಿಂಗಸ್ಪರ್ಶನಾದಾಶು ಬ್ರಹ್ಮಹಾಪಿ ವಿಶುಧ್ಯತಿ ।
ಮಹಾಪುಣ್ಯಪ್ರದಂ ಚಾನ್ಯತ್ತತ್ರಾರ್ಚ್ಯಂ ತ್ರಿಪುರಾಂತಕಂ ॥ ೨೩೨ ॥
ದತ್ತಾತ್ರೇಯೇಶ್ವರಂ ಲಿಂಗಂ ತತ್ರ ಪಶ್ಚಿಮತಃ ಶುಭಂ ।
ತದ್ಯಾಮ್ಯಾಂ ಹರಿಕೇಶೇಶೋ ಗೋಕರ್ಣೇಶಸ್ತತಃ ಪರಂ ॥ ೨೩೩ ॥
ಸರಸ್ತದಗ್ರೇ ಪಾಪಘ್ನಂ ತತ್ಪಶ್ಚಾಚ್ಚ ಧ್ರುವೇಶ್ವರಃ ।
ತದಗ್ರೇ ಧ್ರುವಕುಂಡಂ ಚ ಪಿತೃಪ್ರೀತಿಕರಂ ಪರಂ ॥ ೨೩೪ ॥
ತದುತ್ತರೇ ಪಿಶಾಚೇಶಃ ಪೈಶಾಚ್ಯಪದಹಾರಕಃ ।
ಪಿತ್ರೀಶಸ್ತದ್ಯಮದಿಶಿ ಪಿತೃಕುಂಡಂ ತದಗ್ರತಃ ॥ ೨೩೫ ॥

---

೨೩೦. ಆ ಶುಕ್ರೇಶ್ವರನ ಪೂರ್ವದಲ್ಲಿರುವ ಅಲರ್ಕೇಶ್ವರನೂ ಸಂಪೂಜ್ಯನಾದವನು. ಅಲ್ಲಿಯೇ ಮದಾಲಸೇಶ್ವರನೂ ಆತನ ಪೂರ್ವಕ್ಕೆ ಸಮಸ್ತ ವಿಘ್ನಗಳನ್ನೂ ಕಳೆಯುವ ಗಣಪತಿಯೂ ಇರುವರು.

೨೩೧. ಎಲೈ ಬ್ರಾಹ್ಮಣೋತ್ತಮನೆ! ಗಣೇಶ್ವರೇಶ್ವರವೆಂಬ ಈ ಲಿಂಗವು ಸರ್ವಸಿದ್ಧಿಕರವೂ ಸರ್ವೋತ್ಕೃಷ್ಟವೂ ಆಗಿರುವುದು. ಲಂಕೇಶ್ವರನಾದ ರಾವಣಾಸುರನನ್ನು ಸಂಹರಿಸಿದಮೇಲೆ ಶ್ರೀರಾಮಚಂದ್ರನು ಈ ಲಿಂಗವನ್ನಿಲ್ಲಿ ಸ್ಥಾಪಿಸಿದನು.

೨೩೨. ಈ ಲಿಂಗದ ಸ್ಪರ್ಶನದಿಂದಲೇ ಬ್ರಹ್ಮಘಾತಕನೂ ಸಹ ತತ್ಕ್ಷಣದಲ್ಲಿಯೇ ಪರಿಶುದ್ಧನಾಗುವನು. ಅಲ್ಲಿಯೇ ಇರುವ ತ್ರಿಪುರಾಂತಕೇಶ್ವರಲಿಂಗವೂ ಮಹಾಪುಣ್ಯಪ್ರದವೂ, ಪೂಜಾರ್ಹವೂ ಆಗಿರುವುದು.

೨೩೩. ಅದಕ್ಕೆ ಪಶ್ಚಿಮದಲ್ಲಿ ಶುಭವಾದ ದತ್ತಾತ್ರೇಯೇಶ್ವರ ಲಿಂಗವಿರುವುದು. ಅದರ ದಕ್ಷಿಣಕ್ಕೆ ಹರಿಕೇಶೇಶ್ವರನೂ ಆ ಬಳಿಕ ಗೋಕರ್ಣೇಶ್ವರನೂ ಇರುವರು.

೨೩೪. ಆ ಲಿಂಗದ ಸನ್ನಿಧಿಯಲ್ಲಿ ಪಾಪಗಳನ್ನು ಕಳೆಯುವ ತೀರ್ಥವಿರುವುದು. ಅದರ ಪಶ್ಚಿಮಕ್ಕೆ ಧೃವೇಶ್ವರಲಿಂಗವಿರುವುದು. ಅದರ ಮುಂದೆಯೇ ಪಿತೃಗಳಿಗೆ ಅತ್ಯಂತ ಪ್ರೀತಿಕರವಾವ ಧ್ರುವಕುಂಡವಿರುವುದು.

೨೩೫. ಆ ಕುಂಡದ ಉತ್ತರದಲ್ಲಿ ಪಿಶಾಚಜನ್ಮವನ್ನು ನಿವಾರಿಸುವ ಪಿಶಾಚೇಶ್ವರನಿರುವನು. ಅದಕ್ಕೆ ದಕ್ಷಿಣದಲ್ಲಿ ಪಿತ್ರೀಶ್ವರನೂ ಅದರ ಎದುರಾಗಿ ಪಿತೃಕುಂಡವೂ ಇರುವುವು.

ತತ್ರ ಶ್ರಾದ್ಧಕೃತಾಂ ಪುಂಸಾಂ ತುಷ್ಯೇಯುಃ ಪ್ರಪಿತಾಮಹಾಃ ।
ಅಗ್ರೇ ಧ್ರುವೇಶಾತ್ತಾರೇಶೋ ವೈದ್ಯನಾಥಃ ಸ ಏವ ಹಿ ॥ ೨೩೬ ॥
ತನ್ನೈಋರ್ತ್ಯಾಂ ಮನೋರ್ಲಿಂಗಂ ವಂಶವೃದ್ಧಿಕರಂ ಪರಂ ।
ಪ್ರಿಯವ್ರತೇಶ್ವರಂ ಲಿಂಗಂ ವೈದ್ಯನಾಥಪುರೋಗತಂ ॥ ೨೩೭ ॥
ತದ್ಯಾಮ್ಯಾಂ ಮುಚುಕುಂದೇಶಸ್ತತ್ಪಾರ್ಶ್ವೇ ಗೌತಮೇಶ್ವರಃ ।
ತತ್ಪಶ್ಚಿಮೇನ ಭದ್ರೇಶಸ್ತದ್ಯಾಮ್ಯಾಮೃಷ್ಯಶೃಂಗಿಣಃ ॥ ೨೩೮ ॥
ಬ್ರಹ್ಮೇಶಸ್ತತ್ಪುರಸ್ತಾಚ್ಚ ಪರ್ಜನ್ಯೇಶಸ್ತದೀಶಗಃ ।
ತತ್ಪ್ರಾಚ್ಯಾಂ ನಹುಷೇಶಶ್ಚ ವಿಶಾಲಾಕ್ಷೀ ಚ ತತ್ಪುರಃ ॥ ೨೩೯ ॥
ವಿಶಾಲಾಕ್ಷೀಶ್ವರಂ ಲಿಂಗಂ ತತ್ರೈವ ಕ್ಷೇತ್ರಪುಣ್ಯದಂ ।
ಜರಾಸಂಧೇಶ್ವರಂ ಲಿಂಗಂ ತದ್ಯಾಮ್ಯಾಂ ಜ್ವರನಾಶನಂ ॥ ೨೪೦ ॥
ತತ್ಪುರಸ್ತಾದ್ಧಿರಣ್ಯಾಕ್ಷಲಿಂಗಂ ಪೂಜ್ಯಂ ಹಿರಣ್ಯದಂ ।
ತತ್ಪಶ್ಚಿಮೇ ಗಯಾಧೀಶಸ್ತತ್ಪ್ರತೀಚ್ಯಾಂ ಭಗೀರಥಃ ॥ ೨೪೧ ॥

---

೨೩೬. ಅಲ್ಲಿ ಶ್ರಾದ್ಧಗಳನ್ನು ಮಾಡಿದವರಲ್ಲಿ ಪಿತೃದೇವತೆಗಳು ಅತ್ಯಂತ ಸಂತೋಷಗೊಳ್ಳುವರು. ಧ್ರುವೇಶ್ವರನಿಗೆ ಎದುರಾಗಿಯೇ ಪ್ರಣವೇಶ್ವರನಿರುವನು. ಆತನಿಗೇ ವೈದ್ಯನಾಥೇಶ್ವರನೆಂದೂ ಹೆಸರುಂಟು.

೨೩೭. ಆ ಲಿಂಗದ ನೈಋರ್ತ್ಯಕ್ಕೆ ವಂಶವೃದ್ಧಿಕರವೆನಿಸಿದ ಮನುಲಿಂಗವಿರುವುದು. ವೈದ್ಯನಾಥನ ಮುಂದೆಯೇ ಪ್ರಿಯವ್ರತೇಶ್ವರವೆಂಬ ಮತ್ತೊಂದು ಲಿಂಗವಿರುವುದು.

೨೩೮. ಅದರ ದಕ್ಷಿಣದಿಕ್ಕಿಗೆ ಮುಚುಕುಂದೇಶ್ವರನೂ, ಆದರ ಪಕ್ಕದಲ್ಲಿಯೇ ಗೌತಮೇಶ್ವರನೂ, ಅವರ ಪಶ್ಚಿಮಕ್ಕೆ ಭದ್ರೇಶ್ವರನೂ, ಆತನ ದಕ್ಷಿಣಕ್ಕೆ ಋಷ್ಯಶೃಂಗೇಶ್ವರನೂ ಇರುವರು.

೨೩೯. ಆ ಲಿಂಗದ ಮುಂದೆ ಬ್ರಹ್ಮೇಶ್ವರನೂ, ಅದರ ಈಶಾನ್ಯದಿಕ್ಕಿನಲ್ಲಿ ಪರ್ಜನ್ಯೇಶ್ವರನೂ ಇರುವರು. ಪರ್ಜನ್ಯೇಶ್ವರನಿಗೆ ಪೂರ್ವದಲ್ಲಿ ನಹುಷೇಶ್ವರನೂ, ಆತನಿಗಭಿಮುಖವಾಗಿ ವಿಶಾಲಾಕ್ಷಿಯೂ ಇರುವರು.

೨೪೦. ಕಾಶೀಕ್ಷೇತ್ರದ ವಾಸದ ಪುಣ್ಯವನ್ನು ಕೊಡುವ ವಿಶಾಲಾಕ್ಷೀಶ್ವರ ಲಿಂಗವೂ ಅಲ್ಲಿಯೇ ಇರುವುದು. ಅದರ ದಕ್ಷಿಣಕ್ಕೆ ಸರ್ವಜ್ವರನಿವಾರಕವೆನಿಸಿದ ಜರಾಸಂಧೇಶ್ವರಲಿಂಗವಿರುವುದು.

೨೪೧. ಅದರ ಪಶ್ಚಿಮಕ್ಕೆ ಧನಸಮೃದ್ಧಿದಾಯಕವಾದ ಹಿರಣ್ಯಾಕ್ಷೇಶ್ವರ ಲಿಂಗವಿರುವುದು. ಅದರ ಪಶ್ಚಿಮದಲ್ಲಿ ಗಯಾಧೀಶ್ವರನೂ, ಇನ್ನೂ ಪಶ್ಚಿಮಕ್ಕೆ ಭಗೀರಥೇಶ್ವರನೂ ಇರುವರು.

ತದಗ್ರೇ ಚ ದಿಲೀಪೇಶೋ ಬ್ರಹ್ಮೇಶಾತ್ಪಶ್ಚಿಮೇ ಮುನೇ ।
ತತ್ರ ಲಿಂಗಂ ಸಕುಂಡಂ ಚ ಸ್ನಾತುರಿಷ್ಟಫಲಪ್ರದಂ ॥ ೨೪೨ ॥
ತತ್ರ ವಿಶ್ವಾವಸೋರ್ಲಿಂಗಂ ಮುಂಡೇಶಸ್ತತ್ರ ಪೂರ್ವತಃ ।
ತದ್ದಕ್ಷಿಣೇ ವಿಧೀಶಶ್ಚ ತದ್ಯಾಮ್ಯಾಂ ವಾಜಿಮೇಧಕಃ ॥ ೨೪೩ ॥
ದಶಾಶ್ವಮೇಧಿಕೇ ಸ್ನಾತ್ವಾ ದೃಷ್ಟ್ವಾ ತಲ್ಲಿಂಗಮುತ್ತಮಂ ।
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥ ೨೪೪ ॥
ತದುತ್ತರೇ ಮಾತೃತೀರ್ಥಂ ಸ್ನಾತುರ್ಜನ್ಮಭಯಾಪಹೃತ್ ।
ತತ್ರ ಸ್ನಾನಂ ತು ಯಃ ಕುರ್ಯಾನ್ನಾರೀ ವಾ ಪುರುಷೋಽಪಿ ವಾ ॥೨೪೫॥
ಈಪ್ಸಿತಂ ಫಲಮಾಪ್ನೋತಿ ಮಾತೄಣಾಂ ಚ ಪ್ರಸಾದತಃ ।
ದಕ್ಷಿಣೇ ತವ ಕುಂಡಾಚ್ಚ ಪುಷ್ಪದಂತೇಶ್ವರಃ ಪರಃ ॥ ೨೪೬ ॥
ತದಗ್ನಿದಿಶಿ ದೇವರ್ಷಿಗಣಲಿಂಗಾನ್ಯನೇಕಶಃ ।
ಪುಷ್ಪದಂತಾದ್ದಕ್ಷಿಣತಃ ಸಿದ್ಧೀಶಃ ಪರಿಸಿದ್ಧಿದಃ ॥ ೨೪೭ ॥
ಪಂಚೋಪಚಾರಪೂಜಾತಃ ಸ್ವಪ್ನೇ ಸಿದ್ಧಿಂ ಪರಾಂ ದಿಶೇತ್ ।
ರಾಜ್ಯಪ್ರಾಪ್ತಿರ್ಭವೇತ್ಪುಂಸಾಂ ಹರಿಶ್ಚಂದ್ರೇಶಸೇವಯಾ ॥ ೨೪೮ ॥

---

೨೪೨. ಅದರ ಸಮ್ಮುಖದಲ್ಲಿ ಬ್ರಹ್ಮೇಶ್ವರನಿಗೆ ಪಶ್ಚಿಮಕ್ಕೆ ದಿಲೀಪೇಶ್ವರನಿರುವನು. ಅಲ್ಲಿರುವ ಲಿಂಗವೂ ಕುಂಡವೂ ಸ್ನಾನಾರ್ಚನೆಗಳನ್ನು ಮಾಡುವವರಿಗೆ ಇಷ್ಟಫಲಗಳನ್ನು ಕೊಡುವುವು.

೨೪೩. ಅಲ್ಲಿಯೇ ವಿಶ್ವಾವಸುವಿನ ಲಿಂಗವೂ, ಅದರ ಪೂರ್ವಕ್ಕೆ ಮುಂಡೇಶ್ವರಲಿಂಗವೂ ಇರುವುವು. ಅದರ ದಕ್ಷಿಣಕ್ಕೆ ವಿಧೀಶ್ವರನೂ, ಅದರ ದಕ್ಷಿಣದಿಕ್ಕಿನಲ್ಲಿ ವಾಜಿಮೇಧೇಶ್ವರನೂ ಇರುವರು.

೨೪೪. ದಶಾಶ್ವಮೇಧಘಟ್ಟದಲ್ಲಿ ಸ್ನಾನವನ್ನು ಮಾಡಿ ಆ ಉತ್ತಮ ಲಿಂಗವನ್ನು ನೋಡಲು ಮಾನವನು ಹತ್ತು ಅಶ್ವಮೇಧಗಳನ್ನು ಮಾಡಿದ ಫಲವನ್ನು ಪಡೆಯುವನು.

೨೪೫–೨೪೬. ಆ ಲಿಂಗದ ಉತ್ತರಕ್ಕೆ ಮಾತೃತೀರ್ಥವಿರುವುದು. ಅಲ್ಲಿ ಸ್ನಾನವನ್ನು ಮಾಡಿದವರಿಗೆ ಪುನರ್ಜನ್ಮದ ಭಯವಿಲ್ಲ. ಸ್ತ್ರೀಯೇ ಆಗಲಿ, ಪುರುಷನೇ ಆಗಲಿ ಅದರಲ್ಲಿ ಸ್ನಾನವನ್ನು ಮಾಡಲು ಸಪ್ತಮಾತೃಕೆಯರ ಪ್ರಸಾದದಿಂದ ಮನೋಭೀಷ್ಟವನ್ನು ಪಡೆಯಬಹುದು. ನಿನ್ನ (ಅಗಸ್ತ್ಯೇಶ್ವರನ) ಕುಂಡಕ್ಕೆ ಪಶ್ಚಿಮದಲ್ಲಿ ಪುಷ್ಪದಂತೇಶ್ವರನೆಂಬ ಮಹಾಲಿಂಗವಿರುವುದು.

೨೪೭. ಅದರ ಆಗ್ನೇಯದಿಕ್ಕಿಗೆ ದೇವರ್ಷಿಗಳಿಂದ ಸ್ಥಾಪಿತಗಳಾದ ಅನೇಕ ಲಿಂಗಗಳಿರುವುವು. ಪುಷ್ಪದಂತೇಶ್ವರನಿಗೆ ದಕ್ಷಿಣದಲ್ಲಿರುವ ಸಿದ್ಧೀಶ್ವರನು ಪರಮಸಿದ್ಧಿಕಾರಕನಾಗಿರುವನು.

೨೪೮. ಈ ಲಿಂಗದ ಪಂಚೋಪಚಾರಪೂಜೆಯನ್ನು ಮಾಡಿದವರಿಗೆ ಸ್ವಪ್ನ

ತತ್ಪಶ್ಚಿಮೇ ನೈಋರ್ತೇಶೋಽಂಗೀರಸೇಶಸ್ತತೋ ಯಮೇ ।
ತದ್ದಕ್ಷಿಣೇ ಚ ಕ್ಷೇಮೇಶಶ್ಚಿತ್ರಾಂಗೇಶಸ್ತತೋ ಯಮೇ ॥ ೨೪೯ ॥
ತದ್ದಕ್ಷಿಣೇ ಚ ಕೇದಾರೋ ರುದ್ರಾನುಚರತಾಪ್ರದಃ ।
ಚಂದ್ರಸೂರ್ಯಾನ್ವಯೈರ್ಭೂಪೈಃ ಕೇದಾರಾದ್ದಕ್ಷಿಣಾಪಥೇ ॥ ೨೫೦ ॥
ಪ್ರತಿಷ್ಠಿತಾನಿ ಲಿಂಗಾನಿ ಶತಶೋಽಥ ಸಹಸ್ರಶಃ ।
ಲೋಲಾರ್ಕಾದ್ದಕ್ಷಿಣಾಶಾಯಾಂ ಸರ್ವಾಶಾಪೂರಕೋಽರ್ಚಿತಃ ॥ ೨೫೧ ॥
ಕರಂಧಮೇಶ್ವರಂ ಲಿಂಗಂ ತತ್ಪ್ರತೀಚ್ಯಾಂ ಮಹಾಫಲಂ ।
ತತ್ಪಶ್ಚಿಮೇ ಮಹಾದುರ್ಗಾ ಮಹಾದುರ್ಗಪ್ರಭಂಜನೀ ॥ ೨೫೨ ॥
ಶುಷ್ಕೇಶ್ವರಂ ಚ ತದ್ಯಾಮ್ಯಾಂ ಶುಷ್ಕಯಾ ಸರಿತಾರ್ಚಿತಂ ।
ಜನಕೇಶಸ್ತತ್ಪ್ರತೀಚ್ಯಾಂ ಶಂಕುಕರ್ಣಸ್ತದುತ್ತರೇ ॥ ೨೫೩ ॥
ಮಹಾಸಿದ್ಧೀಶ್ವರಂ ಲಿಂಗಂ ತತ್ಪ್ರಾಚ್ಯಾಂ ಸರ್ವಸಿದ್ಧಿದಂ ।
ಸಿದ್ಧಕುಂಡೇ ನರಃ ಸ್ನಾತ್ವಾ ದೃಷ್ಟ್ವಾ ಸಿದ್ಧೇಶ್ವರಂ ಮಹತ್ ॥ ೨೫೪ ॥

---

ದಲ್ಲಿ ಕಾರ್ಯಸಿದ್ಧಿಯನ್ನು ಸೂಚಿಸುವನು. ಹರಿಶ್ಚಂದ್ರೇಶ್ವರನ ಸೇವೆಯನ್ನು ಮಾಡುವ ಮನುಷ್ಯರಿಗೆ ರಾಜ್ಯಪ್ರಾಪ್ತಿಯಾಗುವುದು.

೨೪೯. ಅದರ ಪಶ್ಚಿಮಕ್ಕೆ ನೈಋರ್ತೇಶ್ವರನೂ, ಅದರ ದಕ್ಷಿಣಕ್ಕೆ ಅಂಗಿರಸೇಶ್ವರನೂ, ಅದರ ದಕ್ಷಿಣದಲ್ಲಿ ಕ್ಷೇಮೇಶ್ವರನೂ, ಮತ್ತೂ ದಕ್ಷಿಣಕ್ಕೆ ಚಿತ್ರಾಂಗೇಶ್ವರನೂ ಇರುವರು.

೨೫೦–೨೫೧. ಅದಕ್ಕೂ ದಕ್ಷಿಣಕ್ಕೆ ರುದ್ರಾನುಚರರ ಪದವಿಯನ್ನು ಕೊಡುವ ಕೇದಾರೇಶ್ವರನಿರುವನು. ಈ ಕೇದಾರೇಶ್ವರನಿಗೆ ದಕ್ಷಿಣವಾಗಿ ಸೂರ್ಯ ಚಂದ್ರವಂಶೋದ್ಭೂತರಾದ ಅನೇಕ ರಾಜರು ನೂರಾರು ಸಾವಿರಾರು ಮಹಾ ಲಿಂಗಗಳನ್ನು ಸ್ಥಾಪಿಸಿರುವರು. ಲೋಲಾರ್ಕನಿಗೆ ದಕ್ಷಿಣದಲ್ಲಿ ಸಕಲಾಭೀಷ್ಟ ಗಳನ್ನು ಪೂರೈಸುವ ಅರ್ಕವಿನಾಯಕನು ಎಲ್ಲರ ಪೂಜೆಗೆ ಪಾತ್ರನಾಗಿರುವನು.

೨೫೨. ಅದಕ್ಕೆ ಪಶ್ಚಿಮದಲ್ಲಿರುವ ಕರಂಧಮೇಶ್ವರಲಿಂಗವು ಮಹಾಫಲ ದಾಯಕವಾದುದು. ಅದಕ್ಕೆ ಪಶ್ಚಿಮದಲ್ಲಿ ಮಹತ್ತರಗಳಾದ ಕಷ್ಟಗಳನ್ನು ಹೋಗಲಾಡಿಸುವ ಮಹಾದುರ್ಗಾದೇವಿಯಿರುವಳು.

೨೫೩. ಆ ದುರ್ಗೆಯ ದಕ್ಷಿಣದಲ್ಲಿ ಅಸೀನದ್ಯಭಿಮಾನಿದೇವತೆಯಿಂದ ಪೂಜಿತನಾದ ಶುಷ್ಕೇಶ್ವರನಿರುವನು. ಅದರ ಪಶ್ಚಿಮಕ್ಕೆ ಜನಕೇಶ್ವರನೂ, ಉತ್ತರಕ್ಕೆ ಶಂಕುಕರ್ಣೇಶ್ವರನೂ ಇರುವರು.

೨೫೪–೨೫೫. ಅದರ ಪೂರ್ವದಲ್ಲಿ ಮಹಾಸಿದ್ಧೀಶ್ವರವೆಂಬ ಸರ್ವಸಿದ್ಧಿಪ್ರದ ವಾದ ಲಿಂಗವಿರುವುದು. ಸಿದ್ಧಕುಂಡದಲ್ಲಿ ಸ್ನಾನವನ್ನು ಮಾಡಿದ ನರನು ಸಿದ್ಧೇಶ್ವರಮಹಾಲಿಂಗದ ದರ್ಶನವನ್ನು ಮಾಡಲು ಸಮಸ್ತ ಸಿದ್ಧಿಗಳನ್ನೂ

ಸರ್ವಾಸಾಮೇವ ಸಿದ್ಧೀನಾಂ ಪರಂ ಗಚ್ಛತಿ ಮಾನವಃ ।
ಶಂಕುಕರ್ಣೇಶವಾಯವ್ಯೇ ಲಿಂಗಂ ವಾಡವ್ಯಸಂಜ್ಞಿತಂ ॥ ೨೫೫ ॥
ತದಗ್ರೇ ಚ ವಿಭಾಂಡೇಶಃ ಕಹೋಲೇಶಸ್ತದುತ್ತರೇ ।
ತತ್ರ ದ್ವಾರೇಶ್ವರಂ ಲಿಂಗಂ ದೇವೀ ದ್ವಾರೇಶ್ವರೀ ಶುಭಾ ॥ ೨೫೬ ॥
ತತ್ಪೂಜನಾದ್ಭವೇತ್ಸಿದ್ಧಿರಾನಂದಾರಣ್ಯವಸ್ತಿದಾ ।
ರಕ್ಷಕಾಶ್ಚ ಗಣಾಸ್ತತ್ರ ನಾನಾರೂಪಾಯುಧಾ ಮುನೇ ॥ ೨೫೭ ॥
ತತ್ರೈವ ಹರಿದೇಶಂ ಚ ಲಿಂಗಂ ಕಾತ್ಯಾಯನಂ ತತಃ ।
ತತ್ಪಾರ್ಶ್ವೇ ಜಾಂಗಲೇಶಶ್ಚ ತತ್ಪಶ್ಚಾನ್ಮುಕುಟೇಶ್ವರಃ ॥ ೨೫೮ ॥
ತತ್ರೈವ ಕುಂಡಂ ವಿಮಲಂ ಸರ್ವಯಾತ್ರಾಫಲಪ್ರದಂ ।
ಸ್ನಾತ್ವಾ ಮುಕುಟಕುಂಡೇ ಚ ದೃಷ್ಟ್ವಾ ವೈ ಮುಕುಟೇಶ್ವರಂ ॥ ೨೫೯ ॥
ಯಾತ್ರಾಯಾ ಸರ್ವಲಿಂಗಾನಾಂ ಯತ್ಫಲಂ ತದವಾಪ್ಯತೇ ।
ತಪಸಶ್ಚಾಪಿ ಯೋಗಸ್ಯ ಸಿದ್ಧಿದಾ ಸಾವನೀ ಪರಾ ॥ ೨೬೦ ॥
ಮುನೇ ಶತಂ ಸಹಸ್ರಾಣಿ ತತ್ರ ಲಿಂಗಾನಿ ಸಿದ್ಧಯೇ ।
ಏಕಾ ದಿಗುತ್ತರಾ ದೇವಿ ವಾರಾಣಸ್ಯಾಂ ಪ್ರಿಯಾ ಮಮ ॥ ೨೬೧ ॥

---

ಸಂಪೂರ್ಣವಾಗಿ ಹೊಂದುವನು. ಶಂಕುಕರ್ಣೇಶ್ವರನಿಗೆ ವಾಯುವ್ಯಮೂಲೆಯಲ್ಲಿ ವಾಡವ್ಯನಾಮಕವಾದ ಲಿಂಗವಿರುವುದು.

೨೫೬. ಅದರ ಎದುರಾಗಿ ವಿಭಾಂಡೇಶ್ವರನೂ, ಅದರ ಉತ್ತರಕ್ಕೆ ಕಹೋಲೇಶ್ವರನೂ, ಅಲ್ಲಿಯೇ ದ್ವಾರೇಶ್ವರನೂ ಮಂಗಳಪ್ರದೆಯಾದ ದ್ವಾರೇಶ್ವರೀ ದೇವಿಯೂ ಇರುವರು.

೨೫೭–೨೫೮. ಆಕೆಯನ್ನು ಪೂಜಿಸುವುದರಿಂದ ಆನಂದಕಾನನಕ್ಷೇತ್ರದ ವಾಸವನ್ನೊದಗಿಸುವ ಪುಣ್ಯವು ಲಭಿಸುವುದು. ಅಯ್ಯಾ ಮುನಿವರ್ಯನೆ! ಅಲ್ಲಿ ಅನೇಕ ರೂಪಗಳುಳ್ಳವರೂ, ಅನೇಕಾಯುಧಪಾಣಿಗಳೂ ಆದ ಗಣಗಳು ಕ್ಷೇತ್ರ ರಕ್ಷಕರಾಗಿರುವರು. ಅಲ್ಲಿಯೇ ಹರಿದೀಶ್ವರ, ಕಾತ್ಯಾಯನೇಶ್ವರಲಿಂಗಗಳಿರುವುವು. ಅವುಗಳ ಪಕ್ಕದಲ್ಲಿಯೇ ಜಾಂಗಲೇಶ್ವರನೂ, ಆತನ ಪಶ್ಚಿಮಕ್ಕೆ ಮುಕುಟೇಶ್ವರನೂ ಇರುವರು.

೨೫೯–೨೬೦. ಅಲ್ಲಿಯೇ ಸಕಲಯಾತ್ರಾಫಲದಾಯಕವಾದ ನಿರ್ಮಲ ಕುಂಡವಿರುವುದು. ಮುಕುಟಕುಂಡದಲ್ಲಿ ಸ್ನಾನವನ್ನು ಮಾಡಿ ಮುಕುಟೇಶ್ವರನ ದರ್ಶನವನ್ನು ಮಾಡಿದವನು ಸಮಸ್ತ ಲಿಂಗಗಳ ಯಾತ್ರೆಯನ್ನು ಮಾಡಿದ ಫಲವನ್ನು ಪಡೆಯುವನು. ಆ ಭೂಪ್ರದೇಶವೇ ತಪಸ್ಸು ಮತ್ತು ಯೋಗಾಭ್ಯಾಸಗಳಲ್ಲಿ ನಿರತರಾಗಿರುವವರಿಗೆ ಉತ್ತಮಸಿದ್ಧಿಯನ್ನು ಕೈಗೂಡಿಸುವುದು.

೨೬೧. ಎಲೈ ಮಹರ್ಷಿಯೆ! ಅಲ್ಲಿ ಕಾರ್ಯಸಿದ್ಧಿಯನ್ನು ಕೊಡುವ

**ತತ್ರಾಪಿ ಪಂಚಾಯತನೇ ರತಿರ್ಮೇ ನಿತರಾಂ ಪ್ರಿಯೇ ।**
**ಉತ್ಪತ್ತಿಸ್ಥಿತಿಕಾಲೇಽಪಿ ತತ್ರಾಹಂ ಸರ್ವದಾ ಸ್ಥಿತಃ ॥ ೨೬೨ ॥**
**ಏವಂ ಯಸ್ತು ವಿಜಾನಾತಿ ನ ಸ ಪಾಪೈಃ ಪ್ರಲಿಪ್ಯತೇ ।**
**ಸತ್ಯಂ ಸತ್ಯಂ ಪುನಃ ಸತ್ಯಂ ತ್ರಿಸತ್ಯಂ ನಾನ್ಯಥಾ ಪ್ರಿಯೇ ॥ ೨೬೩ ॥**
**ಶೀಘ್ರಂ ತತ್ರೈವ ಗಂತವ್ಯಂ ಯದೀಚ್ಛೇನ್ಮಾಮಕಃ ಪರಂ ।**
**ಉದ್ದೇಶಮಾತ್ರಂ ಲಿಂಗಾನಿ ಕಥಿತಾನಿ ಮಯಾ ಮುನೇ ॥ ೨೬೪ ॥**
**ದ್ವಿಸ್ತ್ರಿಃ ಕೃತ್ವಃ ಸ್ಥಾಪಿತಾನಿ ಭಕ್ತ್ಯಾ ಲಿಂಗಾನಿ ಕಾನಿಚಿತ್ ।**
**ನ ತಾನಿ ಪುನರುಕ್ತಾನಿ ಶ್ರದ್ಧಯಾಽರ್ಚ್ಯಾನಿ ಸರ್ವತಃ ॥ ೨೬೫ ॥**
**ಏತಾನಿ ಯಾನಿ ಲಿಂಗಾನಿ ಯಾನಿ ಕುಂಡಾನಿ ಯೇಽಂಧವಃ ।**
**ಯಾ ವಾಪ್ಯಸ್ತಾನಿ ಸರ್ವಾಣಿ ಶ್ರದ್ಧೇಯಾನಿ ಮನೀಷಿಭಿಃ ॥ ೨೬೬ ॥**
**ಏತೇಷಾಂ ದರ್ಶನಾತ್ಸ್ನಾನಾತ್ಫಲಮುತ್ರೋತ್ತರೋತ್ತರಂ ।**
**ಅತ್ರತ್ಯಾನಾಂ ಚ ಲಿಂಗಾನಾಂ ಕೂಪಾನಾಂ ಸರಸಾಮಪಿ ।**
**ವಾಪೀನಾಂ ಚಾಪಿ ಮೂರ್ತೀನಾಂ ಕಃ ಸಂಖ್ಯಾತುಂ ಪ್ರಭುರ್ಭವೇತ್ ॥**

---

ನೂರಾರು ಸಾವಿರಾರು ಲಿಂಗಗಳಿರುವುವು. ಎಲೌ ದೇವಿಯೆ! ವಾರಾಣಸೀ ಕ್ಷೇತ್ರದಲ್ಲಿ ಉತ್ತರದಿಕ್ಕೊಂದೇ ನನಗೆ ಅತ್ಯಂತ ಪ್ರಿಯವಾಗಿರುವುದು.

೨೬೨. ಆ ದಿಕ್ಕಿನಲ್ಲಿಯೂ ನನಗೆ ನಿತ್ಯವೂ ಓಂಕಾರೇಶ್ವರಲಿಂಗದಲ್ಲಿಯೇ ಅತ್ಯಂತಾಸಕ್ತಿಯಿರುವುದು. ಪ್ರಪಂಚದ ಉತ್ಪತ್ತಿ, ಸ್ಥಿತಿ, ಲಯಕಾಲಗಳೆಲ್ಲವು. ಗಳಲ್ಲಿಯೂ ನಾನು ಅಲ್ಲಿ ನೆಲಸಿರುವೆನು.

೨೬೩. ಇದನ್ನು ಯಾವನು ತಿಳಿದುಕೊಳ್ಳುವನೊ, ಅವನಿಗೆ ಪಾಪಗಳೆಂದಿಗೂ ಅಂಟಲಾರವು. ಎಲೌ ಪ್ರಿಯೆಯೆ! ಈ ಮಾತು ಸುಳ್ಳಾಗಲಾರದು. ಸತ್ಯವೆಂದು ಮತ್ತೆ ಮತ್ತೆ ಶಪಥಪೂರ್ವಕವಾಗಿ ಹೇಳುವೆನು.

೨೬೪. ನನ್ನ ಪದವಿಯನ್ನಪೇಕ್ಷಿಸುವವನು ಶೀಘ್ರವಾಗಿ ಅಲ್ಲಿಗೇ ಹೋಗಬೇಕು. ಎಲೈ ಅಗಸ್ತ್ಯಮುನಿಯೆ! ಈ ಲಿಂಗಗಳ ಹೆಸರುಗಳನ್ನು ನಿನಗೆ ಕೇವಲ ಉದ್ದೇಶಮಾತ್ರಕ್ಕಾಗಿ ಹೇಳಿರುವೆನು.

೨೬೫. ಅನೇಕ ಲಿಂಗಗಳು ಪ್ರತಿಷ್ಠಾಪಕರ ಭಕ್ತ್ಯನುಸಾರವಾಗಿ ಎರಡು ಮೂರು ಕಡೆಗಳಲ್ಲಿ ಸ್ಥಾಪಿತಗಳಾಗಿರುವುವು. ಅವುಗಳ ಹೆಸರುಗಳನ್ನು ಪುನರುಕ್ತಿಯೆಂದೆಣಿಸಬಾರದು. ಅವುಗಳೆಲ್ಲವನ್ನೂ ಶ್ರದ್ಧೆಯಿಂದ ಪೂಜಿಸಬೇಕು.

೨೬೬. ಮೇಲೆ ಹೇಳಿರುವ ಯಾವ ಲಿಂಗಗಳೂ, ಕೂಪಗಳೂ, ಕುಂಡಗಳೂ, ವಾಪಿಗಳೂ ಇರುವುವೊ, ಅವುಗಳೆಲ್ಲವುಗಳ ಮಹಿಮೆಯಲ್ಲಿಯೂ ಬುದ್ಧಿಶಾಲಿಗಳು ಶ್ರದ್ಧೆಯನ್ನಿಡಬೇಕು.

೨೬೭. ಇವುಗಳ ದರ್ಶನದಿಂದಲೂ, ಸ್ನಾನದಿಂದಲೂ ಫಲವು ಉತ್ತರೋತ್ತರಾಧಿಕ್ಯದಿಂದ ಲಭಿಸುವುದು. ಇಲ್ಲಿರುವ ಲಿಂಗಗಳನ್ನಾಗಲಿ, ಕೂಪಗಳ

ಆನಂದಕಾನನಸ್ಥಾನಿ ತೃಣಾನ್ಯಪಿ ಪರಂ ವರಂ ।
ದಿವೌಕಸೋಽಪಿ ನಾನ್ಯತ್ರ ಯತ್ಪುನರ್ಜನ್ಮಭಾಜನಂ ॥ ೨೬೮ ॥
ಸರ್ವಲಿಂಗಮಯೀ ಕಾಶೀ ಸರ್ವತೀರ್ಥೈಕಜನ್ಮಭೂಃ ।
ಸ್ವರ್ಗಾಪವರ್ಗಯೋರ್ದಾತ್ರೀ ದೃಷ್ಟ್ವಾ ದೇಹಾಂತಸೇವಿತಾ ॥ ೨೬೯ ॥
ಮಮ ಪ್ರಿಯತಮಾ ದೇವಿ ತ್ವಮೇವ ತಪಸೋ ಬಲಾತ್ ।
ಸ್ವಭಾವತಸ್ತ್ವಿಯಂ ಕಾಶೀ ಸುಖವಿಶ್ರಾಮಭೂರ್ಮಮ ॥ ೨೭೦ ॥
ಯೇ ಕಾಶ್ಯಾ ನಾಮ ಗೃಹ್ಣಂತಿ ಯೇಽನುಮೋದಂತ ಏವ ಹಿ ।
ತೇ ಮೇ ಶಾಖಾವಿಶಾಖಾಭಾಃ ಸ್ಕಂದನಂದಿಗಜಾಸ್ಯವತ್ ॥ ೨೭೧ ॥
ತ ಏವ ಭಕ್ತಾ ಮೇ ದೇವಿ ತ ಏವ ಮಮ ಸೇವಕಾಃ ।
ಮುಮುಕ್ಷವಸ್ತ ಏವಾತ್ರ ಯೇ ಚಾನಂದವನೌಕಸಃ ॥ ೨೭೨ ॥
ತಪಸ್ತಪ್ತಂ ಮಹತ್ತೈಸ್ತು ಕೃತಂ ತೈಸ್ತು ಮಹಾವ್ರತಂ ।
ತೈಶ್ಚ ದತ್ತಂ ಮಹಾದಾನಂ ಯೇ ಚಾನಂದವನೌಕಸಃ ॥ ೨೭೩ ॥

---

ನ್ನಾಗಲಿ, ಸರೋವರಗಳನ್ನಾಗಲಿ, ವಾಪಿಗಳನ್ನಾಗಲಿ, ಮೂರ್ತಿಗಳನ್ನಾಗಲಿ ಗಣನೆಮಾಡಲು ಯಾವನು ತಾನೆ ಸಮರ್ಥನಾದಾನು ?

೨೬೮. ಆನಂದಕಾನನದಲ್ಲಿರುವ ತೃಣಗಳಾಗಿ ಹುಟ್ಟುವುದೂ ಸಹ ಸರ್ವೋತ್ಕೃಷ್ಟವೇ. ಇತರ ಸ್ಥಳಗಳಲ್ಲಿ ದೇವತೆಗಳಾಗಿಯೂ ಹುಟ್ಟಬಾರದು. ಅವರಿಗೆ ಪುನರ್ಜನ್ಮವಿರುವುದಷ್ಟೆ.

೨೬೯. ಈ ಕಾಶೀಕ್ಷೇತ್ರವು ಸರ್ವಲಿಂಗಮಯವೂ, ಸರ್ವಕ್ಷೇತ್ರಗಳ ಜನ್ಮಭೂಮಿಯೂ, ಆಗಿರುವುದು. ಇದನ್ನು ನೋಡಿದರೂ ದೇಹಾವಸಾನದ ವರೆಗೆ ಸೇವಿಸಿದರೂ ಸ್ವರ್ಗಮೋಕ್ಷಗಳೆರಡೂ ಲಭಿಸುವುವು.

೨೭೦. ಎಲೌ ದೇವಿಯೆ ! ನನ್ನ ಪ್ರಿಯತಮೆಯಾದ ನೀನೇ ತಪೋಬಲದಿಂದ ಕಾಶೀಕ್ಷೇತ್ರವಾಗಿ ಪರಿಣಮಿಸಿರುವೆ. ಇದೇ ನನಗೆ ಸೌಖ್ಯದ ಮತ್ತು ವಿಶ್ರಾಂತಿಯ ನೆಲೆಯಾಗಿರುವುದು.

೨೭೧. ಯಾರು ಕಾಶೀಕ್ಷೇತ್ರದ ಹೆಸರನ್ನು ಸ್ಮರಿಸುತ್ತಿರುವರೊ, ಯಾರು ಅದರಲ್ಲಿಯೇ ಆನಂದಗೊಳ್ಳುತ್ತಿರುವರೊ, ಅವರೆಲ್ಲರೂ ಷಣ್ಮುಖ, ವೃಷಭ, ಗಜಾನನರಂತೆ ನನಗೆ ಶಾಖೋಪಶಾಖೆಗಳಾಗಿರುವರೆಂದು ತಿಳಿಯಬೇಕು.

೨೭೨. ದೇವೀ ! ಯಾರು ಆನಂದವನದಲ್ಲಿ ವಾಸಮಾಡುತ್ತಿರುವರೊ, ಅವರೇ ನನ್ನ ಭಕ್ತರು. ಅವರೇ ನನ್ನ ಪರಿಚಾರಕರು. ಅವರೇ ಮೋಕ್ಷಕ್ಕೆ ಭಾಗಿಗಳಾಗುವರು.

೨೭೩. ಯಾರು ಕಾಶೀನಿವಾಸಿಗಳಾಗಿರುವರೊ, ಅವರನ್ನೇ ಮಹತ್ತರವಾದ ತಪಸ್ಸನ್ನು ಮಾಡಿದವರೆಂದೂ, ಮಹಾವ್ರತಗಳನ್ನಾಚರಿಸಿದವರೆಂದೂ, ಮಹಾದಾನಗಳನ್ನು ಮಾಡಿದವರೆಂದೂ ತಿಳಿ.

ತೇ ಸ್ನಾತಸರ್ವತೀರ್ಥಾ ವೈ ತೇಽಖಿಲಾಧ್ವರದೀಕ್ಷಿತಾಃ ।
ತೇ ಚೀರ್ಣಸರ್ವಧರ್ಮಾ ಹಿ ಯೇ ಚಾನಂದವನೌಕಸಃ ॥ ೨೭೪ ॥
ಸುರಾಸುರೋರಗನರಾ ಭೂಮಿಭಾರಾಯ ತೇಽಖಿಲಾಃ ।
ವಯಸ್ಯಪೀಹ ಚರಮೇ ಯೇನಾನಂದವನೌಕಸಃ ॥ ೨೭೫ ॥
ಅಂತ್ಯಜೋಽಪಿ ವರಃ ಕಾಶ್ಯಾಂ ನಾನ್ಯತ್ರ ಶ್ರುತಿಪಾರಗಃ ।
ಸಂಸಾರಪಾರಗಃ ಪೂರ್ವಸ್ತ್ವಂತ್ಯಶ್ಚಾಽಂತ್ಯಜತೋಽಪ್ಯಧಃ ॥ ೨೭೬ ॥
ಸ ಏವ ನೂನಂ ಸರ್ವಜ್ಞಃ ಸ ಏವ ಹ್ಯಧಿಕೇಕ್ಷಣಃ ।
ಯಃ ಪಾರ್ಥಿವೀಂ ತನುಂ ಹಿತ್ವಾ ಕಾಶ್ಯಾಂ ಧತ್ತೇ ಸುಧಾಮಯೀಂ॥೨೭೭॥
ಶ್ರುತ್ವಾಧ್ಯಾಯಮಿದಂ ಪುಣ್ಯಂ ಸರ್ವತೀರ್ಥರಹಸ್ಯವತ್ ।
ಕಾಶೀದರ್ಶನಜಂ ಪುಣ್ಯಂ ಪ್ರಾಪ್ನೋತಿ ನಿಯತಂ ನರಃ ॥ ೨೭೮ ॥
ಯಃ ಪಠೇದಿಮಮಧ್ಯಾಯಂ ಪ್ರಾತಃ ಪ್ರಾತರ್ದಿನೇ ದಿನೇ ।
ದೃಷ್ಟಾನಿ ತೇನ ಸರ್ವಾಣಿ ತೀರ್ಥಾನ್ಯೇತಾನಿ ನಾನ್ಯಥಾ ॥ ೨೭೯ ॥

---

೨೭೪. ಆನಂದವನವಾಸಿಗಳಾದವರೇ ಸಕಲ ತೀರ್ಥಗಳಲ್ಲಿ ಸ್ನಾನಮಾಡಿದವರೆಂದೂ, ಸಕಲಯಜ್ಞಗಳ ದೀಕ್ಷೆಗಳನ್ನು ಕೈಕೊಂಡವರೆಂದೂ, ಸಮಸ್ತ ಧರ್ಮಗಳನ್ನಾಚರಿಸಿದವರೆಂದೂ ತಿಳಿ.

೨೭೫. ದೇವತೆಗಳೇ ಆಗಲಿ, ರಾಕ್ಷಸರಾಗಲಿ, ನಾಗರಾಗಲಿ, ಮನುಷ್ಯರಾಗಲಿ, ಯಾರು ಆಯುಷ್ಯದ ಕಡೆಯಲ್ಲಾದರೂ ಆನಂದವನದಲ್ಲಿ ವಾಸಿಸುವುದಿಲ್ಲವೋ, ಅವರು ಕೇವಲ ಭೂಭಾರಕ್ಕಾಗಿಯೇ ಹುಟ್ಟಿರುವವರು.

೨೭೬. ಕಾಶಿಯಲ್ಲಿರುವ ಅಂತ್ಯಜನೂ ಇತರ ಕ್ಷೇತ್ರಗಳಲ್ಲಿರುವ ವೇದವೇದಾಂತಪಾರಂಗತನಿಗಿಂತಲೂ ಉತ್ತಮನು. ಮೊದಲನೆಯವನು ಸಂಸಾರದಿಂದ ಮುಕ್ತನಾಗುವನು. ಎರಡನೆಯವನು ಅಂತ್ಯಜನಿಗಿಂತಲೂ ಅಧಮನೆನಿಸುವನು.

೨೭೭. ಯಾವನು ಕಾಶಿಯಲ್ಲಿ ಪಾಂಚಭೌತಿಕವಾದ ದೇಹವನ್ನು ತ್ಯಜಿಸಿ ಅಮೃತಮಯವಾದುದನ್ನು ತಿಳಿಯುವನೊ, ಅವನೇ ನಿಜವಾಗಿಯೂ ಸರ್ವಜ್ಞನು. ಅವನೇ ದೂರದರ್ಶಿಯು.

೨೭೮. ಸಮಸ್ತತೀರ್ಥಗಳ ರಹಸ್ಯಗಳನ್ನೊಳಕೊಂಡ ಈ ಅಧ್ಯಾಯವನ್ನು ಕೇಳಿದ ನರನು ನಿಶ್ಚಯವಾಗಿಯೂ ಕಾಶಿಯ ದರ್ಶನವನ್ನುಮಾಡಿದ ಪುಣ್ಯವನ್ನು ಪಡೆಯುವನು.

೨೭೯. ಯಾವನು ಈ ಅಧ್ಯಾಯವನ್ನು ಪ್ರತಿದಿವಸವೂ ಪಠಿಸುತ್ತಿರುವನೊ, ಅವನು ಇಲ್ಲಿ ಹೇಳಿರುವ ಸಕಲತೀರ್ಥಗಳನ್ನೂ ನೋಡಿದವನಾಗುವನು. ಇದು ಸುಳ್ಳಲ್ಲ.

ಸರ್ವಲಿಂಗಮಯಾಧ್ಯಾಯಂ ಯೋಽಮುಂ ನಿತ್ಯಂ ಜಪೇತ್ಸುಧೀಃ ।
ನ ತಂ ಯಮೋ ನ ತಂ ದೂತಾ ನೈನಮಂಹೋಽಪಿ ಬಾಧತೇ ॥ ೨೮೦ ॥
ಬ್ರಹ್ಮಯಜ್ಞಫಲಂ ತಸ್ಯ ಜಾಯತೇ ಸುಕೃತಾತ್ಮನಃ ।
ಯೋ ಜಪೇದಮುಮಧ್ಯಾಯಂ ಶುಚಿಸ್ತದ್ಗತಮಾನಸಃ ॥ ೨೮೧ ॥
ಸ ಸ್ನಾತಃ ಸರ್ವಕುಂಡೇಷು ಸರ್ವವಾಪ್ಯಂಬುಪಃ ಸ ಚ ।
ಸರ್ವಲಿಂಗಾರ್ಚಕಃ ಸೋಽತ್ರ ಯೋಽಮುಮಧ್ಯಾಯಮಾಜಪೇತ್ ॥ ೨೮೨ ॥
ಕಿಮನ್ಯೈರ್ಬಹುಭಿಃ ಸ್ತೋತ್ರೈರತಿಸ್ತೋಕಫಲಪ್ರದೈಃ ।
ಮತ್ಪ್ರೇಮವದ್ಭಿರಧ್ಯಾಯೋ ಜಪ್ತವ್ಯೋಽಯಂ ಮಹಾಫಲಃ ॥ ೨೮೩ ॥
ಮಹಾದಾನೇಷು ದತ್ತೇಷು ಯತ್ಫಲಂ ಪ್ರಾಪ್ಯತೇಽತ್ರ ವೈ ।
ಸಕೃಜ್ಜಪಾನ್ಮಹಾಧ್ಯಾಯಾದಮುಷ್ಮಾತ್ತತ್ಸಮಾಪ್ಯತೇ ॥ ೨೮೪ ॥
ಸ್ನಾತ್ವಾ ಸರ್ವಾಣಿ ತೀರ್ಥಾನಿ ದೃಷ್ಟ್ವಾ ಲಿಂಗಾನ್ಯನೇಕಶಃ ।
ಯತ್ಫಲಂ ಲಭ್ಯತೇ ಮರ್ತ್ಯೈಸ್ತದೇತಜ್ಜಪನಾದ್ಧ್ರುವಂ ॥ ೨೮೫ ॥

---

೨೮೦. ಸಮಸ್ತಲಿಂಗಗಳ ನಾಮಗಳನ್ನೊಳಕೊಂಡ ಈ ಅಧ್ಯಾಯವನ್ನು ಯಾವ ಪ್ರಾಜ್ಞನು ನಿತ್ಯವೂ ಜಪಿಸುವನೊ, ಅವನನ್ನು ಯಮನಾಗಲಿ ಯಮ ದೂತರಾಗಲಿ ಬಾಧಿಸಲಾರರು. ಪಾತಕಗಳೂ ಕಳೆಯುವುವು.

೨೮೧. ಯಾವನು ಶುಚಿರ್ಭೂತನಾಗಿ ಏಕಾಗ್ರಮನಸ್ಸಿನಿಂದ ಈ ಅಧ್ಯಾಯವನ್ನು ಪಠಿಸುವನೊ, ಆ ಪುಣ್ಯಪುರುಷನಿಗೆ ಬ್ರಹ್ಮಯಜ್ಞ (ಜ್ಞಾನಯಜ್ಞ)ವನ್ನು ಮಾಡಿದ ಫಲವು ಲಭಿಸುವುದು.

೨೮೨. ಈ ಅಧ್ಯಾಯವನ್ನು ಜಪಿಸಿದವನೇ ಸಕಲ ಕುಂಡಗಳಲ್ಲಿ ಸ್ನಾನ ಮಾಡಿದವನೆಂದೂ, ಸಮಸ್ತವಾಪಿಗಳ ನೀರನ್ನು ಕುಡಿದವನೆಂದೂ, ಸರ್ವ ಲಿಂಗಗಳನ್ನು ಪೂಜಿಸಿದವನೆಂದೂ ತಿಳಿಯಬೇಕು.

೨೮೩. ಅಲ್ಪಫಲಗಳನ್ನು ಕೊಡುವ ಇತರ ಅನೇಕ ಸ್ತೋತ್ರಗಳಿಂದಾಗ ಬೇಕಾದುದೇನು ? ನನ್ನಲ್ಲಿ ಭಕ್ತಿಪ್ರೇಮಗಳಿರುವ ಎಲ್ಲರೂ ಮಹಾಫಲದಾಯಕ ವಾದ ಈ ಅಧ್ಯಾಯವನ್ನು ಜಪಿಸಬೇಕು.

೨೮೪. ಸಮಸ್ತ ಮಹಾದಾನಗಳನ್ನೂ ಈ ಕ್ಷೇತ್ರದಲ್ಲಿ ಮಾಡುವುದರಿಂದ ಯಾವ ಫಲವುಂಟೊ, ಈ ಮಹಾಧ್ಯಾಯವನ್ನು ಒಮ್ಮೆ ಜಪಿಸುವುದರಿಂದಲೂ ಆ ಫಲವೇ ಲಭಿಸುವುದು.

೨೮೫. ಸಮಸ್ತತೀರ್ಥಗಳಲ್ಲಿಯೂ ಮಿಂದು, ಅಸಂಖ್ಯಾತಗಳಾದ ಲಿಂಗ ಗಳನ್ನೆಲ್ಲ ನೋಡುವುದರಿಂದ ಮನುಷ್ಯನು ಯಾವ ಪುಣ್ಯವನ್ನು ಪಡೆಯುವನೊ, ಈ ಅಧ್ಯಾಯದ ಜಪದಿಂದಲೂ ಅದನ್ನೇ ಪಡೆಯುವನೆಂಬುದು ನಿಸ್ಸಂದೇಹವು.

ಇದಮೇವ ತಪೋಽತ್ಯುಗ್ರಮಯಮೇವ ಜಪೋ ಮಹಾನ್ ।
ಕಾಶೀಲಿಂಗಾವಲೀನಾಮಾಧ್ಯಾಯೋ ಜಪ್ಯೇತ ಯನ್ಮನೇ ॥ ೨೮೬ ॥
ಮಮ ದ್ರುಹೇ ನಾಸ್ತಿಕಾಯ ವೇದನಿಂದಾರತಾಯ ಚ ।
ನ ದಾತವ್ಯೋ ನ ದಾತವ್ಯೋ ನ ದಾತವ್ಯೋ ಜಪಸ್ತ್ವಯಂ ॥ ೨೮೭ ॥
ಅಧ್ಯಾಯಸ್ಯಾಸ್ಯ ಜಪನಾತ್ಪಾಪಂ ಬ್ರಹ್ಮವಧೋದ್ಭವಂ ।
ಅಗಮ್ಯಾಗಮನಂ ಚಾಪಿ ತಥಾಭಕ್ಷ್ಯಸ್ಯ ಭಕ್ಷಣಂ ॥ ೨೮೮ ॥
ಗುರುದಾರಾಭಿಚಾರೋತ್ಥಂ ಹೇಮಸ್ತೇಯಸಮುದ್ಭವಂ ।
ಮಾತಾಪಿತೃವಧಾಜ್ಜಾತಂ ಗೋಭ್ರೂಣಹನನೋದ್ಭವಂ ॥ ೨೮೯ ॥
ಮಹಾಪಾಪಾನಿ ಪಾಪಾನಿ ಜ್ಞಾತಾಜ್ಞಾತಾನಿ ಭೂರಿಶಃ ।
ಉಪಪಾಪಾನಿ ಪಾಪಾನಿ ಮನೋವಾಕ್ಕಾಯಜಾನ್ಯಪಿ ॥ ೨೯೦ ॥
ವಿಲಯಂ ಯಾಂತ್ಯಶೇಷಾಣಿ ನಿಃಸಂದೇಹಂ ಮಮಾಜ್ಞಯಾ ।
ಪುತ್ರಾನ್ಪೌತ್ರಾನ್ಧನಂ ಧಾನ್ಯಂ ಕಲತ್ರಂ ಕ್ಷೇತ್ರಮೇವ ಚ ॥ ೨೯೧ ॥
ಮನಃಸಮೀಹಿತಂ ಸರ್ವಂ ಸ್ವರ್ಗಂ ಮೋಕ್ಷಂ ಸುಖಾನ್ಯಪಿ ।
ಜಪ್ತ್ವಾಧ್ಯಾಯಮಿದಂ ವಿದ್ವಾನ್ಪ್ರಾಪ್ನುಯಾತ್ಯೇವ ನ ಸಂಶಯಃ ॥ ೨೯೨ ॥
ಇತಿ ಯಾವತ್ಸಮಾಖ್ಯಾತಿ ದೇವೋ ದೇವೀಪುರಃ ಕಥಾಂ ।
ತಾವನ್ನಂದೀ ಸಮಾಗತ್ಯ ಪ್ರಣಮ್ಯೇತಿ ವ್ಯಜಿಜ್ಞಪತ್ ॥ ೨೯೩ ॥

---

೨೮೬. ಕಾಶೀಕ್ಷೇತ್ರದಲ್ಲಿರುವ ಉತ್ತಮಲಿಂಗಗಳ ನಾಮಾವಳಿಯ ರೂಪವಾದ ಈ ಅಧ್ಯಾಯದ ಪಠನವೇ ಅತ್ಯುಗ್ರವಾದ ತಪಸ್ಸು. ಇದೇ ಮಹತ್ತರವಾದ ಜಪವು.

೨೮೭. ಈ ಜಪಾಧ್ಯಾಯವನ್ನು ನನ್ನನ್ನು ದ್ವೇಷಿಸುವವನಿಗಾಗಲಿ, ನಾಸ್ತಿಕನಿಗಾಗಲಿ, ವೇದನಿಂದಕನಿಗಾಗಲಿ ಸರ್ವಥಾ ಉಪದೇಶಮಾಡಬಾರದು.

೨೮೮–೨೯೨. ಈ ಅಧ್ಯಾಯದ ಜಪವನ್ನು ಮಾಡುವುದರಿಂದ ಬ್ರಹ್ಮಹತ್ಯೆಯ ಪಾಪವೂ, ಅಗಮ್ಯಾಗಮನವೂ, ಅಭಕ್ಷ್ಯಭಕ್ಷಣವೂ, ಗುರುತಲ್ಪಗಮನವೂ, ಸ್ವರ್ಣಸ್ತೇಯವೂ, ಮಾತಾಪಿತೃವಧೆಯೂ, ಗೋಹತ್ಯೆಭ್ರೂಣಹತ್ಯೆಗಳೂ, ಮಹಾಪಾತಕಗಳೂ, ಉಪಪಾತಕಗಳೂ, ತಿಳಿದೂ ತಿಳಿಯದೆಯೂ ಮಾಡಿರುವ ಅಸಂಖ್ಯಾತಪಾತಕಗಳೂ, ಮನಸ್ಸು, ಮಾತು, ದೇಹಗಳಿಂದ ಮಾಡಿದ ಇತರ ಪಾಪಗಳೂ, ಎಲ್ಲವೂ ನನ್ನ ಅಪ್ಪಣೆಯಿಂದ ನಿಶ್ಶೇಷವಾಗಿ ನಾಶವನ್ನು ಹೊಂದುವುವು. ಯಾವ ಮಾನವನಾದರೂ ಭಕ್ತಿಯುಕ್ತನಾಗಿ ಈ ಅಧ್ಯಾಯದ ಪಠನವನ್ನು ಮಾಡಲು ಪುತ್ರರನ್ನೂ, ಪೌತ್ರರನ್ನೂ, ಧನವನ್ನೂ, ಧಾನ್ಯಸಮೃದ್ಧಿಯನ್ನೂ, ಕಳತ್ರಸೌಖ್ಯವನ್ನೂ, ಮನಸ್ಸಿನ ಇತರ ಅಭಿಲಾಷೆಗಳನ್ನೂ ಅಲ್ಲದೆ ಸ್ವರ್ಗಮೋಕ್ಷಗಳನ್ನೂ ಪಡೆಯುವುದರಲ್ಲಿ ಸಂಶಯವೇ ಇಲ್ಲವು.

೨೯೩. ಇಂತೆಂದು ಮಹಾದೇವನು ಪಾರ್ವತಿಯೊಡನೆ ಮಾತನಾಡುತ್ತಿ

**ಜಾತಾ ಪರಿಸಮಾಪ್ತಿಶ್ಚ ಮಹಾಪ್ರಾಸಾದನಿರ್ಮಿತೇಃ ।**
**ಸಜ್ಜೀಕೃತೋ ರಥಶ್ಚಾಯಂ ಬ್ರಹ್ಮಾದ್ಯಾ ಮಿಲಿತಾಃ ಸುರಾಃ ॥ ೨೯೪ ॥**
**ತಾರ್ಕ್ಷ್ಯಗಃ ಪುಂಡರೀಕಾಕ್ಷೋ ದ್ವಾರಿ ತಿಷ್ಠತಿ ಸಾನುಗಃ ।**
**ಪ್ರತೀಕ್ಷಮಾಣೋಽವಸರಂ ಪುರಸ್ಕೃತ್ಯ ಮುನೀಶ್ವರಾನ್ ॥ ೨೯೫ ॥**
**ಚತುರ್ದಶಸು ಲೋಕೇಷು ಯೇ ಯೇ ತಿಷ್ಠಂತಿ ಸುವ್ರತಾಃ ।**
**ತೇ ನಿಶಮ್ಯಾದ್ಯ ಮಿಲಿತಾಃ ಪ್ರವೇಶಿಕಮಹೋತ್ಸವಂ ॥ ೨೯೬ ॥**

**ಸ್ಕಂದ ಉವಾಚ :—**

**ಇತಿ ನಂದಿವಚಃ ಶ್ರುತ್ವಾ ದೇವೋ ದೇವೀಸಮಾಯುತಃ ।**
**ದಿವ್ಯಂ ರಥಂ ಸಮಾರುಹ್ಯ ನಿರ್ಜಗಾಮ ತ್ರಿವಿಷ್ಟಪಾತ್ ॥ ೨೯೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಕ್ಷೇತ್ರತೀರ್ಥವರ್ಣನಂ" ನಾಮ ಸಪ್ತನವತಿತಮೋಽಧ್ಯಾಯಃ**

---

ದ್ವಂತೆಯೇ ನಂದೀಶ್ವರನು ಬಂದು ಸಾಷ್ಟಾಂಗಪ್ರಣಾಮವನ್ನುಮಾಡಿ ಮುಂದೆ ಹೇಳುವಂತೆ ಬಿನ್ನವಿಸತೊಡಗಿದನು.

೨೯೪. "ದೇವೇಶ್ವರನೆ! ಮಹಾಪ್ರಾಸಾದದ ನಿರ್ಮಾಣಕಾರ್ಯವು ಕೊನೆಗೊಂಡಿರುವುದು. ನಿನ್ನನ್ನು ಕರೆದುಕೊಂಡು ಹೋಗಲು ಈ ಮಹಾರಥವೂ ಸುಸಜ್ಜಿತವಾಗಿ ನಿಂತಿರುವುದು. ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಗುಂಪುಗೂಡಿ ಕಾದುನಿಂತಿರುವರು.

೨೯೫. ಗರುಡವಾಹನನಾದ ಮಹಾವಿಷ್ಣುವು ತನ್ನ ಅನುಚರರೊಡನೆ ಬಾಗಿಲಿನಲ್ಲಿ ನಿಂತಿರುವನು. ಮಹರ್ಷಿಗಳನ್ನು ಮುಂದಿಟ್ಟುಕೊಂಡು ನಿನ್ನ ಅವಸರವನ್ನೇ ಅವರೆಲ್ಲರೂ ಎದುರುನೋಡುತ್ತಿರುವನು.

೨೯೬. ಹದಿನಾಲ್ಕು ಲೋಕಗಳಲ್ಲಿಯೂ ಯಾವ ಯಾವ ವ್ರತನಿರತರಿರುವರೊ, ಅವರೆಲ್ಲರೂ ನೀನು ಕಾಶೀಕ್ಷೇತ್ರಕ್ಕೆ ಪ್ರವೇಶವನ್ನು ಮಾಡುವ ಮಹೋತ್ಸವದ ಸಮಾಚಾರವನ್ನು ಕೇಳಿ ಇಂದು ಇಲ್ಲಿ ನೆರೆದಿರುವರು."

೨೯೭. ಸ್ಕಂದನು ಹೇಳುತ್ತಾನೆ:—ಇಂತೆಂದ ನಂದೀಶ್ವರನ ಮಾತುಗಳನ್ನು ಕೇಳಿ ಮಹಾದೇವನು ದೇವಿಯೊಡಗೂಡಿ ದಿವ್ಯವಾದ ಆ ರಥವನ್ನೇರಿ ಸ್ವರ್ಗಲೋಕದಿಂದ ಹೊರಟನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಕ್ಷೇತ್ರತೀರ್ಥವರ್ಣನ"ವೆಂಬ ತೊಂಬತ್ತೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥಾಷ್ಟಸಪ್ತತಿತಮೋಽಧ್ಯಾಯಃ

## ಮುಕ್ತಿಮಂಡಪಗಮನಾಖ್ಯಾನಂ

ವ್ಯಾಸ ಉವಾಚ :—

ಶೃಣು ಸೂತ ಮಹಾಭಾಗ ಯಥಾ ಸ್ಕಂದೇನ ಭಾಷಿತಃ ।
ಮಹಾಮಹೋತ್ಸವಃ ಶಂಭೋಃ ಪೃಚ್ಛತೇ ಕುಂಭಸಂಭವೇ ॥ ೧ ॥

ಸ್ಕಂದ ಉವಾಚ :—

ನಿಶಾಮಯ ಮಹಾಪ್ರಾಜ್ಞ ಶಂಭುಪ್ರಾವೇಶಿಕೀಂ ಕಥಾಂ ।
ತ್ರೈಲೋಕ್ಯಾನಂದಜನನೀಂ ಮಹಾಪಾತಕತಂಕಿನೀಂ ॥ ೨ ॥
ಮಂದರಾದಾಗತಃ ಶಂಭುಶ್ಚೈತ್ರೇ ದಮನಪರ್ವಣಿ ।
ಪ್ರಾಪ್ಯಾಪ್ಯಾನಂದಗಹನಮಿತಶ್ಚೇತಶ್ಚಚಾರ ಹ ॥ ೩ ॥
ಮೋಕ್ಷಲಕ್ಷ್ಮೀವಿಲಾಸೇಽಥ ಪ್ರಾಸಾದೇ ಸಿದ್ಧಿಮಾಗತೇ ।
ದೇವೀ ವಿರಜಸಃ ಪೀಠಾದಂತರ್ಗೇಹಂ ವಿವೇಶ ಹ ॥ ೪ ॥
ಊರ್ಜಶುಕ್ಲಪ್ರತಿಪದಿ ಬುಧರಾಧಾಸಮಾಯುಜಿ ।
ಚಂದ್ರೇ ಸಪ್ತಮರಾಶಿಸ್ಥೇ ಶೇಷೇಷೂಚ್ಚಗ್ರಹೇಷು ಚ ॥ ೫ ॥

---

## ಕನ್ನಡದ ಅನುವಾದ

### ಮುಕ್ತಿಮಂಟಪಗಮನಾಖ್ಯಾನ

೧. ವ್ಯಾಸನು ಹೇಳುತ್ತಾನೆ :—ಮಹಾಭಾಗ್ಯಶಾಲಿಯಾದ **ಸೂತನೆ!** ಶಂಭುವಿನ ಕಾಶೀಪ್ರವೇಶಮಹೋತ್ಸವವನ್ನು ಕುರಿತು ಪ್ರಶ್ನೆಮಾಡುತ್ತಿರುವ ಅಗಸ್ತ್ಯಮುನಿಗೆ ಷಣ್ಮುಖಸ್ವಾಮಿಯು ಹೇಳಿದುದನ್ನು ತಿಳಿಸುವೆನು.

೨. ಸ್ಕಂದನು ಹೇಳುತ್ತಾನೆ :—ಮಹಾಪ್ರಾಜ್ಞನೆ! ಮಹೇಶ್ವರನು ಕಾಶೀ ಕ್ಷೇತ್ರಕ್ಕೆ ಪ್ರವೇಶಿಸಿದ ಚರಿತ್ರೆಯನ್ನು ಕೇಳು. ಈ ಕಥೆಯು ಮೂರು ಲೋಕಗಳ ನಿವಾಸಿಗಳಿಗೂ ಆನಂದವನ್ನುಂಟುಮಾಡುವುದು. ಮಹಾಪಾತಕಗಳನ್ನೂ ನಾಶಗೊಳಿಸುವುದು.

೩. ಮಹಾದೇವನು ಮಂದರಾಚಲವನ್ನು ಬಿಟ್ಟು ಚೈತ್ರಮಾಸದ ದಮನ (ಶುಕ್ಲ) ತ್ರಯೋದಶಿಯದಿನದಲ್ಲಿ ಕಾಶಿಗೆ ಬಿಜೆಮಾಡಿದನು. ಕ್ಷೇತ್ರಪ್ರವೇಶ ದಿಂದಲೇ ಆನಂದತುಂದಿಲನಾದ ಆತನು ಅಲ್ಲಲ್ಲಿಯೇ ಸುತ್ತಾಡುತ್ತಿದ್ದನು.

೪. ಮೋಕ್ಷಲಕ್ಷ್ಮೀವಿಲಾಸವೆಂಬ ಪ್ರಾಸಾದವು ಸಂಪೂರ್ಣವಾಗಿ ನಿವಾಸ ಯೋಗ್ಯವಾಗಲು ತ್ರಿಲೋಚನಸ್ಥಾನವನ್ನು ಬಿಟ್ಟು ಮಹೇಶ್ವರನು ಅದರ ಅಂತ ರ್ಗೃಹವನ್ನು ಪ್ರವೇಶಿಸಿದನು.

೫–೭. ಕಾರ್ತಿಕಮಾಸದ ಶುದ್ಧ ಪಾಡ್ಯಮಿಯಲ್ಲಿ ಬುಧನು ಅನೂರಾಧಾ

**ವಾದ್ಯಮಾನೇಷು ವಾದ್ಯೇಷು ಪ್ರಸನ್ನಾಸು ಹರಿತ್ಸು ಚ ।**
**ಬ್ರಾಹ್ಮಣಾನಾಂ ಶ್ರುತಿರವನ್ಯಕೃತಾನ್ಯರವಾಂತರೇ ॥ ೬ ॥**
**ಪ್ರತಿಶಬ್ದಿತಭೂಲೋರ್ಕಭುವರ್ಲೋಕಾಂತರಾಧ್ವನಿಃ ।**
**ಸರ್ವಂ ಪ್ರಮುದಿತಂ ಚಾಸೀಚ್ಛಂಭೋಃ ಪ್ರಾವೇಶಿಕೋತ್ಸವೇ ॥ ೭ ॥**
**ಜಗುರ್ಗಂಧರ್ವನಿಕರಾ ನನೃತುಶ್ಚಾಪ್ಸರೋಗಣಾಃ ।**
**ಚಾರಣಾಸ್ತು ಸ್ತುತಿಂ ಕುರ್ಯುರ್ಜಹೃಷುರ್ದೇವತಾಗಣಾಃ ॥ ೮ ॥**
**ವವುರ್ಗಂಧವಹಾ ವಾತಾ ವವೃಷುಃ ಕುಸುಮೈರ್ಘನಾಃ ।**
**ಸರ್ವೇ ಮಂಗಲನೇಪಥ್ಯಾಃ ಸರ್ವೇ ಮಂಗಲಭಾಷಿಣಃ ॥ ೯ ॥**
**ಸ್ಥಾವರಾ ಜಂಗಮಾಃ ಸರ್ವೇ ಜಾತಾ ಆನಂದಮೇದುರಾಃ ।**
**ಸುರಾಸುರೇಷು ಸರ್ವೇಷು ಗಂಧರ್ವೇಷೂರಗೇಷು ಚ ॥ ೧೦ ॥**
**ವಿದ್ಯಾಧರೇಷು ಸಾಧ್ಯೇಷು ಕಿನ್ನರೇಷು ನರೇಷು ಚ ।**
**ಸ್ತ್ರೀಪುಂಜಾತೇಷು ಸರ್ವೇಷು ರೇಜುಶ್ಚತ್ವಾರ ಏವ ಚ ।**
**ನಿಷ್ಪ್ರತ್ಯೂಹಂ ಚ ನಿತರಾಂ ಪುರುಷಾರ್ಥಾಃ ಪದೇ ಪದೇ ॥ ೧೧ ॥**

---

ನಕ್ಷತ್ರದಲ್ಲಿರಲು, ಅದಕ್ಕೆ ಏಳನೆಯಮನೆಯಾದ ವೃಶ್ಚಿಕರಾಶಿಯಲ್ಲಿ ಚಂದ್ರನಿರಲು, ಇತರ ಗ್ರಹಗಳೆಲ್ಲವೂ ತಮ್ಮ ಉಚ್ಚಸ್ಥಾನಗಳಲ್ಲಿದ್ದುವು. ಅನೇಕ ದಿವ್ಯ ವಾದ್ಯಗಳು ಭೋರ್ಗರೆಯುತ್ತಿದ್ದುವು. ದಿಕ್ಕುಗಳು ಪ್ರಸನ್ನಗಳಾಗಿದ್ದುವು. ಇತರ ಧ್ವನಿಗಳು ಬ್ರಾಹ್ಮಣೋತ್ತಮರ ವೇದಘೋಷಗಳಿಂದ ಅಡಗಿಸಲ್ಪಟ್ಟಿದ್ದುವು. ಭೂಲೋಕ, ಭುವರ್ಲೋಕ, ಅಂತರಾಳಗಳು ಈ ಎಲ್ಲಾ ಶಬ್ದಗಳನ್ನೂ ಪ್ರತಿಧ್ವನಿಗೊಡುತ್ತಿದ್ದುವು. ಮಹೇಶ್ವರನ ಪ್ರವೇಶೋತ್ಸವ ಸಮಯದಲ್ಲಿ ಸಮಸ್ತ ಬ್ರಹ್ಮಾಂಡವೂ ಪ್ರಮೋದಗೊಂಡಿತು.

೮. ಗಂಧರ್ವಕೂಟಗಳು ಹಾಡುತ್ತಿದ್ದರು. ಅಪ್ಸರೆಯರ ಗಡಣಗಳು ನರ್ತನಮಾಡುತ್ತಿದ್ದರು. ಚಾರಣರು ಬಿರುದಾವಳಿಗಳನ್ನು ಹೇಳುತ್ತಿದ್ದರು. ದೇವತಾಸಮೂಹಗಳೆಲ್ಲವೂ ಹರ್ಷಗೊಂಡಿದ್ದುವು.

೯. ಗಾಳಿಗಳು ಸುಗಂಧಭರಿತಗಳಾಗಿ ಮೆಲ್ಲಮೆಲ್ಲನೆ ಬೀಸುತ್ತಿದ್ದುವು. ಮೇಘಗಳು ಪೂಮಳೆಗರೆಯುತ್ತಿದ್ದುವು. ಸರ್ವರೂ ಮಂಗಳವಸ್ತ್ರಗಳನ್ನುಟ್ಟು ಮಂಗಳಭಾಷಣಗಳನ್ನೇ ಮಾಡುತ್ತಿದ್ದರು.

೧೦–೧೧. ಬ್ರಹ್ಮಾಂಡದ ಸ್ಥಾವರಜಂಗಮ ಪ್ರಾಣಿಗಳೆಲ್ಲವೂ ಆನಂದಭರಿತಗಳಾಗಿದ್ದುವು. ದೇವತೆಗಳು, ದೈತ್ಯರು, ಗಂಧರ್ವರು, ನಾಗರು, ವಿದ್ಯಾಧರರು, ಸಾಧ್ಯರು, ಕಿನ್ನರರು, ಮನುಷ್ಯರು ಮೊದಲಾಗಿ ಎಲ್ಲರಲ್ಲಿಯೂ ಹೆಂಗಸರು ಗಂಡಸರೆನ್ನದೆ ಚತುರ್ವಿಧ ಪುರುಷಾರ್ಥಗಳೂ ನಿರಂತರವಾಗಿ ಅಡಿಗಡಿಗೂ ಸುಲಲಿತವಾಗಿಯೇ ಕೈಗೂಡುತ್ತಿದ್ದುವು.

ಧೂಪಧೂಮಭರೈರ್ವ್ಯೋಮ ಯದ್ವ್ಯಾಪ್ತಂ ತು ತದಾ ಮುನೇ ।
ನಾದ್ಯಾಪಿ ನೀಲಿಮಾನಂ ತಂ ಪರಿತ್ಯಜತಿ ಕರ್ಹಿಚಿತ್ ॥ ೧೨ ॥
ನೀರಾಜನಾಯ ಯೇ ದೀಪಾಸ್ತದಾ ಸರ್ವೇ ಪ್ರಬೋಧಿತಾಃ ।
ತೇಷಾಂ ಜ್ಯೋತೀಂಷಿ ಖೇಽದ್ಯಾಪಿ ರಾಜಂತೇ ತಾರಕಾಚ್ಛಲಾತ್ ॥ ೧೩ ॥
ಪ್ರತಿಸೌಧಂ ಪತಾಕಾಶ್ಚ ನಾನಾಕಾರಾ ವಿಚಿತ್ರಿತಾಃ ।
ರಮ್ಯಧ್ವಜಪ್ರಭಾ ಧೌತಾ ರೇಜುಃ ಪ್ರತಿಶಿವಾಲಯಮ್ ॥ ೧೪ ॥
ಕ್ವಚಿದ್ಗಾಯಂತಿ ಗೀತಜ್ಞಾಃ ಕ್ವಚಿನ್ನೃತ್ಯಂತಿ ನರ್ತಕಾಃ ।
ಚತುರ್ವಿಧಾನಿ ವಾದ್ಯಾನಿ ವಾದ್ಯಂತೇ ಚ ಕ್ವಚಿತ್ಕ್ವಚಿತ್ ॥ ೧೫ ॥
ಪ್ರತ್ಯಧ್ವಂ ಚಂದನರಸಚ್ಛಟಾಪಿಚ್ಛಿಲಭೂಮಯಃ ॥ ೧೬ ॥
ಹರಿತಶ್ವೇತಮಾಂಜಿಷ್ಠನೀಲಪೀತಬಹುಪ್ರಭಾಃ ।
ಪ್ರತ್ಯಂಗಣಂ ಶುಭಾಕಾರಾ ರಂಗಮಾಲಾಶ್ಚಕಾಶಿರೇ ॥ ೧೭ ॥

---

೧೨. ಮುನಿವರ್ಯನೆ! ಆಗ ಹಾಕಿದ ಧೂಪಗಳ ಹೊಗೆಗಳಿಂದ ಆವೃತವಾದ ಆಕಾಶವು ಇಂದಿನವರೆಗೂ ಸ್ವಲ್ಪವೂ ತನ್ನ ನೀಲವರ್ಣವನ್ನು ತ್ಯಜಿಸದಿರುವುದು.

೧೩. ಆಗ ಪರಮೇಶ್ವರನ ನೀರಾಜನಕ್ಕಾಗಿ ಎಷ್ಟು ದೀಪಗಳು ಹೊತ್ತಿಸಲ್ಪಟ್ಟಿದ್ದವೊ, ಅವುಗಳ ಜ್ಯೋತಿಗಳು ಇಂದಿಗೂ ನಕ್ಷತ್ರಗಳ ವ್ಯಾಜದಿಂದ ಆಕಾಶದಲ್ಲಿ ಬೆಳಗುತ್ತಿರುವುವು.

೧೪. ಕಾಶೀಕ್ಷೇತ್ರದ ಒಂದೊಂದು ಮನೆಯಲ್ಲಿಯೂ ಅನೇಕ ರೂಪಗಳೂ ವಿಚಿತ್ರಗಳೂ ಆದ ಪತಾಕೆಗಳು ಕಂಗೊಳಿಸುತ್ತಿದ್ದುವು. ಪ್ರತಿಯೊಂದು ಶಿವಾಲಯದಲ್ಲಿಯೂ ಶುಭ್ರಗಳೂ ಮನೋಹರಗಳೂ ಆದ ಧ್ವಜಗಳು ರಾಜಿಸುತ್ತಿದ್ದುವು.

೧೫. ಒಂದೆಡೆಯಲ್ಲಿ ಸಂಗೀತಗಾರರು ಗಾನಮಾಡುತ್ತಿದ್ದರು. ಒಂದೆಡೆಯಲ್ಲಿ ನರ್ತಕರು ನಾಟ್ಯಗಳನ್ನು ತೋರುತ್ತಿದ್ದರು. ಮತ್ತೂ ಬೇರೆ ಬೇರೆ ಕಡೆಗಳಲ್ಲಿ ಇತರರು ತತ, ಆನದ್ಧ, ಸುಷಿರ ಮತ್ತು ಘನಗಳೆಂಬ ನಾಲ್ಕು ಬಗೆಯ ವಾದ್ಯಗಳನ್ನೂ ಬಾಜಿಸುತ್ತಿದ್ದರು.

೧೬. ಪಟ್ಟಣದ ಒಂದೊಂದು ಮಾರ್ಗವೂ ಶ್ರೀಗಂಧದ ಸಾರದಿಂದ ಸಾರಿಸಲ್ಪಟ್ಟು ಕೆಸರುಗೊಂಡಿದ್ದಿತು.

೧೭. ಹಸುರು, ಬಿಳುಪು, ಕೆಂಪು, ನೀಲಿ, ಹಳದಿ ಮುಂತಾದ ಅನೇಕ ಬಣ್ಣಗಳೊಡಗೂಡಿದ ರಂಗವಲ್ಲಿಗಳು ಪ್ರತಿಯೊಂದು ಮನೆಯ ಅಂಗಣದಲ್ಲಿಯೂ ಶುಭಸೂಚಕಗಳಾಗಿ ಕಂಗೊಳಿಸುತ್ತಿದ್ದುವು.

ರತ್ನಕುಟ್ಟಿಮಭೂಭಾಗಾ ಗೋಪುರಾಗ್ರೇಷು ರೇಜಿರೇ ।
ಸುಧೋಜ್ಜ್ವಲಾ ಹರ್ಮ್ಯಮಾಲಾಃ ಸೌಧನಾಮ ಪ್ರಪೇದಿರೇ ॥ ೧೮ ॥
ಅಚೇತನಾನ್ಯಪಿ ತದಾ ಚೇತನಾನೀವ ಸಂಬಭುಃ ।
ಯಾನಿ ಕಾನೀಹ ಕೀರ್ತ್ಯಂತೇ ಮಂಗಲಾನಿ ಘಟೋದ್ಭವ ॥ ೧೯ ॥
ತೇಷಾಮೇವ ಹಿ ಸರ್ವೇಷಾಂ ತತ್ತು ಜನ್ಮದಿವಾಭವತ್ ।
ಆಗತ್ಯ ದೇವದೇವೋಽಥ ಮುಕ್ತಿಮಂಡಪಮಾವಿಶತ್ ॥ ೨೦ ॥

ಅಥಾಭಿಷಿಕ್ತಶ್ಚತುರಾನನೇನ
ಮಹರ್ಷಿವೃಂದೈಃ ಸಹ ದೇವದೇವಃ ।
ಶುಭಾಸನಸ್ಥಃ ಸಹಿತೋ ಭವಾನ್ಯಾ
ಕುಮಾರವೃಂದೈಃ ಪರಿತೋ ವೃತಶ್ಚ ॥
ರತ್ನೈರಸಂಖ್ಯೈರ್ಬಹುಭಿರ್ದುಕೂಲೈ
ರ್ಮಾಲ್ಯೈರ್ವಿಚಿತ್ರೈರ್ಲಸದಿಷ್ಟಗಂಧೈಃ ।
ಅಪೂಪುಜನ್ ದೇವಗಣಾ ಮಹೇಶಂ
ತದಾ ಮುದಾ ತೇ ಚ ಮಹೋರಗೇಂದ್ರಾಃ ॥ ೨೧ ॥

---

೧೮. ಮಹಾದ್ವಾರಗಳಮೇಲೆ ನವರತ್ನಗಳಿಂದಲೂ, ಮಣಿಗಳಿಂದಲೂ ಖಚಿತಗಳಾದ ಫಲಕಗಳು ಮಿರುಗುತ್ತಿದ್ದುವು. ಮಹಡಿಗಳ ಸಾಲುಗಳೆಲ್ಲವೂ ಸುಣ್ಣದಿಂದ ತೊಳೆಯಲ್ಪಟ್ಟು ಬೆಳ್ಳಗೆ ಕಾಣುತ್ತಿರುವುದರಿಂದಲೇ ಸೌಧಗಳೆಂಬ ಹೆಸರನ್ನು ಪಡೆದುವೊ ಎಂಬಂತೆ ತೋರುತ್ತಿದ್ದಿತು.

೧೯–೨೦. ಅಚೇತನಪದಾರ್ಥಗಳೂ ಅಂದು ಸಚೇತನಗಳಂತೆ ಕಾಣುತ್ತಿದ್ದುವು. ಎಲೈ ಕುಂಭಸಂಭವನೆ! ಈ ಲೋಕದಲ್ಲಿ ಯಾವ ಯಾವ ಪದಾರ್ಥಗಳನ್ನು ನಾವು ಮಂಗಳಕರಗಳೆಂದು ತಿಳಿದಿರುವೆವೊ ಅವುಗಳೆಲ್ಲವುಗಳಿಗೂ ಪರಮೇಶ್ವರನ ಕಾಶೀಪ್ರವೇಶದ ದಿವಸವೇ ಜನ್ಮದಿನವಾಯಿತು. ಇಂತು ದೇವದೇವನು ಕ್ಷೇತ್ರವನ್ನು ಪ್ರವೇಶಿಸಿ ಮುಕ್ತಿಮಂಟಪದಲ್ಲಿ ನೆಲಸಿದನು.

೨೧. ಆಗ ಮಹರ್ಷಿಗಣಗಳಿಂದೊಡಗೂಡಿ ಬ್ರಹ್ಮದೇವನು ಪಟ್ಟಾಭಿಷೇಕವನ್ನು ಮಾಡಿದನು. ಬಳಿಕ ಮಹಾದೇವನು ಪಾರ್ವತೀಸಮೇತನಾಗಿ ಭದ್ರಾಸನದಲ್ಲಿ ಮಂಡಿಸಿರಲು ಗಣಪತಿ, ಷಣ್ಮುಖಸ್ವಾಮಿ ಮುಂತಾದವರು ಆತನ ಸುತ್ತಲೂ ಗುಂಪುಗೂಡಿದ್ದರು.

೨೨. ಆಗ ದೇವತಾಗಣಗಳೂ ನಾಗಪ್ರಮುಖರೂ ಅಸಂಖ್ಯಾತಗಳಾದ ರತ್ನರಾಶಿಗಳಿಂದಲೂ, ಅನೇಕವಸ್ತ್ರಗಳಿಂದಲೂ, ಚಿತ್ರವಿಚಿತ್ರಗಳಾದ ನವರತ್ನಗಳ ಮುತ್ತು ಹೂವುಗಳ ಮಾಲೆಗಳಿಂದಲೂ, ಸುಖಸ್ಪರ್ಶಗಳಾದ ಸುಗಂಧದ್ರವ್ಯಗಳಿಂದಲೂ, ಅತ್ಯಂತ ಸಂತೋಷದಿಂದ ಮಹೇಶ್ವರನಿಗೆ ಪೂಜೆಯನ್ನೆಸಗಿದರು.

ರತ್ನಾಕರೈಶ್ಚಾಪಿ ಗಿರೀಂದ್ರವರ್ಯೈ
ರ್ಯಥಾ ಸ್ವಮನ್ಯೈರಪಿ ಪುಣ್ಯಧೀಭಿಃ ।
ಸಂಪೂಜಿತಃ ಕುಂಭಜ ತತ್ರ ಶಂಭು
ರ್ನೀರಾಜಿತೋ ಮಾತೃಗಣೈರಥೇಶಃ ॥ ೨೩ ॥
ಸಂತೋಷ್ಯ ಸರ್ವಾನ್ಪೃಥಮಂ ಮುನೀಂದ್ರಾ
ನ್ಸ್ವೈಃ ಸ್ವೈರ್ಹೃದಿಸ್ಥೈಶ್ಚ ಚಿರಾಭಿಲಾಷೈಃ ।
ಬ್ರಹ್ಮಾಣಮಾಭಾಷ್ಯ ಶಿವೋಽಥ ವಿಷ್ಣುಂ
ಜಗಾದ ಸರ್ವಾಮರವೃಂದವಂದ್ಯಃ ॥ ೨೪ ॥
ಇತೋ ನಿಷೀದೇತಿ ಸ ಮಾನಪೂರ್ವಂ
ತ್ವಂ ಮೇ ಸಮಸ್ತಪ್ರಭುತೈಕಹೇತುಃ ।
ದೂರೇಽಪಿ ತಿಷ್ಠನ್ನಿಕಟಸ್ತ್ವಮೇವ
ತ್ವತ್ತೋ ನ ಕಶ್ಚಿನ್ಮಮ ಕಾರ್ಯಕರ್ತಾ ॥ ೨೫ ॥
ತ್ವಯಾ ದಿವೋದಾಸನರೇಂದ್ರವರ್ಯಃ
ಸದೋಪದೇಶಶ್ಚ ತಥೋಪದಿಷ್ಟಃ ।
ಯಥಾ ಸ ಸಿದ್ಧಿಂ ಪರಮಾಮವಾಪ
ಸಮೀಹಿತಂ ಮೇ ನಿಖಿಲಂ ಚ ಸಿದ್ಧಂ ॥ ೨೬ ॥

---

೨೩. ಅಗಸ್ತ್ಯನೆ! ಸಮುದ್ರಗಳ ಒಡೆಯರೂ ಪರ್ವತರಾಜರೂ ಇತರ ಅನೇಕ ಪುಣ್ಯಪುರುಷರೂ ತಮ್ಮ ತಮ್ಮ ಯೋಗ್ಯತೆಯನ್ನನುಸರಿಸಿ ಅಂದು ಶಂಭುವನ್ನು ಪೂಜಿಸಿದರು. ಬಳಿಕ ಮಾತೃಗಣಗಳು ಆತನಿಗೆ ನೀರಾಜನವನ್ನು ಬೆಳಗಿದರು.

೨೪. ಇಂತು ಸಮಸ್ತ ದೇವನಿಕಾಯದಿಂದಲೂ ವಂದಿತನಾದ ಪರಮಶಿವನು ಮೊದಲು ಮಹರ್ಷಿಗಳಿಗೆಲ್ಲ ಬಹಳಕಾಲದ ಆಶೆಗಳನ್ನು ಈಡೇರಿಸಿ ಒಬ್ಬೊಬ್ಬರನ್ನೂ ಸಂತೋಷಗೊಳಿಸಿ ಬ್ರಹ್ಮನನ್ನೂ ಮಹಾವಿಷ್ಣುವನ್ನೂ ಹತ್ತಿರಕ್ಕೆ ಕರೆದು ಇಂತು ಹೇಳತೊಡಗಿದನು.

೨೫. ಮರ್ಯಾದೆಯೊಡನೆ ಹತ್ತಿರದಲ್ಲಿ ಕುಳ್ಳಿರಿಸಿ ಇಂತೆಂದನು. "ವಿಷ್ಣುವೆ! ನೀನೊಬ್ಬನೇ ನನ್ನ ಈ ಸರ್ವೈಶ್ವರ್ಯಕ್ಕೆ ಕಾರಣನಾಗಿರುವೆ. ದೂರದಲ್ಲಿ ನಿಂತಿದ್ದರೂ ನೀನೇ ನನಗೆ ಅತ್ಯಂತ ಸಮೀಪದವನಾಗಿರುವೆ. ನೀನಲ್ಲದೆ ನನ್ನ ಕಾರ್ಯವನ್ನು ಮಾಡುವವನು ಬೇರೊಬ್ಬನಿಲ್ಲ.

೨೬. ನೀನೇ ದಿವೋದಾಸ ಮಹಾರಾಜನಿಗೆ ಅನೇಕ ಸದ್ಬೋಧೆಗಳನ್ನು ಯುಕ್ತರೀತಿಯಲ್ಲಿ ಮಾಡಿದೆ. ಆದರಿಂದಲೇ ಆತನು ಅನನ್ಯಲಭ್ಯವಾದ ಸಿದ್ಧಿಯನ್ನು ಪಡೆದನು. ಮತ್ತು ನನ್ನ ಮನಸ್ಸಿನಲ್ಲಿದ್ದ ಅಪೇಕ್ಷೆಯೆಲ್ಲವೂ ನೆರವೇರಿತು.

ವಿಷ್ಣೋ ವರಂ ಬ್ರೂಹಿ ಯ ಈಪ್ಸಿತಸ್ತೇ
ನಾದೇಯಮತ್ರಾಸ್ತಿ ಕಿಮಪ್ಯಹೋ ತೇ ।
ಇದಂ ಮಯಾಽಽನಂದವನಂ ಯದಾಪ್ತಂ
ಹೇತುಸ್ತು ತತ್ರ ತ್ವಮಸೌ ಗಣೇಶಃ ॥ ೨೭ ॥
ನ ಮೇ ಪ್ರಿಯಂ ಕಿಂಚನ ವಿಷ್ಟಪತ್ರಯೇ
ತಥಾ ಯಥೇಯಂ ಪರಸೌಖ್ಯಭೂಮಿಃ ।
ವಾರಾಣಸೀ ಬ್ರಹ್ಮರಸಾಯನಸ್ಯ
ಖನಿರ್ಜನಿರ್ಯತ್ರ ನ ದೀರ್ಘಶಾಯಿನಾಂ ॥ ೨೮ ॥
ಶ್ರುತ್ವೇತಿ ವಾಕ್ಯಂ ಜಗದೀಶಿತುಶ್ಚ
ಪ್ರೋವಾಚ ವಿಷ್ಣುರ್ವರದಂ ಮಹೇಶಂ ।
ಯದಿ ಪ್ರಸನ್ನೋಽಸಿ ಪಿನಾಕಪಾಣೇ
ತದಾ ಪದಾದ್ದೂರಮಹಂ ನ ತೇ ಸ್ಯಾಂ ॥ ೨೯ ॥
ಶ್ರುತ್ವೇತಿ ವಾಕ್ಯಂ ಮಧುಸೂದನಸ್ಯ
ಜಗಾದ ತುಷ್ಟೋ ನಿತರಾಂ ಪುರಾರಿಃ ।
ಸದಾ ಮುರಾರೇ ಮಮ ಸನ್ನಿಧೌ ತ್ವಂ
ತಿಷ್ಠಸ್ವ ನಿರ್ವಾಣರಮಾಶ್ರಯೇಽತ್ರ ॥ ೩೦ ॥

---

೨೭. ನಾರಾಯಣನೆ! ನಿನಗೆ ಈಪ್ಸಿತವಾದ ವರವನ್ನು ಕೇಳು. ಇಲ್ಲಿ ನಿನಗೆ ಕೊಡಬಾರದ ವಸ್ತುವಾವುದೂ ಇಲ್ಲ. ನಾನು ಈ ಆನಂದವನವನ್ನು ಪ್ರವೇಶಮಾಡುವುದಕ್ಕೆ ಕಾರಣವೆಂದರೆ ನೀನೊಬ್ಬನು. ಈ ವಿಘ್ನೇಶ್ವರನೊಬ್ಬನು.

೨೮. ಈ ಭೂಭಾಗವು ನನಗೆ ಹೇಗೆ ಅತಿಸೌಖ್ಯಪ್ರದವೊ, ಹಾಗೆ ಮೂರು ಲೋಕಗಳಲ್ಲಿಯೂ ಬೇರೊಂದು ಪ್ರದೇಶವಿಲ್ಲ. ಎಲ್ಲಿ ಪಂಚತ್ವವನ್ನು ಹೊಂದಿದ ವರಿಗೆ ಪುನಃ ಜನ್ಮದ ಭಯವಿಲ್ಲವೊ ಆ ವಾರಾಣಸಿಯು ಬ್ರಹ್ಮರಸಾಯನದ ಖನಿಯಾಗಿರುವುದು.''

೨೯. ಇಂತೆಂದು ಲೋಕೇಶ್ವರನಾಡಿದ ಮಾತುಗಳನ್ನು ಕೇಳಿ ಮಹಾ ವಿಷ್ಣುವು ವರಪ್ರದನಾಗಿ ನಿಂತಿದ್ದ ಆತನನ್ನು ಕುರಿತು ಇಂತೆಂದನು. ''ಎಲೈ ಪಿನಾಕಪಾಣಿಯೆ! ನೀನು ಪ್ರಸನ್ನನಾಗಿರುವೆಯಾದರೆ ನಾನೆಂದಿಗೂ ನಿನ್ನ ಪಾದಗಳಿಗೆ ದೂರವಾಗದಂತೆ ವರವನ್ನನುಗ್ರಹಿಸು.''

೩೦. ಮಧುಸೂದನನ ಈ ವಾಕ್ಯವನ್ನು ಕೇಳಿ ಅತ್ಯಂತ ಸಂತೋಷಗೊಂಡು ಮಹೇಶ್ವರನು ಇಂತೆಂದನು. ''ಎಲೈ ಮುರಾರಿಯೆ! ಮೋಕ್ಷಲಕ್ಷ್ಮಿಯ ನಿವಾಸ ಭೂಮಿಯಾದ ಈ ಕ್ಷೇತ್ರದಲ್ಲಿ ನೀನು ಯಾವಾಗಲೂ ನನ್ನ ಸನ್ನಿಧಿಯಲ್ಲಿಯೇ ಇರು.

ಆದಾವನಾರಾಧ್ಯ ಭವಂತಮತ್ರ
ಯೋ ಮಾಂ ಭಜಿಷ್ಯತ್ಯಪಿ ಭಕ್ತಿಯುಕ್ತಃ ।
ಸಮೀಹಿತಂ ತಸ್ಯ ನ ಸೇತ್ಸ್ಯತಿ ಧ್ರುವಂ
ಪರಾತ್ಪರಾನ್ಮೇಽಂಬುಜಚಕ್ರಪಾಣೇ ॥ ೩೧ ॥
ಸರ್ವತ್ರ ಸೌಖ್ಯಂ ಮಮ ಮುಕ್ತಿಮಂಡಪೇ
ಸಂತಿಷ್ಠಮಾನಸ್ಯ ಭವೇದಿಹಾಚ್ಯುತ ।
ನ ತತ್ತು ಕೈಲಾಸಗಿರೌ ಸುನಿರ್ಮಲೇ
ನ ಭಕ್ತಚೇತಸ್ಯಪಿ ನಿಶ್ಚಲಶ್ರಿಯಿ ॥ ೩೨ ॥
ನಿಮೇಷಮಾತ್ರಂ ಸ್ಥಿರಚಿತ್ತವೃತ್ತಯ
ಸ್ತಿಷ್ಠಂತಿ ಯೇ ದಕ್ಷಿಣಮಂಡಪೇಽತ್ರ ಮೇ ।
ಅನನ್ಯಭಾವಾ ಅಪಿ ಗಾಢಮಾನಸಾ
ನ ತೇ ಪುನರ್ಗರ್ಭದಶಾಮುಪಾಸತೇ ॥ ೩೩ ॥
ಸಂಸ್ನಾಯ ಯೇ ಚಕ್ರಸರಸ್ಯಗಾಧೇ
ಸಮಸ್ತತೀರ್ಥೈಕಶಿರೋವಿಭೂಷಣೇ ।
ಕ್ಷಣಂ ವಿಶಂತೀಹ ನಿರೀಹಮಾನಸಾ
ನಿರೇನಸಸ್ತೇ ಮಮ ಪಾರ್ಷದಾ ಹಿ ॥ ೩೪ ॥

---

೩೧. ಯಾವನೇ ಆದರೂ ಮೊದಲು ಇಲ್ಲಿ ನಿನ್ನನ್ನು ಪೂಜಿಸದೆ ನನ್ನನ್ನು ಸೇವಿಸುವನೊ, ಅವನು ಭಕ್ತಿಯುಕ್ತನಾಗಿದ್ದರೂ ಅವನ ಇಷ್ಟಾರ್ಥವು ಕೈಗೂಡುವುದಿಲ್ಲ. ಶಂಖಚಕ್ರಧಾರಿಯೆ! ಪರಾತ್ಪರನಾದ ನನ್ನ ಈ ಮಾತು ನಿಜವು.

೩೨. ಅಚ್ಯುತನೆ! ಈ ಮುಕ್ತಿಮಂಡಪದಲ್ಲಿ ವಾಸಮಾಡುವವನಿಗೆ ಇಲ್ಲಿಯೇ ಸಕಲಸೌಖ್ಯಗಳುಂಟಾಗುವುವು. ಅಂತಹ ಸೌಖ್ಯವು ಅತಿನಿರ್ಮಲವಾದ ಕೈಲಾಸಪರ್ವತದಲ್ಲಿಯಾಗಲಿ, ಲಕ್ಷ್ಮಿಗೆ ಶಾಶ್ವತವಾದ ನೆಲೆವನೆಯೆನಿಸಿ ನನ್ನ ಭಕ್ತರ ಹೃದಯದಲ್ಲಿಯಾಗಲಿ ಸಿಕ್ಕಲಾರದು.

೩೩. ಒಂದು ನಿಮಿಷಮಾತ್ರವಾದರೂ ಮನಸ್ಸನ್ನು ಸ್ಥಿರಗೊಳಿಸಿಕೊಂಡು ಯಾರು ಈ ನನ್ನ ಮುಕ್ತಿಮಂಟಪದಲ್ಲಿ ನಿಲ್ಲುವರೊ, ಅವರು ಅನನ್ಯಭಾವದಿಂದ ನನ್ನಲ್ಲಿಯೇ ನೆಟ್ಟಮನಸ್ಸುಳ್ಳವರಾಗಲು ಪುನಃ ಗರ್ಭವಾಸವನ್ನನುಭವಿಸುವುದೇ ಇಲ್ಲವು.

೩೪. ಲೋಕದ ಸಮಸ್ತತೀರ್ಥಗಳ ಒಂದೇ ಶಿರೋಮಣಿಯೆನಿಸಿದ ಅಗಾಧವಾದ ಈ ಚಕ್ರತೀರ್ಥದಲ್ಲಿ ಮಿಂದು ಯಾವ ಮಾನವರು ಸಕಲಾಶಾವರ್ಜಿತರಾಗಿ ಇಲ್ಲಿ ಒಂದು ಕ್ಷಣಮಾತ್ರವಾದರೂ ಪ್ರವೇಶಿಸುವರೊ, ಅವರು ನಿಷ್ಕಲ್ಮಷರಾಗಿ ನನ್ನ ಪಾರ್ಷದವರ್ಗಕ್ಕೆ ಸೇರುವರು.

ಸ್ಮರಂತಿ ಯೇ ಮಾಮುಪವರ್ಗಮಂಡಪೇ
ಕಿಂಚಿದ್ಯಥಾಶಕ್ತಿ ದದತ್ಯಪಿ ಸ್ವಂ ।
ಶೃಣ್ವಂತಿ ಪುಣ್ಯಾಶ್ಚ ಕಥಾಃ ಕ್ಷಣಂ ಸ್ಥಿರಾ
ಸ್ತೇ ಕೋಟಿಗೋದಾನಫಲಂ ಭಜಂತಿ ॥ ೩೫ ॥
ಉಪೇಂದ್ರ ತಪ್ತಾನಿ ತಪಾಂಸಿ ತೈಶ್ಚಿರಂ
ಸ್ನಾತಾ ಹಿ ತೇ ಚಾಖಿಲತೀರ್ಥಸಾರ್ಥಕೈಃ ।
ಸ್ನಾತ್ವೇಹ ಯೇ ವೈ ಮಣಿಕರ್ಣಿಕಾಹ್ರದೇ
ಸಮಾನತೇ ಮುಕ್ತಿಜನಾಶ್ರಯೇ ಕ್ಷಣಾತ್ ॥ ೩೬ ॥
ತೀರ್ಥಾನಿ ಸಂತೀಹ ಪದೇ ಪದೇ ಹರೇ
ತುಲಾ ಕ್ವ ತೇಷಾಂ ಮಣಿಕರ್ಣಿಕಾಯಾಃ ।
ಕತೀಹ ನೋ ಸಂತಿ ಶುಭಾಶ್ಚ ಮಂಡಪಾಃ
ಪರಂಪರೋ ಮುಕ್ತಿರಮಾಶ್ರಯೋಽಯಂ ॥ ೩೭ ॥
ಕೈವಲ್ಯಮಂಡಪಸ್ಯಾಸ್ಯ ಭವಿಷ್ಯೇ ದ್ವಾಪರೇ ಹರೇ ।
ಲೋಕೇ ಖ್ಯಾತಿರ್ಭವಿತ್ರೀಯಮೇಷಕುಕ್ಕುಟಮಂಡಪಃ ॥ ೩೮ ॥

---

೩೫. ಈ ಮೋಕ್ಷಮಂಟಪದಲ್ಲಿ ಯಾರು ನನ್ನನ್ನು ಸ್ಮರಣೆಮಾಡುವರೊ, ತನ್ನ ಶಕ್ತಿಗನುಸಾರವಾಗಿ ಎಷ್ಟೇ ಅಲ್ಪವನ್ನಾದರೂ ದಾನವಾಗಿ ಕೊಡುವರೊ, ಕ್ಷಣಮಾತ್ರವಾದರೂ ನಿಶ್ಚಲಮನಸ್ಕರಾಗಿ ಪುಣ್ಯಕಥೆಗಳನ್ನು ಕೇಳುವರೊ, ಅವರು ಒಂದು ಕೋಟಿ ಗೋದಾನಗಳನ್ನು ಮಾಡಿದ ಫಲವನ್ನು ಪಡೆಯುವರು.

೩೬. ಯಾರು ಈ ಮಣಿಕರ್ಣಿಕಾತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಮುಮುಕ್ಷುಗಳಿಗೆ ಏಕಾಶ್ರಯವೆನಿಸಿದ ಈ ಮಂಟಪದಲ್ಲಿ ಒಂದು ಕ್ಷಣಕಾಲವಾದರೂ ವಾಸಮಾಡುವರೊ, ಅವರು ಬಹಳಕಾಲ ತಪಸ್ಸುಗಳನ್ನೆಲ್ಲ ಆಚರಿಸಿದಂತೆಯೆ. ಸಮಸ್ತತೀರ್ಥಗಳಲ್ಲಿಯೂ ಸ್ನಾನಗಳನ್ನು ಮಾಡಿದಂತೆಯೆ.

೩೭. ಎಲೈ ನಾರಾಯಣನೆ! ಈ ಕ್ಷೇತ್ರದಲ್ಲಿ ಹೆಜ್ಜೆಹೆಜ್ಜೆಗೂ ತೀರ್ಥಗಳಿರುವುವು. ಆದರೆ ಅವುಗಳಲ್ಲಿ ಯಾವುದೂ ಮಣಿಕರ್ಣಿಕೆಯನ್ನು ಸರಿಹೋಲಲಾರದು. ಪವಿತ್ರಗಳಾದ ಮಂಟಪಗಳು ಇಲ್ಲಿ ಎಷ್ಟು ಇಲ್ಲ? ಆದರೆ ಮುಕ್ತಿಲಕ್ಷ್ಮಿಗೆ ಆಶ್ರಯವಾದ ಈ ಮುಕ್ತಿಮಂಟಪವೇ ಅವುಗಳಲ್ಲಿ ಸರ್ವೋತ್ತಮವೆನಿಸಿರುವುದು.

೩೮. ಶ್ರೀಹರಿಯೆ! ಮುಂದೆ ಬರುವ ದ್ವಾಪರಯುಗದಲ್ಲಿ ಈ ಕೈವಲ್ಯ ಮಂಟಪದ ಪ್ರಖ್ಯಾತಿಯು ಲೋಕದಲ್ಲೆಲ್ಲ ಹರಡುವುದು. ಆಗ ಈ ಮಂಟಪವು ಕುಕ್ಕುಟಮಂಟಪವೆಂದು ಕರೆಯಲ್ಪಡುವುದು.

ಹರಿರುವಾಚ :—

ಭಾಲನೇತ್ರ ಸಮಾಖ್ಯಾಹಿ ಕಥಂ ನಿರ್ವಾಣಮಂಡಪಃ ।
ತಥಾ ಖ್ಯಾತಿಮಸೌ ಗಂತಾ ಯಥಾ ದೇವೇನ ಭಾಷಿತಂ ॥ ೩೯ ॥

ದೇವದೇವ ಉವಾಚ :—

ಮಹಾನಂದೋ ದ್ವಿಜೋ ನಾಮ ಭವಿಷ್ಯೋಽತ್ರ ಚತುರ್ಭುಜ ।
ಅಗ್ರವೇದೀ ಸಮಾಚಾರಸ್ತ್ಯಕ್ತತೀರ್ಥಪ್ರತಿಗ್ರಹಃ ॥ ೪೦ ॥
ಅದಾಂಭಿಕೋಽಕ್ರೂರಮನಾಃ ಸದೈವಾತಿಥಿವಲ್ಲಭಃ ।
ಅಥ ಯೌವನಮಾಸಾದ್ಯ ಪಿತರ್ಯುಪರತೇ ಸ ಹಿ ॥ ೪೧ ॥
ವಿಷಮೇಷುಶರೈಸ್ತ್ರೀವ್ರೈಃ ಕಾರಿತಸ್ತ್ವಪದೇ ಪದಂ ।
ಜಹಾರ ಕಸ್ಯಚಿದ್ಭಾರ್ಯಾಂ ಮೈತ್ರೀಂ ಕೃತ್ವಾ ತು ತೇನ ವೈ ॥ ೪೨ ॥
ತಯಾ ಚ ಪ್ರೇರಿತೋಽಪೇಯಂ ಪಪೌ ಚಾಪಿ ವಿಮೋಹಿತಃ ।
ಅಭಕ್ಷ್ಯಭಕ್ಷಣರುಚಿರಭೂನ್ಮದನಮೋಹಿತಃ ॥ ೪೩ ॥
ವೈಷ್ಣವಾನ್ ಧನಿನೋ ದೃಷ್ಟ್ವಾ ಕ್ಷಣಂ ವೈಷ್ಣವವೇಷಭೃತ್ ।
ಶೈವಾನ್ನಿಂದತಿ ಮೂಢಾತ್ಮಾ ನರಕತ್ರಾಣಕಾರಣಾನ್ ॥ ೪೪ ॥

---

೩೯. ಶ್ರೀಹರಿಯು ಕೇಳುತ್ತಾನೆ:—ಫಾಲನೇತ್ರನೆ! ನೀನು ನಿರೂಪಿಸಿದಂತೆ ಈ ಮುಕ್ತಿಮಂಟಪವು ಪ್ರಖ್ಯಾತಿಯನ್ನು ಹೇಗೆ ಪಡೆಯುವುದೆಂಬುದನ್ನು ನನಗೆ ವಿಸ್ತಾರವಾಗಿ ತಿಳಿಸು.

೪೦. ಮಹಾದೇವನು ಹೇಳುತ್ತಾನೆ:—ಚತುರ್ಭುಜನೆ! ಇಲ್ಲಿ ಮುಂದೆ ಮಹಾನಂದನೆಂಬ ಬ್ರಾಹ್ಮಣನೊಬ್ಬನು ಹುಟ್ಟುವನು. ಆತನು ಋಗ್ವೇದಕ್ಕೆ ಸೇರಿದವನೂ, ಸದಾಚಾರಿಯೂ, ತೀರ್ಥಗಳಲ್ಲಿ ದಾನಗಳನ್ನು ಸ್ವೀಕರಿಸದವನೂ ಆಗಿರುವನು.

೪೧–೪೨. ದಂಭವಿಲ್ಲದವನು; ಸೌಮ್ಯಮನಸ್ಸುಳ್ಳವನು; ಯಾವಾಗಲೂ ಅತಿಥಿಗಳ ಸೇವೆಯಲ್ಲಿಯೇ ನಿರತನಾಗಿರುವನು. ಆತನಿಗೆ ಯೌವನವು ಪ್ರಾಪ್ತವಾಗಲು ತಂದೆಯೂ ಮೃತನಾಗುವನು. ಆಗ ಮನ್ಮಥನ ಬಾಣಗಳಿಗೆ ತುತ್ತಾಗಿ ಆತನು ಕೆಟ್ಟದಾರಿಯಲ್ಲಿ ಹೆಜ್ಜೆಯಿಡುವವನಾಗುವನು. ಒಬ್ಬಾನೊಬ್ಬನೊಡನೆ ಸ್ನೇಹವನ್ನು ಮಾಡಿಕೊಂಡು ಅವನ ಹೆಂಡತಿಯನ್ನಪಹರಿಸುವನು.

೪೩. ಅವಳಿಂದ ಪ್ರೇರಿತನಾಗಿ ಅವಳ ಮೋಹಕ್ಕೊಳಗಾಗಿ ಅಪೇಯಗಳನ್ನೂ ಪಾನಮಾಡುವನು. ಮನ್ಮಥಾವಿಷ್ಟನಾಗಿ ಅಭಕ್ಷ್ಯಗಳನ್ನೂ ನಿರ್ಲಜ್ಜೆಯಿಂದ ಭಕ್ಷಿಸುವನು.

೪೪. ಧನಿಕರಾದ ವೈಷ್ಣವರು ಬರಲು ತಾನೂ ಆ ಕಾಲಕ್ಕೆ ವೈಷ್ಣವವೇಷವನ್ನು ಧರಿಸಿ ಅವರ ಮುಂದೆ ನರಕೋದ್ಧರಣಕ್ಕೆ ಕಾರಣರಾದ ಮಾಹೇಶ್ವರರನ್ನು ನಿಂದಿಸುವನು.

ಶಿವಭಕ್ತಾನ್ಸಮಾಲೋಕ್ಯ ಕಿಂಚಿಚ್ಚ ಪರಿದಿತ್ಸುಕಾನ್ ।
ಗರ್ಹಯೇದ್ವೈಷ್ಣವಾನ್ಸರ್ವಾನ್ ಶೈವಲಿಂಗೋಪಜೀವಕಃ ॥ ೪೫ ॥
ಇತಿ ಪಾಖಂಡಧರ್ಮಜ್ಞಃ ಸಂಧ್ಯಾಸ್ನಾನಪರಾಙ್ಮುಖಃ ।
ವಿಶಾಲತಿಲಕಃ ಸ್ರಗ್ವೀ ಶುದ್ಧಧೌತಾಂಬರೋಜ್ಜ್ವಲಃ ॥ ೪೬ ॥
ಶಿಖೀ ಚೋಪಗ್ರಹಕರಃ ಸರ್ವೇಭ್ಯೋಽಸತ್ಪ್ರತಿಗ್ರಹೀ ।
ತಸ್ಯಾಪತ್ಯದ್ವಯಂ ಜಾತಮುನ್ಮತ್ತಪಥವರ್ತಿನಃ ॥ ೪೭ ॥
ಏವಂ ತಸ್ಯ ಪ್ರವೃತ್ತಸ್ಯ ಕಶ್ಚಿತ್ಪರ್ವತದೇಶತಃ ।
ಸಮಾಗಮಿಷ್ಯತಿ ಧನೀ ತೀರ್ಥಯಾತ್ರಾರ್ಥಸಿದ್ಧಯೇ ॥ ೪೮ ॥
ಸ್ನಾತ್ವಾ ಸ ಚಕ್ರಸರಸಿ ಕಥಯಿಷ್ಯತಿ ಚೇತಿ ವೈ ।
ಅಹಮಸ್ಮಿ ಧನಂ ದಿತ್ಸುರ್ಜಾತ್ಯಾ ಚಾಂಡಾಲಸತ್ತಮಃ ॥ ೪೯ ॥
ಅಸ್ತಿ ಕಶ್ಚಿತ್ಪ್ರತಿಗ್ರಹೀ ಯಸ್ಮೈ ದದ್ಯಾಮಹಂ ಧನಂ ।
ಇತಿ ತಸ್ಯ ವಚಃ ಶ್ರುತ್ವಾ ಕೈಶ್ಚಿಚ್ಚಾಂಗುಲಿಸಂಜ್ಞಯಾ ॥ ೫೦ ॥

---

೪೫. ಅಲ್ಪಸ್ವಲ್ಪವನ್ನು ದಾನಮಾಡಲೆಳಸುತ್ತಿರುವ ಶಿವಭಕ್ತರನ್ನು ಕಂಡೊಡನೆ ಶೈವ ಚಿಹ್ನಗಳನ್ನೇ ಜೀವನೋಪಾಯವನ್ನಾಗಿ ಮಾಡಿಕೊಂಡು ಸಕಲ ವೈಷ್ಣವರನ್ನೂ ಹೀಯಾಳಿಸುವನು.

೪೬. ಈ ರೀತಿಯಾಗಿ ಅವನು ಪಾಖಂಡಧರ್ಮಗಳನ್ನು ಅನುಸರಿಸುತ್ತಿರುವನು. ಸ್ನಾನ, ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ತ್ಯಜಿಸಿರುವನು. ಹಣೆಯಲ್ಲಿ ದೊಡ್ಡ ತಿಲಕವನ್ನಿಟ್ಟು, ಹೂಮಾಲೆಗಳನ್ನು ಧರಿಸಿ ಶುದ್ಧವಾಗಿ ಒಗೆದ ವಸ್ತ್ರಗಳಿಂದ ಕಂಗೊಳಿಸುತ್ತಿರುವನು.

೪೭. ಶಿಖೆಯನ್ನು ಧರಿಸಿರುವನು. ಕೈಗೆ ಸಿಕ್ಕಿದುದನ್ನು ಕಸಿದುಕೊಳ್ಳದೆ ಬಿಡನು. ಸಮಸ್ತ ಅಸಜ್ಜನರಿಂದಲೂ ದಾನಗಳನ್ನು ಸ್ವೀಕರಿಸುವನು. ಇಂತು ಉಚ್ಛೃಂಖಲವೃತ್ತಿಯಿಂದ ನಡೆಯುತ್ತಿರುವ ಅವನಿಗೆ ಇಬ್ಬರು ಮಕ್ಕಳು ಹುಟ್ಟುವರು.

೪೮. ಇಂತು ಅವನು ಜೀವನವನ್ನು ನಡೆಸುತ್ತಿರಲು ತೀರ್ಥಯಾತ್ರೆಯನ್ನು ಮಾಡುವವನಾಗಿ ಪರ್ವತಪ್ರದೇಶದಿಂದ ಒಬ್ಬಾನೊಬ್ಬ ಧನಿಕನು ಇಲ್ಲಿಗೆ ಬರುವನು.

೪೯. ಅವನು ಚಕ್ರತೀರ್ಥದಲ್ಲಿ ಸ್ನಾನವನ್ನುಮಾಡಿ ಇಂತೆಂದು ಹೇಳುವನು. ‘‘ಚಂಡಾಲಜಾತಿಯಲ್ಲಿ ಹುಟ್ಟಿದರೂ ಉತ್ತಮನಾದ ನಾನು ಧನವಂತನಾಗಿ ದಾನವನ್ನು ಕೊಡಲೆಳಸುತ್ತಿರುವೆನು.

೫೦–೫೧. ಇಲ್ಲಿ ಯಾವನಾದರೂ ಸ್ವೀಕರಿಸುವವನಿದ್ದರೆ ಅವನಿಗೆ ನಾನು ಅಪಾರವಾದ ಧನವನ್ನು ದಾನಮಾಡುವೆನು.’’ ಇಂತೆನ್ನುವ ಆ ಚಂಡಾಲನ

ಉದ್ದಿಷ್ಟ ಉಪವಿಷ್ಟೋಽಸೌ ಯೋ ಜಪೇದ್ಧ್ಯಾನಮುದ್ರಯಾ ।
ಏಷ ಪ್ರತಿಗ್ರಹಂ ತ್ವತ್ತೋ ಗ್ರಹೀಷ್ಯತಿ ನ ಚೇತರಃ ॥ ೫೧ ॥
ಇತಿ ತೇಷಾಂ ವಚಃ ಶ್ರುತ್ವಾ ಸ ಗತ್ವಾ ತತ್ಸಮೀಪತಃ ।
ದಂಡವತ್ಪ್ರಣಿಪತ್ಯಾಥ ತಂ ಬಭಾಷೇ ತದಾಂತ್ಯಜಃ ॥ ೫೨ ॥
ಮಾಮುದ್ಧರ ಮಹಾವಿಪ್ರ ತೀರ್ಥಂ ಮೇ ಸಫಲೀಕುರು ।
ಕಿಂಚಿದ್ವಸ್ತ್ವಸ್ತಿ ಮೇ ತತ್ತ್ವಂ ಗೃಹಾಣಾನುಗ್ರಹಂ ಕುರು ॥ ೫೩ ॥
ಅಥಾಕ್ಷಮಾಲಿಕಾಂ ಕರ್ಣೇ ಕೃತ್ವಾ ಧ್ಯಾನಂ ವಿಸೃಜ್ಯ ಚ ।
ಕಿಯದ್ಧನಂ ತವಾಸ್ತೀಹ ಪಪ್ರಚ್ಛ ಕರಸಂಜ್ಞಯಾ ॥ ೫೪ ॥
ತಸ್ಯ ಸಂಜ್ಞಾಂ ಸ ವೈ ಬುದ್ಧ್ವಾ ಪ್ರೋವಾಚಾತಿಪ್ರಹೃಷ್ಟವತ್ ।
ಸಂತೃಪ್ತಿರ್ಯಾವತಾ ತೇ ಸ್ಯಾತ್ತಾವದ್ದಾಸ್ಯಾಮಿ ನಾನ್ಯಥಾ ॥ ೫೫ ॥
ಇತಿ ತದ್ವಚನಂ ಶ್ರುತ್ವಾ ತ್ಯಕ್ತ್ವಾ ಮೌನಮುವಾಚ ಹ ।
ಸಾನಂದಃ ಸ ಮಹಾನಂದೋ ನಿಃಸ್ಪೃಹೋಽಸ್ಮಿ ಪ್ರತಿಗ್ರಹೇ ॥ ೫೬ ॥

---

ಮಾತುಗಳನ್ನು ಕೇಳಿ ಕೆಲವರು ಬೆರಳಿನಿಂದ ತೋರಿಸುತ್ತ "ಅಲ್ಲಿ ಕುಳಿತುಕೊಂಡು ಧ್ಯಾನಮುದ್ರೆಯಿಂದ ಜಪವನ್ನು ಮಾಡುತ್ತಿರುವ ಅವನೊಬ್ಬನು ಮಾತ್ರ ನಿನ್ನಿಂದ ದಾನವನ್ನು ಸ್ವೀಕರಿಸುವನು. ಮತ್ತೊಬ್ಬನು ತೆಗೆದುಕೊಳ್ಳುವುದಿಲ್ಲ" ಎಂಬ ಅರ್ಥವು ತೋರುವಂತೆ ಸಂಜ್ಞೆಗಳನ್ನು ಮಾಡುವರು.

೫೨. ಇಂತೆನ್ನುವ ಅವರ ಇಂಗಿತವನ್ನರಿತು ಅವನು ಆ ಬ್ರಾಹ್ಮಣನ ಸಮೀಪಕ್ಕೆ ಹೋಗಿ ದೀರ್ಘದಂಡನಮಸ್ಕಾರವನ್ನು ಮಾಡಿ ಆತನೊಡನಿಂತೆನ್ನುವನು.

೫೩. "ಮಹಾಬ್ರಾಹ್ಮಣನೆ! ನನ್ನನ್ನುದ್ಧರಿಸು. ಈ ನನ್ನ ತೀರ್ಥಯಾತ್ರೆಯನ್ನು ಸಫಲಗೊಳಿಸು. ನನ್ನಲ್ಲಿ ಸ್ವಲ್ಪ ಧನವಿರುವುದು. ಅದನ್ನು ನೀನು ಸ್ವೀಕರಿಸಿ ನನ್ನಲ್ಲಿ ಅನುಗ್ರಹವನ್ನು ಮಾಡು."

೫೪. ಆಗ ಆ ಬ್ರಾಹ್ಮಣನು ರುದ್ರಾಕ್ಷಿಗಳ ಮಾಲೆಯನ್ನು ಕಿವಿಯೊಳಗೆ ಸಿಕ್ಕಿಸಿ ತನ್ನ ಧ್ಯಾನವನ್ನು ಕೊನೆಗಾಣಿಸಿ ಕೈ ಸನ್ನೆಯಿಂದಲೇ "ನಿನ್ನಲ್ಲಿ ಎಷ್ಟು ಧನವಿರುವುದು ?" ಎಂದು ಪ್ರಶ್ನೆಮಾಡುವನು.

೫೫. ಆ ಸಂಜ್ಞೆಯನ್ನು ಆ ಚಂಡಾಲನು ಅರಿತವನಾಗಿ ಅತಿ ಸಂತೋಷಗೊಂಡು ಹೇಳುವನು. ನಿನಗೆ ಎಷ್ಟರಿಂದ ಸಂತೋಷವಾಗುವುದೊ, ಅಷ್ಟನ್ನೂ ಕೊಡುವೆನು. ಇದು ಸುಳ್ಳಲ್ಲ."

೫೬. 'ಈ ಚಂಡಾಲನ ಮಾತನ್ನುಕೇಳಿ ಮಹಾನಂದ ಬ್ರಾಹ್ಮಣನು ಅಮಿತಾನಂದಭರಿತನಾಗಿ ಮೌನವನ್ನುಳಿದು ಹೇಳತೊಡಗುವನು. "ಅಯ್ಯಾ! ನಾನು ದಾನಗಳನ್ನು ಸ್ವೀಕರಿಸುವುದರಲ್ಲಿ ನಿರಪೇಕ್ಷನು.

ಪರಂ ತೇಽನುಗ್ರಹಾರ್ಥಂ ತು ಕರಿಷ್ಯಾಮಿ ಪ್ರತಿಗ್ರಹಂ ।
ಕಿಂ ಚ ಮೇ ವಚನಂ ತ್ವಂ ಚೇತ್ಕರಿಷ್ಯಸ್ಯುತ್ತಮೋತ್ತಮ ॥ ೫೭ ॥
ಯಾವದಸ್ತ್ಯಖಿಲಂ ವಿತ್ತಂ ತನ್ಮಹ್ಯೇ ನ್ಯಸ್ಯ ಕಸ್ಯಚಿತ್ ।
ನ ಸ್ತೋಕಮಪಿ ದಾತವ್ಯಂ ತದಾಽಽದಾಸ್ಯಾಮಿ ನಾನ್ಯಥಾ ॥ ೫೮ ॥

ಚಾಂಡಾಲ ಉವಾಚ :—

ಯಾವದಸ್ತಿ ಮಯಾ ನೀತಂ ವಿಶ್ವೇಶಪ್ರೀತಯೇ ವಸು ।
ತಾವತ್ತುಭ್ಯಂ ಪ್ರದಾಸ್ಯಾಮಿ ವಿಶ್ವೇಶಸ್ತ್ವಂ ಯತೋ ಮಮ ॥ ೫೯ ॥
ಯೇ ವಸಂತೀಹ ವಿಶ್ವೇಶರಾಜಧಾನ್ಯಾಂ ದ್ವಿಜೋತ್ತಮ ।
ಕ್ಷುದ್ರಾಕ್ಷುದ್ರಾ ಜಂತುಮಾತ್ರಾ ವಿಶ್ವೇಶಾಂಶಾಸ್ತ ಏವ ಹಿ ॥ ೬೦ ॥
ಪರೋದ್ಧರಣಶೀಲಾ ಯೇ ಯೇ ಪರೇಚ್ಛಾಪ್ರಪೂರಕಾಃ ।
ಪರೋಪಕೃತಿಶೀಲಾ ಯೇ ವಿಶ್ವೇಶಾಂಶಾಸ್ತ ಏವ ಹಿ ॥ ೬೧ ॥
ಇತಿ ತದ್ವಚನಂ ಶ್ರುತ್ವಾ ಪ್ರಹೃಷ್ಟೇಂದ್ರಿಯಮಾನಸಃ ।
ಉವಾಚ ಪಾರ್ವತೀಯಂ ತಂ ಸೋಽಗ್ರಜನ್ಮಾಂತ್ಯಜಂ ತದಾ ॥ ೬೨ ॥

---

೫೭. ಆದರೆ ನಿನ್ನನ್ನು ಅನುಗ್ರಹಿಸುವುದಕ್ಕಾಗಿ ಮಾತ್ರವೇ ಈಗ ಈ ಪ್ರತಿಗ್ರಹವನ್ನು ಮಾಡುತ್ತಿರುವೆನು. ಎಲೈ ಉತ್ತಮನೆ! ಆದರೆ ನನ್ನ ಒಂದು ಮಾತನ್ನು ನೀನು ತಪ್ಪದೆ ನಡೆಸಿಕೊಡಬೇಕು.

೫೮. ನಿನ್ನಲ್ಲಿರುವ ಧನವೆಲ್ಲವನ್ನೂ ನನ್ನ ಮುಂದಿಡಬೇಕು. ಅದರಲ್ಲಿ ಒಂದು ಕವಡೆಯನ್ನೂ ಸಹ ಮತ್ತೊಬ್ಬನಿಗೆ ಕೊಡಬಾರದು. ಹಾಗಾದರೆ ಮಾತ್ರ ನಾನು ನಿನ್ನ ದಾನವನ್ನು ಸ್ವೀಕರಿಸುವೆನು. ಇಲ್ಲದಿದ್ದರೆ ಸ್ವೀಕರಿಸಲಾರೆನು.''

೫೯. ಚಂಡಾಲನು ಹೇಳುತ್ತಾನೆ:—'' ನಾನು ಎಷ್ಟು ಧನವನ್ನು ತೆಗೆದುಕೊಂಡು ಬಂದಿರುವೆನೊ, ಅಷ್ಟನ್ನೂ ಶ್ರೀವಿಶ್ವೇಶ್ವರನ ಪ್ರೀತಿಗಾಗಿ ನಿನಗೆ ಧಾರೆಯೆರೆದುಕೊಡುವೆನು. ನೀನೇ ನನಗೆ ಸಾಕ್ಷಾದ್ವಿಶ್ವೇಶ್ವರನಾಗಿರುವೆ.

೬೦. ಎಲೈ ಬ್ರಾಹ್ಮಣಶ್ರೇಷ್ಠನೆ! ವಿಶ್ವೇಶ್ವರನ ರಾಜಧಾನಿಯಾದ ಈ ನಗರದಲ್ಲಿ ಯಾವ ಪ್ರಾಣಿಮಾತ್ರಗಳು ವಾಸಮಾಡುತ್ತಿರುವುವೊ, ಅವುಗಳೆಲ್ಲವೂ ನೀಚಗಳೇ ಆಗಿರಲಿ, ಉಚ್ಚಗಳೇ ಆಗಿರಲಿ, ವಿಶ್ವೇಶ್ವರನ ಅಂಶಗಳಿಂದೊಡಗೂಡಿರುವುವೇ ಆಗಿರುವುವು.

೬೧. ಯಾರು ಪರರ ಉದ್ಧಾರಕ್ಕಾಗಿ ದುಡಿಯುವರೊ, ಪರರ ಇಚ್ಛೆಗಳನ್ನು ಪೂರೈಸುವರೊ, ಪರರಿಗೆ ಉಪಕಾರಗಳನ್ನುಮಾಡುವುದರಲ್ಲಿಯೇ ನಿರತರಾಗಿರುವರೊ, ಅವರೆಲ್ಲರೂ ವಿಶ್ವೇಶ್ವರನ ಅಂಶಸಹಿತರೇ.''

೬೨. ಇಂತೆಂದ ಮಾತನ್ನುಕೇಳಿ ಸಂತೋಷಗೊಂಡ ಇಂದ್ರಿಯಗಳೂ ಮನಸ್ಸೂ ಉಳ್ಳವನಾಗಿ ಆ ಬ್ರಾಹ್ಮಣನು ಪರ್ವತದೇಶಸ್ಥನಾದ ಆ ಚಂಡಾಲನನ್ನು ಕುರಿತು ಹೇಳತೊಡಗುವನು.

ಯುಗಪತ್ಸರ್ವಮೇವಾಶು ನಷ್ಟಂ ದುರ್ಬುದ್ಧಿಚೇಷ್ಟಯಾ ।
ನ ಕಾಶ್ಯಾಂ ಮರಣಂ ಪ್ರಾಪ್ತಂ ತಸ್ಮಾದ್ದುಷ್ಟಪ್ರತಿಗ್ರಹಾತ್ ॥ ೭೫ ॥
ಪ್ರಾಂತೇ ಕುಟುಂಬಸ್ಮರಣಾತ್ತಥಾ ಕಾಶೀಸ್ಮೃತೇರಪಿ ।
ಚೋರೈರ್ಹತೋಽಪಿ ಸ ತದಾ ಕೀಕಟೇ ಕುಕ್ಕುಟೋಽಭವತ್ ॥ ೭೬ ॥
ಸಾ ಕುಕ್ಕುಟೀಸುತೌ ತೌ ತು ತಾಮ್ರಚೂಡತ್ವಮಾಪತುಃ ।
ಪ್ರಾಂತೇ ಕಾಶೀಸ್ಮರಣತೋ ಜಾತಾ ಜಾತಿಸ್ಮೃತಿಃ ಪರಾ ॥ ೭೭ ॥
ಇತ್ಥಂ ಬಹುತಿಥೇ ಕಾಲೇ ಗತೇ ಕಾರ್ಪಟಿಕೋತ್ತಮಾಃ ।
ತಸ್ಮಿನ್ನೇವಾಧ್ವನಿ ಪ್ರಾಪ್ತಾಶ್ಚತ್ವಾರೋ ಯತ್ರ ಕುಕ್ಕುಟಾಃ ॥ ೭೮ ॥
ವಾರಾಣಸ್ಯಾಃ ಕಥಾಂ ಪ್ರೋಚ್ಚೈಃ ಕುರ್ವಂತೋಽನ್ಯೋನ್ಯಮೇವ ಹಿ ।
ಕಾಶೀಕಥಾಂ ಸಮಾಕರ್ಣ್ಯ ತದಾ ತೇ ಚರಣಾಯುಧಾಃ ।
ಜಾತಿಸ್ಮೃತಿಪ್ರಭಾವೇಣ ತತ್ಸಂಗೇನ ತು ನಿರ್ಗತಾಃ ॥ ೭೯ ॥
ತೈಶ್ಚ ಕಾರ್ಪಟಿಕಶ್ರೇಷ್ಠೈಃ ಪಥಿ ದೃಷ್ಟ್ವಾ ಕೃಪಾಲುಭಿಃ ।
ತಂಡುಲಾದಿಪರಿಕ್ಷೇಪೈಃ ಪ್ರಾಪಿತಾಃ ಕ್ಷೇತ್ರಮುತ್ತಮಂ ॥ ೮೦ ॥

---

೭೫. ದುರ್ಬುದ್ಧಿಯಾದ ನನ್ನ ನಡತೆಯಿಂದ ನನ್ನ ಸರ್ವಸ್ವವೂ ನಷ್ಟವಾಯಿತು. ಆ ಚಂಡಾಲನಿಂದ ದಾನವನ್ನು ತೆಗೆದುಕೊಂಡುದರ ಫಲವಾಗಿ ನನಗೆ ಕಾಶಿಯಲ್ಲಿ ಮರಣವೂ ಲಭಿಸಲಿಲ್ಲ.''

೭೬–೭೭. ಈ ರೀತಿಯಾಗಿ ಅವಸಾನಕಾಲದಲ್ಲಿ ತನ್ನ ಕುಟುಂಬವನ್ನೂ ಕಾಶೀಕ್ಷೇತ್ರವನ್ನೂ ಕುರಿತು ಚಿಂತಿಸಿದುದರಿಂದ ಆ ಬ್ರಾಹ್ಮಣನು ಚೋರರಿಂದ ಹತನಾಗಿ ಆ ಗಯಾಪ್ರಾಂತದಲ್ಲಿಯೇ ಗಂಡುಕೋಳಿಯಾಗಿ ಹುಟ್ಟುವನು. ಅವನ ಹೆಂಡತಿಯು ಹೆಣ್ಣುಕೋಳಿಯಾಗಿಯೂ, ಇಬ್ಬರು ಮಕ್ಕಳೂ ಎರಡು ಮರಿಗಳಾಗಿಯೂ ಹುಟ್ಟುವರು. ಅವಸಾನಕಾಲದಲ್ಲಿ ಅವನಿಗೆ ಕಾಶೀಸ್ಮರಣ ವುಂಟಾದುದರ ಫಲವಾಗಿ ಪೂರ್ವಜನ್ಮದ ಸ್ಮರಣೆಯು ಸಂಪೂರ್ಣವಾಗಿರುತ್ತದೆ.

೭೮–೭೯. ಇಂತು ಅನೇಕ ದಿವಸಗಳು ಕಳೆದುಹೋಗಲು ಒಂದಾನೊಂದು ದಿನ ಕೆಲವು ಯಾತ್ರಿಕರು ಈ ನಾಲ್ಕು ಕೋಳಿಗಳು ವಾಸಮಾಡುತ್ತಿದ್ದಲ್ಲಿಗೇ ನಡೆದುಬರುವರು. ಅವರು ತಮ್ಮಲ್ಲಿಯೇ ಅನ್ಯೋನ್ಯವಾಗಿ ಕಾಶೀಕ್ಷೇತ್ರದ ಕಥೆಗಳನ್ನು ಗಟ್ಟಿಯಾಗಿ ಹೇಳಿಕೊಳ್ಳುವರು. ಕಾಶೀವೃತ್ತಾಂತವನ್ನು ಕೇಳಿದ ಮಾತ್ರದಿಂದಲೇ ಆ ಕೋಳಿಗಳಿಗೆಲ್ಲ ಜನ್ಮಸ್ಮರಣೆಯುಂಟಾಗಿ ಅವುಗಳೂ ಅವರನ್ನೇ ಹಿಂಬಾಲಿಸುತ್ತಿದ್ದುವು.

೮೦. ಕೃಪಾವಂತರಾದ ಆ ಯಾತ್ರಿಕೋತ್ತಮರೂ ದಾರಿಯಲ್ಲಿ ಬರುತ್ತಿರುವ ಆವುಗಳನ್ನು ಕಂಡು ಅಕ್ಕಿ ಮೊದಲಾದುವುಗಳನ್ನು ಹಾಕುತ್ತ ಅವುಗಳನ್ನು ಆ ಉತ್ತಮಕ್ಷೇತ್ರಕ್ಕೆ ಸೇರಿಸುವರು.

ತೇ ತು ಕ್ಷೇತ್ರಂ ಸಮಾಸಾದ್ಯ ಚತ್ವಾರಶ್ಚರಣಾಯುಧಾಃ ।
ಚರಿಷ್ಯಂತೋಽತ್ರ ಪರಿತೋ ಮುಕ್ತಿಮಂಡಪಮುತ್ತಮಂ ॥ ೮೧ ॥
ಜಿತಾಹಾರಾನ್ಸ ನಿಯಮಾನ್ಕಾಮಕ್ರೋಧಪರಾಙ್ಮುಖಾನ್ ।
ಪ್ರಹಾಸಾನ್ಮತ್ಕಥಾಲಾಪಾಲ್ಲೋಭಮೋಹವಿವರ್ಜಿತಾನ್ ॥ ೮೨ ॥
ಸ್ವರ್ಧುನೀಸ್ನಾನಸಂಕ್ಲಿನ್ನಸುನಿರ್ಮಲಶಿರೋರುಹಾನ್ ।
ಮನ್ನಾಮೋಚ್ಚಾರಣಪರಾನ್ಮತ್ಕಥಾರ್ಪಿತಸುಶ್ರುತೀನ್ ॥ ೮೩ ॥
ಮದ್ದತ್ತಚಿತ್ತಸದ್ವೃತ್ತೀನ್ದೃಷ್ಟ್ವಾ ಕ್ಷೇತ್ರನಿವಾಸಿನಃ ।
ಮಾನಯಾಮಾಸುರಥ ತಾನ್ಕುಕ್ಕುಟಾನ್ಸಾಧುವರ್ತ್ಮನಃ ॥ ೮೪ ॥
ಪ್ರಾಕ್ತನಾದ್ವಾಸನಾದ್ಯೋಗಾತ್ಸಂಪ್ರಧಾರ್ಯ ಪರಸ್ಪರಂ ।
ಕ್ರಮೇಣಾಹಾರಮಾಕುಂಚ್ಯ ಪ್ರಾಣಾಂಸ್ತ್ಯಕ್ಷ್ಯಂತಿ ಚಾತ್ರ ವೈ ॥ ೮೫ ॥
ಪಶ್ಯತಾಂ ಸರ್ವಲೋಕಾನಾಂ ವಿಷ್ಣೋ ತೇ ಮದನುಗ್ರಹಾತ್ ।
ವಿಮಾನಮಧಿರುಹ್ಯಾಶು ಕೈಲಾಸಂ ಪ್ರಾಪ್ಯ ಮತ್ಪದಂ ॥ ೮೬ ॥
ನಿರ್ವಿಶ್ಯ ಸುಚಿರಂ ಕಾಲಂ ದಿವ್ಯಾನ್ಭೋಗಾನನುತ್ತಮಾನ್ ।
ತತೋಽತ್ರ ಜ್ಞಾನಿನೋ ಭೂತ್ವಾ ಮುಕ್ತಿಂ ಪ್ರಾಪ್ಸ್ಯಂತಿ ಶಾಶ್ವತೀಂ॥ ೮೭ ॥

---

೮೧. ಇಂತು ಆ ನಾಲ್ಕು ಕೋಳಿಗಳೂ ಕಾಶಿಯನ್ನು ಸೇರಿ ನಿತ್ಯವೂ ಸರ್ವೋತ್ತಮವಾದ ಮುಕ್ತಿಮಂಟಪವನ್ನು ಪ್ರದಕ್ಷಿಣೆಮಾಡುವುವು.

೮೨–೮೪. ಆಹಾರವನ್ನು ಜಯಿಸಿದವುಗಳೂ, ನಿಯಮದಿಂದಿರುವುಗಳೂ, ಕಾಮಕ್ರೋಧರಹಿತಗಳೂ, ಆನಂದದಿಂದ ಕೂಡಿದುವುಗಳೂ, ನನ್ನ ಕಥೆಗಳಲ್ಲಿಯೇ ಆಸಕ್ತಿಯುಳ್ಳವುಗಳೂ, ಲೋಭಮೋಹಗಳಿಂದ ದೂರವಾದವುಗಳೂ, ನಿತ್ಯವೂ ಗಂಗೆಯಲ್ಲಿ ಸ್ನಾನಮಾಡುವುದರಿಂದ ಪರಿಶುದ್ಧವಾದ ತಲೆಗೂದಲುಳ್ಳವುಗಳೂ, ನನ್ನ ನಾಮಗಳನ್ನೇ ಹೊಗಳುತ್ತಿರುವುವುಗಳೂ, ನನ್ನ ಕಥೆಗಳನ್ನು ಕೇಳುವುದರಲ್ಲಿಯೇ ಕಿವಿಗೊಟ್ಟಿರುವುವುಗಳೂ, ಮನೋವೃತ್ತಿಗಳನ್ನೆಲ್ಲ ನನ್ನಲ್ಲಿಯೇ ಏಕಾಗ್ರಗೊಳಿಸಿರುವುವುಗಳೂ, ಆದ ಈ ಕೋಳಿಗಳನ್ನು ಕಂಡು ಇವುಗಳ ಸಾಧುವರ್ತನೆಗಾಗಿ ಕ್ಷೇತ್ರವಾಸಿಗಳೆಲ್ಲರೂ ಇವುಗಳನ್ನು ಬಹುವಾಗಿ ಗೌರವಿಸುವರು.

೮೫. ಪೂರ್ವಜನ್ಮಗಳ ವಾಸನೆಯ ಫಲವಾಗಿ ಅವುಗಳು ತಮ್ಮಲ್ಲಿಯೇ ಆಲೋಚನೆಯನ್ನು ನಡೆಸಿ ಕ್ರಮವಾಗಿ ಆಹಾರವನ್ನು ಕಡಿಮೆಮಾಡಿಕೊಳ್ಳುತ್ತ ಆ ಮುಕ್ತಿಮಂಟಪದಲ್ಲಿಯೇ ತಮ್ಮ ಪ್ರಾಣಗಳನ್ನು ತ್ಯಜಿಸುವುವು.

೮೬–೮೭. ಎಲೈ ಮಹಾವಿಷ್ಣುವೆ! ಅಲ್ಲಿ ನೆರೆದಿರುವ ಸಮಸ್ತರೂ ನೋಡುತ್ತಿರುವಂತೆಯೇ ಅವುಗಳು ನನ್ನ ಅನುಗ್ರಹದಿಂದ ದಿವ್ಯವಿಮಾನವನ್ನೇರಿ ನನ್ನ ಪದವಾದ ಕೈಲಾಸವನ್ನು ಸೇರುವುವು. ಅಲ್ಲಿ ಬಹಳಕಾಲ ನೆಲಸಿ ಸರ್ವೋತ್ತಮ

**ತತೋ ಲೋಕಾಸ್ತದಾರಭ್ಯ ಕಥಯಿಷ್ಯಂತಿ ಸರ್ವತಃ ।**
**ಮುಕ್ತಿಮಂಡಪನಾಮ್ನೈತದೇಷ ಕುಕ್ಕುಟಮಂಡಪಃ ॥ ೮೮ ॥**
**ಚರಿತ್ರಮಪಿ ವೈ ತೇಷಾಂ ಯೇ ಸ್ಮರಿಷ್ಯಂತಿ ಮಾನವಾಃ ।**
**ಮುಕ್ತಿಮಂಡಪಮಾಸಾದ್ಯ ಶ್ರೇಯಃ ಪ್ರಾಪ್ಸ್ಯಂತಿ ತೇಽಪಿ ಹಿ ॥ ೮೯ ॥**
**ಇತಿ ಯಾವತ್ಕಥಾಂ ಶಂಭುರ್ಭವಿಷ್ಯಾಮುಗ್ರತೋ ಹರೇಃ ।**
**ಅಕರೋತ್ತುಮುಲೋ ನಾದೋ ಘಂಟಾನಾಂ ತಾವದುದ್ಗತಃ ॥ ೯೦ ॥**
**ಅಥ ನಂದಿನಮಾಹೂಯ ದೇವದೇವ ಉಮಾಧವಃ ।**
**ಪ್ರೋವಾಚ ನಂದಿನ್ವಿಜ್ಞಾಯಾಗತ್ಯ ಬ್ರೂಹಿ ಕುತೋ ರವಃ ॥ ೯೧ ॥**
**ಅಥ ನಂದೀ ಸಮಾಗತ್ಯ ಪ್ರೋವಾಚ ವೃಷಭಧ್ವಜಂ ।**
**ನಮಸ್ಕೃತ್ಯ ಪ್ರಹೃಷ್ಟಾಸ್ಯಃ ಪ್ರಬದ್ಧಕರಸಂಪುಟಃ ॥ ೯೨ ॥**
**ನಂದ್ಯುವಾಚ :—**
**ದೇವದೇವ ತ್ರಿನಯನ ಕಿಮಪೂರ್ವಂ ಬ್ರವೀಮಿ ತೇ ।**
**ಮೋಕ್ಷಲಕ್ಷ್ಮೀವಿಲಾಸೋಽತ್ರ ಕೈಶ್ಚಿತ್ಕೈಶ್ಚಿತ್ಸಮರ್ಚ್ಯತೇ ॥ ೯೩ ॥**

---

ಗಳಾದ ಅನೇಕ ಭೋಗಗಳನ್ನನುಭವಿಸಿ ಪುನಃ ಈ ಕಾಶಿಯಲ್ಲಿ ಜ್ಞಾನಿಗಳಾಗಿ ಹುಟ್ಟಿ ಶಾಶ್ವತವಾದ ಮೋಕ್ಷವನ್ನು ಪಡೆಯುವುವು.

೮೮. ಆದಕಾರಣ ಆ ದಿನವು ಮೊದಲಾಗಿ ಜನರೆಲ್ಲರೂ ಎಲ್ಲೆಡೆಗಳಲ್ಲಿಯೂ ಆ ಮಂಟಪವನ್ನು ಮುಕ್ತಿಮಂಟಪವೆಂದೂ, ಕುಕ್ಕುಟಮಂಟಪವೆಂದೂ ಕರೆಯುವರು.

೮೯. ಮುಕ್ತಿಮಂಟಪದ ದರ್ಶನವನ್ನು ಮಾಡುವಾಗ ಯಾವ ಮಾನವರು ಈ ಕುಕ್ಕುಟಗಳ ಚರಿತ್ರೆಯನ್ನು ಸ್ಮರಿಸಿಕೊಳ್ಳುವರೊ, ಅವರೂ ಶ್ರೇಯಸ್ಸನ್ನು ಪಡೆಯುವರು.''

೯೦. ಇಂತೆಂದು ಮುಂದೆ ನಡೆಯುವ ಚರಿತ್ರೆಯನ್ನು ಪರಮೇಶ್ವರನು ಶ್ರೀಹರಿಗೆ ನಿರೂಪಿಸುತ್ತಿದ್ದಂತೆಯೇ ಅನೇಕ ಘಂಟೆಗಳ ಮಹಾನಾದವುಂಟಾಯಿತು.

೯೧. ಆಗ ಪಾರ್ವತೀಪತಿಯು ನಂದಿಯನ್ನು ಬಳಿಗೆ ಕರೆದು, ''ಎಲೈ ನಂದಿಯೆ! ಈ ಶಬ್ದಕ್ಕೆ ಕಾರಣವೇನೆಂಬುದನ್ನು ತಿಳಿದುಕೊಂಡುಬಂದು ನನಗೆ ಹೇಳು'' ಎಂದು ಅಪ್ಪಣೆಮಾಡಿದನು.

೯೨. ಬಳಿಕ ನಂದಿಯು ಅಲ್ಲಿಗೆ ಹೋಗಿ ವೃಷಭಧ್ವಜನಲ್ಲಿಗೆ ಹಿಂದಿರುಗಿ ಬಂದು ಮುಖದಲ್ಲಿ ಆನಂದವು ಹೊರದೋರುತ್ತಿರಲು ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಹೇಳಿದನು.

೯೩. ನಂದಿಯು ಹೇಳುತ್ತಾನೆ:— ''ದೇವೇಶ್ವರನೆ! ತ್ರಿಲೋಚನನೆ!

ಅಥ ಸ್ಮಿತ್ವಾಬ್ರವೀಚ್ಛಂಭುಃ ಸಿದ್ಧಂ ನಸ್ತು ಸಮೀಹಿತಂ ।
ಉತ್ಥಾಯ ದೇವದೇವೇಶಃ ಸಹದೇವ್ಯಾ ಸುಮಂಗಲಃ ।
ಬ್ರಹ್ಮಣಾ ಹರಿಣಾ ಸಾರ್ಧಂ ತತೋಽಗಾದ್ರಂಗಮಂಡಪಂ ॥ ೯೪ ॥

ಸ್ಕಂದ ಉವಾಚ:—

ಶೃತ್ವಾಧ್ಯಾಯಮಿಮಂ ಪುಣ್ಯಂ ಪರಮಾನಂದಕಾರಣಂ ।
ನರಃ ಪರಾಂ ಮುದಂ ಪ್ರಾಪ್ಯ ಕೈಲಾಸಂ ಪ್ರಾಪ್ಸ್ಯತಿ ಧ್ರುವಂ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಮುಕ್ತಿಮಂಡಪಗಮನಾಖ್ಯಾನಂ" ನಾಮಾಷ್ಟನವತಿತಮೋಽಧ್ಯಾಯಃ

---

ಈ ಆಶ್ಚರ್ಯವನ್ನೇನೆಂದು ಹೇಳಲಿ? ಮೋಕ್ಷಲಕ್ಷ್ಮಿಯ ವಿಲಾಸಕ್ಕೆ ಕಾರಣವಾದ ಈ ಮಂಟಪವನ್ನು ಅನೇಕರು ಅರ್ಚನೆಮಾಡುತ್ತಿರುವರು."

೯೪. ಆಗ ಮಹೇಶ್ವರನು ನಗುತ್ತ, "ನಮ್ಮ ಮನೋಭೀಷ್ಟವು ನೆರವೇರಿತು" ಎಂದು ಹೇಳಿದನು. ಬಳಿಕ ಆ ದೇವದೇವನು ದೇವಿಯೊಡನೆಯೂ, ಹರಿಬ್ರಹ್ಮರೊಡನೆಯೂ ಮೇಲಕ್ಕೆದ್ದು ಮಂಗಳಾಲಂಕೃತನಾಗಿ ಶೃಂಗಾರ ಮಂಟಪಕ್ಕೆ ಬಿಜಮಾಡಿಸಿದನು.

೯೫. ಸ್ಕಂದನು ಹೇಳುತ್ತಾನೆ:—ಪರಮಾನಂದಪ್ರಾಪ್ತಿಗೆ ಕಾರಣವಾದ ಈ ಅಧ್ಯಾಯವನ್ನು ಕೇಳಿದ ಮನುಷ್ಯನು ಬ್ರಹ್ಮಾನಂದವನ್ನು ಪಡೆದು ಕೈಲಾಸದ ವಾಸವನ್ನು ಪಡೆಯುವನು. ಇದು ನಿಶ್ಚಯವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಮುಕ್ತಿಮಂಟಪಗಮನಾಖ್ಯಾನ"ವೆಂಬ ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವನವತಿತಮೋಽಧ್ಯಾಯಃ

## ವಿಶ್ವೇಶ್ವರಾವಿರ್ಭಾವವರ್ಣನಂ

ವ್ಯಾಸ ಉವಾಚ:—

ಶೃಣು ಸೂತ ಯಥಾ ಪ್ರೋಕ್ತಂ ಕುಂಭಜೇ ಶರಜನ್ಮನಾ ।
ದೇವದೇವಸ್ಯ ಚರಿತಂ ವಿಶ್ವೇಶಸ್ಯ ಪರಾತ್ಮನಃ ॥ ೧ ॥

ಅಗಸ್ತ್ಯ ಉವಾಚ:—

ಸೇನಾನೀಃ ಕಥಯ ತ್ವಂ ಮೇ ತತೋ ನಿರ್ವಾಣಮಂಡಪಾತ್ ।
ನಿರ್ಗತ್ಯ ದೇವೋ ದೇವೇಂದ್ರೈಃ ಸಹಿತಃ ಕಿಂ ಚಕಾರ ಹ ॥ ೨ ॥

ಸ್ಕಂದ ಉವಾಚ:—

ಮುಕ್ತಿಮಂಡಪತಃ ಶಂಭುರ್ಬ್ರಹ್ಮವಿಷ್ಣುಪುರೋಗಮಃ ।
ಶೃಂಗಾರಮಂಡಪಂ ಪ್ರಾಪ್ಯ ಯಚ್ಚಕಾರ ವದಾಮಿ ತತ್ ॥ ೩ ॥
ಪ್ರಾಙ್ಮುಖಸ್ತೂಪವಿಶ್ವೇಶಃ ಸಹಸ್ಮಾಭಿರ್ಮಹೇಶಯಾ ।
ಬ್ರಹ್ಮಣಾಧಿಷ್ಠಿತಃ ಸವ್ಯೇ ವಾಮಪಾರ್ಶ್ವೇಽಥ ಶಾರ್ಙ್ಗಿಣಾ ॥ ೪ ॥

---

## ಕನ್ನಡದ ಅನುವಾದ

### ವಿಶ್ವೇಶ್ವರಾವಿರ್ಭಾವವರ್ಣನ

೧ ವ್ಯಾಸನು ಹೇಳುತ್ತಾನೆ:—ಎಲೈ ಸೂತನೆ! ದೇವದೇವನೂ ಲೋಕನಾಥನೂ ಆದ ಪರಮೇಶ್ವರನ ಚರಿತ್ರೆಯನ್ನು ಷಣ್ಮುಖಸ್ವಾಮಿಯು ಅಗಸ್ತ್ಯ ಮಹಾಮುನಿಗೆ ವಿವರಿಸಿದ ಪ್ರಕಾರದಿಂದ ಹೇಳುವೆನು, ಕೇಳು.

೨. ಅಗಸ್ತ್ಯನು ಕೇಳುತ್ತಾನೆ:—ದೇವಸೇನಾಪತಿಯೆ! ಆ ನಿರ್ವಾಣಮಂಡಪದಿಂದ ಹೊರಟ ಮಹೇಶ್ವರನು ದೇವತಾಗಣಗಳೊಡನೆ ಕೂಡಿ ಮುಂದೆ ಏನನ್ನು ಮಾಡಿದನೆಂಬುದನ್ನು ಹೇಳು.

೩. ಸ್ಕಂದನು ಹೇಳುತ್ತಾನೆ:—ಬ್ರಹ್ಮನಾರಾಯಣರು ಮುಂದೆ ಬರುತ್ತಿರಲು ಶಂಭುವು ಮುಕ್ತಿಮಂಟಪವನ್ನು ಬಿಟ್ಟು ಶೃಂಗಾರಮಂಟಪವನ್ನು ಸೇರಿ ಏನುಮಾಡಿದನೆಂಬುದನ್ನು ಹೇಳುವೆನು; ಕೇಳು.

೪. ನಾನು ಗಣೇಶ ಮತ್ತು ಪಾರ್ವತಿಯಿಂದ ಕೂಡಿದವನಾಗಿ ಅಲ್ಲಿ ಪೂರ್ವಾಭಿಮುಖನಾಗಿ ಶಂಕರನು ಕುಳಿತಿರಲು ಆತನ ಬಲಗಡೆಯಲ್ಲಿ ಬ್ರಹ್ಮದೇವನೂ ಎಡಗಡೆಯಲ್ಲಿ ನಾರಾಯಣನೂ ಸುಖಾಸೀನರಾಗಿದ್ದರು.

ವೀಜ್ಯಮಾನೋ ಮಹೇಂದ್ರೇಣ ಋಷಿಭಿಃ ಪರಿತೋ ವೃತಃ ।
ಗಣೈಃ ಪೃಷ್ಠಪ್ರದೇಶಸ್ಥೈರ್ಜೋಷಂ ತಿಷ್ಠದ್ಭಿರಾದರಾತ್ ॥ ೫ ॥
ಉದಾಯುಧೈಃ ಸೇವ್ಯಮಾನಶ್ಚಾವಸನ್ಮಾನಭೂರಿಭಿಃ ।
ಬ್ರಹ್ಮಣೇ ವಿಷ್ಣವೇ ಶಂಭುಃ ಪಾಣಿಮುತ್ಕ್ಷಿಪ್ಯ ದಕ್ಷಿಣಂ ।
ದರ್ಶಯಾಮಾಸ ದೇವೇಶೋ ಲಿಂಗಂ ಪಶ್ಯತ ಪಶ್ಯತ ॥ ೬ ॥
ಇದಮೇವ ಪರಂ ಜ್ಯೋತಿರಿದಮೇವ ಪರಾತ್ಪರಂ ।
ಇದಮೇವ ಹಿ ಮೇ ರೂಪಂ ಸ್ಥಾವರಂ ಚಾತಿಸಿದ್ಧಿದಂ ॥ ೭ ॥
ಏತೇ ಪಾಶುಪತಾಃ ಸಿದ್ಧಾ ಆಬಾಲಬ್ರಹ್ಮಚಾರಿಣಃ ।
ಜಿತೇಂದ್ರಿಯಸ್ತಪೋನಿಷ್ಠಾಃ ಪಂಚಾರ್ಥಜ್ಞಾನನಿರ್ಮಲಾಃ ॥ ೮ ॥
ಭಸ್ಮಕೂಟಶಯಾ ದಾಂತಾಃ ಸುಶೀಲಾ ಊರ್ಧ್ವರೇತಸಃ ।
ಲಿಂಗಾರ್ಚನರತಾ ನಿತ್ಯಮನನ್ಯೇಂದ್ರಿಯಮಾನಸಾಃ ॥ ೯ ॥
ಸದ್ಯೈವ ವಾರುಣಾಗ್ನೇಯಸ್ನಾನದ್ವಯಸುನಿರ್ಮಲಾಃ ।
ಕಂದಮೂಲಫಲಾಹಾರಾಃ ಪರತತ್ತ್ವಾರ್ಪಿತೇಕ್ಷಣಾಃ ॥ ೧೦ ॥

---

೫. ಮಹೇಂದ್ರನು ಬೀಸಣಿಗೆಯನ್ನು ಹಾಕುತ್ತಿದ್ದನು. ಮಹರ್ಷಿಗಳು ಆತನನ್ನು ಸುತ್ತುವರೆದಿದ್ದರು. ಗಣಗಳೆಲ್ಲರೂ ಆದರದಿಂದ ಆತನ ಹಿಂಭಾಗದಲ್ಲಿ ಮೌನದಿಂದ ನಿಂತಿದ್ದರು.

೬–೭. ಹಿರಿದ ಆಯುಧಗಳನ್ನು ಹಿಡಿದು ಅತ್ಯಂತ ಗರ್ವಿಷ್ಠರಾದ ಪ್ರಮಥರು ಆತನನ್ನು ಸೇವಿಸುತ್ತಿದ್ದರು. ಆಗ ಪರಮೇಶ್ವರನು ತನ್ನ ಬಲಗೈಯನ್ನೆತ್ತಿ ಅಂಗೈಯೊಳಗಿನ ಲಿಂಗವನ್ನು ತೋರಿಸುತ್ತ ಬ್ರಹ್ಮವಿಷ್ಣುಗಳಿಗೆ ಇಂತೆಂದನು. "ಈ ಲಿಂಗವನ್ನು ನೋಡಿರಿ. ನೋಡಿರಿ! ಇದೇ ಪರಂಜ್ಯೋತಿ ಸ್ವರೂಪವು. ಇದೇ ಪರಾತ್ಪರವಸ್ತುವು. ಇದೇ ಸರ್ವಸಿದ್ಧಿಕರವಾದ ನನ್ನ ಸ್ಥಾವರರೂಪವು.

೮. ಇಲ್ಲಿ ನೆರೆದಿರುವ ಮಾಹೇಶ್ವರರೆಲ್ಲರೂ ಸಿದ್ಧರು. ಬಾಲ್ಯದ ಮೊದಲು ಬ್ರಹ್ಮಚರ್ಯವನ್ನು ಆಚರಿಸುತ್ತಿರುವರು. ಜಿತೇಂದ್ರಿಯರು. ತಪಸ್ಸಿನಲ್ಲಿಯೇ ನಿರತರಾಗಿರುವರು. ಪ್ರಣವದ ಅಕಾರ, ಉಕಾರ, ಮಕಾರ, ನಾದ, ಬಿಂದುಗಳ ಲಕ್ಷ್ಯಗಳನ್ನು ಯಥಾರ್ಥವಾಗಿ ಬಲ್ಲವರು.

೯. ಭಸ್ಮದ ರಾಶಿಗಳಲ್ಲಿ ಮಲಗುವವರು. ಇಂದ್ರಿಯಗಳನ್ನು ನಿಗ್ರಹಿಸಿದವರು. ಸೌಜನ್ಯವಂತರು. ಊರ್ಧ್ವರೇತಸರು. ನಿತ್ಯವೂ ಏಕಾಗ್ರಗಳಾದ ಇಂದ್ರಿಯಗಳಿಂದಲೂ, ಮನಸ್ಸಿನಿಂದಲೂ ಲಿಂಗಪೂಜೆ ಮಾಡುತ್ತಿರುವರು.

೧೦. ನಿತ್ಯವೂ ತೀರ್ಥಗಳಲ್ಲಿಯೂ ಭಸ್ಮದಲ್ಲಿಯೂ ಮಾಡುವ ಸ್ನಾನದಿಂದ ಪರಿಶುದ್ಧರಾಗಿರುವರು. ಕಂದಮೂಲಗಳನ್ನೇ ಸೇವಿಸಿಕೊಂಡು ಪರತತ್ತ್ವದಲ್ಲಿಯೇ ದೃಷ್ಟಿಯುಳ್ಳವರು.

**ಸತ್ಯವಂತೋ ಜಿತಕ್ರೋಧಾ ನಿರ್ಮೋಹಾ ನಿಷ್ಪರಿಗ್ರಹಾಃ ।**
**ನಿರೀಹಾ ನಿಷ್ಪ್ರಪಂಚಾಶ್ಚ ನಿರಾತಂಕಾ ನಿರಾಮಯಾಃ ॥ ೧೧ ॥**
**ನಿರ್ಭಯಾ ನಿರುಪಾಯಾಶ್ಚ ನಿಃಸಂಗಾ ನಿರ್ಮಲಾಶಯಾಃ ।**
**ನಿಸ್ತೀರ್ಣೋದಗ್ರಸಂಸಾರಾ ನಿರ್ವಿಕಲ್ಪಾ ನಿರೇನಸಃ ॥ ೧೨ ॥**
**ನಿರ್ದ್ವಂದ್ವಾ ನಿಶ್ಚಿತಾರ್ಥಾಶ್ಚ ನಿರಹಂಕಾರವೃತ್ತಯಃ ।**
**ಸದೈವ ಮೇ ಮಹಾಪ್ರೀತಾ ಮತ್ಪುತ್ರಾ ಮತ್ಸ್ವರೂಪಿಣಃ ॥ ೧೩ ॥**
**ಏತೇ ಪೂಜ್ಯಾ ನಮಸ್ಯಾಶ್ಚ ಮದ್ಬುಧ್ಯಾ ಮತ್ಪರಾಯಣೈಃ ।**
**ಅರ್ಚಿತೇಷ್ವೇಷ್ವಹಂ ಪ್ರೀತೋ ಭವಿಷ್ಯಾಮಿ ನ ಸಂಶಯಃ ॥ ೧೪ ॥**
**ಅಸ್ಮಿನ್ವೈಶ್ವೇಶ್ವರೇ ಕ್ಷೇತ್ರೇ ಸಂಭೋಜ್ಯಾಃ ಶಿವಯೋಗಿನಃ ।**
**ಕೋಟಿಭೋಜ್ಯಫಲಂ ಸಂಯಗೇಕೈಕಪರಿಸಂಖ್ಯಯಾ ॥ ೧೫ ॥**
**ಅಯಂ ವಿಶ್ವೇಶ್ವರಃ ಸಾಕ್ಷಾತ್ಸ್ಥಾವರಾತ್ಮಾ ಜಗತ್ಪ್ರಭುಃ ।**
**ಸರ್ವೇಷಾಂ ಸರ್ವಸಿದ್ಧೀನಾಂ ಕರ್ತಾ ಭಕ್ತಿಜುಷಾಮಿಹ ॥ ೧೬ ॥**

---

೧೧. ಸತ್ಯವನ್ನೇ ನುಡಿಯುವವರು. ಕ್ರೋಧವನ್ನು ಗೆದ್ದವರು. ಮೋಹರಹಿತರು. ಅಕಿಂಚನರು. ತೀರ್ಥಪರಿಗ್ರಹವನ್ನು ಮಾಡದವರು. ಆಶಾರಹಿತರು. ಪ್ರಪಂಚದೂರರು. ಆತಂಕರಹಿತವಾದುದೂ, ಆಧಿವ್ಯಾಧಿವರ್ಜಿತವಾದುದೂ ಆದ ಜೀವನವುಳ್ಳವರು.

೧೨. ಐಶ್ವರ್ಯವನ್ನು ತ್ಯಾಗಮಾಡಿರುವರು. ಮುಂದಿನ ಯೋಚನೆಯಿಲ್ಲದವರು. ಸಂಗದೂರರು. ಪರಿಶುದ್ಧಮನಸ್ಕರು. ಭಯಂಕರವಾದ ಸಂಸಾರವನ್ನು ಕಡೆಹಾದಿರುವರು. ಮನಸ್ಸಿನ ಸಂಶಯಗಳನ್ನು ಕಳೆದುಕೊಂಡಿರುವವರು. ಪಾಪರಹಿತರು.

೧೩. ದ್ವೈತಭಾವವಿಲ್ಲದವರು. ಸುಖದುಃಖಾದಿ ದ್ವಂದ್ವಗಳನ್ನು ಮೀರಿದವರು. ದೃಢವಾದ ತತ್ತ್ವನಿಶ್ಚಯವುಳ್ಳವರು. ಅಹಂಕಾರ ವರ್ಜಿತವಾದ ಸದಾಚಾರದಲ್ಲಿರುವರು. ಇವರೇ ಯಾವಾಗಲೂ ನನಗೆ ಅತ್ಯಂತ ಪ್ರಿಯರು. ನನ್ನ ಪುತ್ರರು. ಇವರು ನನ್ನ ಸ್ವರೂಪಿಗಳೇ ಆಗಿರುವರು.

೧೪. ನನ್ನಲ್ಲಿ ಭಕ್ತಿಯುಳ್ಳವರೆಲ್ಲರೂ ನನ್ನ ರೂಪಿಗಳೆಂದೇ ಇವರನ್ನು ಪೂಜಿಸಬೇಕು, ನಮಸ್ಕರಿಸಬೇಕು. ಇವರನ್ನು ಅರ್ಚನೆಮಾಡುವುದರಿಂದ ನನ್ನನ್ನೇ ಪೂಜಿಸಿದಂತಾಗುವುದು. ಇದರಲ್ಲಿ ಸಂದೇಹವಿಲ್ಲ.

೧೫. ವಿಶ್ವೇಶ್ವರನ ಈ ಕ್ಷೇತ್ರದಲ್ಲಿ ವಿಶೇಷವಾಗಿ ಶಿವಯೋಗಿಗಳಿಗೆ ಭೋಜನವನ್ನು ಮಾಡಿಸಬೇಕು. ಒಬ್ಬೊಬ್ಬನಿಗೆ ಭೋಜನವನ್ನು ಮಾಡಿಸುವುದರಿಂದಲೂ ಕೋಟಿ ಜನರಿಗೆ ಅನ್ನವನ್ನಿತ್ತ ಫಲವು ಲಭಿಸುವುದು.

೧೬. ಈ ವಿಶ್ವೇಶ್ವರನು ನಿಜವಾಗಿಯೂ ಸ್ಥಾವರಲಿಂಗರೂಪಿಯಾದ ಜಗ

ಅಹಂ ಕದಾಚಿದ್ದೃಶ್ಯಃ ಸ್ಯಾಮದೃಶ್ಯಃ ಸ್ಯಾಂ ಕದಾಚನ ।
ಆನಂದಕಾನನೇ ಚಾತ್ರ ಸ್ವೈರಂ ತಿಷ್ಠಾಮಿ ದೇವತಾಃ ॥ ೧೭ ॥
ಅನುಗ್ರಹಾಯ ಸರ್ವೇಷಾಂ ಭಕ್ತಾನಾಮಿಹ ಸರ್ವದಾ ।
ಸ್ಥಾಸ್ಯಾಮಿ ಲಿಂಗರೂಪೇಣ ಚಿಂತಿತಾರ್ಥಫಲಪ್ರದಃ ॥ ೧೮ ॥
ಸ್ವಯಂಭೂನ್ಯಸ್ವಯಂಭೂನಿ ಯಾನಿ ಲಿಂಗಾನಿ ಸರ್ವತಃ ।
ತಾನಿ ಸರ್ವಾಣಿ ಚಾಯಾಂತಿ ದ್ರಷ್ಟುಂ ಲಿಂಗಮಿದಂ ಸದಾ ॥ ೧೯ ॥
ಅಹಂ ಸರ್ವೇಷು ಲಿಂಗೇಷು ತಿಷ್ಠಾಮ್ಯೇವ ನ ಸಂಶಯಃ ।
ಪರಂ ತ್ವಿಯಂ ಪರಾ ಮೂರ್ತಿರ್ಮಮ ಲಿಂಗಸ್ವರೂಪಿಣೀ ॥ ೨೦ ॥
ಯೇನ ಲಿಂಗಮಿದಂ ದೃಷ್ಟಂ ಶ್ರದ್ಧಯಾ ಶುದ್ಧಚಕ್ಷುಷಾ ।
ಸಾಕ್ಷಾತ್ಕರೇಣ ತೇನಾಹಂ ದೃಷ್ಟ ಏವ ದಿವೌಕಸಃ ॥ ೨೧ ॥
ಶ್ರವಣಾದಸ್ಯ ಲಿಂಗಸ್ಯ ಪಾತಕಂ ಜನ್ಮಸಂಚಿತಂ ।
ಕ್ಷಣಾತ್ಕ್ಷಯತಿ ಶೃಣ್ವಂತು ದೇವಾ ಋಷಿಗಣೈಃ ಸಹ ॥ ೨೨ ॥

---

ತ್ಪತ್ತಿಯೇ ಆಗಿರುವನು. ಭಕ್ತಿಯುಕ್ತರಾದ ಸಮಸ್ತಜನರಿಗೂ ಸರ್ವಸಿದ್ಧಿಗಳನ್ನೂ ಕೈಗೂಡಿಸುವೆನು.

೧೭. ಇತರ ಸ್ಥಳಗಳಲ್ಲಿ ನಾನು ಕೆಲವುವೇಳೆ ಭಕ್ತರಿಗೆ ಕಾಣಿಸಿಕೊಳ್ಳುವೆನು. ಕೆಲವುವೇಳೆ ಕಾಣುವುದಿಲ್ಲ. ಆದರೆ ಈ ಆನಂದಕಾನನದಲ್ಲಿ ನಾನು ಸ್ವೇಚ್ಛೆಯಿಂದಲೇ ನೆಲಸಿರುವೆನು.

೧೮. ಸಕಲ ಭಕ್ತರನ್ನೂ ಅನುಗ್ರಹಿಸುವುದಕ್ಕಾಗಿ ನಾನು ಸರ್ವಕಾಲದಲ್ಲಿಯೂ ಇಲ್ಲಿ ಲಿಂಗರೂಪಿಯಾಗಿ ನೆಲಸಿ ಅವರವರ ಮನಸ್ಸಿನ ಕೋರಿಕೆಗಳನ್ನು ಸಲ್ಲಿಸುತ್ತಿರುವೆನು.

೧೯. ಇತರ ಎಲ್ಲ ಕ್ಷೇತ್ರಗಳಲ್ಲಿಯೂ ಸ್ವಯಂಭುಗಳೂ, ಸುಪ್ರತಿಷ್ಠಿತಗಳೂ ಆದ ಯಾವ ಲಿಂಗಗಳಿರುವುವೊ, ಅವುಗಳೆಲ್ಲವೂ ಈ ಲಿಂಗವನ್ನು ನೋಡಲು ನಿತ್ಯವೂ ಇಲ್ಲಿಗೆ ಬರುತ್ತಿರುವುವು.

೨೦. ನಾನು ಸಮಸ್ತಲಿಂಗಗಳಲ್ಲಿಯೂ ನೆಲಸಿಯೇ ಇರುವೆನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಇದು ನನ್ನ ಲಿಂಗಸ್ವರೂಪಗಳಲ್ಲೆಲ್ಲ ಸರ್ವೋತ್ತಮವಾದ ಲಿಂಗಮೂರ್ತಿಯು.

೨೧. ಎಲೈ ದೇವತೆಗಳಿರಾ! ಯಾವನು ಶ್ರದ್ಧೆಯಿಂದಲೂ ನಿರ್ಮಲದೃಷ್ಟಿಯಿಂದಲೂ ಈ ಲಿಂಗವನ್ನು ನೋಡುವನೊ, ಅವನು ನನ್ನ ರೂಪವನ್ನು ಸಾಕ್ಷಾತ್ತಾಗಿಯೇ ಕಂಡವನೆಂದು ತಿಳಿಯಿರಿ.

೨೨. ಎಲೈ ದೇವತೆಗಳಿರಾ! ಮಹರ್ಷಿಗಳಿರಾ! ನೀವೆಲ್ಲರೂ ಕೇಳಿರಿ.

ಸ್ಮರಣಾದಸ್ಯ ಲಿಂಗಸ್ಯ ಪಾಪಂ ಜನ್ಮದ್ವಯಾರ್ಜಿತಂ ।
ಅವಶ್ಯಂ ನಶ್ಯತಿ ಕ್ಷಿಪ್ರಂ ಮಮ ವಾಕ್ಯಾನ್ನ ಸಂಶಯಃ ॥ ೨೩ ॥
ಏತಲ್ಲಿಂಗಂ ಸಮುದ್ದಿಶ್ಯ ಗೃಹಾನ್ನಿಷ್ಕ್ರಮಣಕ್ಷಣಾತ್ ।
ವಿಲೀಯತೇ ಮಹಾಪಾಪಮಪಿ ಜನ್ಮತ್ರಯಾರ್ಜಿತಂ ॥ ೨೪ ॥
ದರ್ಶನಾದಸ್ಯ ಲಿಂಗಸ್ಯ ಹಯಮೇಧಶತೋದ್ಭವಂ ।
ಪುಣ್ಯಂ ಲಭೇತ ನಿಯತಂ ಮಮಾನುಗ್ರಹತೋಽಮರಾಃ ॥ ೨೫ ॥
ಸ್ವಯಂಭುವೋಽಸ್ಯ ಲಿಂಗಸ್ಯ ಮಮ ವಿಶ್ವೇಶಿತುಃ ಸುರಾಃ ।
ರಾಜಸೂಯಸಹಸ್ರಸ್ಯ ಫಲಂ ಸ್ಯಾತ್ಸ್ಪರ್ಶಮಾತ್ರತಃ ॥ ೨೬ ॥
ಪುಷ್ಪಮಾತ್ರಪ್ರದಾನಾಚ್ಚ ಚುಲುಕೋದಕಪೂರ್ವಕಂ ।
ಶತಸೌವರ್ಣಿಕಂ ಪುಣ್ಯಂ ಲಭತೇ ಭಕ್ತಿಯೋಗತಃ ॥ ೨೭ ॥
ಪೂಜಾಮಾತ್ರಂ ವಿಧಾಯಾಸ್ಯ ಲಿಂಗರಾಜಸ್ಯ ಭಕ್ತಿತಃ ।
ಸಹಸ್ರಹೇಮಕಮಲಪೂಜಾಫಲಮವಾಪ್ಯತೇ ॥ ೨೮ ॥

---

ಈ ಮಹಾಲಿಂಗದ ಹೆಸರನ್ನು ಕೇಳುವ ಮಾತ್ರದಿಂದಲೇ ಜನ್ಮಾಂತರಗಳಲ್ಲಿ ಶೇಖರಿಸಿದ ಪಾಪರಾಶಿಯೂ ಒಂದು ಕ್ಷಣದಲ್ಲಿಯೇ ಕ್ಷಯವನ್ನು ಹೊಂದುವುದು.

೨೩. ಈ ಲಿಂಗವನ್ನು ಸ್ಮರಿಸುವುದರಿಂದ ಎರಡು ಜನ್ಮಗಳಲ್ಲಿ ಗಳಿಸಿದ ಪಾತಕಗಳು ಕ್ಷಿಪ್ರದಲ್ಲಿಯೇ ನಾಶವಾಗುವುವು. ಇಂತು ನನ್ನ ವಚನವಿರುವುದು. ಇದರಲ್ಲಿ ಸಂದೇಹವಿಲ್ಲ.

೨೪. ಈ ಲಿಂಗವನ್ನು ನೋಡಬೇಕೆಂಬ ಉದ್ದೇಶವನ್ನು ಮಾಡಿಕೊಂಡು ಮನೆಯಿಂದ ಹೊರಟ ಕ್ಷಣದಲ್ಲಿಯೇ ಮೂರು ಜನ್ಮಗಳ ಪಾಪರಾಶಿಯಾದರೂ ನಾಶವಾಗುವುದು.

೨೫. ಎಲೈ ಅಮರರಿರಾ! ನನ್ನ ಅನುಗ್ರಹದಿಂದ ಈ ಲಿಂಗದ ದರ್ಶನವನ್ನು ಮಾಡುವವರಿಗೆ ಒಂದು ನೂರು ಅಶ್ವಮೇಧಗಳನ್ನು ಮಾಡಿದ ಪುಣ್ಯವು ಖಂಡಿತವಾಗಿಯೂ ಲಭಿಸುವುದು.

೨೬. ಅಯ್ಯಾ ಸುರರಿರಾ! ವಿಶ್ವೇಶ್ವರನಾದ ನನ್ನ ಈ ಸ್ವಯಂಭುಲಿಂಗದ ಸ್ಪರ್ಶಮಾತ್ರದಿಂದಲೇ ಒಂದು ಸಹಸ್ರ ರಾಜಸೂಯಗಳನ್ನು ನೆರವೇರಿಸಿದ ಫಲವು ಕೈಗೂಡುವುದು.

೨೭–೨೮. ಭಕ್ತಿಯುಕ್ತನಾಗಿ ಒಂದು ಬೊಗಸೆ ನೀರಿನಿಂದ ಅಭಿಷೇಕವನ್ನು ಮಾಡಿ ಒಂದೇ ಪುಷ್ಪವನ್ನರ್ಪಿಸಿದರೂ ನೂರು ಸುವರ್ಣಪುಷ್ಪಗಳನ್ನರ್ಪಿಸಿದ ಪುಣ್ಯವು ಲಭಿಸುವುದು. ಸರ್ವೋತ್ತಮವಾದ ಈ ಲಿಂಗಕ್ಕೆ ಭಕ್ತಿಯಿಂದ ಪೂಜೆಯನ್ನು ಮಾಡುವ ಮಾತ್ರದಿಂದಲೇ ಒಂದು ಸಾವಿರ ಚಿನ್ನದ ಕಮಲಗಳಿಂದ ಪೂಜಿಸಿದ ಫಲವನ್ನು ಪಡೆಯಬಹುದು.

ವಿಧಾಯ ಮಹತೀಂ ಪೂಜಾಂ ಪಂಚಾಮೃತಪುರಃಸರಂ ।
ಅಸ್ಯ ಲಿಂಗಸ್ಯ ಲಭತೇ ಪುರುಷಾರ್ಥಚತುಷ್ಟಯಂ ॥ ೨೯ ॥
ವಸ್ತ್ರಪೂತಜಲೈರ್ಲಿಂಗಂ ಸ್ನಾಪಯಿತ್ವಾ ಮಮಾಮರಾಃ ।
ಲಕ್ಷಾಶ್ವಮೇಧಜನಿತಂ ಪುಣ್ಯಮಾಪ್ನೋತಿ ಸತ್ತಮಃ ॥ ೩೦ ॥
ಸುಗಂಧಚಂದನರಸೈರ್ಲಿಂಗಮಾಲಿಪ್ಯ ಭಕ್ತಿತಃ ।
ಆಲಿಪ್ಯತೇ ಸುರಸ್ತ್ರೀಭಿಃ ಸುಗಂಧೈರ್ಯಕ್ಷಕರ್ದಮೈಃ ॥ ೩೧ ॥
ಸಾಮೋದಧೂಪದಾನೈಶ್ಚ ದಿವ್ಯಗಂಧಾಶ್ರಯೋ ಭವೇತ್ ।
ಘೃತದೀಪಪ್ರಬೋಧೈಶ್ಚ ಜ್ಯೋತೀರೂಪವಿಮಾನಗಃ ॥ ೩೨ ॥
ಕರ್ಪೂರವರ್ತಿದೀಪೇನ ಸಕೃದ್ದತ್ತೇನ ಭಕ್ತಿತಃ ।
ಕರ್ಪೂರದೋರಗೌರಶ್ರೀರ್ಭವೇದ್ಭಾಲವಿಲೋಚನಃ ॥ ೩೩ ॥
ದತ್ತ್ವಾ ನೈವೇದ್ಯಮಾತ್ರಂ ತು ಸಿಕ್ಥೇ ಸಿಕ್ಥೇ ಯುಗಂ ಯುಗಂ ।
ಕೈಲಾಸಾದ್ರೌ ವಸೇದ್ಧೀಮಾನ್ಮಹಾಭೋಗಸಮನ್ವಿತಃ ॥ ೩೪ ॥
ವಿಶ್ವೇಶೇ ಪರಮಾನ್ನಂ ಯೋ ದದ್ಯಾತ್ಸಾಜ್ಯಂ ಸಶರ್ಕರಂ ।
ತ್ರೈಲೋಕ್ಯಂ ತರ್ಪಿತಂ ತೇನ ಸದೇವಪಿತೃಮಾನವಂ ॥ ೩೫ ॥

---

೨೯. ಈ ಲಿಂಗಕ್ಕೆ ಪಂಚಾಮೃತಾಭಿಷೇಕಪುರಸ್ಸರವಾಗಿ ಮಹತ್ತರವಾದ ಪೂಜೆಯನ್ನು ಮಾಡಲು ನಾಲ್ಕು ಪುರುಷಾರ್ಥಗಳೂ ಕರಗತಗಳಾಗುವುವು.

೩೦. ದೇವತೆಗಳಿರಾ! ವಸ್ತ್ರದಲ್ಲಿ ಶೋಧಿಸಿದ ಜಲದಿಂದ ಈ ಲಿಂಗವನ್ನು ಅಭಿಷೇಕಮಾಡಿದ ಭಕ್ತೋತ್ತಮನು ಒಂದು ಲಕ್ಷ ಅಶ್ವಮೇಧಗಳಿಂದೊದಗುವ ಪುಣ್ಯವನ್ನು ಹೊಂದುವನು.

೩೧. ಭಕ್ತಿಯಿಂದ ಈ ಲಿಂಗಕ್ಕೆ ಸುಗಂಧದ್ರವ್ಯಗಳನ್ನು ಲೇಪಿಸಲು ಭಕ್ತನು ಸ್ವರ್ಗಲೋಕದಲ್ಲಿ ದೇವತಾಸ್ತ್ರೀಯರ ಕೈಗಳಿಂದ ಯಕ್ಷಕರ್ದಮಲೇಪದ ಸೌಖ್ಯವನ್ನು ಪಡೆಯುವನು.

೩೨. ಪರಿಮಳಯುಕ್ತವಾದ ಧೂಪವನ್ನು ಅರ್ಪಿಸುವುದರಿಂದ ದಿವ್ಯಗಂಧಾಢ್ಯವಾದ ದೇಹವನ್ನು ತಾಳುವನು. ತುಪ್ಪದ ದೀಪಗಳನ್ನು ಬೆಳಗುವುದರಿಂದ ತೇಜೋಮಯವಾದ ವಿಮಾನದಲ್ಲಿ ಸಂಚರಿಸುತ್ತಿರುವನು.

೩೩. ಕರ್ಪೂರವಾಸಿತವಾದ ಬತ್ತಿಗಳ ದೀಪವನ್ನು ಒಮ್ಮೆ ಬೆಳಗಿಸುವುದರಿಂದಲೂ ಭಕ್ತನು ಕರ್ಪೂರಗಂಧಯುಕ್ತವಾದುದೂ ಚಿನ್ನದ ಬಣ್ಣವುಳ್ಳುದುದೂ ಆದ ದೇಹವುಳ್ಳ ಫಾಲನೇತ್ರನೇ ಆಗುವನು.

೩೪. ಪ್ರಾಜ್ಞನಾದವನು ನೈವೇದ್ಯಸಮರ್ಪಣೆಯನ್ನು ಮಾಡಲು ಅದರ ಒಂದೊಂದು ಕಬಳಕ್ಕೂ ಒಂದೊಂದು ಯುಗದಕಾಲ ಕೈಲಾಸಪರ್ವತದಲ್ಲಿ ಅನೇಕ ಭೋಗಗಳನ್ನನುಭವಿಸುವನು.

೩೫. ಯಾವನು ವಿಶ್ವೇಶ್ವರನಿಗೆ ತುಪ್ಪ ಮತ್ತು ಸಕ್ಕರೆಗಳೊಡಗೂಡಿದ

ಮುಖವಾಸಂ ತು ಯೋ ದದ್ಯಾದ್ದರ್ಪಣಂ ಚಾರುಚಾಮರಂ ।
ಉಲ್ಲೋಚಂ ಸುಖಪರ್ಯಂಕಂ ತಸ್ಯ ಪುಣ್ಯಫಲಂ ಮಹತ್ ॥ ೩೬ ॥
ಸಂಖ್ಯಾ ಸಾಗರರತ್ನಾನಾಂ ಕಥಂಚಿತ್ಕರ್ತುಮಿಷ್ಯತೇ ।
ಮುಖವಾಸಾದಿದಾನಸ್ಯ ಕಃ ಸಂಖ್ಯಾಮತ್ರ ಕಾರಯೇತ್ ॥ ೩೭ ॥
ಪೂಜೋಪಕರಣಾದ್ರವ್ಯಂ ಯೋ ಘಂಟಾಗಡುಕಾದಿಕಂ ।
ಭಕ್ತ್ಯಾ ಮೇ ಭವನಾದ್ದದ್ಯಾತ್ಸ ವಸೇದತ್ರ ಮೇಽಂತಿಕೇ ॥ ೩೮ ॥
ಯೋ ಗೀತವಾದ್ಯನೃತ್ಯಾಣಾಮೇಕಂ ಮತ್ಪ್ರೀತಯೇ ವ್ಯಧಾತ್ ।
ತಸ್ಯಾಗ್ರತೋ ದಿವಾರಾತ್ರಂ ಭವೇತ್ತೌರ್ಯತ್ರಿಕಂ ಮಹತ್ ॥ ೩೯ ॥
ಚಿತ್ರಲೇಖನಕರ್ಮಾದಿ ಪ್ರಾಸಾದೇ ಮೇಽತ್ರ ಕಾರಯೇತ್ ।
ಯಃ ಸ ಚಿತ್ರಾನ್ಮಹಾಭೋಗಾನ್ಭುಂಕ್ತೇ ಮತ್ಪುರತಃ ಸ್ಥಿತಃ ॥ ೪೦ ॥
ಸಕೃದ್ವಿಶ್ವೇಶ್ವರಂ ನತ್ವಾ ಮಧ್ಯೇಜನ್ಮ ಸುಧೀರ್ನರಃ ।
ತ್ರೈಲೋಕ್ಯವಂದಿತಪದೋ ಜಾಯತೇ ವಸುಧಾಪತಿಃ ॥ ೪೧ ॥

---

ಪರಮಾನ್ನವನ್ನು ಸಮರ್ಪಿಸುವನೊ, ಅವನು ದೇವತೆಗಳು, ಪಿತೃಗಳು, ಮಾನವರು ಮುಂತಾದವರೊಡಗೊಂಡ ಮೂರು ಲೋಕಗಳನ್ನೂ ತೃಪ್ತಿಗೊಳಿಸಿದವನಾಗುವನು.

೩೬. ಮುಖವಾಸವನ್ನಾಗಲಿ, ಗನ್ನಗನ್ನಡಿಯನ್ನಾಗಲಿ, ಚಾಮರಗಳನ್ನಾಗಲಿ, ತಲೆದಿಂಬುಗಳನ್ನಾಗಲಿ, ಹಂಸತೂಲಿಕಾಶಯ್ಯೆಯನ್ನಾಗಲಿ ಯಾವನು ಸಮರ್ಪಿಸುವನೊ, ಅವನಿಗೆ ಮಹತ್ತರವಾದ ಪುಣ್ಯವು ಲಭಿಸುವುದು.

೩೭. ಸಪ್ತಸಮುದ್ರಗಳಲ್ಲಿರುವ ರತ್ನಗಳನ್ನಾದರೂ ಮನುಷ್ಯನು ಗಣನೆ ಮಾಡಲು ಸಾಧ್ಯವಾಗಬಹುದು. ಆದರೆ ಮುಖವಾಸಾದಿ ದಾನದ ಫಲವನ್ನು ಗಣಿಸಲು ಯಾವನುತಾನೆ ಸಮರ್ಥನಾದಾನು?

೩೮. ಘಂಟೆ, ಪಂಚಪಾತ್ರೆ ಮುಂತಾದ ಪೂಜಾಸಾಮಗ್ರಿಗಳನ್ನು ಯಾವನು ನನ್ನ ಈ ಮಂದಿರದಲ್ಲಿ ಭಕ್ತಿಯಿಂದ ಸಮರ್ಪಿಸುವನೊ, ಅವನು ನನ್ನ ಸಮೀಪದಲ್ಲಿಯೇ ವಾಸಮಾಡುತ್ತಿರುವನು.

೩೯. ಯಾವನು ಗೀತ, ವಾದ್ಯ, ನೃತ್ಯಗಳಲ್ಲಿ ಒಂದನ್ನಾದರೂ ನನ್ನ ಸಮ್ಮುಖದಲ್ಲಿ ಮಾಡುವನೊ, ಆವನಿಗೆ ಅಹೋರಾತ್ರಗಳಲ್ಲಿಯೂ ದಿವ್ಯವಾದ ಮಂಗಳವಾದ್ಯಗಳ ಧ್ವನಿಯು ಕೇಳಿಬರುತ್ತಿರುವುದು.

೪೦. ಯಾವನು ನನ್ನ ಈ ಪ್ರಾಸಾದವನ್ನು ಚಿತ್ರಲೇಖನಾದಿಗಳಿಂದ ಶೃಂಗರಿಸುವನೊ, ಅವನು ನನ್ನ ಎದುರಾಗಿ ನಿಂತು ಬಹುವಿಧಗಳಾದ ಅನೇಕ ಭೋಗಗಳನ್ನು ಅನುಭವಿಸುವನು.

೪೧. ಬುದ್ಧಿಶಾಲಿಯಾದ ಯಾವ ನರನು ತನ್ನ ಜನ್ಮದಲ್ಲಿ ಒಮ್ಮೆಯಾದರೂ ವಿಶ್ವೇಶ್ವರನಿಗೆ ನಮಸ್ಕಾರವನ್ನು ಮಾಡುವನೊ, ಅವನ ಪಾದಗಳನ್ನು ಮೂರು

ಯಸ್ತು ವಿಶ್ವೇಶ್ವರಂ ದೃಷ್ಟ್ವಾ ಹ್ಯನ್ಯತ್ರಾಪಿ ವಿಪದ್ಯತೇ ।
ತಸ್ಯ ಜನ್ಮಾಂತರೇ ಮೋಕ್ಷೋ ಭವತ್ಯೇವ ನ ಸಂಶಯಃ ॥ ೪೨ ॥
ವಿಶ್ವೇಶಾಖ್ಯಾ ತು ಜಿಹ್ವಾಗ್ರೇ ವಿಶ್ವನಾಥಕಥಾ ಶ್ರುತೌ ।
ವಿಶ್ವೇಶಶೀಲನಂ ಚಿತ್ತೇ ಯಸ್ಯ ತಸ್ಯ ಜನಿಃ ಕುತಃ ॥ ೪೩ ॥
ಲಿಂಗಂ ಮೇ ವಿಶ್ವನಾಥಸ್ಯ ದೃಷ್ಟ್ವಾ ಯಶ್ಚಾನುಮೋದತೇ ।
ಸ ಮೇ ಗಣೇಷು ಗಣ್ಯೇತ ಮಹಾಪುಣ್ಯಬಲಾಶ್ರಿತಃ ॥ ೪೪ ॥
ನಿತ್ಯಂ ವಿಶ್ವೇಶ ವಿಶ್ವೇಶ ವಿಶ್ವನಾಥೇತಿ ಯೋ ಜಪೇತ್ ।
ತ್ರಿಸಂಧ್ಯಂ ತು ಸುಕೃತಿನಂ ಜಪಾಮ್ಯಹಮಪಿ ಧ್ರುವಂ ॥ ೪೫ ॥
ಮಮಾಪೀದಂ ಮಹಾಲಿಂಗಂ ಸದಾ ಪೂಜ್ಯತಮಂ ಸುರಾಃ ।
ತಸ್ಮಾತ್ಸರ್ವಪ್ರಯತ್ನೇನ ಪೂಜ್ಯೋ ದೇವರ್ಷಿಮಾನವೈಃ ॥ ೪೬ ॥
ಯೈರ್ನ ವಿಶ್ವೇಶ್ವರೋ ದೃಷ್ಟೋ ಯೈರ್ನ ವಿಶ್ವೇಶ್ವರಃ ಸ್ಮೃತಃ ।
ಕೃತಾಂತದೂತೈಸ್ತೇ ದೃಷ್ಟಾಸ್ತೈಃ ಸ್ಮೃತಾ ಗರ್ಭವೇದನಾ ॥ ೪೭ ॥

---

ಲೋಕಗಳ ನಿವಾಸಿಗಳೂ ವಂದಿಸುವರು. ಅವನು ಮಹಾರಾಜನಾಗಿ ಹುಟ್ಟುವನು.

೪೨. ಯಾವನು ವಿಶ್ವೇಶ್ವರನ ದರ್ಶನವನ್ನು ಮಾಡಿಕೊಂಡು ಬೇರೆ ಸ್ಥಳದಲ್ಲಿ ದೇಹವನ್ನು ಬಿಡುವನೊ, ಅವನಿಗೂ ಜನ್ಮಾಂತರದಲ್ಲಿ ಮೋಕ್ಷವು ಖಂಡಿತವಾಗಿಯೂ ಲಭಿಸುವುದು. ಇದರಲ್ಲಿ ಸಂದೇಹವಿಲ್ಲ.

೪೩. ಯಾವನ ನಾಲಿಗೆಯಲ್ಲಿ ವಿಶ್ವೇಶ್ವರನ ನಾಮವೂ, ಕಿವಿಗಳಲ್ಲಿ ವಿಶ್ವೇಶ್ವರನ ಚರಿತ್ರೆಯೂ, ಮನಸ್ಸಿನಲ್ಲಿ ವಿಶ್ವೇಶ್ವರನ ಧ್ಯಾನವೂ ನಿರಂತರವಾಗಿರುವುದೋ ಅವನಿಗೆ ಪುನರ್ಜನ್ಮವೆಲ್ಲಿಯದು?

೪೪. ಯಾವನು ನನ್ನ ಈ ವಿಶ್ವನಾಥೇಶ್ವರಲಿಂಗವನ್ನು ಕಂಡು ಸಂತೋಷಗೊಳ್ಳುವನೊ ಅವನು ಮಹತ್ತರವಾದ ಪುಣ್ಯಬಲವನ್ನು ಪಡೆದು ನನ್ನ ಗಣಗಳಲ್ಲಿ ಪೂಜ್ಯಸ್ಥಾನವನ್ನು ಗಳಿಸುವನು.

೪೫. ನಿತ್ಯವೂ ತ್ರಿಸಂಧ್ಯೆಗಳಲ್ಲಿಯೂ ಯಾವನು ವಿಶ್ವೇಶ್ವರ, ವಿಶ್ವೇಶ, ವಿಶ್ವನಾಥ ಎಂದು ಮುಂತಾಗಿ ನನ್ನನ್ನೇ ಜಪಿಸುತ್ತಿರುವನೊ, ಅವನನ್ನು ನಾನೂ ನಿರಂತರವಾಗಿ ಜಪಿಸುತ್ತಿರುವೆನು. ಇದು ನಿಜವು.

೪೬. ಎಲೈ ದೇವತೆಗಳಿರಾ! ಈ ಮಹಾಲಿಂಗವು ನನಗೂ ಸದಾ ಸಂಪೂಜ್ಯವಾಗಿರುವುದು. ಆದುದರಿಂದ ಇದನ್ನು ದೇವತೆಗಳೂ, ಮಹರ್ಷಿಗಳೂ, ಮಾನವರೂ ಸರ್ವಪ್ರಯತ್ನದಿಂದಲೂ ಪೂಜಿಸಬೇಕು.

೪೭. ಯಾರು ವಿಶ್ವೇಶ್ವರನನ್ನು ನೋಡುವುದಿಲ್ಲವೊ, ಯಾರು ಆ ದೇವನನ್ನು ಸ್ಮರಿಸುವುದಿಲ್ಲವೊ, ಅವರು ಯಮದೂತರ ದೃಷ್ಟಿಗೆ ಬೀಳುವರು. ಅಲ್ಲದೆ ಪುನಃ ಪುನಃ ಜನನಮರಣಗಳಿಗೆ ತುತ್ತಾಗುವರು.

ಯೈರಿದಂ ಪ್ರಣತಂ ಲಿಂಗಂ ಪ್ರಣತಾಸ್ತೇ ಸುರಾಸುರೈಃ ।
ಯಸ್ಯೈಕೇನ ಪ್ರಣಾಮೇನ ದಿಕ್ಪಾಲಪದಮುಲ್ಪಕಂ ।
ದಿಕ್ಪಾಲಪದತಃ ಪಾತಃ ಪಾತಃ ಶಿವನತೇರ್ನ ಹಿ ॥ ೪೮ ॥

ಶೃಣ್ವಂತು ದೇವರ್ಷಿಗಣಾಃ ಸಮಸ್ತಾ
ಸ್ತಥ್ಯಂ ಬ್ರುವೇ ತಚ್ಚ ಪರೋಪಕೃತ್ಯೈ ।
ನಭೂರ್ಭುವಃ ಸ್ವರ್ಗಮಹರ್ಜನಾಂತ
ರ್ವಿಶ್ವೇಶತುಲ್ಯಂ ಕ್ವಚಿದಸ್ತಿ ಲಿಂಗಂ ॥ ೪೯ ॥

ನ ಸತ್ಯಲೋಕೇ ನ ತಪಸ್ಯಹೋ ಸುರಾ
ವೈಕುಂಠಕೈಲಾಸರಸಾತಲೇಷು ।
ತೀರ್ಥಂ ಕ್ವಚಿದ್ವೈ ಮಣಿಕರ್ಣಿಕಾಸಮಂ
ಲಿಂಗಂ ಚ ವಿಶ್ವೇಶ್ವರತುಲ್ಯಮನ್ಯತಃ ॥ ೫೦ ॥

ನ ವಿಶ್ವನಾಥಸ್ಯ ಸಮಂ ಹಿ ಲಿಂಗಂ
ನ ತೀರ್ಥಮನ್ಯನ್ಮಣಿಕರ್ಣಿಕಾದಥ ।
ತಪೋವನಂ ಕುತ್ರಚಿದಸ್ತಿನಾನ್ಯ
ಚ್ಛುಭಂ ಮಮಾನಂದವನೇನ ತುಲ್ಯಂ ॥ ೫೧ ॥

---

೪೮. ಯಾರು ಈ ಲಿಂಗಕ್ಕೆ ಪ್ರಣಾಮವನ್ನು ಮಾಡುವರೊ, ಅವರು ಸುರಾಸುರರಿಗೂ ವಂದ್ಯರಾಗುವರು. ಒಂದು ಪ್ರಣಾಮವನ್ನು ಮಾಡುವ ಮಾತ್ರದಿಂದಲೇ ದಿಕ್ಪಾಲಕರ ಪದವಿಯೂ ಅತ್ಯಲ್ಪ ಫಲವಾಗುವುದು. ದಿಕ್ಪಾಲಕರಿಗೂ ತಮ್ಮ ಪದವಿಯಿಂದ ಚ್ಯುತಿಯುಂಟಾಗಬಹುದು. ಆದರೆ ವಿಶ್ವೇಶ್ವರನಿಗೆ ನಮಸ್ಕಾರವನ್ನು ಮಾಡಿದುದರ ಫಲಕ್ಕೆ ಕೊನೆಯಿಲ್ಲ.

೪೯. ಎಲೈ ದೇವತೆಗಳಿರಾ! ಅಯ್ಯಾ ಋಷಿಗಳಿರಾ! ನೀವೆಲ್ಲರೂ ಕೇಳಿರಿ. ನಾನು ಕೇವಲ ಪರೋಪಕಾರಬುದ್ಧಿಯಿಂದ ಸತ್ಯವನ್ನೇ ನುಡಿಯುತ್ತಿದ್ದೇನೆ. ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕಗಳೆಲ್ಲವನ್ನೂ ಹುಡುಕಿದರೂ ಈ ವಿಶ್ವೇಶ್ವರಲಿಂಗಕ್ಕೆ ಸಮಾನವಾದುದು ಮತ್ತೊಂದಿರುವುದಿಲ್ಲ.

೫೦. ಸತ್ಯಲೋಕದಲ್ಲಿಯಾಗಲಿ, ತಪೋಲೋಕದಲ್ಲಿಯಾಗಲಿ, ವೈಕುಂಠ, ಕೈಲಾಸ, ರಸಾತಲಗಳಲ್ಲಿಯಾಗಲಿ ಎಲ್ಲಿಯೂ ಮಣಿಕರ್ಣಿಕೆಗೆ ಸಮನಾದ ತೀರ್ಥವು ದೊರೆಯಲಾರದು. ವಿಶ್ವೇಶ್ವರನಿಗೆ ಸಮಾನವಾದ ಮಹಿಮೆಯುಳ್ಳ ಲಿಂಗವೂ ಎಲ್ಲಿಯೂ ಸಿಕ್ಕುವುದಿಲ್ಲ.

೫೧. ವಿಶ್ವನಾಥನಿಗೆ ಸಮಾನವಾದ ಲಿಂಗವಾಗಲಿ, ಮಣಿಕರ್ಣಿಕೆಗೆ ಮಿಗಿಲಾದ ತೀರ್ಥವಾಗಲಿ, ಈ ಆನಂದವನಕ್ಕೆ ಸಮವಾದ ಪವಿತ್ರ ತಪೋವನವಾಗಲಿ ಬೇರೆಲ್ಲಿಯೂ ಇಲ್ಲ.

ವಾರಾಣಸೀ ತೀರ್ಥಮಯೀ ಸಮಸ್ತಾ
ಯಸ್ಮಾತ್ತು ನಾಮಾಪಿ ಹಿ ತೀರ್ಥತೀರ್ಥಂ ।
ತತ್ರಾಪಿ ಕಾಚಿನ್ಮಮ ಸೌಖ್ಯಭೂಮಿ
ರ್ಮಹಾಪವಿತ್ರಾ ಮಣಿಕರ್ಣಿಕಾಸೌ ॥ ೫೨ ॥
ಸ್ಥಾನಾದಮುಷ್ಮಾನ್ಮಮ ರಾಜಸೌಧಾ
ತ್ಪ್ರಾಚ್ಯಾಂ ಮನಾಗೀಶಸಮಾಶ್ರಿತಾಯಾಂ ।
ಸವ್ಯೇಽಪಸವ್ಯೇ ಚ ಕರಾಃ ಕ್ರಮೇಣ
ಶತತ್ರಯೀ ಚಾಪಿ ಶತದ್ವಯೀ ಚ ॥ ೫೩ ॥
ಹಸ್ತಾಃ ಶತಂ ಪಂಚ ಸುರಾಪಗಾಯಾ
ಮುದೀಚ್ಯವಾಚ್ಯೋರ್ಮಣಿಕರ್ಣಿಕೇಯಂ ।
ಸಾರಸ್ತ್ರಿಲೋಕ್ಯಾಃ ಪರಕೋಶಭೂಮಿ
ರ್ಯೈಃ ಸೇವಿತಾ ತೇ ಮಮ ಹೃಚ್ಛಯಾಹಿ ॥ ೫೪ ॥
ಅಸ್ಮಿನ್ಮಮಾನಂದವನೇ ಯದೇತ
ಲ್ಲಿಂಗಂ ಸುಧಾಧಾಮ ಸುಧಾಮಧಾಮ ।
ಆಸಪ್ತಪಾತಾಲತಲಾತ್ಸ್ವಯಂಭು
ಸಮುತ್ಥಿತಂ ಭಕ್ತಕೃಪಾವಶೇನ ॥ ೫೫ ॥

---

೫೨. ಈ ವಾರಾಣಸೀಕ್ಷೇತ್ರವು ಸಕಲವೂ ತೀರ್ಥಮಯವಾಗಿರುವುದು. ಆದುದರಿಂದಲೇ ಇದಕ್ಕೆ ತೀರ್ಥತೀರ್ಥವೆಂಬ ನಾಮವೂ ಉಂಟಾಗಿರುವುದು. ಅದರಲ್ಲಿಯೂ ಈ ಮಣಿಕರ್ಣಿಕಾತೀರ್ಥವು ನನಗೆ ಸೌಖ್ಯವನ್ನುಂಟುಮಾಡುವುದಾಗಿಯೂ, ಅತ್ಯಂತ ಪವಿತ್ರವಾಗಿಯೂ ಇರುವುದು.

೫೩. ಈ ಮಂಟಪಕ್ಕೆ ಪೂರ್ವದಲ್ಲಿಯೂ, ನನ್ನ ರಾಜಗೃಹಕ್ಕೆ ಸ್ವಲ್ಪ ಈಶಾನ್ಯದಲ್ಲಿಯೂ ಇರುವ ಈ ತೀರ್ಥೋತ್ತಮವು ಉತ್ತರಕ್ಕೆ ಮುನ್ನೂರು ಹಸ್ತಗಳವರೆಗೂ, ದಕ್ಷಿಣಕ್ಕೆ ಇನ್ನೂರು ಹಸ್ತಗಳವರೆಗೂ ಪ್ರಸರಿಸಿರುವುದು.

೫೪. ಇಂತು ಉತ್ತರದಕ್ಷಿಣವಾಗಿ ಈ ಮಣಿಕರ್ಣಿಕೆಯು ಇನ್ನೂರು ಹಸ್ತಗಳ ಗಂಗಾತೀರವನ್ನಾಕ್ರಮಿಸಿರುವುದು. ಈ ಪ್ರದೇಶವು ಮೂರು ಲೋಕಗಳ ಸಾರಭೂತವಾದುದು. ಪರಮಾತ್ಮನಿಗೆ ನಿವಾಸಭೂಮಿಯು. ಇದನ್ನು ಯಾರು ಸೇವಿಸುವರೊ, ಅವರು ನನ್ನ ಹೃದಯದಲ್ಲಿ ಐಕ್ಯವನ್ನು ಪಡೆಯುವರು.

೫೫. ನನ್ನ ಕ್ಷೇತ್ರವಾದ ಈ ಆನಂದವನದಲ್ಲಿ ಕೈವಲ್ಯದ ನೆಲೆಮನೆಯೂ ಧಾಮಗಳಲ್ಲಿ ಉತ್ತಮವಾದುದೂ ಎನಿಸಿದ ಈ ವಿಶ್ವೇಶ್ವರಮಹಾಲಿಂಗವು ಭಕ್ತರಲ್ಲಿನ ಕೇವಲ ಕೃಪೆಯಿಂದಲೇ ಸಪ್ತಪಾತಾಳಗಳ ಕೆಳಗಿನಿಂದಲೂ ಉದ್ಭವಿಸಿರುವುದೆಂದು ತಿಳಿಯಿರಿ.

ಯೇಽಸ್ಮಿನ್ನಜ್ಞಾನಾಃ ಕೃತ್ರಿಮಭಾವಬುದ್ಧ್ಯಾ
ಲಿಂಗಂ ಭಜಿಷ್ಯಂತಿ ಚ ಹೇತುವಾದೈಃ ।
ತೇಷಾಂ ಹಿ ದಂಡಃ ಪರ ಏಷ ಏವ
ನ ಗರ್ಭವಾಸಾದ್ವಿರಮಂತಿ ತೇ ಧ್ರುವಂ ॥ ೫೬ ॥
ಯದ್ಯದ್ಧಿತಂ ತಸ್ಯ ಸದೈವ ತತ್ತ
ಲ್ಲಿಂಗೇಽತ್ರ ದೇಯಂ ಮಮ ಭಕ್ತಿಮದ್ಭಿಃ ।
ಇಹಾಪ್ಯಮುತ್ರಾಪಿ ನ ತಸ್ಯ ಸಂಕ್ಷಯೋ
ಯಥೇಹ ಪಾಪಾನ್ಯಕೃತಸ್ಯ ಪಾಪಿಭಿಃ ॥ ೫೭ ॥
ದೂರಸ್ಥಿತೈರಪ್ಯಧಿಬುದ್ಧಿಭಿರ್ಯೈ
ರ್ಲಿಂಗಂ ಸಮಾರಾಧಿ ಮಮೇದಮತ್ರ ।
ಮಯ್ಯೈವ ದತ್ತೈಃ ಶುಭವಸ್ತುಜಾತೈ
ರ್ನಿಃಶ್ರೇಯಸಃ ಶ್ರೀರ್ವಸಯೇತ್ಸತಸ್ತಾನ್ ॥ ೫೮ ॥
ಶೃಣುಷ್ವ ವಿಷ್ಣೋ ಶೃಣು ಸೃಷ್ಟಿಕರ್ತಃ
ಶೃಣ್ವಂತು ದೇವರ್ಷಿಗಣಾಃ ಸಮಸ್ತಾಃ ।
ಇದಂ ಹಿ ಲಿಂಗಂ ಪರಸಿದ್ಧಿದಾಂ ಸತಾಂ
ಭೇದೋ ಮನಾಗತ್ರ ನಮತ್ಸಕಾಶತಃ ॥ ೫೯ ॥

---

೫೬. ಯಾರು ಮನಸ್ಸಿನಲ್ಲಿ ಕೃತ್ರಿಮಭಾವಗಳನ್ನಿಟ್ಟುಕೊಂಡು ಹೇತುವಾದಗಳಲ್ಲಿಯೇ ನಿರತರಾಗಿ ಈ ಲಿಂಗವನ್ನು ಪೂಜಿಸುವರೊ, ಅವರಿಗೆ ಆಗುವ ಅತ್ಯುತ್ಕಟವಾದ ಶಿಕ್ಷೆಯನ್ನು ಕೇಳಿರಿ. ಅವರು ಎಂದಿಗೂ ಜನನ ಮರಣರೂಪವಾದ ಈ ಭವಪ್ರವಾಹದಿಂದ ಬಿಡುಗಡೆಯನ್ನು ಪಡೆಯುವುದಿಲ್ಲ.

೫೭. ನನ್ನ ಭಕ್ತರೆಲ್ಲರೂ ತಮತಮಗೆ ಯಾವ ಯಾವ ವಸ್ತುಗಳು ಪ್ರಿಯಗಳೊ, ಅವುಗಳನ್ನು ಆ ಲಿಂಗಕ್ಕೆ ಸಮರ್ಪಿಸಬೇಕು. ಆ ಸಮರ್ಪಣೆಗೆ ಇಹಪರಲೋಕಗಳಲ್ಲಿಯೂ ಕೊನೆಯಿರುವುದಿಲ್ಲ. ಹಾಗೆಯೇ ಪಾಪಿಗಳು ಇಲ್ಲಿ ಮಾಡುವ ಪಾಪಗಳಿಗೂ ಅಂತ್ಯವಿರಲಾರದು.

೫೮. ಯಾವ ಮಹಾಜ್ಞಾನಿಗಳು ದೂರದಲ್ಲಿದ್ದರೂ ನನ್ನ ಈ ಲಿಂಗವನ್ನು ನಾನು ಕೊಟ್ಟ ಶುದ್ಧಪರಿಕರಗಳಿಂದ ಆರಾಧಿಸುವರೊ, ಆ ಸಜ್ಜನರ ಮನೆಗಳಲ್ಲಿ ಮೋಕ್ಷಲಕ್ಷ್ಮಿಯು ಯಾವಾಗಲೂ ನೆಲಸಿರುವಳು.

೫೯. ಎಲೈ ನಾರಾಯಣನೆ! ಕೇಳು. ಸೃಷ್ಟಿಕರ್ತನೆ! ಕೇಳು. ಸಕಲ ದೇವರ್ಷಿಗಣಗಳಿರಾ! ಕೇಳಿರಿ. ಈ ಮಹಾಲಿಂಗವು ಸತ್ಪುರುಷರಿಗೆ ಉತ್ತಮ ಸಿದ್ಧಿಯನ್ನು ಕೊಡುವುದು. ಇದಕ್ಕೂ ನನಗೂ ಎಳ್ಳಿನಷ್ಟೂ ಭೇದವಿರುವುದಿಲ್ಲ.

ಅಸ್ಮಿನ್ನಿ ಲಿಂಗೇಽಖಿಲಸಿದ್ಧಿಸಾಧನೇ
ಸಮರ್ಪಿತಂ ಯೈಃ ಸುಕೃತಾರ್ಜಿತಂ ವಸು ।
ತೇಭ್ಯೋಽತಿಮಾತ್ರಾಖಿಲಸೌಖ್ಯಸಾಧನಂ
ದದಾಮಿ ನಿರ್ವಾಣಪದಂ ಸುನಿರ್ಭಯಂ ॥ ೬೦ ॥
ಉತ್ಕ್ಷಿಪ್ಯ ಬಾಹುಂ ತ್ವಸಕೃದ್ಬ್ರವೀಮಿ
ತ್ರಯೀಮಯೇಽಸ್ಮಿಂಸ್ತ್ರಯಮೇವ ಸಾರಂ ।
ವಿಶ್ವೇಶಲಿಂಗಂ ಮಣಿಕರ್ಣಿಕಾಂಬು
ಕಾಶೀಪುರೀ ಸತ್ಯಮಿದಂ ತ್ರಿಸತ್ಯಂ ॥ ೬೧ ॥
ಉತ್ಥಾಯ ದೇವೋಽಥ ಸ ಶಕ್ತಿರೀಶ
ಸ್ತಸ್ಮಿನ್ನಿ ಲಿಂಗೇ ಕೃತಚಾರುಪೂಜಃ ।
ಯಯೌ ಲಯಂ ತೇ ಚ ಸುರಾ ಜಯೇತಿ
ಜಯೇತಿ ಚೋಕ್ತ್ವಾ ನುನುವುಸ್ತ್ರಿನಾಶಂ ॥ ೬೨ ॥

ಸ್ಕಂದ ಉವಾಚ :—

ಕ್ಷೇತ್ರಸ್ಯ ಮೈತ್ರಾವರುಣೇಽವಿಮುಕ್ತಸ್ಯ ಮಹಾಮತೇ ।
ಪ್ರಭಾವಸ್ತ್ವೇಕದೇಶೋಽಯಂ ಕಥಿತಃ ಕಲ್ಮಷಾಪಹಃ ॥ ೬೩ ॥

---

೬೦. ಸಕಲ ಸಿದ್ಧಿಗಳಿಗೂ ಸಾಧನೋಪಾಯವಾಗಿರುವ ಈ ಲಿಂಗಕ್ಕೆ ಯಾರು ಪುಣ್ಯೋಪಾರ್ಜಿತವಾದ ಧನವನ್ನು ಸಮರ್ಪಿಸುವರೊ, ಅವರಿಗೆ ನಾನು ಅತೀಂದ್ರಿಯಸೌಖ್ಯಗಳಿಗೆ ಸಾಧನವೂ, ಭಯರಹಿತವೂ ಆದ ಮೋಕ್ಷಪದವಿಯನ್ನನುಗ್ರಹಿಸುವೆನು.

೬೧. ಕೈಯನ್ನು ಮೇಲಕ್ಕೆತ್ತಿ ಮತ್ತೆ ಮತ್ತೆ ಹೇಳುವೆನು. ಈ ಮೂರು ಲೋಕಗಳಲ್ಲಿಯೂ ಸಾರತಮಗಳಾದ ವಸ್ತುಗಳೆಂದರೆ ಈ ಮೂರೇ ಆಗಿರುವುವು. ಮೊದಲನೆಯದು ವಿಶ್ವೇಶ್ವರಮಹಾಲಿಂಗವು. ಎರಡನೆಯದು ಮಣಿಕರ್ಣಿಕಾ ತೀರ್ಥವು. ಮೂರನೆಯದು ಕಾಶೀಕ್ಷೇತ್ರವು.''

೬೨. ಇಂತೆಂದು ಹೇಳಿ ಪಾರ್ವತೀಸಮೇತನಾಗಿ ಆ ಮಹೇಶ್ವರನು ಎದ್ದು ನಿಂತು ಅಲ್ಲಿ ನೆರೆದಿದ್ದವರ ಉತ್ತಮ ಪೂಜೆಗಳನ್ನು ಸ್ವೀಕರಿಸಿ ಆ ಲಿಂಗದಲ್ಲಿಯೇ ಅಂತರ್ಧಾನವನ್ನು ಹೊಂದಿದನು. ದೇವತೆಗಳೆಲ್ಲರೂ ಜಯ ಜಯಕಾರಗಳನ್ನು ಮಾಡುತ್ತ ಮಹಾದೇವನನ್ನು ಸ್ತೋತ್ರಮಾಡತೊಡಗಿದರು.

೬೩. ಸ್ಕಂದನು ಹೇಳುತ್ತಾನೆ:—ಮಹಾಮತಿಯಾದ ಅಗಸ್ತ್ಯಮುನಿಯೆ! ಇಂತು ನಿನಗೆ ಈ ಅವಿಮುಕ್ತಕ್ಷೇತ್ರದ ಪ್ರಭಾವದಲ್ಲಿ ಅತ್ಯಲ್ಪಾಂಶವನ್ನು ತಿಳಿಸಿರುವೆನು. ಇದೂ ಸಹ ಸಕಲ ಕಲ್ಮಷಗಳನ್ನು ದೂರಮಾಡುವುದಾಗಿರುವುದು.

ತವಾಗ್ರೇ ತು ಯಥಾಬುದ್ಧಿ ಕಾಶೀವಿಶ್ಲೇಷತಾಪಿನಃ ।
ಅಚಿರೇಣೈವ ಕಾಲೇನ ಕಾಶೀಂ ಪ್ರಾಪ್ಸ್ಯಸ್ಯನುತ್ತಮಾಂ ॥ ೬೪ ॥
ಅಸ್ತಾಚಲಸ್ಯ ಶಿಖರಂ ಪ್ರಾಪ್ತವಾನೇಷ ಭಾನುಮಾನ್ ।
ತವಾಪಿ ಹಿ ಮಮಾಪ್ಯೇಷ ಮೌನಸ್ಯ ಸಮಯೋಽಭವತ್ ॥ ೬೫ ॥

ವ್ಯಾಸ ಉವಾಚ :—

ಶ್ರುತ್ವೇತಿ ಸ ಮುನಿಃ ಸೂತ ಸಂಧ್ಯೋಪಾಸ್ತ್ಯೈ ವಿನಿರ್ಗತಃ ।
ಪ್ರಣಮ್ಯೋಮೇಯಮಸಕೃಲ್ಲೋಪಾಮುದ್ರಾಸಮನ್ವಿತಃ ॥ ೬೬ ॥
ರಹಸ್ಯಂ ಪರಿವಿಜ್ಞಾಯ ಕ್ಷೇತ್ರಸ್ಯ ಶಶಿಮೌಲಿನಃ ।
ಅಗಸ್ತ್ಯೋ ನಿಶ್ಚಿತಮನಾಃ ಶಿವಧ್ಯಾನಪರೋಽಭವತ್ ॥ ೬೭ ॥
ಆನಂದಕಾನನಸ್ಯೇಹ ಮಹಿಮಾನಂ ಮಹತ್ತರಂ ।
ಕೋಽತ್ರ ವರ್ಣಯಿತುಂ ಶಕ್ತಃ ಸೂತ ವರ್ಷಶತೈರಪಿ ॥ ೬೮ ॥
ಯಥಾ ದೇವ್ಯೈ ಸಮಾಖ್ಯಾಹಿ ಶಿವೇನ ಪರಮಾತ್ಮನಾ ।
ಯಥಾ ಸ್ಕಂದೇನ ಕಥಿತಂ ಮಾಹಾತ್ಮ್ಯಂ ಕುಂಭಸಂಭವೇ ॥ ೬೯ ॥

---

೬೪. ಕಾಶಿಯ ಅಗಲುವಿಕೆಯಿಂದ ಪರಿತಪಿಸುತ್ತಿರುವ ನಿನ್ನ ಸಮ್ಮುಖದಲ್ಲಿ ನನ್ನ ಬುದ್ಧಿಗೆ ತೋರಿದಂತೆ ಕಾಶೀಮಾಹಾತ್ಮ್ಯವನ್ನು ನಿರೂಪಿಸಿರುವೆನು. ನೀನೂ ಅತ್ಯುತ್ತಮವಾದ ಈ ಕ್ಷೇತ್ರವನ್ನು ಸ್ವಲ್ಪಕಾಲದಲ್ಲಿಯೇ ಸೇರುವೆ.

೬೫. ಈಗ ಸೂರ್ಯನು ಅಸ್ತಾಚಲದ ಶಿಖರವನ್ನು ಸೇರುತ್ತಿರುವನು. ನಿನಗೂ ನನಗೂ ಮೌನದಿಂದ ಸಂಧ್ಯೋಪಾಸನೆಯನ್ನು ಮಾಡುವ ಸಮಯವು ಪ್ರಾಪ್ತವಾಗಿರುವುದು.

೬೬. ವ್ಯಾಸನು ಹೇಳುತ್ತಾನೆ:—ಈ ಮಾತುಗಳನ್ನು ಕೇಳಿ ಅಗಸ್ತ್ಯ ಮುನಿಯು ಆ ಪಾರ್ವತೀಪುತ್ರನಾದ ಷಣ್ಮುಖನಿಗೆ ಮತ್ತೆಮತ್ತೆ ನಮಸ್ಕರಿಸಿ ಸಂಧ್ಯಾಕಾಲದ ಕೃತ್ಯಗಳನ್ನು ಮಾಡುವುದಕ್ಕಾಗಿ ಲೋಪಾಮುದ್ರೆಯೊಡನೆ ಹೊರಟುಹೋದನು.

೬೭. ಚಂದ್ರಶೇಖರನ ಕಾಶೀಕ್ಷೇತ್ರದ ಈ ರಹಸ್ಯವನ್ನೆಲ್ಲ ಚೆನ್ನಾಗಿ ತಿಳಿದುಕೊಂಡು ಆ ಮಹರ್ಷಿಯು ಮನಸ್ಸಿನ ಸಂಶಯಗಳೆಲ್ಲವನ್ನೂ ದೂರಮಾಡಿ ಶಿವಧ್ಯಾನದಲ್ಲಿಯೇ ನಿರತನಾಗಿದ್ದನು.

೬೮. ಎಲೈ ಸೂತನೆ! ಆನಂದಕಾನನದ ಅಪಾರವಾದ ಮಹಿಮೆಯನ್ನು ನೂರಾರು ವರ್ಷಗಳಲ್ಲಿಯೂ ಸಹ ಯಾವನುತಾನೆ ಸಮಗ್ರವಾಗಿ ವರ್ಣಿಸಲು ಶಕ್ತನಾದನು ?

೬೯. ಪರಮಾತ್ಮನಾದ ಮಹಾದೇವನು ದೇವಿಗೆ ಯಾವ ಕ್ರಮದಿಂದ ಕಾಶೀಮಹಿಮೆಯನ್ನು ವರ್ಣಿಸಿದನೊ, ಆ ಕ್ರಮದಿಂದಲೇ ಷಣ್ಮುಖನೂ ಕುಂಭಸಂಭವನಿಗೆ ನಿರೂಪಿಸಿದನು.

ತವಾಗ್ರೇ ಚ ಸಮಾಖ್ಯಾತಂ ಶುಕಾದೀನಾಂ ಚ ಸತ್ತಮ ।
ಇದಾನೀಂ ಪ್ರಷ್ಟುಕಾಮೋಽಸಿ ಕಿಂ ತತ್ಪೃಚ್ಛ ವದಾಮಿ ತೇ ॥ ೨೦ ॥
ಶ್ರುತ್ವಾಧ್ಯಾಯಮಿಮಂ ಪುಣ್ಯಂ ಸರ್ವಕಲ್ಮಷನಾಶನಂ ।
ಸಮಸ್ತಚಿಂತಿತಫಲಪ್ರದಂ ಮರ್ತ್ಯೋ ಭವೇತ್ಕೃತೀ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ವಿಶ್ವೇಶ್ವರಾವಿರ್ಭಾವವರ್ಣನಂ"
ನಾಮ ನವನವತಿತಮೋಽಧ್ಯಾಯಃ

---

೨೦. ಅಯ್ಯಾ ಸೂತನೆ! ಅದನ್ನೇ ನಾನೂ ನಿನ್ನ ಮತ್ತು ಶುಕನೇ ಮೊದಲಾದ ಈ ಮಹರ್ಷಿಗಳ ಸಮ್ಮುಖದಲ್ಲಿ ವಿಸ್ತರಿಸಿರುವೆನು. ಮತ್ತೇನನ್ನಾದರೂ ಕೇಳ ಬಯಸುವೆಯಾದರೆ ಕೇಳು; ಹೇಳುವೆನು.

೨೧. ಸಮಸ್ತ ಕಲ್ಮಷನಾಶಕವೂ, ಸಕಲಾಭೀಷ್ಟಪ್ರದವೂ ಆದ ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳಿದ ಮನುಷ್ಯನು ಕೃತಕೃತ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ
"ವಿಶ್ವೇಶ್ವರಾವಿರ್ಭಾವವರ್ಣನ"ವೆಂಬ
ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಶತತಮೋಽಧ್ಯಾಯಃ

## ಅನುಕ್ರಮಣಿಕಾಧ್ಯಾಯಃ

**ಸೂತ ಉವಾಚ :—**

**ಇದಂ ಸ್ಕಾಂದಮುಹಂ ಶೃತ್ವಾ ಕಾಶೀಖಂಡಮನುತ್ತಮಂ ।**
**ನಿತರಾಂ ಪರಿತೃಪ್ತೋಽಸ್ಮಿ ಹೃದಿ ಚಾಪಿ ವಿಧಾರಿತಂ ॥ ೧ ॥**
**ಅನುಕ್ರಮಣಿಕಾಧ್ಯಾಯಂ ತಥಾ ಮಾಹಾತ್ಮ್ಯಮುತ್ತಮಂ ।**
**ಪಾರಾಶರ್ಯ ಸಮಾಚಕ್ಷ್ವ ಯಥಾ ಪೂರ್ವಮಿದಂ ಭವೇತ್ ॥ ೨ ॥**

**ವ್ಯಾಸ ಉವಾಚ :—**

**ಸೂತಾವಧೇಹಿ ಧರ್ಮಾತ್ಮಜ್ಜಾತೂಕರ್ಣ್ಯ ನಿಶಾಮಯ ।**
**ಶುಕವೈಶಂಪಾಯನಾದ್ಯಾಃ ಶೃಣ್ವಂತ್ವಪಿ ಚ ಬಾಲಕಾಃ ॥ ೩ ॥**
**ಅನುಕ್ರಮಣಿಕಾಧ್ಯಾಯಂ ಮಾಹಾತ್ಮ್ಯಂ ಚಾಪಿ ಖಂಡಜಂ ।**
**ಪ್ರವಕ್ಷ್ಯಾಮ್ಯಘನಾಶಾಯ ಮಹಾಪುಣ್ಯಪ್ರವರ್ಧನಂ ॥ ೪ ॥**
**ವಿಂಧ್ಯನಾರದಸಂವಾದಃ ಪ್ರಥಮೋ ಪರಿಕೀರ್ತಿತಃ ।**
**ಸತ್ಯಲೋಕಪ್ರಭಾವಶ್ಚ ದ್ವಿತೀಯಃ ಸಮುದಾಹೃತಃ ॥ ೫ ॥**

---

## ಕನ್ನಡದ ಅನುವಾದ

### ಅನುಕ್ರಮಣಿಕಾಧ್ಯಾಯ

೧. ಸೂತನು ಹೇಳುತ್ತಾನೆ :—ಷಣ್ಮುಖನು ನಿರೂಪಿಸಿದ ಅಪ್ರತಿಮವಾದ ಈ ಕಾಶೀಖಂಡವನ್ನು ಕೇಳಿ ನಾನು ಅತ್ಯಂತ ಸಂತೋಷಗೊಂಡಿರುವೆನಲ್ಲದೆ ಎಲ್ಲ ವಿಷಯಗಳನ್ನೂ ಹೃದಯದಲ್ಲಿ ನೆಲೆಗೊಳಿಸಿರುವೆನು.

೨. ವ್ಯಾಸಮುನಿಯೆ ! ಈಗ ಅನುಕ್ರಮಣಿಕಾಧ್ಯಾಯವನ್ನೂ ಕಾಶೀಖಂಡದ ಸರ್ವೋತ್ತಮವಾದ ಮಾಹಾತ್ಮ್ಯವನ್ನೂ ಆನುಪೂರ್ವಿಯನ್ನನುಸರಿಸಿ ನನಗೆ ತಿಳಿಸು.

೩. ವ್ಯಾಸನು ಹೇಳುತ್ತಾನೆ :—ಧರ್ಮಾತ್ಮನಾದ ಸೂತನೆ! ಜಾತೂಕರ್ಣ್ಯನೆ! ಶುಕವೈಶಂಪಾಯನಾದಿ ಮಹರ್ಷಿಗಳಿರಾ! ಬಾಲಕರಿರಾ! ಎಲ್ಲರೂ ಶ್ರದ್ಧೆಯಿಂದ ಕೇಳಿರಿ.

೪. ಈಗ ಅನುಕ್ರಮಣಿಕೆಯ ಅಧ್ಯಾಯವನ್ನೂ ಕಾಶೀಖಂಡದ ಪಠನದ ಮಾಹಾತ್ಮ್ಯವನ್ನೂ ತಿಳಿಸುವೆನು. ಇದನ್ನು ಕೇಳಿದವರ ಪಾತಕಗಳು ನಾಶವಾಗಿ ಪುಣ್ಯವು ಅಭಿವೃದ್ಧಿಯನ್ನೈದುವುದು.

೫. ಮೊದಲನೆಯ ಅಧ್ಯಾಯದಲ್ಲಿ ವಿಂಧ್ಯನಾರದರ ಸಂವಾದವು. ಎರಡನೆಯದರಲ್ಲಿ ಸತ್ಯಲೋಕದ ಮಹಾಮಹಿಮೆಯು ವಿಸ್ತರಿಸಲ್ಪಟ್ಟಿರುವುದು.

ಅಗಸ್ತ್ಯೇರಾಶ್ರಮುಪದೇ ದೇವಾನಾಮಾಗಮಸ್ತತಃ ।
ಪತಿವ್ರತಾಚರಿತ್ರಂ ಚ ಪ್ರಸ್ಥಾನಂ ಕುಂಭಸಂಭವಃ ॥ ೬ ॥
ತೀರ್ಥಪ್ರಶಂಸಾ ಚ ತತಃ ಸಪ್ತಪುರ್ಯಸ್ತತಃ ಸ್ಮೃತಾಃ ।
ಸಂಯಮಿನ್ಯಾಃ ಸ್ವರೂಪಂ ಚ ಬ್ರಧ್ನಲೋಕಸ್ತತಃ ಪರಂ ॥ ೭ ॥
ಇಂದ್ರಾಗ್ನ್ಯೋರ್ಲೋಕಸಂಪ್ರಾಪ್ತಿಸ್ತತಶ್ಚ ಶಿವಶರ್ಮಣಃ ।
ಅಗ್ನೇಃ ಸಮುದ್ಭವಸ್ತಸ್ಮಾತ್ಕ್ರವ್ಯಾದ್ವರುಣಸಂಭವಃ ॥ ೮ ॥
ಗಂಧವತ್ಯಲಕಾಪುರ್ಯೋರೀಶಯೋಸ್ತು ಸಮುದ್ಭವಃ ।
ಚಂದ್ರಲೋಕಪರಿಪ್ರಾಪ್ತಿಃ ಶಿವಶರ್ಮದ್ವಿಜನ್ಮನಃ ॥ ೯ ॥
ಉಡುಲೋಕಕಥಾ ತಸ್ಮಾತ್ತತಃ ಶುಕ್ರಸಮುದ್ಭವಃ ।
ಮಾಹೇಯಗುರುಸೌರೀಣಾಂ ಲೋಕಾನಾಂ ವರ್ಣನಂ ತತಃ ॥ ೧೦ ॥
ಸಪ್ತರ್ಷೀಣಾಂ ತತೋ ಲೋಕಾ ಧ್ರುವಸ್ಯ ಚ ತತಸ್ತತಃ ।
ತತೋ ಧ್ರುವಫಲಪ್ರಾಪ್ತಿರ್ಧ್ರುವಲೋಕಸ್ಥಿತಿಸ್ತತಃ ॥ ೧೧ ॥

---

೬. ಮೂರನೆಯ ಅಧ್ಯಾಯದಲ್ಲಿ ಅಗಸ್ತ್ಯಾಶ್ರಮಕ್ಕೆ ದೇವತೆಗಳ ಆಗಮನವು. ನಾಲ್ಕನೆಯದರಲ್ಲಿ ಪತಿವ್ರತೆಯ ಆಖ್ಯಾನವೂ, ಐದನೆಯದರಲ್ಲಿ ಅಗಸ್ತ್ಯ ಮಹರ್ಷಿಯ ತೀರ್ಥಯಾತ್ರಾಪ್ರಸ್ಥಾನವೂ ಹೇಳಲ್ಪಟ್ಟಿರುವುವು.

೭. ಆರನೆಯದರಲ್ಲಿ ತೀರ್ಥಪ್ರಶಂಸೆಯೂ, ಏಳನೆಯ ಅಧ್ಯಾಯದಲ್ಲಿ ಸಪ್ತಪುರಿಗಳ ವಿವರಣೆಯೂ, ಎಂಟನೆಯದರಲ್ಲಿ ಯಮನಗರಿಯ ಸ್ವರೂಪವೂ, ಒಂಬತ್ತನೆಯದರಲ್ಲಿ ಸೂರ್ಯಲೋಕದ ವರ್ಣನೆಯೂ ವರ್ಣಿತವಾಗಿವೆ.

೮. ಹತ್ತನೆಯದರಲ್ಲಿ ಶಿವಶರ್ಮನು ಇಂದ್ರಾಗ್ನಿಗಳ ಲೋಕಗಳಿಗೆ ಹೋದುದನ್ನೂ, ಅಗ್ನಿ, ನಿರ್ಋತಿ, ವರುಣರು ಉದ್ಭವಿಸಿದ ಬಗೆಯನ್ನು ಹನ್ನೊಂದು, ಹನ್ನೆರಡನೆಯ ಅಧ್ಯಾಯಗಳಲ್ಲಿಯೂ ಹೇಳಿರುವೆನು.

೯. ಹದಿಮೂರನೆಯ ಅಧ್ಯಾಯದಲ್ಲಿ ಗಂಧವತೀ, ಅಲಕಾನಗರಿಗಳ ಒಡೆಯರಾದ ವಾಯುಕುಬೇರರ ಸಂಭವವನ್ನೂ, ಹದಿನಾಲ್ಕನೆಯದರಲ್ಲಿ ಶಿವಶರ್ಮಬ್ರಾಹ್ಮಣನು ಚಂದ್ರಲೋಕವನ್ನು ಸೇರಿದ ವಿಷಯವನ್ನೂ ತಿಳಿಸಿದೆನು.

೧೦. ಬಳಿಕ ಹದಿನೈದನೆಯದರಲ್ಲಿ ಚಂದ್ರಲೋಕದ ವರ್ಣನೆಯೂ, ಹದಿನಾರನೆಯದರಲ್ಲಿ ಶುಕ್ರಾಚಾರ್ಯನ ಜನನವೂ, ಹದಿನೇಳನೆಯದರಲ್ಲಿ ಕುಜ, ಬೃಹಸ್ಪತಿ, ಶನಿಗಳು ವಾಸಿಸುತ್ತಿರುವ ಲೋಕಗಳ ವರ್ಣನೆಯೂ ತಿಳಿಸಲ್ಪಟ್ಟವು.

೧೧. ಹದಿನೆಂಟನೆಯದರಲ್ಲಿ ಸಪ್ತರ್ಷಿಲೋಕಗಳೂ, ಧ್ರುವನ ತಪಶ್ಚರ್ಯೆಯು ಹತ್ತೊಂಬತ್ತನೆಯದರಲ್ಲಿಯೂ, ಇಪ್ಪತ್ತನೆಯದರಲ್ಲಿ ಆತನು ಶಾಶ್ವತಪದವಿಯನ್ನು ಹೊಂದಿದುದೂ, ಇಪ್ಪತ್ತೊಂದನೆಯದರಲ್ಲಿ ಧ್ರುವಲೋಕದ ವರ್ಣನೆಯೂ ಇರುವುವು.

ದರ್ಶನಂ ಸತ್ಯಲೋಕಸ್ಯ ತಸ್ಯ ವೈ ಶಿವಶರ್ಮಣಃ ।
ಚತುರ್ಭುಜಾಭಿಷೇಕಶ್ಚ ನಿರ್ವಾಣಂ ಶಿವಶರ್ಮಣಃ ॥ ೧೨ ॥
ಸ್ಕಂದಾಗಸ್ತ್ಯೋಶ್ಚ ಸಂವಾದೋ ಮಣಿಕರ್ಣ್ಯಾಃ ಸಮುದ್ಭವಃ ।
ತತಸ್ತು ಗಂಗಾಮಾಹಾತ್ಮ್ಯಂ ತತೋ ದಶಹರಾಸ್ತವಃ ॥ ೧೩ ॥
ಪ್ರಭಾವಶ್ಚಾಪಿ ಗಂಗಾಯಾ ಗಂಗಾನಾಮಸಹಸ್ರಕಂ ।
ವಾರಾಣಸ್ಯಾಃ ಪ್ರಶಂಸಾಥ ಭೈರವಾವಿರ್ಭವಸ್ತತಃ ॥ ೧೪ ॥
ದಂಡಪಾಣೇಃ ಸಮುದ್ಭೂತಿರ್ಜ್ಞಾನವಾಪ್ಯುದ್ಭವಸ್ತತಃ ।
ಆಖ್ಯಾನಂ ಚ ಕಲಾವತ್ಯಾಃ ಸದಾಚಾರಸ್ತತಃ ಪರಂ ॥ ೧೫ ॥
ಬ್ರಹ್ಮಚಾರಿಪ್ರಕರಣಂ ತತಃ ಸ್ತ್ರೀಲಕ್ಷಣಾನಿ ಚ ।
ಕೃತ್ಯಾಕೃತ್ಯಪ್ರಕರಣಮವಿಮುಕ್ತೇಶವರ್ಣನಂ ॥ ೧೬ ॥

---

೧೨. ಇಪ್ಪತ್ತೆರಡನೆಯದರಲ್ಲಿ ಆ ಶಿವಶರ್ಮನು ಸತ್ಯಲೋಕದ ದರ್ಶನವನ್ನು ಮಾಡಿದ ವಿಷಯವೂ, ಇಪ್ಪತ್ತಮೂರನೆಯದರಲ್ಲಿ ಚತುರ್ಭುಜಾಭಿಷೇಕವೂ, ಇಪ್ಪತ್ತನಾಲ್ಕನೆಯದರಲ್ಲಿ ಶಿವಶರ್ಮನ ಮೋಕ್ಷಪ್ರಾಪ್ತಿಯೂ ಇರುವುವು.

೧೩. ಇಪ್ಪತ್ತೈದನೆಯ ಅಧ್ಯಾಯದಲ್ಲಿ ಸ್ಕಂದ, ಅಗಸ್ತ್ಯರ ಸಂವಾದವೂ, ಇಪ್ಪಾತ್ತಾರನೆಯದರಲ್ಲಿ ಮಣಿಕರ್ಣಿಕೆಯ ಉತ್ಪತ್ತಿಕಥನವೂ, ಇಪ್ಪತ್ತೇಳನೆಯದರಲ್ಲಿ ಗಂಗಾಮಾಹಾತ್ಮ್ಯವೂ, ದಶಹರಾದೇವಿಯ ಸ್ತೋತ್ರವೂ ಉಕ್ತವಾಗಿರುವುವು.

೧೪. ಇಪ್ಪತ್ತೆಂಟನೆಯದರಲ್ಲಿ ಗಂಗಾನದಿಯ ಮಹಿಮೆಯೂ, ಇಪ್ಪತ್ತೊಂಬತ್ತನೆಯದರಲ್ಲಿ ಗಂಗಾದೇವಿಯ ಸಹಸ್ರನಾಮಾವಳಿಯೂ, ಮೂವತ್ತನೆಯದರಲ್ಲಿ ಕಾಶೀಕ್ಷೇತ್ರದ ಪ್ರಶಂಸೆಯೂ, ಮೂವತ್ತೊಂದನೆಯದರಲ್ಲಿ ಭೈರವನ ಉದ್ಭವವೂ ನಿರೂಪಿತಗಳಾಗಿರುವುವು.

೧೫. ಮೂವತ್ತೆರಡನೆಯದರಲ್ಲಿ ದಂಡಪಾಣಿಯ ಉದ್ಭವವೂ, ಮೂವತ್ತಮೂರನೆಯದರಲ್ಲಿ ಜ್ಞಾನವಾಪಿಯ ಉತ್ಪತ್ತಿಪ್ರಕಾರವೂ, ಮೂವತ್ತನಾಲ್ಕನೆಯದರಲ್ಲಿ ಕಲಾವತಿಯ ಆಖ್ಯಾನವೂ, ಮೂವತ್ತೈದನೆಯದರಲ್ಲಿ ಸದಾಚಾರಗಳ ವರ್ಣನೆಯೂ ಹೇಳಲ್ಪಟ್ಟಿರುವುವು.

೧೬. ಮೂವತ್ತಾರನೆಯದರಲ್ಲಿ ಬ್ರಹ್ಮಚಾರಿಯ ಚರಿತ್ರೆಯೂ, ಮೂವತ್ತೇಳನೆಯದರಲ್ಲಿ ಸ್ತ್ರೀಯರ ಲಕ್ಷಣಗಳೂ, ಮೂವತ್ತೆಂಟನೆಯದರಲ್ಲಿ ಸತ್ಕರ್ಮ ದುಷ್ಕರ್ಮಗಳ ವಿವೇಚನೆಯೂ, ಮೂವತ್ತೊಂಬತ್ತನೆಯದರಲ್ಲಿ ಅವಿಮುಕ್ತೇಶ್ವರನ ವರ್ಣನೆಯೂ ಇರುವುವು.

ತತೋ ಗೃಹಸ್ಥಧರ್ಮಾಂಶ್ಚ ತತೋ ಯೋಗನಿರೂಪಣಂ ।
ಕಾಲಜ್ಞಾನಂ ತತಃ ಪ್ರೋಕ್ತಂ ದಿವೋದಾಸಸ್ಯ ವರ್ಣನಂ ॥ ೧೭ ॥
ಕಾಶ್ಯಾಶ್ಚ ವರ್ಣನಂ ತಸ್ಮಾದ್ಯೋಗಿನೀವರ್ಣನಂ ತತಃ ।
ಲೋಲಾರ್ಕಸ್ಯ ಸಮಾಖ್ಯಾನಮುತ್ತರಾರ್ಕಕಥಾ ತತಃ ॥ ೧೮ ॥
ಸಾಂಬಾದಿತ್ಯಸ್ಯ ಮಹಿಮಾ ದ್ರುಪದಾದಿತ್ಯಶಂಸನಂ ।
ತತಸ್ತು ಗರುಡಾಖ್ಯಾನಮರುಣಾರ್ಕಾದಯಸ್ತತಃ ॥ ೧೯ ॥
ದಶಾಶ್ವಮೇಧಿಕಂ ತೀರ್ಥಂ ಮಂದರಾಚ್ಚ ಗಣಾಗಮಃ ।
ಪಿಶಾಚಮೋಚನಾಖ್ಯಾನಂ ಗಣೇಶಪ್ರೇಷಣಂ ತತಃ ॥ ೨೦ ॥
ಮಾಯಾಗಣಪತೇಶ್ಚಾಥ ಢುಂಢಿಪ್ರಾದುರ್ಭವಸ್ತತಃ ।
ವಿಷ್ಣುಮಾಯಾಪ್ರಪಂಚೋಽಥ ದಿವೋದಾಸವಿಸರ್ಜನಂ ॥ ೨೧ ॥

---

೧೭. ನಲವತ್ತನೆಯದರಲ್ಲಿ ಗೃಹಸ್ಥರ ಧರ್ಮಗಳೂ, ನಲವತ್ತೊಂದನೆಯದರಲ್ಲಿ ಯೋಗಶಾಸ್ತ್ರದ ನಿರೂಪಣೆಯೂ, ನಲವತ್ತೆರಡನೆಯದರಲ್ಲಿ ಕಾಲಜ್ಞಾನದ ವಿಷಯವೂ, ಬಳಿಕ ನಲವತ್ತಮೂರನೆಯ ಅಧ್ಯಾಯದಲ್ಲಿ ದಿವೋದಾಸ ಮಹಾರಾಜನ ವರ್ಣನೆಯೂ ಪ್ರೋಕ್ತಗಳಾಗಿರುವುವು.

೧೮. ನಲವತ್ತನಾಲ್ಕನೆಯ ಅಧ್ಯಾಯದಲ್ಲಿ ಕಾಶೀಕ್ಷೇತ್ರದ ವರ್ಣನೆಯೂ, ನಲವತ್ತೈದನೆಯದರಲ್ಲಿ ಯೋಗಿನೀವರ್ಣನೆಯೂ, ನಲವತ್ತಾರನೆಯದರಲ್ಲಿ ಲೋಲಾರ್ಕನ ಆಖ್ಯಾನವೂ, ನಲವತ್ತೇಳನೆಯದರಲ್ಲಿ ಉತ್ತರಾರ್ಕನ ಕಥೆಯೂ ನಿರೂಪಿಸಲ್ಪಟ್ಟುವು.

೧೯. ನಲವತ್ತೆಂಟನೆಯದರಲ್ಲಿ ಸಾಂಬಾದಿತ್ಯನ ಮಹಿಮೆಯೂ, ನಲವತ್ತೊಂಬತ್ತನೆಯದರಲ್ಲಿ ದ್ರುಪದಾದಿತ್ಯನ ಪ್ರಶಂಸೆಯೂ, ಐವತ್ತನೆಯದರಲ್ಲಿ ಗರುಡನ ಚರಿತ್ರೆಯೂ, ಐವತ್ತೊಂದನೆಯದರಲ್ಲಿ ಅರುಣಾರ್ಕನೇ ಮೊದಲಾದ ದೇವತೆಗಳ ವಿಷಯವೂ ವಿಸ್ತರಿಸಲ್ಪಟ್ಟಿರುವುವು.

೨೦. ಐವತ್ತೆರಡನೆಯದರಲ್ಲಿ ದಶಾಶ್ವಮೇಧತೀರ್ಥದ ಮಹಿಮೆಯೂ, ಐವತ್ತಮೂರನೆಯದರಲ್ಲಿ ಮಂದರಪರ್ವತದಿಂದ ಗಣಗಳು ಹೊರಟುಬಂದ ವಿಷಯವೂ, ಐವತ್ತನಾಲ್ಕನೆಯದರಲ್ಲಿ ಪಿಶಾಚಮೋಚನತೀರ್ಥದ ಆಖ್ಯಾನವೂ, ಐವತ್ತೈದನೆಯದರಲ್ಲಿ ಮಹೇಶ್ವರನು ಗಣಪತಿಯನ್ನು ಕಾಶಿಗೆ ಕಳುಹಿಸಿದ ವಿಷಯವೂ ಹೇಳಲ್ಪಟ್ಟಿರುವುವು.

೨೧. ಐವತ್ತಾರನೆಯದರಲ್ಲಿ ಮಾಯಾಗಣಪತಿಯ ಚರಿತ್ರೆಯೂ, ಐವತ್ತೇಳನೆಯದರಲ್ಲಿ ಢುಂಢಿವಿನಾಯಕನ ಉತ್ಪತ್ತಿಯೂ, ಐವತ್ತೆಂಟನೆಯದರಲ್ಲಿ ವಿಷ್ಣುವಿನ ಮಾಯಾಜಾಲದ ವ್ಯಾಪಾರವೂ, ದಿವೋದಾಸನು ಕೈಲಾಸಕ್ಕೆ ತೆರಳಿದ ವಿಷಯವೂ ಹೇಳಲ್ಪಟ್ಟುವು.

ತತಃ ಪಂಚನದೋತ್ಪತ್ತಿರ್ಬಿಂಧುಮಾಧವಸಂಭವಃ ।
ತತೋ ವೈಷ್ಣವತೀರ್ಥಾನಾಂ ಮಾಹಾತ್ಮ್ಯಪರಿವರ್ಣನಂ ॥ ೨೨ ॥
ಪ್ರಯಾಣಂ ಮಂದರಾತ್ಕಾಶೀಂ ವೃಷಭಧ್ವಜಶೂಲಿನಃ ।
ಜೈಗೀಷವ್ಯೇನ ಸಂವಾದೋ ಜ್ಯೇಷ್ಠಸ್ಥಾನೇ ಮಹೇಶಿತುಃ ॥ ೨೩ ॥
ತತಃ ಕ್ಷೇತ್ರರಹಸ್ಯಸ್ಯ ಕಥನಂ ಪಾಪನಾಶನಂ ।
ಅಥಾತಃ ಕಂದುಕೇಶಸ್ಯ ವ್ಯಾಘ್ರೇಶಸ್ಯ ಸಮುದ್ಭವಃ ॥ ೨೪ ॥
ತತಃ ಶೈಲೇಶ್ವರಕಥಾ ರತ್ನೇಶಸ್ಯ ಚ ದರ್ಶನಂ ।
ಕೃತ್ತಿವಾಸಸ್ಸಮುತ್ಪತ್ತಿಸ್ತತಶ್ಚಾಯತನಾಗಮಃ ॥ ೨೫ ॥
ದೇವತಾನಾಮಧಿಷ್ಠಾನಂ ದುರ್ಗಾಸುರಪರಾಕ್ರಮಃ ।
ದುರ್ಗಾಯಾ ವಿಜಯಶ್ಚಾಥ ತತ ಓಂಕಾರವರ್ಣನಂ ॥ ೨೬ ॥
ಪುನರೋಂಕಾರಮಾಹಾತ್ಮ್ಯಂ ತ್ರಿಲೋಚನಸಮುದ್ಭವಃ ।
ತ್ರಿಲೋಚನಪ್ರಭಾವೋಽಥ ಕೇದಾರಾಖ್ಯಾನಮೇವ ಚ ॥ ೨೭ ॥

---

೨೨. ಐವತ್ತೊಂಬತ್ತನೆಯ ಅಧ್ಯಾಯದಲ್ಲಿ ಪಂಚನದ ಕ್ಷೇತ್ರದ ಉತ್ಪತ್ತಿಯೂ, ಅರುವತ್ತನೆಯದರಲ್ಲಿ ಬಿಂದುಮಾಧವನ ಉದ್ಭವವೂ, ಅರವತ್ತೊಂದನೆಯದರಲ್ಲಿ ವೈಷ್ಣವತೀರ್ಥಗಳ ಮಾಹಾತ್ಮ್ಯೆಯ ಕಥನವೂ ಇರುವುವು.

೨೩. ಅರುವತ್ತೆರಡನೆಯದರಲ್ಲಿ ವೃಷಭಧ್ವಜನಾದ ಮಹಾದೇವನು ಮಂದರಾಚಲವನ್ನು ಬಿಟ್ಟು ಕಾಶಿಗೆ ಪ್ರಯಾಣಮಾಡಿದುದನ್ನು ಹೇಳಿದೆನು. ಅರುವತ್ತಮೂರನೆಯಅಧ್ಯಾಯದಲ್ಲಿ ಜ್ಯೇಷ್ಠಸ್ಥಾನದಲ್ಲಿ ಮಹೇಶ್ವರನು ಜೈಗೀಷವ್ಯನೊಡನೆ ನಡೆಸಿದ ಸಂವಾದವನ್ನು ಹೇಳಲಾಯಿತು.

೨೪. ಅರುವತ್ತನಾಲ್ಕನೆಯದರಲ್ಲಿ ಸಕಲ ಕಲ್ಮಷನಾಶಕವಾದ ಕ್ಷೇತ್ರ ರಹಸ್ಯದ ಕಥನವಿರುವುದು. ಅರುವತ್ತೈದನೆಯದರಲ್ಲಿ ಕುಂದುಕೇಶ್ವರ, ವ್ಯಾಘ್ರೇಶ್ವರ ಮಹಾಲಿಂಗಗಳ ಉದ್ಭವಗಳು ಹೇಳಲ್ಪಟ್ಟುವು.

೨೫. ಅರುವತ್ತಾರನೆಯಅಧ್ಯಾಯದಲ್ಲಿ ಶೈಲೇಶ್ವರನ ಚರಿತ್ರೆಯೂ, ಅರುವತ್ತೇಳನೆಯದರಲ್ಲಿ ರತ್ನೇಶ್ವರಾಖ್ಯಾನವೂ, ಅರುವತ್ತೆಂಟನೆಯದರಲ್ಲಿ ಕೃತ್ತಿವಾಸೇಶ್ವರನ ಉದ್ಭವವೂ, ಅರುವತ್ತೊಂಬತ್ತನೆಯದರಲ್ಲಿ ಆಲಯಗಳ ನಿರ್ಮಾಣವೂ ನಿರುಪಿಸಲ್ಪಟ್ಟಿರುವುವು.

೨೬. ಎಪ್ಪತ್ತನೆಯದರಲ್ಲಿ ದೇವತೆಗಳ ಅಧಿಷ್ಠಾನಕ್ರಮವೂ, ಎಪ್ಪತ್ತೊಂದನೆಯದರಲ್ಲಿ ದುರ್ಗಾಸುರನ ಮಹಾಪರಾಕ್ರಮವೂ, ಎಪ್ಪತ್ತೆರಡನೆಯದರಲ್ಲಿ ದುರ್ಗಾದೇವಿಯ 'ವಿಜಯ'ವೂ, ಎಪ್ಪತ್ತಮೂರನೆಯದರಲ್ಲಿ ಓಂಕಾರೇಶ್ವರನ ಆಖ್ಯಾನವೂ ಹೇಳಲ್ಪಟ್ಟುವು.

೨೭. ಎಪ್ಪತ್ತನಾಲ್ಕನೆಯಅಧ್ಯಾಯದಲ್ಲಿ ಓಂಕಾರೇಶ್ವರನ ಮಾಹಾತ್ಮ್ಯೆವೂ,

ತತೋ ಧರ್ಮೇಶಮಹಿಮಾ ತತಃ ಪಕ್ಷಿಕಥಾ ಶುಭಾ ।
ತತೋ ವಿಶ್ವಭುಜಾಖ್ಯಾನಂ ದುರ್ದಮಸ್ಯ ಕಥಾ ತತಃ ॥ ೨೮ ॥
ತತೋ ವೀರೇಶ್ವರಾಖ್ಯಾನಂ ವೀರೇಶಮಹಿಮಾ ಪುನಃ ।
ಗಂಗಾತೀರ್ಥೈಶ್ಚ ಸಂಯುಕ್ತಾ ಕಾಮೇಶಮಹಿಮಾ ತತಃ ॥ ೨೯ ॥
ವಿಶ್ವಕರ್ಮೇಶಮಹಿಮಾ ದಕ್ಷಯಜ್ಞಸಮುದ್ಭವಃ ।
ಸತ್ಯಾ ದೇಹವಿಸರ್ಗಶ್ಚ ತತೋ ದಕ್ಷೇಶ್ವರೋದ್ಭವಃ ॥ ೩೦ ॥
ತತೋ ವೈ ಪಾರ್ವತೀಶಸ್ಯ ಮಹಿಮ್ನಃ ಪರಿಕೀರ್ತನಂ ।
ಗಂಗೇಶಸ್ಯಾಥ ಮಹಿಮಾ ನರ್ಮದೇಶಸಮುದ್ಭವಃ ॥ ೩೧ ॥
ಸತೀಶ್ವರಸಮುತ್ಪತ್ತಿರಮೃತೇಶಾದಿವರ್ಣನಂ ।
ವ್ಯಾಸಸ್ಯ ಹಿ ಭುಜಸ್ತಂಭೋ ವ್ಯಾಸಶಾಪವಿಮೋಕ್ಷಣಂ ॥ ೩೨ ॥

---

ಎಪ್ಪತ್ತೈದನೆಯದರಲ್ಲಿ ತ್ರಿಲೋಚನೇಶ್ವರ ಲಿಂಗದ ಉದ್ಭವಪ್ರಕಾರವೂ, ಎಪ್ಪತ್ತಾರನೆಯದರಲ್ಲಿ ತ್ರಿಲೋಚನೇಶ್ವರನ ಮಹಿಮೆಯೂ, ಎಪ್ಪತ್ತೇಳನೆಯದರಲ್ಲಿ ಕೇದಾರೇಶ್ವರನ ಆಖ್ಯಾನವೂ ಹೇಳಲ್ಪಟ್ಟಿರುವುವು.

೨೮. ಎಪ್ಪತ್ತೆಂಟನೆಯದರಲ್ಲಿ ಧರ್ಮೇಶ್ವರನ ಮಹಿಮೆಯೂ, ಎಪ್ಪತ್ತೊಂಬತ್ತನೆಯದರಲ್ಲಿ ಶುಕಪಕ್ಷಿಗಳ ಕಥೆಯೂ, ಎಂಬತ್ತನೆಯದರಲ್ಲಿ ವಿಶ್ವಭುಜಾದೇವಿಯ ಚರಿತ್ರೆಯೂ ಮನೋರಥತೃತೀಯಾವ್ರತವೂ, ಎಂಬತ್ತೊಂದನೆಯದರಲ್ಲಿ ದುರ್ದಮನ ಆಖ್ಯಾನವೂ ಹೇಳಲ್ಪಟ್ಟುವು.

೨೯. ಎಂಬತ್ತೆರಡನೆಯದರಲ್ಲಿ ವೀರೇಶ್ವರಲಿಂಗದ ಪ್ರಾದುರ್ಭಾವವೂ, ಎಂಬತ್ತಮೂರನೆಯದರಲ್ಲಿ ಆ ಲಿಂಗದ ಮಹಿಮೆಯೂ, ಎಂಬತ್ತನಾಲ್ಕನೆಯದರಲ್ಲಿ ಗಂಗಾ ವರಣಾ ನದಿಗಳ ಸಂಗಮವು ಪುಣ್ಯತೀರ್ಥವಾದುದೂ, ಎಂಬತ್ತೈದನೆಯದರಲ್ಲಿ ಕಾಮೇಶ್ವರಮಹಾಲಿಂಗದ ಮಹಿಮೆಯೂ ನಿರೂಪಿತಗಳಾದುವು.

೩೦. ಎಂಬತ್ತಾರನೆಯದರಲ್ಲಿ ವಿಶ್ವಕರ್ಮೇಶ್ವರಾವಿರ್ಭಾವವೂ, ಎಂಬತ್ತೇಳನೆಯದರಲ್ಲಿ ದಕ್ಷಯಜ್ಞವರ್ಣನವೂ, ಎಂಬತ್ತೆಂಟನೆಯದರಲ್ಲಿ ಸತೀದೇವಿಯು ದೇಹತ್ಯಾಗವನ್ನು ಮಾಡಿದುದೂ, ಎಂಬತ್ತೊಂಬತ್ತನೆಯದರಲ್ಲಿ ದಕ್ಷೇಶ್ವರಲಿಂಗದ ಉದ್ಭವವೂ ವಿವರಿಸಲ್ಪಟ್ಟುವು.

೩೧. ತೊಂಬತ್ತನೆಯ ಅಧ್ಯಾಯದಲ್ಲಿ ಪಾರ್ವತೀಶ್ವರ ಲಿಂಗದ ಮಾಹಾತ್ಮ್ಯವು ವರ್ಣಿಸಲ್ಪಟ್ಟಿತು. ತೊಂಬತ್ತೊಂದನೆಯದರಲ್ಲಿ ಗಂಗೇಶ್ವರನ ಮಹಿಮೆಯೂ, ತೊಂಬತ್ತೆರಡನೆಯದರಲ್ಲಿ ನರ್ಮದೇಶ್ವರೋದ್ಭವದ ಪ್ರಕಾರವೂ ನಿರೂಪಿತಗಳಾಗಿರುವುವು.

೩೨. ತೊಂಬತ್ತಮೂರನೆಯದರಲ್ಲಿ ಸತೀಶ್ವರಲಿಂಗದ ಪ್ರಾದುರ್ಭಾವವೂ, ತೊಂಬತ್ತನಾಲ್ಕನೆಯದರಲ್ಲಿ ಅಮರೇಶ್ವರಾದಿ ಲಿಂಗಗಳ ಚರಿತ್ರೆಗಳೂ, ತೊಂಬ

**ಕ್ಷೇತ್ರತೀರ್ಥಕದಂಬಂ ಚ ಮುಕ್ತಿಮಂಡಪಸಂಕಥಾ ।**
**ವಿಶ್ವೇಶಾವಿರ್ಭವಶ್ಚಾಥ ತತೋ ಯಾತ್ರಾಪರಿಕ್ರಮಃ ॥ ೩೩ ॥**
**ಏತದಾಖ್ಯಾನಶತಕಂ ಕ್ರಮೇಣ ಪರಿಕೀರ್ತಿತಂ ।**
**ಯಸ್ಯ ಶ್ರವಣಮಾತ್ರೇಣ ಸರ್ವಖಂಡಶ್ರುತೇಃ ಫಲಂ ।**
**ಅನುಕ್ರಮಣಿಕಾಧ್ಯಾಯೋಽಪ್ಯಸ್ತಿ ಯಾತ್ರಾಪರಿಕ್ರಮಃ ॥ ೩೪ ॥**

**ಸೂತ ಉವಾಚ :—**

**ಯಾತ್ರಾಪರಿಕ್ರಮಂ ಬ್ರೂಹಿ ಜನಾನಾಂ ಹಿತಕಾಮ್ಯಯಾ ।**
**ಯಥಾವತ್ಸಿದ್ಧಿಕಾಮಾನಾಂ ಸತ್ಯವತ್ಯಾಃ ಸುತೋತ್ತಮ ॥ ೩೫ ॥**

**ವ್ಯಾಸ ಉವಾಚ :—**

**ನಿಶಾಮಯ ಮಹಾಪ್ರಾಜ್ಞ ಲೋಮಹರ್ಷಣ ವಚ್ಮಿ ತೇ ।**
**ಯಥಾ ಪ್ರಥಮತೋ ಯಾತ್ರಾ ಕರ್ತವ್ಯಾ ಯಾತ್ರಿಕೈರ್ಮುದಾ ॥ ೩೬ ॥**
**ಸಚೈಲಮಾದೌ ಸಂಸ್ನಾಯ ಚಕ್ರಪುಷ್ಕರಿಣೀಜಲೇ ।**
**ಸಂತರ್ಪ್ಯ ದೇವಾನ್ಸಪಿತ್ರೂನ್ಬ್ರಾಹ್ಮಣಾಂಶ್ಚ ತಥಾರ್ಥಿನಃ ॥ ೩೭ ॥**

---

ತ್ತೈದನೆಯದರಲ್ಲಿ ವ್ಯಾಸನಿಗೆ ಭುಜಸ್ತಂಭನೆಯಾದ ವಿಷಯವೂ, ತೊಂಬತ್ತಾರನೆಯದರಲ್ಲಿ ವ್ಯಾಸಶಾಪವಿಮೋಚನೆಯೂ ವಿಸ್ತರಿಸಲ್ಪಟ್ಟುವು.

೩೩. ತೊಂಬತ್ತೇಳನೆಯದರಲ್ಲಿ ಕ್ಷೇತ್ರತೀರ್ಥವರ್ಣನವೂ, ತೊಂಬತ್ತೆಂಟನೆಯದರಲ್ಲಿ ಮುಕ್ತಿಮಂಟಪಾಖ್ಯಾನವೂ, ತೊಂಬತ್ತೊಂಬತ್ತನೆಯದರಲ್ಲಿ ವಿಶ್ವೇಶ್ವರಾವಿರ್ಭಾವವರ್ಣನೆಯೂ, ಈ ನೂರನೆಯ ಅಧ್ಯಾಯದಲ್ಲಿ ಕ್ಷೇತ್ರಯಾತ್ರಾಕ್ರಮವೂ ವರ್ಣಿತಗಳಾಗಿರುವುವು.

೩೪. ಇಂತು ಈ ಖಂಡವು ನೂರು ಆಖ್ಯಾನಗಳಿಂದ ಕೂಡಿರುವುದು. ಶ್ರವಣಮಾತ್ರದಿಂದಲೇ ಸಮಸ್ತ ಕಾಶೀಖಂಡಶ್ರವಣದ ಫಲವನ್ನು ಕೊಡುವ ಈ ಅನುಕ್ರಮಣಿಕಾಧ್ಯಾಯದಲ್ಲಿಯೂ ಯಾತ್ರಾಕ್ರಮವು ನಿರೂಪಿಸಲ್ಪಟ್ಟಿರುವುದು.

೩೫. ಸೂತನು ಹೇಳುತ್ತಾನೆ:—ಸತ್ಯವತಿಯ ಉತ್ತಮಪುತ್ರನೆ! ಕ್ಷೇತ್ರಯಾತ್ರೆಯನ್ನು ಯಥಾವಿಧಿಯಾಗಿ ಮಾಡಿ ಸಿದ್ಧಿಯನ್ನು ಪಡೆಯಲೆಳಸುವ ಮನುಜರಿಗೆ ಹಿತವನ್ನುಂಟುಮಾಡುವ ಉದಾರಬುದ್ಧಿಯಿಂದ ಈಗ ಕಾಶೀಯಾತ್ರೆಯಲ್ಲಿ ಅನುಸರಿಸಬೇಕಾದ ಕ್ರಮವನ್ನರುಹು.

೩೬. ವ್ಯಾಸನು ಹೇಳುತ್ತಾನೆ:—ಮಹಾಪ್ರಾಜ್ಞನಾದ ಲೋಮಹರ್ಷಣ ಮುನಿಯೆ! ಶ್ರದ್ಧೆಯಿಂದ ಕೇಳು. ಹೇಳುವೆನು. ಯಾತ್ರಿಕರು ಸಂತೋಷದಿಂದ ಮೊದಲು ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಆಲಿಸು.

೩೭. ಮೊದಲು ವಸ್ತ್ರಸಹಿತವಾಗಿ ಚಕ್ರಪುಷ್ಕರಿಣೀತೀರ್ಥದ ಜಲದಲ್ಲಿ

ಆದಿತ್ಯಂ ದ್ರೌಪದೀಂ ವಿಷ್ಣುಂ ದಂಡಪಾಣಿಂ ಮಹೇಶ್ವರಂ ।
ನಮಸ್ಕೃತ್ಯ ತತೋ ಗಚ್ಛೇದ್ದ್ರಷ್ಟುಂ ಢುಂಢಿವಿನಾಯಕಂ ॥ ೩೮ ॥
ಜ್ಞಾನವಾಪೀಮುಪಸ್ಪೃಶ್ಯ ನಂದಿಕೇಶಂ ತತೋಽರ್ಚಯೇತ್ ।
ತಾರಕೇಶಂ ತತೋಽಭ್ಯರ್ಚ್ಯ ಮಹಾಕಾಲೇಶ್ವರಂ ತತಃ ॥ ೩೯ ॥
ತತಃ ಪುನರ್ದಂಡಪಾಣಿಮಿತ್ಯೇಷಾ ಪಂಚತೀರ್ಥಿಕಾ ॥ ೪೦ ॥
ದೈನಂದಿನೀ ವಿಧಾತವ್ಯಾ ಮಹಾಫಲಮಭೀಪ್ಸುಭಿಃ ।
ತತೋ ವೈಶ್ವೇಶ್ವರೀ ಯಾತ್ರಾ ಕಾರ್ಯಾ ಸರ್ವಾರ್ಥಸಿದ್ಧಿದಾ ॥ ೪೧ ॥
ದ್ವಿಸಪ್ತಾಯತನಾನಾಂ ಚ ಕಾರ್ಯಾ ಯಾತ್ರಾ ಪ್ರಯತ್ನತಃ ।
ಕೃಷ್ಣಾಂ ಪ್ರತಿಪದಂ ಪ್ರಾಪ್ಯ ಭೂತಾವಧಿ ಯಥಾವಿಧಿ ॥ ೪೨ ॥
ಅಥವಾ ಪ್ರತಿಭೂತಂ ಚ ಕ್ಷೇತ್ರಸಿದ್ಧಿಮಭೀಪ್ಸುಭಿಃ ।
ತತ್ತತ್ತೀರ್ಥಕೃತಸ್ನಾನಸ್ತತ್ತಲ್ಲಿಂಗಕೃತಾರ್ಚನಃ ॥ ೪೩ ॥

---

ಮಿಂದು ದೇವತೆಗಳನ್ನೂ, ಪಿತೃಗಳನ್ನೂ, ಬ್ರಾಹ್ಮಣರನ್ನೂ, ಯಾಚಕರನ್ನೂ ತೃಪ್ತಿಪಡಿಸಬೇಕು.

೩೮. ಬಳಿಕ ಆದಿತ್ಯನನ್ನೂ, ದ್ರೌಪದಿಯನ್ನೂ, ವಿಷ್ಣುವನ್ನೂ, ದಂಡಪಾಣಿಯನ್ನೂ, ಮಹೇಶ್ವರನನ್ನೂ ನೋಡಿಕೊಂಡು ನಮಸ್ಕಾರಗಳನ್ನು ಮಾಡಿ ಢುಂಢಿವಿನಾಯಕನನ್ನು ನೋಡಲು ಬಳಿಕ ಹೋಗಬೇಕು.

೩೯. ಜ್ಞಾನವಾಪಿಯಲ್ಲಿ ಆಚಮನಾದಿಗಳನ್ನು ಮಾಡಿ ನಂದಿಕೇಶ್ವರನನ್ನು ಪೂಜಿಸಬೇಕು. ಬಳಿಕ ತಾರಕೇಶ್ವರನನ್ನೂ ಮಹಾಕಾಳೇಶ್ವರನನ್ನೂ ಪೂಜಿಸಬೇಕು.

೪೦. ಪುನಃ ದಂಡಪಾಣಿಯ ದರ್ಶನವನ್ನು ತೆಗೆದುಕೊಳ್ಳಬೇಕು. ಈ ಯಾತ್ರೆಗೆ ಪಂಚತೀರ್ಥಿಕಾ ಎಂದು ಹೆಸರು.

೪೧. ಮಹತ್ತರವಾದ ಸಂಪತ್ತನ್ನು ಅಪೇಕ್ಷಿಸುವವರು ಈ ಯಾತ್ರೆಯನ್ನು ಪ್ರತಿದಿನವೂ ಮಾಡಬೇಕು. ಬಳಿಕ ಸರ್ವಾಭೀಷ್ಟದಾಯಕವಾದ ವಿಶ್ವೇಶ್ವರ ಯಾತ್ರೆಯನ್ನು ಕೈಗೊಳ್ಳಬೇಕು.

೪೨. ಪ್ರತಿಮಾಸದ ಕೃಷ್ಣಪಕ್ಷದ ಪಾಡ್ಯಮಿಯ ಮೊದಲುಗೊಂಡು ಚತುರ್ದಶಿಯವರೆಗೂ ಪ್ರಯತ್ನಪೂರ್ವಕವಾಗಿ ಕಾಶಿಯಲ್ಲಿರುವ ಹದಿನಾಲ್ಕು ಆಯತನಗಳಿಗೂ ಯಾತ್ರೆಯನ್ನು ಮಾಡಬೇಕು.

೪೩. ಇಲ್ಲದಿದ್ದರೆ ಕ್ಷೇತ್ರಯಾತ್ರೆಯ ಫಲವನ್ನಪೇಕ್ಷಿಸುವವರು ಪ್ರತಿ ಚತುರ್ದಶಿಯಲ್ಲಾದರೂ ಈ ಕಾರ್ಯವನ್ನು ಮಾಡಬೇಕು. ಒಂದೊಂದು ತೀರ್ಥದಲ್ಲಿಯೂ ಸ್ನಾನವನ್ನು ಮಾಡಿಕೊಂಡು ಆಯಾ ಲಿಂಗಗಳಿಗೆ ಪೂಜೆಗಳನ್ನು ಮಾಡಬೇಕು.

ಮೌನೇನ ಯಾತ್ರಾಂ ಕುರ್ವಾಣಃ ಫಲಂ ಪ್ರಾಪ್ನೋತಿ ಯಾತ್ರಿಕಃ ।
ಓಂಕಾರಂ ಪ್ರಥಮಂ ಪಶ್ಯೇನ್ಮತ್ಸ್ಯೋದರ್ಯಾಂ ಕೃತೋದಕಃ ॥ ೪೪ ॥
ತ್ರಿವಿಷ್ಟಪಂ ಮಹಾದೇವಂ ತತೋ ವೈ ಕೃತ್ತಿವಾಸಸಂ ।
ರತ್ನೇಶಂ ಚಾಥ ಚಂದ್ರೇಶಂ ಕೇದಾರಂ ಚ ತತೋ ವ್ರಜೇತ್ ॥ ೪೫ ॥
ಧರ್ಮೇಶ್ವರಂ ಚ ವೀರೇಶಂ ಗಚ್ಛೇತ್ಕಾಮೇಶ್ವರಂ ತತಃ ।
ವಿಶ್ವಕರ್ಮೇಶ್ವರಂ ಚಾಥ ಮಣಿಕರ್ಣೇಶ್ವರಂ ತತಃ ॥ ೪೬ ॥
ಅವಿಮುಕ್ತೇಶ್ವರಂ ದೃಷ್ಟ್ವಾ ತತೋ ವಿಶ್ವೇಶಮರ್ಚಯೇತ್ ।
ಏಷಾ ಯಾತ್ರಾ ಪ್ರಯತ್ನೇನ ಕರ್ತವ್ಯಾ ಕ್ಷೇತ್ರವಾಸಿನಾ ॥ ೪೭ ॥
ಯಸ್ತು ಕ್ಷೇತ್ರಮುಷಿತ್ವಾ ತು ನೈತಾಂ ಯಾತ್ರಾಂ ಸಮಾಚರೇತ್ ।
ವಿಘ್ನಾಸ್ತಸ್ಯೋಪತಿಷ್ಠಂತೇ ಕ್ಷೇತ್ರೋಚ್ಚಾಟನಸೂಚಕಾಃ ॥ ೪೮ ॥
ಅಷ್ಟಾಯತನಯಾತ್ರಾsನ್ಯಾ ಕರ್ತವ್ಯಾ ವಿಘ್ನಶಾಂತಯೇ ।
ದಕ್ಷೇಶಃ ಪಾರ್ವತೀಶಶ್ಚ ತಥಾ ಪಾಶುಪತೀಶ್ವರಃ ॥ ೪೯ ॥
ಗಂಗೇಶೋ ನರ್ಮದೇಶಶ್ಚ ಗಭಸ್ತೀಶಃ ಸತೀಶ್ವರಃ ।
ಅಷ್ಟಮಸ್ತಾರಕೇಶಶ್ಚ ಪ್ರತ್ಯಷ್ಟಮಿ ವಿಶೇಷತಃ ॥ ೫೦ ॥

೪೪. ಇಂತು ಮೌನದಿಂದ ಯಾತ್ರೆಯನ್ನು ಮಾಡಿದ ಯಾತ್ರಿಕನು ಸಂಪೂರ್ಣ ಫಲವನ್ನು ಪಡೆಯುವನು. ಪ್ರಥಮದಲ್ಲಿ ಮತ್ಸ್ಯೋದರೀತೀರ್ಥದಲ್ಲಿ ಸ್ನಾನಮಾಡಿ ಓಂಕಾರೇಶ್ವರನನ್ನು ನೋಡಬೇಕು.

೪೫. ಬಳಿಕ ತ್ರಿವಿಷ್ಟಪೇಶ್ವರನನ್ನೂ, ಮಹಾದೇವೇಶ್ವರನನ್ನೂ, ಕೃತ್ತಿವಾಸೇಶ್ವರನನ್ನೂ, ರತ್ನೇಶ್ವರನನ್ನೂ, ಚಂದ್ರೇಶ್ವರನನ್ನೂ ನೋಡಿಕೊಂಡು ಕೇದಾರೇಶ್ವರನ ಬಳಿಗೆ ನಡೆಯಬೇಕು.

೪೬. ಧರ್ಮೇಶ್ವರ, ವೀರೇಶ್ವರ, ಕಾಮೇಶ್ವರರನ್ನು ನೋಡಿದ ಬಳಿಕ ವಿಶ್ವಕರ್ಮೇಶ್ವರನನ್ನೂ, ಮಣಿಕರ್ಣೇಶ್ವರನನ್ನೂ ಕ್ರಮವಾಗಿ ನೋಡಬೇಕು.

೪೭. ಅವಿಮುಕ್ತೇಶ್ವರನನ್ನು ನೋಡಿದ ಮೇಲೆ ವಿಶ್ವೇಶ್ವರನಿಗೆ ಪೂಜೆಯನ್ನೆಸಗಬೇಕು. ಕ್ಷೇತ್ರವಾಸಿಯಾದವನು ಪ್ರಯತ್ನದಿಂದ ನಿತ್ಯವೂ ಈ ಯಾತ್ರೆಯನ್ನು ಮಾಡಬೇಕು.

೪೮. ಯಾವನು ಕ್ಷೇತ್ರದಲ್ಲಿ ವಾಸಮಾಡುತ್ತ ಈ ಯಾತ್ರೆಯನ್ನು ಮಾಡುವುದಿಲ್ಲವೊ, ಅವನಿಗೆ ಕ್ಷೇತ್ರದಿಂದ ಹೊರಡುವುದಕ್ಕೆ ಸೂಚಕಗಳಾದ ಅನೇಕ ವಿಘ್ನಗಳು ಅಡಿಗಡಿಗೂ ಸಂಭವಿಸುತ್ತಿರುವುವು.

೪೯. ಅಥವಾ ವಿಘ್ನಗಳ ಪ್ರಶಮನಕ್ಕಾಗಿ ಮುಂದೆ ಹೇಳುವ ಎಂಟು ಲಿಂಗಗಳ ಆಯತನಗಳಿಗೆ ಯಾತ್ರೆಯನ್ನು ಮಾಡಬೇಕು. ದಕ್ಷೇಶ್ವರ, ಪಾರ್ವತೀಶ್ವರ, ಮತ್ತು ಪಶುಪತೀಶ್ವರ.

೫೦. ಗಂಗೇಶ್ವರ, ನರ್ಮದೇಶ್ವರ, ಗಭಸ್ತೀಶ್ವರ, ಸತೀಶ್ವರ. ಎಂಟನೆಯದೇ

ದೃಷ್ಟ್ವಾನ್ಯೇತಾನಿ ಲಿಂಗಾನಿ ಮಹಾಪಾಪೋಪಶಾಂತಯೇ ।
ಅಪರಾಪಿ ಶುಭಾ ಯಾತ್ರಾ ಯೋಗಕ್ಷೇಮಕರೀ ಸದಾ ।
ಸರ್ವವಿಘ್ನೋಪಹಂತ್ರೀ ಚ ಕರ್ತವ್ಯಾ ಕ್ಷೇತ್ರವಾಸಿಭಿಃ ॥ ೫೧ ॥
ಶೈಲೇಶಂ ಪ್ರಥಮಂ ವೀಕ್ಷ್ಯ ವರಣಾಸ್ನಾನಪೂರ್ವಕಂ ।
ಸ್ನಾನಂ ತು ಸಂಗಮೇ ಕೃತ್ವಾ ದ್ರಷ್ಟವ್ಯಃ ಸಂಗಮೇಶ್ವರಃ ॥ ೫೨ ॥
ಸ್ವಲೀನತೀರ್ಥೇ ಸುಸ್ನಾತಃ ಪಶ್ಯೇತ್ಸ್ವಲೀನಮೀಶ್ವರಂ ।
ಸ್ನಾತ್ವಾ ಮಂದಾಕಿನೀತೀರ್ಥೇ ದ್ರಷ್ಟವ್ಯೋ ಮಧ್ಯಮೇಶ್ವರಃ ॥ ೫೩ ॥
ಪಶ್ಯೇದ್ಧಿರಣ್ಯಗರ್ಭೇಶಂ ತತ್ರ ತೀರ್ಥೇ ಕೃತೋದಕಃ ।
ಮಣಿಕರ್ಣ್ಯಾಂ ತತಃ ಸ್ನಾತ್ವಾ ಪಶ್ಯೇದೀಶಾನಮೀಶ್ವರಂ ॥ ೫೪ ॥
ತತಃ ಕೂಪಮುಪಸ್ಪೃಶ್ಯ ಗೋಪ್ರೇಕ್ಷಮವಲೋಕಯೇತ್ ।
ಕಪಿಲೇಯಹ್ರದೇ ಸ್ನಾತ್ವಾ ವೀಕ್ಷೇತ ವೃಷಭಧ್ವಜಂ ॥ ೫೫ ॥
ಉಪಶಾಂತಶಿವಂ ಪಶ್ಯೇತ್ತತ್ಕೂಪವಿಹಿತೋದಕಃ ।
ಪಂಚಚೂಡಾಹ್ರದೇ ಸ್ನಾತ್ವಾ ಜ್ಯೇಷ್ಠಸ್ಥಾನಂ ತತೋಽರ್ಚಯೇತ್ ॥ ೫೬ ॥

---

ತಾರಕೇಶ್ವರಲಿಂಗವು. ವಿಘ್ನಗಳಿಗೆ ಸಿಕ್ಕಿರುವವನು ಪ್ರತಿಯೊಂದು ಅಷ್ಟಮಿಯಲ್ಲಿಯೂ ಇವುಗಳನ್ನು ನೋಡಬೇಕು.

೫೧. ಮಹಾಪಾತಕಗಳ ಪ್ರಶಾಂತಿಗಾಗಿಯೂ ಈ ಲಿಂಗಗಳ ದರ್ಶನವನ್ನು ಮಾಡಬೇಕು. ಕ್ಷೇತ್ರವಾಸಿಗಳಾದವರು ಶುಭವೂ, ಯೋಗಕ್ಷೇಮಕಾರಕವೂ, ಸರ್ವವಿಘ್ನೋಪಶಾಂತಿಗೆ ಕಾರಣವೂ ಆದ ಮತ್ತೊಂದು ಯಾತ್ರೆಯನ್ನೂ ನಡೆಸಬಹುದು.

೫೨. ವರಣಾನದಿಯಲ್ಲಿ ಸ್ನಾನಮಾಡಿಕೊಂಡು ಶೈಲೇಶ್ವರನನ್ನು ಮೊದಲು ನೋಡುವುದು. ಬಳಿಕ ಗಂಗಾವರಣೆಯರ ಸಂಗಮದಲ್ಲಿ ಸ್ನಾನವನ್ನು ಮಾಡಿ ಸಂಗಮೇಶ್ವರನ ದರ್ಶನವನ್ನು ತೆಗೆದುಕೊಳ್ಳುವುದು.

೫೩. ಸ್ವಲೀನತೀರ್ಥದಲ್ಲಿ ಮಿಂದು ಸ್ವಲೀನೇಶ್ವರನನ್ನು ನೋಡಿದ ಬಳಿಕ ಮಂದಾಕಿನೀ ತೀರ್ಥದಲ್ಲಿ ಸ್ನಾನಮಾಡಿ ಮಧ್ಯಮೇಶ್ವರನನ್ನು ನೋಡುವುದು.

೫೪–೫೫. ಬಳಿಕ ಹಿರಣ್ಯತೀರ್ಥದಲ್ಲಿ ಆಚಮನಾದಿಗಳನ್ನುಮಾಡಿ ಹಿರಣ್ಯಗರ್ಭೇಶ್ವರನನ್ನು ಕಂಡು, ಮಣಿಕರ್ಣಿಕೆಯಲ್ಲಿ ಸ್ನಾನವನ್ನುಮಾಡಿ ಈಶಾನೇಶ್ವರನನ್ನು ನೋಡಬೇಕು. ಬಳಿಕ ಗೋಪ್ರೇಕ್ಷಕೂಪದಲ್ಲಿ ಮಿಂದು ಗೋಪ್ರೇಕ್ಷೇಶ್ವರನನ್ನು ನೋಡಬೇಕು. ಕಾಪಿಲತೀರ್ಥದಲ್ಲಿ ಸ್ನಾನವನ್ನುಮಾಡಿ ವೃಷಭಧ್ವಜೇಶ್ವರನನ್ನು ದರ್ಶನಮಾಡಬೇಕು.

೫೬. ಉಪಶಾಂತಶಿವಕೂಪದಲ್ಲಿ ಉದಕಕ್ರಿಯೆಗಳನ್ನುಮಾಡಿ ಅಲ್ಲಿರುವ

**ಚತುಃಸಮುದ್ರಕೂಪೇ ತು ಸ್ನಾತ್ವಾ ದೇವಂ ಸಮರ್ಚಯೇತ್ ।**
**ದೇವಸ್ಯಾಗ್ರೇ ತು ಯಾ ವಾಪೀ ತತ್ರೋಪಸ್ಪರ್ಶನೇ ಕೃತೇ ॥ ೫೭ ॥**
**ಶುಕ್ರೇಶ್ವರಂ ತತಃ ಪಶ್ಯೇತ್ತತ್ಕೂಪವಿಹಿತೋದಕಃ ।**
**ದಂಡಖಾತೇ ತತಃ ಸ್ನಾತ್ವಾ ವ್ಯಾಘ್ರೇಶಂ ಪೂಜಯೇತ್ತತಃ ॥ ೫೮ ॥**
**ಶೌನಕೇಶ್ವರಕುಂಡೇ ತು ಸ್ನಾನಂ ಕೃತ್ವಾ ತತೋಽರ್ಚಯೇತ್ ॥ ೫೯ ॥**
**ಜಂಬುಕೇಶಂ ಮಹಾಲಿಂಗಂ ಕೃತ್ವಾ ಯಾತ್ರಾಮಿಮಾಂ ನರಃ ।**
**ಕ್ವಚಿನ್ನ ಜಾಯತೇ ಭೂಯಃ ಸಂಸಾರೇ ದುಃಖಸಾಗರೇ ॥ ೬೦ ॥**
**ಸಮಾರಭ್ಯ ಪ್ರತಿಪದಂ ಯಾವತ್ಕೃಷ್ಣಾ ಚತುರ್ದಶೀ ।**
**ಏತತ್ಕ್ರಮೇಣ ಕರ್ತವ್ಯಾನ್ಯೇತದಾಯತನಾನಿ ವೈ ॥ ೬೧ ॥**
**ಇಮಾಂ ಯಾತ್ರಾಂ ನರಃ ಕೃತ್ವಾ ನ ಭೂಯೋಽಪ್ಯಭಿಜಾಯತೇ ।**
**ಅನ್ಯಾ ಯಾತ್ರಾ ಪ್ರಕರ್ತವ್ಯೈಕಾದಶಾಯತನೋದ್ಭವಾ ॥ ೬೨ ॥**
**ಅಗ್ನೀಧ್ರಕುಂಡೇ ಸುಸ್ನಾತಃ ಪಶ್ಯೇದಗ್ನೀಧ್ರಮೀಶ್ವರಂ ।**
**ಉರ್ವಶೀಶಂ ತತೋ ಗಚ್ಛೇತ್ತತಸ್ತು ನಕುಲೀಶ್ವರಂ ॥ ೬೩ ॥**

---

ಲಿಂಗವನ್ನು ನೋಡಿಕೊಂಡು, ಪಂಚಚೂಡಾಹ್ರದದಲ್ಲಿ ಸ್ನಾನಮಾಡಿ ಜ್ಯೇಷ್ಠ ಸ್ನಾನಕ್ಕೆ ಪೂಜೆಯನ್ನುಮಾಡಬೇಕು.

೫೭. ಚತುಸ್ಸಮುದ್ರಕೂಪದಲ್ಲಿ ಸ್ನಾನವನ್ನುಮಾಡಿದ ಬಳಿಕ ಆ ತೀರ್ಥವು ಯಾವ ದೇವನ ಸಮ್ಮುಖದಲ್ಲಿಯೋ ಆ ಲಿಂಗಕ್ಕೆ ಅರ್ಚನೆಯನ್ನು ಮಾಡಬೇಕು.

೫೮. ಶುಕ್ರೇಶ್ವರಕೂಪದಲ್ಲಿ ಜಲಕ್ರಿಯೆಯನ್ನು ಮುಗಿಸಿಕೊಂಡಮೇಲೆ ಶುಕ್ರೇಶ್ವರಲಿಂಗವನ್ನು ನೋಡಬೇಕು. ಬಳಿಕ ದಂಡಖಾತದಲ್ಲಿ ಸ್ನಾನಮಾಡಿ ವ್ಯಾಘ್ರೇಶ್ವರನನ್ನು ಪೂಜಿಸಬೇಕು.

೫೯–೬೦. ಶೌನಕೇಶ್ವರಕುಂಡದಲ್ಲಿ ಸ್ನಾನವನ್ನು ಮಾಡಿಕೊಂಡು ಜಂಬುಕೇಶ್ವರಮಹಾಲಿಂಗವನ್ನು ಅರ್ಚಿಸಬೇಕು. ಈ ಯಾತ್ರೆಯನ್ನುಮಾಡಿದ ನರನು ಪುನಃ ದುಃಖಬಹುಳವಾದ ಈ ಸಂಸಾರಸಮುದ್ರದಲ್ಲಿ ಜನ್ಮವನ್ನು ತಾಳುವುದಿಲ್ಲ.

೬೧. ಪಾಡ್ಯಮಿಯ ಮೊದಲು ಕೃಷ್ಣಪಕ್ಷದ ಚತುರ್ದಶಿಯವರೆಗೂ ಈ ಹದಿನಾಲ್ಕು ಲಿಂಗಗಳ ಯಾತ್ರೆಯನ್ನು ಕ್ರಮವಾಗಿ ನಡೆಸಬೇಕು.

೬೨. ಈ ಯಾತ್ರೆಯನ್ನುಮಾಡಿದ ಮಾನವನಿಗೆ ಪುನರ್ಜನ್ಮವಿಲ್ಲ. ಇದಲ್ಲದೆ ಹನ್ನೊಂದು ಲಿಂಗಗಳನ್ನು ನೋಡುವ ಮತ್ತೊಂದು ಯಾತ್ರೆಯನ್ನಾದರೂ ಮಾಡಬಹುದು.

೬೩. ಅಗ್ನೀಧ್ರಕುಂಡದಲ್ಲಿ ಸ್ನಾನವನ್ನುಮಾಡಿ ಅಗ್ನೀಧ್ರೇಶ್ವರನನ್ನು ಮೊದಲು ನೋಡುವುದು. ಬಳಿಕ ಊರ್ವಶೀಶ್ವರನನ್ನೂ ಆಮೇಲೆ ನಕುಲೀಶ್ವರನನ್ನೂ ನೋಡುವುದು.

ಆಷಾಢೀಶಂ ತತೋ ದೃಷ್ಟ್ವಾ ಭಾರಭೂತೇಶ್ವರಂ ತತಃ ।
ಲಾಂಗಲೀಶಮಥಾಲೋಕ್ಯ ತತಸ್ತು ತ್ರಿಪುರಾಂತಕಂ ॥ ೬೪ ॥
ತತೋ ಮನಃಪ್ರಕಾಮೇಶಂ ಪ್ರೀತಿಕೇಶಮಥೋ ವ್ರಜೇತ್ ।
ಮದಾಲಸೇಶ್ವರಂ ತಸ್ಮಾತ್ತಿಲಪರ್ಣೇಶ್ವರಂ ತತಃ ॥ ೬೫ ॥
ಯಾತ್ರೈಕಾದಶಲಿಂಗಾನಾಮೇಷಾ ಕಾರ್ಯಾ ಪ್ರಯತ್ನತಃ ।
ಇಮಾಂ ಯಾತ್ರಾಂ ಪ್ರಕುರ್ವಾಣೋ ರುದ್ರತ್ವಂ ಪ್ರಾಪ್ನುಯಾನ್ನರಃ ॥ ೬೬ ॥
ಅತಃ ಪರಂ ಪ್ರವಕ್ಷ್ಯಾಮಿ ಗೌರೀಯಾತ್ರಾಮನುತ್ತಮಾಂ ।
ಶುಕ್ಲಪಕ್ಷೇ ತೃತೀಯಾಯಾಂ ಯಾ ಯಾತ್ರಾ ವಿಶ್ವಗೃದ್ಧಿದಾ ॥ ೬೭ ॥
ಗೋಪ್ರೇಕ್ಷತೀರ್ಥೇ ಸುಸ್ನಾಯ ಮುಖನಿರ್ಮಾಲಿಕಾಂ ವ್ರಜೇತ್ ।
ಜ್ಯೇಷ್ಠವಾಪ್ಯಾಂ ನರಃ ಸ್ನಾತ್ವಾ ಜ್ಯೇಷ್ಠಾಂ ಗೌರೀಂ ಸಮರ್ಚಯೇತ್ ॥
ಸೌಭಾಗ್ಯಗೌರೀ ಸಂಪೂಜ್ಯ ಜ್ಞಾನವಾಪ್ಯಾಂ ಕೃತೋದಕಃ ।
ತತಃ ಶೃಂಗಾರಗೌರೀಂ ಚ ತತ್ರೈವ ಚ ಕೃತೋದಕಃ ॥ ೬೯ ॥
ಸ್ನಾತ್ವಾ ವಿಶಾಲಗಂಗಾಯಾಂ ವಿಶಾಲಾಕ್ಷೀಂ ತತೋ ವ್ರಜೇತ್ ।
ಸುಸ್ನಾತೋ ಲಲಿತಾತೀರ್ಥೇ ಲಲಿತಾಮರ್ಚಯೇತ್ತತಃ ॥ ೭೦ ॥

---

೬೪. ಬಳಿಕ ಕ್ರಮವಾಗಿ ಆಷಾಢೀಶ್ವರ, ಭಾರಭೂತೇಶ್ವರ, ಲಾಂಗಲೀಶ್ವರ ಮತ್ತು ತ್ರಿಪುರಾಂತಕೇಶ್ವರ ಮಹಾಲಿಂಗಗಳನ್ನು ನೋಡಬೇಕು.

೬೫. ಮನಃಕಾಮೇಶ್ವರನನ್ನು ನೋಡಿ ಪ್ರೀತಿಕೇಶ್ವರನ ಬಳಿಗೆ ಹೋಗಬೇಕು. ಮದಾಲಸೇಶ್ವರನನ್ನೂ ಅಲ್ಲಿಂದ ತಿಲಪರ್ಣೇಶ್ವರನನ್ನೂ ನೋಡಬೇಕು.

೬೬. ಈ ಹನ್ನೊಂದು ಮಹಾಲಿಂಗಗಳ ಯಾತ್ರೆಯನ್ನಾದರೂ ಪ್ರಯತ್ನದಿಂದ ಪ್ರತಿಯೊಬ್ಬನೂ ಮಾಡಲೇಬೇಕು. ಈ ಯಾತ್ರೆಯನ್ನುಮಾಡಿದ ನರನು ರುದ್ರಪದವಿಯನ್ನು ಪಡೆಯುವನು.

೬೭. ಇನ್ನುಮೇಲೆ ಅತ್ಯುತ್ತಮವೆನಿಸಿದ ಗೌರೀಯಾತ್ರೆಯೆಂಬುದನ್ನು ವಿವರಿಸುವೆನು. ಈ ಯಾತ್ರೆಯನ್ನು ಶುಕ್ಲಪಕ್ಷದ ತೃತೀಯೆಯಲ್ಲಿಮಾಡಲು ಸರ್ವಸಂಪತ್ಸಮೃದ್ಧಿಯೊದಗುವುದು.

೬೮. ಗೋಪ್ರೇಕ್ಷತೀರ್ಥದಲ್ಲಿ ಸ್ನಾನವನ್ನುಮಾಡಿಕೊಂಡು ಮುಖನಿರ್ಮಾಲಿಕಾದೇವಿಯನ್ನು ನೋಡಬೇಕು. ಬಳಿಕ ಜ್ಯೇಷ್ಠವಾಪಿಯಲ್ಲಿ ಸ್ನಾನಮಾಡಿ ಜ್ಯೇಷ್ಠಾಗೌರಿಯ ಪೂಜೆಯನ್ನು ಮಾಡಬೇಕು.

೬೯. ಜ್ಞಾನವಾಪಿಯಲ್ಲಿ ಮಿಂದು ಸೌಭಾಗ್ಯಗೌರಿಯನ್ನರ್ಚಿಸಿ ಪುನಃ ಅಲ್ಲಿಯೇ ಸ್ನಾನಮಾಡಿಕೊಂಡು ಶೃಂಗಾರ ಗೌರಿಯನ್ನು ಸೇವಿಸಬೇಕು.

೭೦. ವಿಶಾಲಗಂಗೆಯಲ್ಲಿ ಸ್ನಾನವನ್ನುಮಾಡಿ ವಿಶಾಲಾಕ್ಷಿಯ ಬಳಿಗೆ ಹೋಗಬೇಕು. ಬಳಿಕ ಲಲಿತಾತೀರ್ಥದಲ್ಲಿ ಸ್ನಾನವನ್ನು ಮುಗಿಸಿಕೊಂಡು ಲಲಿತಾದೇವಿಯನ್ನು ಪೂಜಿಸಬೇಕು.

ಸ್ನಾತ್ವಾ ಭವಾನೀತೀರ್ಥೇಽಥ ಭವಾನೀಂ ಪರಿಪೂಜಯೇತ್ ।
ಮಂಗಲಾ ಚ ತತೋಽಭ್ಯರ್ಚ್ಯಾ ಬಿಂದುತೀರ್ಥಕೃತೋದಕೈಃ ॥ ೭೧ ॥
ತತೋ ಗಚ್ಛೇನ್ಮಹಾಲಕ್ಷ್ಮೀಂ ಸ್ಥಿರಲಕ್ಷ್ಮೀಸಮೃದ್ಧಯೇ ।
ಇಮಾಂ ಯಾತ್ರಾಂ ನರಃ ಕೃತ್ವಾ ಕ್ಷೇತ್ರೇಽಸ್ಮಿನ್ಮುಕ್ತಿಜನ್ಮನಿ ॥ ೭೨ ॥
ನ ದುಃಖೈರಭಿಭೂಯೇತ ಇಹಾಮುತ್ರಾಪಿ ಕುತ್ರಚಿತ್ ।
ಕುರ್ಯಾತ್ಪ್ರತಿಚತುರ್ಥೀಹ ಯಾತ್ರಾಂ ವಿಘ್ನೇಶಿತುಃ ಸದಾ ॥ ೭೩ ॥
ಬ್ರಾಹ್ಮಣೇ ಯಸ್ತದುದ್ದೇಶಾದ್ದೇಯಾ ವೈ ಮೋದಕಾ ಮುದೇ ।
ಭೌಮೇ ಭೈರವಯಾತ್ರಾ ಚ ಕಾರ್ಯಾ ಪಾತಕಹಾರಿಣೀ ॥ ೭೪ ॥
ರವಿವಾರೇ ರವೇರ್ಯಾತ್ರಾ ಷಷ್ಠ್ಯಾಂ ವಾ ರವಿಸಂಯುಜಿ ।
ತಥೈವ ರವಿಸಪ್ತಮ್ಯಾಂ ಸರ್ವವಿಘ್ನೋಪಶಾಂತಯೇ ॥ ೭೫ ॥
ನವಮ್ಯಾಮಥ ವಾಷ್ಟಮ್ಯಾಂ ಚಂಡೀಯಾತ್ರಾ ಶುಭಾ ಮತಾ ।
ಅಂತರ್ಗೃಹಸ್ಯ ವೈ ಯಾತ್ರಾ ಕರ್ತವ್ಯಾ ಪ್ರತಿವಾಸರಂ ॥ ೭೬ ॥

---

೭೧. ಭವಾನೀತೀರ್ಥದಲ್ಲಿ ಸ್ನಾನಮಾಡಿಕೊಂಡು ಭವಾನೀದೇವಿಯನ್ನು ಪೂಜಿಸಬೇಕು. ಬಿಂದುತೀರ್ಥದಲ್ಲಿ ಆಚಮನಾದಿಗಳನ್ನುಮಾಡಿ ಮಂಗಳಾದೇವಿಯನ್ನು ಅರ್ಚಿಸಬೇಕು.

೭೨–೭೩. ಶಾಶ್ವತೈಶ್ವರ್ಯಕಾಮಿಗಳಾದವರು ಬಳಿಕ ಮಹಾಲಕ್ಷ್ಮಿಯನ್ನು ನೋಡಲು ಹೋಗಬೇಕು. ಮೋಕ್ಷಕ್ಕೆ ಸಾಧನವೆನಿಸಿದ ಈ ಕ್ಷೇತ್ರದಲ್ಲಿ ಈ ಮಹಾಯಾತ್ರೆಯನ್ನು ಮಾಡಿದ ಮನುಜನು ಇಹಲೋಕದಲ್ಲಿಯೂ ಪರಲೋಕಗಳಲ್ಲಿಯೂ ಎಂದಿಗೂ ದುಃಖಭಾಜನನಾಗುವುದಿಲ್ಲ. ಪ್ರತಿ ಚತುರ್ಥಿಯಲ್ಲಿಯೂ ಸಂತೋಷದಿಂದ ಸಕಲವಿನಾಯಕರಿಗೂ ಯಾತ್ರೆಯನ್ನು ಮಾಡಬೇಕು.

೭೪. ಆ ಯಾತ್ರೆಯನ್ನು ಮಾಡಿದ ಬಳಿಕ ಸಂಕಲ್ಪಿಸಿದಾತನು ಬ್ರಾಹ್ಮಣರಿಗೆ ಮೋದಕಗಳನ್ನು ದಾನಮಾಡಿ ಸಂತೋಷಗೊಳಿಸಬೇಕು. ಪ್ರತಿ ಮಂಗಳವಾರದಲ್ಲಿ ಭೈರವರಿಗೆ ಯಾತ್ರೆಯನ್ನು ಮಾಡಲು ಪಾತಕಗಳು ನಾಶವಾಗುವುವು.

೭೫. ಸಕಲವಿಘ್ನಗಳ ಉಪಶಮನಕ್ಕಾಗಿ ಪ್ರತಿ ಭಾನುವಾರದಲ್ಲಾಗಲಿ, ಭಾನುವಾರದ ದಿನ, ಷಷ್ಠಿ ಅಥವ ಸಪ್ತಮಿಗಳು ಬಂದ ದಿನಗಳಲ್ಲಾಗಲಿ ಸಮಸ್ತ ಆದಿತ್ಯರ ಆಲಯಗಳಿಗೆ ಯಾತ್ರೆಯನ್ನು ಮಾಡಬೇಕು.

೭೬. ಚಂಡಿಯರ ಯಾತ್ರೆಯನ್ನು ಮಾಡಲು ನವಮಿ ಮತ್ತು ಅಷ್ಟಮಿ ತಿಥಿಗಳು ಶುಭಕರಗಳೆಂದು ಹೇಳುವರು. ಅಂತರ್ಗೃಹದ ಯಾತ್ರೆಯನ್ನುಮಾತ್ರ ನಿತ್ಯವೂ ಮಾಡುತ್ತಿರಬೇಕು.

ಪ್ರಾತಃಸ್ನಾನಂ ವಿಧಾಯಾದೌ ನತ್ವಾ ಪಂಚವಿನಾಯಕಾನ್ ।
ನಮಸ್ಕೃತ್ವಾಥ ವಿಶ್ವೇಶಂ ಮಣಿಕರ್ಣೀಶಮರ್ಚಯೇತ್ ॥ ೭೭ ॥
ಅಂತರ್ಗೃಹಸ್ಯ ಯಾತ್ರಾಂ ವೈ ಕರಿಷ್ಯೇಽಘೌಘಶಾಂತಯೇ ।
ಗೃಹೀತ್ವಾ ನಿಯಮಂ ಚೇತಿ ಗತ್ವಾಥ ಮಣಿಕರ್ಣಿಕಾಂ ॥ ೭೮ ॥
ಸ್ನಾತ್ವಾ ಮೌನೇನ ಚಾಗತ್ಯ ಮಣಿಕರ್ಣೀಶಮರ್ಚಯೇತ್ ।
ಕಂಬಲಾಶ್ವತರೌ ನತ್ವಾ ವಾಸುಕೀಶಂ ಪ್ರಣಮ್ಯ ಚ ॥ ೭೯ ॥
ಪರ್ವತೇಶಂ ತತೋ ದೃಷ್ಟ್ವಾ ಗಂಗಾಕೇಶವಮಪ್ಯಥ ।
ತತಸ್ತು ಲಲಿತಾಂ ದೃಷ್ಟ್ವಾ ಜರಾಸಂಧೇಶ್ವರಂ ತತಃ ॥ ೮೦ ॥
ತತೋ ವೈ ಸೋಮನಾಥಂ ಚ ವಾರಾಹಂ ಚ ತತೋ ವ್ರಜೇತ್ ।
ಬ್ರಹ್ಮೇಶ್ವರಂ ತತೋ ನತ್ವಾ ನತ್ವಾಗಸ್ತೀಶ್ವರಂ ತತಃ ॥ ೮೧ ॥
ಕಶ್ಯಪೇಶಂ ಸಮಸ್ಕೃತ್ಯ ಹರಿಕೇಶವನಂ ತತಃ ।
ವೈದ್ಯನಾಥಂ ತತೋ ದೃಷ್ಟ್ವಾ ಧ್ರುವೇಶಮಥ ವೀಕ್ಷ್ಯ ಚ ॥ ೮೨ ॥
ಗೋಕರ್ಣೇಶ್ವರಮಭ್ಯರ್ಚ್ಯ ಹಾಟಕೇಶಮಥೋ ವ್ರಜೇತ್ ।
ಅಸ್ಥಿಕ್ಷೇಪತಡಾಗೇ ಚ ದೃಷ್ಟ್ವಾ ವೈ ಕೀಕಸೇಶ್ವರಂ ॥ ೮೩ ॥

---

೭೭. ಪ್ರಾತಃಸ್ನಾನವನ್ನು ಮಾಡಿಕೊಂಡು ಐದು ವಿನಾಯಕರನ್ನೂ ನಮಸ್ಕರಿಸಿ ಬಳಿಕ ವಿಶ್ವೇಶ್ವರನಿಗೆ ಮಣಿದು ಮುಕ್ತಿಮಂಟಪವನ್ನು ಸೇರಬೇಕು.

೭೮. ಅಲ್ಲಿ "ನನ್ನ ಪಾಪರಾಶಿಯ ಪರಿಹಾರಕ್ಕಾಗಿ ಅಂತರ್ಗೃಹಯಾತ್ರೆಯನ್ನು ಮಾಡುತ್ತೇನೆ" ಎಂದು ಸಂಕಲ್ಪವನ್ನುಮಾಡಿ ಮಣಿಕರ್ಣಿಕಾತೀರ್ಥಕ್ಕೆ ಹೋಗಬೇಕು.

೭೯. ಅದರಲ್ಲಿ ಸ್ನಾನವನ್ನುಮಾಡಿ ಮೌನವನ್ನವಲಂಬಿಸಿ ಮಣಿಕರ್ಣೀಶ್ವರನನ್ನು ಪೂಜಿಸಬೇಕು. ಬಳಿಕ ಕಂಬಳಾಶ್ವತರರನ್ನೂ ವಾಸುಕೀಶ್ವರನನ್ನೂ ಪ್ರಣಾಮಗಳಿಂದ ಸೇವಿಸಬೇಕು.

೮೦. ಬಳಿಕ ಕ್ರಮವಾಗಿ ಪರ್ವತೇಶ್ವರ, ಗಂಗಾಕೇಶವ, ಲಲಿತಾದೇವಿ ಮತ್ತು ಜರಾಸಂಧೇಶ್ವರರ ದರ್ಶನವನ್ನು ಮಾಡಬೇಕು.

೮೧. ಸೋಮನಾಥೇಶ್ವರನನ್ನು ನೋಡಿ ವಾರಾಹೇಶ್ವರನ ಬಳಿಗೆ ಹೋಗಬೇಕು. ಬಳಿಕ ಬ್ರಹ್ಮೇಶ್ವರನಿಗೂ ಅಗಸ್ತ್ಯೇಶ್ವರನಿಗೂ ನಮಸ್ಕಾರ ಮಾಡಬೇಕು.

೮೨. ಕಶ್ಯಪೇಶ್ವರನಿಗೆ ಪ್ರಣಾಮವನ್ನುಮಾಡಿ ಹರಿಕೇಶವನವನ್ನು ನೋಡಿದ ಬಳಿಕ ವೈದ್ಯನಾಥೇಶ್ವರನನ್ನೂ, ಧ್ರುವೇಶ್ವರನನ್ನೂ ನೋಡಬೇಕು.

೮೩. ಬಳಿಕ ಗೋಕರ್ಣೇಶ್ವರನಿಗೆ ಪೂಜೆಯನ್ನೆಸಗಿ ಹಾಟಕೇಶ್ವರನಲ್ಲಿಗೆ ಹೋಗಬೇಕು. ಬಳಿಕ ಅಸ್ಥಿಕ್ಷೇಪತಟಾಕದ ಬಳಿಯಿರುವ ಕೀಕಸೇಶ್ವರನನ್ನು ನೋಡಬೇಕು.

ಭಾರಭೂತಂ ತತೋ ನತ್ವಾ ಚಿತ್ರಗುಪ್ತೇಶ್ವರಂ ತತಃ ।
ಚಿತ್ರಘಂಟಾಂ ಪ್ರಣಮ್ಯಾಥ ತತಃ ಪಶುಪತೀಶ್ವರಂ ॥ ೮೪ ॥
ಪಿತಾಮಹೇಶ್ವರಂ ಗತ್ವಾ ತತಸ್ತು ಕಲಶೇಶ್ವರಂ ।
ಚಂದ್ರೇಶಸ್ತ್ವಥ ವೀರೇಶೋ ವಿದ್ಯೇಶೋಽಗ್ನೀಶ ಏವ ಚ ॥ ೮೫ ॥
ನಾಗೇಶ್ವರೋ ಹರಿಶ್ಚಂದ್ರಶ್ಚಿಂತಾಮಣಿವಿನಾಯಕಃ ।
ಸೇನಾವಿನಾಯಕಶ್ಚಾಥ ದ್ರಷ್ಟವ್ಯಃ ಸರ್ವವಿಘ್ನಹೃತ್ ॥ ೮೬ ॥
ವಸಿಷ್ಠವಾಮದೇವೌ ಚ ಮೂರ್ತಿರೂಪಧರಾವುಭೌ ।
ದ್ರಷ್ಟವ್ಯೌ ಯತ್ನತಃ ಕಾಶ್ಯಾಂ ಮಹಾವಿಘ್ನವಿನಾಶಿನೌ ॥ ೮೭ ॥
ಸೀಮಾವಿನಾಯಕಂ ಚಾಥ ಕರುಣೇಶಂ ತತೋ ವ್ರಜೇತ್ ।
ತ್ರಿಸಂಧ್ಯೇಶೋ ವಿಶಾಲಾಕ್ಷೀ ಧರ್ಮೇಶೋ ವಿಶ್ವಬಾಹುಕಾ ॥ ೮೮ ॥
ಆಶಾವಿನಾಯಕಶ್ಚಾಥ ವೃದ್ಧಾದಿತ್ಯಸ್ತತಃ ಪುನಃ ।
ಚತುರ್ವಕ್ತ್ರೇಶ್ವರಂ ಲಿಂಗಂ ಬ್ರಾಹ್ಮೇಶಸ್ತು ತತಃ ಪರಃ ॥ ೮೯ ॥
ತತೋ ಮನಃಪ್ರಕಾಮೇಶ ಈಶಾನೇಶಸ್ತತಃ ಪರಂ ।
ಚಂಡೀಚಂಡೀಶ್ವರೌ ದೃಷ್ಟ್ವಾ ಭವಾನೀಶಂಕರೌ ತತಃ ॥ ೯೦ ॥

---

೮೪. ಬಳಿಕ ಭಾರಭೂತೇಶ್ವರ, ಚಿತ್ರಗುಪ್ತೇಶ್ವರ, ಚಿತ್ರಘಂಟಾದೇವಿ, ಪಶುಪತೀಶ್ವರ ಇವರಿಗೆ ನಮಸ್ಕಾರ ಮಾಡಬೇಕು.

೮೫. ಪಿತಾಮಹೇಶ್ವರನನ್ನೂ, ಬಳಿಕ ಕಳಶೇಶ್ವರನನ್ನೂ, ಚಂದ್ರೇಶ್ವರ, ವೀರೇಶ್ವರ, ವಿದ್ಯೇಶ್ವರ, ಅಗ್ನೀಶ್ವರರನ್ನೂ ನೋಡಿಕೊಂಡು ಬರಬೇಕು.

೮೬. ನಾಗೇಶ್ವರ, ಹರಿಶ್ಚಂದ್ರೇಶ್ವರ, ಚಿಂತಾಮಣಿವಿನಾಯಕ, ಮತ್ತು ಸಕಲವಿಘ್ನಗಳನ್ನು ನಿವಾರಣೆಮಾಡುವ ಸೇನಾವಿನಾಯಕ ಇವರುಗಳನ್ನು ಕ್ರಮವಾಗಿ ನೋಡಬೇಕು.

೮೭. ಮುಖ್ಯವಾಗಿ ಕಾಶೀಕ್ಷೇತ್ರದಲ್ಲಿ ಎಲ್ಲ ಮಹಾವಿಘ್ನಗಳನ್ನೂ ನಾಶಗೊಳಿಸುವವರೆಂದು ಪ್ರಸಿದ್ಧರಾದವರೂ, ಮೂರ್ತಿಗಳಾಗಿ ನಿಂತಿರುವವರೂ ಆದ ವಸಿಷ್ಠವಾಮದೇವರನ್ನು ಪ್ರಯತ್ನಪೂರ್ವಕವಾಗಿ ನೋಡಲೇಬೇಕು.

೮೮. ಸೀಮಾವಿನಾಯಕ, ಕರುಣೇಶ್ವರ, ತ್ರಿಸಂಧ್ಯೇಶ್ವರ, ವಿಶಾಲಾಕ್ಷಿ, ಧರ್ಮೇಶ್ವರ, ವಿಶ್ವಬಾಹುಕಾದೇವಿಗಳನ್ನು ನೋಡುವುದಕ್ಕಾಗಿ ಹೋಗಬೇಕು.

೮೯. ಆಶಾವಿನಾಯಕ, ಆಮೇಲೆ ವೃದ್ಧಾದಿತ್ಯ, ಚತುರ್ವಕ್ತ್ರೇಶ್ವರ ಮಹಾಲಿಂಗ, ಬಳಿಕ ಬ್ರಾಹ್ಮೇಶ್ವರ ಇವರನ್ನು ನೋಡಬೇಕು.

೯೦. ಬಳಿಕ ಮನಃಪ್ರಕಾಮೇಶ್ವರ, ಈಶಾನೇಶ್ವರ ಇವರನ್ನು ನೋಡಿಕೊಂಡು ಪಾರ್ವತೀಪರಮೇಶ್ವರರ ಸ್ವರೂಪಗಳೆನಿಸಿದ ಚಂಡಿ, ಚಂಡೀಶ್ವರರನ್ನು ನೋಡಬೇಕು.

ಢುಂಢಿಂ ಪ್ರಣಮ್ಯ ಚ ತತೋ ರಾಜರಾಜೇಶಮರ್ಚಯೇತ್ ।
ಲಾಂಗಲೀಶಸ್ತತೋಽಭ್ಯರ್ಚ್ಯಸ್ತತಸ್ತು ನಕುಲೀಶ್ವರಃ ॥ ೯೧ ॥
ಪರಾನ್ನೇಶಮಥೋ ನತ್ವಾ ಪರದ್ರವ್ಯೇಶ್ವರಂ ತತಃ ।
ಪ್ರತಿಗ್ರಹೇಶ್ವರಂ ವಾಪಿ ನಿಷ್ಕಲಂಕೇಶಮೇವ ಚ ॥ ೯೨ ॥
ಮಾರ್ಕಂಡೇಯೇಶಮಭ್ಯರ್ಚ್ಯ ತತ್ಸಶ್ಚಾದಪ್ಸರಸೇಶ್ವರಂ ।
ಗಂಗೇಶೋಽರ್ಚ್ಯಸ್ತತೋ ಜ್ಞಾನವಾಪ್ಯಾಂ ಸ್ನಾನಂ ಸಮಾಚರೇತ್ ॥ ೯೩ ॥
ನಂದಿಕೇಶಂ ತಾರಕೇಶಂ ಮಹಾಕಾಲೇಶ್ವರಂ ತತಃ ।
ದಂಡಪಾಣಿಂ ಮಹೇಶಂ ಚ ಮೋಕ್ಷೇಶಂ ಪ್ರಣಮೇತ್ತತಃ ॥ ೯೪ ॥
ವೀರಭದ್ರೇಶ್ವರಂ ನತ್ವಾ ಅವಿಮುಕ್ತೇಶ್ವರಂ ತತಃ ।
ವಿನಾಯಕಾಂಸ್ತತಃ ಪಂಚ ವಿಶ್ವನಾಥಂ ತತೋ ವ್ರಜೇತ್ ।
ತತೋ ಮೌನಂ ವಿಸೃಜ್ಯಾಥ ಮಂತ್ರಮೇತಮುದೀರಯೇತ್ ॥ ೯೫ ॥
ಅಂತರ್ಗೃಹಸ್ಯ ಯಾತ್ರೇಯಂ ಯಥಾವದ್ಯಾ ಮಯಾ ಕೃತಾ ।
ನ್ಯೂನಾತಿರಿಕ್ತಯಾ ಶಂಭುಃ ಪ್ರೀಯತಾಮನಯಾ ವಿಭುಃ ॥ ೯೬ ॥
ಇತಿ ಮಂತ್ರಂ ಸಮುಚ್ಚಾರ್ಯ ಕ್ಷಣಂ ವೈ ಮುಕ್ತಿಮಂಡಪೇ ।
ವಿಶ್ರಮ್ಯ ಯಾಯಾದ್ಭವನಂ ನಿಷ್ಪಾಪಃ ಪುಣ್ಯವಾನ್ನರಃ ॥ ೯೭ ॥

---

೯೧. ಢುಂಡಿವಿನಾಯಕನನ್ನು ನಮಸ್ಕರಿಸಿ ರಾಜರಾಜೇಶ್ವರನಿಗೆ ಪೂಜೆಯನ್ನು ಮಾಡಬೇಕು. ಬಳಿಕ ಲಾಂಗಲೀಶ್ವರನೂ, ನಕುಲೀಶ್ವರನೂ ಪೂಜಾರ್ಹರಾಗಿರುವರು.

೯೨. ಪರಾನ್ನೇಶ್ವರನನ್ನೂ, ಬಳಿಕ ಪರದ್ರವ್ಯೇಶ್ವರನನ್ನೂ ನಮಸ್ಕರಿಸಿದ ಮೇಲೆ ಪ್ರತಿಗ್ರಹೇಶ್ವರನನ್ನೂ, ನಿಷ್ಕಲಂಕೇಶ್ವರನನ್ನೂ ಸೇವಿಸಬೇಕು.

೯೩. ಮಾರ್ಕಂಡೇಯೇಶ್ವರನನ್ನು ಪೂಜಿಸಿ ಬಳಿಕ ಅಪ್ಸರಸೇಶ್ವರನನ್ನೂ ಗಂಗೇಶ್ವರನನ್ನೂ ಅರ್ಚನೆಮಾಡಿ ಜ್ಞಾನವಾಪಿಯಲ್ಲಿ ಸ್ನಾನವನ್ನು ಮಾಡಬೇಕು.

೯೪. ನಂದಿಕೇಶ್ವರ, ತಾರಕೇಶ್ವರ, ಮಹಾಕಾಳೇಶ್ವರ, ದಂಡಪಾಣಿ, ಮಹೇಶ್ವರರನ್ನು ನೋಡಿ ಮೋಕ್ಷೇಶ್ವರನಿಗೆ ಪ್ರಣಾಮಗಳನ್ನು ಮಾಡಬೇಕು.

೯೫. ವೀರಭದ್ರೇಶ್ವರನನ್ನೂ, ಅವಿಮುಕ್ತೇಶ್ವರನನ್ನೂ ಸೇವಿಸಿ, ಪಂಚ ವಿನಾಯಕರನ್ನು ಪೂಜಿಸಿ ಕಡೆಯಲ್ಲಿ ವಿಶ್ವೇಶ್ವರ ಮಹಾಲಿಂಗದ ಬಳಿಗೆ ಬಂದು ಮೌನವ್ರತವನ್ನು ಕೊನೆಗಾಣಿಸಿ ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು.

೯೬. "ನಾನು ಈ ಅಂತರ್ಗೃಹಯಾತ್ರೆಯನ್ನು ತಿಳಿದಮಟ್ಟಿಗೆ ಯಥಾವಿಧಿಯಾಗಿ ಮಾಡಿರುವೆನು. ನ್ಯೂನಾತಿರಿಕ್ತಗಳಿದ್ದರೂ ಪರಮೇಶ್ವರನು ಈ ನನ್ನ ಯಾತ್ರೆಯಿಂದ ಪ್ರೀತನಾಗಲಿ."

೯೭. ಈ ಮಂತ್ರವನ್ನುಚ್ಚರಿಸಿ ಒಂದು ಕ್ಷಣಕಾಲ ಮುಕ್ತಿಮಂಟಪದಲ್ಲಿ

ಸಂಪ್ರಾಪ್ಯ ವಾಸರಂ ವಿಷ್ಣೋರ್ವಿಷ್ಣುತೀರ್ಥೇಷು ಸರ್ವತಃ ।
ಕಾರ್ಯಾ ಯಾತ್ರಾ ಪ್ರಯತ್ನೇನ ಮಹಾಪುಣ್ಯಸಮೃದ್ಧಯೇ ॥ ೯೮ ॥
ನಭಸ್ಯ ಪಂಚದಶ್ಯಾಂ ಚ ಕುಲಸ್ತಂಭಂ ಸಮರ್ಚಯೇತ್ ।
ದುಃಖಂ ರುದ್ರಪಿಶಾಚತ್ವಂ ನ ಭವೇದ್ಯಸ್ಯ ಪೂಜನಾತ್ ॥ ೯೯ ॥
ಶ್ರದ್ಧಾಪೂರ್ವಮಿಮಾ ಯಾತ್ರಾಃ ಕರ್ತವ್ಯಾ ಕ್ಷೇತ್ರವಾಸಿಭಿಃ ।
ಪರ್ವಸ್ವಪಿ ವಿಶೇಷೇಣ ಕಾರ್ಯಾ ಯಾತ್ರಾಶ್ಚ ಸರ್ವತಃ ॥ ೧೦೦ ॥
ನ ವಂಧ್ಯಂ ದಿವಸಂ ಕುರ್ಯಾದ್ವಿನಾ ಯಾತ್ರಾಂ ಕ್ವಚಿತ್ಕೃತೀ ।
ಯಾತ್ರಾದ್ವಯಂ ಪ್ರಯತ್ನೇನ ಕರ್ತವ್ಯಂ ಪ್ರತಿವಾಸರಂ ।
ಆದೌ ಸ್ವರ್ಗತರಂಗಿಣ್ಯಾಸ್ತತೋ ವಿಶ್ವೇಶಿತುರ್ಧ್ರುವಂ ॥ ೧೦೧ ॥
ಯಸ್ಯ ವಂಧ್ಯಂ ದಿನಂ ಯಾತಂ ಕಾಶ್ಯಾಂ ನಿವಸತಃ ಸತಃ ।
ನಿರಾಶಾಃ ಪಿತರಸ್ತಸ್ಯ ತಸ್ಮಿನ್ನೇವ ದಿನೇಽಭವನ್ ॥ ೧೦೨ ॥
ಸ ದಷ್ಟಃ ಕಾಲಸರ್ಪೇಣ ಸ ದೃಷ್ಟೋ ಮೃತ್ಯುನಾಸ್ಫುಟಂ ।
ಸ ಮುಷ್ಟಸ್ತತ್ರ ದಿವಸೇ ವಿಶ್ವೇಶೋ ಯತ್ರ ನೇಕ್ಷಿತಃ ॥ ೧೦೩ ॥

---

ಕುಳಿತು ವಿಶ್ರಮಿಸಿಕೊಂಡು ಬಳಿಕ ಮನೆಗೆ ಹೋಗಬೇಕು. ಇಂತಹ ನರನು ಪಾಪರಹಿತನೂ, ಪುಣ್ಯಭಾಗಿಯೂ ಆಗುವನು.

೯೮–೯೯. ಹರಿವಾಸರವು ಪ್ರಾಪ್ತವಾಗಲು ಮಹಾಪುಣ್ಯವನ್ನು ಗಳಿಸುವುದಕ್ಕಾಗಿ ಸಮಸ್ತವಿಷ್ಣುತೀರ್ಥಗಳಿಗೂ ಪ್ರಯತ್ನಪೂರ್ವಕವಾಗಿ ಯಾತ್ರೆಯನ್ನು ಮಾಡಬೇಕು. ಭಾದ್ರಪದಮಾಸದ ಪೌರ್ಣಿಮಾ ಅಮಾವಾಸ್ಯೆಗಳಲ್ಲಿ ಕುಲಸ್ತಂಭದ ಪೂಜೆಯನ್ನು ಮಾಡಲು ರುದ್ರಪಿಶಾಚದ ಜನ್ಮವೆಂಬ ದುಃಖವು ಸಂಭವಿಸುವುದಿಲ್ಲ.

೧೦೦. ಕ್ಷೇತ್ರವಾಸಿಗಳಾದವರು ಅತ್ಯಂತ ಶ್ರದ್ಧಾಭರಿತರಾಗಿ ಮೇಲೆ ಹೇಳಿದ ಯಾತ್ರೆಗಳೆಲ್ಲವನ್ನೂ ಮಾಡುತ್ತಿರಬೇಕು. ವಿಶೇಷವಾಗಿ ಪರ್ವದಿವಸಗಳಲ್ಲಿ ಈ ಯಾತ್ರೆಗಳು ಅವಶ್ಯಕರ್ತವ್ಯಗಳಾಗಿರುವುವು.

೧೦೧. ಯಾವ ಪುಣ್ಯಶಾಲಿಯೂ ಯಾತ್ರೆಯಿಲ್ಲದೆ ದಿವಸವನ್ನು ವ್ಯರ್ಥವಾಗಿ ಕಳೆಯಬಾರದು. ಪ್ರತಿನಿತ್ಯವೂ ಪ್ರಯತ್ನದಿಂದಾದರೂ ಎರಡು ಯಾತ್ರೆಗಳನ್ನು ಮುಗಿಸಬೇಕು. ಮೊದಲನೆಯದು ಗಂಗಾನದಿಯಲ್ಲಿ ಸ್ನಾನ. ಎರಡನೆಯದೇ ವಿಶ್ವೇಶ್ವರನ ದರ್ಶನ.

೧೦೨–೧೦೩. ಯಾವನು ಕಾಶಿಯಲ್ಲಿ ವಾಸಮಾಡುತ್ತಿದ್ದರೂ ದಿನವನ್ನು ವ್ಯರ್ಥವಾಗಿ ಕಳೆಯುವನೊ, ಆ ದಿನದಲ್ಲಿಯೇ ಅವನ ಪಿತೃಗಳೆಲ್ಲರೂ ನಿರಾಶೆಗೊಳ್ಳುವರು. ಅವನು ಕಾಲಸರ್ಪದಿಂದ ಕಚ್ಚಲ್ಪಟ್ಟವನೆಂದು ತಿಳಿಯಬೇಕು. ಅವನೇ ನಿಜವಾಗಿಯೂ ಮೃತ್ಯುದೇವತೆಯ ಕಣ್ಣಿಗೆ ಬಿದ್ದಿರುವನು. ಎಂದು ವಿಶ್ವೇಶ್ವರನನ್ನು ನೋಡುವುದಿಲ್ಲವೋ, ಅಂದೇ ಮೃತ್ಯುವಿನ ಬಾಯಿಗೆ ತುತ್ತಾಗುವನು.

ಸರ್ವತೀರ್ಥೇಷು ಸಸ್ನೌ ಸ ಸರ್ವಯಾತ್ರಾಂ ವ್ಯಧಾತ್ಸ ಚ ।
ಮಣಿಕರ್ಣ್ಯಾಂ ತು ಯಃ ಸ್ನಾತೋ ಯೋ ವಿಶ್ವೇಶಂ ನಿರೈಕ್ಷತ ॥ ೧೦೪ ॥
ಸತ್ಯಂ ಸತ್ಯಂ ಪುನಃ ಸತ್ಯಂ ಸತ್ಯಂ ಸತ್ಯಂ ಪುನಃ ಪುನಃ ।
ದೃಶ್ಯೋ ವಿಶ್ವೇಶ್ವರೋ ನಿತ್ಯಂ ಸ್ನಾತವ್ಯಾ ಮಣಿಕರ್ಣಿಕಾ ॥ ೧೦೫ ॥

ವ್ಯಾಸ ಉವಾಚ :—

ಸೂತ ಸ್ಕಾಂದಮಿದಂ ಶ್ರುತ್ವಾ ಕಾಶೀಮಾಹಾತ್ಮ್ಯಮುತ್ತಮಂ ।
ನರೋ ನ ನಿರಯಂ ಯಾತಿ ಕೃತ್ವಾಪ್ಯಘಸಹಸ್ರಕಂ ॥ ೧೦೬ ॥
ಸ್ನಾತ್ವಾ ಸರ್ವಾಣಿ ತೀರ್ಥಾನಿ ಯಚ್ಛ್ರೇಯಃ ಸಮುಪಾರ್ಜ್ಯತೇ ।
ಕಾಶೀಖಂಡಸ್ಯ ಶ್ರವಣಾತ್ತತ್ಸ್ಯಾತ್ಸೂತ ನ ಸಂಶಯಃ ॥ ೧೦೭ ॥
ದತ್ತ್ವಾ ದಾನಾನಿ ಸರ್ವಾಣಿ ಕೃತ್ವಾ ಯಜ್ಞಾನನೇಕಶಃ ।
ತತ್ಪುಣ್ಯಂ ಲಭತೇ ಮರ್ತ್ಯಸ್ತದಾ ತಚ್ಛ್ರವಣಾದ್ಧ್ರುವಂ ॥ ೧೦೮ ॥
ತಪ್ತ್ವಾ ತಪಾಂಸಿ ಚೋಗ್ರಾಣಿ ಪ್ರಾಪ್ಯತೇ ಯನ್ಮಹತ್ಫಲಂ ।
ಶ್ರವಣಾದಸ್ಯ ಖಂಡಸ್ಯ ಲಭತೇ ತನ್ನ ಸಂಶಯಃ ॥ ೧೦೯ ॥

---

೧೦೪. ಯಾವನು ಮಣಿಕರ್ಣಿಕೆಯಲ್ಲಿ ಮಿಂದು ವಿಶ್ವೇಶ್ವರನನ್ನು ನೋಡುವನೊ, ಅವನು ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದವನು. ಸಮಸ್ತ ಯಾತ್ರೆಗಳನ್ನೂ ನೆರವೇರಿಸಿದವನು.

೧೦೫. ಕಾಶೀಕ್ಷೇತ್ರದಲ್ಲಿ ಮಾಡಬೇಕಾದ ಕರ್ತವ್ಯವನ್ನು ಬಾರಿಬಾರಿಗೂ ಶಪಥಪೂರ್ವಕವಾಗಿ ಹೇಳುವೆನು. ವಿಶ್ವೇಶ್ವರನನ್ನು ನಿತ್ಯವೂ ದರ್ಶನಮಾಡಬೇಕು. ಮಣಿಕರ್ಣಿಕಾತೀರ್ಥದಲ್ಲಿ ಸ್ನಾನವನ್ನು ಮಾಡಬೇಕು.

೧೦೬. ವ್ಯಾಸನು ಹೇಳುತ್ತಾನೆ :—ಎಲೈ ಸೂತನೆ! ಸ್ಕಂದನಿರೂಪಿತವಾದ ಸರ್ವೋತ್ತಮವಾದ ಈ ಕಾಶೀಖಂಡವನ್ನು ಶ್ರದ್ಧಾಳುವಾಗಿ ಕೇಳಿದ ಮನುಷ್ಯನು ಸಾವಿರಾರು ಪಾತಕಗಳನ್ನು ಮಾಡಿದ್ದರೂ ನರಕಕ್ಕೆ ಹೋಗುವುದಿಲ್ಲ.

೧೦೭. ಭೂಲೋಕದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನಮಾಡಿದುದರಿಂದ ಯಾವ ಪುಣ್ಯವು ಸಂಪಾದಿತವಾಗುವುದೋ, ಅದನ್ನೇ ಈ ಕಾಶೀಖಂಡದ ಶ್ರವಣದಿಂದ ಮಾನವನು ಪಡೆಯುವನೆಂಬುದರಲ್ಲಿ ಸಂದೇಹವಿಲ್ಲ.

೧೦೮. ಶಾಸ್ತ್ರೋಕ್ತಗಳಾದ ಸಕಲ ದಾನಗಳನ್ನು ಕೊಟ್ಟವನೂ, ಬಹುವಿಧಗಳಾದ ಯಜ್ಞಗಳನ್ನು ಮಾಡಿದವನೂ ಯಾವ ಪುಣ್ಯವನ್ನು ಗಳಿಸುವರೊ, ಅದನ್ನೇ ಈ ಖಂಡದ ಶ್ರವಣವನ್ನು ಮಾಡಿದ ಮನುಜನೂ ಪಡೆಯುವನು.

೧೦೯. ಉಗ್ರಗಳಾದ ತಪಸ್ಸುಗಳನ್ನು ಮಾಡುವುದರಿಂದ ಯಾವ ಮಹಾಫಲವು ಲಭಿಸುವುದೊ, ಈ ಖಂಡವನ್ನು ಕೇಳುವುದರಿಂದಲೂ ಅದನ್ನೇ ಪಡೆಯಬಹುದೆಂಬುದು ನಿಸ್ಸಂಶಯವು.

ಅಧೀತ್ಯ ಚತುರೋ ವೇದಾನ್ಸಾಂಗಾನ್ಯತ್ಫಲಮಾಪ್ಯತೇ ।
ಕಾಶೀಖಂಡಂ ಸಮಾಕರ್ಣ್ಯ ತತ್ಫಲಂ ಲಭ್ಯತೇ ನರೈಃ ॥ ೧೧೦ ॥
ಗಯಾಯಾಂ ಶ್ರಾದ್ಧದಾನಾಚ್ಚ ಯಥಾ ತೃಪ್ಯಂತಿ ಪೂರ್ವಜಾಃ ।
ತಥೈತಚ್ಛ್ರವಣಾನ್ನೄಣಾಂ ತೃಪ್ನುವಂತಿ ಪಿತಾಮಹಾಃ ॥ ೧೧೧ ॥
ತೈಶ್ಚ ಸರ್ವಪುರಾಣಾನಿ ಶ್ರುತಾನಿ ಸ್ಥಿರಬುದ್ಧಿಭಿಃ ।
ಕಾಶೀಖಂಡಂ ಶ್ರುತಂ ಯೈಶ್ಚ ಸರ್ವೇಷಾಂ ಶ್ರೇಯಸಾಂ ಪದಂ ॥ ೧೧೨ ॥
ಶ್ರುತಾಶ್ಚ ಸರ್ವಧರ್ಮಾಸ್ತೈರ್ಮಹಾಪುಣ್ಯೈಕರಾಶಿಭಿಃ ।
ಶ್ರುತಂ ಯೈಃ ಸ್ಥಿರಚೇತೋಭಿಃ ಕಾಶೀಮಾಹಾತ್ಮ್ಯಮುತ್ತಮಂ ॥ ೧೧೩ ॥
ಇದಮೇವ ಹಿ ದೇವೇಜ್ಯಾ ಪರಮಾ ಪರಿಕೀರ್ತಿತಾ ।
ಉಪೇತ್ಯತ್ಖಂಡಮಖಿಲಂ ಶ್ರೋತವ್ಯಂ ಶ್ರದ್ಧಯಾ ದ್ವಿಜಾಃ ॥ ೧೧೪ ॥
ಶೃಣುಯಾದೇಕಮಪಿ ಯ ಆಖ್ಯಾನಂ ಕಾಶಿಖಂಡಜಂ ।
ಶ್ರುತಾನಿ ತೇನ ಸರ್ವಾಣಿ ಧರ್ಮಶಾಸ್ತ್ರಾಣ್ಯಸಂಶಯಂ ॥ ೧೧೫ ॥

---

೧೧೦. ನಾಲ್ಕು ವೇದಗಳನ್ನೂ ಷಡಂಗಸಹಿತವಾಗಿ ಅಧ್ಯಯನಮಾಡಿದವನಿಗೆ ಯಾವ ಫಲವು ಸಿಕ್ಕುವುದೊ, ಆ ಫಲವೇ ಕಾಶೀಖಂಡವನ್ನು ಸಮಗ್ರವಾಗಿ ಕೇಳಿದ ನರನಿಗೂ ಪ್ರಾಪ್ತವಾಗುವುದು.

೧೧೧. ಹೇಗೆ ಗಯೆಯಲ್ಲಿ ಶ್ರಾದ್ಧಕ್ರಿಯೆಗಳನ್ನು ಮಾಡುವುದರಿಂದ ಪಿತೃದೇವತೆಗಳು ತೃಪ್ತಿಗೊಳ್ಳುವರೊ, ಹಾಗೆಯೇ ಈ ಖಂಡವನ್ನು ಶ್ರವಣಮಾಡಿದವನ ಪಿತಾಮಹಾದಿಗಳೂ ಸಂತೋಷಗೊಳ್ಳುವರು.

೧೧೨. ಸಮಸ್ತ ಶ್ರೇಯಸ್ಸುಗಳಿಗೂ ನಿಧಿಯೆನಿಸಿದ ಕಾಶೀಖಂಡವು ಯಾರಿಂದ ಶ್ರವಣಮಾಡಲ್ಪಡುವುದೊ, ಅವರು ಏಕಾಗ್ರಬುದ್ಧಿಯಿಂದ ಸಕಲ ಪುರಾಣಗಳನ್ನೂ ಕೇಳಿದವರೆಂದು ತಿಳಿದುಕೊಳ್ಳಬೇಕು.

೧೧೩. ಯಾರು ಸ್ಥಿರಚಿತ್ತದಿಂದ ಉತ್ತಮವಾದ ಈ ಕಾಶೀ ಮಾಹಾತ್ಮ್ಯವನ್ನು ಕೇಳುವರೊ, ಅವರೇ ಸಮಸ್ತ ಧರ್ಮಗಳನ್ನೂ ಕೇಳಿದ ಮಹಾಪುಣ್ಯಪುರುಷರು.

೧೧೪. ಬ್ರಾಹ್ಮಣೋತ್ತಮರಿರಾ! ಈ ಖಂಡವನ್ನು ಸಮಗ್ರವಾಗಿ ಪಠನಮಾಡಬೇಕು ಮತ್ತು ಶ್ರದ್ಧಾನ್ವಿತರಾಗಿ ಕೇಳಬೇಕು. ಇದೇ ಸರ್ವೋತ್ಕೃಷ್ಟವಾದ ದೇವಪೂಜೆಯೆಂದು ಬಲ್ಲವರು ಹೇಳುತ್ತಿರುವರು.

೧೧೫. ಯಾವನು ಈ ಕಾಶೀಖಂಡಾಂತರ್ಗತವಾದ ಒಂದು ಆಖ್ಯಾನವನ್ನಾದರೂ ಭಕ್ತಿಯಿಂದ ಕೇಳುವನೊ, ಅವನು ನಿಸ್ಸಂದೇಹವಾಗಿಯೂ ಸಮಸ್ತ ಧರ್ಮಶಾಸ್ತ್ರಗಳನ್ನೂ ಕೇಳಿದಂತೆಯೇ ಆಗುವುದು.

ಮಹಾಧರ್ಮೈಕಜನನಂ ಮಹಾರ್ಥಪ್ರತಿಪಾದಕಂ ।
ಕಾರಣಂ ಸರ್ವಕಾಮಾಪ್ತೇಃ ಕಾಶೀಖಂಡಮಿದಂ ಸ್ಮೃತಂ ॥ ೧೧೬ ॥
ಏತಚ್ಛ್ರವಣತಃ ಪುಂಸಾಂ ಕೈವಲ್ಯಂ ನೈವ ದೂರತಃ ।
ತುಷ್ಯಂತಿ ಸರ್ವೇ ಪಿತರಃ ಶ್ರುತ್ವೈತತ್ಖಂಡಮುತ್ತಮಂ ॥ ೧೧೭ ॥
ಪ್ರೀಣಂತಿ ಮರ್ತ್ಯಾಃ ಸರ್ವೇಽಪಿ ಬ್ರಹ್ಮವಿಷ್ಣುಶಿವಾದಯಃ ।
ಮುನಯಃ ಪರಿಮೋದಂತೇ ಮಾದ್ಯಂತಿ ಸನಕಾದಯಃ ॥ ೧೧೮ ॥
ಹೃಷ್ಟಃ ಸರ್ವೋ ಭವೇದೇಹ ಭೂತಗ್ರಾಮಶ್ಚತುರ್ವಿಧಃ ।
ಮಹಿಮಶ್ರವಣಾದಸ್ಮಾದ್ವಾರಾಣಸ್ಯಾ ನ ಸಂಶಯಃ ॥ ೧೧೯ ॥
ಯ ಇದಂ ಶ್ರಾವಯೇದ್ವಿದ್ವಾನ್ಸಮಸ್ತಂ ತ್ವರ್ಧಮೇವ ವಾ ।
ಪಾದಮಾತ್ರಂ ತದರ್ಧಂ ವಾ ಶ್ಲೋಕಂ ವ್ಯಾಖ್ಯಾನಮುತ್ತಮಂ ॥ ೧೨೦ ॥
ಸ ನಮಸ್ಯಃ ಪ್ರಯತ್ನೇನ ಸಂಪೂಜ್ಯಸ್ತ್ವಿಷ್ಟದೇವವತ್ ।
ತಸ್ಮೈ ದೇಯಂ ಪ್ರಯತ್ನೇನ ವಿಶ್ವೇಶಪ್ರೀತಯೇ ಸದಾ ॥ ೧೨೧ ॥

---

೧೧೬. ಈ ಕಾಶೀಖಂಡವು ಮಹಾಧರ್ಮಗಳಿಗೆ ಜನ್ಮಸ್ಥಳವು, ಮಹತ್ತರಗಳಾದ ಶಾಸ್ತ್ರಗಳ ಗೂಢಾರ್ಥಗಳನ್ನು ಪ್ರತಿಪಾದಿಸುತ್ತಿರುವುದೂ, ಸಮಸ್ತ ಇಷ್ಟಾರ್ಥಗಳನ್ನು ಪಡೆಯುವುದಕ್ಕೆ ಸಾಧನವೂ ಆಗಿರುವುದೆಂದು ಹೇಳಲ್ಪಟ್ಟಿರುವುದು.

೧೧೭. ಇದನ್ನು ಕೇಳುವ ಸತ್ಪುರುಷರಿಗೆ ಕೈವಲ್ಯವೂ ಅನತಿ ದೂರದಲ್ಲಿಯೇ ಇರುವುದು. ಉತ್ತಮವಾದ ಈ ಖಂಡವನ್ನು ಕೇಳುವವನ ಪಿತೃಗಳೂ ಸಂತೋಷಗೊಳ್ಳುವರು.

೧೧೮. ಬ್ರಹ್ಮ, ವಿಷ್ಣು, ಮಹೇಶ್ವರರೇ ಮೊದಲಾದ ಸಕಲ ದೇವತೆಗಳೂ ಸುಪ್ರೀತರಾಗುವರು. ಮುನಿಗಳು ಅತ್ಯಂತ ಸಂತೋಷಗೊಳ್ಳುವರು. ಸನಕಾದಿಗಳೂ ಸಂತೋಷದಿಂದ ಮೈಮರೆಯುವರು.

೧೧೯. ಅಂಡಜ, ಜರಾಯುಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ವಿಧಗಳಾದ ಪ್ರಾಣಿವರ್ಗವೆಲ್ಲವೂ ಈ ಕಾಶೀಕ್ಷೇತ್ರಮಾಹಾತ್ಮ್ಯದ ಶ್ರವಣದಿಂದ ಹರ್ಷಗೊಳ್ಳುವುದರಲ್ಲಿ ಸಂದೇಹವಿಲ್ಲ.

೧೨೦–೧೨೧. ಯಾವ ವಿದ್ವಾಂಸನು ಉತ್ತಮವಾದ ವ್ಯಾಖ್ಯಾನದೊಡನೆ ಈ ಸಮಗ್ರಖಂಡವನ್ನಾಗಲಿ, ತದರ್ಧವನ್ನಾಗಲಿ, ಶ್ಲೋಕಪಾದವನ್ನಾಗಲಿ, ಅದರ ಅರ್ಧವನ್ನಾದರೂ ಆಗಲಿ ಸಜ್ಜನರಿಗೆ ಶ್ರವಣ ಮಾಡಿಸುವನೊ, ಆತನಿಗೆ ಪ್ರಯತ್ನಪೂರ್ವಕವಾಗಿ ನಮಸ್ಕಾರವನ್ನು ಮಾಡಬೇಕು. ಆತನನ್ನು ಇಷ್ಟದೈವದಂತೆ ಪೂಜಿಸಬೇಕು. ಮತ್ತು ಸರ್ವಕಾಲದಲ್ಲಿಯೂ ವಿಶ್ವೇಶ್ವರನ ಪ್ರೀತಿಗಾಗಿ ಉಚಿತ ಪದಾರ್ಥಗಳನ್ನು ಆತನಿಗೆ ದಾನಮಾಡಬೇಕು.

ತಸ್ಮಿಂಸ್ತುಷ್ಟೇ ಹಿ ಸಂತುಷ್ಟೋ ವಿಶ್ವೇಶೋ ನಾತ್ರ ಸಂಶಯಃ ।
ಯತ್ರೈತತ್ಪಠ್ಯತೇ ಖಂಡಂ ಪರಾನಂದಸಮಾಶ್ರಯಂ ॥ ೧೨೨ ॥
ನ ತತ್ರ ಪ್ರಭವೇತ್ಕಶ್ಚಿದಮಂಗಲಸಮುದ್ಭವಃ ।
ಯ ಇದಂ ಶೃಣುಯಾದ್ವಿದ್ವಾನ್ಯಶ್ಚೇದಂ ಶ್ರಾವಯೇತ್ಸುಧೀಃ ॥ ೧೨೩ ॥
ಯಃ ಪಠೇದಪಿ ಪುಣ್ಯಾತ್ಮಾ ತೇ ಸರ್ವೇ ರುದ್ರಮೂರ್ತಯಃ ।
ಯ ಏತತ್ಪುಸ್ತಕಂ ರಮ್ಯಂ ಲೇಖಯಿತ್ವಾ ಸಮರ್ಪಯೇತ್ ॥ ೧೨೪ ॥
ಅಖಿಲಾನಿ ಪುರಾಣಾನಿ ತೇನ ದತ್ತಾನಿ ನಾನ್ಯಥಾ ।
ಅತ್ರಾಖ್ಯಾನಾನಿ ಯಾವಂತಿ ಶ್ಲೋಕಾ ಯಾವಂತ ಏವ ಹಿ ॥ ೧೨೫ ॥
ತಥಾ ಪದಾನಿ ಯಾವಂತಿ ವರ್ಣಾ ಯಾವಂತ ಏವ ಹಿ ।
ಯಾವಂತ್ಯಪಿ ಚ ಮಾತ್ರಾಣಿ ಯಾವಂತ್ಯಃ ಪದಪಂಕ್ತಯಃ ॥ ೧೨೬ ॥
ಗುಣೇ ಸೂತ್ರಾಣಿ ಯಾವಂತಿ ಯಾವಂತಃ ಪಟತಂತವಃ ।
ಚಿತ್ರರೂಪಾಣಿ ಯಾವಂತಿ ರಮ್ಯಪುಸ್ತಕಸಂಚಕೇ ॥ ೧೨೭ ॥

---

೧೨೨. ಆತನು ಸಂತುಷ್ಟನಾದರೆ ವಿಶ್ವೇಶ್ವರನೂ ಸಂತೋಷಗೊಳ್ಳುವನು. ಇದರಲ್ಲಿ ಸಂದೇಹವಿಲ್ಲ. ಪರಮಾನಂದಕ್ಕೆ ಆಶ್ರಯಭೂತವಾದ ಈ ಖಂಡದ ಪುರಾಣಪಠನವು ಎಲ್ಲಿ ನಡೆಯುತ್ತಿರುವುದೊ, ಅಲ್ಲಿ ಯಾವ ವಿಧವಾದ ಅಮಂಗಳವೂ ಸಂಭವಿಸಲಾರದು.

೧೨೩. ಯಾವ ಪ್ರಾಜ್ಞನು ಈ ಖಂಡವನ್ನು ಕೇಳುವನೊ, ಇದನ್ನು ಯಾವ ಧೀಮಂತನು ಇತರರಿಗೆ ಕೇಳಿಸುವನೊ, ಯಾವ ಪುಣ್ಯಪುರುಷನು ಇದನ್ನು ಪಠನಮಾಡುವನೊ, ಅವರೆಲ್ಲರೂ ಪರಮೇಶ್ವರನ ಮೂರ್ತಿಗಳೆಂದೇ ತಿಳಿಯಬೇಕು.

೧೨೪. ಯಾವನು ಈ ಪುಸ್ತಕವನ್ನು ಮನೋಹರವಾಗಿ ಬರೆದು ದಾನ ಮಾಡುವನೊ, ಅವನು ಅಷ್ಟಾದಶಪುರಾಣಗ್ರಂಥಗಳನ್ನೂ ದಾನಮಾಡಿದಂತಾಗುವುದು. ಇದು ಸುಳ್ಳಲ್ಲ.

೧೨೫–೧೨೭. ಅಂತಹ ಪುಣ್ಯಾತ್ಮನು ಈ ಖಂಡದಲ್ಲಿ ಎಷ್ಟು ಆಖ್ಯಾನಗಳಿರುವುವೊ, ಎಷ್ಟು ಶ್ಲೋಕಗಳಿರುವುವೊ, ಎಷ್ಟು ಪದಗಳಿರುವುವೊ, ಎಷ್ಟು ಅಕ್ಷರಗಳಿರುವುವೊ, ಎಷ್ಟು ಮಾತ್ರೆಗಳಿರುವುವೊ, ಎಷ್ಟು ಪಙ್ಕ್ತಿಗಳಿರುವುವೊ, ಪುಸ್ತಕರೂಪದಲ್ಲಿ ಸಿದ್ಧಗೊಳಿಸಿದ ಈ ಪುಸ್ತಕದ ಆಚ್ಛಾದನವಸ್ತ್ರದಲ್ಲಿ ಎಷ್ಟು ದಾರಗಳಿರುವುವೊ, ಒಂದೊಂದು ದಾರದಲ್ಲಿಯೂ ಎಷ್ಟು ತಂತುಗಳಿರುವುವೊ, ಪುಸ್ತಕದಲ್ಲಿ ಎಷ್ಟು ಚಿತ್ರಗಳು ಬರೆಯಲ್ಪಟ್ಟಿರುವುವೊ, ಅಷ್ಟು ಸಾವಿರ ವರ್ಷಗಳವರೆಗೂ ಸ್ವರ್ಗಲೋಕದಲ್ಲಿ ಪೂಜ್ಯನಾಗಿ ಬಾಳುತ್ತಿರುವನು.

ತಾವದ್ಯುಗಸಹಸ್ರಾಣಿ ದಾತಾ ಸ್ವರ್ಗೇ ಮಹೀಯತೇ ।
ಏತದ್ದ್ವಾದಶಕೃತ್ವೋ ಯಃ ಶೃಣುಯಾತ್ಖಂಡಮುತ್ತಮಂ ॥ ೧೨೮ ॥
ಬ್ರಹ್ಮಹತ್ಯಾಪಿ ತಸ್ಯಾಶು ನಶ್ಯೇಚ್ಛಂಭೋರನುಗ್ರಹಾತ್ ।
ಅಪುತ್ರಃ ಶೃಣುಯಾದ್ಯಸ್ತು ಸುಸ್ನಾತಃ ಶ್ರದ್ಧಯಾನ್ವಿತಃ ।
ತಸ್ಯ ಪುತ್ರೋ ಭವತ್ಯೇವ ಶಂಭೋರಾಜ್ಞಾ ಪ್ರಭಾವತಃ ॥ ೧೨೯ ॥
ಕಿಂ ಬಹೂಕ್ತೇನ ಸೂತೇಹ ಯಸ್ಯ ಯಸ್ಯ ಮನೋರಥಃ ।
ಯೋ ಯಸ್ತಂ ತಂ ಸ ಸ ಸದಾ ಶ್ರುತ್ವೈತತ್ಪ್ರಾಪ್ನುಯಾತ್ಕೃತೀ ॥ ೧೩೦ ॥
ಶೃಣುಯಾದ್ದೂರದೇಶೇಽಪಿ ಯಃ ಕಾಶೀಖಂಡಮುತ್ತಮಂ ।
ಸ ಕಾಶೀವಾಸಪುಣ್ಯಸ್ಯ ಭಾಜನಂ ಸ್ಯಾಚ್ಛಿವಾಜ್ಞಯಾ ॥ ೧೩೧ ॥
ಏತಚ್ಛ್ರವಣತಃ ಪುಂಸಾಂ ಸರ್ವತ್ರ ವಿಜಯೋ ಭವೇತ್ ।
ಸೌಭಾಗ್ಯಂ ಚಾಪಿ ಸರ್ವತ್ರ ಪ್ರಾಪ್ನುಯಾನ್ನಿರ್ಮಲಾಶಯಃ ॥ ೧೩೨ ॥
ಯಸ್ಯ ವಿಶ್ವೇಶ್ವರಸ್ತುಷ್ಟಸ್ತಸ್ಯ ತಚ್ಛ್ರವಣೇ ಮತಿಃ ।
ಜಾಯತೇ ಪುಣ್ಯಯುಕ್ತಸ್ಯ ಮಹಾನಿರ್ಮಲಚೇತಸಃ ॥ ೧೩೩ ॥

---

೧೨೮. ಸರ್ವೋತ್ತಮವಾದ ಈ ಖಂಡವನ್ನು ಯಾವನು ಹನ್ನೆರಡು ಬಾರಿ ಕೇಳುವನೊ, ಅವನಿಗೆ ಮಹೇಶ್ವರನ ಅನುಗ್ರಹದಿಂದ ಬ್ರಹ್ಮಹತ್ಯೆಯ ಪಾತಕವೂ ಕ್ಷಿಪ್ರದಲ್ಲಿಯೇ ನಾಶವನ್ನೈದುವುದರಲ್ಲಿ ಸಂದೇಹವಿಲ್ಲ.

೧೨೯. ಸಂತಾನಹೀನನಾದ ಯಾವನು ಸ್ನಾನವನ್ನುಮಾಡಿ ಶುಚಿರ್ಭೂತನಾಗಿ ಶ್ರದ್ಧೆಯಿಂದ ಈ ಕಾಶೀಖಂಡವನ್ನು ಕೇಳುವನೊ, ಅವನಿಗೆ ಶಂಭುವಿನ ಆಜ್ಞಾಬಲದಿಂದ ಶೀಘ್ರದಲ್ಲಿಯೇ ಪುತ್ರಸಂತಾನವಾಗುವುದು.

೧೩೦. ಎಲೈ ಸೂತನೆ! ಹೆಚ್ಚಾಗಿ ಹೇಳುವುದರಿಂದೇನು? ಯಾವ ಯಾವ ಮನುಷ್ಯನಿಗೆ ಮನಸ್ಸಿನಲ್ಲಿ ಯಾವ ಯಾವ ಕೋರಿಕೆಗಳಿರುತ್ತವೆಯೊ, ಅವುಗಳೆಲ್ಲವನ್ನೂ ಕಾಶೀಖಂಡದ ಶ್ರವಣದಿಂದ ಪಡೆದು ಕೃತಕೃತ್ಯನಾಗುವನು.

೧೩೧. ಯಾವನು ದೂರದೇಶದಲ್ಲಿದ್ದರೂ ಉತ್ತಮವಾದ ಈ ಕಾಶೀಖಂಡವನ್ನು ಶ್ರದ್ಧೆಯಿಂದ ಕೇಳುವನೊ, ಅವನಿಗೂ ಸಹ ಮಹೇಶ್ವರನ ಆಜ್ಞೆಯಂತೆ ಕಾಶೀಕ್ಷೇತ್ರದಲ್ಲಿ ವಾಸಮಾಡಿದ ಫಲವು ಲಭಿಸುವುದು.

೧೩೨. ಇದನ್ನು ಶ್ರವಣಮಾಡಿದ ಮಾನವರಿಗೆ ಎಲ್ಲೆಲ್ಲಿಯೂ ಕಾರ್ಯಜಯವಾಗುವುದು. ಪ್ರತಿಯೊಬ್ಬನೂ ಪರಿಶುದ್ಧಮನಸ್ಕನಾಗಿ ಸರ್ವತ್ರದಲ್ಲಿಯೂ ಸೌಭಾಗ್ಯಶಾಲಿಯಾಗುವನು.

೧೩೩. ಯಾವನಲ್ಲಿ ವಿಶ್ವೇಶ್ವರನು ಸಂತುಷ್ಟನಾಗಿರುವನೊ, ಯಾವನು ಪುಣ್ಯವಂತನೊ, ಅತ್ಯಂತ ನಿರ್ಮಲವಾದ ಅಂತಃಕರಣವುಳ್ಳವನೊ, ಅವನಿಗೆ ಮಾತ್ರ ಈ ಕಾಶೀಖಂಡವನ್ನು ಶ್ರವಣಮಾಡಬೇಕೆಂಬ ಸದ್ಬುದ್ಧಿಯುಂಟಾಗುವುದಲ್ಲದೆ ಇತರರಿಗೆ ಆಗಲಾರದು.

**ಸರ್ವೇಷಾಂ ಮಂಗಲಾನಾಂ ಚ ಮಹಾಮಂಗಲಮುತ್ತಮಂ ।**
**ಗೃಹೇಽಪಿ ಲಿಖಿತಂ ಪೂಜ್ಯಂ ಸರ್ವಮಂಗಲಸಿದ್ಧಯೇ ॥ ೧೩೪ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಉತ್ತರಾರ್ಧೇ "ಅನುಕ್ರಮಣಿಕಾಧ್ಯಾಯೋ" ನಾಮ ಶತತಮೋಽಧ್ಯಾಯಃ**

**ಶ್ರೀ ಕಾಶೀಖಂಡೋತ್ತರಾರ್ಧಂ ಸಂಪೂರ್ಣಂ**

**॥ ಸಮಾಪ್ತಂ ಚೇದಂ ಚತುರ್ಥಂ ಕಾಶೀಖಂಡಂ ॥**

---

೧೩೪. ಈ ಗ್ರಂಥವು ಮಂಗಳಕರಗಳೆನಿಸಿದ ಸಕಲ ವಸ್ತುಗಳಲ್ಲಿಯೂ ಮಹಾಮಂಗಳದಾಯಕವೂ, ಅತ್ಯುತ್ತಮವಾದುದೂ ಎನಿಸಿರುವುದು. ಪ್ರತಿಯೊಂದು ಮನೆಯಲ್ಲಿಯಲ್ಲಿಯೂ ಸರ್ವಮಂಗಳಪ್ರಾಪ್ತಿಗಾಗಿ ಹಸ್ತಲಿಖಿತವಾದ ಈ ಕಾಶೀಖಂಡ ಗ್ರಂಥವನ್ನು ನಿತ್ಯವೂ ಪೂಜಿಸುತ್ತಿರಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ಅನುಕ್ರಮಣಿಕಾಧ್ಯಾಯ"ವೆಂಬ ನೂರನೆಯ ಅಧ್ಯಾಯವು ಮುಗಿದುದು

**ಇಲ್ಲಿಗೆ ಶ್ರೀ ಕಾಶೀಖಂಡವು ಸಂಪೂರ್ಣವಾದುದು**

---

1203—47. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು